# ವಿಶ್ವಕರ್ಣಾಟಕ

# ಯುಗಾದಿ ಸಂಚಿಕೆ



'ವಿಶ್ವಕರ್ಣಾಟಕ'

ಬೆಂಗಳೂರು ನಗರ

೧೯೩೧

'ವಿಶ್ವಕರ್ಣಾಟಕ'

# ಯುಗಾದಿ ಸಂಚಿಕೆ

---

ತಿರುಮಲ ತಾತಾಚಾರ್ಯ ಶರ್ಮನ್
ಸಂಪಾದಕ

ಬೆಂಗಳೂರು ನಗರ

೧೯೩೧



RAM MOHAN COMPANY PUBLISHERS BANGALORE CITY

# ಬಿನ್ನಹ

‘ವಿಶ್ವಕರ್ಣಾಟಕ’ದ ಮೇಲೆ ಕನ್ನಡಿಗರಿಗೆಲ್ಲ ಬಹಳ ಅಭಿಮಾನ. ಇದಕ್ಕೆ ಜನರ ಔದಾರ್ಯವೇ ಕಾರಣ. ‘ವಿಶ್ವಕರ್ಣಾಟಕ’ದಲ್ಲಿ ಏನೂ ಇಲ್ಲ. ಅದು ಹೆದರಿ, ಹೆದರಿ ಒಂದೊಂದಾಗಿ ಹೆಜ್ಜೆಯನ್ನು ಮುಂದಿಡುತ್ತಿದೆ. ಆದರೆ ಜನತೆಯ ಪ್ರೇಮವು ಅದನ್ನು ನಾಗಾಲೋಟಕ್ಕೇ ತಳ್ಳುತ್ತಿದೆ. ಹೆಚ್ಚೇನು ಅದು ಏಳಲಿ, ಬೀಳಲಿ ಆ ಹೊಣೆಗಾರಿಕೆಯೆಲ್ಲ ಜನಪದಕ್ಕೆ ಸೇರಿದ್ದೆ.

ಪತ್ರಿಕೆ ಹುಟ್ಟಿ ಐದಾರು ವರ್ಷಗಳಾದರೂ ವಾರ್ಷಿಕಸಂಚಿಕೆಯೊಂದಾದರೂ ಬರಲಿಲ್ಲವೆಂದು ಒಂದು ದೂರು. ‘ವಾಚಕರು ನಮ್ಮಿಂದ ಬಹಳ ನಿರೀಕ್ಷಿಸುತ್ತಿದ್ದಾರೆ. ನಮ್ಮ ಅ–ಯೋಗ್ಯತೆ ಅವರಿಗೆ ಗೊತ್ತಿಲ್ಲವಲ್ಲ’ ಎಂಬ ವ್ಯಥೆ ನಮಗೆ.

ಯಾರದೂ ಏನೂ ನಡೆಯುವ ಹಾಗಿಲ್ಲ. ಎಲ್ಲವೂ ಕಾಲವಶ. ಈಸಾರೆ ‘ಯುಗಾದಿ ಸಂಚಿಕೆ’ಯೊಂದು ಹೊರಡಬೇಕೆಂಬ ಆಲೋಚನೆಗೆ ಯಾವ ಯಾವ ಮೂಲೆಗಳಿಂದಲೋ ಬಲ ಬಂತು. ಆ ಸಂಚಿಕೆಗೆ ಒಂದು ರೂಪಕೊಡುವ ಪ್ರಶ್ನೆ ಮಾತ್ರ ಉಳಿಯಿತು.

ಹೆಸರುವಾಸಿಯಾದ ಲೇಖಕರಿಗೆಲ್ಲ ಒಂದು ‘ಬಿನ್ನಹ’ ಕಳುಹಿಸುವುದು. ಅವರನ್ನು ಪೀಡಿಸಿ ಏನಾದರೊಂದು ಬರೆಸುವುದು. ಹೀಗೆ ಬರೆದು ಬಂದ ನಾನಾಲೇಖನಗಳನ್ನು ಒಟ್ಟುಗೂಡಿಸಿ, ಒಂದು ವಿಶೇಷಸಂಚಿಕೆಯೆಂದು ಹೆಸರಿಟ್ಟು ಪ್ರಕಟಿಸಿಬಿಡುವುದು.

ಅದೇಕೋ ಈ ಸಂಪ್ರದಾಯವು ರುಚಿಸಲಿಲ್ಲ. ಇದರಿಂದ ಯಾವ ದೇವರಿಗೆ ಪ್ರೀತಿ ಅನ್ನಿಸಿತು. ವಿಶೇಷ ಸಂಚಿಕೆಯೆಂದರೆ ಅದರಲ್ಲಿ ಏನಾದರೂ ಒಂದು ಭಾವನೆ, ಒಂದು ವಿಚಾರ, ಒಂದು ಉದ್ದಿಶ್ಯ, ಒಂದು ಪುರುಷಾರ್ಥವಿರಬೇಕು ಅನ್ನಿಸಿತು. ಹಾಗೆ ಅನ್ನಿಸಿದ ಕೂಡಲೇ ಹೆದರಿಕೆಯಾಯಿತು. ಅಸಾಧ್ಯವೆಂದು ತೋರಿತು.

ಅಸಾಧ್ಯವೇನೋ ಹೌದು. ಆದರೆ ಚಾಪಲ್ಯವೊಂದುಂಟಲ್ಲ. ಒಬ್ಬಿಬ್ಬರು ಹಿರಿಯರ ಬಳಿಗೆ ಹೋಗಿ ಈ ಆಲೋಚನೆಯನ್ನು ಅವರೆದುರಿಗಿಟ್ಟದ್ದಾಯಿತು. ಅವರು ‘ಬಹಳ ಚನ್ನಾಗಿದೆ. ಇಂತಹ ಪ್ರಯತ್ನಕ್ಕಿದೇ ಮೊದಲು. ಹಿಂದು ಮುಂದು ನೋಡಬೇಕಾದ್ದಿಲ್ಲ.’ ಅಂದರು.

‘ಊ’ ಅಂದರೆ ಸಾಕು ಈಕಾಲದಲ್ಲಿ. ಕೊಂಚ ಪ್ರೋತ್ಸಾಹ ಬೇರೆ ಸಿಕ್ಕಿಬಿಟ್ಟರೆ ಕೇಳಬೇಕೆ. ಆ ಉತ್ಸಾಹ, ಆತುರದ ಫಲಿತಾಂಶವೇ ಈ ಪ್ರಯತ್ನ. ಮೊದಲಿನ ಆಲೋಚನೆಯೆಂಬ ಸಕ್ಕರೆ ಕುಂಬಳಕಾಯಲ್ಲಿ ಈ ಸಂಚಿಕೆಯೆಂಬ ಸಾಸಿವೆಕಾಳು ಹೊರಬಿತ್ತು. ಇದಕ್ಕಾಗಿ ಸಂಕೋಚಪಟ್ಟು ಸುಖವಿಲ್ಲ. ಒಳ್ಳೆಯ ಉದ್ದಿಶ್ಯವಿಟ್ಟುಕೊಂಡು, ವಂಚನೆಯಿಲ್ಲದೆ ಕೈಲಾದ್ದನ್ನು ಮಾಡಲಾಗಿದೆ. ವಾಚಕರು ತಮ್ಮ ಕೃಪಾಕಟಾಕ್ಷವನ್ನು ಕೆಲಸದ ಕಡೆಗೆ ಮಾತ್ರವಲ್ಲದೆ ಆ ಕೆಲಸದ ಹಿಂದಿನ ಅಂತರಂಗದ ಕಡೆಗೂ ಕೊಂಚ ಪ್ರಸರಿಸಬೇಕು.

ನಿಷ್ಕೃಷ್ಟವಾದ ಜ್ಞಾನವೇ ಶೀಲ ಮತ್ತು ಸಾಮರ್ಥ್ಯಯುತವಾದ ಲೋಕಜಾಗೃತಿಗೆ ಮೂಲಕಾರಣವೆಂದು ನಂಬಿ, ವಾಚಕಲೋಕಕ್ಕೆ ವಿಜ್ಞಾನ, ರಾಜನೀತಿ, ಸಾಹಿತ್ಯ ವಿಚಾರಗಳಲ್ಲಿ ಸಾಕಾದಷ್ಟುಮಟ್ಟಿಗೆ, ಸ್ಥೂಲವಾಗಿ ವಿಷಯ ಪರಿಚಯಮಾಡಿಕೊಡುವ ಸಾಹಸಕ್ಕೆ ಕೈಹಾಕಿದ್ದಾಯಿತು. ಈ ಲೇಖನಗಳನ್ನು ಬರೆದಿರುವುದು ಪ್ರಧಾನವಾಗಿ ಪ್ರೌಢಶಿಕ್ಷಣಲಾಭ ದೊರೆಯದ, ಸಾಮಾನ್ಯ ತಿಳಿವಳಿಕೆಯ, ಕನ್ನಡಕನ್ನಡಿತಿಯರ ಪ್ರಯೋಜನಕ್ಕಾಗಿ ಎಂಬುದನ್ನು ಮರೆಯಬಾರದು. ಉದ್ದಿಶ್ಯವು ಎಷ್ಟರಮಟ್ಟಿಗೆ ನೆರವೇರಿದೆಯೋ ಹೇಳಬಲ್ಲವರು ವಾಚಕರು; ಪಾಮರಜನಪ್ರಗತಿ ಕುತೂಹಲಿಗಳು.

ಮಾನವಜೀವನವು ಸುಖಮಯವಾಗಿದ್ದರೆ ಆ ಯಶಸ್ಸು ಮಾನವನಿಗೇ ಸೇರಿದ್ದು; ದುಃಖಮಯವಾಗಿದ್ದರೆ ಆ ಅಪಕೀರ್ತಿಯೂ ಮಾನವನಿಗೇ ಸೇರಿದ್ದು. ಅಂದರೆ ಜೀವನದ ಬೆಳಕುಕತ್ತಲೆ, ಆನಂದವ್ಯಸನ, ಅಳಿವುಉಳಿವು ಇವಕ್ಕೆಲ್ಲ ಪ್ರಧಾನವಾಗಿ ಮನುಷ್ಯನೇ ಕಾರಣ. ಈ ದೃಷ್ಟಿಯಿಂದ ಜನಜೀವನದಲ್ಲಿ ಎಂತಹ ವಿಪ್ಲವಗಳು, ಕಂಪಗಳು, ಭಾವವಾಹಿನಿಗಳು ತಲೆಹಾಕಿದವು? ಅವಕ್ಕೆ ವಿಜ್ಞಾನ ಪರಿಶೋಧನೆಗಳು, ಪೌರಧರ್ಮ ರಾಜನೀತಿ ತತ್ತ್ವಪ್ರಯೋಗಗಳು, ಕಲಾಸೃಷ್ಟಿ (ಸಾಹಿತ್ಯವೂ ಸೇರಿ) ಮುಂತಾದುವು ಎಷ್ಟುಮಟ್ಟಿಗೆ ಕಾರಣಗಳಾದುವು? ಮಾನವಜಾತಿ ಚರಿತ್ರೆಯಲ್ಲಿ 'ಪ್ರಗತಿ' ಎಂಬ ಪ್ರಕೃತಿಯೊಂದನ್ನು ನಂಬುವುದಾದರೆ ನಿಜವಾಗಿ ಅದರ ಪ್ರಭಾವ ಪ್ರಮಾಣಗಳೆಷ್ಟು?

ಜನಸಾಮಾನ್ಯದಲ್ಲಿ ಈ ಬಗೆಯ ವಿಚಾರವಾಹಿನಿಗಳನ್ನು ಹೊರಡಿಸಿದರೆ ಅವರ ತಿಳಿವಳಿಕೆಗೆ, ಹೃದಯದ ಔದಾರ್ಯಕ್ಕೆ, ಸಮಬುದ್ಧಿಗೆ ಸಹಾಯವಾದೀತೇನೋ ಎಂಬ ದೂರದ ಆಸೆ—ಅಲ್ಲ—ಕುಂಟು ಆಸೆಯಿಂದ ಆಗಾಗ 'ವಿಶೇಷ ಸಂಚಿಕೆ'ಗಳನ್ನು ಹೊರಡಿಸಬೇಕೆಂಬ ಹುಚ್ಚು ಹುಟ್ಟಿದೆ. ಅಂತಹ ದೊಡ್ಡ ಕಾರ್ಯನಿರ್ವಾಹಕ್ಕೆ ತಕ್ಕ ಯೋಗ್ಯತೆ ಇದೆಯೆ ಇಲ್ಲವೆ ಎಂಬುದರ ಪರೀಕ್ಷೆಗಾಗಿ ಈ 'ಯುಗಾದಿಸಂಚಿಕೆ'ಯನ್ನು ಹೊರಡಿಸಲಾಗಿದೆ. ಹಿರಿಯರು, ತಿಳಿದವರು, ಹಿತೈಷಿಗಳು ಈ 'ಮಾನಪರೀಕ್ಷೆ'ಯಲ್ಲಿ ನಮ್ಮ ಹಣೆಬರಹವೇನೆಂಬುದನ್ನು ತಿಳಿಸಬೇಕು. ಅಷ್ಟೆ.

ಇಂದಿನ ವಿಶಾಲವೂ ಶಕ್ತಿಪೂರ್ಣವೂ ಆದ ಜಗತ್ತಿನ ಆರೋಗ್ಯ, ಆನಂದ, ಆದರ್ಶ ಜೀವನ ವಿಚಾರಸಾರವನ್ನು ಹೀರಿ, ವಾತ್ಸಲ್ಯಹೃದಯದ ಹಿರಿಯರ ಕೈಗಳಿಂದಲೇ ಪ್ರೌಢಶಿಕ್ಷಣ ಸುಖಪ್ರಾಪ್ತಿಯಿಲ್ಲದ ಪಾಮರಕೋಟಿಗೆ ಅದನ್ನು ಎರೆಯಿಸಬೇಕೆಂಬುದೊಂದೇ ನಮ್ಮ ಸಂಕಲ್ಪ ಸರ್ವಸ್ವ. ಅದನ್ನು ನೆರವೇರಿಸುವ ಭಾರ ಕಲಿತವರದು, ಉಳ್ಳವರದು, ಪದವೀಧರರದು. 'ವಿಶ್ವಕರ್ಣಾಟಕ'ವು ಒಂದು ವಳಲೆ ಮಾತ್ರ.

ಸಂಪಾದಕ.



# ಕೃ ತ ಜ್ಞ ತಾ ಸೂ ಚ ನೆ



ಮೊಟ್ಟಮೊದಲು ರಾವ್ ಬಹದ್ದೂರ್ ಶ್ರೀ ಬಿ. ವೆಂಕಟೇಶಾಚಾರ್ಯರವರಿಗೆ ನಾವು ತ್ರಿಕರಣಪೂರ್ವಕವಾದ ವಂದನೆಗಳನ್ನು ಸಮರ್ಪಿಸಬೇಕಾಗಿದೆ. ಅವರ ಬಳಿ ಹೋಗಿ ನಮ್ಮ 'ರಾಯಭಾರ' ತಿಳಿಸಿದಕೂಡಲೇ ಮರುಮಾತಾಡದೆ 'ಕನ್ನಡದಲ್ಲೇ ಬರೆದು ಕೊಡುತ್ತೇನೆ' ಅಂದರು. ನಮ್ಮೂರಿನವರು. ನಾವು ಹೋಗಿ ಕೇಳಿದರೆ 'ಇಲ್ಲ' ಅನ್ನುವರೆ ಎಂಬ ಧೈರ್ಯವೊಂದಿತ್ತು. ಆದರೂ ಅವರ 'ಕರ್ತವ್ಯ ಭಾರ' ನೋಡಿ ಏನೋ ಹೇಗೋ ಎಂಬ ಭಯವೂ ಇತ್ತು. ಇವೆರಡೂ ಭಾವಗಳೂ ನಮ್ಮ ಎದೆಬಡಕತನವನ್ನು ಮಾತ್ರ ಸೂಚಿಸುತ್ತವೆ ಅಷ್ಟೆ. ಆಚಾರ್ಯರು ದೊಡ್ಡ ಮನಸ್ಸು ಮಾಡಿದರು. ಪಾಮರಜನ ಸೇವೆಯೆಂದು ನಮಗೆ ಪೂರ್ಣ ನೆರವಾದರು. ವಿಜ್ಞಾನ ದಾನ ಮಾಡಿದರು. ಕನ್ನಡನಾಡೇ ಇವರಿಗೆ ಚಿರಋಣಿಗಳಾಗಿರಬೇಕಾಗಿದೆ.

ಶ್ರೀ ಪಿ. ಶ್ರೀನಿವಾಸರಾಯರೂ ಶ್ರೀ ಕೆ. ಸಂಪದ್ಗಿರಿರಾಯರೂ, ಶ್ರೀ ಕೆ. ವಿ. ಪುಟ್ಟಪ್ಪನವರೂ, ಶ್ರೀ ರಾಳ್ಳಪಲ್ಲಿ ಅನಂತಕೃಷ್ಣಶರ್ಮರವರೂ, ಶ್ರೀ ಎ. ಎನ್. ಮೂರ್ತಿರಾಯರೂ, ಶ್ರೀ ಕೆ. ಕೃಷ್ಣಯ್ಯಂಗಾರ್ಯರೂ ಇವರೆಲ್ಲ ನಮ್ಮ ಮಿತ್ರರು, ಆಪ್ತ ಮಿತ್ರರು. 'ವಿಶ್ವಕರ್ಣಾಟಕ' ಪ್ರೇಮಿಗಳು. ಅವರು ಈ ಸಂಚಿಕೆಗೆ ಮಾಡಿರುವ ಸಹಾಯವನ್ನು ಕುರಿತು ಇಲ್ಲಿ ಏನಾದರೂ ಹೇಳಿದರೆ ಅದನ್ನು ಅವರು ಹೇಗೆ ಭಾವಿಸುವರೋ ಎಂಬ ಭಯ ಹುಟ್ಟಿದೆ. ಏನೂ ತೋರುವುದಿಲ್ಲ. ಮೌನವಾಗಿ ಅವರೆಲ್ಲರಿಗೂ ಕೈ ಮುಗಿದುಬಿಡುವೆವು.

ತಮಿಳು ಸಾಹಿತ್ಯ ವಿಚಾರವಾಗಿ ತಾವೊಂದು ಲೇಖನ ಬರೆದು ಸಹಾಯ ಮಾಡಬೇಕೆಂದು ಪತ್ರ ಬರೆದಕೂಡಲೇ ಮದರಾಸಿನ ಡಾಕ್ಟರ್ ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ಯರು 'ತಮ್ಮ ಪ್ರಯತ್ನವು ಯಶಸ್ವಿಯಾಗಲಿ. ನಾನೇ ತಾವು ಬಯಸಿದ ಲೇಖನವನ್ನು ಸಂತೋಷವಾಗಿ ಬರೆದು ಕಳಿಸುತ್ತಿದ್ದೆ. ಏನು ಮಾಡಲಿ. ಕೈತುಂಬ ಕೆಲಸ ಬಿದ್ದಿದೆ. ಒಳ್ಳೆಯದು ಮತ್ತೆ ಯಾರಿಂದಲಾದರೂ ಬರೆಸಿ ಕಳಿಸುತ್ತೇನೆ' ಎಂದು ಉತ್ತರ ಕೊಟ್ಟರು. ನಮ್ಮ ಪುಣ್ಯ, ಕನ್ನಡಿಗರ ಅದೃಷ್ಟ. ಶ್ರೀಮಾನ್ ಕೃಷ್ಣಸ್ವಾಮಿ ಅಯ್ಯಂಗಾರ್ಯರವರೇ ಕೂತು, ಲೇಖನವನ್ನು ಬರೆದು ಕಳುಹಿಸಿಕೊಟ್ಟರು. ಎಂತಹ ಔದಾರ್ಯ! ಅದಕ್ಕಾಗಿ ಅವರನ್ನು ಎಷ್ಟು ವಂದಿಸಿದರೂ ತೀರದು.

ಮರಾಠಿ ಸಾಹಿತ್ಯ ವಿಚಾರವಾಗಿ ಲೇಖನ ಬರೆದು ಕಳುಹಿಸಿದ ಶ್ರೀಯುತ ಭಿಡೆಯವರಿಗೂ, ವಂಗ ವಾಙ್ಮಯ ವಿಚಾರವಾಗಿ ಬರೆದ ಬಾಬು ಮೋಹಿತಕುಮಾರ ಬಾನರ್ಜಿಯವರಿಗೂ, ಹಿಂದೀ ಸಾಹಿತ್ಯ ವಿಚಾರ ಲೇಖನ ಬರೆದು ಪೂರೈಸಿದ ಶ್ರೀ ಭಿಡೆಯವರಿಗೂ, 'ಕೇರಳೀಯ' ರಿಗೂ ನಮ್ಮ ಅನಂತ ಧನ್ಯವಾದಗಳು. ಈ ಸಂದರ್ಭದಲ್ಲಿ ಹಿಂದೀ ಪ್ರಚಾರಕರಾದ ಶ್ರೀ ಜಮ್ನಾಪ್ರಸಾದ ಶ್ರೀವತ್ಸರೂ ಶಾಂತಿನಿಕೇತನದಲ್ಲಿ ಕಲಾಭ್ಯಾಸಂಗ ಮಾಡುತ್ತಿರುವ 'ಗೆಳೆಯರ ಗುಂಪಿ' ನ ಶ್ರೀ ನಾರಾಯಣಸಂಗಮರೂ ನಮಗೆ ಮಹೋಪಕಾರ ಮಾಡಿದ್ದಾರೆ. ಅವರ ಋಣವನ್ನು ನಾವು ತೀರಿಸಲಾರೆವು.

ಈ ಸಂಚಿಕೆಗೆ ಬೇಕಾದ ಪಡಿಯಚ್ಚುಗಳನ್ನು, ಪಡಿಯಚ್ಚಿಗಾಗಿ ಬೇಕಾದಾಗ ಚಿತ್ರಗಳನ್ನೂ ಒದಗ ಕೊಟ್ಟ, ಶ್ರೀಯುತರುಗಳಾದ ಡಿ. ಕೆ. ಭಾರದ್ವಾಜ್, ಎಂ. ರಾಮರಾವ್, ಮುಂತಾದವರಿಗೂ ಸೆಂಟ್ರ ಕಾಲೇಜಿನ ಕರ್ಣಾಟಕ ಸಂಘಕ್ಕೂ ನಮ್ಮ ಧನ್ಯವಾದಗಳು. ಈ ಸಂಚಿಕೆಯಲ್ಲಿ ಕೊಟ್ಟಿ ೯ ರೇಖಾಚಿತ್ರಗಳ ಮೂಲವನ್ನು ಸಿದ್ಧಗೊಳಿಸಿ ಕೊಟ್ಟ 'ಕಲಾಮಂದಿರ'ದ ಶ್ರೀ ಜಿ. ಶ್ರೀನಿವಾಸರಾ ರಿಗೂ, ಶ್ರೀ ಜೋಶಿಯವರಿಗೂ ನಾವು ಎಷ್ಟು ಕೃತಜ್ಞತೆ ತೋರಿಸಿದರೂ ಸಾಲದು. ಈ ಸಂದರ್ಭ ಶ್ರೀ ಎ. ಎನ್. ಸುಬ್ಬರಾಯರ ಸಹಾಯವೇನೂ ಸಾಮಾನ್ಯವಾದುದಲ್ಲ.

ಈ ಸಂಚಿಕೆಯಲ್ಲಿ ಏನಾದರೂ ಗುಣಗಳಿದ್ದರೆ ಅವುಗಳೆಲ್ಲ ನಾನಾ ಲೇಖಕರಿಗೂ ಕಲಾವಿದರಿಗೂ ಸೇರಿ ಆದರ ದೋಷಗಳಿಗೆಲ್ಲ ಹೊಣೆಗಾರರು ನಾವು. ವಾಚಕ ಮಹಾಶಯರು ನಮ್ಮ ಯೋಗ್ಯತೆಯ ಮಿತಿಯ ಅರಿತು, ನಮ್ಮ ಪ್ರಯತ್ನ ಫಲಕ್ಕಿಂತ, ನಮ್ಮ ಉದ್ದಿಶ್ಯಕ್ಕೆ ಸಹಾನುಭೂತಿ ತೋರಿಸಬೇಕೆಂದು ಪ್ರಾರ್ಥಿಸುತ್ತೇ

ಸಂಪಾದಕ.

# ವಿ ಜ್ಞಾ ನ

೧. ವಿಜ್ಞಾನ ಪ್ರಗತಿಯೂ, ಜೀವನ ಪರಿವರ್ತನವೂ

ರಾವ್ ಬಹದ್ದೂರ್ ಬಿ. ವೆಂಕಟೇಶಾಚಾರ್, ಎಂ. ಎ., ಸೆಂಟ್ರಲ್ ಕಾಲೇಜ್, ಬೆಂಗಳೂರು

೨. ಆಧುನಿಕ ವಿಜ್ಞಾನ ಭಂಡಾರಕ್ಕೆ ಭಾರತೀಯರ ಕಾಣಿಕೆ

ಶ್ರೀ ಪಿ. ಶ್ರೀನಿವಾಸರಾವ್ ಎಂ.ಎಸ್.ಸಿ., ಸೆಂಟ್ರಲ್ ಕಾಲೇಜ್, ಬೆಂಗಳೂರು

# ವಿಜ್ಞಾನ ಪ್ರಗತಿಯೂ ಜೀವನ ಪರಿವರ್ತನವೂ

(ರಾ|| ಶ್ರೀ ಬಿ. ವೆಂಕಟೇಶಾಚಾರ್, ಎಂ. ಎ., ಸೆಂಟ್ರಲ್ ಕಾಲೇಜ್, ಬೆಂಗಳೂರು)

ವಿಜ್ಞಾನಶಾಸ್ತ್ರವು ಪಾಶ್ಚಾತ್ಯರಲ್ಲಿ ಸುಮಾರು ಎರಡು ಶತಮಾನಗಳಿಂದ ಈಚೆಗೆ ಅಭಿವೃದ್ಧಿಯನ್ನು ಹೊಂದಿ ಈಗ ಉನ್ನತಸ್ಥಿತಿಯಲ್ಲಿರುವುದು ಎಲ್ಲರಿಗೂ ತಿಳಿದ ವಿಷಯ. ಈ ಅಭಿವೃದ್ಧಿಯು ಅನೇಕ ವಿಧದಲ್ಲಿ ಜನಸೌಕರ್ಯಕ್ಕೆ ಕಾರಣವಾಯಿತು. ವಿದ್ಯುಚ್ಛಕ್ತಿಯ ದೀಪ, ತಂತಿಯು ಕೂಡ ಇಲ್ಲದೆ ದೂರಸ್ಥಳಗಳಿಗೆ ಆಶುವರ್ತಮಾನಪ್ರಚಾರ, (ವೈರ್‌ಲೆಸ್ ಟೆಲಿಗ್ರಫಿ) ವಿಮಾನದಲ್ಲಿ ವಾಯುಮಂಡಲ ಸಂಚಾರ, ಮೋಟಾರ್‌ಯಾನ, ಇವೇ ಮೊದಲಾದ ಅನೇಕವಿಧ ಅನುಕೂಲಗಳು ಈಗಿನ ಕಾಲದ ನಾಗರಿಕತೆಯ ಅಂಗಗಳಾಗಿವೆ. ಅಲ್ಲದೆ ಜನಗಳಿಗೆ ಉಪಯುಕ್ತವಾದ ಪದಾರ್ಥಗಳನ್ನು ತಯಾರಿಸುವ ಯಂತ್ರಗಳು ಬಹಳ ಅಭಿವೃದ್ಧಿಯನ್ನು ಹೊಂದಿ ಪೂರ್ವದಲ್ಲಿ ಜನರು ಕೈಯಿಂದ ಮಾಡುತ್ತಿದ್ದ ಪದಾರ್ಥಗಳೆಲ್ಲವೂ ಈಗ ಕಾಲವಿಳಂಬವಿಲ್ಲದೆ ಪ್ರಾಯಃ ಯಂತ್ರಗಳಿಂದಲೇ ಒದಗಿಸಲ್ಪಡುತ್ತಿವೆ.

ಆದರೆ ಈ ವಿಜ್ಞಾನಶಾಸ್ತ್ರದಿಂದ ಜನಗಳಿಗೆ ಉಂಟಾಗಿರುವ ಸೌಕರ್ಯೋಚ್ಛ್ರಾಯವು ದೃಶ್ಯಪ್ರಪಂಚ (ಫೆನಾಮೆನಲ್ ವರಲ್ಡ್) ದಲ್ಲಿನ ವಸ್ತುಸ್ವರೂಪ ಜ್ಞಾನೋತ್ಸುಕರಾದ ವಿಜ್ಞಾನಶಾಸ್ತ್ರಾಭಿಜ್ಞರಿಂದ ಉಂಟಾಯಿತೇ ಹೊರತು ಕೇವಲ ಈ ಶಾಸ್ತ್ರದಲ್ಲಿ ನಿಶ್ಚಿತವಾದ ವಿಷಯವನ್ನು ತಿಳಿದುಕೊಂಡು ಜನಾನುಕೂಲಕ್ಕೆ ಉಪಯೋಗಿಸಲು ಹೊರಟವರಿಂದಲ್ಲ. ಮೈಕೇಲ್ ಫ್ಯಾರಡೇ ಎಂಬ ಆಂಗ್ಲೇಯ ವಿಜ್ಞಾನಶಾಸ್ತ್ರ ಪಂಡಿತನು ಸುಮಾರು ನೂರು ವರ್ಷಗಳ ಹಿಂದೆ ವೈಜ್ಞಾನಿಕ ಪರೀಕ್ಷೆಯೊಂದನ್ನು ಮಾಡಿದನು. ವೈದ್ಯುತ್ಪ್ರವಾಹಯುಕ್ತವಾದ ತಂತಿಯು ಸುತ್ತಲೂ ಅಯಸ್ಕಾಂತಸೂಚಿಯನ್ನು ನಿರೋಧಿಸುವ ಶಕ್ತಿಯು ಹರಡಿರುತ್ತದೆಂಬುದು ಫ್ಯಾರಡೇಗೆ ತಿಳಿದಿತ್ತು. ಆದರೆ ವೈದ್ಯುತ್ಪ್ರವಾಹವಿಲ್ಲದ ತಂತಿಯ ಬಳಿಗೆ ಅಯಸ್ಕಾಂತಶಲಾಕೆಯನ್ನು (ಬಾರ್-ಮ್ಯಾಗ್ನೆಟ್) ತಂದರೆ ತಂತಿಯಲ್ಲಿ ವೈದ್ಯುತ್ಪ್ರವಾಹವುಂಟಾಗುವುದೇ ? ಎಂಬುದು ಫ್ಯಾರಡೆಯ ವೈಜ್ಞಾನಿಕ ಪರೀಕ್ಷೆಯ ಉದ್ದೇಶವಾಗಿತ್ತು. ಫ್ಯಾರಡೆಯ ಈ ಉದ್ಯೋಗವನ್ನು ಸಾಧಾರಣ ಲೋಕರೀತಿಯಿಂದ ನೋಡಿದರೆ ಪರತತ್ವವಿಚಾರದಲ್ಲಿ ನಿಪುಣರಾದ



(ಮೈಕೇಲ್ ಫ್ಯಾರಡೆ)

ನಮ್ಮ ಪೂರ್ವಿಕರು ಅನುಪಯುಕ್ತವಾದ ಕೆಲಸವನ್ನು ಉಪಹಾಸಮಾಡುವುದಕ್ಕೆ ಹೇಳಿರುವ ದೃಷ್ಟಾಂತವಾದ ಕಾಗೆಯ ಹಲ್ಲಿನ ಪರೀಕ್ಷೆಯನ್ನು ನೆನಪಿಗೆ ತರುವುದು. ಆದರೆ ನಿಜವಾಗಿ ಇದು ಹಾಗಲ್ಲ. ನಾವು ಎಲ್ಲಿ ನೋಡಿದರೂ ವಿದ್ಯುದ್ಯಂತ್ರಗಳಿಂದ ಈಗ ಉಂಟಾಗಿರುವ ಎಲ್ಲ ಜನಸೌಕರ್ಯಕ್ಕೂ ಸುಮಾರು ನೂರು ವರ್ಷಗಳ ಹಿಂದೆ ಫ್ಯಾರಡೆಯ ಪರೀಕ್ಷೆಯಿಂದ ನಿಶ್ಚಯವಾದ ವಿಷಯವೇ ಮೂಲಕಾರಣವಾಗಿದೆ. ಅನೇಕ ನಿದರ್ಶನಗಳನ್ನು ಇದಕ್ಕೆ ಕೊಡಬಹುದು. ಶಿವನಸಮುದ್ರದ ಜಲಪಾತವನ್ನು ಪಯೋಗಿಸುವುದರಿಂದುಂಟಾದ ವಿದ್ಯುಚ್ಛಕ್ತಿಯ ಉಪಯೋಗ

ವೇ ಮೈಸೂರು ದೇಶದ ನಮ್ಮಗಳಿಗೆ ದೊಡ್ಡ ದೃಷ್ಟಾಂತವಾಗಿದೆ. ಆಂಗ್ಲೇಯ ದೇಶಕ್ಕೆ ಮುಖ್ಯ ಪ್ರಧಾನನಾಗಿದ್ದ ಗ್ಲ್ಯಾಡ್‌ಸ್ಟನ್ ಎಂಬಾತನಿಗೆ ಫ್ಯಾರಡೇಯು ತನ್ನ ವೈಜ್ಞಾನಿಕ ಪರೀಕ್ಷೆಯನ್ನು ತೋರಿಸಿದಾಗ ಆ ಮಂತ್ರಿವರ್ಯನು "ಇದೆಲ್ಲಾ ಸರಿಯೇ. ಈ ನಿನ್ನ ಪರೀಕ್ಷೆಯಿಂದ ಏನು ಉಪಯೋಗ"ವೆಂದು ಕೇಳಿದನು. ಇದಕ್ಕೆ ಫ್ಯಾರಡೆಯು ತಟ್ಟನೆ ಈ ಉತ್ತರವನ್ನು ಕೊಟ್ಟನು "ಅಯ್ಯಾ ಒಂದಾನೊಂದು ದಿನ ಇದಕ್ಕೆ ನೀವು ತೆರಿಗೆಯನ್ನು ಹಾಕಬಹುದು." ಈ ಉತ್ತರವು ಎಷ್ಟರಮಟ್ಟಿಗೆ ನಿಜವಾಯಿತೆಂಬುದಕ್ಕೆ ಶಿವನಸಮುದ್ರದ ವಿದ್ಯುಚ್ಛಕ್ತಿಯ ಹರಿವಿನಿಂದ ಮೈಸೂರು ದೇಶಕ್ಕೆ ಬರುವ ಸುಮಾರು ಐವತ್ತು ಲಕ್ಷ ರೂ. ಗಳ ವಾರ್ಷಿಕ ವರಮಾನವೇ ನಿದರ್ಶನವಾಗಿದೆ.

ಬೆಂಗಳೂರು ಮೊದಲಾದ ಸ್ಥಳಗಳಲ್ಲಿ ನಾವು ಉಪಯೋಗಿಸುವ ವಿದ್ಯುಚ್ಛಕ್ತಿಯು ಬೇಕು ಒಂದು ಕಾಲದಲ್ಲಿ ಭೂಮಂಡಲದ ಮೇಲೆ ಬಿದ್ದ ಸೂರ್ಯನ ಕಾಂತಿಯ ಅಲ್ಪಭಾಗದ ಪರಿಣಾಮವೆಂದು ಹೇಳಬಹುದು. ಅದು ಹೇಗೆಂದರೆ ಸೂರ್ಯನ ಕಿರಣಗಳು ಸಮುದ್ರದ ನೀರನ್ನು ಆವಿಯಾಗಿ ಮಾಡಿ ಆಕಾಶದ ಮೇಲುಭಾಗಕ್ಕೆ ಸೆಳೆದಮೇಲೆ ಅಲ್ಲಿ ಆವಿಯು ಮೊದಲು ಮೇಘವಾಗಿ ನಂತರ ಉನ್ನತ ಪ್ರದೇಶಗಳಲ್ಲಿ ಮಳೆಯಾಗಿ ಬಿದ್ದ ನೀರನ್ನೇ ಶಿವನಸಮುದ್ರದ ಜಲಪಾತದ ಅಗ್ರಭಾಗದಲ್ಲಿ ಕಾವೇರೀನದಿಯು ತರುವುದು. ಈ ನೀರು ಉನ್ನತ ಪ್ರದೇಶದಲ್ಲಿರುವುದರಿಂದ ಕೆಲಸಮಾಡುವ ಶಕ್ತಿಯು ಇದಕ್ಕೆ ಉಂಟು. ವಿದ್ಯುಚ್ಛಕ್ತಿಯ ಕಾರ್ಖಾನೆಯು ಏರ್ಪಡುವುದಕ್ಕೆ ಮೊದಲು ಮೇಲ್ಭಾಗದಲ್ಲಿನ ನೀರು ಅಧೋದೇಶಕ್ಕೆ ರಭಸವಾಗಿ ಬೀಳುವುದರಿಂದ ಈ ಶಕ್ತಿಯು ಶಾಖವಾಗಿ ಪರಿಣಮಿಸಿ ನಮಗೆ ಉಪಯೋಗವಿಲ್ಲದೆ ನಷ್ಟವಾಗುತ್ತಿತ್ತು. ಈಗಲಾದರೋ ಆ ಉನ್ನತ ಪ್ರದೇಶದಲ್ಲಿನ ನೀರು ದೊಡ್ಡ ಕಬ್ಬಿಣದ ಕೊಳವಿಯ ಮಾರ್ಗವಾಗಿ ಹೊರಟು ಕೆಳಭಾಗದಲ್ಲಿರುವ ಉದಕ ಯಂತ್ರಗಳನ್ನು (ವಾಟರ್–ಟರ್‌ಬೈನ್) ತಿರುಗಿಸುತ್ತದೆ. ಈ ಉದಕ ಯಂತ್ರಗಳು ವಿದ್ಯುಚ್ಛಕ್ತಿಯನ್ನುಂಟುಮಾಡುವ ಯಂತ್ರಗಳನ್ನು ತಿರುಗಿಸುವುದರಿಂದ ಉಂಟಾದ ವೈದ್ಯುತ್ತು ತಂತಿಯ ಮೂಲಕ ಪ್ರವಹಿಸಿ ಬೆಂಗಳೂರು, ಕೋಲಾರದ ಗಣಿ ಮೊದಲಾದ ಸ್ಥಳಗಳಲ್ಲಿ ಉಪಯೋಗಿಸಲು ಅನುಕೂಲವಾದ ಪರಿಣಾಮವನ್ನು ಹೊಂದಿ ಬೆಳಕನ್ನು ಕೊಡುವುದು. ಅಲ್ಲದೆ ಗಣಿಯಲ್ಲಿ ಬಂಗಾರವನ್ನು ಕಲ್ಲಿನಿಂ ಬೇರೆಮಾಡುವುದಕ್ಕೆ ಅವಶ್ಯಕವಾದ ಇತರ ಕೆಲಸ ಳನ್ನೂ ಮಾಡುತ್ತದೆ.



(ಸರ್ ಕೆ. ಶೇಷಾದ್ರಿ ಅಯ್ಯರ್)

ನಮ್ಮ ಈ ಭಾರತಭೂಮಿಯಲ್ಲಿ ವಿದ್ಯುಚ್ಛ ಯನ್ನು ಜಲಪಾತದ ಸಹಾಯದಿಂದುಂಟುಮಾಡಿ ಜ ನುಕೂಲಕ್ಕುಪಯೋಗಿಸುವುದರಲ್ಲಿ ಮೈಸೂರುದೇ ದಿವಾನ್ ಪದವಿಯನ್ನಲಂಕರಿಸಿದ್ದ ಸರ್ ಕೆ. ಶೇಷಾ ದ್ರಿಯ್ಯರವರು ಪ್ರಥಮಪ್ರವರ್ತಕರು. ಇವರ ದೂ ದೃಷ್ಟಿಯ ಪ್ರಭಾವದಿಂದಲೇ ಶಿವನಸಮುದ್ರ ವೈದ್ಯುತ್ ಕಾರ್ಖಾನೆಯು ಉಂಟಾಯಿತು.

ಕ್ಲಾರ್ಕ್ ಮ್ಯಾಕ್ಸ್‌ವೆಲ್ ಎಂಬ ಮತ್ತೊಬ್ಬ ಗ್ಲೇಯ ವೈಜ್ಞಾನಿಕನು ಅರವತ್ತು ವರ್ಷಗಳ ವಿದ್ಯುಚ್ಛಕ್ತಿಯೂ ಮತ್ತು ಬೆಳಕೂ (ಲೈಟ್) ಅ ಕ್ಷಣವಾಗಿ ಕಂಡು ಬಂದರೂ ನಿಜವಾಗಿಯೂ ಸ್ವಭಾವವುಳ್ಳವುಗಳೆಂಬ ಮತ (ಥಿಯರಿ) ವನ್ನು ಫ್ಯಾ ಡೆಯು ವೈಜ್ಞಾನಿಕ ಪರೀಕ್ಷೆಯಿಂದ ನಿಶ್ಚಯಿ ತತ್ವಗಳನ್ನುಪಯೋಗಿಸಿ ಗಣಿತಶಾಸ್ತ್ರದ ಸಹಾ ದಿಂದ ನಿಶ್ಚಯಿಸಿದನು. ಬೆಳಕು ತನ್ನ ಮೂಲಸ

ವಾದ ದೀಪದಿಂದ ಭೂತಾಕಾಶದಲ್ಲಿ (ಈಥರ್) ಅಲೆಗಳಂತೆ ಸುತ್ತಲೂ ಹರಡುವುದೆಂಬುದು ವೈಜ್ಞಾನಿಕರ ಅಭಿಪ್ರಾಯ. ವಿದ್ಯುಚ್ಛಕ್ತಿಯೂ, ಬೆಳಕೂ, ಮ್ಯಾಕ್ಸ್ವೆಲ್ ಹೇಳಿದಂತೆ ಏಕಸ್ವಭಾವವುಳ್ಳವುಗಳಾದರೆ, ವಿದ್ಯುಚ್ಛಕ್ತಿಯ ಅಲೆಗಳನ್ನೂ ಭೂತಾಕಾಶದಲ್ಲಿ ಹರ ವೇವ್ಸ್) ವಿದ್ಯುಚ್ಛಕ್ತಿಯ ಅಲೆಗಳಿಗೂ ಎಲ್ಲ ವಿಧದಲ್ಲಿಯೂ ಸಾಮ್ಯವನ್ನು ನಿದರ್ಶನಗೊಳಿಸಿದನು. ಈ ಪರೀಕ್ಷೆಗಳೆಲ್ಲಾ ಕೇವಲ ವಸ್ತುತತ್ವ ವಿಚಾರದಲ್ಲಿ ಪರಿಣಮಿಸಿದವು. ಶುದ್ಧ ವೈಜ್ಞಾನಿಕಾಭಿಜ್ಞನಿಗೆ ಇಷ್ಟರಿಂದಲೆ ತೃಪ್ತಿ. ವಿದ್ಯುಚ್ಛಕ್ತಿಯನ್ನು ಅಲೆಗ



(ಆಶುವಾರ್ತೆಯನ್ನು ಕಳಿಸುವ ಮತ್ತು ತರಿಸುವ ಯಂತ್ರೋಪಕರಣಗಳು)

ಡುವಂತೆ ಮಾಡುವುದು ಸಾಧ್ಯವಾಗಬೇಕಾಯಿತು. ವಿದ್ಯುಚ್ಛಕ್ತಿಯ ಅಲೆಗಳನ್ನು ಹೆರ್‌ಟ್ಜ್ ಎಂಬ ಜರ್ಮನೀದೇಶದ ವೈಜ್ಞಾನಿಕನು ೧೮೮೮ ರಲ್ಲಿ ಉಂಟುಮಾಡಿ ಈ ಅಲೆಗಳ ಸ್ವಭಾವವನ್ನು ನಿರ್ಣಯಿಸುವ ಅನೇಕ ಪರೀಕ್ಷೆಗಳನ್ನು ಮಾಡಿ ಬೆಳಕಿನ ಅಲೆಗಳಿಗೂ (ಲೈಟ್ ಳಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಕಳುಹಿಸಬಹುದಾದರೆ, ತಂತಿಯ ಸಹಾಯವಿಲ್ಲದೆಯೇ ವಿದ್ಯುಚ್ಛಕ್ತಿಯ ಸಹಾಯದಿಂದ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವರ್ತಮಾನವನ್ನು ವಿದ್ಯುದಲೆಗಳ ಸಹಾಯದಿಂದ ಕಳುಹಿಸುವುದು ಸಾಧ್ಯವಾಗಬೇಕು.

ಈ ವಿಷಯಕವಿಚಾರ ಬಹುದಿವಸ ಅನೇಕ ವೈಜ್ಞಾನಿಕ ಪಂಡಿತರು ನಡೆಸಿದ್ದರಿಂದ ತಂತಿಯಿಲ್ಲದ ಆಕಾಶವರ್ತಮಾನ ಪ್ರಚಾರವು (ವಯರ್‌ಲೆಸ್ ಟೆಲೆಗ್ರಫಿ) ಸಾಧ್ಯವಾಯಿತು. ಸಾವಿರಾರು ಮೈಲಿ ದೂರದಲ್ಲಿರುವ ದೇಶಗಳ ಜನರೊಂದಿಗೆ ಎದುರಿಗೆ ಕುಳಿತಿರುವ ಜನಗಳೊಂದಿಗೆ ಹೇಗೋಹಾಗೆ ಭಾಷಣವನ್ನು ನಡಿಸಬಹುದು. ಕಲ್ಕತ್ತಾ ಪಟ್ಟಣದಲ್ಲಿನ ಒಂದು ಮಂದಿರದಲ್ಲಿ ನಡೆಯುವ ಸಂಗೀತವಾಗಲಿ ಉಪನ್ಯಾಸವಾಗಲಿ ಬೆಂಗಳೂರಿನಲ್ಲಿರುವವರು ಅದೇಕಾಲದಲ್ಲಿಯೇ ಕೇಳಬಹುದು. ವಿಜ್ಞಾನ ಶಾಸ್ತ್ರದಿಂದುಂಟಾಗಿರುವ ಅತ್ಯಾಶ್ಚರ್ಯಕರವಾದ ಈ ಜನಸೌಕರ್ಯಕ್ಕೆ, ಪ್ರಯೋಜನವನ್ನಪೇಕ್ಷಿಸದೇ ಕೇವಲ ವಸ್ತು ತತ್ವವನ್ನೇ ವಿಚಾರಮಾಡುವುದಕ್ಕೆ ಹೊರಟ ವಿಜ್ಞಾನಿಗಳ ಪ್ರಯತ್ನವೇ ಮೂಲಕಾರಣವಾಗಿದೆ.

ಇನ್ನಲ್ಲದೆ ವಾಯುಮಂಡಲದಲ್ಲಿ ಸಂಚರಿಸಬೇಕೆಂಬ ಅಭಿಲಾಷೆಯಿಂದ ಬಹುಜನ ಪಾಶ್ಚಾತ್ಯ ಮತ್ತು ಅಮೆರಿಕಾ ದೇಶಸ್ಥರು ಯಂತ್ರಗಳನ್ನು ನಿರ್ಮಿಸಲು ಪ್ರಯತ್ನಪಟ್ಟರು. ಅನೇಕಸಲ ಈ ಪ್ರಯತ್ನಗಳು ನಿಷ್ಫಲವಾದವು. ಪ್ರಥಮದಲ್ಲಿ ಆಕಾಶದಲ್ಲಿ ಸಂಚರಿಸುವ ಕಾಲದಲ್ಲಿ ಯಂತ್ರವನ್ನು ನಿರೋಧಿಸಲು ಶಕ್ತರಾಗದೆ ಅಲ್ಲಿಂದ ಕೆಳಗೆ ಬಿದ್ದು ಕೆಲವರು ಮೃತರಾದರು. ಆದರೂ ಈ ಜನರು ತಮ್ಮ ಸೋಲಿನಿಂದ ನಿರುತ್ಸಾಹರಾಗದೆ ಅತಿಶಯವಾದ ಪ್ರಯತ್ನವನ್ನು ಮಾಡಿ ವಿಮಾನ ಸಂಚಾರವನ್ನು ಸಾಧಿಸಿರುತ್ತಾರೆ. ಈ ವಿಮಾನಗಳಲ್ಲಿ ಹಾರುವ ಆಕಾಶಯಾನ (ಏರೋಪ್ಲೇನ್) ವೆಂತಲು, ಆಕಾಶದ ಹಡಗೆಂತಲೂ (ಏರ್‌ಷಿಪ್ ಅಥವಾ ಜೆಪ್ಪಲಿನ್) ಎರಡು ಪ್ರಕಾರ. ಆಕಾಶಯಾನವು ಪಕ್ಷಿಗಳು ರೆಕ್ಕೆಯ ಸಹಾಯದಿಂದ ಹಾರುವಂತೆ, ಯಂತ್ರದ ಸಹಾಯದಿಂದ ಹಾರುವುದು. ದೂರದಲ್ಲಿ ಸಂಚರಿಸುತ್ತಿರುವ ಆಕಾಶಯಾನವನ್ನು ನೋಡಿದರೆ ಅದು ಹಾರುತ್ತಿರುವ ಪಕ್ಷಿಯಂತೆ ಕಾಣುವುದು. ಈ ಯಾನ ನಿರ್ಮಾಣವು ಹೇಗೆ ಸಾಧ್ಯವಾಯಿತೆಂದು ವಿಚಾರಮಾಡಿದರೆ ಜಲಚಲನಶಾಸ್ತ್ರ (ಹೈಡ್ರೊ ಡೈನೆಮಿಕ್ಸ್) ವಿಚಾರದಿಂದ ವೈಜ್ಞಾನಿಕರು ನಿಶ್ಚಯಿಸಿದ ತತ್ವಗಳೇ ಮೂಲಕಾರಣವೆಂದು ಹೇಳಬೇಕು. ಘಂಟೆಗೆ ಇನ್ನೂರು ಮೈಲಿಗಳಿಗೆ ಕಮ್ಮಿಯಿಲ್ಲದಂತೆ ಆಕಾಶಯಾನವು ಹಾರುವುದು. ಯಾನವು ಮೇಲಕ್ಕೆ ಹೋಗುವ ಕಾಲದಲ್ಲಿ ಒಳಗೆ ಕೂತವನಿಗೆ ಭೂಮಿಯು ವೇಗದಿಂದ ಕೆಳಗೆ ಹೋಗುವಂತೆ ಕಾಣುವುದಲ್ಲದೆ ಅಪೂರ್ವವಾದ ವಿಚಿತ್ರಾನುಭವವು ಉಂಟಾಗುವುದು.

ಕರಾಚಿ ಪಟ್ಟಣದಿಂದ ಇಂಗ್ಲಂಡಿಗೆ ಆಕಾಶಯಾನದ ಮೂಲಕ ಪ್ರತಿವಾರವು ಮೇಲ್ (ಟಪ್ಪಾಲು) ಹೋಗುವುದು. ಈ ಪ್ರಯಾಣಕ್ಕೆ ನಾಲ್ಕು ಐದು ದಿನಗಳ ಮೇಲೆ ಬೇಕಾಗಿಲ್ಲ. ಯಾನವು ಆಕಾಶದಲ್ಲಿ ಸಂಚರಿಸುವಾಗ ಕೆಳಗಿನ ಭೂಭಾಗಗಳ ಭಾವಚಿತ್ರಗಳನ್ನು ತೆಗೆಯುತ್ತಾರೆ. ಹೀಗೆ ಭೂಸಂಚಾರದಿಂದ ದುರ್ಗಮವಾದ ಸ್ಥಳಗಳ ಸ್ವರೂಪವು ತಿಳಿಯುವುದಕ್ಕೆ ಅವಕಾಶವಾಗುತ್ತದೆ. ಕಳೆದ ದೊಡ್ಡ ಯುದ್ಧದಲ್ಲಿ ಉಭಯಪಕ್ಷದವರೂ, ತಮ್ಮ ಶತ್ರುಗಳು ಯುದ್ಧಕ್ಕಾಗಿ ಆಕ್ರಮಿಸಿದ ಪ್ರದೇಶದಲ್ಲಿ ಏರ್ಪಡಿಸಿದ್ದ ಸನ್ನಾಹವನ್ನು ಆಕಾಶಯಾನದಿಂದ ತೆಗೆದ ಭಾವಚಿತ್ರಗಳನ್ನು ಪರೀಕ್ಷಿಸುವದರ ಮೂಲಕ ತಿಳಿಯುತ್ತಿದ್ದರು.

ಆಕಾಶ ಹಡಗು ಆಕಾಶಯಾನಕ್ಕಿಂತ ಬಹು ದೊಡ್ಡದು. ಬಹು ಜನರು ಇದರಲ್ಲಿ ಕುಳಿತು ಪ್ರಯಾಣ ಮಾಡಬಹುದು. ನೀರಿನಮೇಲೆ ಹೋಗುವ ಈಗಿನ ಹಡಗುಗಳಲ್ಲಿರುವ ಭೋಜನಶಾಲೆ, ವಿಹಾರಪ್ರದೇಶವೇ ಮೊದಲಾದ ಸೌಕರ್ಯಗಳೆಲ್ಲವೂ ಆಕಾಶ



(ಆಕಾಶದ ಹಡಗು ಅಥವಾ ಜೆಪ್ಪೆಲಿನ್)

ಹಡಗಿನಲ್ಲಿರುತ್ತವೆ. ಆಕಾಶದಲ್ಲಿ ಸಂಚಾರ ಮಾಡುವ ರೀತಿಯಲ್ಲಿ ಹಡಗಿಗೂ ಯಾನಕ್ಕೂ ವ್ಯತ್ಯಾಸವುಂಟು. ನಮ್ಮ ಸುತ್ತಲೂ ಇರುವ ಗಾಳಿಗಿಂತಲೂ ಹಗುರವಾದ ವಾಯುವನ್ನೊಳಗೊಂಡ ತನ್ನ ಒಂದು ಭಾಗದ ಸಹಾಯದಿಂದ ಮೇಲಕ್ಕೆ ತಾನೇ ಏಳುವುದು. ಅಪೇಕ್ಷಿತವಾದ ಮಾರ್ಗದ ಸಂಚಾರವು ಒಳಗಿನ ಯಂತ್ರವನ್ನು ನಡಿಸುವುದರಿಂದ ಸಾಧ್ಯವಾಗುತ್ತದೆ. ಆಕಾಶ ಹಡಗಿನಲ್ಲಿ ಉಪಯೋಗಿಸುವ ವಾಯುವು ಜಲಜನಕ (ಹೈ

ಜಿನ್) ಅಥವಾ ಹೀಲಿಯಂ. ಜಲಜನಕವು ವಾಯುಗಳಲ್ಲೆಲ್ಲಾ ಬಹು ಹಗುರವಾದದ್ದು. ಆದರೆ ಇದು ವಾಯುಮಂಡಲದಲ್ಲಿರುವ (ಅಟ್‌ಮಸ್‌ಫಿಯರ್) ಆಮ್ಲಜನಕದೊಡನೆ ಸೇರಿ ಉರಿದು ನೀರನ್ನುಂಟುಮಾಡುವ ಸ್ವಭಾವವುಳ್ಳದ್ದಾದ್ದರಿಂದ ಬಹುವೇಳೆ ಇದು ಹಡಗಿಗೆ ಅಪಾಯವನ್ನುಂಟುಮಾಡುವುದು- ಆಂಗ್ಲೇಯರು ಬಹಳ ದೊಡ್ಡದಾದ ಒಂದು ಆಕಾಶ ಹಡಗನ್ನು (ಆರ್. ೧೦೧) ಪುಷ್ಕಳ ಹಣವ್ಯಯಮಾಡಿ ನಿರ್ಮಿಸಿದರು. ಹಡಗಿನ ಒಳಗೆ ಜನಗಳಿಗೆ ಬೇಕಾದ ಎಲ್ಲ ಸೌಕರ್ಯವೂ ಅರಮನೆಗಳಲ್ಲಿರುವ ಸೌಕರ್ಯವನ್ನು ನೆನಪಿಗೆ ತರುವ ಹಾಗಿತ್ತು. ಈ ಹಡಗು ಕಳೆದ ವರುಷದ ಅಕ್ಟೋಬರ್ ತಿಂಗಳು ಐದನೇ ತಾರೀಖಿನಲ್ಲಿ ಇಂಡಿಯಾ ದೇಶಕ್ಕೆ ಪ್ರಯಾಣ ಮಾಡಿ ಫ್ರಾನ್ಸ್ ದೇಶದ ಬೊವೇ ಎಂಬ ಪಟ್ಟಣದ ಸಮೀಪದಲ್ಲಿ ಬಿರುಗಾಳಿಯಲ್ಲಿ ಕೆಳಗೆ ಹಾರುತ್ತಿರುವಾಗ ಒಂದು ಗುಡ್ಡಕ್ಕೆ ತಗಲಿ ಜಲಜನಕವು ಹತ್ತಿಕೊಂಡು ಉರಿದು ನಾಶವಾಯಿತು. ಪ್ರಖ್ಯಾತರಾದ ಸಲವತ್ತೇಳು ಜನ ಆಂಗ್ಲೇಯರು ಮರಣ ಹೊಂದಿದರು. ಇಂತಹ ಅನಾಹುತವಾದರೂ ಹಿಂಜರಿಯದೆ ಆಕಾಶ ಹಡಗು ಅಪಾಯವಿಲ್ಲದೆ ವಾಯುಮಂಡಲದಲ್ಲಿ ಸಂಚರಿಸುವುದನ್ನು ವೈಜ್ಞಾನಿಕ ಶಿಲ್ಪಿಗಳು ಕೈಗೂಡಿಸುವರೆಂಬುವದರಲ್ಲಿ ಸಂಶಯವಿಲ್ಲ. ಹಿಂದೆ ಹೇಳಿದ ಹೀಲಿಯಂ ಎಂಬ ವಾಯುವು ಯಾವ ಪದಾರ್ಥದಿಂದಲೇ ಆಗಲಿ ಸೇರಿ ಜಲಜನಕದ ಹಾಗೆ ಉರಿಯುವುದಿಲ್ಲವಾದ್ದರಿಂದ, ಈ ಗಾಳಿಯನ್ನು ಜಲಜನಕಕ್ಕೆ ಬದಲು ಉಪಯೋಗಿಸುವುದರಿಂದ ಆಕಾಶ ಹಡಗಿಗೆ ಅಪಾಯವು ಬಹುಮಟ್ಟಿಗೆ ಕಮ್ಮಿಯಾಗುವುದು.

ವಿಜ್ಞಾನಶಾಸ್ತ್ರದ ಅಭಿವೃದ್ಧಿಯಿಂದುಂಟಾಗಿರುವ ಸರ್ವ ಸೌಕರ್ಯವನ್ನೂ ನಿರೂಪಿಸುವುದು ಲೇಖನ ಕರ್ತರ ಅಭಿಪ್ರಾಯವಲ್ಲ. ಅಂತಹ ಪ್ರಯತ್ನವು ಒಂದು ದೊಡ್ಡ ಗ್ರಂಥವನ್ನು ಬರೆಯುವುದರಿಂದ ಕೂಡ ಪೂರೈಸಲು ಸಾಧ್ಯವಾಗಲಾರದು. ಪ್ರಕೃತ ನಮ್ಮ ಭಾರತಭೂಮಿಯಲ್ಲಿ ವಿಜ್ಞಾನಶಾಸ್ತ್ರದ ಅಭಿವೃದ್ಧಿಯು ಅತ್ಯಾವಶ್ಯಕ. ಪಾಶ್ಚಾತ್ಯರ ಮತ್ತು ಅಮೇರಿಕಾ ದೇಶದವರ ಔನ್ನತ್ಯಕ್ಕೆ ವೈಜ್ಞಾನಿಕ ಶಾಸ್ತ್ರದಲ್ಲಿ ಬಹುಕಾಲದಿಂದ ಅವರಿಗಿರುವ ಉತ್ಸಾಹವೇ ಮುಖ್ಯ ಕಾರಣ. ನಮ್ಮ ದೇಶದಲ್ಲಾದರೋ ಈ ಶಾಸ್ತ್ರದಲ್ಲಿ ಉತ್ಸಾಹವು ಈಚೆಗೆ ಉಂಟಾಯಿತು. ಮುಂದೆ ಇತರ ದೇಶದವರ ಸಮನಾಗಿ ನಾವು ಇರಬೇಕಾದರೆ ವಿಜ್ಞಾನಶಾಸ್ತ್ರದ ಅಭಿವೃದ್ಧಿಯಲ್ಲಿ ದೇಶದ ಉಚ್ಛ್ರಯದಲ್ಲಿ ಉದ್ಯುಕ್ತರಾಗಿರುವವರು ಪ್ರಯತ್ನಿಸಬೇಕು. ಹೊರಗಿನ ದೇಶದಿಂದ ಬರುವ ಅನೇಕ ಪದಾರ್ಥಗಳನ್ನು ನಾವು ಕೊಳ್ಳುವುದರಿಂದ ದೇಶದ ಬಡತನವು ಬಹಳ ಹೆಚ್ಚಿದೆ. ಇದಕ್ಕೆ ಔಷಧ ವಿಜ್ಞಾನಶಾಸ್ತ್ರದ ಅಭಿವೃದ್ಧಿಯಲ್ಲಲ್ಲದೆ ಬೇರೆ ಇಲ್ಲ. ನಾವು ಈಗ ಯಾವ ಹೊರದೇಶದ ಪದಾರ್ಥಗಳನ್ನು ಕೊಳ್ಳುತ್ತಿದ್ದೇವೊ ಅವುಗಳನ್ನು ತಯಾರ್ಮಾಡುವ ರೀತಿಯನ್ನು ಕಲಿತುಬರುವುದಕ್ಕೆ ನಮ್ಮ ದೇಶದವರನ್ನು ಯೂರೋಪ್ ಅಥವಾ ಅಮೇರಿಕ ದೇಶಕ್ಕೆ ಕಳುಹಿಸಿದರೆ ಸಾಕೆಂದು ಕೆಲವರ ಅಭಿಪ್ರಾಯ. ಇದು ಸಾಲದು. ಭರತವರ್ಷದಲ್ಲಿ ಕೇವಲ ವಸ್ತುತತ್ವವನ್ನೇ ತಿಳಿಯಬೇಕೆಂಬ ಉತ್ಸಾಹವುಳ್ಳ ವಿಜ್ಞಾನ ಶಾಸ್ತ್ರಾಭಿಜ್ಞರು ಇದ್ದ ಹೊರತು ದೇಶದ ಏಳಿಗೆಯು ಉಂಟಾಗಲಾರದು. ಈ ತತ್ವವನ್ನು ತಿಳಿದಿರುವುದರಿಂದಲೇ ಅನೇಕ ಪಾಶ್ಚಾತ್ಯ ಕೈಗಾರಿಕೆ ಸಂಘದವರು ಶುದ್ಧ ವೈಜ್ಞಾನಿಕರನ್ನು ಬಹಳ ಸಂಬಳ ಕೊಟ್ಟು ಇಟ್ಟಿರುತ್ತಾರೆ. ಹಿಂದೆ ಈ ಲೇಖನದಲ್ಲಿ ಕೊಟ್ಟಿರುವ ಒಂದೆರಡು ದೃಷ್ಟಾಂತಗಳಿಂದ ಕೈಗಾರಿಕೆ ಸಂಘದವರ ಇಂತಹ ಹಣವ್ಯಯವು ಎಷ್ಟು ಲಾಭವನ್ನು ತಂದುಕೊಡುವುದೆಂಬುದು ವ್ಯಕ್ತವಾಗುತ್ತೆ. ನಮ್ಮ ಭರತಖಂಡದಲ್ಲಿಯೂ ಅಲ್ಪಕಾಲದಲ್ಲೇ ವೈಜ್ಞಾನಿಕಶಾಸ್ತ್ರವು ಅಭಿವೃದ್ಧಿಯಾಗಿ ಅದರಿಂದ ದೇಶದ ಬಡತನವು ಹೋಗಿ ಪಾಶ್ಚಾತ್ಯ ದೇಶಗಳಂತೆ ಭರತಖಂಡವೂ ಐಶ್ವರ್ಯದಿಂದ ಉನ್ನತಸ್ಥಿತಿಯನ್ನು ಹೊಂದುತ್ತೆಂಬುವುದರಲ್ಲಿ ಸಂಶಯವಿಲ್ಲ.



# ವಿಜ್ಞಾನಪ್ರಪಂಚಕ್ಕೆ ಭಾರತೀಯರ ಕಾಣಿಕೆ

(ಶ್ರೀ ಪಿ. ಶ್ರೀನಿವಾಸರಾವ್, ಎಂ. ಎಸ್. ಸಿ., ಸೆಂಟ್ರಲ್‌ಕಾಲೇಜ್, ಬೆಂಗಳೂರು)

"ಪರತತ್ತ್ವವನರಿವೊಡೆಯುಂ, ಸಿರಿಯಂ ಸುಖಮಂ ಸುಕೀರ್ತಿಯಂ ಪಡೆವೊಡೆಯುಂ।
ಅರಿಭೀತಿಯ ಪಡೆವೊಡೆಯುಂ, ತಿರೆಯೊಳ್ ವಿಜ್ಞಾನವೊಂದೆ ಸಾಧನಮಲ್ತೆ"॥

—ವಸಂತಕುಸಮಾಂಜಲಿ.

ಕಳೆದವರ್ಷ ನವೆಂಬರ್ ತಿಂಗಳಲ್ಲಿ, ಸ್ವೀಡನ್ ದೇಶ ದಲ್ಲಿನ ನೋಬೆಲ್ ಬಹುಮಾನ ಸಮಿತಿಯವರು, ಈ ಸಲದ ಪಾರಿತೋಷಕವನ್ನು ಸರ್ ಚಂದ್ರಶೇಖರ ವೆಂಕಟರಾಮನ್‌ರವರಿಗೆ ಕೊಡಬೇಕೆಂದು ತೀರ್ಮಾನಿಸಿದರು. ಭೌತಿಕಶಾಸ್ತ್ರದಲ್ಲಿ ಇವರು ಕಂಡುಹಿಡಿದ ನೂತನವಾದ "ರಾಮನ್ ಎಫೆಕ್ಟ್" ಎಂಬ ವಿಚಾರವು ಪ್ರಪಂಚದ ನಾನಾಭಾಗಗಳಲ್ಲಿದ್ದ ಭೌತಿಕ ಶಾಸ್ತ್ರಜ್ಞರ ದೃಷ್ಟಿಯನ್ನು ಭರತಖಂಡದ ಕಡೆಗೆ ಸೆಳೆಯಿತು. ಒಡನೆಯೇ ನೋಬೆಲ್ ಪಾರಿತೋಷಕವೂ ಇವರ ಹಸ್ತಗತವಾಯಿತು. ವಿಜ್ಞಾನದ ದೃಷ್ಟಿಯಿಂದ ಮಾತ್ರ ನೋಡಿದಲ್ಲಿ ಇದು ಆಧುನಿಕ ಭಾರತ ಚರಿತ್ರೆಯಲ್ಲಿ ಒಂದು ಘಟ್ಟವೆನ್ನಬಹುದು. ಬಹುಮಾನ ಪ್ರದಾನವು ರಾಮನ್ ಮಹಾಶಯರೊಬ್ಬರಿಗೇ ಅಲ್ಲದೆ ಸಮಸ್ತ ಭರತಖಂಡಕ್ಕೇ ವಿಜ್ಞಾನ ಪ್ರಪಂಚವು ಮಾಡಿದ ಸತ್ಕಾರವೆನ್ನಬಹುದು.

ಭಾರತೀಯರ ಚೈತನ್ಯವು ಕ್ಷೀಣವಾಗಿ ಹೋಯಿತೆಂಬ ದುರಭಿಪ್ರಾಯವು ಪಾಶ್ಚಾತ್ಯರಲ್ಲಿ ಕೆಲವರಲ್ಲಿ ಪ್ರಬಲವಾಗಿತ್ತು. ಹಿಂದೂದೇಶೀಯರ ಸೃಷ್ಟಿಚಾತುರಿ, ಶಾಸ್ತ್ರಪರಿಶೋಧನ, ಆತ್ಮಸಾಧನ—ಇತ್ಯಾದಿಗಳೆಲ್ಲಾ ಪೂರ್ವಕಾಲದಲ್ಲಿ ಪ್ರಬಲವಾಗಿದ್ದಿರಬಹುದಾದರೂ ಈಗ ಮಟ್ಟಿಗೆ ಅವುಗಳನ್ನು ಪ್ರಶಂಸಿಸುವುದರಲ್ಲಿ ಅವುಗಳ ವಿಚಾರವಾಗಿ ಮಾತನಾಡುವುದು ಕೂಡ ಅಪ್ರಕೃತವೆಂದು ಭಾವಿಸುತ್ತಿದ್ದವರೆಲ್ಲರೂ ನಾಚಿಕೆಪಟ್ಟು ತಮ್ಮ ದುರಭಿಪ್ರಾಯವನ್ನು ನೀಗುವ ಸ್ವರ್ಣಯುಗವು ತಲೆದೋರುತ್ತಿರುವುದು. ವಿಜ್ಞಾನ ಕ್ಷೇತ್ರದಲ್ಲಿ ಅಸಮಾನ ಪ್ರತಿಭೆಯನ್ನು ತೋರಿ, ಪಾಶ್ಚಾತ್ಯರು ಮಾಡುವ ಪರಿಶೋಧನೆಗಳಿಗೆ ಯಾವ ಕರದಲ್ಲೂ ಕಡಿಮೆಯಾಗದಂತೆ ಸಾಧ[illegible] ಜಗತ್ಪ್ರಸಿದ್ಧಿಯನ್ನು ಹೊಂದಿರುವ, ಜೀವನವನ್ನೇ ವಿಜ್ಞಾನಕ್ಕಾಗಿ ಧಾರೆಯೆರೆದಿರುವ ಆಧುನಿಕ ಭಾರತ ವಿಜ್ಞಾನವೇತ್ತರಲ್ಲಿ ಕೆಲವರ ಪರಿಚಯವನ್ನು ಕೊಂಚ ಇಲ್ಲಿ ಮಾಡಿಕೊಡಲು ಪ್ರಯತ್ನ ಮಾಡಲಾಗಿದೆ.

## ಸರ್ ಚಂದ್ರಶೇಖರ ವೆಂಕಟರಾಮನ್



ಪ್ರಜ್ಞಾವಂತರಲ್ಲಿ ಅನೇಕ ಮಾದರಿಗಳುಂಟು. ಬಾಲ್ಯದಲ್ಲಿ ಬೂದಿಮುಚ್ಚಿದ ಕೆಂಡದಂತೆ ಸಾಮಾನ್ಯರಾಗಿದ್ದು, ಕೆಲವು ಕಾಲಾನಂತರ ಅಸಮಾನ ಪ್ರತಿಭೆಯನ್ನು ತೋರಿಸಿ ಲೋಕಮಾನ್ಯರಾಗುವರು ಕೆಲವರು. ಇದಕ್ಕೆ ವಿರೋಧವಾಗಿ ಮತ್ತೆ ಕೆಲವರು ಬಾಲ್ಯದಲ್ಲೇ ತಮ್ಮ ಕೌಶಲವನ್ನು ತೋರಿಸಿ ಬೇಗ ಮು[illegible] ಉಂಟು. ಆದರೆ ಸದಾ

ಕಾಲದಲ್ಲಿ ವಿಕಸಿತವಾಗಿ ಪ್ರತಿಭೆಯು ಕಂಡಿಕೆಂದರಂತೆ ಕಾಣಬರುವುದು ಬಹು ಸ್ವಲ್ಪ ಮಂದಿಯಲ್ಲಿ ಮಾತ್ರ. ರಾಮನ್ನರವರು ಈ ಶ್ರೇಷ್ಠತಮವಾದ ಪಂಗಡಕ್ಕೆ ಸೇರಿದವರೆಂದರೆ ಅತಿಶಯೋಕ್ತಿಯಾಗಲಾರದು. ೧೮೮೮ರಲ್ಲಿ ತಿರುಚನಾಪಲ್ಲಿಯಲ್ಲಿ ಇವರು ಹುಟ್ಟಿದರು. ಇವರ ತಂದೆಯವರು ವಿಶಾಖಪಟ್ಟಣದಲ್ಲಿ ಗಣಿತಶಾಸ್ತ್ರಾಧ್ಯಾಪಕರಾಗಿದ್ದರೆಂದು ತಿಳಿದುಬರುತ್ತದೆ. ರಾಮನ್ನರವರು ತಮ್ಮ ೧೨ನೆಯ ವಯಸ್ಸಿನಲ್ಲೇ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಮದ್ರಾಸು ವಿಶ್ವವಿದ್ಯಾಲಯದಲ್ಲಿ ಬಿ. ಎ ಮತ್ತು ಎಂ. ಎ ಪರೀಕ್ಷೆಗಳಲ್ಲಿ ಮೊದಲನೆಯ ಸ್ಥಾನವನ್ನು ಪಡೆದರು. ಇದಾದಮೇಲೆ ಇಂಡಿಯಾ ದೇಶದ ಅರ್ಥಿಕಶಾಖೆಯಲ್ಲಿ ಉನ್ನತ ಉದ್ಯೋಗಗಳಿಗೆ ನೇಮಿಸುವ ಸಲುವಾಗಿ ನಡೆದ ಪೈಪೋಟಿ ಪರೀಕ್ಷೆಯಲ್ಲಿ ಇವರು ತೇರ್ಗಡೆ ಹೊಂದಿದರು. ಕಲ್ಕತ್ತಾಪಟ್ಟಣದಲ್ಲಿ ಕೆಲಸಮಾಡುವ ಸುಯೋಗವು ಇವರಿಗೆ ಒದಗಿತು.

ಅರ್ಥಿಕಶಾಖೆಯಲ್ಲಿ ಕೆಲಸಮಾಡುತ್ತಿದ್ದರೂ ಇವರಿಗೆ ಬಾಲ್ಯದಿಂದಲೂ ವಿಶೇಷ ಪ್ರಿಯವಾಗಿದ್ದ ಭೌತಿಕಶಾಸ್ತ್ರದ ಮೇಲಿನ ಮಮತೆಯು ಮಾತ್ರ ಕಡಿಮೆಯಾಗಲಿಲ್ಲ. ಕಲ್ಕತ್ತಾಪಟ್ಟಣದಲ್ಲಿ ಮಹೇಂದ್ರನಾಥ ಸರ್ಕಾರ್ ಎಂಬವರಿಂದ ಸ್ಥಾಪಿತವಾದ ವಿಜ್ಞಾನ ಪರಿಶೋಧನಾಲಯಕ್ಕೆ ಪ್ರತಿಸಾಯಂಕಾಲವೂ ತಪ್ಪದೆ ಹೋಗಿ ಅಲ್ಲಿ ಭೌತಿಕಶಾಸ್ತ್ರದಲ್ಲಿ ಪರಿಶೋಧನೆಗಳನ್ನು ಮಾಡುತ್ತಿದ್ದರು. ಕೆಲವು ದಿನಗಳಮೇಲೆ ಶಾಸ್ತ್ರಪರಿಶೋಧನೆಯಲ್ಲಿ ಇವರು ತೋರಿಸಿದ ಕೌಶಲವನ್ನು ಕಂಡು ಕಲ್ಕತ್ತಾ ವಿಶ್ವವಿದ್ಯಾಲಯದವರು ಇವರನ್ನು ಪಲಿತ್ ಪ್ರೊಫೆಸರ್ ಆಗಿ ನೇಮಿಸಲು ಆಶಿಸಿದರು. ರಾಮನ್ನರವರೂ ವಿಜ್ಞಾನದ ಮೇಲಿನ ಶ್ರದ್ಧೆಯಿಂದ, ಹಣಕಾಸುಗಳನ್ನು ಲಕ್ಷಿಸದೆ, ಹೆಚ್ಚಾಗಿ ಶ್ರಮಪಡದೆ ಕೂತಲ್ಲಿಯೇ ವಿಶೇಷ ಹಣವನ್ನು ಸಂಪಾದಿಸಬಹುದಾಗಿದ್ದ ಅರ್ಥಿಕಶಾಖೆಯಲ್ಲಿ ಇವರು ಪಡೆದಿದ್ದ ಕೆಲಸವನ್ನು ಬಿಟ್ಟು, ಭೌತಿಕ ಶಾಸ್ತ್ರಾಧ್ಯಾಪಕರಾಗಿರಲು ಒಪ್ಪಿಕೊಂಡರು. ಪ್ರಕೃತಿಯ ರಹಸ್ಯಗಳನ್ನು ವಿಶೇಷ ಸಾಧನೆಯಿಂದ ತಿಳಿಯಲು ದೀಕ್ಷೆಯನ್ನು ವಹಿಸಿ, ಕೇವಲ ಐಹಿಕವಾದ ಐಶ್ವರ್ಯದ ಮೇಲಣ ವಾತ್ಸಲ್ಯವನ್ನು ಬಿಟ್ಟ ಇವರ ಚರಿತ್ರೆಯು ಒಂದು ರೀತಿಯಲ್ಲಿ ಗೌತಮನ ತ್ಯಾಗವನ್ನು ನೆನಪಿಗೆ ತರುತ್ತದೆ.

ಇದರನಂತರ ಇವರು ಒಂದೇಸಮನಾಗಿ ಹಗಲಿರುಳೂ ಶ್ರಮಪಟ್ಟು ನೂತನವಾದ ಅನೇಕ ವಿಷಯಗಳನ್ನು ಕಂಡುಹಿಡಿದು ವಿಜ್ಞಾನ ಪ್ರಪಂಚದ ಮೆಚ್ಚುಗೆಯನ್ನು ಪಡೆದರು. ಇವರ ಅನುಪಮವಾದ ಜ್ಞಾನಾನುರಾಗ, ಸರಳತೆಗಳು ಇವರ ಬುದ್ಧಿಕೌಶಲಕ್ಕೆ ನೆರವಾಗಿ ನಿಂತು, ಇವರು ನಡೆಸತಕ್ಕ ವಿಜ್ಞಾನಕಾರ್ಯಕ್ಕೆ ಸಹಾಯವಾಗಿ ನಿಲ್ಲಲು ಶಿಷ್ಯಮಂಡಲಿ ತಾನಾಗಿಯೇ ಸೃಷ್ಟವಾಯಿತು. ಇವರಲ್ಲಿ ಪ್ರ... ಯೊಬ್ಬರೂ ಇವರ ಹತ್ತಿರ ವಿದ್ಯಾರ್ಥಿಗಳಾಗಿ ಪದವೀಧರರಾದ ಮೇಲೂ ಇವರೊಂದಿಗೆ ಶಾಸ್ತ್ರ... ಶೋಧನಾಕಾರ್ಯದಲ್ಲಿ ನಿರತರಾಗಿರುವರು. ವಿಜ್ಞಾನ ಪ್ರಪಂಚದಲ್ಲಿ ವಿಶೇಷವಾಗಿ ಮನ್ನಣೆಯನ್ನು ಪ... ಇವರ "ರಾಮನ್ ಎಫೆಕ್ಟ್" ಎಂಬುವ ವಿಚಾರವನ್ನು ತಮ್ಮ ಶಿಷ್ಯರಾದ ರಾಮನಾಥನ್, ಕೃಷ್ಣನ್ ಮೊದಲಾದವರ ಸಹಾಯದಿಂದ ಕಂಡು ಹಿಡಿದರು. ವಿಚಾರದಲ್ಲಿ ರಾಮನ್ನರವರ ಮನೋವೃತ್ತಿ ಕೇವಲ ಆದರ್ಶನೀಯವಾದುದು. ವಿಜ್ಞಾನಲೋಕದ ಮೆಚ್ಚುಗೆಯೆಲ್ಲವೂ ತಮ್ಮ ಹೆಸರಿಗೇ ಸಲ್ಲುತ್ತಿರುವ... ದಲ್ಲಿ ತಾವು ಆನಂದದಿಂದ ಸುಮ್ಮನೆ ಕೂ... ಸಮಯ ದೊರೆತಾಗಲೆಲ್ಲಾ ತಾವು ಮಾಡಿದ ... ಯೊಂದು ಉಪನ್ಯಾಸದಲ್ಲೂ, ತಮ್ಮ ಶಿಷ್ಯ... ಕೃಷ್ಣನ್ ಮೊದಲಾದವರ ಶ್ರಮಸಹಿಷ್ಣುತೆ, ... ಮತ್ತು ಪ್ರತಿಭೆ ಇವುಗಳ ದೆಸೆಯಿಂದಲೇ ತಾವು ಪರಿಶೋಧನಾಕಾರ್ಯವನ್ನು ಸಾಧಿಸಲು ಅನುಕೂ... ವಾಯಿತೆಂದು ಒತ್ತಿ ಹೇಳುತ್ತಿದ್ದಾರೆ. ಸ್ವಾ... ಈ ತೆರನಾದ ಪ್ರೇಮವನ್ನು ಯಾವ ಶಿಷ್ಯನು ತಾನೇ ಜೀವಿತಕಾಲದಲ್ಲೆಲ್ಲಾ ನೆನಪಿಟ್ಟು ಆನಂದಿಸದಿ...

ರಾಮನ್ನರವರು, ವೈಜ್ಞಾನಿಕ ಪರಿಶೋಧ... ಕೈಹಾಕಿದ ಮೊದಲಲ್ಲಿ, ಶಬ್ದ, ಇದರ ಉತ್ಪತ್ತಿ... ಷಗಳೇ ಮೊದಲಾದುವುಗಳನ್ನು ಪರೀಕ್ಷಿಸಿ ಮೃದಂ... ಮೊದಲಾದ ಸಂಗೀತ ವಾದ್ಯಗಳ ಮರ್ಮಗಳ... ಪಾಶ್ಚಾತ್ಯಶಾಸ್ತ್ರಕಾರರ ವಿಧಿಗನುಸಾರವಾಗಿ ಕಂ... ಹಿಡಿದರು. ಇದಾದಮೇಲೆ ಇವರು ಬೆಳಕು ವಸ್ತು... ದೆಸೆಯಿಂದ ಯಾವ ರೀತಿಯಲ್ಲಿ ದೆಶೆದೆಶೆಗೂ ವಿಕ... ಸಲ್ಪಡುವುದೆಂಬುದನ್ನು (ಸ್ಕ್ಯಾಟರಿಂಗ್ ಆಫ್ ಲೈಟ್) ನೂರಾರು ತೆರದಲ್ಲಿ ಪರೀಕ್ಷಿಸಿ, ಅಂತರಿಕ್ಷವು ನೀಲಿ... ಗಿರುವುದೇಕೆ; ಸಮುದ್ರಗಳು ನೀಲಿಯಾಗಿರುವುದೇಕೆ ... ಪ್ರಶ್ನೆಗಳಿಗೆ ಬಹು ಸಮಂಜಸವಾದ ಸಮಾಧಾ...

ಳನ್ನು ಕೊಟ್ಟರು. ಈ ಪರೀಕ್ಷೆಗಳನ್ನೇ ಮತ್ತು ಸ್ವಲ್ಪ ಮುಂದುವರಿಸಲು ಈಗ ಪ್ರಖ್ಯಾತಿಯನ್ನು ಪಡೆದಿರುವ ರಾಮನ್ ಎಫೆಕ್ಟ್ ಎಂಬುದು ಸಾಧಿಸಲ್ಪಟ್ಟಿತು. ಇದರ ಮುಖ್ಯ ಸಾರವನ್ನು ಹೀಗೆಂದು ಹೇಳಬಹುದು. ಪ್ರತಿಯೊಂದು ಪದಾರ್ಥವೂ ಒಂದೇ ಸಮನಾದ ಉದ್ದವುಳ್ಳ ಬೆಳಕಾದ ಅಲೆಗಳಿಂದ ಬೆಳಗಿಸಲ್ಪಟ್ಟರೆ, ಪದಾರ್ಥದಲ್ಲಿನ ಅಣುಗಳು (ಆ್ಯಟಂಸ್) ಮೇಲೆ ಬೀಳುತ್ತಿರುವ ಬೆಳಕಿನ ಕಿರಣದ ಅಣುಗಳೊಂದಿಗೆ ಸಂಯೋಗ ಹೊಂದುವಾಗ, ಬಿದ್ದ ಬೆಳಕೆ ಚದರಿಹೋಗುವುದು. ಈ ಬೆಳಕನ್ನು ಪರೀಕ್ಷಿಸಿದರೆ ಇದರಲ್ಲಿನ ಅಲೆಗಳು ರೂಪಾಂತರಗಳನ್ನು ಹೊಂದಿರುವುದನ್ನು ಕಾಣಬಹುದು. ಮತ್ತು ಅಲೆಗಳ ಉದ್ದದಲ್ಲಿ ತೋರಿಬರುವ ವ್ಯತ್ಯಾಸವನ್ನು ಅಳೆಯುವುದರಿಂದ ಬೆಳಕನ್ನು ಚದರಿಸಲು ಕಾರಣಭೂತವಾದ ಅಣುಗಳ ಗುಣಗಳನ್ನು ನಿರ್ಧರಿಸಬಹುದು. ವಿಜ್ಞಾನ ಪರಿಶೋಧಕರಿಗೆ, ಅದರಲ್ಲೂ ರಸಾಯನ ಶಾಸ್ತ್ರಾಧ್ಯಯನವನ್ನು ಮಾಡುವವರಿಗೆ ಅತ್ಯಂತ ಉಪಯುಕ್ತವಾದ ಸಾಧನವು ಈ ನೂತನ ಸಂಗತಿಯಿಂದ ಒದಗಿದೆಯೆಂದು ವಿಜ್ಞಾನವೇತ್ತರೆಲ್ಲರೂ ಒಪ್ಪಿರುವರು. ಜರ್ಮನಿ ದೇಶದ ಪ್ರಿಂಗ್ಶೀಮ್, ಅಮೇರಿಕದ ವುಡ್ ಮೊದಲಾದ ಜಗತ್ಪ್ರಸಿದ್ಧರಾದ ಪಂಡಿತರು ಧಾರಾಳವಾಗಿ ಹೊಗಳಿದಮೇಲೆ, ೧೯೨೯ನೇ ಸೆಪ್ಟೆಂಬರಿನಲ್ಲಿ ಪ್ರಪಂಚದ ನಾನಾ ಭಾಗಗಳಿಂದ ಪಂಡಿತೋತ್ತಮರೆಲ್ಲ ಬ್ರಿಸ್ಟಲ್ ನಗರದಲ್ಲಿ ಸೇರಿ ರಾಮನ್‌ರವರೊಂದಿಗೆ ಕಲೆತು ಈ ನೂತನ ವಿಚಾರವನ್ನು ಚರ್ಚಿಸಿ ಮೆಚ್ಚಿದಮೇಲೆ, ಕಳೆದ ವರ್ಷ ನವೆಂಬರ್ ತಿಂಗಳಲ್ಲಿ ಸ್ವೀಡನ್ ದೇಶದ ನೋಬೆಲ್ ಪಾರಿತೋಷಕವನ್ನು ಇವರ ಶ್ರೇಷ್ಠತಮವಾದ ವೈಜ್ಞಾನಿಕ ಕಾರ್ಯಕ್ಕಾಗಿ ಕೊಡುವುದೆಂದು ನಿರ್ಧಾರವಾದಮೇಲೆ, ಭಾರತೀಯರಾದ ನಾವು ರಾಮನ್ ಅವರು ನಮ್ಮವರೆಂದು ಹೆಮ್ಮೆ ಪಡಬಹುದು! ಇಷ್ಟೇ ಅಲ್ಲದೆ ಕೆಲವು ದಿವಸಗಳ ಕೆಳಗೆ ಅವರು (ಬೆಂಗಳೂರಲ್ಲಿ) ಈಚೆಗೆ ನಡೆಸಿದ ಲೆಕ್ಕಾಚಾರದ ಪ್ರಕಾರ ಇಂಡಿಯಾ ದೇಶದಲ್ಲಿರತಕ್ಕ ಜನಸಮುದಾಯವು ಪ್ರಪಂಚದ ಒಟ್ಟಿನಲ್ಲಿನ ೫ ರಲ್ಲಿ ೧ ಭಾಗ. ಪ್ರತಿ ವರ್ಷವೂ ಸ್ವೀಡನ್ನಿನವರು ೫ ನೋಬೆಲ್ ಪಾರಿತೋಷಕಗಳನ್ನು ಕೊಡುವರು. ಅಂದಮೇಲೆ ಪ್ರತಿ ವರ್ಷವೂ ನಮ್ಮ ಭರತಖಂಡಕ್ಕೆ ಒಂದು ಬಹುಮಾನವು ಬಂದೇ ಬರಬೇಕೆಂದು ಹಟವನ್ನು ಮಾಡಿ ಇಲ್ಲಿನವರು ಪ್ರಯತ್ನಿಸಬೇಕೆಂದು ಬಲು ಉತ್ಸಾಹದಿಂದ ಅಪ್ಪಣೆ ಕೊಡಿಸಿದರು. ಸ್ಫೂರ್ತಿದಾಯಕವಾದ ವಾಕ್ಯಗಳು! ಉಜ್ವಲ ದೇಶಾಭಿಮಾನ!

## ಸರ್ ಜಗದೀಶಚಂದ್ರಬೋಸ್



ಭರತಖಂಡದ ಖ್ಯಾತಿಯನ್ನು ಪ್ರಪಂಚದಲ್ಲೆಲ್ಲಾ ಪ್ರಸರಿಸಲು ವಿಶೇಷ ಧೈರ್ಯ ಉತ್ಸಾಹಗಳಿಂದ ಶ್ರಮಪಟ್ಟವರಲ್ಲಿ ಜಗದೀಶಚಂದ್ರಬೋಸರು ಮೊದಲಿಗರೆನ್ನಬಹುದು. ಇವರು ಮೊದಲು ಭೌತಿಕಶಾಸ್ತ್ರದಲ್ಲಿ ನಿಪುಣತೆಯನ್ನು ಪಡೆದು ಕಳೆದ ಶತಮಾನದ ಉತ್ತರಾರ್ಧದಲ್ಲಿ ಹರ್ಟ್ಸ್ ಎಂಬವರಿಂದ ಕಂಡುಹಿಡಿಯಲ್ಪಟ್ಟ ವಿದ್ಯುಚ್ಛಕ್ತಿಯ ಅಲೆಗಳ ವಿಚಾರದಲ್ಲಿ ಅನೇಕ ಪರಿಶೋಧನೆಗಳನ್ನು ಮಾಡಿದರು. ಶಾಸ್ತ್ರಾಧ್ಯಯನದಲ್ಲಾಗಲಿ ಪರಿಶೋಧನಾಕ್ರಮದಲ್ಲಾಗಲಿ ಭಾರತೀಯರು ಇತರ ಯಾವ ದೇಶದವರಿಗೂ ಕಡಿಮೆಯಿಲ್ಲವೆಂಬುದನ್ನು ಇವರು ನಿಸ್ಸಂಕೋಚವಾಗಿ ಪ್ರಪಂಚಕ್ಕೆ ತೋರಿಸಿಕೊಟ್ಟರು. ಕೆಲವು ದಿನಗಳ ನಂತರ ಇವರು ವನಸ್ಪತಿ ಶಾಸ್ತ್ರದಲ್ಲಿ ಹೆಚ್ಚು ಪರಿಶ್ರಮವನ್ನು ಪಡೆದು, ತಮ್ಮ ಸ್ವಂತ ಕೌಶಲದಿಂದ ನಿರ್ಮಿಸಿದ ಅನೇಕ ಯಂತ್ರಗಳ ಸಹಾಯದಿಂದ ವಿಶ್ವದಲ್ಲಿನ ಸಮಸ್ತ ವಸ್ತುಗಳೂ ಇತರ ಪ್ರಾಣಿಗಳಂತೆಯೇ ಜೀವಭರಿತವಾಗಿವೆಯೆಂಬ ಅಂಶವನ್ನು ಕಂಡುಹಿಡಿದರು. ಮುಖ್ಯವಾಗಿ ಗಿಡಗಳು ಇತರ ಪ್ರಾಣಿಗಳಂತೆಯೇ ಜೀವನಕ್ಕೆ ಅನ್ವಯಿಸುವ ಸಕಲ ಅವಸ್ಥೆಗಳನ್ನೂ ಅನುಭವಿಸುವುವು. ಇತರ ಜೀವಿಗಳಂತೆಯೇ ನಿದ್ದೆಹೋಗುವುವು. ನಿದ್ರೆ

ಚ್ಛಕ್ತಿಯಿಂದಾಗಲಿ ಉಷ್ಣಾಧಿಕ್ಯದಿಂದಾಗಲಿ ಅತ್ಯಂತ ಶೈತ್ಯದಿಂದಾಗಲಿ ತೊಂದರೆ ಮಾಡಿದಾಗ ಬಲು ಕಾತರಗೊಳ್ಳುವುವು. ಬೇರೆ ಬೇರೆ ತೆರನಾದ ವಿಷಪ್ರಯೋಗಗಳನ್ನು ಮಾಡಿದರೆ ಜೀವವು ಯಾವ ರೀತಿಯಲ್ಲಿ ನಂದಿಹೋಗುವುದು ಇಂತಹ ಸ್ಥಿತಿಯಲ್ಲಿ ಇತರ ಜೀವಿಗಳಂತೆಯೇ ಹೃದಯದ ಕಾರ್ಯವು ಬರಬರುತ್ತ ನಿಧಾನವಾಗಿ ಕೊನೆಗೆ ನಿಂತೇ ಹೋಗುವಂತೆ ಸಸ್ಯದ ನಾಡಿಯೂ ನಿಧಾನವಾಗಿಯೂ, ಬಲು ಅಲ್ಪವಾಗಿಯೂ ಹೊಡೆದುಕೊಳ್ಳುತ್ತಾ ಕೊನೆಗೆ ನಿಂತುಹೋಗುವುದು. ಮಾದಕ ಪದಾರ್ಥಗಳ ಸೇವನೆಯಿಂದ ಇತರ ಜೀವಿಗಳಿಗೆ ನೆತ್ತಿಗೆ ಪಿತ್ತನೇರಿದ ತೆರದಲ್ಲಿಯೇ ಗಿಡಗಳೂ ವಿಚಿತ್ರಾನುಭವವನ್ನು ಹೊಂದುವುವು. ಹೀಗೆ ಸಸ್ಯವರ್ಗಕ್ಕೂ ಪ್ರಾಣಿವರ್ಗಕ್ಕೂ ವ್ಯತ್ಯಾಸವು ಕೇವಲ ಒಂದು ವಿಚಾರದಲ್ಲಿ ಮಾತ್ರ. ಸಸ್ಯಗಳು ಸ್ವಾಭಾವಿಕವಾಗಿ ನಿಂತಲ್ಲೇ ನಿಂತಿರುವಾಗ ಪ್ರಾಣಿಗಳು ಚಲಿಸಬಲ್ಲವು. ಇದೊಂದನ್ನು ಬಿಟ್ಟರೆ ಇತರ ಸಕಲೇಂದ್ರಿಯ ವ್ಯಾಪಾರಗಳೂ ಸಸ್ಯಗಳಲ್ಲೂ ಜೀವಿಗಳಲ್ಲೂ ಒಂದೇ ರೀತಿಯಾಗಿದೆಯೆಂಬುದನ್ನು ವಿಶದವಾಗಿ ಕಣ್ಣಿಗೆ ಒತ್ತಿ ತೋರಿಸುವ ಪ್ರಸಿದ್ಧವಾದ ಕ್ರೆಸ್ಕೋಗ್ರಾಫ್, ಆಪ್ಟಿಕಲ್ ಸ್ಫಿಗ್ಮೊಗ್ರಾಫ಼್ ಮೊದಲಾದ ಅನೇಕ ಯಂತ್ರಗಳನ್ನು ನಿರ್ಮಿಸಿದ ಇವರ ಪ್ರತಿಭೆಗೆ ಸಮನಾದುದನ್ನು ಕಾಣುವುದು ಬಲು ಅಪೂರ್ವ.

## ಪ್ರೊಫೆಸರ್ ಮೇಘನಾದ ಸಹ

ಪಾಶ್ಚಾತ್ಯರಲ್ಲಿ ಹಿಂದೂಸ್ಥಾನದ ವಿಚಾರದಲ್ಲಿ ಗೌರವ ಹೆಚ್ಚುವಂತೆ ಒತ್ತಾಯ ಪಡಿಸಲು ತಕ್ಕ ಶ್ರೇಷ್ಠತಮವಾದ ವೈಜ್ಞಾನಿಕ ಕಾರ್ಯವನ್ನು ಈಮಹನೀಯರು ಸಾಧಿಸಿರುವರು. ಬಂಗಾಳಾ ದೇಶದವರಾದ ಇವರು ಸಾಮಾನ್ಯ ಕುಟುಂಬದಲ್ಲಿ ಬೆಳೆದವರಾದರೂ ಅಸಾಧಾರಣವಾದ ಮೇಧಾವಿಗಳು. ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಎಂ. ಎಸ್. ಸಿ. ಪದವೀಧರರಾದಮೇಲೆ ಅಲ್ಲಿಯೇ ಭೌತಿಕಶಾಸ್ತ್ರ ಶಾಖೆಯಲ್ಲಿ ಸಹಾಯೋಪಾಧ್ಯಾಯರಾಗಿ ಕೆಲವುಕಾಲವಿದ್ದು ಅನಂತರ ವಿದ್ಯಾರ್ಥಿ ವೇತನವನ್ನು ಪಡೆದು ಜರ್ಮನಿ ಮೊದಲಾದ ದೇಶಗಳಲ್ಲಿ ಸುಪ್ರಸಿದ್ಧರಾದ ಜೋಹರ್, ಪ್ಲಾಂಕ್, ಇಯುನ್‌ಸ್ಟೀನ್ ಮೊದಲಾದ ಪಂಡಿತರಲ್ಲಿ ಭೌತಿಕಶಾಸ್ತ್ರದಲ್ಲಿ ಉಚ್ಚ ಶಿಕ್ಷಣವನ್ನು ಪಡೆದು ಹಿಂದೂದೇಶಕ್ಕೆ ಬಂದು ಅಲಹಾಬಾದಿನಲ್ಲಿ ಭೌತಿಕ ಶಾಖೆಗೆ ಮುಖ್ಯ ಅಧ್ಯಕ್ಷರಾಗಿರುವರು.

ಮೊದಲು ಇವರು ವೈಜ್ಞಾನಿಕ ಕ್ಷೇತ್ರದಲ್ಲಿ '... ಕ್ವಾಂಟಮ್' ಅಂದರೆ ವಿದ್ಯುತ್ಕಣದ ಗುಣಪರೀಕ್ಷೆಯ ವಿಚಾರದಲ್ಲಿ ತಮ್ಮ ಗಣಿತಶಾಸ್ತ್ರದ ನಿಪುಣತೆ ತೋರಿಸಿದರು. ಇದರ ನಂತರ ಇಯುನ್‌ಸ್ಟೀನರ '...ವಿಟಿ' ಅಥವಾ 'ಸಾಪೇಕ್ಷ ಸಿದ್ಧಾಂತ'ವನ್ನು ಜರ್ಮನ್ ಭಾಷೆಯಿಂದ ಇಂಗ್ಲೀಷು ಭಾಷೆಗೆ ಪರಿವರ್ತಿಸಿ ಸು...



...ವಾಗಿ ಅರ್ಥವಾಗುವಂತೆ ಬರೆದರು. ಇವೆಲ್ಲಕ್ಕಿಂತಲೂ ಹೆಚ್ಚಿನದಾಗಿ ಇವರು ನಕ್ಷತ್ರಗಳ ... ಮತ್ತು ಅವುಗಳಿಂದ ಬರುವ ಬೆಳಕಿನಲ್ಲಿ ರತಕ್ಕ ...ಷಗಳನ್ನು ಕುರಿತು ನಡೆಸಿದ ಪರಿಶೋಧನೆಗಳ... ಇವರ ಖ್ಯಾತಿಯು ದಿಕ್ಕು ದಿಶೆಗಳಲ್ಲೆಲ್ಲ ಪ್ರಸರಿಸಿ... ಉಷ್ಣಾಧಿಕ್ಯದಿಂದ ಅಣುಗಳು, ಅದರಲ್ಲೂ ಈ ...ಗಳು ಕಳುಹಿಸುವ ಬೆಳಕು ವ್ಯತ್ಯಾಸವನ್ನು ಹೊ...ದುವ ಕ್ರಮವನ್ನು ಸಮಗ್ರವಾಗಿ ಚರ್ಚಿಸುವ ಇ... ಪ್ರತಿಭೆಗೆ ನಿದರ್ಶನವೆಂದು ನಿರಾಯಾಸವಾಗಿ ... ಕೊಳ್ಳಬಹುದಾದ ('ಟೆಂಪರೇಚರ್ ಐಯೊನೈಜೇಷ... ಅಂಡ್ ಸ್ಟೆಲ್ಲಾರ್ ಸ್ಪೆಕ್ಟ್ರಾ' ಎಂಬ ಹೆಸರಿನ) ಇ... ಪರಿಶೋಧನೆಗಳು ವಿಜ್ಞಾನವೇತ್ತರ ಮೆಚ್ಚುಗೆಯ... ಪಡೆದು, ನಕ್ಷತ್ರಗಳ ವಿಚಾರದಲ್ಲಿ ನಮ್ಮ ತಿಳಿವ...ಯನ್ನು ಬಹಳಮಟ್ಟಿಗೆ ಮುಂದುವರಿಸಿವೆ. ... ...ನಿಕ ಖಗೋಳಶಾಸ್ತ್ರ ಪಾರಂಗತರಲ್ಲಿ ಪ್ರಖ್ಯಾತ... ...ಸಿದ ಎಡ್ಡಿಂಗ್‌ಟನ್‌ರವರು ಬರೆದಿರುವ 'ದಿ ಇನ...

ರ್ನಲ್ ಕಾನ್ಸ್ಟಿಟ್ಯೂಷನ್ ಆಫ್ ಸ್ಟಾರ್ಸ್' (ನಕ್ಷತ್ರಗಳ ಗರ್ಭರಚನೆ) ಎಂಬ ಪುಸ್ತಕದಲ್ಲಿ (ಪುಟ ೩೪೫) ಸಹಾರವರು ಖಗೋಳ ಶಾಸ್ತ್ರಾಧ್ಯಯನಕ್ಕೆ ಮಾಡಿರುವ ಉಪಕಾರವನ್ನು ಸ್ಮರಿಸಿದ್ದಾರೆ. ಅದೇ ಗ್ರಂಥದಲ್ಲಿ ಮತ್ತೊಂದು ಕಡೆ (ಪುಟ ೩೪೭) ಮೇಘನಾದರ ನೂತನ ವೈಜ್ಞಾನಿಕ ಪರಿಶೋಧನೆಯನ್ನು ಕುರಿತು

"ನಕ್ಷತ್ರಗಳ ಬೆಳಕಿನ ಸಂಬಂಧವಾಗಿ ಏನು ಶೋಧನೆಗಳು, ವಾದವ್ಯಾಖ್ಯಾನಗಳು, ಸಿದ್ಧಾಂತಗಳು. ಇಂದು ಕಾಣಬರುತ್ತದೆಯೋ ಇದರಲ್ಲೆಲ್ಲ ಮೇಘನಾದಸಹರವರ ಪರಿಶೋಧನೆಗಳ ಪ್ರಭಾವವೇ ಪೂರ್ಣವಾಗಿ ಕಂಡುಬರುತ್ತಿವೆ. ಇವರ ಶೋಧನೆಗಳಿಂದ ನಕ್ಷತ್ರಗಳ ವಿಚಾರದಲ್ಲಿ ನಮ್ಮ ಜ್ಞಾನವು ಬಹಳ ಮುಂದುವರಿಯಲು ಸಾಧ್ಯವಾಯಿತು."

ಎಂಬದಾಗಿ ಹೇಳಿರುವರು.

## ಆಚಾರ್ಯ ಪ್ರಫುಲ್ಲಚಂದ್ರರಾಯ್



ಪ್ರಫುಲ್ಲ ಚಂದ್ರರಾಯರ ಹೆಸರು ಯಾರಿಗೆ ತಾನೆ ಗೊತ್ತಿಲ್ಲ. ಅನೇಕರು ಅವರನ್ನು ಕಂಡಿದ್ದಾರೆ; ಅವರ ಭಾಷಣಗಳನ್ನು ಕೇಳಿದ್ದಾರೆ. ಮಹಾತ್ಮ ಗಾಂಧಿಯವರ ಬಲಭುಜವೆನ್ನಬೇಕು ಇವರನ್ನು. ಗಾಂಧೀಜಿಯವರ ಖಾದೀ ಸಂದೇಶವನ್ನು ಬಂಗಾಳ ದೇಶದ ಮೂಲೆಮೂಲೆಗಳಲ್ಲೂ ಸಾರಿದ್ದಾರೆ. ತಮ್ಮ ಆದರ್ಶ ಜೀವನದಿಂದ (ಶುದ್ಧ ಬ್ರಹ್ಮಚಾರಿಗಳು) ಭಾರತೀಯರೆಲ್ಲರ ಮನ್ನಣೆ, ಮೆಚ್ಚುಗೆ ಪಡೆದು ಕಲಿಯುಗ ಭೀಷ್ಮಾಚಾರ್ಯರೆಂದು ಖ್ಯಾತಿ ಪಡೆದಿದ್ದಾರೆ.

ಹಿಂದೂಸ್ಥಾನದ ಸುಪ್ರಸಿದ್ಧ ರಸಾಯನ ಶಾಸ್ತ್ರಜ್ಞರಲ್ಲಿ ಇವರು ಮೊದಲಿಗರು. ಇವರು ಬಹಳಕಾಲ ಪರಿಶೋಧನೆಗಳನ್ನು ನಡೆಸಿ, ನಮ್ಮ ಹಿರಿಯರಲ್ಲಿ ವಾಡಿಕೆಯಲ್ಲಿದ್ದ ರಸಾಯನಶಾಸ್ತ್ರದ ಮರ್ಮಗಳನ್ನೆಲ್ಲ ಹೊರಗೆಡವಿದರು. ಹೀಗೆ ಮಾಡುವುದರಿಂದ ಭರತಖಂಡದ ಗತವೈಭವವನ್ನು ನೆನಪಿಗೆ ತಂದರು. 'ಹಿಂದೂ ರಸಾಯನಶಾಸ್ತ್ರ' ವೆಂಬ ಗ್ರಂಥವು ಅವರ ಜೀವನ ಧ್ಯೇಯಕ್ಕೊಂದು ಚಿರಸ್ಮಾರಕವಾಗಿದೆ.

ರಸಾಯನಶಾಸ್ತ್ರದ ಶುದ್ಧ ಪರಿಶೋಧನೆಯಲ್ಲಿ ಮಾತ್ರ ಅವರು ತೃಪ್ತರಾಗಲಿಲ್ಲ. ಆ ಶಾಸ್ತ್ರಬಲದಿಂದ ದೇಶದ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಬೇಕು; ದೇಶದ ಸಂಪತ್ತನ್ನು ಬೆಳೆಸಬೇಕು ಎಂಬ ಆಶೆಯೂ ಆತುರವೂ ಅವರನ್ನು ಎಲ್ಲೂ ನಿಲ್ಲಿಸಲಾರದೆ ಹೋಯಿತು. ಅನೇಕ ಕೈಗಾರಿಕೆಗಳನ್ನು ಆರಂಭಿಸಲು ಅಡಿಗಲ್ಲು ಹಾಕಿದರು. ತಾವೇ ಕಲಿಕತ್ತೆಯಲ್ಲಿ 'ಫಾರ್ಮಕ್ಯೂಟಿಕಲ್ ವರ್ಕ್ಸ್' ಎಂಬ ಕಾರಾಗಾರವನ್ನು ಸ್ಥಾಪಿಸಿ, ತಮ್ಮ ಸ್ವಸಾಮರ್ಥ್ಯದಿಂದ 'ಸ್ವದೇಶಿ' ಭಾವಕ್ಕೊಂದು ಸತ್ಯಸ್ವರೂಪಕೊಟ್ಟು ಶಾಶ್ವತ ಕೀರ್ತಿಯನ್ನು ಗಳಿಸಿದರು.

ದಿವಂಗತರಾದ

## ಶ್ರೀನಿವಾಸ ರಾಮಾನುಜಂ

"ಕಾನನದಿ ಮಲ್ಲಿಗೆಯು ಮೌನದಿಂ ಬಿಂದು
ತಾನೆಲೆಯಮಿಂತಿರ್ದು..."

ಎಂದು ಕವಿಯೊಬ್ಬನು ಹಾಡಿರುವನು. ಶ್ರೀನಿವಾ ರಾಮಾನುಜಂಯವರ ವಿಚಾರದಲ್ಲಿ ಇದು ಬಲು ಸೊಗಸಾಗಿ ಒಪ್ಪುವುದು. ಗಣಿತಶಾಸ್ತ್ರದಲ್ಲಿ ಇವರಿಗಿದ್ದ ನಿಪುಣತೆಗೂ, ಇವರು ನಡೆಸಿರುವ ಪರಿಶೋಧನೆಗಳಿಗೂ, ಜನಸಾಮಾನ್ಯರಲ್ಲಿ ಇವರ ವಿಚಾರದಲ್ಲಿರುವ ತಿಳಿವಿಗೂ ಹೋಲಿಸಿದರೆ ದೇಶಾಭಿಮಾನಿಯಾದ ಪ್ರತಿಯೊಬ್ಬನಿಗೂ ವ್ಯಸನವಾಗದಿರಲಿಕ್ಕಿಲ್ಲ. ಇವರ ಪ್ರತಿಭೆಯನ್ನು ನೂರು ಮಂದಿಗಳಿಗೆ ಹಂಚಿದರೆ ಪ್ರತಿಯೊಬ್ಬನಿಗೂ ಜಗತ್ಪ್ರಸಿದ್ಧಿಯನ್ನು ಪಡೆಯಲು ಸಾಕಾದಷ್ಟು

ಅನುಕೂಲತೆಯನ್ನು ಕೊಟ್ಟಂತಾಗುವುದೆಂದ ಮೇಲೆ ಮುಂದೆ ಇನ್ನು ಏನುಹೇಳಿ ಏನುಪ್ರಯೋಜನ! ಹೀಗಿದ್ದರೂ ನಮ್ಮಲ್ಲಿ ಬಲು ಸ್ವಲ್ಪವಂದಿಗೆ ಮಾತ್ರ ಇವರ ವಿಚಾರವು ತಿಳಿದಿದೆ. ಆದರಲ್ಲೂ ಇವರು ಬಲು ಪ್ರಸಿದ್ಧರಾದ ಗಣಿತಶಾಸ್ತ್ರಜ್ಞರೆಂಬ ವಿಚಾರ ಮಾತ್ರ ಗೊತ್ತು. ಹೆಚ್ಚು ಜನಗಳಿಗೆ ಇವರ ಪರಿಶೋಧನೆ



ಗಳೇನು; ಅವುಗಳ ಬೆಲೆಯೇನು ಎಂಬುದನ್ನು ನಿರ್ಧರಿಸಲು ಸಾಕಾದಷ್ಟು ಶಕ್ತಿಯಿಲ್ಲದಿರುವಿಕೆಯೇ ಇದಕ್ಕೆ ಕಾರಣ. ಆದರೆ ಈಗ ಕೇಂಬ್ರಿಜ್ಜಿನ ಮುಖ್ಯ ಪಂಡಿತರಾದ ಹಾರ್ಡಿ ಎಂಬವರು ಇವರ ವಿಚಾರದಲ್ಲಿ ಮಾಡಿರುವ ಪ್ರಶಂಸೆಯನ್ನು ಕೇಳಿಯಾದರೂ ನಮ್ಮ ಪುಣ್ಯಭೂಮಿಯಲ್ಲಿ ಈಗಲೂ ಮಹಾವಿಭೂತಿಗಳು ಹುಟ್ಟುತ್ತಿರುವರಲ್ಲಾ ಎಂದು ನಾವು ಹೆಮ್ಮೆಪಡಬಹುದು.

ಶ್ರೀನಿವಾಸರಾಮಾನುಜಯ್ಯನವರು ೧೮೮೭ ರಲ್ಲಿ, ದಕ್ಷಿಣ ಹಿಂದೂಸ್ಥಾನದಲ್ಲಿ ಈರೋಡ್ ನಗರದಲ್ಲಿ ಹುಟ್ಟಿದರು. ಬಾಲ್ಯದಲ್ಲಿ ಇವರ ವಿದ್ಯಾಭ್ಯಾಸವು ಕುಂಭಕೋಣದಲ್ಲಿ ನಡೆಯಿತು. ಆಗಲೇ ಇವರು ತಮ್ಮ ಗುರುಗಳನ್ನು ಇತರ ದೊಡ್ಡವರನ್ನು ಗಣಿತಶಾಸ್ತ್ರದಲ್ಲಿ ತೊಡಕಾದ ಮತ್ತು ಊಹಾ ಪ್ರಪಂಚದಲ್ಲಿ ಮಾತ್ರ ಇರತಕ್ಕ ಸಂಖ್ಯೆಗಳು ಮೊದಲಾದುವುಗಳ ಅರ್ಥವನ್ನು ಕೇಳುತ್ತಿದ್ದರು. ಕೆಲವು ವರ್ಷಗಳ ನಂತರ ಇವರು ಕಾರಣಾಂತರದಿಂದ ಕುಂಭಕೋಣ ಬಿಟ್ಟು ವಿಶಾಖಪಟ್ಟಣಕ್ಕೆ ಬಂದು ವಿದ್ಯಾಭ್ಯಾಸವನ್ನು ಮುಂದುವರಿಸಲು ಪ್ರಯತ್ನಿಸಿದರು. ಅಲ್ಲಿ ಪ್ರೋತ್ಸಾಹ ದೊರೆಯದೆ, ಮದರಾಸಿಗೆ ಬಂದು ೧೯೦ ಎಫ್. ಎ. ಪರೀಕ್ಷೆಗೆ ಕಟ್ಟಿದರು. ಆದರೆ ಅದ ತೇರ್ಗಡೆಯಾಗಲಿಲ್ಲ. ಪುನಃ ಇವರು ಪರೀಕ್ಷೆ ಕೂಡಲು ಪ್ರಯತ್ನಿಸಲಿಲ್ಲ. ೧೯೦೯ ರಲ್ಲಿ ಇವ ಮದುವೆಯಾಯಿತು. ಸರಿ ಜೀವನೋಪಾಯವನ್ನು ಹುಡುಕುವ ಸಂಭ್ರಮದಲ್ಲಿ ಓದುಗಾರಿಕೆಯನ್ನು ನಿಲ್ಲಿಸಿಬಿಟ್ಟರು.

ವಿಶ್ವವಿದ್ಯಾನಿಲಯದ ಪರೀಕ್ಷೆಗಳಲ್ಲಿ ಕೀರ್ತಿ ಯದಿದ್ದರೂ ಇವರು ಈಗಾಗಲೇ ಗಣಿತಶಾಸ್ತ್ರ ಬಲು ಪ್ರೌಢ ವಿಚಾರಗಳಲ್ಲಿ ಅನೇಕ ಪರಿಶೋ ಗಳನ್ನು ನಡೆಸಿ, ಅದೆಲ್ಲವನ್ನು ಕೆಲವು ಪುಸ್ತಕಗ ಬರೆದಿಟ್ಟುಕೊಂಡಿದ್ದರು. ಇವರ ಪ್ರತಿಭೆಯನ್ನು ಕಂ ಇವರಿಗೆ ತಕ್ಕ ಪ್ರೋತ್ಸಾಹವನ್ನು ಕೊಟ್ಟರೆ ಉತ್ತ ವಾದ ಪರಿಶೋಧನೆಗಳನ್ನು ಮಾಡುವರೆಂದು ಭ ಯಿಟ್ಟು ಇವರಿಗೊಂದು ವಿದ್ಯಾರ್ಥಿವೇತನವನ್ನು ಕೊ ಡಿಸಲು ಕೆಲವು ಪಂಡಿತರು ಪ್ರಯತ್ನಿಸಿದರು. ಕೊ ಒಂದೂ ಫಲಿಸಲಿಲ್ಲ. ಮದರಾಸು ಪೋರ್ಟ್ಟ್ರ ಆಫೀಸಿನಲ್ಲಿ ಇವರಿಗೆ ಗುಮಾಸ್ತೆಯ ಕೆಲಸವೊಂ ಸಿಕ್ಕಿತು. ಬಡತನವಾದರೇನು? ಪ್ರತಿಭೆಗೆ ಬಡತ ಪರಿಶೋಧನೆಗಳು ಎಂದಿನಂತೆಯೇ ಮುಂದುವರಿ ತ್ತಿದ್ದುವು. ಕಾಲಕ್ರಮದಲ್ಲಿ ಇದರ ವಿಚಾರವು ಇ ಕಚೇರಿಯ ಸಾಹೇಬರಿಗೆ ತಿಳಿದು ಬಂತು. ಅ ಮೂಲಕ ಆಗತಾನೆ ಕೇಂಬ್ರಿಜ್ಜಿನಿಂದ ಬಂದು ಮದ ಸಿನಲ್ಲಿ ಉಪನ್ಯಾಸಗಳನ್ನು ಕೊಡುತ್ತಲಿದ್ದ ಪ್ರೊ ಸರ್ ನೆವಿಲ್ಲ್‌ರವರ ಕಿವಿಗೆ ಬಿತ್ತು. ಕೂಡಲೆ ಇವ ರಾಮಾನುಜಯ್ಯನವರನ್ನು ಕೇಂಬ್ರಿಡ್ಜ್‌ಗೆ ಬಂದು ಅ ಇತರ ಪಂಡಿತರೊಂದಿಗೆ ಕಲೆತು ತಮ್ಮ ಪರಿಶೋಧ ಗಳನ್ನು ಜಗತ್ತಿಗೆ ತಿಳುಹಬೇಕೆಂದು ಕೇಳಿಕೊಂಡ ಇವರ ಅನುಕೂಲಕ್ಕಾಗಿ ವಿದ್ಯಾರ್ಥಿ ವೇತನವ ಏರ್ಪಡಿಸಿಕೊಟ್ಟರು. ಶ್ರೀನಿವಾಸರಾಮಾನುಜ ನವರು ಬಹಳ ಶ್ರೋತ್ರಿಯರು. ಸಮುದ್ರಯಾನ ನಿಷಿದ್ಧವೆಂದು, ವೇತನವನ್ನು ಒಪ್ಪಿಕೊಳ್ಳಲು ಬ ಹಿಂದುಮುಂದು ಆಲೋಚಿಸಿ, ಕೊನೆಗೆ ವಿಧಿಯಿ ೧೯೧೪ರಲ್ಲಿ ವಿಲಾಯಿತಿಗೆ ಹೊರಟೇ ಹೊರಟರು.

ವಿಲಾಯಿತಿಯಲ್ಲಿ ಇವರು ಇದ್ದುದು ಸುಮಾ ನಾಲ್ಕು ವರ್ಷಗಳಕಾಲ. ಇಷ್ಟರೊಳಗೆ ಇವ ನಡೆಸಿದ ಪರಿಶೋಧನೆಗಳು, ಇವರ ಪ್ರತಿಭೆಯು,

ದೂಸ್ಥಾನಕ್ಕೆ ಉಜ್ವಲವಾದ ಕೀರ್ತಿಯನ್ನು ತರುವಂಥವು. ೧೯೧೯ರಲ್ಲಿ ಇವರ ಆರೋಗ್ಯವು ಕೆಟ್ಟು ಹಿಂದೂದೇಶಕ್ಕೆ ಹಿಂತಿರುಗಿದರು. ಕ್ಷಯರೋಗದ ಚಿಹ್ನೆಗಳು ತೋರಿಬಂದುವು. ದೇಹದಲ್ಲಿ ಶಕ್ತಿಯು ಕುಂದಿದ್ದರೂ ಬುದ್ಧಿಯಲ್ಲಿ ಪ್ರೌಢಿಮೆಯು ಇನ್ನೂ ಉಚ್ಛ್ರಾಯಸ್ಥಿತಿಯಲ್ಲೇ ಇದ್ದಿತು. ಆರೋಗ್ಯವು ಸರಿಹೋದಂತೆ ತೋರಿಬಂತು. ಆದರೂ ೧೯೨೦ ರಲ್ಲಿ ಇವರು ಕುಂಭಕೋಣದಲ್ಲಿ ಸ್ವರ್ಗಸ್ಥರಾದರು.

ಕೇಂಬ್ರಿಡ್ಜಿನ ಗಣಿತಶಾಸ್ತ್ರಾಧ್ಯಾಪಕರಾದ ಜಿ. ಎಚ್. ಹಾರ್ಡಿಯವರು ಇವರ ಮರಣವಾರ್ತೆಯನ್ನು ಕೇಳಿ, ವಿಲಾಯಿತಿಯ ಉತ್ತಮವರ್ಗದ ವೈಜ್ಞಾನಿಕ ಪತ್ರಿಕೆಯಾದ 'ನೇಚರ' (ಪ್ರಕೃತಿ) ನಲ್ಲಿ ಈರೀತಿ ಬರೆದಿರುತ್ತಾರೆ.

"ದೊಡ್ಡ ದೊಡ್ಡ ಗಣಿತಶಾಸ್ತ್ರಜ್ಞರಲ್ಲಿ ಸಹ ಬಹಳ ಸ್ವಲ್ಪಮಂದಿಗೆ ಮಾತ್ರ ಗೊತ್ತಾದ ಮಹಾಕ್ಷೇತ್ರದಲ್ಲೇ ರಾಮಾನುಜಂರವರ ಶೋಧನೆಗಳೆಲ್ಲ ಕೇಂದ್ರೀಕೃತವಾಗಿದ್ದುವು........ನಾನೂ ಅನೇಕ ಐರೋಪ್ಯ ಗಣಿತಶಾಸ್ತ್ರ ಪಾರಂಗತರನ್ನು ನೋಡಿದ್ದೇನೆ. ಆದರೆ ರಾಮಾನುಜಂರವರ ತತ್ತ್ವಾವಲೋಕನ ದೃಷ್ಟಿಯು ವಿಸ್ಮಯಗೊಳಿಸುವಂತಹುದು; ಊಹಿಸಲಸಾಧ್ಯವಾದಂತಹುದು. ಆಧುನಿಕ ವಿಚಾರ ಮತ್ತು ಶೋಧನಾಕ್ರಮಗಳ ಪರಿಚಯವು ಆತನಿಗೆ ತನ್ನ ೩೦ನೆಯ ವಯಸ್ಸಿನಲ್ಲುಂಟಾಯಿತು. ಆ ಪರಿಚಯವು ಆತನಿಗೆ ೧೭ನೆಯ ವಯಸ್ಸಿನಲ್ಲೇ ಉಂಟಾಗಿದ್ದರೆ ಆತನ ಚರಿತ್ರೆಯೇನಾಗುತ್ತಿತ್ತೆಂಬ ವಿಚಾರವನ್ನು ಈಗ ಎತ್ತಿ ಊಹಿಸುವುದರಿಂದೇನು ಫಲ. ಆತನ ಕಾಲದವರಲ್ಲಿ ಗಣಿತಶಾಸ್ತ್ರ ಪಾರೀಣತೆಯಲ್ಲಿ ಏಕೈಕವೀರನೆನಿಸುತ್ತಿದ್ದನೆಂದು ಭಾವಿಸಿದರೆ ಅತಿಶಯೋಕ್ತಿಯಾಗಲಾರದು. ಆತನು ಮಾಡಿರುವುದೇ ಸಾಕು; ಅದ್ಭುತ ಕಾರ್ಯ! ೨೦ ವರ್ಷಗಳ ತರುವಾಯ, ಆತನು ಸೂಚಿಸಿರುವ ಸಂಶೋಧನೆಗಳು ಮುಂದುವರಿದು ಮುಗಿದಾಗ, ಈಗ ಕಾಣಬರುವುದಕ್ಕಿಂತ ಆಗ ಆತನ ಕೆಲಸವು ಪರಮಾಶ್ಚರ್ಯಕರವಾಗಿ ಕಾಣಬರುತ್ತದೆ."

## ರಾವ್ ಬಹದ್ದೂರ್ ಬಿ. ವೆಂಕಟೇಶಾಚಾರ್

ಜಗದ್ವಿಖ್ಯಾತರಾದ ವೈಜ್ಞಾನಿಕರು ಭರತಖಂಡದ ಬೇರೆ ಬೇರೆ ಪ್ರಾಂತ್ಯಗಳಿಗೆ ಕೀರ್ತಿ ಗೌರವಗಳನ್ನು ಗಳಿಸಿದ್ದಾರೆ. ಈ ಸಮಯದಲ್ಲಿ ನಮ್ಮ ಕರ್ಣಾಟಕ ದೇಶವೆಲ್ಲಿದೆ ಎಂಬ ಪ್ರಶ್ನೆಯು ಕಹಜಜಾ... ರಲ್ಲೂ ಹುಟ್ಟುತ್ತದೆ. ಧೈರ್ಯವಾಗಿ, ಉಚ್ಚಸ್ವರದಿಂದ ಆ ಪ್ರಶ್ನೆಗೆ ಉತ್ತರ ಕೊಡುವ ಭಾಗ್ಯವು ಕನ್ನಡಿಗರಿಗಿದೆ.

ರಾವ್ ಬಹದ್ದೂರ್ ಬಿ. ವೆಂಕಟೇಶಾಚಾರ್ಯರು ಮೈಸೂರಿನ ಮಕ್ಕಳಲ್ಲಿ ಒಬ್ಬರು. ವಿಖ್ಯಾತ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಜನ್ಮಧಾರಣ ಮಾಡಿದ ನಂದಿ ಕ್ಷೇತ್ರದಿಂದಲೇ (ಚಿಕ್ಕಬಳ್ಳಾಪುರ) ವೆಂ



ಕಟೇಶಾಚಾರ್ಯರೂ ಜನ್ಮ ತಾಳಿ ಬಂದರು. ಈಗ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಭೌತಿಕ ಶಾಸ್ತ್ರ ಶಾಖೆಯ ಮುಖ್ಯ ಆಚಾರ್ಯರಾಗಿರುವರು. ಈ ಶಾಸ್ತ್ರದಲ್ಲಿ ತಾವು ನಡೆಸಿರುವ ಪರಿಶೋಧನೆಗಳಿಂದ ಆಚಾರ್ಯರು ತಮ್ಮ ತಾಯಿನಾಡಿಗೆ ಕೀರ್ತಿ ಕಲಶ ವಸ್ನಿಟ್ಟಿರುವರು. ಸರ್ ಚಂದ್ರಶೇಖರ ವೆಂಕಟರಾಮನ್‌ರವರೇ ಅನೇಕಸಲ ಹೇಳಿರುವಂತೆ ವೆಂಕಟೇಶಾಚಾರ್ಯರು ಪಾದರಸದ ಆವಿಯ ದೀಪವನ್ನು, ಅದರ ಮಹತ್ತನ್ನು ತೋರಿಸಿಕೊಟ್ಟಮೇಲೆ ರಾಮನ್‌ರವರು ತಮ್ಮ 'ರಾಮನ್ ಎಫೆಕ್ಟ್' ಕಂಡುಹಿಡಿದರು.

೧೯೩೦ರಲ್ಲಿ 'ಅಖಿಲ ಭಾರತ ವೈಜ್ಞಾನಿಕರ ಪರಿಷತ್ತು' ಅಲಹಾಬಾದಿನಲ್ಲಿ ಸೇರಿತ್ತು. ಆ ಪರಿಷನ್ಮೇಳನದ 'ಭೌತಿಕಶಾಖೆ'ಗೆ ಆಚಾರ್ಯರನ್ನು ಅಧ್ಯಕ್ಷರನ್ನಾಗಿ ಆರಿಸಿದುದು ಇವರ ಪ್ರತಿಭೆಗೆ ವೈಜ್ಞಾನಿಕರು ಮಾಡಿದ ಸತ್ಕಾರವೆನ್ನಬೇಕು. ಶಾಸ್ತ್ರ ಪರಿಶೋಧನ ಕಾರ್ಯದಲ್ಲಿ ಇವರ ದಕ್ಷತೆಯೂ, ಕರ್ತವ್ಯ ... ಉಚಿತವಾದುದು.

# ರಾ ಜ ನೀ ತಿ



೧. ಮಾನವನೂ ಸ್ವಾತಂತ್ರ್ಯಾಪೇಕ್ಷೆಯೂ

'ರಾಜಕಾರಣ ಪಟುಗಳೊಬ್ಬರು'

೨. ಪೌರಧರ್ಮ ಮತ್ತು ರಾಷ್ಟ್ರನೀತಿ

ಶ್ರೀ ಕೆ. ಕೃಷ್ಣಯ್ಯಂಗಾರ್, ಬಿ.ಎ., ದೇಶೀಯ ವಿದ್ಯಾಶಾಲಾ, ಬೆಂಗಳೂರು

೩. ಭಾರತೀಯರ ಸ್ವಾತಂತ್ರ್ಯ ಸಾಧನೆ

ಶ್ರೀ ಕೆ. ಸಂಪದ್ಗಿರಿರಾವ್, ಎಂ.ಎ., ದೇಶೀಯ ವಿದ್ಯಾಶಾಲಾ ,,

೪. ಸ್ವಾತಂತ್ರ್ಯ ಸಂಗ್ರಾಮ, ರೇಖಾಚಿತ್ರ

ಶ್ರೀ ಬಿ. ಶ್ರೀನಿವಾಸರಾವ್, ಬಿ. ಎ., ಎಲ್. ಎಲ್. ಬಿ., ಮತ್ತು

ಶ್ರೀ ಜೋಶಿ, ಕಲಾಮಂದಿರ

# ಮಾನವನೂ ಸ್ವಾತಂತ್ರ್ಯಾಪೇಕ್ಷೆಯೂ

('ರಾಜಕಾರಣಪಟುಗಳೊಬ್ಬರು')

## ಜೀವನ ಸಮಸ್ಯೆ

ಒಂದು ಸಸಿಯನ್ನು ಬೆಳೆಸಬೇಕಾದರೆ ಅದಕ್ಕೆ ಬೇಲಿಯನ್ನು ಕಟ್ಟಿ ಅದನ್ನು ಕಾಪಾಡುವರು. ಸಸಿಯು ಭೂಮಿಯ ... ನ್ನು ಹೀರಿ, ನೀರು, ಗಾಳಿ, ಬಿಸಿಲು ಇವುಗ ... ದ ಕ್ರಮೇಣ ದೊಡ್ಡ ವೃಕ್ಷವಾಗುವುದು ... ಸಸಿಯನ್ನು ಬೆಳೆಸಲಿಲ್ಲ; ಅದು ಬೆಳೆಯಲು ಸಾಕಾದಷ್ಟು ಅವಕಾಶವನ್ನು ಒದಗಿಸಿತು. ಆದರೆ ಬೇಲಿಯೂ ಬೆಳೆಯುವುದಾಗಿದ್ದರೆ ಸಸಿಯ ಬೆಳವಣಿಗೆಗೆ ಅಡ್ಡಿಮಾಡಿ ಅದನ್ನು ಕೊಲ್ಲುವ ಸಂಭವವುಂಟು. ಸಸಿಯು ಅದರಲ್ಲಿತಕ್ಕ ಸತ್ತ್ವದಿಂದ, ಜೀವಶಕ್ತಿಯಿಂದ ಬೆಳವಣಿಗೆಯನ್ನು ಹೊಂದುವುದು. ಬೇಲಿಯಲ್ಲಿಯೂ ಇಂತಹ ಶಕ್ತಿಯಿರುವುದಾದರೆ, ಪರಸ್ಪರ ವಿರೋಧವುಂಟಾಗಿ ಸಸಿಯ ಬೆಳವಣಿಗೆಗೆ ಕಾರಣವಾಗದೆ ಅದಕ್ಕೆ ಕಂಟಕವಾಗಿ ಪರಿಣಮಿಸುವುದು.

ಇದೇರೀತಿಯಲ್ಲಿ ಪ್ರತಿಯೊಂದು ಜೀವದ, ವ್ಯಕ್ತಿಯ, ಜೀವಶಕ್ತಿವಿಕಾಸದಲ್ಲಿಯೂ ಈ ಮೇಲಿನ ಉಪಮೆಯನ್ನು ಅನ್ವಯಿಸಬಹುದು. ಪ್ರತಿಯೊಂದು ವ್ಯಕ್ತಿಯ ಬೆಳವಣಿಗೆಗೂ ಪೋಷಕವಾಗುವ ಮತ್ತು ಬಾಧಕವಾಗುವ ಅಥವಾ ಎಲ್ಲೆಯನ್ನು ನಿರ್ದೇಶಿಸುವ ಉಪಕರಣಗಳುಂಟು. ಈ ಬಾಧಕಗಳು ನಿರ್ಬಂಧಗಳಂತೆ ತೋರಿದರೂ ನದಿಯ ವಿಷಯದಲ್ಲಿ ದಡಗಳಿರುವಂತೆ ವ್ಯಕ್ತಿವಿಕಾಸಕ್ಕೆ ಒಳ್ಳೆಯ ರೂಪವನ್ನೂ ಪರಿಣಾಮವನ್ನೂ ಒದಗಿಸುವುವು. ಅದೃಶ್ಯವಾದ ವಿಕಾಸಶಕ್ತಿಗೂ ಈ ಬಾಧಕಗಳಿಗೂ ಯುಕ್ತರೀತಿಯಲ್ಲಿ ಸಾಮರಸ್ಯವನ್ನು ಏರ್ಪಡಿಸುವುದೇ ಜೀವನದ ದೊಡ್ಡ ಸಮಸ್ಯೆ.

## ಸಮಾಜ ಧರ್ಮ

ಪ್ರತಿಯೊಂದು ವ್ಯಕ್ತಿಯಲ್ಲಿಯೂ ಜೀವಶಕ್ತಿಯಿರುವಂತೆಯೇ ಪ್ರತಿಯೊಂದು ಸಮಾಜಕ್ಕೂ, ಜನಾಂಗಕ್ಕೂ ಒಂದು ಸಮುದಾಯಶಕ್ತಿಯೂ ಜೀವಕಳೆಯೂ ಉಂಟು. ಆದರೆ ಸಮುದಾಯ ಜೀವನವು ವ್ಯಕ್ತಿಯ ಸ್ವತಂತ್ರಜೀವನಕ್ಕೆ ಭಂಗವನ್ನು ತರುವಂತಿರಬಾರದು. ವ್ಯಕ್ತಿಯ ಸ್ವತಂತ್ರಜೀವನವೂ ಇತರ ವ್ಯಕ್ತಿಗಳ ಸುಖಶಕ್ತಿಯನ್ನೂ ಸಮುದಾಯ ಜೀವನವನ್ನೂ ನಾಶಗೊಳಿಸುವಂತಿರಬಾರದು. ವೈಯಕ್ತಿಕ ಜೀವನಕ್ಕೂ ಸಮುದಾಯ ಜೀವನಕ್ಕೂ ಸಾಮರಸ್ಯವನ್ನು ಏರ್ಪಡಿಸುವುದೇ ಸಮಾಜಧರ್ಮದ ಸೂಕ್ಷ್ಮ.

## ವಿಶ್ವಸಂಸಾರ

ಪ್ರಪಂಚದಲ್ಲಿರುವ ಅನೇಕ ಜನಾಂಗಗಳು ತಮ್ಮ ತಮ್ಮ ಯೋಗಕ್ಷೇಮವನ್ನು ಬಯಸಿ ಅಭಿವೃದ್ಧಿಗಾಗಿ ಯತ್ನಿಸುವುವು. ಯಂತ್ರಶಕ್ತಿಯು ಪರಮಾವಧಿಯನ್ನು ಹೊಂದಿರುವ ಈ ಯುಗದಲ್ಲಿ ಯಾವ ಜನಾಂಗವೂ ಕೂಪಮಂಡೂಕ ಜೀವನವನ್ನು ಮಾಡುವುದು ಶಕ್ಯವಲ್ಲ. ಪರಸ್ಪರ ಸಂಬಂಧಗಳು ಜನಾಂಗಗಳಲ್ಲಿ ಬೆಳೆದಿವೆ. ಯಂತ್ರ ಸಹಾಯದಿಂದ ಕೈಗಾರಿಕೆಗಳೂ ವ್ಯಾಪಾರದ ವೇಗವೂ ಅಗಾಧವಾಗಿ ಬೆಳೆದು ಆರ್ಥಿಕ ಜೀವನದ ವಿಚಾರದಲ್ಲಿ ಪ್ರಪಂಚವೆಲ್ಲವೂ ಏಕರೀತಿಯ ನಿಯಮಕ್ಕೆ ಒಳಪಟ್ಟು, ಇತರರ ಗೋಜಿಲ್ಲದೆ ಯಾವ ಜನಾಂಗವೂ ಪ್ರತ್ಯೇಕವಾಗಿ ತನ್ನ ಆರ್ಥಿಕಜೀವನದ ಚಿಂತನೆಯನ್ನು ಮಾಡುವುದು ದುಸ್ಸಾಧ್ಯವಾಗಿದೆ. ರಾಜಕಾರಣವೂ ವಾಣಿಜ್ಯವ್ಯವಹಾರಕ್ಕೆ ಪಕ್ಕವಾದ್ಯವಾಗಿದೆ.

ವಾರ್ತಾಪ್ರಸಾರಕ್ಕೆ ಬಹಳ ಅನುಕೂಲ್ಯಗಳು ಉಂಟಾಗಿರುವುದರಿಂದ ಆಚಾರ ವಿಚಾರಗಳೂ, ಭಾವನೆಗಳೂ, ಬಯಕೆಗಳೂ ಜನರ ಸೂಕ್ಷ್ಮ ಮತ್ತು ಉತ್ತಮ ಜೀವನದ ತತ್ತ್ವವಿಶೇಷಗಳೂ ಪರಸ್ಪರ ವಿನಿಮಯವಾಗಲು ಬಹಳ ಅವಕಾಶವೊದಗಿದೆ. ಇದರಿಂದ ಸಮ್ಮಿಳನವೂ ಆಗಿದೆ. ಸಂಕರವೂ ಕಂಡುಬಂದಿದೆ. ಹೆಚ್ಚಿನ ಪರಸ್ಪರ ಸಂಬಂಧದಿಂದ ಕೆಲವು ಜನಾಂಗಗಳಿಗೆ ಸಾಧಕವೂ ಕೆಲವಕ್ಕೆ ಬಾಧಕವೂ ಆಗಿವೆ. ಕೆಲವು

ಜನಾಂಗಗಳು ತಮ್ಮ ಅಭಿವೃದ್ಧಿಯನ್ನು ಸಾಧಿಸುವುದರ ಸಲುವಾಗಿ ಇತರ ಜನಾಂಗಗಳ ಸುಖಜೀವನಕ್ಕೆ ಕ್ಷೋಭೆಯನ್ನುಂಟುಮಾಡುತ್ತವೆ. ಇದರಿಂದ ಯುದ್ಧಗಳು ಪ್ರಾಪ್ತವಾಗುತ್ತವೆ; ಬಹಳ ನಷ್ಟವೂ ಸಂಕಟವೂ ಉಂಟಾಗುತ್ತದೆ. ಕಷ್ಟಕ್ಕೂ ನಷ್ಟಕ್ಕೂ 'ಗುರಿಯಾಗುವ ದೀನಕೋಟಿಯು ಪ್ರಪಂಚದ ಯಾವ ಭಾಗದಲ್ಲೇ ಇರಲಿ ಒಮ್ಮನಸ್ಸುಳ್ಳವರಾಗಿ ದಬ್ಬಾಳಿಕೆಯಿಂದ ತಪ್ಪಿಸಿಕೊಂಡು ಶಾಂತಿಸ್ಥಾಪನೆ ಮಾಡಲು ಹಂಬಲಿಸುವರು. ಪರಸ್ಪರ ವಿಘಾತವಿಲ್ಲದೆ ಜನಾಂಗಗಳು ತಮ್ಮ ತಮ್ಮ ಜೀವನವನ್ನು ಸಾಧಿಸುವುದೇ ಮಾನವಕೋಟಿಯ ಸಮಸ್ಯೆಯಾಗಿದೆ.

ವ್ಯಕ್ತಿಜೀವನ, ಸಮಾಜಜೀವನ, ಮಾನವಕೋಟಿಯ (ಜನತಾಜನಾರ್ದನನ) ಜೀವನ—ಇವೆಲ್ಲಕ್ಕೂ ಒಂದೇ ರೀತಿಯ ತತ್ತ್ವಗಳನ್ನು ಅನ್ವಯಿಸಬಹುದಾಗಿದೆ. ಕಾಮಕ್ರೋಧಾದಿದೋಷಗಳು ಎಲ್ಲಕ್ಕೂ ಉಂಟು: ಸಾತ್ವಿಕರಾಜಸತಾಮಸಗುಣಗಳೂ ಉಂಟು.

## ಸ್ವಾತಂತ್ರ್ಯವೇ ಪರಮಧ್ಯೇಯ

ಆತ್ಮರಕ್ಷಣೆ, ಆತ್ಮವಿಕಾಸ, ಸ್ವಧರ್ಮಪಾಲನೆ-ಇವೇ ಎಲ್ಲ ಪ್ರಯತ್ನಗಳಿಗೂ ಕಾರಣ. ಸ್ವಾತಂತ್ರ್ಯವೇ ಪರಮಧ್ಯೇಯ. ಸ್ವತಂತ್ರವಿಚಾರದಿಂದಲೇ ಪ್ರಪಂಚದಲ್ಲಿ ಜ್ಞಾನವೃದ್ಧಿಯಾಗಿರುವುದು. ಮತಸ್ಥಾಪಕರೂ ವಿಜ್ಞಾನಶಾಸ್ತ್ರವೇತ್ತರೂ ಮಾನಸಿಕಪ್ರಪಂಚದ ಶೂರಾಗ್ರೇಸರರು. ಇವರು ಸ್ವತಂತ್ರ ವಿಚಾರದಿಂದ ಒದಗುವ ಕಷ್ಟನಿಷ್ಠುರಗಳನ್ನು ಲೆಕ್ಕಿಸದೆ ತಮ್ಮ ಆತ್ಮಾನುಭವವನ್ನು ಪ್ರತ್ಯಕ್ಷವಾಗಿ ಶೋಧಿಸಿ--ಅರಿತ ಜ್ಞಾನವನ್ನು ಜನತೆಯ ಮುಂದಿಟ್ಟು ಕೃತಕೃತ್ಯರಾದರು; ಬಹು ಜನರ ಹಿತವನ್ನೂ ಬಹುಜನರ ಸುಖವನ್ನೂ ಸಾಧಿಸಿದರು. ಈ ವೀರಪುರುಷರು ಸಾರಿದ ತತ್ತ್ವಗಳು ನಿರಂತರವೂ ಜ್ಯೋತಿರ್ಮಯವಾಗಿ ಬೆಳಗಿ ಮಾನವ ಜೀವನವನ್ನು ಪವಿತ್ರವನ್ನಾಗಿ ಮಾಡಿ ಉದ್ಧರಿಸುವುವು. ಈ ತತ್ತ್ವಗಳನ್ನೊಳಗೊಂಡು ಇವಕ್ಕೆ ಸ್ಥೂಲರೂಪವನ್ನು ಕೊಡುವ ಆಚಾರ, ವಿಧಿನಿಷೇಧ ಮುಂತಾದ ನಿಯಮಗಳನ್ನು ಧರ್ಮಶಾಸ್ತ್ರಜ್ಞರೂ ಸ್ಮೃತಿಕಾರರೂ ವ್ಯವಸ್ಥೆ ಮಾಡುವರು. ಆದರೆ ಕಾಲಗತಿಗನುಸಾರವಾಗಿ ಈ ನಿಯಮಗಳು ಬದಲಾವಣೆಯನ್ನು ಹೊಂದುವುವು.

## ದೀನಜನರ ಕಾಲಾಗ್ನಿ

ಆರ್ಥಿಕ ಮತ್ತು ರಾಜಕೀಯ ಸ್ವಾತಂತ್ರ್ಯದ ಬಯಕೆಯೂ ಇದೇ ರೀತಿ ವೀರಪುರುಷರ ಸಾಹಸಜೀವನದಿಂದ ಸಿದ್ಧವಾಗುವುದು. ಜನರ ಸಮುದಾಯಜೀವನವು ಎಲ್ಲರಿಗೂ ಹಿತಕಾರಿಯಾಗಿಯೂ ಎಲ್ಲರ ಯೋಗಕ್ಷೇಮಕ್ಕಾಗಿಯೂ ಮುಂದುವರಿಯುವಂತೆ ಎಲ್ಲರ ಸಮ್ಮತವನ್ನೂ ಗೌರವವನ್ನೂ ಪಡೆದ ವ್ಯವಸ್ಥೆ ಒಂದು ಜನತೆಯ ಸರಕಾರ. ಈ ವ್ಯವಸ್ಥೆಯ ಅಂತಿಮ ಧ್ಯೇಯ ಜನತೆಯ ಹಿತ ಮತ್ತು ನೈಜವಾದ ವಿಕಾಸ. ಈ ಧ್ಯೇಯದ ಸಾಧನಕ್ಕಾಗಿಯೇ ಆಡಳಿತವರ್ಗದ ಶಾಸನಗಳು, ಕಾನೂನುಗಳು, ಕಾಯಿದೆಗಳು. ಈ ಸಾಧನೆಗಳು ಬಹುಜನರಿಗೆ ಅಹಿತವಾಗಿ ಪರಿಣಮಿಸಿದರೆ ಇವು ಬದಲಾವಣೆಯನ್ನು ಹೊಂದಿ ಸುಧಾರಿಸಲ್ಪಡುವುವು. ಆದರೆ ಅನೇಕ ಕಾರಣಗಳಿಂದ ಇಂತಹ ಬದಲಾವಣೆಗಳು ಆಗಲು ಅವಕಾಶವೇ ಇಲ್ಲದೆ ಪ್ರಭುವರ್ಗವು ಅಂತಿಮಧ್ಯೇಯವನ್ನು ಮರೆತು, ಪ್ರಭುತ್ವಕ್ಕೆ ಹೆಚ್ಚು ಗಮನವನ್ನು ಕೊಟ್ಟು ಬಹುಜನರ ಯೋಗಕ್ಷೇಮವನ್ನು ದುರ್ಲಕ್ಷಮಾಡುವುದಾದರೆ ರಾಜ್ಯದಲ್ಲಿ ಕ್ರಾಂತಿ ತಲೆದೋರಿ ಪ್ರಳಯವೇ ಆಗುವುದು. ಹಿಂದೆ ಫ್ರಾನ್ಸ್ ಮತ್ತು ಇಟಲಿ ದೇಶಗಳಲ್ಲಿಯೂ, ಈಚೆಗೆ ರಷ್ಯಾ ಚೀನಾ ದೇಶಗಳಲ್ಲಿಯೂ ಸಹಜವಾಗಿಯೂ ಸಾತ್ವಿಕಸ್ವಭಾವದವರೂ ಶಕ್ತಿಹೀನರೂ ಆದ ದೀನಜನರು ಕಾಲಾಗ್ನಿಯಂತೆ ಉರಿದೆದ್ದು ಸಾಧಿಸಿದ ವಿಪ್ಲವಕ್ಕೆ ಇದೇ ಕಾರಣ. ಸತ್ತ್ವವುಳ್ಳ ಜೀವನದ ನೈಜವಾದ ಶಕ್ತಿಯನ್ನು ಅಡಗಿಸುವುದು ಅಸಾಧ್ಯ. ಅಡಗಿಸಿದಷ್ಟೂ ಆ ಶಕ್ತಿಯು ಮತ್ತೆ ಮತ್ತೆ ಬೆಳೆಯುವುದು.

## ಸ್ವಾತಂತ್ರ್ಯದ ಬಯಕೆ

ಸ್ವಾತಂತ್ರ್ಯದ ಬಯಕೆಯು ಜೀವನದ ಮೂಲತತ್ತ್ವ. ಇದೊಂದು ಸ್ವತಃಸಿದ್ಧವಾದ ಆಕಾಂಕ್ಷೆ. ವ್ಯಕ್ತಿಯ ದೃಷ್ಟಿಯಿಂದ ಪರಮಶ್ಲಾಘ್ಯವಾದ ಪುರುಷಾರ್ಥ, ಮೋಕ್ಷ; ಪ್ರೇಮಮಯನಾದ ಈಶ್ವರನ ಸೇರುವಿಕೆ. ಇದೇ ಎಲ್ಲ ಮತಗಳ ಗುರಿ. 'ಪ್ರಪಂಚವೆಲ್ಲವನ್ನೂ ಗೆದ್ದು ಆತ್ಮವನ್ನು ಕಳೆದುಕೊಂಡರೆ ಫಲವೇನು?' ಎಂದು ಕ್ರಿಸ್ತನು ಸಾರಿದನು. ಸಮುದಾಯಜೀವನದ ದೃಷ್ಟಿಯಿಂದಲೂ ಸ್ವರಾಜ್ಯವೇ ಪರಮಧ್ಯೇಯ. ಇದು ಯುಕ್ತಿಪೂರ್ವಕವಾಗಿ ನಿಷ್ಪತ್ತಿಯಾಗಬೇಕಾಗಿಲ್ಲ. ಆದ್ದರಿಂದಲೇ ಲೋಕಮಾನ್ಯ ತಿಲಕರು ನಿರರ್ಥಕವಾದ ಚರ್ಚೆಗೆ ಬೀಗಮುದ್ರೆ ಹಾಕುವಂತೆ "ಸ್ವರಾಜ್ಯವು ಜನ್ಮಸಿದ್ಧವಾದ ಹಕ್ಕು" ಎನ್ನುವ ಮಂತ್ರವನ್ನು ಉಪದೇಶಮಾಡಿದರು. ಮಾನವಕೋಟಿಯ ಜೀವನದಲ್ಲಿ 'ಹಿತ', 'ಅಹಿತ' ಎನ್ನುವ

ಸ್ವತಃಸಿದ್ಧವಾದ ಅನುಭವಗಳಾದುದರಿಂದ 'ಅಹಿತ' ವನ್ನು ತಪ್ಪಿಸಿ ಹಿತವನ್ನು ಪಡೆಯಲು ಸರ್ವಪ್ರಯತ್ನ ವನ್ನೂ ಮಾಡುವರು. ಅಲ್ಪಸಂಖ್ಯಾತರಾದ ಬಂಡ ವಾಳಗಾರರೂ ಪ್ರಬಲವಾದ ಸರಕಾರಗಳೂ ಈ ಪ್ರಯ ತ್ನಗಳನ್ನು ತಮ್ಮ ಸ್ವಾರ್ಥಕ್ಕಾಗಿ ಎದುರಿಸುವರು. ಆದರೂ ಬಹುಜನರ ಹಿತವೇ ಕೊನೆಗೆ ಸಿದ್ಧಿಯಾಗು ವುದು.

## ಉಪಕರಣಗಳ ಭೂತಾಕಾರ

ಈ ಯುಗದಲ್ಲಿ ಜೀವಶಕ್ತಿಗಿಂತಲೂ ಯಂತ್ರಶಕ್ತಿಗೇ ಮನ್ನಣೆ ಹೆಚ್ಚೆಂದು ಸ್ಥೂಲವಾಗಿ ಹೇಳಬಹುದು. ಚೇತನದ ಪೋಷಣೆಗಿಂತಲೂ ಜಡಪದಾರ್ಥಗಳ ಉಪಾ ಸನೆಯೇ ಹೆಚ್ಚಾಗಿ ಕಂಡುಬರುವುದು. ಹೊಲಕ್ಕಿಂ ತಲೂ ಬೇಲಿಯೇ ದೊಡ್ಡದಾಗಿರುವುದು. ನದಿಯ ಸೌಮ್ಯವಾದ ಪ್ರವಾಹಕ್ಕಿಂತಲೂ ದಡದ ಘನತೆಯೂ ಸೌಂದರ್ಯವೂ ಮೆಚ್ಚುಗೆಗೆ ಪಾತ್ರವಾಗಿರುವುದು. ಇದೇ ಎಲ್ಲೆಲ್ಲಿಯೂ ಅಶಾಂತಿಗೆ ಕಾರಣವಾಗಿದೆ.

ಆದರೆ ಜೀವವು ಹಿರಿದು; ಚೇತನವು ಪುರಾಣವಾ ದುದು. ಹೊಲದ ಬೆಳವಣಿಗೆಯೂ ನದಿಯ ಪ್ರವಾ ಹವೂ ನೈಸರ್ಗಿಕ. ಇವುಗಳಲ್ಲಿ ದೈವಿಕ ಶಕ್ತಿಯಿದೆ ಮಾನವನ ವ್ಯವಸ್ಥೆಯಲ್ಲಿಯೂ, ನಿರ್ಮಾಣ ವಿಷಯ ಗಳಲ್ಲಿಯೂ ಇಂತಹ ನಿತ್ಯಶಕ್ತಿಯಿಲ್ಲ. ಕಾಲಕ್ಕನು ಸಾರವಾಗಿ ಇವು ಬದಲಾವಣೆಗಳನ್ನು ಹೊಂದುತ್ತವೆ. ಬೇಲಿಯೂ ದಡವೂ ಶಾಶ್ವತವೆಂಬುದು ಭ್ರಮೆ; ಮೌಢ್ಯ. ಇವು ಕೇವಲ ಸಾಧನಗಳು; ಉಪಕರಣ ಗಳು. ಉಪಕರಣಗಳು ಭೂತಾಕಾರವನ್ನು ತಾಳಿ ಸ್ವತಂತ್ರ ಜೀವನದ ಅಂಕುರವನ್ನು ನಾಶಗೊಳಿಸಬಾ ರದು. ಈ ಯುಗದಲ್ಲಿ ಈ ಉಪಕರಣಗಳು ಭೂತಾ ಕಾರವನ್ನು ತಾಳಿವೆ.

## ಪ್ರಯೋಗಶಾಲೆ

ಜೀವನವು ಸಾಮರಸ್ಯವನ್ನು ಹೊಂದಿ, ವಿಕಾಸವಾಗಿ ಸುಖಶಾಂತಿಗಳನ್ನು ಸ್ಥಾಪಿಸುವುದಕ್ಕೆ ಅನೇಕ ವೀರ ಪುರುಷರು ಸಾಹಸಪಡುತ್ತಿರುವರು. ಮಹಾತ್ಮಾ ಗಾಂ ಧಿಯವರು ಅಂತಹವರಲ್ಲಿ ಅಗ್ರೇಸರರು. ಹಿಂದೂ ಸ್ಥಾನವು ಅವರ ಪ್ರಕೃತ ಕಾರ್ಯಕ್ಷೇತ್ರ. ಹಿಂದೂ ಸ್ಥಾನವೇ ಸಾಮರಸ್ಯ ಜೀವನದ ತತ್ತ್ವಗಳನ್ನು ಪ್ರತಿ ಪಾದಿಸಿದ ದೇಶ. ಹಿಂದೂಸ್ಥಾನವು ಜೀವನದ ಉದಾ ತ್ತತತ್ತ್ವಗಳ ಪ್ರಯೋಗಶಾಲೆಯಾಗಿತ್ತು. ಈ ತತ್ತ್ವಗ ಳಿಗೆ ಅಳಿವಿಲ್ಲದನಾದುದರಿಂದ ಹಿಂದೂಸ್ಥಾನವು ಕ್ಷೀಣ ದೆಶೆಯನ್ನು ಹೊಂದಿದರೂ ಅಳಿವಿಲ್ಲದೆ ಬದುಕಿರುವುದು. ಮತ್ತೆ ಪ್ರಪಂಚಕ್ಕೇ ಮಾರ್ಗದರ್ಶಕವಾಗುವಂತೆ ಗಾಂ ಧೀಜಿಯವರ ನೇತೃತ್ವದಲ್ಲಿ ಈಗ ಪ್ರವೃತ್ತವಾಗಿರುವುದು.

# ಸ್ವಾತಂತ್ರ್ಯ ಜೀವನದ ಉಸಿರು

## ನಿತ್ಯಮುಕ್ತರು ನಾವು

ನಾಡಜೀವನವೆಲ್ಲ ಚೈತನ್ಯಮಯವಾಯ್ತು
ನಾಡಿನಾಡಿಗಳೆಲ್ಲ ಬಿಸಿರಕುತ ಹೊಳೆಯಾಯ್ತು.

ಕಣ್ಣಲ್ಲಿ ಜೀವಕಣ
ಕಾರ್ಯದಲಿ ಕ್ಷಾತ್ರಗುಣ
ಕರಣದಲಿ ಸತ್ವಕಣ

ಜನಮನದ ದಾಸ್ಯತನ ಜಾರಿಹೋಯ್ತು:
ಜನಪದಕೆ ಸ್ವಾತಂತ್ರ್ಯ ಬಂದುಹೋಯ್ತು.

ಭಾವಲೋಕದ ಮಬ್ಬುಮುಸುಕೆಂಬ ಮುಗಿಲಲ್ಲಿ
ಮೌನದಲಿ ಮರೆತಿದ್ದ ರಸಋಷಿಯ ಹಿಡಿತಂದು,
ಕಾವ್ಯ ರಸರಂಗದಲಿ ಕೌತುಕವ ತೋರಿಸಲು
ಆಣತಿಯನಿತ್ತಿಹಳು ತಾಯಿಯಿಂದು.

ಜಡತನದಿ ಬಂಧನದಿ, ನೊರಗಿ, ಬಿರಗುತಲಿರುವ
ತರುಣ ತರುಣಿಯರನ್ನು ಕರಪಿಡಿದು ಹಿಡಿದೆತ್ತಿ
'ನಿತ್ಯಮುಕ್ತರು ನೀವು ಅಕ್ಷರರು ನೀವೆ' ಎಂದು
ಅಭಯವಿತ್ತಿಹಳೆಮಗೆ ತಾಯಿಯಿಂದು.

ಕನ್ನಡದ ನಾಡಿನಾ ಸರ್ವಶಕ್ತಿಗಳಿಂದು,
ಕನ್ನಡಿಗರೆದೆಯೊಳಿಹ ತ್ಯಾಗಶೌರ್ಯಗಳಿಂದು,
ಕನ್ನಡದ ಸರ್ವತೋ ಮುಖಶಕ್ತಿ ಪ್ರಭೆಯಿಂದು

ಅರಿಕೇಸರಿಗಳನ್ನು ತೋರುತಿಹುದು;
ಕವಿಸಾರ್ವಭೌಮರನು ನೀಡುತಿಹುದು;
ಕನ್ನಡಿಗರನ್ನೆಲ್ಲ ಕುಣಿಸುತಿಹುದು;
ಭಾರತಿಯ ಕೀರ್ತಿಯನು ಬೆಳೆಸುತಿಹುದು.

—'ಕ'

## ಅಮರತ್ವವೆನಗಿತ್ತೆ

ಸಾವ ಜಯಿಸುವ ಸತ್ವವೆನಗಿತ್ತು, ಧೃತಿಯಿತ್ತು,
ಅಮರತ್ವವೆನಗಿತ್ತೆ, ತಾಯೆ! ಭಾರತಿಯೆ!
ಆಕಾಶವನ್ನೊದೆಯಲು, ಸಿಡಿಲೆದೆಯು, ಆನನ ನಗೆ
ಜೀವಕಳೆ, ಅಸಿಯುಲಿಗೆ ರುದ್ರಜೀವನ ರಂಗ.

ಇಂದು ಯೋಧನ ವೇಷ,
ಕ್ಷಾತ್ರ ರೋಷಾವೇಶ;
ನಾಳೆ ಸಾಧಕನಂತೆ
ಸತ್ವ ಶಾಂತಿವಿಲಾಸ।

ಅಳಿಸುತ್ತೆ, ನಗಿಸುತ್ತೆ, ಬೆಳೆಸಿದೆ, ಬೀಳಿಸಿದೆ;
ಕಡೆಗೆ ಮಗುವೆಂದು ನೀ ಕನಿಕರಿಸಿದೆ.
(ಇಂತೆನ್ನ ನಟರಾಜನಂತೆಸಗಿ ಆಡಿಸಿದೆ)
ದೇವಿ! ನಿನ್ನಯ ಪಾದವೆನ್ನೆದೆಯೊಳಿರಲಿ;
ತಾಯೆ! ನಿನ್ನಭಯಕರ ಶಿರದಮೇಲಿರಲಿ.

## ಕೈವಲ್ಯಧಾಮ

ಸ್ವಾತಂತ್ರ್ಯ ಸೂರ್ಯದಿಂ
ಸೊಂದು, ಸಂಬಿದ ಜೀವ
ಜೀವನವ ಬಯಸುವನೆ?
ಪರದಾಸ್ಯ ನಂ
ಜಿಗಿಸಿಕೊಂಡುಳಿಯುವನೆ
ಸಿಡಿಲಿನಣುಗ.
ಬಳನೇಯು ನರಕದಾ
ಪುಳುವಿನಾಜೀವನವ
ಶತಮಾನಗಳು ನೂಕಿ
ಉಳಿಯುವುದೆ? ಒಂದುದಿ
ಸ್ವಾತಂತ್ರ್ಯದಾ ಬದುಕೆ
ಕೈವಲ್ಯಧಾಮವದು.
ಒಂದುದಿನ, ಒಂದುಕ್ಷಣ,
ಒಂದು ಯುಗಮಾನವದು.
ಅದರಿಂದ ಲೈತನ್ನಿರಣಭೂಮಿಗೆ
ನೋದರರೆ!
ಮಾತೃಭೂಮಿಗೆ ಆತ್ಮಯಜ್ಞ
ಮಾಡಲು ಬನ್ನಿ;
ಅದಕಿಂತ ಮಿಗಿಲಾದ
ಈಶಸೇವೆಯದುಂಟೆ?

—ಈಶ್ವರಚಂದ್ರ ಗುಪ್ತ

# ಪೌರಧರ್ಮ ಮತ್ತು ರಾಷ್ಟ್ರನೀತಿ.

(ಶ್ರೀ ಕೆ. ಕೃಷ್ಣಯ್ಯಂಗಾರ್, ಬಿ. ಎ., ದೇಶೀಯ ವಿದ್ಯಾಶಾಲಾ, ಬೆಂಗಳೂರು ನಗರ)



ನೈಜಾಮರಾಜ್ಯದ ಮಂತ್ರಿಗಳಲ್ಲಿ ಪ್ರಸಿದ್ಧರಾದವರಲ್ಲಿ ಒಬ್ಬಾತನು ರಾಜಾ ಚಂದೂಲಾಲನೆಂಬವನು. ೧೮೦೬ರಿಂದ ೧೮೪೩ರವರೆಗೆ ಹೈದರಾಬಾದಿನಲ್ಲಿ ಆತನು ಬಹಳ ಧರ್ಮಿಷ್ಠನೆಂದು ಖ್ಯಾತಿಗೊಂಡಿದ್ದನು. ಜೀವನದಲ್ಲಿ ಬಲು ಸರಳ, ಮಾತಿನಲ್ಲಿ ವಿನೀತ, ಕೆಲಸದಲ್ಲಿ ಸದಾನಿರತ, ವಿದ್ವಾಂಸರಲ್ಲಿ ಅಭಿಮಾನಿ, ಧರ್ಮಕಾರ್ಯಗಳಲ್ಲಿಯೂ ದಾನ ಮಾಡುವುದರಲ್ಲಿಯೂ ಅಗ್ರಗಣ್ಯ; ಯೋಗಿಯಂತೆಯೇ ಆತನಿದ್ದುದು ಆದರೂ ಆಡಳಿತದಲ್ಲಿ ಆತನ ಅಧಿಕಾರವು ಕಾಠಿಣ್ಯವಿಲ್ಲದೆ ಇದ್ದು ಬಿಕ್ಕಟ್ಟು ತಪ್ಪಿತು. ಆತನೇ ಸಾಲಕ್ಕೆ ಸಿಕ್ಕಿದನು. ಇಂಗ್ಲೀಷರು ಆತನ ಗುಣಗಳನ್ನು ಮೆಚ್ಚಿದರು. ಆದರೆ ಅವುಗಳನ್ನು ವಿಮರ್ಶೆಮಾಡುತ್ತ "ಸ್ವಂತ ಜೀವನದಲ್ಲಿ ಆತನು ಬಹು ಗುಣವಂತ, ಸಾರ್ವಜನಿಕರೀತ್ಯಾ ಗುಣಹೀನ" ಎಂದು ಬರೆದರು. ಈ ವ್ಯತ್ಯಾಸವನ್ನು ಸ್ವಲ್ಪ ಸಾವಧಾನವಾಗಿ ಕಾಣಬೇಕು. ಹುಡುಕಿದರೆ ಸ್ವಂತ ಜೀವನದಲ್ಲಿ ನಿಷ್ಕರೂ ಸುಗುಣಿಗಳೂ ಆಗಿದ್ದು ರಾಷ್ಟ್ರಕಂಟಕರಾಗಿದ್ದವರ ಹೆಸರುಗಳು ಬೇಕಾದಷ್ಟು ಸಿಕ್ಕುತ್ತವೆ. ರಾಜಾ ನಂದಕುಮಾರನು ಮೋಸ, ತಂತ್ರ, ಕಪಟ, ಠಕ್ಕು ವಿದ್ಯೆಗಳಲ್ಲಿ ಅತಿ ಚತುರನಾದವನು; ಆದರೆ ಸ್ವಂತ ಜೀವನದಲ್ಲಿ ಪರಮನಿಷ್ಠನಾಗಿದ್ದನಂತೆ.

ಇದೊಂದು ಪಕ್ಷ. ಸ್ವಂತ ಜೀವನದಲ್ಲಿ ನೀತಿಭ್ರಷ್ಟರಾಗಿದ್ದು ಅಧಿಕಾರದಲ್ಲಿ ದಕ್ಷರಾಗಿದ್ದವರ ದೃಷ್ಟಾಂತಗಳು ಇನ್ನೊಂದು ಪಕ್ಷ. ಇಂತಹವರಲ್ಲಿ ಅಧಿಕಾರ ಗುಣಗಳು ಪ್ರಬಲ; ಸ್ವಂತ ಗುಣಗಳೆನ್ನುವುದು ದುರ್ಬಲ. ಈ ವಿಧವಾದ ಗುಣಗಳ ವಿಭಾಗವೇ ನಮಗೆ ತೋರುವುದಿಲ್ಲ. ಸ್ವಂತ ಗುಣ ಬೇರೆ, ಅಧಿಕಾರ ಗುಣ ಬೇರೆ ಎಂಬ ಭಾವನೆಯೇ ನಮಗೆ ವಕ್ರವಾಗಿ ಕಾಣುವುದು. ಇದರ ರಹಸ್ಯವನ್ನು ತಿಳಿಯಲು ನಾವು ಪೌರಸ್ತ್ಯ ಪಾಶ್ಚಾತ್ಯಸಮಾಜಗಳ ತುಲನೆಯನ್ನು ಮಾಡಬೇಕು. ಅಧಿಕಾರ ಗುಣವೆನ್ನುವುದು ಅವರಲ್ಲಿ ವಿಶೇಷವಾಗಿ ವೃದ್ಧಿಯನ್ನೈದಿದುದು ಹೇಗೆ? ನಮ್ಮಲ್ಲಿ ಆ ಗುಣಗಳು ಎಂದೂ ತೋರಲೇ ಇಲ್ಲವೇ? ತೋರಿದ್ದರೆ ಪ್ರಕಾಶಕ್ಕೆ ಬಾರಲೇ ಇಲ್ಲವೇ? ಬಂದಿದ್ದರೆ ಅಡಗಿಹೋದುವೇಕೆ? ಈ ಪ್ರಶ್ನೆಗಳಿಗೆ ಒಮ್ಮೇಲೇ ಒಂದೆರಡು ಮಾತುಗಳಲ್ಲಿ ಸಮಾಧಾನ ಹೇಳುವುದು ಸುಲಭವಲ್ಲ. ಪ್ರಕೃತದಲ್ಲಿ ಅವುಗಳ ವಿಸ್ತಾರ ವಿಮರ್ಶೆಯನ್ನು ಮಾಡುವುದೂ ಕರ್ತವ್ಯವಲ್ಲ. ಪಾಶ್ಚಾತ್ಯರ ರೀತಿನೀತಿಗಳನ್ನೂ ನಡೆನುಡಿಗಳನ್ನೂ ವಿಚಾರಿಸಿನೋಡಿದಾಗ ಸಾರ್ವಜನಿಕವೆಂದು ಹೆಸರಾದ ಗುಣಗಳು ಅವರಲ್ಲಿಯೇ ವಿಶೇಷವೆಂದು ಹೇಳಬೇಕಾಗುವುದು. ವಿದೇಶಗಳಲ್ಲಿ ಸಂಚಾರಮಾಡಿ ಬಂದವರು ಯಥಾರ್ಥವಾಗಿ ಹೇಳುವುದನ್ನು ಕೇಳಿಕೇಳಿ ಬೇಸರವಾಗಿದ್ದರೂ ಕೂಡ ಸ್ಮರಿಸೋಣ.

ಪಾಶ್ಚಾತ್ಯರು ಬೀದಿಗಳಲ್ಲಿ ಉಗುಳುವುದಿಲ್ಲ; ಕಾಗದವನ್ನು ಹರಿದರೆ ಚೂರುಗಳನ್ನು ತಮ್ಮ ಜೇಬಿನಲ್ಲಿ ಹಾಕಿಕೊಂಡು ತರುವಾಯ ಕಸದಬುಟ್ಟಿಗೆಹಾಕುತ್ತಾರೆ. ನಮ್ಮಲ್ಲಿ ರಸ್ತೆಯೇ ಗಲೀಜುಮಾಡುವ ಸ್ಥಳ. ಇದರಿಂದ ಅವರು ನಮಗಿಂತ ಶುಚಿಯೆಂದಲ್ಲ; ಬೀದಿಯನ್ನು ಶುಚಿಯಾಗಿಡುವುದರಲ್ಲಿ ಅವರಿಗೆ ನಿಷ್ಠೆಯುಂಟೆಂದು ಮಾತ್ರ ಅರ್ಥ. ಲಾಲ್‌ಬಾಗಿನಂತಹ ಸಾರ್ವಜನಿಕ ಉದ್ಯಾನವನದಲ್ಲಿ ಅವರು ದಾರಿಯನ್ನು ಬಿಟ್ಟು ಅಡ್ಡವಾಗಿ ಹೊರಡುವುದಿಲ್ಲ; ಹೂವೂ ಹಣ್ಣೂ ಕೀಳುವುದಿಲ್ಲ; ನಾವಾದರೆ ಅಂತಹ ನಿಯಮಗಳನ್ನು ಹೊಸದಾಗಿ ಕಲಿಯುತ್ತಿದ್ದೇವೆ. ರೈಲು ಸ್ಟೇಷನ್ನಿನಲ್ಲಿ ರೈಲು ಹೊರಡುವಾಗ ಟಿಕೆಟ್ಟುಗಳಿಗೆ ನಮ್ಮ ಗದ್ದಲವೋ ಗದ್ದಲ! ದೊಂಬಿಯಲ್ಲಿ ಉಸಿರು ಸಿಕ್ಕೆ ಪ್ರಾಣಸಂಕಟವೆಷ್ಟು ಸಲವೋ! ಅವರಲ್ಲಿ ಮೊದಲು ಬಂದಾತನು ಮುಂದೆ, ಆತನ ಹಿಂದೆ ಇತರರು ಕ್ರಮವಾಗಿ ಒಬ್ಬರ ಹಿಂದೊಬ್ಬರು ನಿಂತಿದ್ದು ಅದೇ ಕ್ರಮವನ್ನು ಕಾಪಾಡಿ

ಕೊಂಡು ಗದ್ದಲಪಿಲ್ಲದೆ, ಯಾರಿಗೂ ತೊಂದರೆಯಿಲ್ಲದೆ ಟಿಕೆಟ್ಟುಗಳನ್ನು ಕೊಳ್ಳುವರು. ರೈಲು ಬಂಡಿಯಲ್ಲಿ ಪ್ರಯಾಣ ಮಾಡುವಾಗ ಅವರು ಸಿಗರೇಟು ಸೇದಿದರೂ ಅದರ ತುಂಡನ್ನು ಕೆಳಗೆ ಹಾಕುವುದಿಲ್ಲ; ನೆಲಗಡಲೆ ಕಾಯಿ ತಿಂದು ಸಿಪ್ಪೆಯನ್ನು ನಮ್ಮ ತರುವಾಯ ಬಂಡಿಯನ್ನೇರುವವರ ಪಾಲಿಗೆ ಕೆಳಗೆ ಚಲ್ಲಿರುವುದು ನಮ್ಮಲ್ಲಿ ಸಾಮಾನ್ಯ, ಅಲ್ಪ ವಿಷಯ. ಇತ್ಯಾದಿ, ಇತ್ಯಾದಿ.

ಇವುಗಳನ್ನು ಸ್ಮರಿಸಿ ನಮ್ಮಲ್ಲಿ ಸೀಮೆಗೆ ಹೋಗಿ ಬಂದವರು ಖಿನ್ನರಾಗುವುದು ಸಾಮಾನ್ಯ ಮತ್ತು ಸಹಜ. ಆ ಸಮಯದಲ್ಲಿ ನಮ್ಮ ನಾಗರಿಕತೆಯನ್ನೇ ನಿಂದಿಸುವಷ್ಟು ಜುಗುಪ್ಸೆಯು ಅವರ ಮನಸ್ಸಿನಲ್ಲಿ ತೋರುವುದು. ಜುಗುಪ್ಸೆಯ ಮಧ್ಯದಲ್ಲಿ ವಿಚಾರವಿರುವುದಿಲ್ಲ. ಬಹಿರಂಗ ಗುಣಗಳಲ್ಲಿ ನಟ್ಟ ದೃಷ್ಟಿಯಿಂದ ನಮ್ಮನ್ನು ಅವರು ಅವಹೇಳನ ಮಾಡುವರು. ಅಂತರಂಗದ ಗುಣಗಳಲ್ಲಿ ಅವರ ದೃಷ್ಟಿಯು ಸಾಮಾನ್ಯವಾಗಿ ಕಡಿಮೆ. ಪಾಶ್ಚಾತ್ಯ ದೇಶಗಳಲ್ಲಿ ಪ್ರತಿ ವ್ಯಕ್ತಿಗೂ ಬಹಿರಂಗ ಗುಣಗಳು ಅತ್ಯವಶ್ಯಕ; ಆದುದರಿಂದ ಪಾಶ್ಚಾತ್ಯರಲ್ಲಿ ಬಹಿರಂಗ ಗುಣಗಳು ಪ್ರಧಾನವಾಗಿ ಕಾಣುತ್ತವೆ. ನಮ್ಮಲ್ಲಿ ಆ ಗುಣಗಳು ಇಲ್ಲವೇ ಇಲ್ಲವೆಂದು ಯಾರೂ ಹೇಳಲಾಗುವುದಿಲ್ಲ. ದೇವಸ್ಥಾನ್ನಗಳು ಈಗ ಕೊಳಕಿಗೆ ತೌರುಮನೆಯಾಗಿದ್ದಾಗ್ಗೂ ಪೂರ್ವದಲ್ಲಿ ನಿಯಮಗಳಿರಲಿಲ್ಲವೇ? ತೀರ್ಥಸ್ಥ ಳಲ್ಲಿ ನೀರನ್ನು ಕೆಡಿಸಿದವರು ಕಂಟಕಪ್ರಾಯ ಬಹಿಷ್ಕಾರಕ್ಕೆ ಗುರಿಯಾಗುತ್ತಿರಲಿಲ್ಲವೇ? ರೈಲು ಟ್ಟಿನ ವಿನೋದ ಮುಂತಾದುವು ನಮ್ಮ ಸಮಾ ಹೊಸವು; ಮತ್ತು ಅವನತಿಯಲ್ಲಿ ಸಿಲ್ಕಿದ ಭಾರ ಸಮಾಜವನ್ನೂ ಉನ್ನತಿಯಲ್ಲಿರುವ ಪಾಶ್ಚಾತ್ಯ ಸ ಜದೊಡನೆ ಹೋಲಿಸುವುದು ನ್ಯಾಯವಲ್ಲ. ಈ ರ್ಶೆಯು ಹಾಗಿರಲಿ. ಸದ್ಯಕ್ಕೆ ಪಾಶ್ಚಾತ್ಯರಲ್ಲಿ ಸಾ ಜನಿಕ ವಿಷಯಗಳಲ್ಲಿ ಭಾರತೀಯರಿಗಿಂತ ಹೆ ಆದರ ಗೌರವಗಳನ್ನು ತೋರುವ ಗುಣಗಳು ಕಾ ವೆಂಬುದನ್ನು ಒಪ್ಪಿಕೊಳ್ಳೋಣ. ಸಾರ್ವಜನಿ ಯುಗಳು ಎಂಬ ವಿಚಾರವು ಅವರಲ್ಲಿ ಹುಟ್ಟಿ ಹೇಗೆ? ಅಭಿವೃದ್ಧಿಯಾದುದು ಹೇಗೆ?

ಇಂಗ್ಲೆಂಡಿನಲ್ಲಿ ೧೭, ೧೮ನೆ ಶತಮಾನಗಳಲ್ಲಿ ಗಳು ನಿರಂಕುಶರಾಗಿಯೇ ಇದ್ದರು. ಎರಡನೆ ಯಂ, ಎರಡನೆ ಹೆನ್ರಿ ಎಂಬ ದೊರೆಗಳ ಕಾ ಅರಣ್ಯಗಳು ದೊರೆಗೆ ಸೇರಿದವುಗಳಾಗಿದ್ದವು; ಸ ನ್ಯ ಪ್ರಜೆಗೆ ಅವುಗಳನ್ನು ಪ್ರವೇಶಿಸಿ ಮರಕಡಿ ಕ್ಕಾಗಲಿ, ಬೇಟೆಯಾಡುವುದಕ್ಕಾಗಲಿ ಆಸ್ಪದವಿ ಈ ಸ್ಥಿತಿಯಲ್ಲಿ ಪ್ರಜೆಯು ದೊರೆಯ ಬಲಕ್ಕೆ ಡುತ್ತಿದ್ದನು; ದೊರೆಯು ದುರ್ಬಲನಾದಾಗ



ಗಾಂಧೀಜಿಯವರ ಸಮುದ್ರಪ್ರಯಾಣ

ನಾಗುತ್ತಿದ್ದನು. ಆಗಿನ ಕಾಲದ ಅರಣ್ಯಗಳು ಈಗ ಇಂಗ್ಲೆಂಡಿನಲ್ಲಿಲ್ಲ. ಆ ಪ್ರದೇಶಗಳು ಪಟ್ಟಣಗಳಾಗಿಯೋ, ವಿಹಾರವನಗಳಾಗಿಯೋ ರೂಪಾಂತರ ಹೊಂದಿವೆ. ವಿಹಾರವನವು ಈಗ ದೊರೆಯದಲ್ಲ; ಪ್ರಜೆಗಳದು. ಆದ್ದರಿಂದ ಕದಿಯಲು ಮನಸ್ಸು ಮಾಡುವವನು ಒಂದಂಶವನ್ನು ತನ್ನಿಂದಲೇ ಕದಿಯಬೇಕು. ಎಲ್ಲರಿಗೂ ಬೇಕಾದ ಸ್ವತ್ತು ಒಬ್ಬನಿಗೋ ಅಥವಾ ಹಲಕೆಲವರಿಗೋ ಸೇರಿದಾಗ ಇತರರಿಗೆ ಅದರ ಮೇಲೆ ಕೆಟ್ಟಕಣ್ಣೇ ಇರುವುದು ಸಹಜ. ಸ್ವತ್ತು ಎಲ್ಲರಿಗೂ ಸೇರಿದಾಗ ಎಲ್ಲರೂ ಮಾಲೀಕರು. ಎಲ್ಲರೂ ಯಜಮಾನರು. ಆದುದರಿಂದ ಸ್ಥಿತಿಯನ್ನು ಕಾಪಾಡುವುದರಲ್ಲಿ ಎಲ್ಲರಿಗೂ ದೃಷ್ಟಿ. ಕಳ್ಳರು ಪುಂಡರನ್ನು ಹಿಡಿಯಲು ಎಲ್ಲರಿಗೂ ಆತುರ; ಎಲ್ಲರಿಗೂ ಉತ್ಸಾಹ ಎಲ್ಲರ ಯಾಜಮಾನ್ಯವೆಂಬುದು ಯಾವಾಗ ಪ್ರಾರಂಭವಾಯಿತು?

ಇಂಗ್ಲೆಂಡಿನ ಇತಿಹಾಸದಲ್ಲಿ 'ಮ್ಯಾಗ್ನಕಾರ್ಟ' ಎಂಬುದೇ ಇದಕ್ಕೆ ಮೊದಲು. ಆಗ ದೊರೆಯೇ ದುರ್ನೀತಿಯುತನಾಗಿ ದೇಶದಲ್ಲೆಲ್ಲ ಹಾಹಾಕಾರವನ್ನೆಬ್ಬಿಸಿದನು. ಪ್ರಜೆಗಳ ಸಂಕಟವು ದಿನೇ ದಿನೇ ವೃದ್ಧಿಯಾಗಿ ಕಡೆಗೆ ದಂಗೆಯೇ ಸಿದ್ಧವಾಗಿ ರಾಜನಿಗೂ ಪ್ರಜೆಗಳಿಗೂ ಯುದ್ಧವಾಗಿ ರಾಜನು ಬಲವಂತಕ್ಕೆ ಸಿಲ್ಕಿ ಆ ಸನ್ನದನ್ನು ಜನರಿಗೆ ಕೊಡಲು ಒಪ್ಪಿದನು. ಅಲ್ಲಿಂದ ಮುಂದಕ್ಕೆ ಪ್ರಜಾಭಿಮತವನ್ನು ಅನುಸರಿಸಿದ ರಾಜರು ಒಳ್ಳೆಯವರೆನಿಸಿದರು; ಪ್ರಜೆಗಳನ್ನು ಅಸಡ್ಡೆ ಮಾಡಿದವರು ನಿಷ್ಠುರರೆನಿಸಿದರು. ಪ್ರಜೆಗಳಲ್ಲಿ ಐಶ್ವರ್ಯ ವೃದ್ಧಿಯಾದ ಹಾಗೆ ಪ್ರಜಾನಾಯಕರು ದೊರೆಗಳ ಬಲವನ್ನು ಮುರಿಯಲು ಸಾಹಸಪಟ್ಟರು. ತಾವು ದಿವ್ಯಪುರುಷರೆಂದು ಹಟ ಹಿಡಿದ ರಾಜರುಗಳಲ್ಲಿ ಒಬ್ಬ ದೊರೆಯು ಶಿರಚ್ಛೇದನವನ್ನು ಅನುಭವಿಸಿದನು; ಮತ್ತೊಬ್ಬನು ರಾಜ್ಯಭ್ರಷ್ಟನಾದನು. ಆ ತರುವಾಯ ದೊರೆಗಳು ಬಹಳ ಉಪಾಯದಿಂದ ವರ್ತಿಸಬೇಕಾಯಿತು. ರಾಜನಿಗೂ ಪ್ರಜೆಗಳಿಗೂ ನಡೆದ ಈ ವಿರೋಧ ಪ್ರಕರಣವು ಸಾವಕಾಶವಾಗಿ ಸಾಗಿ ಕಡೆಗೆ ರಾಜನು ಪ್ರಜಾನಾಯಕರ ಸೂತ್ರದ ಗೊಂಬೆಯಾದನು. ಈ ಸಂದರ್ಭದಲ್ಲಿ ರಾಜರು ಸರ್ವಾಧಿಕಾರವೂ ತಮ್ಮದೆಂದು ಹಟಹಿಡಿದುದಲ್ಲದೆ ತಾವು ಮಾಡಿದುದೆಲ್ಲವೂ ನ್ಯಾಯವೇ ಎಂಬ ವಾದವನ್ನು ಮಾಡಿದರೆಂಬುದನ್ನು ನೆನಪಿನಲ್ಲಿಡಬೇಕು. ಇಂತಹ ವಾದವನ್ನು ಪ್ರತಿಭಟಿಸುವ ಸಂದರ್ಭದಲ್ಲಿಯೇ ಇಂಗ್ಲೀಷರು ರಾಷ್ಟ್ರನೀತಿ ಶಾಸ್ತ್ರದ ವ್ಯಾಸಂಗವನ್ನು ಮೊದಲು ಮಾಡಿದುದು. ರಾಜನಿಂದಲೋ, ಅಥವಾ ರಾಜನ ಗೆಳೆಯರಿಂದಲೋ ಅಧಿಕಾರವನ್ನು ಕಿತ್ತುಕೊಳ್ಳುವುದೇ ಈ ಸಾಧನೆಯ ಉದ್ದೇಶವಾಗಿತ್ತು. ಪ್ರಜೆಗಳ ಅಧಿಕಾರವನ್ನು ಭದ್ರವಾಗಿ ಸ್ಥಾಪಿಸಿಕೊಳ್ಳುವುದೇ ಪ್ರಜಾನೇತೃಗಳ ಪರಮೋದ್ದೇಶವಾಗಿತ್ತು. ಆದುದರಿಂದ ಅಭಿವೃದ್ಧಿ ಪಡೆದ ರಾಷ್ಟ್ರನೀತಿಯ ವ್ಯಾಸಂಗದಲ್ಲಿಯೂ ರಾಷ್ಟ್ರದ ಸನ್ನದು, ಕರಾರು ಮುಂತಾದ ಪ್ರಮಾಣ ಪತ್ರಗಳಲ್ಲಿಯೂ ಪ್ರಜಾಧಿಕಾರವೇ ಪ್ರಕಟವಾಯಿತು.

ನೆರೆಯಲ್ಲಿರುವ ಫ್ರಾನ್ಸ್ ದೇಶದಲ್ಲಿ ಈ ಸಂಗತಿಯು ಅದ್ಭುತವಾಗಿ ಸಂಭವಿಸಿತು. ಸಂಭವಿಸು



ಉಪ್ಪಿನ ಸತ್ಯಾಗ್ರಹ (ಆರಿಸುವಿಕೆ)

ವುದು ವಿಳಂಬವಾಯಿತು, ಆದುದರಿಂದ ವಿಪರೀತವಾಗಿಯೇ ಪರಿಣಮಿಸಿ ಪಾಶ್ಚಾತ್ತ್ಯ ಜಗತ್ತನ್ನೇ ಸ್ತಂಭಿಸಿತು. ಫ್ರೆಂಚುಜನರು ರಾಜರೊಡನೆ ಕರಾರುಮಾಡಿಕೊಂಡು ತೃಪ್ತರಾಗಲಿಲ್ಲ. ರಾಜತ್ವವನ್ನೇ ಕಿತ್ತೊಗೆದು ರಾಜನನ್ನು ಶಿರಚ್ಛೇದನಮಾಡಿದರು. ಈ ಸಂಗತಿಯ ಸತ್ಪರಿಣಾಮವು ಭದ್ರವಾಗಿ ಊರಲು ತಡವಾಯಿತು. ಮತ್ತು ಪರಿಣಾಮವು ಫ್ರಾನ್ಸ್ ಒಂದೇ ದೇಶದಲ್ಲಲ್ಲದೆ ಯೂರೋಪಿನ ದೇಶಗಳೆಲ್ಲವುಗಳಲ್ಲಿಯೂ ಪ್ರಬಲವಾದ ಸಾಂಕ್ರಾಮಿಕ ಜಾಡ್ಯದಂತೆ ಹರಡಿಕೊಂಡಿತು. ಮುಖ್ಯವಾಗಿ ಇದರ ಪರಿಣಾಮವಾಗಿ ರಾಷ್ಟ್ರನೀತಿಯಲ್ಲಿ ಪ್ರಜಾಪ್ರಭುತ್ವವೆಂಬ ತತ್ವವು ಮೂಲ ಮಂತ್ರವಾಯಿತು; ರಾಜರ ಅವತಾರ ಪೂರ್ತಿಯಾಗದಿದ್ದರೆ ಅವರ ಬಂಧನ ಪೂರ್ತಿಯಾಯಿತು. ಒಂದೊಂದಾಗಿ ದೇಶಗಳು ರಾಜತ್ವವನ್ನು ಕೊನೆಗಾಣಿಸಲು ಸಿದ್ಧವಾದುವು. ಅತ್ತಲಾಗಿ ಯೂರೋಪಿನ ಮರಿಯಾದ ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ರಾಜರಹಿತವಾದ ರಾಷ್ಟ್ರವು ಸಿದ್ಧವಾಗಿ ದಿನೇ ದಿನೇ ಪ್ರವರ್ಧಮಾನವಾಗುತ್ತ ಯೂರೋಪಿನ ಜನಗಳಿಗೆ ಮಾರ್ಗದಾಯಕವಾಯಿತು.

ರಾಜರ ದೌಷ್ಟ್ಯವೇ ಪ್ರಜಾಪ್ರಭುತ್ವ ತತ್ವದ ವ್ಯಾಪ್ತಿಗೆ ಮೂಲಕಾರಣವಾಯಿತು. ಆದರೆ ಯೂರೋಪಿನ ರಾಜಕೀಯ ರಂಗದಲ್ಲಿ ಪ್ರಜಾತಂತ್ರವೆಂಬ ಮಂತ್ರದ ಜಪವು ಮೊದಲಾದ ಸಮಯದಲ್ಲಿಯೇ ಔದ್ಯೋಗಿಕ ಕ್ರಾಂತಿಯೆಂಬುದೂ ಘಟಿಸಿತು. ಯೂರೋಪಿನ ದೇಶಗಳು ವಿಶಾಲವಾದ ನದಿಗಳ ಬಯಲುಗಳಲ್ಲ; ಭೂಸ್ಥಿತಿಯು ಕಡಿಮೆ. ಆದ್ದರಿಂದ ಜೀವನದಲ್ಲಿ ಜನರು ವ್ಯವಸಾಯವನ್ನೇ ಹೆಚ್ಚಾಗಿ ಅವಲಂಬಿಸದೆ ಉದ್ಯೋಗಗಳನ್ನೂ ಕೈಗಾರಿಕೆಗಳನ್ನೂ ಅವಲಂಬಿಸಬೇಕಾಯಿತು. ಉದ್ಯೋಗದಲ್ಲಿ ಯಂತ್ರಗಳ ಉಪ[...]ಗವೂ, ಯಂತ್ರದ ಹಿಂದೆಯೇ ಧನಿಕರ ಯಾಜಮಾನ್ಯ[...] ಸಹಜ ಪ್ರಾಬಲ್ಯವನ್ನು ಹೊಂದಿದವು. ಉದ್ಯೋ[...] ಕೈಗಾರಿಕೆಗಳ ಪ್ರಾಧಾನ್ಯದಲ್ಲಿ ವ್ಯವಸ್ಥೆಯೆಂ[...] ಬಲು ಮುಖ್ಯವಾಯಿತು; ಪೋಟಾಪೋಟಿ[...] ಯುದ್ಧಭೂಮಿಯಲ್ಲಿ ಹೇಗೋ ಔದ್ಯೋಗಿಕಕ್ಷೇ[...]ಲ್ಲಿಯೂ ಹಾಗೆಯೇ. ಪ್ರತಿ ಉದ್ಯೋಗವೂ ವ್ಯ[...] ಗೊಳಗಾಗುವುದು ಅತ್ಯವಶ್ಯಕವಾಯಿತು. [...] ನಿಂದ ಹತ್ತು ಜನರು ಸೇರಿ ಕೆಲಸಮಾಡುವುದು [...]ನದ ಮೂಲಮಂತ್ರವಾಗಿ ಪರಿಣಮಿಸಿತು. [...] ಯಲ್ಲಿ ಕಠೋರನಾಗಿ ಪ್ರವರ್ತಿಸಿ ಹೆಂಡತಿ[...]ಳನ್ನು ಹೊಡೆದು ಬಯ್ದಾಡುವ ನೀಚನೂ ಕೂಡ[...] ಉದ್ಯೋಗದಲ್ಲಿ ತನ್ನ ಸ್ಥಾನಮರ್ಯಾದೆಯನ್ನು [...]ಸುವುದು ಸಮಾಜಜೀವನದ ಲಕ್ಷಣವಾಯಿತು. [...]ಸ್ಥೆಯೆನ್ನುವುದು ಪಾಶ್ಚಾತ್ತ್ಯರಲ್ಲಿ ಈ ಬಲದಿಂದ [...]ತವಾಯಿತು. ನಮ್ಮ ಹಿಂದಿನ ಕಾಲದಲ್ಲಿ ಶಾ[...] ಹುಚ್ಚುರೇಗಿ ಚೌರ್ಯಕ್ಕೂ ಶಾಸ್ತ್ರ ಹುಟ್ಟಿಕೊಂ[...] ಅವರಲ್ಲಿ ಚೌರ್ಯಕ್ಕೂ ವ್ಯವಸ್ಥೆಯು ಹುಟ್ಟಿ[...] ಜನಜೀವನದ ಎಲ್ಲ ರಂಗಗಳಲ್ಲಿಯೂ ವ್ಯವಸ್ಥೆ[...] ಮೂಡಿದಾಗ ರಾಜಕೀಯ ರಂಗದಲ್ಲಿಯೂ [...] ಅಧಿಕಾರಕಾಂಡದ ವ್ಯವಸ್ಥೆಯು ವಿಸ್ತಾರವೂ ಭದ್ರ[...] ಆಯಿತು. ಅನೇಕ ಶತಮಾನಗಳ ಕಾಲ ಅಧಿ[...] ಲೇಶವೂ ಇಲ್ಲದೆ ರಾಜಾಸ್ಥಾನಿಕರ ಹಂಗಿಗೆ [...]ಗಿದ್ದ ವರ್ಗಗಳ ಜನರು ಪ್ರಜಾಪ್ರಭುತ್ವದ ಸ್ಥಾ[...]ಯಲ್ಲಿ ಮುಂದಾಳುಗಳಾಗಿ ತಮ್ಮ ಅಧಿಕಾರ[...] ಭದ್ರಪಡಿಸಿಕೊಂಡರು. ರಾಜಕೀಯವಾದ ವಿಷ[...]





ಉಪ್ಪಿನ ಸತ್ಯಾಗ್ರಹ (ಮಾಡುವಿಕೆ)

ವ್ಯವಸ್ಥೆಗೂ ಕ್ರಮುಕ್ಕೂ ಒಳಗಾಗಿ ಅದರಲ್ಲಿ ನ್ಯಾಯಾನ್ಯಾಯ ಪಕ್ಷಗಳನ್ನು ನಿಷ್ಕರ್ಷೆಮಾಡಲು ಕಾನೂನುಗಳು ಸಿದ್ಧವಾದವು.

ಇಂತಹ ಸ್ಥಿತಿಯಲ್ಲಿ ವ್ಯಕ್ತಿಯ ಸ್ವಾತಂತ್ರ್ಯವೆನ್ನುವುದು ಮೂಲವೆನ್ನಿಸಿತು. ದೇಶದಲ್ಲಿ ಹುಟ್ಟಿದ ಪ್ರತಿಯೊಬ್ಬನಿಗೂ ದೈಹಿಕಸ್ವಾತಂತ್ರ್ಯ, ವಾಕ್‌ಸ್ವಾತಂತ್ರ್ಯ, ಸಂಚಾರಸ್ವಾತಂತ್ರ್ಯ, ಶಿಕ್ಷಣದ ಅನುಕೂಲ, ಜೀವನದ ಅನುಕೂಲ ಮುಂತಾದವು ಹಕ್ಕುಗಳಾಗಿ ಪರಿಣಮಿಸಿದವು. ರಾಷ್ಟ್ರಸ್ಥಾಪನೆಯ ಮೂಲಪತ್ರಗಳಲ್ಲಿ ಪ್ರಜಾಧಿಕಾರಗಳೆಂಬ ಈ ವಿಧವಾದ ಹಕ್ಕುಗಳು ಪ್ರಕಟವಾದುವು. ಬಹಳ ಕಾಲದವರೆಗೂ ಈ ಅನುಕೂಲಗಳು ಇಲ್ಲದೆ ಇದ್ದುದರಿಂದ ಅವರಿಗೆ ದೃಷ್ಟಿಯು ಹೆಚ್ಚಾಗಿ ಈ ಅಧಿಕಾರಗಳಲ್ಲಿಯೇ ನಟ್ಟಿತು. ರಾಜತ್ವವನ್ನು ನಾಶಮಾಡಿ, ಪ್ರಾತಿನಿಧ್ಯದ ಮೂಲಕ ಪ್ರಜಾತಂತ್ರವನ್ನು ಅನುಸರಿಸಿದ ರಾಷ್ಟ್ರಗಳೆಲ್ಲವುಗಳಲ್ಲಿಯೂ ಈ ಅಧಿಕಾರಗಳು ಪ್ರಧಾನಸ್ಥಾನಗಳನ್ನು ಪಡೆದಿವೆ. ಫ್ರಾನ್ಸ್‌ದೇಶದಲ್ಲಿ ಜನರ ನಾಯಕರು ನೂರಾರುವರ್ಷ ಕಾಲ ಅನ್ಯಾಯಕ್ಕೆ ಸಿಲ್ಕಿ, ೧೭೮೯ರಲ್ಲಿ ಪ್ರಳಯವನ್ನೇ ನಡೆಸಿದಾಗ ಸ್ವಾತಂತ್ರ್ಯ, ಸಮತ್ವ ಮತ್ತು ಭ್ರಾತೃತ್ವ ಭಾವಗಳು ಸಮಾಜದ ಮೂಲತತ್ವಗಳಾಗಿರಬೇಕೆಂದು ಆಸೆಪಟ್ಟರು. ಒಂದೊಂದಾಗಿ ಇತರ ರಾಜ್ಯಗಳಲ್ಲಿಯೂ ಈ ತತ್ವಗಳು ಪ್ರಸಾರವಾದವು. ಪ್ರತಿವ್ಯಕ್ತಿಯೂ ಸ್ವತಂತ್ರನಾಗಿರಬೇಕಾದಂತೆಯೇ ಪ್ರತಿ ರಾಷ್ಟ್ರವೂ ಸ್ವತಂತ್ರವಾಗಿರಬೇಕೆಂಬ ತತ್ವವೂ ಹೊರಟಿತು. ಸ್ವಾತಂತ್ರ್ಯ, ಸಮತ್ವ ಮತ್ತು ಭ್ರಾತೃಭಾವಗಳು ರಾಷ್ಟ್ರಶಾಸ್ತ್ರದ ಮೂಲಮಂತ್ರಗಳಾದಂತೆಯೇ ರಾಷ್ಟ್ರಸಮೂಹದಲ್ಲಿ ಚಿಕ್ಕ ರಾಷ್ಟ್ರಗಳೂ ದೊಡ್ಡ ರಾಷ್ಟ್ರಗಳೊಂದಿಗೆ ಸಮವಾಗಿರತಕ್ಕದ್ದೆಂದು ಸಿದ್ಧವಾಯಿತು.

ಡೆಮಾಕ್ರೆಸಿ ಅಥವಾ ಪ್ರಜಾತಂತ್ರ ಮತ್ತು ನ್ಯಾಷನಾಲಿಟಿ ಅಥವಾ ರಾಷ್ಟ್ರೀಯತೆ–ಎಂಬುವು ಕಳೆದ ನೂರೈವತ್ತು ವರ್ಷಗಳ ಚರಿತ್ರೆಯ ಮುಖ್ಯ ಚಲನೆಗಳು. ಇವುಗಳ ಪರಿಣಾಮವಾಗಿ ವ್ಯಕ್ತಿಯಾದವನಿಗೆ ರಾಷ್ಟ್ರೀಯ ಗುಣಗಳು ವೃದ್ಧಿಯಾದವು. ತನ್ನ ಅಧಿಕಾರದಲ್ಲಿ ಪ್ರತಿ ಐರೋಪ್ಯನಿಗೂ ಪ್ರಜ್ಞೆಯೊಂದೇ ಅಲ್ಲದೆ ವಿಶೇಷವಾದ ಅಭಿಮಾನವುಂಟು; ಅಧಿಕಾರ ಲೋಪದ ಸಮಯದಲ್ಲಿ ಅದಕ್ಕಾಗಿ ಹೊಡೆದಾಡಲು



ಅರಣ್ಯಶಾಸನೋಲ್ಲಂಘನ

ಆತನು ಸಿದ್ಧನಾಗುತ್ತಾನೆ. ಮತ್ತು ರಾಷ್ಟ್ರಭಕ್ತಿ ಎನ್ನುವುದು ಪ್ರತಿವ್ಯಕ್ತಿಗೂ ಸಹಜಗುಣವಾಯಿತು. ಯೂರೋಪಿನಲ್ಲಿ ಬೇರೆ ಕಾರಣಗಳಿಂದ ರಾಷ್ಟ್ರಗಳಲ್ಲಿ ಸ್ಪರ್ಧೆ ಅಥವಾ ಪೋಟಾಪೋಟಿ ನಡೆದುದು ಈ ಗುಣಗಳ ಅಭಿವೃದ್ಧಿಗೆ ಪೋಷಕವಾಯಿತು.

ಡೆಮೊಕ್ರಸಿಯ ತತ್ವಗಳು ಪ್ರಚಾರಗೊಂಡಕಾಲದಲ್ಲಿಯೇ ಯೂರೋಪಿನ ಜನಜೀವನದಲ್ಲಿ ಔದ್ಯೋಗಿಕ ಪ್ರಾಬಲ್ಯವೂ ಮೊದಲಾಯಿತು. ಇತರ ಖಂಡಗಳ ಭೂಭಾಗಗಳನ್ನು ಸಾಧಿಸುವುದರಲ್ಲಿ ಸಾಹಸವನ್ನೂ ಸ್ಪರ್ಧೆಯನ್ನೂ ವಹಿಸಿ ಆ ಭೂಭಾಗಗಳನ್ನು ತಮ್ಮ ದೇಶಗಳ ಉದ್ಯೋಗ ಕೈಗಾರಿಕೆಗಳಿಗೆ ಪೋಷಕಗಳಾಗಿ ಮಾಡಿಕೊಂಡುದೂ ಈ ಕಾಲದಲ್ಲಿಯೇ. ಉದ್ಯೋಗ ಕೈಗಾರಿಕೆಗಳಲ್ಲಿ ಪರಸ್ಪರ ಸ್ಪರ್ಧೆಯು ರೇಗುತ್ತಿದ್ದಾಗ ಶಿಸ್ತು ಬಹಳ ಆವಶ್ಯಕವಾಯಿತು. ವ್ಯಾಪಾರೋದ್ಯೋಗಗಳಲ್ಲಿ ಶಿಸ್ತು ಎನ್ನುವುದು ಪ್ರಧಾನವಾದುದು ಹೀಗೆ. "ಇಂಗ್ಲೀಷು ಷಾಪಿನಲ್ಲಾದರೆ ಒಂದೇ ನಿಕರವಾದ ಬೆಲೆಯಪ್ಪ. ಚಿಕ್ಕ ಮಗು ಹೋದರೂ ಒಂದೇ ಬೆಲೆ, ಸಾಮಾನು ಖಾತರಿ, ಕೆಟ್ಟದ್ದೆಂದು ವಾಪಸುಮಾಡಿದರೆ ಹಿಂದಕ್ಕೆ ತೆಗೆದುಕೊಳ್ಳುತ್ತಾರೆ, ಮೋಸವಿಲ್ಲ, ಪ್ರಾಮಾಣಿಕವಾದ ವ್ಯಾಪಾರ ಅವರದು" ಎಂದು ನಾವಾಗ... ಆಡಿಕೊಳ್ಳುವುದುಂಟು. ವ್ಯಾಪಾರದಲ್ಲಿ ಮೋಸ... ಡಿದರೆ ಹೆಸರು ಕೆಟ್ಟು ಮುಂದೆ ವ್ಯಾಪಾರವು ಖ... ವಾಗಿ ಕೆಡುವುದೆಂಬ ಸಂಗತಿ ಅವರಿಗೆ ಸ್ಪಷ್ಟ... ಗೊತ್ತುಂಟು. ವ್ಯಾಪಾರವೇ ಜೀವನ ಮಂತ್ರ... ವರಿಗೆ ಈ ವಿಧವಾದ ಪ್ರಾಮಾಣಿಕತೆಯು ಸ... ವಾಗಿಯೇ, ಆವಶ್ಯವಾಗಿಯೇ ಜನಿಸುತ್ತದೆ. ಉದ... ಗವ್ಯಾಪಾರಗಳಲ್ಲಿ ಶಿಸ್ತಿಲ್ಲದೆ ಆಗುವುದೇ ಇಲ್ಲ. ... ಶಿಸ್ತಿಗೊಳಗಾಗಿ ಯುದ್ಧಮಾಡುತ್ತಿದ್ದ ಐರೋ... ಸೋಜರರು ಶಿಸ್ತಿಲ್ಲದಿದ್ದ ಭಾರತೀಯ ಸಿಪಾಹಿಗ... ಸುಲಭವಾಗಿ ಸೋಲಿಸಿದ್ದು ಹೇಗೆ? ವ್ಯಾಪಾ... ಲ್ಲಿಯೂ ಹೀಗೆಯೇ. ನಮ್ಮ ದೇಶದಲ್ಲಿ ಇಂಗ್ಲೀ... ವರ್ತಕರು ಮೋಸಕ್ಕೆ ಮೊದಲಿಟ್ಟೊಡನೆಯೇ ... ಕಿಗಳು ಅವರ ಅಂಗಡಿಗೆ ಬೆನ್ನು ತೋರಿಸಿ ಜಪಾ... ಅಥವಾ ಬೇರೊಬ್ಬನ ಮಳಿಗೆಗೆ ಹೊರಡು... ಔದ್ಯೋಗಿಕ ಪ್ರಪಂಚದ ಸ್ಪರ್ಧೆಯಿಂದ ಪಾಶ್ಚಾತ್ಯ... ಶಿಸ್ತೆಂಬುದು ಸರ್ವಸಾಧಾರಣವಾದ ಮತ್ತು ... ವಶ್ಯಕವಾದ ಮಂತ್ರವಾಯಿತು.






ವಿದೇಶೀವಸ್ತ್ರ ಬಹಿಷ್ಕಾರ (ಪಿಕೆಟಿಂಗ್)

ಉದ್ಯೋಗಗಳ ಪ್ರಾಬಲ್ಯದಿಂದ ಸಮಾಜದಲ್ಲಿ ಬೇರೊಂದು ನಡೆಯಿತು. ಪಾಶ್ಚಾತ್ಯ ಸಮಾಜಗಳಲ್ಲಿ ಭಾರತ ದೇಶದಲ್ಲಿದ್ದ ವರ್ಣ ವ್ಯವಸ್ಥೆಯಿಲ್ಲ. ಬೇಕಾದವರು ಬೇಕಾದ ಕಸಬನ್ನು ಅವಲಂಬಿಸಬಹುದಾಗಿದೆ; ಆದ್ದರಿಂದ ಪ್ರತಿ ಉದ್ಯೋಗದಲ್ಲಿಯೂ ಪ್ರತಿ ವ್ಯಾಪಾರದಲ್ಲಿಯೂ ಸ್ಪರ್ಧೆಗೆ ಮಿತಿಯೇ ಇಲ್ಲ. ಈ ಸ್ಪರ್ಧೆಯು ಅವರ ಸಮಾಜದಲ್ಲಿ ದುಡ್ಡಿದ್ದವನೇ ದೊಡ್ಡಪ್ಪನಾದುದರಿಂದ ಸಮಾಜದಲ್ಲಿ ಅಲ್ಪಸಂಖ್ಯಾಕರೂ ಬಹು ಧನಾಢ್ಯರೂ ಆದ ಕೆಲವರು ಬಹುಸಂಖ್ಯಾಕರೂ ಬಡವರೂ ಆದ ಅನೇಕರನ್ನು ತಮ್ಮ ವಶವರ್ತಿಗಳನ್ನಾಗಿ ಮಾಡಿಕೊಂಡಿರುವರು. ಡೆಮಾಕ್ರಸಿ ಎಂತ ತತ್ವವೇನೋ ಎಲ್ಲರ ಮನಸ್ಸಿನಲ್ಲಿಯೂ ಇದೆ; ಆದರೆ ಆಡಳಿತವು ಧನವಂತರ ಸ್ವಾಧೀನವಾಗಿದೆ. ಪೂರ್ವದಲ್ಲಿ ರಾಜಪುರುಷರು ನಿಷ್ಠುರರೂ ಕಠೋರರೂ ಆದಾಗ ಇತರರು ಅವರನ್ನು ವಿರೋಧಿಸಬೇಕಾಯಿತು. ಈಗ ಯುರೋಪ್ಯ ದೇಶಗಳಲ್ಲಿ ಬಡವರೆಲ್ಲರೂ ಸೇರಿ ಧನವಂತರನ್ನು ವಿರೋಧಿಸುವ ಸಂದರ್ಭ ಒದಗಿದೆ. ದೇವರು ಕೊಟ್ಟ ರಾಷ್ಟ್ರದ ಉತ್ಪತ್ತಿಯು ಎಲ್ಲರಿಗೂ ಸಮವಾಗಿ ಸೇರಬೇಕೆಂಬ ಲಕ್ಷ್ಯವುಳ್ಳ ಅನೇಕಾನೇಕ ವ್ಯವಸ್ಥೆಗಳನ್ನು ಯೋಚಿಸುತ್ತಲೂ ಪ್ರಯತ್ನಿಸುತ್ತಲೂ ಇದ್ದಾರೆ. ಈ ಬಗೆಯ ಪ್ರಯತ್ನವು ರಷ್ಯಾದೇಶದಲ್ಲಿ ಸೋವಿಯಟ್ ಎಂಬ ರೂಪವನ್ನು ತಾಳಿತು. ರಷ್ಯಾದೇಶಕ್ಕೂ ಇತರ ದೇಶಗಳಿಗೂ ಇರುವ ವ್ಯತ್ಯಾಸಗಳಲ್ಲಿ ಇದು ಮುಖ್ಯವಾದುದು.

ಈ ರೀತಿಯಲ್ಲಿ ರಾಷ್ಟ್ರೀಯತಾ, ಪ್ರಜಾತಂತ್ರ, ಔದ್ಯೋಗಿಕ ಪ್ರಾಬಲ್ಯ, ಸರ್ವತ್ರ ಸ್ಪರ್ಧೆ, ಶಿಸ್ತು ಎಂಬುವು ಅಲ್ಲಿಯ ಸಮಾಜಗಳಲ್ಲಿ ಮುಖ್ಯ ಗುಣಗಳಾದವು. ಪೂರ್ವಕಾಲದಲ್ಲಿ ಭೃತ್ಯನಾದವನು ಸ್ವಾಮಿಯಲ್ಲಿ ಭಕ್ತಿಯನ್ನಿಡುವುದು ನಮ್ಮಲ್ಲಿದ್ದಂತೆಯೇ ಅವರಲ್ಲಿಯೂ ಇತ್ತು. ರಾಜರಿಗಾಗಿ ಪ್ರಾಣ ಕೊಡುವುದು ಸಾಮಾನ್ಯವಾಗಿತ್ತು. ರಾಜರು ಅದೃಶ್ಯವಾದಮೇಲೆ ರಾಜಭಕ್ತಿಯು ರಾಷ್ಟ್ರಭಕ್ತಿಯಾಗಿ ಪರಿಣಮಿಸಿತು. ಪ್ರಜಾಪ್ರಭುತ್ವವು ನೆಲೆಸಿದಮೇಲಂತೂ ಪ್ರತಿ ವ್ಯಕ್ತಿಯೂ ಯತ್ಕಿಂಚತ್ ರಾಜಪುರುಷನೇ ಆದನು. ದೇಶದಲ್ಲಿ ೧೦ ಕೋಟಿ ಜನರಿದ್ದರೆ ರಾಜತ್ವದ ೧೦ ಕೋಟಿ ಅಂಶಗಳಲ್ಲಿ ಒಂದಂಶವು ಅವನದಾಯಿತು. ಅಧಿಕಾರ ಮತ್ತು ಕರ್ತವ್ಯ



ಲಾಠೀರಾಜ್ಯ, ಒಂದು ರುದ್ರದೃಶ್ಯ

ಗಳೆರಡೂ ಸಿದ್ಧವಾದವು ರಾಜಕೀಯ ಕ್ಷೇತ್ರದಲ್ಲಿ. ಅವುಗಳನ್ನು ತಿಳಿಸುಕೊಳ್ಳುವುದೂ, ಅವುಗಳನ್ನು ಸಮರ್ಪಕವಾಗಿ ಆಚರಿಸುವುದೂ ಅತ್ಯವಶ್ಯಕವಾಯಿತು. ಪ್ರಾತಿನಿಧ್ಯದ ವಿಧಾನದಲ್ಲಿ ವೋಟೆಂಬುದು ಅಧಿಕಾರಸೂಚಕವಾಯಿತು. ಆದ್ದರಿಂದಲೇ ವೋಟಿನ ಅಧಿಕಾರಕ್ಕಾಗಿ ಅವರ ಇತಿಹಾಸದಲ್ಲಿ ಗುದ್ದಾಟಗಳು.

ನಮ್ಮ ದೇಶದ ಇತಿಹಾಸವೇ ಬೇರೆ ಲಕ್ಷಣಗಳನ್ನುಳ್ಳದ್ದು. ಪಾಶ್ಚಾತ್ಯರು ಇನ್ನೂ ರೂಕ್ಷಾವಸ್ಥೆಯಲ್ಲಿದ್ದಾಗಲೇ ನಮ್ಮ ಪೂರ್ವಿಕರು ಅದ್ಭುತವಾದ ನಾಗರಿಕತೆಯನ್ನು ಕಟ್ಟಿ ಜಗತ್ತಿನಲ್ಲೆಲ್ಲ ಅಗ್ರಗಣ್ಯರಾಗಿದ್ದರು. ಸಮಾಜದಲ್ಲಿ ಒಂದಲ್ಲ, ಎರಡಲ್ಲ, ಅನೇಕಾನೇಕ ಜನಸಮೂಹಗಳು; ಒಂದೊಂದು ಪಂಗಡಕ್ಕೂ ಒಂದೊಂದು ಅಂತಸ್ತಿನ ನಾಗರಿಕತೆ. ಪಾಶ್ಚಾತ್ಯ ದೇಶಗಳಲ್ಲಿ ಜನರು ಒಂದೇ ಪಂಗಡ; ಇಲ್ಲಿ ಅನೇಕಾನೇಕ. ಇಷ್ಟು ಪಂಗಡಗಳನ್ನು ಒಂದು ಸಮಾಜದಲ್ಲಿ ಬಂಧಿಸಿದುದೇ ಪುರಾತನ ಭಾರತೀಯರ ಅದ್ವಿತೀಯ ಪ್ರಜ್ಞೆಯನ್ನು ತೋರುತ್ತದೆ. ಚಾತುರ್ವರ್ಣ್ಯ, ಶ್ರೇಣಿಗಳು ಅಥವಾ ವ್ಯಾಪಾರೋದ್ಯೋಗಗಳನ್ನವಲಂಬಿಸಿದವರ ಕೂಟಗಳು, ಸಂಘಗಳು ಅಥವಾ ವಿದ್ವಾಂಸರ ಮತ್ತು ಮತಗುರುಗಳ ವ್ಯವಸ್ಥೆಗಳು, ಮತ್ತು ಗ್ರಾಮಕೂಟಗಳು ಅಥವಾ ಪಂಚಾಯಿತಿಗಳು ... ತೀಯ ಸಮಾಜದ ಪ್ರಾಣಸ್ಥಾನಗಳಾದವು. ... ಷರು ಆಡಳಿತವನ್ನು ವಹಿಸುವವರೆಗೆ ಆಡಳಿತದ ... ಪಾಲು ಪ್ರಜೆಗಳ ಸ್ವಾಧೀನದಲ್ಲಿಯೇ ಇತ್ತು. ... ಪುರುಷರಿಗಿದ್ದುದು ದೇಶದ ರಕ್ಷಣೆ, ದುಷ್ಟ... ಮತ್ತು ಶಿಷ್ಟರ ಪೋಷಣೆ. ಸಂಚಾರ ಸೌಕರ್ಯ... ಶಿಕ್ಷಣ ಸೌಕರ್ಯಗಳು, ಆರೋಗ್ಯ ಸೌಕರ್ಯ... ಮುಂತಾದವು ಪ್ರಜೆಗಳ ವಶದಲ್ಲಿಯೇ ಇ... ಆದ್ದರಿಂದಲೇ ಧರ್ಮಕಾರ್ಯಗಳಲ್ಲಿ ಸತ್ರಗಳು, ... ಮಠಗಳು, ದೇವಸ್ಥಾನಗಳು, ಚಿಕಿತ್ಸಾಲಯ... ಕೆರೆಗಳು ಎಣಿಕೆಯಾಗುತ್ತಿದ್ದವು. ಸಂದರ್ಭ... ದಂತೆ ರಾಜನೂ ಇವುಗಳನ್ನು ಕಟ್ಟಿಸುತ್ತಿದ್ದ...

ಇತಿಹಾಸ ಪರಿಚಯ ಸಾಲದೆ ನಾವು ... "ನಮ್ಮಲ್ಲಿ ಡೆಮಾಕ್ರೆಸಿ ಎಂಬುದು ಯಾವಾ... ದರೂ ಇದ್ದೀತೆ? ಪೊಲಿಟಿಕಲ್ ರೈಟ್ಸ್ ... ಪ್ರಜೆಯ ರಾಜಕೀಯಾಧಿಕಾರಗಳು ಎಂಬುವು ... ಲ್ಲಾದರೂ ಇದ್ದಿದ್ದವೇ?" ಎಂದು ಕೇಳು... ನಮ್ಮಲ್ಲಿ ರಾಜತ್ವವು ಸ್ಥಿರವಾಗಿ ನಿಂತದ್ದಕ್ಕೆ ... ಬೇರೆ ತಿಳಿದಿರಲಿಲ್ಲವೆಂದು ಅರ್ಥವಲ್ಲ. ... ಕೊಂಡು ನೋಡಿದರೆ ನಮ್ಮ ಚರಿತ್ರೆಯಲ್ಲಿ ರಾಜ... ವಾದ ಆಡಳಿತವು ಲಿಚ್ಛವಿ, ಯೌಧೇಯ, ...





ಚಕ್ರಗೋಷ್ಠಿ, ಒಂದು ವಕ್ರದೃಶ್ಯ

ಮುಂತಾದ ಕುಲಗಳ ಆಧಿಪತ್ಯದಲ್ಲಿ ಕಾಣುತ್ತದೆ. ಇತರ ರೂಪಗಳನ್ನು ಅನುಭವಿಸಿ ನಮ್ಮ ಪೂರ್ವಜರು ರಾಜತ್ವವನ್ನೇ ಭದ್ರವಾಗಿ ಹಿಡಿದರು. ಎರಡನೆ ಪ್ರಶ್ನೆಗೆ ಇಲ್ಲಿ ಅವಕಾಶವೇ ಇಲ್ಲ. ಏಕಂದರೆ ರಾಜಕೀಯಾಧಿಕಾರಗಳು ಪ್ರಜೆಗೆ ಅವಶ್ಯಕವಾಗಿರಲಿಲ್ಲ. ಪ್ರಜೆಗಳು ಅವುಗಳಿಗಾಸೆಪಟ್ಟು ಕೇಳಲೂ ಇಲ್ಲ; ರಾಜರು ಇಲ್ಲವೆಂದು ಹೇಳಲೂ ಇಲ. ಅಧಿಕಾರವಿಲ್ಲದಿದ್ದಾಗ ಅವುಗಳ ಪ್ರಸಂಗ ಬರುತ್ತದೆ. ಇದ್ದಾಗ ಬರುವುದಿಲ್ಲ.

ರಾಜತ್ವ ಸ್ವರೂಪದಲ್ಲಿಯೂ ನಾವು ಮತ್ತೊಂದು ದೋಷವನ್ನೆಣಿಸುತ್ತೇವೆ. ಇದಕ್ಕೆ ಐರೋಪ್ಯ ಚರಿತ್ರಕಾರರು ಕಾರಣ. ಅವರು ಪೌರಸ್ತ್ಯ ರಾಜತ್ವವೆನ್ನುವುದು ನಿರಂಕುಶ ಪ್ರಭುತ್ವಕ್ಕೆ ಸಮಾನವೆಂದು ಒತ್ತಿ ಒತ್ತಿ ಬರೆದರು; ಅದನ್ನು ನಾವು ವಿಚಾರಮಾಡದೆ ಒಪ್ಪಿಕೊಂಡೆವು. ವಾಸ್ತವವಾಗಿ ಹಿಂದೂಗಳಲ್ಲಿಯೂ ಮುಸಲ್ಮಾನರಲ್ಲಿಯೂ ರಾಜತ್ವವೆಂಬುದು ಬಹು ನಿರ್ಬಂಧದ ಸಂಸ್ಥೆ. ಪಾಶ್ಚಾತ್ಯ ದೇಶಗಳಲ್ಲಿ ರಾಜರ ದೌಷ್ಟ್ಯವನ್ನಡಗಿಸುವ ಪ್ರಯತ್ನದಲ್ಲಿ ಕೆಲವೆಡೆ ರಾಜತ್ವವನ್ನೇ ನಾಶಗೊಳಿಸಿದರು, ಮತ್ತು ಕೆಲವೆಡೆ ರಾಜರ ಅಧಿಕಾರವನ್ನು ತಗ್ಗಿಸಿದರು. ನಮ್ಮ ದೇಶದಲ್ಲಿಯೂ ಒಂದಾನೊಂದು ಕಾಲದಲ್ಲಿ ದುಷ್ಟರೂ ಸ್ವಾರ್ಥಪರರೂ ಆದ ರಾಜರಿದ್ದರು. ಕೆಲವರು ಪ್ರಜೆಗಳ ಆಗ್ರಹಕ್ಕೆ ಸಿಕ್ಕಿ ದುರ್ಮರಣವನ್ನು ಹೊಂದಿದರು. ಆದರೆ ಪರಿಣಾಮದಲ್ಲಿ ರಾಜರು ಸಮಾಜದ ದಿವ್ಯಸೇವಕರಾದರು. ಶಾಸಕಾಧಿಕಾರವು ಅವರಿಗಿಲ್ಲದಾಯಿತು; ನ್ಯಾಯಾನ್ಯಾಯವನ್ನು ನಿರ್ಣಯಮಾಡತಕ್ಕವರು ವಿದ್ವಾಂಸರಾದರು. ರಾಜರು ಅವರು ಸ್ಥಾಪಿಸಿದ ಧರ್ಮಸೂತ್ರಗಳನ್ನು ಅನುಸರಿಸುವ ಅಧಿಕಾರಿಗಳಾದರು. ಹೀಗಿರುವಲ್ಲಿ ಹಿಂದೂರಾಜರು ಸರ್ವಸ್ವತಂತ್ರರೂ ಅಲ್ಲ, ನಿರಂಕುಶಾಧಿಕಾರಿಗಳೂ ಅಲ್ಲ. ಹಿಂದೂ ಸಮಾಜ ವ್ಯವಸ್ಥೆಯಲ್ಲಿ ರಾಜತ್ವವೆನ್ನುವುದು ದೇವಸ್ಥಾನಕ್ಕೆ ಕಳಶವಿದ್ದಂತೆ ಅಲಂಕಾರ ಸ್ವರೂಪ ಮಾತ್ರ.

ಹಿಂದೂಗಳಲ್ಲಿಯೂ ಮುಸಲ್ಮಾನರಲ್ಲಿಯೂ ದುಷ್ಟ ರಾಜರಿಗೆ ಆಚರಣೆಯಲ್ಲಿರುವ ಶಿಕ್ಷೆ ಏನು? ಅಧಿಕಾರ ಕಡಿಮೆಯಿರಬಹುದು. ಆದರೆ ರಾಜರು ಸುಖಪ್ರಿಯರಾಗಿ ಸ್ವಾರ್ಥಪರಾಯಣರಾದರೆ ಗತಿಯೇನು? ಈ ಪ್ರಶ್ನೆಗೆ ಚರಿತ್ರೆಯೇ ಉತ್ತರಕೊಡುತ್ತದೆ. ದುಷ್ಟ ರಾಜರು ಅರಮನೆಯಲ್ಲಿಯೇ ದುರ್ಮರಣಕ್ಕೆ ತುತ್ತಾಗಿ ಧ್ವಂಸವಾಗಿ ಬಿಟ್ಟಿದ್ದಾರೆ. ಆಡಳಿತದ ಬದಲಾವಣೆಯು ಒಂದು ಪಿತೂರಿಯಿಂದಲೇ ಸಾಧ್ಯವಾಗುತ್ತಿತ್ತು. ಈ ವಿಧವಾದ ವೃತ್ತಾಂತವೇ ನಮ್ಮ ದೇಶದ ಇತ್ತೀಚಿನ ಚರಿತ್ರೆಯಲ್ಲಿ ವಿಶೇಷ. ಆಡಳಿತದ




ಬಂದಿ ಯಾರು?

ಬದಲಾವಣೆಗೆ ದೊಡ್ಡ ರಾಜ್ಯಕ್ರಾಂತಿಯ ಅವಶ್ಯಕತೆಯಿರಲಿಲ್ಲ.

ಸಹಸ್ರಾರು ವರ್ಷಕಾಲ ಭಾರತೀಯ ಸಮಾಜವು ಉಳಿದಿರುವುದೆಲ್ಲಿ? ಭಾರತೀಯ ರಾಷ್ಟ್ರವ್ಯವಸ್ಥೆಯ ಸ್ಥಿರವಾದ, ಅಚಲವಾದ ಲಕ್ಷಣಗಳು ಯಾವುವು? ತಂಡತಂಡವಾಗಿ ಪರದೇಶಿಗರು ದಂಡೆತ್ತಿಬರುತ್ತಿದ್ದು ನೂರಾರು ವರ್ಷಕಾಲ ಪರಕೀಯರ ಆಳ್ವಿಕೆಯಲ್ಲಿದ್ದರೂ ಭಾರತೀಯರು ತಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಂಡಿರುವುದು ಯಾವ ಬಲದಿಂದ? ಇಸ್ಲಾಂಮತವು ಪ್ರಬಲವಾಹಿನಿಯಾಗಿ ಏಷ್ಯಾಖಂಡದ ಪಶ್ಚಿಮಭಾಗವನ್ನೂ, ಆಫ್ರಿಕಾಖಂಡದ ವಿಶೇಷಭಾಗವನ್ನೂ ಸ್ವಲ್ಪ ಕಾಲದಲ್ಲಿಯೇ ಆಕ್ರಮಿಸಿಕೊಂಡು ಅಲ್ಲಿಯ ಪೂರ್ವ ನಾಗರಿಕತೆಗಳನ್ನು ನಾಮಶೇಷವಾಗಿ ಮಾಡಿದರೂ ಹಿಂದೂಸ್ಥಾನದಲ್ಲಿ ಮಾತ್ರ ಅದೇ ವಿಧವಾದ ಜಯವನ್ನು ಪಡೆಯದೆ ಇದ್ದುದು ಏತಕ್ಕೆ? ಪೃಥ್ವಿಯ ಇತರ ಭಾಗಗಳಲ್ಲಿ ಇತಿಹಾಸವು ಮೊದಲಾಗುವದಕ್ಕೆ ಮುಂಚೆಯೇ ನಾಗರಿಕತೆಯನ್ನು ಕಟ್ಟಿದ ಭಾರತೀಯ ಸಮಾಜವು ಇಂದಿನವರೆಗೂ ತನ್ನ ಸ್ಥಿತಿಯನ್ನು ಕಾಪಾಡಿಕೊಂಡಿರುವದರಲ್ಲಿ ಮೂಲ ಬಲವೇನು? ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಒದಗಿಸಿದ ಹೊರತು ಭಾರತೀಯ ಸಮಾಜವ್ಯವಸ್ಥೆಯ ಸ್ಥಿ... ರೂಪವು ನಮಗೆ ಗೋಚರವಾಗುವದಿಲ್ಲ.

ಅಥವಾ ಬೇರೊಂದು ಬಗೆಯಿಂದ ಕಾ... "ರಾಮೋಸ್ವಸ್ತಿ, ರಾವಣೋಸ್ವಸ್ತಿ" ಎಂಬ ಸೂ... ನಮ್ಮಲ್ಲಿ ಪ್ರಸಿದ್ಧ; ಅಂತಹ ಭಾವನೆಯು ಇತ... ಗಳಲ್ಲಿಲ್ಲ. ನಮ್ಮಲ್ಲಿ ಅಂತಹ ಭಾವನೆಯಿದ್ದು... ದಲೇ ಮುಸಲ್ಮಾನರ ಆಧಿಪತ್ಯವನ್ನು ಅಷ್ಟು... ನಾವು ಹೊತ್ತದ್ದು. ಆದರೆ ಅದರ ನಿಜವಾದ... ಕುತ್ಸಿತವಾಗಿ ಯೂರೋಪಿನವರು ಕೆಲವರು ... ವಂತೆ ಭಾರತೀಯರಿಗೆ ರಾಜಕೀಯ ವಿಷಯ... ಪ್ರಜ್ಞೆಯಾಗಲಿ, ಆಸಕ್ತಿಯಾಗಲಿ ಇಲ್ಲವೆಂದಲ್ಲ. ... ವಾಗಿ ಅದರ ಅರ್ಥ ರಾಜನು ರಾಮನಾದರೂ ... ನಾದರೂ ಪ್ರಜೆಗಳ ಧರ್ಮವು ಎಂದಿನಂತೆಯೇ ... ಯುವುದು ಎಂದು. ಗ್ರಾಮಜೀವನವೇ ಪ್ರ... ವಾದ ನಮ್ಮ ದೇಶದಲ್ಲಿ ಪ್ರಭುಗಳಾದವರಿಗೆ ಉದ... ಕೈಗಾರಿಕೆ, ವಾಣಿಜ್ಯ, ಶಿಕ್ಷಣ, ವಿನೋದ ಮು... ವಿಷಯಗಳಲ್ಲಿ ನಿರ್ಬಂಧವಾದ ಕರ್ತವ್ಯವಿಲ್ಲ. ... ಗಳೆಲ್ಲವೂ ಪ್ರಜೆಗಳಿಗೆ ಸೇರಿದ್ದು. ಗ್ರಾಮ... ಯತಿಗಳು, ಕಾರೆಗಾರರ ಮತ್ತು ವ್ಯಾಪಾ... ಶ್ರೇಣಿಗಳು, ಜಾತಿಕೂಟಗಳು ಈ ವಿಷಯಗಳ...





ಸತ್ಯಾಗ್ರಹ ವಿಜಯ

ಸ್ಥೆಯನ್ನು ಹೊತ್ತಿದ್ದವು. ಪ್ರಭುವು ಧರ್ಮಶಾಸ್ತ್ರಕ್ಕನುಸಾರವಾಗಿ ದೇಶದ ರಕ್ಷಣೆಯನ್ನು ಮಾಡುತ್ತಿದ್ದನು. ಧರ್ಮಶಾಸ್ತ್ರವೆನ್ನುವುದೇ ಲೆಜಿಸ್ಲೇಷನ್ ಅಥವಾ ಶಾಸನವಿಧಿ. ಆ ವಿಧಿಯನ್ನು ಬದಲಾಯಿಸಲು ಯಾವ ಪ್ರಭುವಿಗೂ ಅಧಿಕಾರವಿರಲಿಲ್ಲ. ಆದ್ದರಿಂದ ಒಂದುವೇಳೆ ನೀಚನಾದವನು ರಾಜನಾದರೂ ವಿಶೇಷ ತೊಂದರೆಯಾಗುತ್ತಿರಲಿಲ್ಲ. ಸಮಾಜ, ಮತ ಮತ್ತು ಸ್ಥಳೀಯ ಆಡಳಿತಗಳ ಗೋಜಿಗೆ ತುರುಕರೂ ಮುಘಲರೂ ಹೋಗಲಿಲ್ಲವಾದುದರಿಂದ ಅವರ ಆಳ್ವಿಕೆಯು ಅಷ್ಟುಕಾಲ ನಡೆಯಿತು.

ಇಂಗ್ಲೀಷರು ಪ್ರಬಲರಾದಂದಿನಿಂದ ಸರ್ಕಾರವೇ ಸರ್ವತ್ರ ಪ್ರವೇಶಿಸುವ ತತ್ವವು ಆಚರಣೆಗೆ ಬಂದಿತು. ಸ್ಥಳೀಯ ನಿರ್ವಾಹವು ಶಿಥಿಲವಾಯಿತು. ಪ್ರಾಚೀನ ನಾಗರಿಕತೆಯೇ ಬದಲಾವಣೆಗೆ ಮೊದಲಿಟ್ಟಿತು. ಇಷ್ಟಾದರೂ ಕೂಡ ಸತ್ರಗಳನ್ನೂ ದೇವಾಲಯಗಳನ್ನೂ ಕಟ್ಟಿಸುವವರೂ ಕೆರೆ ಭಾವಿಗಳನ್ನು ತೋಡಿಸುವವರೂ ಇಲ್ಲದೆ ಇಲ್ಲ. ಇಂಗ್ಲೀಷರ ರಾಜ್ಯಭಾರವು ವೃದ್ಧಿಯಾಗಿ ಪಾಶ್ಚಾತ್ಯ ಸಮಾಜ ವ್ಯವಸ್ಥೆಯೂ ರಾಜ್ಯತಂತ್ರವೂ ಭಾರತೀಯರಿಗೆ ತಿಳಿಯುತ್ತ ಬಂದಂತೆ ಡೆಮಾಕ್ರೆಸಿಯ ತತ್ವದಲ್ಲಿ ಅಭಿಮಾನವೂ ರಾಷ್ಟ್ರೀಯತೆಯಲ್ಲಿ ಮಮತೆಯೂ ಉಕ್ಕಿದವು. ಪ್ರಜಾಧರ್ಮವೆನ್ನುವುದು ಬದಲಾಯಿಸಬೇಕಾಯಿತು. ಪ್ರತಿಯೊಬ್ಬ ನಿವಾಸಿಯೂ ಯತ್ಕಿಂಚಿತ್ ರಾಜಪುರುಷನಾದಾಗ ಪ್ರತಿಯೊಬ್ಬನಿಗೂ ರಾಜ್ಯಾಂಗ ಪದ್ಧತಿಯ ಪರಿಚಯವೂ, ದೇಶದ ಹಿತಾಹಿತಗಳ ಜ್ಞಾನವೂ, ಸಮಾಜ ವ್ಯವಸ್ಥೆಯ ಮೂಲ ಮಂತ್ರದ ಅರಿವೂ ಅತ್ಯವಶ್ಯವಾಯಿತು.

ಈ ಕಾರಣಗಳಿಂದಲೇ ಈ ಕಾಲವನ್ನು ಕಾಲ ಬದಲಾಯಿಸುವ ಕಾಲವೆಂದು ಕರೆಯುವರು. ಭರತವರ್ಷವು ಕೂಪಮಂಡೂಕದಂತಿರದೆ ಪೃಥ್ವಿಯ ಕೋಲಾಹಲದಲ್ಲಿ ಭಾಗಿಯಾಗಬೇಕು; ಇತರ ದೇಶಗಳೊಡನೆ ಸ್ಪರ್ಧಿಸಬೇಕು. ಸ್ಪರ್ಧೆಯಲ್ಲಿ ಶಿಸ್ತು ಅತಿ ಪ್ರಧಾನವಾದುದು. ಶಿಸ್ತಿನಲ್ಲಿ ಅಧಿಕಾರ ಗುಣಗಳು ವೃದ್ಧಿಯಾಗಬೇಕು. ಆ ಗುಣಗಳು ಅಂಕುರವಾಗುವದು ರಾಷ್ಟ್ರೀಯ ಪ್ರಜೆಯಲ್ಲಿ; ವೃದ್ಧಿಯಾಗುವದು ಅಭ್ಯಾಸಬಲದಿಂದ. ನಂದಕುಮಾರನಂತೆ ನಿಷ್ಠರಾಗಿದ್ದು ದೇಶದ್ರೋಹಮಾಡತಕ್ಕವರಿಗೆ ಇನ್ನುಮುಂದೆ ಆಸ್ಪದವಿರುವದಿಲ್ಲ. ಯುದ್ಧಕಾಲದಲ್ಲಾಗಲಿ ಶಾಂತಿ ಸಮಯದಲ್ಲಾಗಲಿ ತನ್ನ ದೇಶಕ್ಕೂ ಸಮಾಜಕ್ಕೂ ತಕ್ಕಂತೆ ಹೆಮ್ಮೆಯಿಂದಲೂ ಉತ್ಸಾಹದಿಂದಲೂ ವರ್ತಿಸುವಂತೆ ಮಾಡುವ ಧರ್ಮದ ಜ್ಞಾನವು ಬೇಕು. ಪೂರ್ವದ ಪಂಚಯಜ್ಞಗಳನ್ನು ಸ್ವಲ್ಪ ಬದಲಾಯಿಸಿ ಪ್ರತಿ ಭಾರತೀಯನೂ ತನ್ನ ಆತ್ಮ, ತನ್ನ ಕುಟುಂಬ, ತನ್ನ ನೆರೆಹೊರೆಯವರು, ತನ್ನ ದೇಶ ಮತ್ತು ತಾನು ಸೇರಿದ ಮಾನವರಾಶಿಗಳಿಗೆ ತಕ್ಕ ಧರ್ಮವನ್ನು ಪಾಲಿಸಬೇಕು. ರಾಷ್ಟ್ರಭಕ್ತನಾಗಿ ರಾಷ್ಟ್ರದ ಸ್ಥಿತಿಗತಿಗಳ ಅರಿವನ್ನು ಪಡೆದು ತನ್ನ ಅಧಿಕಾರ ಕರ್ತವ್ಯಗಳನ್ನು ನಿರ್ವಹಿಸಿ ಯೋಗ್ಯನೆನಿಸಬೇಕು. ಇದು ಎಲ್ಲರಿಗೂ ಸೇರಿದ ಪೌರಧರ್ಮ, ಸಮಾಜಜೀವನ.



ಗಾಂಧೀಜಿ




ಶ್ರೀಮತಿ ಕಸ್ತೂರಿಬಾಯಿ

# ಭಾರತೀಯರ ಸ್ವಾತಂತ್ರ್ಯ ಸಾಧನೆ

(ಶ್ರೀ ಕೆ. ಸಂಪದ್ಗಿರಿರಾವ್, ಎಂ. ಎ., ದೇಶೀಯ ವಿದ್ಯಾಶಾಲಾ, ಬೆಂಗಳೂರು)

---

ಭಾರತದೇಶದ ಸ್ವಾತಂತ್ರ್ಯವನ್ನು ಸಾಧಿಸಲು ಈಗ ನಡೆಯುತ್ತಿರುವ ಉದ್ಯಮವು ಒಂದು ಅಪೂರ್ವಕಳೆಯಿಂದ ತುಂಬಿರುವುದು. ಎಲ್ಲ ಭಾರತೀಯರಿಗೂ ಸಹ ಅದರ ಮಹತ್ವವೂ, ದಿವ್ಯಭಾವವೂ ಸಂಪೂರ್ಣವಾಗಿ ಮನವರಿಕೆಯಾಗುವುದು ಕಠಿಣ. ಅನ್ಯದೇಶೀಯರಿಗೆ ಇದರ ಸ್ವರೂಪದ ನವ್ಯತೆಯನ್ನು ಕಂಡು ಭ್ರಮೆಯೋ, ಅದ್ಭುತದೃಶ್ಯವೆನ್ನುವ ಭಾವವೋ, ವರ್ಣಿಸಲಾಗದ ಕನಿಕರವೋ, ವಿಸ್ಮಯವೋ ಉಂಟಾಗಿದೆ. ಅನೇಕ ಶತಮಾನಗಳಿಂದ ಭಾರತದೇಶದ ವಿಷಯದಲ್ಲಿ ಪರಕೀಯರಿಗಿದ್ದ ಔದಾಸೀನ್ಯವೂ, ಸ್ವಾರ್ಥದೃಷ್ಟಿಯೂ ದೂರವಾಗಿ ಒಂದು ರೀತಿಯ ಸಹಾನುಭೂತಿಯೂ, ನೈಜವಾದ ಅಂತಃಕರಣವೂ ಇತ್ತೀಚೆಗೆ ತೋರುತ್ತಲಿದೆ.

ಈ ಅಪೂರ್ವ ಉದ್ಯಮವು ಇನ್ನೂ ಸಾಗುತ್ತಿರುವುದರಿಂದ, ಇದರ ಚರಿತ್ರೆಯನ್ನು ಬರೆಯುವ ಸಮಯವು ಇನ್ನೂ ಬಂದೊದಗಿಲ್ಲ. ಆದರೆ ಇದರ ಉತ್ಪತ್ತಿಯನ್ನೂ ಕ್ರಮವಾದ ವಿಕಾಸವನ್ನೂ ಕುರಿತು ನಾವು ಕೊಂಚ ವಿಚಾರಮಾಡಬಹುದು.

## ಬ್ರಿಟಿಷರ ಪ್ರವೇಶ

ಬ್ರಿಟಿಷರು ಹಿಂದೂಸ್ಥಾನಕ್ಕೆ ಬಂದ ಕಾಲದಲ್ಲಿ ದೇಶವು ಪರಸ್ಪರ ಮತ್ಸರವನ್ನು ಸಾಧಿಸುತ್ತಿದ್ದ ರಾಜ-ಉಪರಾಜರ ಅಧೀನದಲ್ಲಿ ವಿಧವಿಧವಾಗಿತ್ತು. ಬ್ರಿಟಿಷರು ತಮ್ಮ ವ್ಯಾಪಾರದ ಸಾಹಸದಲ್ಲಿ ತಮ್ಮ ಕಾರ್ಯಪಟುತ್ವವನ್ನೂ, ಸೈನ್ಯದ ಬಲವನ್ನೂ ಅರಿತಿದ್ದರು. ದೇಶದಲ್ಲಿನ ಪರಿಸ್ಥಿತಿಯನ್ನು ಕಂಡು ನಮ್ಮ ದೇಶೀಯರ ವಿಚಾರದಲ್ಲಿ ಅವರಿಗೆ ತಿರಸ್ಕಾರ ಭಾವವೇ ಹುಟ್ಟಿತು. ಕ್ರಮೇಣ, ಅಂದರೆ ೫೦-೬೦ ವರುಷಗಳಲ್ಲಿ, ಭಾರತದೇಶದ ಬಹುಭಾಗವು ಅವರ ಕೈಸೇರಿತು. ಬ್ರಿಟಿಷ್ ಪಡೆಗಳು ಜಯಹೊಂದಿದಾಗೆಲ್ಲ ಅವರಲ್ಲಿ ಚಕ್ರಾಧಿಪತ್ಯವನ್ನು ಸ್ಥಾಪಿಸ[illegible]

ಕಲ್ಪವು ಇಲ್ಲದಿದ್ದರೂ ಅದು ಕ್ರಮೇಣ ರೂಪುಗೊಂಡಿತು. ಪ್ರಯತ್ನಪೂರ್ವಕವಾಗಿ ಈ ಚಕ್ರಾಧಿಪ[ತ್ಯ]ಯಜ್ಞವನ್ನು ಪೂರ್ತಿಗೊಳಿಸಲು ಸ್ವಲ್ಪ ಆತುರದಿಂ[ದ] ಸಾಹಸಮಾಡಿದವನೆಂದರೆ ಡಾಲ್ಹೌಸಿ. ಪರಕೀಯ ಪರದೇಶದ ಸೈನ್ಯದ ಈ ಪ್ರಚಂಡದರ್ಪವನ್ನು [ಮುರಿ]ಸಲು ೧೮೫೭ರಲ್ಲಿ ಒಂದು ವಿಪ್ಲವವು ಎದ್ದಿತು. [ಅದು] ತೀವ್ರವಾಗಿಯೇ ಮುರಿಯಲ್ಪಟ್ಟು ಹಿಂದೂಸ್ಥಾ[ನವು] ಇಂಗ್ಲೆಂಡಿನ ಚಕ್ರಾಧಿಪತ್ಯಕ್ಕೆ ಅಧೀನವಾಗಿ[ರುವಂತೆ] ಆಯಿತು. ವರ್ತಕಮಂಡಲಿಯ ಮೇಲ್ವಿಚಾ[ರಣೆಗೆ] ಬದಲಾಗಿ, ಇಂಗ್ಲೆಂಡಿನ ರಾಣಿಯೇ ರಾಜ್ಯದ [ಮೇಲ್ವಿ]ಚಾರಣೆ ಮಾಡತಕ್ಕದ್ದೆಂದು ನಿಷ್ಕರ್ಷೆಯಾಯಿತು.

ಆ ಕಾಲದಲ್ಲಿ ಇದೇ ಉತ್ತಮ ವ್ಯವಸ್ಥೆಯ[ಾಗಿ] ತೋರಿತು. ಇಂಗ್ಲೆಂಡಿನ ರಾಜ್ಯಾಂಗ ಪದ್ಧತಿ[ಯಲ್ಲಿ] ಎಲ್ಲರಿಗೂ ಗೌರವವಿತ್ತು. ಇಂಗ್ಲೆಂಡಿನ ಸಾಹಸ[ಕಾರ್ಯ]ಗಳು ವಿಸ್ಮಯವನ್ನುಂಟುಮಾಡಿದ್ದರಿಂದ, ಆ [ದೇಶದ] ವಿಚಾರದಲ್ಲಿ ಒಂದು ರೀತಿಯ ಭಯಭಕ್ತಿಯು [ಉಂಟಾ]ಗಿತ್ತು. ಇದೂ ಅಲ್ಲದೆ ವಿಕ್ಟೋರಿಯಾ [ಮಹಾ]ರಾಣಿಯು ಬಹಳ ಉದಾರ ಭಾವಗಳನ್ನೊಳಗೊಂಡ ಒಂದು ರಾಜಶಾಸನವನ್ನು ಪ್ರಸಿದ್ಧಪಡಿಸಿ [ಹಿಂದೂ]ಸ್ಥಾನದ ಯೋಗಕ್ಷೇಮದಲ್ಲಿಯೂ, ಭಾರತೀ[ಯರ] ಸುಖಶಾಂತಿ ಜೀವನದಲ್ಲಿಯೂ ಪ್ರೀತಿವಿಶ್ವಾಸಗ[ಳನ್ನು] ವ್ಯಕ್ತಪಡಿಸಿದ್ದಳು.

## ಬಾಹ್ಯಜೀವನದ ಆಡಂಬರ

ಅನೇಕ ಆಶ್ರಿತ ಸ್ಥಳೀಯ ರಾಜ್ಯಗಳು, [ಮ]... ಬ್ರಿಟಿಷ್ ಹಿಂದೂಸ್ಥಾನ, ಈ ರೀತಿಯಾದ [ಎರಡು] ವಿಭಾಗವಾಗಿ ಬ್ರಿಟಿಷರ ಆಡಳಿತವು ಬಹಳ [ಬಿಗಿ]ಕಟ್ಟಾಗಿ ವ್ಯವಸ್ಥೆ ಮಾಡಲ್ಪಟ್ಟಿತು. ರೈಲು, ಪೋ[ಸ್ಟ್], ಸೇವಿಂಗ್ಸ್‌ಬ್ಯಾಂಕ್, ರಸ್ತೆಗಳು, ಆಸ್ಪತ್ರೆಗಳು, [ಟೆಲಿಗ್ರಾ]ಫ್‌ವೂ ಈ ವೈಜ್ಞಾನಿಕಯುಗದ ಸರ್ವಸಾಮಾನ್ಯ ಚಿಹ್ನೆಗಳು; ಎಲ್ಲ ದೇಶಗಳಲ್ಲಿಯೂ ಸಿಗುವ ನಾ[...]

ಸಮಾಜದ ಲಕ್ಷಣಗಳು. ಬ್ರಿಟಿಷ್ ಪ್ರಭುತ್ವದ ಪ್ರಸಾದವೆಂದೇ ತೋರಿ, ಈ ಅನುಕೂಲ್ಯಗಳಿಗಾಗಿ ಕೃತಜ್ಞತಾಭಾವಪರಿಪೂರ್ಣರಾದ, ಸರಳಹೃದಯರಾದ ಭಾರತೀಯರಿಗೆ ಬ್ರಿಟಿಷ್ ಪ್ರಭುತ್ವದ ವಿಚಾರದಲ್ಲಿ ಅನನ್ಯ ಭಕ್ತಿಗೌರವಗಳು ಸಿದ್ಧವಾದುವು ಕಳ್ಳ ಕಾಕರ ಕಾಟದಿಂದ ತಪ್ಪಿಸಲು ಸರ್ಕಾರದವರು ತಕ್ಕ ಶಿಸ್ತನ್ನು ಮಾಡಿದುದರಿಂದ ಅನೇಕಕಾಲ ರಾಜ್ಯ ಕ್ರಾಂತಿಯನ್ನು ಅನುಭವಿಸಿದ್ದ ಜನರಿಗೆ ಸುಖಶಾಂತಿಗಳು ನೆಲೆಸಿದಂತೆ ತೋರಿತು. ಮೊನ್ನೆ ಮೊನ್ನೆಯವರೆಗೂ ಸರ್ವಸಾಮಾನ್ಯವಾಗಿ ನಮ್ಮ ಯುವಕರೂ ಹಿರಿಯರೂ, ವಿದ್ಯಾವಂತರೂ, ಪಠ್ಯಪುಸ್ತಕಗಳೂ ಬ್ರಿಟಿಷ್ ಪ್ರಭುತ್ವದ ಗುಣಗಾನ ಮಾಡುವುದರಲ್ಲಿ ಈ ಮೇಲೆ ಹೇಳಿದ ಅಂಶಗಳನ್ನೇ ಎತ್ತಿ, ಒತ್ತಿಹೇಳಿ ಹಾಡುವ ರೂಢಿಯಿತ್ತು.

ಇದೆಲ್ಲವೂ ಬಾಹ್ಯಜೀವನದ ಆಡಂಬರ. ಬ್ರಿಟಿಷ್ ಆಧಿಪತ್ಯದ ಪ್ರಭಾವವು ಇಂಗ್ಲಿಷ್ ಕಲಿತ ವಿದ್ಯಾವಂತರಲ್ಲಿಯೂ, ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೂ ತೋರುತ್ತಿತ್ತು.

## ಜೀವನಾಶ

ಇಂತಹ ಸೂಕ್ಷ್ಮದೃಷ್ಟಿಯಿದ್ದವರಲ್ಲಿ ದಾದಾಭಾಯ್ ನವರೋಜಿಯವರೂ, ರಮೇಶ ಚಂದ್ರದತ್ತರೂ ಪ್ರಮುಖರು. ಇವರಿಬ್ಬರೂ ಸೇರಿ ದೇಶದ ಆರ್ಥಿಕಸ್ಥಿತಿಯನ್ನು ಕೂಲಂಕಷವಾಗಿ ವಿಚಾರಮಾಡಿ ಅನೇಕ ಗ್ರಂಥಗಳನ್ನು ಬರೆದುದು ಮಾತ್ರವಲ್ಲದೆ, ಭಾರತೀಯರಲ್ಲಿಯೂ ಬ್ರಿಟಿಷರಲ್ಲಿಯೂ ಇದರ ತಿಳುವಳಿಕೆಯನ್ನು ಪ್ರಚಾರಮಾಡಲು ಬಹಳ ಪ್ರಯತ್ನಿಸಿದರು. ಇವರ ಶೋಧನೆಗಳ ಪ್ರಕಾರ ದೇಶವು ಆರ್ಥಿಕದೃಷ್ಟಿಯಿಂದ ಕ್ರಮೇಣ ತೀರ ಬಡವಾಗುತ್ತ ಬರುತ್ತಿದ್ದುದು ಗೋಚರವಾಯಿತು. ಇದೇ ಸಿದ್ಧಾಂತವನ್ನೇ ಡಿಗ್ಬೀ ಎಂಬ ಬ್ರಿಟಿಷ್ ಸರಕಾರದ ನೌಕರನೊಬ್ಬನು "ಪ್ರಾಸ್‌ಪರಸ್ ಬ್ರಿಟಿಷ್ ಇಂಡಿಯ" ಎಂಬ ಗ್ರಂಥವನ್ನು ಬರೆದು ಭಾರತದೇಶದ ವಿಷಯದಲ್ಲಿ ತನ್ನ ದೇಶೀಯರಿಗೂ ಕನಿಕರವುಂಟಾಗುವ ಹಾಗೆ ಮಾಡಿ, ದೇಶದ ನಿಜವಾದ ಆರ್ಥಿಕಸ್ಥಿತಿಯನ್ನು ತಿಳಿಸುವ ಸಲುವಾಗಿ ಬಹಳ ಕೆಲಸ ಮಾಡಿದನು. ಈ ಪುಸ್ತಕವನ್ನು ಓದಿದರೆ, ಸುವ್ಯವಸ್ಥಿತವಾದ ಚಕ್ರಾಧಿಪತ್ಯವು ದೇಶದ ಆರ್ಥಿಕಸ್ಥಿತಿಯನ್ನು ಮೆಲ್ಲನೆ ನಾಶಗೊಳಿಸುತ್ತಾ, ಜನರಿಗೇ ಕಾಣದಹಾಗೆ ಅವರ ಆರ್ಥಿಕಜೀವನವು ಕ್ರಮೇಣ ಕ್ಷಯವಾಗಿ, ದೇಶವು ಬಲಹೀನವಾಗಿ, ಈ ಕೇಡನ್ನು ಎದುರಿಸಲೂ ಅಶಕ್ತವಾಗುವ ದುಸ್ಥಿತಿಗೆ ಅವರನ್ನು ಇಳಿಸುವ ವಿಷಯವು ಚೆನ್ನಾಗಿ ಮುಂದಟ್ಟಾಗುವುದು. ಈರೀತಿ ಬ್ರಿಟಿಷ್ ದೇಶದವರೇ ಅವರ ಹುಳುಕುಗಳನ್ನು ಧೈರ್ಯವಾಗಿ ಎತ್ತಿಹಾಕುತ್ತಿದ್ದರೂ, ಭಾರತೀಯರಲ್ಲಿ ಪ್ರಮುಖರಾದವರು ಬ್ರಿಟಿಷರ ಆಡಳಿತದಲ್ಲಿ ಅವರಿಗಿದ್ದ ಒಂದು ಬಗೆಯ ಅಭಿಮಾನದಿಂದ ಹೀಗೆ ನಡೆಯುತ್ತಿದ್ದುದು ಬ್ರಿಟಿಷ್ ಸರಕಾರದ ಸ್ವಭಾವಗುಣವಲ್ಲವೆಂದು ಭಾವಿಸಿ, ಅವುಗಳ ವಿಷಯವಾಗಿ ಬರೆಯುವಾಗಲೂ ಸಹ ಬಹಳ ವಿನಯದಿಂದಲೂ, ಸೌಜನ್ಯದಿಂದಲೂ ಬರೆಯುತ್ತಿದ್ದರು; ಮತ್ತು ಆಡಳಿತದವರಿಗೆ ಈ ದೋಷ ನಿವಾರಣೆಯ ಉಪಾಯಗಳನ್ನು ಸಲಹೆಯ ರೂಪದಲ್ಲಿಯೇ ತೋರಿಸಿಕೊಡುತ್ತಿದ್ದರು. ಇದರ ನಿದರ್ಶನವಾಗಿ ದಾದಾಭಾಯಿನವರೋಜಿಯವರು ತಾವು ಒಂದು ಗ್ರಂಥ ಬರೆದು ದೇಶದಲ್ಲಿನ ದಾರಿದ್ರ್ಯವೂ ಮತ್ತು ಆ ದಾರಿದ್ರ್ಯಕ್ಕೆ ಕಾರಣವಾಗಿದ್ದ ಆಡಳಿತವೂ ಬ್ರಿಟಿಷರಿಗೆ ತಕ್ಕುದಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು.

## ಬ್ರಿಟಿಷ್ ವಾಣಿಜ್ಯತಂತ್ರ

ಆದರೆ ನಿಜವಾಗಿ ವಿಚಾರಮಾಡುವುದಾದರೆ, ಇದು ಈಗಿನ ದೊಡ್ಡ ಯಂತ್ರಗಳ ಸಹಾಯದಿಂದ ನಡೆಸುವ ಕೈಗಾರಿಕೆಗಳಿಗೆ ತಕ್ಕ ವ್ಯಾಪಾರವಾಗಲು ಆಯಾ ದೇಶದ ಆಳರಸರು ತೀರ ಅನಿವಾರ್ಯವಾಗಿ ಮಾಡಬೇಕಾಗಿ ಬರುವ ಕೆಲಸವೆಂದು ವಿಶದವಾಗುತ್ತದೆ ಏಕೆಂದರೆ, ಒಂದು ದೇಶದಲ್ಲಿ ತನಗೆ ಎಷ್ಟು ಅವಶ್ಯಕವೋ ಅದಕ್ಕಿಂತ ಬಹಳ ಹೆಚ್ಚಾಗಿ ಸಾಮಾನುಗಳು ತಯಾರಾಗುವುದರಿಂದ ಅವುಗಳ ವ್ಯಾಪಾರಕ್ಕಾಗಿ ಬೇರೆ ದೇಶಗಳಿಗೆ ಹೋಗಬೇಕಾದ ಅವಶ್ಯಕತೆಯು ಬೀಳುತ್ತದೆ. ಅಂತಹ ಸಮಯಗಳಲ್ಲಿ ಆ ದೇಶದವರು ತಮ್ಮ ಸರಕುಗಳು ಹೆಚ್ಚಾಗಿ ವ್ಯಾಪಾರವಾಗಲು ಇತರ ದೇಶಗಳನ್ನು ಆಕ್ರಮಣಮಾಡುವುದರಲ್ಲಿ ಬಹಳ ನಿಪುಣತೆಯನ್ನು ತೋರಿಸುವರು. ಈಗಿನ ಕಾಲದ ಕೈಗಾರಿಕತೆಯ ನಾಗರೀಕತೆಯ ಮುಖ್ಯ ಲಕ್ಷಣವೇ ಇದು. ಅದೇ ರೀತಿ ಇಂಗ್ಲೆಂಡುದೇಶವು, ತನ್ನ ದೇಶದಲ್ಲಿ ತಯಾರಾಗುವ ಸರಕುಗಳಿಗೆ ಭಾರತದೇಶವು ಒಳ್ಳೆಯ ವ್ಯಾಪಾರಕ್ಷೇತ್ರವಾಗಿರುವುದನ್ನು ಕಂಡು, ಭಾರತದೇಶವನ್ನು ತನಗೆ ಆರ್ಥಿಕತಃ ಅಧೀನವನ್ನಾಗಿ ಮಾಡಿಕೊಂಡಿತು. ಈ ರೀತಿ

ಯಾಗಿ ಬ್ರಿಟಿಷ್ ಸರಕಾರವು ತನ್ನ ವ್ಯಾಪಾರವು ಸುಲಲಿತವಾಗಿಯೂ, ನಿರಾತಂಕವಾಗಿಯೂ ನಡೆಯಲಿಕ್ಕೆ ಬೇಕಾದ ಚತುರವಾದ ಏರ್ಪಾಟುಗಳನ್ನು ಮಾಡಿಕೊಂಡು, ಅದರ ಮೂಲಕ ಇಂಡಿಯಾದೇಶದ ಆರ್ಥಿಕ ಸ್ಥಿತಿಯ ಸೂತ್ರವನ್ನು ತನ್ನ ಕೈಯಲ್ಲಿಯೇ ಹಿಡಿದುಕೊಂಡಿದೆ. ಈ ಉದ್ದೇಶದ ಸಾಧನೆಗಾಗಿ ಬ್ರಿಟಿಷ್ ಸರಕಾರವು ರೈಲ್ವೆ ಮತ್ತು ಹಡಗುಗಳ ದರಗಳ ಅನುಕೂಲ್ಯವನ್ನು ಪಡೆಯುತ್ತದೆ; ಒಂದು ಪೌನಿಗೆ ಇಷ್ಟು ರೂಪಾಯಿಗಳೆಂದು ನಿರ್ಧಾರಮಾಡುವಾಗ ಬ್ರಿಟಿಷ್ ವ್ಯಾಪಾರಿಗಳ ಹಿತವನ್ನೇ ಗಣಿಸುತ್ತದೆ; ಮತ್ತು ಬ್ರಿಟಿಷ್ ಬಂಡವಾಳಗಾರರಿಗೆ ದೇಶದಲ್ಲಿ ಯಥೇಚ್ಛವಾಗಿ ವ್ಯಾಪಾರಕ್ಕೆ ಸಾಕಾದಷ್ಟು ಅವಕಾಶಗಳನ್ನು ಕಲ್ಪಿಸಿಕೊಡುತ್ತದೆ. ಈ ಬಗೆಯ ಅನೇಕ ಕಾರಣಗಳಿಂದ ಬ್ರಿಟಿಷರು ಹಿಂದೂಸ್ಥಾನದಲ್ಲಿ ತಮ್ಮ ಹಿಡಿತವನ್ನು ಬಲವಮಾಡಿಕೊಂಡಿರುವರು—ಮಾಡಿಕೊಳ್ಳುತ್ತಿರುವರು.

## ದರಿದ್ರನಾರಾಯಣನ ಸೇವೆ

ಪ್ರಕೃತಲೋಕದಲ್ಲಿ ಎಲ್ಲೆಲ್ಲಿಯೂ ಕ್ರಾಂತಿಯಿರುವುದಕ್ಕೆ ಆರ್ಥಿಕ ಜೀವನದ ದುಸ್ಸಹವಾದ ಸ್ಥಿತಿಯೇ ಮುಖ್ಯಕಾರಣ. ಪೂರ್ವಕಾಲದಲ್ಲಿ ಸದಾ ಹಿಂದೂಸ್ಥಾನದ ಆರ್ಥಿಕ ಜೀವನವು ಸರ್ವಾಂಗ ಪುಷ್ಟವಾಗಿದ್ದಿತು. ಹೀಗೆ ಇದ್ದುದೇ ಪರದೇಶೀಯರ ಲೋಭಕ್ಕೂ, ಆಗಮನಕ್ಕೂ ಕಾರಣವಾಯಿತು. ಈಗ್ಗೆ ಹಿಂದೂಸ್ಥಾನವು ತೀರ ದಾರಿದ್ರ್ಯದಲ್ಲಿ ಸಿಕ್ಕಿ ಬಿದ್ದಿರುವುದರಿಂದ ಬೇರೆ ಕಾರಣಗಳು ಏನೇ ಇರಲಿ, ದಾದಾಭಾಯಿ ಮುಂತಾದವರು ದೇಶದ ದಾರಿದ್ರ್ಯವನ್ನು ನೀಗುವುದಕ್ಕಾಗಿ ಸ್ವರಾಜ್ಯವು ಬೇಕೆಂದು ಹಂಬಲಿಸಿದರು. ಈಗಲೂ ದರಿದ್ರನಾರಾಯಣನ ಸೇವೆಗೆ ಕಂಕಣಬದ್ಧರಾಗಿರುವ ಮಹಾತ್ಮಾಗಾಂಧಿಯವರೂ ಅದೇ ಮಾತನ್ನೇ ಹೇಳುವರು.

## ರಾಷ್ಟ್ರಮಹಾಸಭೆ

ಇಂತಹ ಸ್ವರಾಜ್ಯವನ್ನು ಸಾಧಿಸಲು ರಾಷ್ಟ್ರಮಹಾಸಭೆಯು ಬಹುಕಾಲದಿಂದ ಪ್ರಯಾಸಪಡುತ್ತಿದೆ. ಇದು ೧೮೮೫ ರಲ್ಲಿ ಸ್ಥಾಪಿತವಾಯಿತು. ದೇಶದ ಅನೇಕ ವಿದ್ಯಾವಂತರು ಇದಕ್ಕೆ ಸೇರಿ, ವರ್ಷಕ್ಕೊಮ್ಮೆ ಸಭೆಗೂಡಿ, ದೇಶದ ಕುಂದುಕೊರತೆಗಳನ್ನು ವಿಚಾರಮಾಡಿ ಸರಕಾರಕ್ಕೆ ಸಲಹೆಗಳನ್ನು ಕೊಡುವುದನ್ನೇ ಮುಖ್ಯ ಕೆಲಸವಾಗಿಟ್ಟುಕೊಂಡಿದ್ದರು. ಆದರೆ ಸ್ವರಾಜ್ಯವೇ ಎಲ್ಲ ಕೊರತೆಗಳನ್ನು ದೂರಮಾಡಲು ತಕ್ಕ ಉಪಾ[...]ವೆನ್ನುವುದು ೧೯೦೬ ರಲ್ಲಿ ದಾದಾಭಾಯಿಯವರ ಸಿದ್ಧಾಂತವಾಯಿತು. ಇದಕ್ಕೆ ಮೊದಲು ಈ ಮಾತ[...] ಹೇಳಲು ಸಹ ಯಾರೂ ಧೈರ್ಯಮಾಡಿರಲಿಲ್ಲ. ಕಲಿಕತ್ತೆಯಲ್ಲಿ ರಾಷ್ಟ್ರಮಹಾಸಭೆಯು ನೆರೆದಿ[...] (೧೯೦೫) ಕರ್ಜನ್ ಪ್ರಭುಗಳ ದರ್ಪವೂ ದೌರ್ಜ[...] ಜನರಲ್ಲಿ ಬಹಳ ಅಸಮಾಧಾನ ಉಂಟುಮಾಡಿ[...] ಬಂಗಾಳವನ್ನು ವಿಭಜನೆ ಮಾಡಿದ್ದರಿಂದ ಆ ದೇ[...] ಕಲ್ಲೋಲವೆದ್ದಿತ್ತು. ಬಂಗಾಳದಲ್ಲಿ ರಾಷ್ಟ್ರಪ್ರೇ[...] ಉಕ್ಕೇರಿ, ಉಗ್ರರೂಪವನ್ನು ತಾಳಿತ್ತು. ಆ[...] ಪರದೇಶೀ ಸಾಮಾನುಗಳ ಬಹಿಷ್ಕಾರ, ಸ್ವದೇಶಿ, [...]ಷ್ಟ್ರೀಯ ಶಿಕ್ಷಣ, ಇವೇ ಮುಂತಾದ ತತ್ವಗಳನ್ನು [...]ರ್ಥನಮಾಡುವ ತೀರ್ಮಾನಗಳಾದವು. ರಾಜ[...]ದಲ್ಲಿ ವೀರಪಕ್ಷದವರ ವರ್ಚಸ್ಸು ಹೆಚ್ಚುತ್ತಿತ್ತು. [...] ರಾಜಕೀಯ ಚಳವಳಿಗೆಲ್ಲ ೧೯೦೫ ರಲ್ಲಿ ನಡೆದ [...] ಮಹಾಸಭೆಯೇ ಅಂಕುರಾರ್ಪಣ ಮಾಡಿತೆಂಬ[...]ನ ಮಾತಲ್ಲ.

## ಮಂದಪಕ್ಷ—ವೀರಪಕ್ಷ

ಇನ್ನು ಮುಂದೆ ರಾಜಕೀಯ ಚಳವಳಿಗಳ[...]ರದಲ್ಲಿ ಎರಡು ಮತಗಳು ಹುಟ್ಟಿದುವು. ಬ್ರಿ[...] ಆಳರಸರ ಮನೋಭೀಷ್ಟವನ್ನರಿತು, ಅವರು [...] ಹಿತವನ್ನೇ ಬಯಸಿ ಯತ್ನಿಸುತ್ತಿರುವರೆಂದು [...]ವಾಗಿ ನಂಬುಗೆಯನ್ನಿಟ್ಟುಕೊಂಡು, ನಮ್ಮ ಕೊ[...]ಳನ್ನು ಅವರ ಮುಂದೆ ಯುಕ್ತವಾದ ರೀತಿಯಲ್ಲಿ [...]ಸುವುದರಿಂದ ಕ್ರಮೇಣ ನಮಗೆ ಸ್ವರಾಜ್ಯವು [...]ವಾಗುವುದೆಂದು ಕೆಲವರು. ಇಂತಹ ವಿನಯದಿಂ[...] ಕಷ್ಟು ಉಪಯೋಗವಿಲ್ಲವೆಂತಲೂ, ನಿರ್ಭೀ[...] ನಮ್ಮ ದೇಶದ ರಾಜ್ಯಸೂತ್ರಗಳನ್ನು ನಾವು [...] ತೀವ್ರ ಪ್ರಯತ್ನಗಳನ್ನು ನಡೆಸಬೇಕೆಂದು [...]ವರು ಮತ್ತೊಂದು ಪಕ್ಷ. ಮೊದಲನೆಯ ವ[...] ಗೋಖಲೆಯವರನ್ನೂ, ಎರಡನೆಯ ವರ್ಗಕ್ಕೆ [...] ಮಾನ್ಯತಿಲಕರನ್ನೂ ನಿದರ್ಶನಪುರುಷರನ್ನಾಗಿ ಭಾವಿಸಬಹುದು.

ತಿಲಕರು ಸ್ವರಾಜ್ಯವನ್ನು ನಾವು ಸಾಧಿಸಲು[...]ರೆಂದು ನಿರೂಪಿಸುವ ಅಗತ್ಯವೇ ಇಲ್ಲವೆಂಬ ಸಿದ್ಧ[...]ವನ್ನು ಹೂಡಿ, ಒಂದು ಅಪೂರ್ವವಾದ ಸ್ವಾ[...]ನೆಯ ಚೈತನ್ಯವನ್ನು ತುಂಬಿದರು. “ಸ್ವರಾ[...]

ನಮ್ಮ ಜನ್ಮಸಿದ್ಧವಾದ ಹಕ್ಕು '' ಅಂದ ಮೇಲೆ, ಇದರ ವಿಚಾರದಲ್ಲಿ ವಿಪುಲವಾದ ಚರ್ಚೆಯನ್ನು ಮಾಡಿ ಹೇಗೆ ನಾವು ಸಮರ್ಥರೆಂದು ಆಳರಸರ ಮನಕ್ಕೆ ಬರುವಂತೆ ತೋರಿಸುವುದೇ ನಿರರ್ಥಕವೆಂಬುದು ಲೋಕಮಾನ್ಯರ ಸಿದ್ಧಾಂತ. ಹೀಗೆಂದ ಮಾತ್ರಕ್ಕೆ ಜನರು ಇದಕ್ಕೆ ಸಿದ್ಧರಾಗಿದ್ದಾರೆಂದು ಹೇಳಲಾಗದು. "ದೇಶದಲ್ಲಿ ಅನೇಕ ಭಾಷೆಗಳು, ಮತಗಳು, ಆಚಾರವಿಚಾರಗಳು ಇವೆ. ಭಾರತೀಯರಲ್ಲಿ ಸಂಘಟನೆಯಿಲ್ಲ. ಕಾರ್ಯನಿರ್ವಹಣ ಶಕ್ತಿಯಿಲ್ಲ. ಸಿದ್ಧತೆಯನ್ನು ಹೊಂದಬೇಕು. ಅನಂತರ ಸ್ವರಾಜ್ಯವನ್ನು ಆಶಿಸಬಹುದು'' ಎನ್ನುವುದೇ ಸರಕಾರದವರ ವಾದ.

## ಮಾಂಟೆಗ್ಯೂ ಸುಧಾರಣೆ

೧೯೧೪ ರಲ್ಲಿ ಯೂರೋಪಿನಲ್ಲಿ ಘೋರ ಯುದ್ಧವು ಪ್ರಾರಂಭವಾಯಿತು. ಆ ಸಮಯದಲ್ಲಿ ಆಳರಸರ ಮೆಚ್ಚುಗೆಯನ್ನು ಪಡೆಯುವಷ್ಟು ಸಹಾಯವನ್ನೂ, ಸಹಾನುಭೂತಿಯನ್ನೂ ಹಿಂದೂಸ್ಥಾನವು ಒದಗಿಸಿತು. ಆರುವರ್ಷ ಕಾರಾಗೃಹವಾಸದಲ್ಲಿದ್ದು ಆಗ ತಾನೆ ತಿಲಕರು ಹಿಂದಿರುಗಿದ್ದರು. ಆನಿಬೇಸಂಟಮ್ಮನವರು ತಮ್ಮ ಅಮೋಘವಾದ ವಾಣಿಯನ್ನೂ, ಅದ್ವಿತೀಯವಾದ ರಚನಾ ಶಕ್ತಿಯನ್ನೂ ದೇಶದ ರಾಜಕಾರಣಕ್ಕಾಗಿ ವಿನಿಯೋಗಿಸಿ ಜನಜಾಗೃತಿಯನ್ನುಂಟುಮಾಡಿದರು. ಬ್ರಿಟಿಷ್ ಮಂತ್ರಿವರ್ಯರೂ ಆಶಾಜನಕವಾದ ಮಾತುಗಳನ್ನಾಡಿದ್ದರಿಂದ, ಯುದ್ಧವು ಮುಗಿದನಂತರ ಸ್ವರಾಜ್ಯವು ಪ್ರಾಪ್ತವಾಗುವುದೆಂಬ ಲವಲವಿಕೆಯು ಎಲ್ಲೆಲ್ಲಿಯೂ ಹಬ್ಬಿ, ದೇಶದ ಮುಖಂಡರೆಲ್ಲರೂ ಒಟ್ಟುಗೂಡಿ ಸ್ವರಾಜ್ಯರಚನೆಯನ್ನು ನಿಷ್ಕರ್ಷಿಸುವುದರಲ್ಲಿ ನಿರತರಾದರು. ಎಲ್ಲ ರಾಜಕೀಯ ಪಂಗಡವರೂ ಈ ಕೆಲಸಕ್ಕೆ ಸೇರಿದರು. ೧೯೦೬ ರಲ್ಲಿ ಸ್ಥಾಪಿತವಾಗಿ ಇದುವರೆಗೂ ಭಿನ್ನವಾಗಿಯೇ ಇದ್ದ ಮುಸ್ಲಿಮ್ (ಲೀಗ್) ಸಭೆಯವರೂ, ರಾಷ್ಟ್ರಮಹಾಸಭೆಯವರೊಂದಿಗೆ ಸಹಕರಿಸಿದರು. ಇದರ ಫಲರೂಪವಾಗಿ ೧೯೧೯ ರಲ್ಲಿ ಹೊಸ ರಾಜ್ಯಶಾಸನವು ಆಚರಣೆಗೆ ಬಂತು.

## ತಿರಸ್ಕಾರದ ಪರಮಾವಧಿ

ಆದರೆ ಅನೇಕ ಕಾರಣಗಳಿಂದ ಇದು ದೇಶದ ವೀರಪಕ್ಷದವರಿಗೆ ಸಮರ್ಪಕವಾಗಿ ತೋರಲಿಲ್ಲ. ಭಾರತೀಯರಲ್ಲಿ ಬಹಳ ಅಸಮಾಧಾನವುಂಟಾಗಿದ್ದಿತು. ಭಾರತೀಯರ ಆತ್ಮಗೌರವವನ್ನು ಬ್ರಿಟಿಷರು ಸ್ವಲ್ಪವೂ ಲಕ್ಷ್ಯದಲ್ಲಿಡುವುದಿಲ್ಲವೆಂದು ದೇಶದ ಮುಖಂಡರಿಗೆ ನಿಸ್ಸಂಶಯವಾಗಿ ಗೋಚರವಾಗುತ್ತಿತ್ತು. ಹಿಂದುಸ್ಥಾನದ ಜನರು ಅನ್ಯದೇಶಗಳಲ್ಲಿ ಬ್ರಿಟಿಷ್ ಅಥವಾ ಅವರ ಬಂಧುವರ್ಗದವರ ದಬ್ಬಾಳಿಕೆಗೆ ಗುರಿಯಾಗುವುದು ದಕ್ಷಿಣ ಆಫ್ರಿಕಾ, ಫಿಜಿ, ಮಲೆಯಾ, ಕಾನಡಾ ಮುಂತಾದ ಪ್ರದೇಶಗಳಿಂದ ಬರುವ ವರ್ತಮಾನಗಳಿಂದ ವೇದ್ಯವಾಗುತ್ತಿತ್ತು. ನಮ್ಮ ದೇಶದಲ್ಲಿಯೇ ರೈಲುಗಾಡಿಗಳಲ್ಲಿಯೂ, ಬ್ರಿಟಿಷರು ಬೇಸಾಯಮಾಡುವ ತೋಟಗಳಲ್ಲಿಯೂ, ಕೋರ್ಟು ಕಛೇರಿಗಳಲ್ಲಿನ ತೀರ್ಪುಗಳಲ್ಲಿಯೂ, ಭಾರತೀಯರೆಂದರೆ ಆಳರಸರಿಗೆ ಇರುವ ತಿರಸ್ಕಾರ ಬುದ್ಧಿಯು ಅನೇಕ ನಿದರ್ಶನಗಳಿಂದ ಗೋಚರವಾಗಿ, ಜನರಲ್ಲಿದ್ದ ಶಾಂತಿಸಮಾಧಾನವನ್ನೂ, ಬ್ರಿಟಿಷರ ವಿಷಯದಲ್ಲಿದ್ದ ಭಕ್ತಿಯನ್ನೂ ಮುರಿಯುವಂತಿದ್ದವು. ಈ ಸಮಯಕ್ಕೆ ಐರೋಪ್ಯ ಯುದ್ಧವು ಮುಗಿದು ಸಂಧಿಯಾಗಿತ್ತು. ಆದರೆ ತುರ್ಕೀದೇಶಕ್ಕೆ ಐರೋಪ್ಯದೇಶದವರು ಮಾಡಿದ ಅಪಮಾನವನ್ನು ತುರ್ಕಿಯ ವೀರನಾಯಕನಾದ ಕೆಮಾಲ್‌ಪಾಷಾ ತನ್ನ ದೇಶದ ಯಶಸ್ಸನ್ನು ಉಳಿಸಲು ಮಾಡಿದ ಸಾಹಸವನ್ನು ಕೇಳಿ ಪೌರ್ವಾತ್ಯಜನಾಂಗಗಳಿಗೆ, ಹಿಂದೆ ಜಪಾನದೇಶದವರು ರಷ್ಯಾದೇಶದವರ ಧಾಳಿಯನ್ನು ಮುರಿದಾಗ ಎಷ್ಟು ಹರ್ಷವುಂಟಾಗಿತ್ತೋ ಅದಕ್ಕಿಂತಲೂ ಇಮ್ಮಡಿಯಾಗಿ ಉಂಟಾಯಿತು. ವಿಶೇಷವಾಗಿ ಹಿಂದೂಸ್ಥಾನದ ಮುಸಲ್ಮಾನರಿಗೆ ಬ್ರಿಟಿಷರಲ್ಲಿ ಬಹಳ ಅಸಮಾಧಾನತೋರಿ, ಅದು ರೋಷಾವೇಶದಲ್ಲಿ ಪರಿಣಮಿಸಿತು. ಇದೇ ಸಮಯದಲ್ಲಿ ದೇಶದ ಯುವಕರು ಗುಪ್ತಸಭೆಗಳನ್ನು ಮಾಡಿಕೊಂಡು ಗುಂಡು ಮದ್ದುಗಳನ್ನು ಶೇಖರಿಸಿ, ರಾಜದ್ರೋಹವನ್ನು ಬಯಸಿ, ಭಯಾನಕರೀತಿಯಲ್ಲಿ ಕ್ರಾಂತಿಕರವಾದ ಉದ್ಯಮಗಳನ್ನು ಮಾಡುತ್ತಿರುವರೆಂದು ಸರಕಾರದವರಿಗೆ ತೋರಿದುದರಿಂದ ಇಂತಹ ಉದ್ಯಮಗಳನ್ನು ನಿರ್ಮೂಲಮಾಡಲು ತಕ್ಕ ಶಾಸನಗಳನ್ನು ವಿಧಿಸಲು ಒಂದು ಸಮಿತಿಯನ್ನು ಏರ್ಪಾಟು ಮಾಡಿದರು. ಈ ರೌಲೆಟ್ ಸಮಿತಿಯ ವರದಿಯನ್ನು ಸರಕಾರದವರು ಸ್ವೀಕರಿಸಿ ಅದಕ್ಕನುಗುಣವಾಗಿ ಕಾನೂನನ್ನು ಮಾಡಲುಪಕ್ರಮಿಸಿದಾಗ ಶಾಸನಸಭೆಯಲ್ಲೂ ಇಡೀ ದೇಶದಲ್ಲೂ ಪ್ರಚಂಡವಾದ ಚಳವಳಿಯುಂಟಾಗಿ ಗಾಂಧೀಜಿಯವರು ಮೊದಲು ಮಾಡಿದ ಸತ್ಯಾಗ್ರಹಕ್ಕೆ ಕಾರಣವಾಯಿತು. ಹರತಾಳಗಳ ಆಚರಣೆಯನ್ನು ಈ ಕಾಲದಲ್ಲೇ ಭಾರತೀಯರು ಮೊದಲು ಮಾಡಿದರು.

ಪಂಜಾಬ ಸರಕಾರದವರು ಈ ಸತ್ಯಾಗ್ರಹವನ್ನು ಹೀಯಾಳಿಸಿ ಅಮೃತಸರದಲ್ಲಿ ಸಭೆಸೇರಿದ್ದ ಜನರನ್ನು ಘೋರವಾದ ರೀತಿಯಲ್ಲಿ ಕೊಲೆಗೆ ಗುರಿಮಾಡಿದುದೇ ಜನರ ವಿಷಯದಲ್ಲಿ ಸರಕಾರಕ್ಕಿದ್ದ ತಿರಸ್ಕಾರ ಭಾವದ ಪರಮಾವಧಿಯೆನ್ನಬಹುದು.

## ಅಸಹಕಾರ

೧೯೧೯ ರಲ್ಲಿ ಅಮೃತಸರದಲ್ಲೇ ಪಂಡಿತ ಮೋತೀಲಾಲ್ ನೆಹರು ಅವರ ಅಧ್ಯಕ್ಷತೆಯಲ್ಲಿ ನಡೆದ ರಾಷ್ಟ್ರ ಮಹಾಸಭೆಯಲ್ಲಿ· ಹಿಂದೂಸ್ಥಾನಕ್ಕೆ ಬ್ರಿಟಿಷ್ ಪಾರ್ಲಿಮೆಂಟಿನವರು ದಯಪಾಲಿಸಿದ್ದ ಹೊಸ ಸುಧಾರಣೆಗಳು ಸಾಲದೆಂದೂ, "ಅತೃಪ್ತಿಕರವೆಂದೂ, ನಿರಾಶಾಜನಕವೆಂದೂ" ತೀರ್ಮಾನಮಾಡಿದುದೇನೂ ಆಶ್ಚರ್ಯವಲ್ಲ· ಆದರೆ ಚಿತ್ತರಂಜನದಾಸ, ತಿಲಕ್ ಮುಂತಾದವರು ಈ ಪೀರಪಕ್ಷವನ್ನು ವಹಿಸಿದಾಗ್ಗೂ, ಮಹಾತ್ಮ ಗಾಂಧಿಯವರು ಬ್ರಿಟಿಷರ ನ್ಯಾಯಬುದ್ಧಿಯಲ್ಲಿ ತಮಗಿದ್ದ ನಂಬುಗೆಯನ್ನು ತ್ಯಜಿಸಲಿಲ್ಲ. ಆದರೆ ಅಮೃತಸರದ ರಾಕ್ಷಸೀಕೃತ್ಯಗಳ ವೃತ್ತಾಂತವು ಹೊರಬಿದ್ದುವು. ಸರಕಾರದಿಂದ ನೇಮಿಸಲ್ಪಟ್ಟ ವಿಚಾರಣಾಸಮಿತಿಯು ವರದಿಯು ತಡವಾಗಿ ಪ್ರಕಟವಾದುದಲ್ಲದೆ ಪಾರ್ಲಿಮೆಂಟಿನಲ್ಲಿ ಅದರ ಮೇಲಿನ ಚರ್ಚೆಗಳು ಆಳರಸರ ಅಂತರಂಗವನ್ನು ತೋರಿಸಿ ನಿರಾಶೆಯನ್ನುಂಟುಮಾಡಿದುವು. ೧೯೨೦ ರಲ್ಲಿ ಮಹಾತ್ಮಾಗಾಂಧಿಯವರು 'ಅಸಹಕಾರ' ಚಳವಳಿಯನ್ನು ಪ್ರಾರಂಭಮಾಡಿದರು. ಅಂದಿನಿಂದ ಇದುವರೆಗೂ ಈ ಚಳವಳಿಯ ಪ್ರಭಾವವೇ ಗೋಚರವಾಗಿಯೂ, ಅಗೋಚರವಾಗಿಯೂ ಎಲ್ಲೆಲ್ಲೂ ಆವರಿಸಿದೆ.

ಅಸಹಕಾರ ತತ್ವದ ವಿಚಾರವಾಗಿ ಈ ಕಾಲದಲ್ಲಿ ಹೆಚ್ಚು ಬರೆಯುವ ಅಗತ್ಯವಿಲ್ಲ. ಆದರೆ ಈ ಹತ್ತು ವರ್ಷಗಳಲ್ಲಿ ಈ ಮಾರ್ಗದ ಅವಲಂಬನೆಯಿಂದ ದೇಶದಲ್ಲಿ ಉದ್ಭವಿಸಿರುವ ನವಚೈತನ್ಯವೂ, ಜನಜೀವನದಲ್ಲಿ ಕಂಡುಬರುವ ಅದ್ಭುತವಾದ ಪರಿವರ್ತನೆಯೂ ಗಾಂಧಿಯವರ ಅಸದೃಶವಾದ ಶಕ್ತಿಗೂ, ತಪೋಬಲಕ್ಕೂ ಸಾಕ್ಷಿಯಾಗಿವೆ. ಜನರಲ್ಲಿ ಅಂತರ್ಗತವಾದ ಶಕ್ತಿಯು ಸಾತ್ವಿಕರೀತಿಯಲ್ಲಿ ಪರಿಣಾಮಗೊಂಡು ದೇಶದಲ್ಲಿ ನೂರಾರು ವರ್ಷಗಳಿಂದ ಕಳೆಗುಂದಿದ್ದ ಯಶಸ್ಸು, ಸಾಮರ್ಥ್ಯ, ಕಾರ್ಯಸಾಹಸ ಇವುಗಳು ಮತ್ತೆ ನವತೇಜಸ್ಸಿನಿಂದ ಬೆಳಗುತ್ತಲಿವೆ.

## ಜನಪದ ಶಕ್ತಿ ಸಂಚಯನ

ಸ್ವರಾಜ್ಯವು ಜನ್ಮಸಿದ್ಧವಾದ ಹಕ್ಕು ಹೌ... ವ್ಮಲ್ಲಿ ಅನೇಕ ಕುಂದುಕೊರತೆಗಳಿರುವುದೂ ನಿ... ಪೂರ್ವಾಪರಪಕ್ಷಗಳನ್ನು ನಮ್ಮ ದೇಶದ ಹಿಂದಿನ... ಖಂಡರೂ, ಸರಕಾರದವರೂ, ಕ್ರಮವಾಗಿ ವ... ನಾದ್ಯಂತವಾದ ಚರ್ಚೆಗಳಲ್ಲಿಯೂ, ಅವಿಶ್ರಾಂತ... ಬೇಡಿಕೆಗಳಲ್ಲಿಯೂ, ಅಲ್ಪಸ್ವಲ್ಪ ರಾಜಕೀಯ... ರಣೆಗಳಲ್ಲಿಯೂ ಕೊನೆಗಾಣಿಸಿದರು. ಆದರೆ ... ಯವರು ಎರಡುಪಕ್ಷಗಳ ಮತವನ್ನೂ ಸಮ... ಮಾಡುವ ರೀತಿಯಲ್ಲಿ ರಾಷ್ಟ್ರನಿರ್ಮಾಣಕಾರ್ಯ... ದು ಜನತೆಯ ಕರ್ತವ್ಯವನ್ನು ಸೂಚಿಸಿ ಜನರ... ಗೌರವವನ್ನೂ, ಶಕ್ತಿಯನ್ನೂ ಬಲಪಡಿಸುವ ಮ... ವನ್ನು ತೋರಿಸಿಕೊಟ್ಟಿರುವರು. ಸರಕಾರವು ... ಹೇಳಿಕೆಯನ್ನು ಲಾಲಿಸದಿದ್ದರೆ, ಪ್ರಾರ್ಥನೆಗಳು ... ಲವಾದಾಗ ತಮ್ಮ ಸಂಘಟಿತ ಶಕ್ತಿಯಿಂದ ಶಾಂ... ಯಲ್ಲಿ ಸರಕಾರವನ್ನು ಬಗ್ಗಿಸಬೇಕೆಂಬುದೇ ಅಸ... ರದ ಗುರಿ, ಈ ತತ್ವವನ್ನು ಭಾರತೀಯರ ... ೧೯೨೧ ರಲ್ಲಿ ಪ್ರಚಾರಮಾಡಿದಾಗ ಜನರ ಉತ್ಸಾ... ಯಾವರೀತಿಯಿಂದ ಉಕ್ಕಿಬಂತೆಂಬುದು ಚಿರಸ್ಮ... ಯವಾದ ವಿಷಯ. ದೇಶದಲ್ಲಿ ಜನರು ಮಾಡಿದ ... ರ್ಥತ್ಯಾಗವೂ, ತೋರಿಸಿದ ನಿರ್ಭಯವೂ ಸರಕಾ... ರನ್ನು ಬೆಚ್ಚಿಬೀಳುವಂತೆ ಮಾಡಿದುವು. ಸರ... ಶಾಸನ ಸಭೆಗಳಿಗೂ, ಕೋರ್ಟುಗಳಿಗೂ, ಶಾಲೆಗ... ಬಹಿಷ್ಕಾರ ಹಾಕಿ, ಇವಕ್ಕೆ ಬದಲಾಗಿ ನಮ್ಮ ... ಏರ್ಪಾಡುಗಳನ್ನೇ ಮಾಡಬೇಕೆಂಬ ತೀರ್ಮಾನವಾ... ತು. ದೇಶದ ಸುಸಂಘಟನಕ್ಕಾಗಿ ಹಿಂದು ಮುಸಲ... ಮುಂತಾದ ಸಂಗಡಗಳ ಐಕ್ಯತೆಯೂ, ಅಸ್ಪೃಶ್ಯ... ನಿವಾರಣೆಯೂ, ಆರ್ಥಿಕಜೀವನದ ಸುಧಾರಣೆ... ಮದ್ಯಪಾನ ನಿಷೇಧವೂ, ಖದ್ದರ್ ಮತ್ತು ಚರ... ಚಾರವೂ ರಾಷ್ಟ್ರರಚನೆಯ ಕ್ರಮಗಳೆಂದು ಗಾಂಧಿ... ವರು ಬೋಧಿಸಿದರು. ರಾಷ್ಟ್ರಸಭೆಯೂ ಹೊಸ ... ಹೊಂದಿ, ಭಾಷಾನುಸಾರ ಪ್ರಾಂತಗಳು ವಿಂಗಡಿ... ಟ್ಟು, ಪ್ರತಿನಿಧಿಗಳನ್ನು ಕ್ಲಪ್ತರೀತಿಯಲ್ಲಿ ಚುನಾ... ಸುವಂತೆಯೂ, ವ್ಯವಸ್ಥಿತವಾಗಿಯೂ ನಿಷ್ಕರ್ಷಿತವಾ... ರೀತಿಯಲ್ಲಿಯೂ ರಾಷ್ಟ್ರಕಾರ್ಯವು ಎಲ್ಲ ಕಡೆಯ... ನಡೆಯುಂತೆಯೂ ಏರ್ಪಾಡಾಯಿತು. ಇನ್ನು ಮ... ರಾಷ್ಟ್ರಸಭೆಯು ಚರ್ಚೆಯ ಸಭೆ ಮಾತ್ರವಾಗಿ... ಎಲ್ಲರ ಆದರಕ್ಕೆ ಪಾತ್ರವಾಗಿ, ರಾಷ್ಟ್ರನಿರ್ಮಾಣ...

ಕ್ಕೆಂದು ಹೊರಟು, ಜನತೆಯ ಶಕ್ತಿಸಂಚಯನದ ಕಡೆ ಲಕ್ಷ್ಯವನ್ನಿಟ್ಟಿತು. ಈ ಕಾರ್ಯಗಳನ್ನು ಸಾಧಿಸುವುದರಲ್ಲಿ ಸರಕಾರದವರು ಅನೇಕ ನಿರ್ಬಂಧಗಳನ್ನು ತಂದೊಡ್ಡಿದರೂ, ದೇಶಸೇವಕರು ಹಿಂಜರಿಯದೆ ಕಾರಾಗೃಹವಾಸಕ್ಕೆ ಸಿದ್ಧರಾದರು. ಆಗಿನ ಚಳವಳಿಯಲ್ಲಿ ಸುಮಾರು ೪೦,೦೦೦ ಜನರು ಈ ರೀತಿ ಶಿಕ್ಷೆಗೆ ಗುರಿಯಾದರು. ಕ್ರಮೇಣ ತೆರಿಗೆಯನ್ನು ಕೊಡುವುದಿಲ್ಲವೆನ್ನುವಷ್ಟು ಧೈರ್ಯವೂ, ಐಕಮತ್ಯವೂ, ಅದರಿಂದಾಗ ಬಹುದಾದ ಕಷ್ಟನಷ್ಟಗಳನ್ನು ತಡೆಯುವಷ್ಟು ಸ್ಥೈರ್ಯವೂ, ಶಾಂತಬುದ್ಧಿಯೂ, ವೀರತ್ಯಾಗವೂ ಹುಟ್ಟುವಂತೆ ಕೆಲವು ಪ್ರದೇಶಗಳನ್ನು ಸಿದ್ಧ ಮಾಡುವ ಸಂಕಲ್ಪವು ಗಾಂಧಿಯವರಿಗಿತ್ತು. ಇದರ ಮೂಲಕ ಸರಕಾರದವರು ಬಗ್ಗಿ, ಜನರ ಅಭೀಷ್ಟಗಳನ್ನು ನೆರವೇರಿಸಿ, ಸ್ವರಾಜ್ಯವು ಒಂದು ವರ್ಷದಲ್ಲೇ ಪ್ರಾಪ್ತವಾಗಬಹುದೆಂದು ಗಾಂಧಿಯವರು ದೃಢವಾಗಿ ನಂಬಿದ್ದರು.

## ದೂರದೃಷ್ಟಿಯಿಲ್ಲ

ಈ ಪ್ರಚಂಡವಾದ ಆಂದೋಳನವನ್ನು ಕಂಡು ಸರಕಾರದವರಿಗೆ ವಿಸ್ಮಯವಾಗಿ, ಅದನ್ನು ಹೀಯಾಳಿಸಲಾರಂಭಿಸಿದರು. ಬ್ರಿಟಿಷ್ ಆಡಳಿತದ ವಿಚಾರದಲ್ಲಿ ಜನಸಾಮಾನ್ಯದಲ್ಲಿ ಬೆಳೆಯುತ್ತಿರುವ ಅವಿಶ್ವಾಸವನ್ನು ಕಂಡು ಸರಕಾರದವರಿಗೆ ಚಿಂತೆ ಹಿಡಿಯಿತು. ಈ ಚಳವಳಿಯನ್ನು ನಿಲ್ಲಿಸುವುದಕ್ಕೆ ಎಲ್ಲ ಉಪಾಯಗಳನ್ನು ಮಾಡಿದರು. ದೇಶದ ಕೆಲವು ಸ್ಥಳಗಳಲ್ಲಿ ನಡೆದ ಜನರ ಅತ್ಯಾಚಾರವನ್ನೂ, ಕ್ರೌರ್ಯವನ್ನೂ ಕಂಡು ಎದೆಗುಂದಿ ಬರ್ದೋಲಿಯಲ್ಲಿ ನಡೆಯುತ್ತಿದ್ದ ಉದ್ಯಮವನ್ನೂ ನಿಲ್ಲಿಸಿದ ಗಾಂಧಿಯವರನ್ನೇ ಹಿಡಿದು ಆರು ವರ್ಷ ಶಿಕ್ಷೆಗೆ ಗುರಿಮಾಡಿ ಎಲ್ಲವೂ ಸಮಾಪ್ತವಾಯಿತೆಂದು ಸಮಾಧಾನಗೊಂಡರು. ಲೌಕಿಕಜ್ಞಾನವಿಲ್ಲದ ಕೇವಲ ಫಕೀರನ ಹುಚ್ಚುಮಾತನ್ನು ಕೇಳಿ ಮರುಳು ಹೋಗುತ್ತಿದ್ದ ಭಾರತೀಯರು ಹತೋಟಿಗೆ ಬಂದರೆಂದು ಸಂತೋಷಪಟ್ಟರು.

## ಸ್ವರಾಜ್ಯಪಕ್ಷ—ರಚನಾಕಾರ್ಯಕ್ರಮ

ಗಾಂಧಿಯವರಿಗೆ ಸೆರೆವಾಸಯವಾಸ ಪ್ರಾಪ್ತವಾದ ಮೇಲೆ ದೇಶದಲ್ಲಿಯೂ ಒಂದು ರೀತಿಯ ಆಲಸ್ಯ, ನಿರಾಶೆ, ಅಂತಃಕಲಹಗಳು ತಲೆದೋರಿದುವು. ಬಿರುಗಾಳಿಯಂತೆ ಬಂದ ಉತ್ಸುಕತೆಯು ಸ್ಥಿರವಾಗಿ ನಿಲ್ಲಲಿಲ್ಲ. ಹುಚ್ಚುಹೊಳೆಯ ಪ್ರವಾಹದಂತೆ ಜನರ ಉತ್ಸಾಹವು ಕಾಡುಬೀಡುಗಳನ್ನು ತೋಯಿಸಿ ಭೂಮಿಯನ್ನು ಮೃದುವಾಗಿ ಮಾಡಿದ್ದಾಗ್ಯೂ, ಸಾಕಷ್ಟು ಶಿಸ್ತು ಮತ್ತು ವ್ಯವಸ್ಥೆಯಿಲ್ಲದೆ ಇದ್ದುದರಿಂದ ಗೋಚರವಾದ ರೀತಿಯಲ್ಲಿ ಫಲಕಾರಿಯಾಗಿರಲಿಲ್ಲ. ಶಾಸನಸಭೆಗಳನ್ನು ತ್ಯಜಿಸಿದುದು ತಪ್ಪೆಂದು ಕೆಲವರಿಗೆ ತೋರಿತು. ರಾಷ್ಟ್ರಸಭೆಯಲ್ಲಿ ಎರಡು ಪಕ್ಷಗಳಾಗಿ ಕೆಲವರು ಪಂಡಿತ ಮೋತೀಲಾಲ್‌ನೆಹರು, ಚಿತ್ತರಂಜನದಾಸರ ನೇತೃತ್ವದಲ್ಲಿ, ಶಾಸನಸಭೆಗಳನ್ನು ಪ್ರವೇಶಮಾಡಿ ಅವು ಟೊಳ್ಳೆನ್ನುವುದನ್ನು ಲೋಕಕ್ಕೆ ಎತ್ತಿತೋರಿಸಬೇಕೆಂದು ಪ್ರಯತ್ನಮಾಡಿದರು. ೧೯೨೪ರಲ್ಲಿ ಗಾಂಧಿಯವರಿಗೆ ಅನಾರೋಗ್ಯದ ನಿಮಿತ್ತದಿಂದ ಬಿಡುಗಡೆಯಾಯಿತು. ಆಗ ಅವರು ನೆಹ್ರುದಾಸ್ ಮುಂತಾದ ಸ್ವರಾಜ್ಯಪಕ್ಷದವರೊಡನೆ ಮನಸ್ತಾಪವನ್ನು ಬೆಳೆಸುವುದರಿಂದ ದೇಶಕ್ಕೆ ಕೇಡಾಗುವುದೆಂದು ಎಣಿಸಿ, ಅವರಿಗೆ ಬೇಕಾದ ಸಹಾನುಭೂತಿಯನ್ನು ನೀಡಿ, ಹಿಂದಿನ ಅಸಹಕಾರತತ್ವದಲ್ಲಿ ತೋರಿಸಿದ ಪೂರ್ಣಶ್ರದ್ಧೆಯನ್ನೇ ತನ್ನ ಅನುಯಾಯಿಗಳು ರಚನಾಕ್ರಮದ ಕಾರ್ಯಗಳಲ್ಲಿ ತೋರಿಸಬೇಕೆಂದು ಬೋಧಿಸಿ, ಕೇವಲ ಖಾದೀಪ್ರಚಾರಕ್ಕೆಂದು ಒಂದು ಸಮಿತಿಯನ್ನು ಏರ್ಪಾಟುಮಾಡಿ, ಇದರ ಕಾರ್ಯಭಾರವನ್ನೂ ಅವರೇ ವಹಿಸಿ ದೇಶದಲ್ಲಿ ಖಾದಿಯ ಉಪಯೋಗದ ಸಲುವಾಗಿಯೂ ಮದ್ಯಪಾನನಿಷೇಧ, ಅಸ್ಪೃಶ್ಯತಾನಿವಾರಣೆ ಮುಂತಾದ ವಿಷಯಗಳಲ್ಲಿಯೂ ಲೇಖನಗಳನ್ನೂ ವ್ಯಾಖ್ಯಾನಗಳನ್ನೂ ಮಾಡುತ್ತ, ರಾಜಕೀಯ ವಿಷಯಗಳಿಂದ ನಿವೃತ್ತಿಹೊಂದಿದವರಂತೆಯೇ ವರ್ತಿಸಿದರು. ಕೇವಲ ನೈತಿಕಮಾರ್ಗವನ್ನೇ ಬೋಧಿಸುವ ಈ ಸತ್ಪುರುಷನ ವಿಚಾರದಲ್ಲಿ ಸರಕಾರಕ್ಕಿದ್ದ ಸಂಶಯವೂ ಭಯವೂ ದೂರವಾಗಿ ಈತನ ವ್ಯಾಪಕತ್ವವು ಕಡಮೆಯಾಗಿರುವುದೆಂದು ಗುಪ್ತವಾಗಿ ಹರ್ಷಗೊಂಡರು.

ಆದರೆ ದೇಶದ ರಾಜಕಾರಣದಲ್ಲಿ ಶಾಂತತೆಯು ತೋರಲಿಲ್ಲ. ೧೯೧೯ರಲ್ಲಿ ಜಾರಿಗೆ ಬಂದಿದ್ದ ಸುಧಾರಣೆಗಳನುಸಾರ ಎಲ್ಲ ಪ್ರಾಂತಗಳಲ್ಲಿಯೂ ಮಂತ್ರಿಗಳಿದ್ದರೂ, ಅವರಿಗೆ ನಿಜವಾದ ಅಧಿಕಾರವಿಲ್ಲದೆ ಜನರ ಹಿತಕ್ಕಾಗಿ ಸಾಕಷ್ಟು ಪ್ರಯತ್ನಗಳನ್ನು ಮಾಡಲು ಅಶಕ್ತರಾದರು. ಕೋಮುವಾರು ಕಲಹಗಳೂ ದ್ವೇಷಾಸೂಯೆಗಳೂ ವೃದ್ಧಿಯಾದುವು. ಒಮ್ಮೆ ಸಿದ್ಧವಾಗಿದ್ದಂತೆ ತೋರಿದ ಹಿಂದು ಮುಸಲ್ಮಾನರ ಐಕ್ಯವು ಮುರಿ

ದುಬಿದ್ದು ಗಾಂಧಿಯವರಿಗೆ ಸಹ ಸಮಾಧಾನಮಾಡಲು ಅಶಕ್ಯವೆಂದು ತೋರಿತು. ಮುಸಲ್ಮಾನರು ತಮ್ಮ ಸಂಘಟನೆಯನ್ನು ನಡೆಸಿಕೊಂಡಂತೆ ಹಿಂದುಮಹಾಸಭೆಯವರೂ ಸಂಘಟನೆಗೆ ಪ್ರಯತ್ನಮಾಡಿ, ಅಸ್ಪೃಶ್ಯತಾನಿವಾರಣೆಗಾಗಿಯೂ, ಶಾರೀರಕ ಶಿಕ್ಷಣಕ್ಕೂ, ಶುದ್ಧಿಗೂ, ಹೆಚ್ಚುಗವುನವನ್ನು ಕೊಟ್ಟರು. ದೇಶದಲ್ಲಿ ಅನೇಕ ಸ್ಥಳಗಳಲ್ಲಿ ಹಿಂದುಮುಸಲ್ಮಾನರ ಕಲಹಗಳು ತಲೆದೋರಿ ಪರಸ್ಪರ ರೋಷಾವೇಶಕ್ಕೂ, ಪರರ ಅವಹೇಳನಕ್ಕೂ ದೇಶವು ಗುರಿಯಾಯಿತು. ಆದರೆ ರಾಷ್ಟ್ರರಚನಾಕಾರ್ಯಗಳು ಹೆಚ್ಚಿನ ವ್ಯವಸ್ಥೆಯಿಂದಲೂ ಸದ್ದಿಲ್ಲದೆಯೂ ಮುಂದೆ ಸಾಗುತ್ತಿದ್ದುವೆನ್ನುವುದನ್ನು ನಾವು ಮರೆಯಬಾರದು. ಇಂತಹವುಗಳಲ್ಲಿ ಯುವಕಸಂಸ್ಥೆಗಳೂ, ಕೂಲಿಗಾರರಸಂಘಗಳೂ, ಅಖಿಲಭಾರತಚರಖಾಸಂಘ, ಹಿಂದುಸ್ತಾನಿ ಸೇವಾದಳ, ಹಿಂದೀಪ್ರಚಾರಸಭಾ, ರಾಷ್ಟ್ರಸೇವಕರನ್ನು ಸಿದ್ಧಮಾಡುವ ಅನೇಕ ಸಮಿತಿಗಳು, ಆಶ್ರಮಗಳು ಮುಖ್ಯವಾದುವು. ಈ ಮೇಲೆ ಹೇಳಿದ ಸಂಸ್ಥೆಗಳ ಜನಸಹಾಯದಿಂದಲೇ ಈಗಿನ ಸ್ವಾತಂತ್ರ್ಯೋದ್ಯಮವು ಬಹುಮಟ್ಟಿಗೆ ಮುಂದುವರಿದಿರುವುದು.

## ಪೂರ್ಣಸ್ವರಾಜ್ಯವಾದ

ಜವಾಬ್ದಾರೀ ಸರಕಾರವನ್ನು ಕ್ಷಿಪ್ರದಲ್ಲಿಯೇ ಬ್ರಿಟಿಷ್‌ಹಿಂದೂಸ್ಥಾನದಲ್ಲಿ ಸ್ಥಾಪಿಸುವ ಪ್ರಯತ್ನವನ್ನು ಪಂಡಿತ ಮೋತೀಲಾಲ್‌ನೆಹರೂ ಅವರ ನೇತೃತ್ವದಲ್ಲಿ ಸ್ವರಾಜ್ಯ ಪಕ್ಷದವರು ಎಡೆಬಿಡದೆ ೧೯೨೩ರಿಂದ ಶಾಸನಸಭೆಗಳಲ್ಲಿ ಮಾಡುತ್ತಿದ್ದರು. ಆದರೆ ಈ ಪ್ರಾರ್ಥನೆಗೆ ಸಾಕಷ್ಟು ಗಮನವನ್ನು ಸರಕಾರದವರು ಕೊಡದಿರುವುದು ಮಾತ್ರವಲ್ಲದೆ, ಅನೇಕ ಸುಧಾರಣೆಗಳ ವಿಚಾರದಲ್ಲಿ (ಅಂದರೆ ಸೈನ್ಯದ ಖಾತೆ, ದೇಶದ ನಾಣ್ಯ ಮತ್ತು ಅದರ ವಿನಿಮಯ, ಉಪ್ಪಿನ ತೆರಿಗೆ) ಉದಾಸೀನತೆಯನ್ನು ತೋರಿಸುತ್ತಿದ್ದಂತೆ ತೋರಿತು. ೧೯೨೭ರಲ್ಲಿ ಮದರಾಸಿನಲ್ಲಿ ನಡೆದ ಮಹಾಸಭೆಯಲ್ಲಿ ಪೂರ್ಣಸ್ವರಾಜ್ಯವೇ ದೇಶದ ಧ್ಯೇಯವೆಂದು ನಿಷ್ಕರ್ಷೆಯಾಯಿತು. ಬ್ರಿಟಿಷರ ಅಧೀನದಿಂದ ಸಂಪೂರ್ಣ ನಿವೃತ್ತವಾಗುವುದೇ ರಾಷ್ಟ್ರಗೌರವವನ್ನೂ, ಬೆಳವಣಿಗೆಯನ್ನೂ ಸಾಧಿಸಲು ಉತ್ತಮವಾದ ಮಾರ್ಗವೆಂದು ಅನೇಕರಿಗೆ ತೋರಿತು. ಸರಕಾರದವರೊಡನೆ ಸಹಕರಿಸಿ ದೇಶಾಭ್ಯುದಯವನ್ನು ಒದಗಿಸಿಕೊಳ್ಳಬೇಕೆಂದು ಬಯಸುವ ಮಂದ (ಲಿಬರಲ್) ಪಕ್ಷದವರೂ ... ಸುಧಾ

ರಣೆಗಳನ್ನು ವಿಮರ್ಶೆಮಾಡುವುದಕ್ಕೆಂದು ಪಾರ್ಲಿ... ಟಿನಿಂದ ನೇಮಿಸಲ್ಪಟ್ಟ ಸಮಿತಿಯಲ್ಲಿ ಭಾರತೀಯ... ಸ್ಥಳದೊರೆಯದೆ ಇದ್ದುದನ್ನು ಕಂಡು ನಿರಾಶರಾ... ಪಂಡಿತ ಮೋತೀಲಾಲನೆಹರೂ ಅವರ ಅಧ್ಯಕ್ಷತೆ... ಸ್ವರಾಜ್ಯರಚನೆಯನ್ನು ಸಿದ್ಧಮಾಡಲು ಸ್ಥಾಪಿಸ... ಸಮಿತಿಯೊಂದಿಗೆ ಸಹಕರಿಸಿದರು. ಹಾಗೂ ಸ... ದವರು ಸೈಮನ್‌ಸಮಿತಿಯ ಕೆಲಸವನ್ನು ಹ... ಪೂರ್ತಿಗೊಳಿಸಲು ಅನುವಾದುದನ್ನು ನೋಡಿ ... ರಾಜಕಾರಣದಲ್ಲಿ ನಿರತ ಎಲ್ಲ ಪಕ್ಷದವರಿಗೂ ... ಅಸಮಾಧಾನವುಂಟಾಯಿತು. ೧೯೨೮ರಲ್ಲಿ ಕ... ಯಲ್ಲಿ ಸೇರಿದ ರಾಷ್ಟ್ರಮಹಾಸಭೆಯಲ್ಲಿ ಸಂ... ಸ್ವರಾಜ್ಯವೇ ನಮ್ಮ ಗುರಿಯಾಗಿರತಕ್ಕದ್ದೆಂದು ... ಸುವವರು ಬಹಳ ಪ್ರಬಲರಾದರು. ದೇಶದ ಸ್ಥಿತಿಗತಿಗಳೂ, ಭಾರತೀಯರ ಪ್ರಾರ್ಥನೆಗಳ... ದಲ್ಲಿ ಬ್ರಿಟಿಷ್ ಪ್ರಭುತ್ವದವರು ತೋರಿಸುವ ... ಸೀನ್ಯವೂ ರಾಷ್ಟ್ರಮಹಾಸಭೆಯಲ್ಲಿ ಸಂಪೂರ್ಣ... ಜ್ಯವನ್ನು ಸಾಧಿಸಲು ತೀವ್ರವೇ ಉಪಕ್ರಮಿಸಬೇ... ಮತಕ್ಕೆ ಪುಷ್ಟಿಯನ್ನು ಕೊಟ್ಟವು. ಇದು 'ದು... ತನ'ವಾಗಿ ಪರಿಣಮಿಸಿ, ಇಂತಹ ತೀರ್ಮಾನ... ದೇಶಕ್ಕೆ ಕೇಡಾಗಬಹುದೆಂದು ಕೆಲವರಿಗೆ ಶಂ... ತೋರಿತು. ಈ ಸಂದರ್ಭದಲ್ಲಿ ಸರ್ವಾದರ... ಮಾರ್ಗವನ್ನು ಸೂಚಿಸುವ ಭಾರವನ್ನು ಇಷ್ಟು... ಪ್ರತ್ಯೇಕರೀತಿಯಲ್ಲಿ ರಾಜಕಾರಣದಲ್ಲಿ ಭಾಗವನ್ನು... ದುಕೊಳ್ಳದೆ ದೂರಸರಿದಿದ್ದ ಮಹಾತ್ಮಾ ಗಾಂಧಿಯ... ವಹಿಸಬೇಕಾಯಿತು. ಕಲಕತ್ತೆಯಲ್ಲಿ ಗಾಂಧಿಯ... ನಡೆಸಿದ ಶಾಂತಿಸಂಧಾನವೂ, ಭಿನ್ನಾಭಿಪ್ರಾಯ... ಪರಿಶೀಲಿಸಿ ಸಮಸ್ಯೆಗಳನ್ನು ಬಿಡಿಸಿ ಸುಗಮವಾದ... ಯಲ್ಲಿ ಮುಂದಿನ ಕಾರ್ಯಗಳು ಎಲ್ಲರ ಬೆಂಬ... ದಲೂ ನಡೆಯುವಂತೆ ಅವರು ತೋರಿಸಿದ ಕೌಶಲ್ಯ... ವಿಚಕ್ಷಣೆಯೂ, ನಿಧಾನವೂ ಎಲ್ಲರನ್ನೂ ಮುಗ್ಧ... ಸಿದುವು. ಹಿಂದುಸ್ಥಾನದ ರಾಜಕಾರಣದಲ್ಲಿ ... ಗಾಂಧಿಯವರು ನಿರ್ವಿವಾದರೀತಿಯಲ್ಲಿ ಚಕ್ರವರ್ತಿ... ದರೆಂದು ಕಲಕತ್ತೆಯ ರಾಷ್ಟ್ರಮಹಾಸಭೆಯ ಕಾ... ಕಲಾಪಗಳಿಂದ ಬೋಧೆಯಾಯಿತು. ಒಂದು ... ತಡೆದು ನೋಡಿ, ಬ್ರಿಟಿಷ್ ಪ್ರಭುತ್ವದವರಿಗೆ ಅ... ವಧಿಯನ್ನು ಕೊಟ್ಟು, ಅನಂತರ ಅಗತ್ಯವಿದ್ದರೆ ಪೂರ್ಣಸ್ವರಾಜ್ಯದ ಉದ್ಯಮವನ್ನು ಉಪಕ್ರಮಿಸ... ನ್ನುವ ತೀರ್ಮಾನವು ಅಂಗೀಕೃತವಾಯಿತು.

## ಚಕ್ರಗೋಷ್ಠಿ, ಲಾಹೋರ್ ನಿರ್ಧಾರ

೧೯೨೯ರಲ್ಲಿ ಸೈಮನ್ ಸಪ್ತತಿಯವರ ಅಂಗೋಪಾಂಗಗಳ ನಿರರ್ಥಕವಾದ ಧೋರಣೆ ನಡೆಯಿತು ಸರ್ವಪಕ್ಷೀಯ ಪರಿಷತ್ತಿನವರು ಸ್ವರಾಜ್ಯ ರಚನೆಯ ವಿಷಯದಲ್ಲಿ ಉದ್ಯುಕ್ತರಾಗಿದ್ದರು. ಗಾಂಧಿಯವರಂತೂ ಅನೇಕ ಪ್ರಾಂತಗಳಲ್ಲಿ ಪ್ರವಾಸ ಮಾಡುತ್ತಾ ಜನತೆಯ ನೈಜಬಲವನ್ನು ಪರಿಶೀಲಿಸುತ್ತಿದ್ದಂತೆ ತೋರಿತು. ಪರದೇಶೀ ವಸ್ತ್ರಗಳ ಬಹಿಷ್ಕಾರ ಮುಂತಾದ ಕಾರ್ಯಕ್ರಮಗಳು ಚುರುಕಿನಿಂದ ಸಾಗಿದುವು. ಹಿಂದೂಸ್ಥಾನೀ ಸೇವಾದಳದಿಂದ ಉಪಕ್ರಮಿಸಲ್ಪಟ್ಟ ರಾಷ್ಟ್ರಧ್ವಜ ವಂದನೆಯ ಪದ್ಧತಿಯು ಎಲ್ಲೆಲ್ಲಿಯೂ ಉತ್ಸಾಹದಿಂದ ಆಚರಿಸಲ್ಪಡುತ್ತಿತ್ತು. ಈ ರೀತಿಯ ಜಾಗೃತಿಯು ದೇಶದಲ್ಲಿ ಕಂಡುಬರುವ ವೇಳೆಗೆ ವೈಸರಾಯರು ೩೧ನೇ ಅಕ್ಟೋಬರ್ ತಿಂಗಳಿನಲ್ಲಿ ಲಂಡನ್ ನಗರದಲ್ಲಿ ಚಕ್ರಗೋಷ್ಠಿಯು ಸೇರುವಂತೆ ಏರ್ಪಾಡಾಗುವುದೆಂದೂ, ಭಾರತೀಯರು ಅದರೊಂದಿಗೆ ಸಹಕರಿಸಿ ತಮ್ಮ ಇಷ್ಟಾರ್ಥಗಳನ್ನು ಪೂರ್ಣಗೊಳಿಸಬೇಕೆಂದೂ ಒಂದು ಮುಖ್ಯವಾದ ಭಾಷಣ ಮಾಡಿದರು. ದೇಶದ ಮುಖಂಡರು ಸೇರಿ ಇದಕ್ಕೆ ಪ್ರತ್ಯುತ್ತರವಾಗಿ ರಾಷ್ಟ್ರಪಕ್ಷದವರಿಗೆ ಹೆಚ್ಚಿನ ಪ್ರಾತಿನಿಧ್ಯವಿರಬೇಕೆಂದೂ ರಾಜಕೀಯ ಚಳವಳಿಗಳಲ್ಲಿ ಸೆರೆಮನೆಗೆ ಹೋದವರನ್ನು ಬಿಡುಗಡೆ ಮಾಡಬೇಕೆಂದೂ, ಲಂಡನ್ ಸಭೆಯು ಸೇರುವುದರ ಉದ್ದೇಶವು ಸ್ವರಾಜ್ಯ ರಚನೆಯನ್ನು ನಿಷ್ಕರ್ಷಿಸುವುದೇ ಆಗಬೇಕೆಂದೂ ಸೂಚಿಸಿ ಪ್ರಜಾ ಪಕ್ಷದಲ್ಲಿರುವ ಸಂಶಯಗಳು ದೂರವಾಗುವಂತೆ ಸರಕಾರದವರು ಮುಂದೆ ವರ್ತಿಸಬೇಕೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು. ಇದಕ್ಕೇನೂ ಫಲ ದೊರೆಯಲಿಲ್ಲ. ಲಾಹೋರ್ ನಗರದಲ್ಲಿ ರಾಷ್ಟ್ರಮಹಾಸಭೆಯು ಸೇರುವುದಕ್ಕೆ ಮುಂಚಿತವಾಗಿ ಪಂಡಿತ ಮೋತೀಲಾಲ್ ನೆಹರು ಅವರೂ, ಗಾಂಧಿಯವರೂ ವೈಸರಾಯರನ್ನು ಸಂದರ್ಶಿಸಿದರು. ಆದರೆ ಇದರಿಂದಲೂ ಈ ಮುಖಂಡರಿಗೆ ಲಂಡನ್ ಸಭೆಯ ಕಡೆ ಮನ ವೊಲಿದಂತೆ ಆಗಲಿಲ್ಲ. ಲಾಹೋರ್ ರಾಷ್ಟ್ರಮಹಾಸಭೆಯಲ್ಲಿ ಪೂರ್ಣ ಸ್ವರಾಜ್ಯವನ್ನು ಸಾಧಿಸುವುದೇ ದೇಶದ ಮುಂದಿನ ಕಾರ್ಯಕ್ರಮವೆಂದು ನಿರ್ಧರವಾಗಿ ಇದರ ಸಲುವಾಗಿ ಪ್ರಯತ್ನಗಳನ್ನು ನಡೆಸುವ ಭಾರವನ್ನು ರಾಷ್ಟ್ರಮಹಾಸಭೆಯ ವರ್ಕಿಂಗ್ ಕಮಿಟಿಯವರು ವಹಿಸಬೇಕೆಂದು ತೀರ್ಮಾನವಾಯಿತು. ೧೯೩೦ ನೇ ಜನವರಿ ೧ನೆಯ ತಾರೀಖು ಅವರು ಹಿಂದೆ ಸೂಚಿಸಿದ್ದಂತೆ ಮಹಾತ್ಮಾ ಗಾಂಧಿಯವರು ಸ್ವಾತಂತ್ರ್ಯ ಪಕ್ಷದವರಾದರು.

## ಸ್ವಾತಂತ್ರ್ಯ ಸಂಗ್ರಾಮ

ರಾಷ್ಟ್ರಮಹಾಸಭೆಯ ವರ್ಕಿಂಗ್ ಕಮಿಟಿಯವರು ಜನವರಿ ೨೬ನೆಯ ತಾರೀಖು ಸಂಪೂರ್ಣ ಸ್ವರಾಜ್ಯ ದಿನವನ್ನಾಗಿ ಆಚರಿಸಬೇಕೆಂದೂ, ಆದಿನ ರಾಷ್ಟ್ರ ಧ್ವಜಾರೋಹಣ ಮಾಡಿ ಸಾರ್ವಜನಿಕ ಸಭೆಗಳಲ್ಲಿ ಸಂಪೂರ್ಣ ಸ್ವರಾಜ್ಯದ ತೀರ್ಮಾನವನ್ನು ಓದಿ ಪುಷ್ಟೀಕರಿಸಬೇಕೆಂದೂ ನಿರ್ಣಯಿಸಿದರು. "ಬ್ರಿಟಿಷ್ ಸರಕಾರದವರು ಭಾರತೀಯರ ಸ್ವಾತಂತ್ರ್ಯವನ್ನು ಅಪಹರಿಸಿದುದು ಮಾತ್ರವಲ್ಲದೆ ಜನಸಾಮಾನ್ಯದ ಅಶಕ್ತತೆಯನ್ನೂ ತಮ್ಮ ಸ್ವಂತ ಪ್ರಯೋಜನಕ್ಕೆ ಉಪಯೋಗಿಸಿಕೊಂಡು ಹಿಂದೂಸ್ಥಾನವನ್ನು ಆರ್ಥಿಕ ದೃಷ್ಟಿಯಿಂದಲೂ, ರಾಜಕೀಯ ದೃಷ್ಟಿಯಿಂದಲೂ, ಸಾಂಸ್ಕೃತಿಕ ದೃಷ್ಟಿಯಿಂದಲೂ, ಆಧ್ಯಾತ್ಮಿಕ ದೃಷ್ಟಿಯಿಂದಲೂ ನಾಶಕ್ಕೆ ಗುರಿಮಾಡಿರುವರು" ಎನ್ನುವುದೇ ಈ ತೀರ್ಮಾನದ ಮುಖ್ಯ ಪಲ್ಲವಿ. ದೇಶದಲ್ಲೆಲ್ಲ ಈ ತೀರ್ಮಾನವು ಬಹು ವಿಶ್ವಾಸದಿಂದಲೂ, ಉತ್ಸಾಹದಿಂದಲೂ ಅಂಗೀಕಾರವಾಯಿತು. ಆದರೂ ಹಿಂದೂ ಮುಸಲ್ಮಾನ ಐಕ್ಯವು ಸಾಕಷ್ಟು ಕಂಡುಬರಲಿಲ್ಲ. ಲಂಡನ್ ಚಕ್ರಗೋಷ್ಠಿಗೆಂದು ಸನ್ನಾಹಗಳು ನಡೆಯುತ್ತಿದ್ದುವು. ಮತ್ತೆ ಗಾಂಧಿಯವರ ನೇತೃತ್ವದಲ್ಲಿ ಎಂತಹ ನಿಪಾತಗಳಾಗುವುವೋ ಎನ್ನುವ ಭಯದೊಂದಿಗೆ, ಗಾಂಧಿಯವರಿಗೂ ಬೆಳಕು ಹೊಳೆಯದೆ ತಟಸ್ಥರಾಗಿದ್ದುದರಿಂದ ಏನು ಮಾಡುವರೋ ಎನ್ನುವ ಶಂಕೆಯು ಬಹಳ ತೋರಿತು. ಅನಂತರ ಉಪ್ಪಿನ ಕಾಯಿದೆಯನ್ನು ಮುರಿಯುವ ತೀರ್ಮಾನವಾಯಿತು. ಕೆಲವು ಪ್ರದೇಶಗಳಲ್ಲಿ ಕಾಡಿನ ಆಡಳಿತದಲ್ಲಿರುವ ನಿರ್ಬಂಧಗಳನ್ನು ತೊಡೆದುಹಾಕುವ ಪ್ರಯತ್ನವನ್ನೂ, ಸರ್ವತ್ರವೂ ಪರದೇಶೀ ವಸ್ತ್ರ ಬಹಿಷ್ಕಾರ, ಮದ್ಯಪಾನ ನಿರೋಧ, ಈಚಲಮರಗಳನ್ನು ಕಡಿದುಹಾಕುವಿಕೆ ಮುಂತಾದ ಕಾರ್ಯಗಳನ್ನೂ ಉಪಕ್ರಮಿಸಬೇಕೆಂದು ತೀರ್ಮಾನವಾಯಿತು.

ಮುಂದಿನ ಕಥೆಯನ್ನು ಹೇಳುವ ಅವಶ್ಯಕತೆಯಿಲ್ಲ. ಇಂತಹ ದೊಡ್ಡ ಉದ್ಯಮಕ್ಕೆ ಕಾಲವು ಪ್ರಶಸ್ತವಾಗಲಿಲ್ಲವೆಂದು ತೋರಿದಾಗ್ಯೂ, ಗಾಂಧಿಯವರು ತಮ್ಮ

ಶಾಂತಸೇನೆಯೊಂದಿಗೆ ಸಬರಮತಿ ಆಶ್ರಮವನ್ನು ಬಿಟ್ಟು ಸಂಪೂರ್ಣ ಸ್ವರಾಜ್ಯವನ್ನು ಸ್ಥಾಪಿಸದೆ ಹಿಂದಿರುಗುವುದಿಲ್ಲವೆಂಬ ಶಪಥಮಾಡಿ ದಂಡೀ ಗ್ರಾಮಕ್ಕೆ ಕಾಲುನಡಿಗೆಯಿಂದಲೇ ನಡೆದು ಹೋದುದೇ ಪೂರ್ವಕಾಲದ ಯಾವುದೋ ಮಹಾಕಾವ್ಯವೊಂದರ ಸನ್ನಿವೇಶದಂತಿದೆ. ಒಂದು ತಿಂಗಳಲ್ಲಿ ದೇಶದಲ್ಲಿ ವ್ಯಾಪಿಸಿದ ಅಪ್ರತಿಹತವಾದ ಶಕ್ತಿಯೂ, ತೇಜಸ್ಸೂ, ಲೋಕವನ್ನೇ ಎಚ್ಚರಿಸಿ, ಹಿಂದೂಸ್ಥಾನದ ಅದ್ಭುತ ಸಾಹಸವನ್ನು ಎಲ್ಲರೂ ಮೆಚ್ಚುವಂತೆ ಮಾಡಿತು.

## ಸತ್ಯಾಗ್ರಹ ವಿಜಯ

ರಾಜದ್ರೋಹದ ಪ್ರವಾಹವನ್ನು ಎದುರಿಸಲು ಸರಕಾರದವರು ಸರ್ವ ಪ್ರಯತ್ನವನ್ನೂ ಮಾಡಿದರು. ಸರಕಾರದ ಶಾಸನಗಳನ್ನು ನಿರಾಕರಣ ಮಾಡುವವರಿಗೂ ಸರಕಾರಕ್ಕೂ ಈಗ ಒಂದು ವರ್ಷದಿಂದ ನಡೆದ ಯುದ್ಧದ ಧರ್ಮಾಧರ್ಮಗಳು, ಜಯಾಪಜಯಗಳು, ಈ ಯುದ್ಧದ ಪರಿಣಾಮ, ಇವುಗಳನ್ನು ಪರಿಶೀಲಿಸುವ ಕಾಲವಿನ್ನೂ ಒದಗಿಲ್ಲ. ಆದರೆ ಕಾಂಗ್ರೆಸ್ಸಿನ ಧ್ಯೇಯಗಳಿಂದ ಉತ್ಸಾಹಗೊಂಡು ಜನತೆಯು ಹೇಗೆ ತನ್ನ ದಾರಿಯನ್ನೇ ಹಿಡಿದು ನಡೆದಿದೆಯೋ ಹಾಗೆಯೇ ಸರಕಾರವೂ ತನ್ನ ದಾರಿಯನ್ನೇ ಹಿಡಿದು ನಡೆದಿದೆಯೆಂದು ಸೂಕ್ಷ್ಮವಾಗಿ ಹೇಳಬಹುದು ಲಂಡನ್ನಿನ ಚಕ್ರಗೋಷ್ಠಿ, ಬ್ರಿಟಿಷರಲ್ಲಿ ಕಂಡು ಬರುತ್ತಿರುವ ಪರಿವರ್ತನೆ, ಲಂಡನ್ನಿಗೆ ಹೋಗಿಬಂದ ಭಾರತೀಯ ಮುಖಂಡರ ಮತ್ತು ರಾಜರ ಸದಾಕಾಂಕ್ಷೆಗಳು, ಗಾಂಧಿ-ಇರ್ವಿನ್ ಭೇಟಿ, ಇದರಿಂದಾದ ಒಪ್ಪಂದ, ನಮ್ಮ ರಾಜಕೀಯ ಅಭ್ಯುದಯದ ಚರಿತ್ರೆ ಚಲನಚಿತ್ರದ ದೃಶ್ಯಗಳಂತೆ ಒಂದರ ಹಿಂದೆ ಬಹು ಶೀಘ್ರವಾಗಿ ಸಂಭವಿಸಿವೆ. ಮುಂದಿನ ಘಟನೆಗಳು ಹೇಗೆ ಆಗುವುವೋ ಹೇಳುವುದಕ್ಕಾಗದು.

## ಜಗತ್ತಿಗೇ ಮಂಗಳ

ಆದರೆ ಈ ೧೦ ವರ್ಷಗಳಲ್ಲಿ ಹಿಂದೂಸ್ಥಾನದಲ್ಲಿ ನಡೆದ ಪರಿವರ್ತನವು ಅದ್ಭುತವಾದ ಸನ್ನಿವೇಶ ಸರಿ. ಭಾರತೀಯರಲ್ಲಿ ಆತ್ಮಗೌರವ, ಆತ್ಮಸ್ವಾವಲಂಬನೆ ಬೆಳೆದ. ಈ ದೊಡ್ಡ ದೇಶವು ಚೈತನ್ಯದಿಂದ ಪ್ರೇರಿತವಾಗಿ ಕ್ರಿಯಾಶಕ್ತಿಯಿಂದ ಮೇಳಗೊಳ್ಳುತ್ತಲಿದೆ. ಈ ಶಕ್ತಿಯು ಫಲಪ್ರದವಾಗಿಯೂ ಯಶಸ್ವಿಯಾಗಿಯೂ ಆಗುವುದು ಮುಖಂಡರ ವಿಚಕ್ಷಣೆಯ ಮೇಲೂ, ಜನರ ನಿಯಮಗಳ ಮೇಲೂ ಅವಲಂಬಿಸಿದೆ. ಪ್ರಪಂಚ ಶಾಂತಿಯುದ್ಧದ ಸನ್ನಿವೇಶಗಳನ್ನು ಬಹು ದಿಂದಲೂ, ವಿಶ್ವಾಸದಿಂದಲೂ ನೋಡುತ್ತಿದೆ ವರೆ ಅತ್ಯುಕ್ತಿಯಲ್ಲ. ಈ ಅಪೂರ್ವ ರೀತಿ ಒಂದು ದೇಶದ ಸ್ವಾತಂತ್ರ್ಯವನ್ನು ಸಾಧಿಸುವುದು ಮಾನವನ ಇತಿಹಾಸದ ಪ್ರಗತಿಗೂ ಅಭ್ಯುದಯಕ್ಕೂ ಒಂದು ನೂತನವಾದ ಮಾರ್ಗವನ್ನು ಹಾಕಿಕೊಟ್ಟಂತೆ ಆಯಿತು ಹಿಂದೂಸ್ಥಾನದ ಜಯದಿಂದ ಜಗತ್ತಿಗೇ ಮಂಗಳವಾಗುವುದೆನ್ನುವ ವಿಶ್ವಾಸವು ತೋರಿಬರುತ್ತದೆ.



# ಸಾ ಹಿ ತ್ಯ

೧. ಆಂಗ್ಲ ಸಾಹಿತ್ಯ ಪರಿಚಯ

ಶ್ರೀ ಎ. ಎನ್. ಮೂರ್ತಿರಾವ್, ಎಂ. ಎ., ಮಹಾರಾಜಾ ಕಾಲೇಜ್, ಮೈಸೂರು

೨. ತಮಿಳು ಸಾಹಿತ್ಯ ಕಥಾ ಪರಿಚಯ

ರಾವ್ ಬಹದ್ದೂರ್ ಡಾಕ್ಟರ್ ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಎಂ. ಎ., ಮದರಾಸು

೩. ಆಂಧ್ರ ವಾಙ್ಮಯ ಚರಿತ್ರಸಂಗ್ರಹ

ಶ್ರೀ ರಾಳ್ಳಪಲ್ಲಿ ಅನಂತಕೃಷ್ಣಶರ್ಮಗಾರು, ಮಹಾರಾಜಾ ಕಾಲೇಜ್, ಮೈಸೂರು

೪. ಮಲಯಾಳ ವಾಙ್ಮಯ ವಿಚಾರ

ಕೇರಳೀಯ

೫. ಮರಾಠಿ ವಾಙ್ಮಯ ಪರಿಚಯ

ಶ್ರೀ ರಾ. ಗೋ. ಭಿಡೆ, ಉಪಸಂಪಾದಕ 'ಕೇಸರಿ', ಪುಣೆ

೬. ಹಿಂದೀ ವಾಙ್ಮಯ ವಿಸ್ತಾರ

ಶ್ರೀ ಜಿ. ಎನ್. ಭಿಡೆ, ಹಿಂದೀ ಪ್ರಚಾರಕ, ಬೆಂಗಳೂರು

೭. ವಂಗ ವಾಙ್ಮಯ ಕಥಾನಕ

ಶ್ರೀ ಬಾಬು ಮೋಹಿತಕುಮಾರ ಬಾನರ್ಜಿ, ಶಾಂತಿನಿಕೇತನ

೮. ಆಧುನಿಕ ಕನ್ನಡ ವಾಙ್ಮಯ

ಶ್ರೀ ಕೆ. ವಿ. ಪುಟ್ಟಪ್ಪ ಎಂ., ಎ., ಇಂಟರ್ ಕಾಲೇಜ್, ಮೈಸೂರು

# ಆಂಗ್ಲ ಸಾಹಿತ್ಯ ಪರಿಚಯ

(ಶ್ರೀ ಎ. ಎನ್. ಮೂರ್ತಿರಾವ್, ಎಂ. ಎ., ಮಹಾರಾಜಾ ಕಾಲೇಜ್, ಮೈಸೂರು)

## ಆಂಗ್ಲೋಸ್ಯಾಕ್ಸನ್ ಸಾಹಿತ್ಯ

ಇಂಗ್ಲಿಷ್ ಸಾಹಿತ್ಯವು ಸುಮಾರು ಕ್ರಿ. ಶ. ನಾಲ್ಕನೆಯ ಶತಮಾನದ ಕೊನೆಯಲ್ಲಿ ಪ್ರಾರಂಭವಾಗಿರಬಹುದು. ಆದರೆ ಈಗ ಸಾಹಿತ್ಯಾಭಿಮಾನಿಗಳು ಬಹು ಮಟ್ಟಿಗೆ ಹದಿನಾಲ್ಕನೆಯ ಶತಮಾನದ ಸಾಹಿತ್ಯದಿಂದ ತಮ್ಮ ಅಧ್ಯಯನವನ್ನು ಪ್ರಾರಂಭಿಸಿರುವರು. ಆ ಶತಮಾನಕ್ಕೆ ಮುಂಚೆ ಬರೆಯಲ್ಪಟ್ಟ ಕಾವ್ಯಗಳೇನೋ ಅನೇಕ ಸಿಕ್ಕುವವು; 'ಬಿಯೊವುಲ್ಫ್' ಎಂಬ ಕಾವ್ಯದಂಥ ಉತ್ತಮವರ್ಗದ ಕಾವ್ಯಗಳೂ ಕೆಲವು ಸಿಕ್ಕುವವು. ಆದರೆ ಆಗಿನ ಸಾಹಿತ್ಯಕ್ಕೆ ರಸದೃಷ್ಟಿಯಿಂದ ಪ್ರಾಮುಖ್ಯತೆಯಿಲ್ಲವೆಂದು ಹೇಳಲಾಗುವುದಿಲ್ಲವಾದರೂ ಒಟ್ಟಿನಲ್ಲಿ ಚರಿತ್ರಕಾರರ ದೃಷ್ಟಿಯಿಂದಲೇ ಪ್ರಾಮುಖ್ಯತೆ ಹೆಚ್ಚು. ಆ ಕಾಲದಲ್ಲಿ ಇಂಗ್ಲಿಷರು ಶತ್ರುಗಳೊಡನೆ ಹೋರಾಡಿ ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವುದರಲ್ಲಿಯೂ ತಮ್ಮ ದೇಶದ ಏಕೀಕರಣದಲ್ಲಿಯೂ ನಿರತರಾಗಿದ್ದರು. ಇದರಮೇಲೆ ಬರಹಗಾರರಿಗೆ ಕಾವ್ಯವಸ್ತುಗಳು ಹೆಚ್ಚಾಗಿರಲಿಲ್ಲ; ಓದುವವರು ಕಡಿಮೆ; ಅಥವಾ ಇವೆರಡೂ ಇದ್ದರೂ ಲ್ಯಾಟಿನ್ನಿನಲ್ಲಿ ಬರೆದು ಕೀರ್ತಿಯನ್ನು ಸಂಪಾದಿಸಬೇಕೆಂಬ ಆಸೆ. ನಮ್ಮಲ್ಲಿ ಕೆಲವರು ಸಂಸ್ಕೃತದ ಮೇಲಿನ ಮೋಹದಲ್ಲಿ ಕನ್ನಡವನ್ನು ಮರೆತಂತೆ ಅವರು ಲ್ಯಾಟಿನ್ ಮೇಲಿನ ಮೋಹದಲ್ಲಿ ಇಂಗ್ಲಿಷನ್ನು ಮರೆತರು. ಇಷ್ಟಾದರೂ ಆ ಆಂಗ್ಲೋಸ್ಯಾಕ್ಸನ್ ಜನರು ಸೃಷ್ಟಿಸಿರುವ ಸಾಹಿತ್ಯವನ್ನು ನೋಡಿದರೆ ಆ ಕಾಲದಲ್ಲಿ ಅವರು ಅಷ್ಟು ಕೆಲಸಮಾಡಿದ್ದು ಹೆಚ್ಚೆಂದೇ ಹೇಳಬೇಕಾಗುವುದು. ಆಂಗ್ಲೋಸ್ಯಾಕ್ಸನ್ ಜನರು ಸ್ವಲ್ಪ ಒರಟರು; ಅವರ ಮನೋಭಾವ ಹೆಚ್ಚು ಸಂತೋಷದ ಮನೋಭಾವವಲ್ಲ; ಅವರಿಗೆ ಹಾಸ್ಯಶಕ್ತಿ ಕಡಿಮೆ. ಆದರೆ ಜೀವನದ ಕಷ್ಟನಿಷ್ಠುರಗಳು, ತಮ್ಮ ವಿರೋಧಿಗಳೊಡನೆಯೂ ಪ್ರಕೃತಿಯೊಡನೆಯೂ ಹೋರಾಡುವುದು—ಇವುಗಳನ್ನು ಕೆಲವೆಡೆಗಳಲ್ಲಿ ಉತ್ಸಾಹದಿಂದ ವರ್ಣಿಸಿರುವರು. ಅವರ ಸಾಹಿತ್ಯದ ವಿಷಯ ಇನ್ನು ಹೆಚ್ಚು ಬರೆಯಲು ಇಲ್ಲಿ ಸಾಧ್ಯವಿಲ್ಲ.

## ಛಾಸರ್

ನಮ್ಮ ದೇಶದ ವಿದ್ಯಾರ್ಥಿಗಳ ಭಾಗಕ್ಕೆ ಸಾಧಾರಣವಾಗಿ ಇಂಗ್ಲಿಷ್ ಸಾಹಿತ್ಯವು ಪ್ರಾರಂಭವಾಗುವುದೆಂದರೆ ಹದಿನಾಲ್ಕನೆಯ ಶತಮಾನದಲ್ಲಿ ಜೀವಿಸಿದ್ದ ಛಾಸರ್ ಕವಿಯಿಂದ. ಈತನು ಬರೆಯಲು ಪ್ರಾರಂಭಿಸುವ ವೇಳೆಗೆ ಇಂಗ್ಲಿಷರಿಗೂ ಯೂರೋಪಿನ ಇತರ ದೇಶದವರಿಗೂ ಬಳಕೆ ಹೆಚ್ಚಾಗಿದ್ದುದರಿಂದಲೂ, ಫ್ರೆಂಚ್‌ಭಾಷೆಯ ಸಂಸರ್ಗದಿಂದಲೂ, ಇಂಗ್ಲಿಷ್ ಭಾಷೆಯಲ್ಲಿ ಹೊಸ ಸ್ಫೂರ್ತಿಯು ಬಂದಿದ್ದಿತು. ಗ್ರೀಸ್, ರೋಮ್, ಪೂರ್ವದೇಶಗಳು—ಈ ಕಡೆಗಳಿಂದ ಕಾವ್ಯವಸ್ತುಗಳು ಬೇಕಾದಷ್ಟು ಸಂಗ್ರಹಿಸಲ್ಪಟ್ಟಿದ್ದವು. ಯೂರೋಪಿನಲ್ಲಿ ಪ್ರಚಾರದಲ್ಲಿದ್ದ 'ರೊಮಾನ್ಸ್' ಕಾವ್ಯಗಳನ್ನನುಸರಿಸಿ ಇಂಗ್ಲೆಂಡಿನಲ್ಲಿಯೂ ಬಹು ಜನರು 'ರೊಮಾನ್ಸ್' ಕಾವ್ಯಗಳನ್ನು ಬರೆದಿದ್ದರು. ಆದರೆ ಆಗ ಇನ್ನೂ ಬದಲಾವಣೆಯ ಸ್ಥಿತಿಯಲ್ಲಿದ್ದ ಇಂಗ್ಲಿಷ್ ಭಾಷೆಯನ್ನು ಕಾವ್ಯಕ್ಕೆ ಹೊಂದಿಸಿಕೊಂಡು ಬರೆಯುವ ಶಕ್ತಿ ಈ ಜನರಿಗೆ ಇರಲಿಲ್ಲ. ಆ ಕಾಲದ ಭಾವಗಳಿಗೆ ಉತ್ತಮ ಸಾಹಿತ್ಯರೂಪವನ್ನು ಕೊಟ್ಟವನು ಛಾಸರ್. "ಕ್ಯಾಂಟರ್ ಬರಿಯ ಕಥೆಗಳು" ಎಂಬ ಆತನ ಪ್ರಸಿದ್ಧಕಾವ್ಯದಲ್ಲಿ ಕಂಡುಬರುವ ಅಸಾಧಾರಣವಾದ ಕಥೆಹೇಳುವ ಕೌಶಲ, ಹಾಸ್ಯಶಕ್ತಿ, ಆ ಕಾವ್ಯದ ಪ್ರಸ್ತಾವನೆಯಲ್ಲಿ ಆತನು ನಿರ್ಮಿಸಿರುವ ಪಾತ್ರಚಿತ್ರಗಳು, ಆತನ ವೃತ್ತಗಳ ಅಪೂರ್ವ ಶಬ್ದಮಾಧುರ್ಯ—ಇವೆಲ್ಲವೂ ಕವಿತೆಯಲ್ಲಿ ಆತನ ಮೇಲ್ಮೆಯನ್ನು ತೋರಿಸುವುವು. ಛಾಸರು ಇಂಗ್ಲಿಷ್ ಸಾಹಿತ್ಯಕ್ಕೆ ಬಹಳ ಉಪಕಾರ ಮಾಡಿದನು. ಆಂಗ್ಲೋಸ್ಯಾಕ್ಸನ್ನರು

ಉಪಯೋಗಿಸುತ್ತಿದ್ದ. ಈಚೆಗೆ ಖಿಲವಾಗಿದ್ದ ಛಾಸರಿನ ಸಮಕಾಲೀನನಾದ ಲಾಂಗ್ಲೆಂಡು ಉಪಯೋಗಿಸುತ್ತಿದ್ದ ಅನುಪ್ರಾಸಕ್ಕಿಂತಲೂ ಕಾವ್ಯದಲ್ಲಿ ಛಂದಸ್ಸನ್ನು ಉಪಯೋಗಿಸುವುದು ಎಷ್ಟು ಉತ್ತಮವಾದುದೆಂದು ಆತನು ತೋರಿಸಿಕೊಟ್ಟನು. ಇಂಗ್ಲಿಷ್ ಸಾಹಿತ್ಯದಲ್ಲಿ ಅದುವರೆಗೂ ಅಪರೂಪವಾಗಿದ್ದ ಹಾಸ್ಯಧ್ವನಿಯನ್ನು ತನ್ನ ಕಾವ್ಯಗಳಲ್ಲಿ ತುಂಬಿದನು. ಈಚಿನ ಇಂಗ್ಲಿಷ್ ಕವಿಗಳನೇಕರು ತಾವು ಆತನಿಂದ ಉಪಕೃತರೆಂದು ಒಪ್ಪಿಕೊಂಡಿರುವರು. ಟೆನಿಸನ್ನನು ಆತನನ್ನು "ಗಾನದ ಪ್ರಭಾತ ತಾರೆ" ಎಂದು ಕರೆದಿರುವನು.

## ಛಾಸರ್ ಅನಂತರ

ಹದಿನೈದನೆಯ ಶತಮಾನದಲ್ಲಿ ಇಂಗ್ಲಿಷ್ ಸಾಹಿತ್ಯವು ಅವನತಸ್ಥಿತಿಗೆ ಬಂದಿತು. ಛಾಸರಿನಂಥ ಕವಿಯ ಮೇಲ್ಪಂಕ್ತಿ ದೊರೆತರೂ ಒಳ್ಳೆಯ ಕವಿಗಳು ಯಾರೂ ಉದಯಿಸಲಿಲ್ಲ. ಲಿಡ್‌ಗೇಟ್, ಆಕ್ಲೀವ್ ಮೊದಲಾದ ಹದಿನೈದನೆಯ ಶತಮಾನದ ಕವಿಗಳೆಲ್ಲರೂ ತಾವು ಛಾಸರಿನ ಶಿಷ್ಯರೆಂದು ಹೇಳಿಕೊಂಡು ಕಾವ್ಯಗಳನ್ನು ಬರೆದರು. ಆದರೆ ಅವರು ತಮ್ಮ ಗುರುವಿಗೆ ಮಾನ ತರುವಂಥ ಶಿಷ್ಯರಲ್ಲ. ಅವರಿಗೆ ಕವಿತಾಶಕ್ತಿಯಿರಲಿಲ್ಲ; ಅವರ ಕಾವ್ಯಗಳು ನೀತಿಗರ್ಭಿತವಾದ ಆಖ್ಯಾಯಿಕೆಗಳು. ಆ ಕಾವ್ಯಗಳಲ್ಲಿನ ಪಾತ್ರಗಳು ಹೆಸರಿಗೆ ಮಾತ್ರ ಮನುಷ್ಯರೆನ್ನಿಸಿಕೊಳ್ಳುವ ಧರ್ಮ, ಜ್ಞಾನ, ಕಾಮ, ಲೋಭ ಮೊದಲಾದ ಸದ್ಗುಣ ದುರ್ಗುಣಗಳು. ಈ ಪಾತ್ರಗಳು ನಿಜವಾಗಿಯೂ ಮನುಷ್ಯರಲ್ಲ; ರಕ್ತಮಾಂಸಗಳಿಲ್ಲದ, ಶರೀರವಿಲ್ಲದ, ನಿರ್ಜೀವಿಗಳಾದ ನೆರಳುಗಳು; ಗಾಳಿಯ ಆಕೃತಿಗಳು. ಇನ್ನು ಈ ಕಾವ್ಯಗಳು ಎಷ್ಟು ರಸಭರಿತವಾಗಿರಬೇಕು? ಛಾಸರಿಗೆ ತಕ್ಕ ಶಿಷ್ಯರು ಇಂಗ್ಲೆಂಡಿನಲ್ಲಿ ಸಿಕ್ಕಲಿಲ್ಲ. ಸ್ಕಾಟ್ಲೆಂಡಿನಲ್ಲಿ ಕೆಲವರು ಪ್ರತಿಭಾಶಾಲಿಗಳಾದ ಕವಿಗಳು ಛಾಸರಿನ ಸಂಪ್ರದಾಯವನ್ನು ಸ್ವಲ್ಪಮಟ್ಟಿಗೆ ಕಾಪಾಡಿದರು. ಒಟ್ಟಿನಲ್ಲಿ ಆಗಿನ ಕಾಲದ ಲಾವಣಿಗಳು, ಗೀತೆಗಳು ಇವುಗಳನ್ನೂ, ಸ್ಕಾಟ್ಲೆಂಡಿನವರ ಕಾವ್ಯಗಳನ್ನೂ ಬಿಟ್ಟರೆ, ಈ ಶತಮಾನದಲ್ಲಿ ಉತ್ತಮ ಸಾಹಿತ್ಯವು ಬಹಳ ಕಡಿಮೆ.

## ಎಲಿಜಬೆತ್ ಯುಗ

ಹದಿನೈದನೆಯ ಶತಮಾನದ ಕೊನೆಯಲ್ಲಿಯೇ ಕೆಲವು ಕವಿಗಳಿಗೆ ಆಗಿನ ಸಂಪ್ರದಾಯಗಳಲ್ಲಿ ಅನಾದರವೂ ಅಸಮಾಧಾನವೂ ಹುಟ್ಟಿ ಹೊಸ ಪದ್ಧತಿಗಳಿಗೆ [illegible]ಕಬೇಕೆಂಬ ಆಸೆ ಹುಟ್ಟಿತ್ತು. ಎಲಿಜಬೆತ್ ಕಾ[illegible] ಸಾಹಿತ್ಯಕ್ಕೆ ಹೊಸಹುರುಪು ಬಂದಿತು. [illegible] ಯಿಂದ ಹೊಸ ಪದ್ಯರೂಪಗಳು ಬಂದವು. ಇ[illegible] ಕವನದಲ್ಲಿ ಬಹು ಮುಖ್ಯವೃತ್ತವಾದ 'ಬ್ಲ್ಯಾಂಕ್[illegible] (ಈಗ ಕನ್ನಡದಲ್ಲಿ ಪ್ರಚಾರಕ್ಕೆ ಬರುತ್ತಿರುವ [illegible] ವೃತ್ತ ಅಥವಾ ಸರಳರಗಳೆಯು ಈ ವೃತ್ತವನ್ನು [illegible] ಲುತ್ತದೆ.) ಎಂಬುದು ಉಪಯೋಗಕ್ಕೆ ಬಂದಿತು. ಎಲಿಜಬೆತ್ ಕಾಲವು ನಾಟಕಕ್ಕೆ ಅಭ್ಯುದಯ[illegible] ಸುಮಾರು ಹದಿನಾಲ್ಕನೆಯ ಶತಮಾನದಿಂದ[illegible] ಗ್ಲೆಂಡಿನಲ್ಲಿ ಮಿರೆಕಲ್ ನಾಟಕಗಳು—ಅಂದರೆ [illegible] ನಿಂದ ವಿಷಯಗಳನ್ನು ತೆಗೆದು ಬರೆದ ನಾಟ[illegible] ಪ್ರಚಾರದಲ್ಲಿದ್ದವು. ಈ ನಾಟಕಗಳಿಂದ 'ಮೊ[illegible] ಗಳು ಎಂಬ ನೀತಿಬೋಧಕವಾದ ನಾಟಕಗಳು [illegible] ಟವು. ಇವು ಬಹುಮಟ್ಟಿಗೆ ಆ ಕಾಲದ ನೀತಿ[illegible] ಪದ್ಯಗಳಂತೆಯೇ ನೀರಸವಾದವು. ಈ ನಾಟ[illegible] ಜನರಂಜಕವಾಗುವಂತೆ ಅವುಗಳ ಜೊತೆಗೆ ಬಂ[illegible] ತಮಾಷೆಯ ದೃಶ್ಯವನ್ನೂ ಸೇರಿಸುತ್ತ ಬಂದರು. [illegible] ಗಂಭೀರವಾದ ನಾಟಕ, ಹಾಸ್ಯ ನಾಟಕ, [illegible] ಒಟ್ಟಿಗೆ ಬೆಳೆಯುತ್ತ ಬಂದವು. ನಾಟಕಕ್ಕೆ ಈ[illegible] ದಲ್ಲಿ ಹೊರಗಿನಿಂದಲೂ ಸಹಾಯವೊದಗಿತು. [illegible] ಯವರು ಪುರಾತನ ಗ್ರೀಕರ ನಾಟಕ ಸೂತ್ರ[illegible] ತಮಗೆ ತಿಳಿದಮಟ್ಟಿಗೆ ಅನುಸರಿಸಿ ತಾವೂ ನ[illegible] ಗಳನ್ನು ಬರೆದಿದ್ದರು. ಇವುಗಳ ಪ್ರಭಾವ[illegible] [illegible]ಗ್ಲಿಷ್ ನಾಟಕಗಳ ಮೇಲೆ ಬಿದ್ದಿತು.

## ಷೇಕ್ಸ್‌ಪಿಯರ್

ಇಂಗ್ಲಿಷರ ಸ್ವಂತ ಸಂಪ್ರದಾಯ, ಗ್ರೀಕರ-[illegible] ಗ್ರೀಕರ ಅನುಕರಣಕಾರರ ಸಂಪ್ರದಾಯ, ಇವ[illegible] ಸೇರಿ ಎಲಿಜಬೆತನ್ ನಾಟಕವು ಉತ್ಪನ್ನವಾ[illegible] ಈ ಕಾಲದ ನಾಟಕಕಾರರಲ್ಲಿ ಷೇಕ್ಸ್‌ಪಿಯರು [illegible] ಪ್ರಸಿದ್ಧನು. ಆತನಿಗಿಂತ ಮುಂಚೆಯೇ ಕಿಡ್, ಮಾ[illegible] ಮೊದಲಾದವರು ತಕ್ಕಮಟ್ಟಿಗೆ ಉತ್ತಮವಾದ ನಾ[illegible] ಗಳನ್ನು ಬರೆದು, ಬಿಡಿ ವೃತ್ತವನ್ನು ನಾಟಕದಲ್ಲಿ [illegible] ಯೋಗಿಸಿ ಹದಕ್ಕೆ ತಂದಿದ್ದರು. ಈ ಕೆಲಸದಲ್ಲಿ[illegible] ನಾಟಕ ರಚನೆಯಲ್ಲಿಯೂ ಮಾರ್ಲೋವಿನಿ[illegible] [illegible] ಸಾಹಿತ್ಯಕ್ಕೆ ಬಹಳ ಉಪಕಾರವಾ[illegible] ಮಾರ್ಲೋ ಮೊದಲಾದವರು ದಾರಿಯನ್ನು

ಮಾಡಿದಮೇಲೆ ಷೇಕ್ಸ್‌ಪಿಯರ್ ಮಹಾಕವಿಯು ಬಂದನು. ಆಗ ಪುರಾತನ ಗ್ರೀಕರ ಸೂತ್ರಗಳನ್ನನುಸರಿಸಿ ನಾಟಕವನ್ನು ಬರೆಯಬೇಕೇ ಅಥವಾ ಹೊಸ ಪದ್ಧತಿಗಳನ್ನು ಅನುಸರಿಸುವ ಸ್ವಾತಂತ್ರ್ಯ ಕವಿಗೆ ಇರುವುದೇ ಎಂಬ ಚರ್ಚೆಯಿತ್ತು. ಷೇಕ್ಸ್‌ಪಿಯರು ಹೊಸ ಪದ್ಧತಿಗಳನ್ನೇ ಅನುಸರಿಸಿ ಪ್ರಪಂಚದಲ್ಲೆಲ್ಲಾ ಪ್ರಖ್ಯಾತಿ ಹೊಂದಿರುವ ನಾಟಕಗಳನ್ನು ಬರೆದನು. ಈ ನಾಟಕಗಳಲ್ಲಿರುವ ವಸ್ತು ಸಂವಿಧಾನ, ಕವಿತಾಶಕ್ತಿ, ಪಾತ್ರ ನಿರ್ಮಾಣಶಕ್ತಿ, ಮೊದಲಾದುವುಗಳನ್ನು ಎಷ್ಟು ಹೊಗಳಿದರೂ ತೀರದು. ಮಾನವನ ಹೃದಯವನ್ನು ಷೇಕ್ಸ್‌ಪಿಯರಿಗಿಂತ ಚೆನ್ನಾಗಿ ಮತ್ತಾರೂ ಅರಿಯರೆಂದರೆ ಅತ್ಯುಕ್ತಿಯಾಗಲಾರದು. ಈತನು ಪ್ರಪಂಚದ ಮಹಾಪುರುಷರಲ್ಲಿ ಒಬ್ಬನು. ಈತನು ರುದ್ರ ನಾಟಕಗಳನ್ನೂ, ಹಾಸ್ಯನಾಟಕಗಳನ್ನೂ, ಚರಿತ್ರ ನಾಟಕಗಳನ್ನೂ ಬರೆದನು. ಹ್ಯಾಮ್ಲೆಟ್, ಲಿಯರ್, ಒಥೆಲೊ, ಮ್ಯಾಕ್‌ಬೆತ್, ಟೆಂಪೆಸ್ಟ್—ಇವು ಈತನ ಪ್ರಸಿದ್ಧ ನಾಟಕಗಳಲ್ಲಿ ಕೆಲವು.

## ಮಿಲ್ಟನ್

ಈ ಕಾಲದಲ್ಲಿ ಅಚ್ಚ ಕವಿತೆಯನ್ನು ಬರೆದು ಪ್ರಸಿದ್ಧಿ ಪಡೆದವರಲ್ಲಿ ಸ್ಪೆನ್ಸರ್ ಎಂಬಾತನದೇ ಮೊದಲನೆಯ ಹೆಸರು. ಈತನ ಪ್ರಖ್ಯಾತ ಕಾವ್ಯವು "ಫೇರಿ ಕ್ವೀನ್" ಎಂಬುದು. ಬೆನ್ ಜಾನ್‌ಸನ್ ಎಂಬಾತನು ನಾಟಕ ಬರೆಯುವುದರಲ್ಲಿಯೂ ಕವಿತೆಯಲ್ಲಿಯೂ ಪ್ರಸಿದ್ಧನು. ಇವರಲ್ಲದೆ ಶ್ರೇಷ್ಠ ಕವಿಗಳು ಇನ್ನೂ ಅನೇಕರಿದ್ದರು. ಆದರೂ ಸ್ಪೆನ್ಸರ್ ಆದ ಮೇಲೆ ಅಚ್ಚ ಕವಿತೆಯಲ್ಲಿ ಮಿಲ್ಟನ್ ಎಂಬ ಕವಿಯು ಬಹು ಪ್ರಸಿದ್ಧನು. (ಎಲಿಜಬೆತನ್ ಸಾಹಿತ್ಯವು ಎಲಿಜಬೆತ್ ಬದುಕಿದ್ದ ಕಾಲದ ಸಾಹಿತ್ಯ ಮಾತ್ರವೆಂದು ಭಾವಿಸಲಾಗದು. ಮಿಲ್ಟನ್ನನು ಕ್ರಾಮ್‌ವೆಲನ ಕಾಲದವನಾದರೂ ಒಂದು ವಿಧದಲ್ಲಿ ನೋಡಿದರೆ ಸಾಹಿತ್ಯ ಚರಿತ್ರೆಯ ಸಿಂಹಾವಲೋಕನದಲ್ಲಿ ಎಲಿಜಬೆತ್ ಕಾಲಕ್ಕೇ ಸೇರುವನು). ಎಲಿಜಬೆತ್ ಕಾಲದ ಸಾಹಿತ್ಯದ ಆವರಣ, ಪ್ಯೂರಿಟನ್ ಪಂಗಡದವರ ಮನೋವೃತ್ತಿ, ಗ್ರೀಕ್, ಮತ್ತು ಲ್ಯಾಟಿನ್ ಸಾಹಿತ್ಯದ ಪ್ರಭಾವ—ಇವೆಲ್ಲವೂ ಮಿಲ್ಟನ್ನಿನಲ್ಲಿ ಸೇರಿವೆ. 'ಪ್ಯಾರಡೈಸ್ ಲಾಸ್ಟ್' ಎಂಬುದು ಈತನ ಮಹಾಕಾವ್ಯ. ಈತನ ಶೈಲಿ, ಕಾವ್ಯದ ಗಾಂಭೀರ್ಯ, ಛಂದಸ್ಸಿನ ಕೌಶಲ, ಪಾತ್ರ ರಚನಾಶಕ್ತಿ—ಇವು ಅದ್ಭುತವಾದುವು. ಈತನು ಇಂಗ್ಲೆಂಡಿನ ಮಹಾಕವಿಗಳಲ್ಲಿ ಒಬ್ಬನು.

## ವಸಂತ ಕಾಲ

ಎಲಿಜಬೆತ್ ಕಾಲದಲ್ಲಿ ಉತ್ತಮ ಕವಿತಾಶಕ್ತಿಯೂ ನಾಟಕ ರಚನಾಶಕ್ತಿಯೂ ಇದ್ದವರು ಅನೇಕರು ಉದಯಿಸಿದರು. ಇಂಗ್ಲೆಂಡಿನ ಸಾಹಿತ್ಯಕ್ಕೆ ಅದು ವಸಂತ ಕಾಲ. ಆಗ ಜೀವನದ ಎಲ್ಲಾ ಭಾಗಗಳಲ್ಲಿಯೂ ಉತ್ಸಾಹವು ತುಂಬಿ ತುಳುಕುತ್ತಿತ್ತು. ಎಲ್ಲಾ ಕಡೆಗಳಲ್ಲೂ ಹೊಸ ದಾರಿಗಳನ್ನು ಹುಡುಕುವ, ಅಸಾಧ್ಯವಾದುದನ್ನು ಸಾಧ್ಯಮಾಡಲು ಯತ್ನಿಸುವ, ಮುಗಿಲು ಮುಟ್ಟುವ ಉತ್ಸಾಹ. ದೇಶದಲ್ಲಿ ನವಜೀವನ ಪ್ರವಾಹವು ಎರಡು ಕರೆಗಳನ್ನೂ ತುಂಬಿ, ಕರೆಗಳನ್ನು ಒಡೆದು, ಉಕ್ಕಿ ಹರಿಯುತಲಿತ್ತು. ಈ ನವಜೀವನವು ಕಾವ್ಯರೂಪದಲ್ಲಿ ಹೊರಹೊಮ್ಮಿ ಎಲಿಜಬೆತನ್ ಸಾಹಿತ್ಯವಾಯಿತು. ಇಂತಹ ಯುಗಗಳು ಬರುವುದು ಅಪರೂಪ.

## ಸ್ವಚ್ಛಂದ ವೃತ್ತಿ

ಮಿಲ್ಟನ್ನಿನ ಕಾಲದ ನಂತರ ಬಂದ ಕವಿಗಳು ಬಹು ಸ್ವಾರಸ್ಯವಾದ ಕವನಗಳನ್ನು ಬರೆದರೂ ಅವರಲ್ಲಿ ಎಲಿಜಬೆತ್ ಕಾಲದ ಪ್ರತಿಭೆಯ ಔನ್ನತ್ಯವು ಕಡಿಮೆಯಾಗುತ್ತ ಬಂದಿತು. ಷೇಕ್ಸ್‌ಪಿಯರ್, ಮಿಲ್ಟನ್ ಮೊದಲಾದವರಲ್ಲಿ ಪ್ರತಿಭೆಯು ಅವರ ಅದ್ಭುತ ಕಲಾಜ್ಞಾನದ ಹಿಡಿತಕ್ಕೆ ಸಿಕ್ಕಿ, ನಭೋಮಾರ್ಗದಲ್ಲಿ ಹೋದರೂ ದಾರಿ ತಪ್ಪದಂತೆ ನಡೆಯಿಸಲ್ಪಡುತ್ತಿದ್ದಿತು. ಆದರೆ ಆ ಕಾಲವು ಕೊನೆಗಾಣುತ್ತ ಬಂದಹಾಗೆ ಪ್ರತಿಭೆಯು ಲಗಾಮು ಕಿತ್ತ ಕುದುರೆಯಂತೆ ಹೊರಡಲಾರಂಭಿಸಿ, ಕಾವ್ಯದಲ್ಲಿ ಯಾರೂ ಕಾಣದ್ದು, ಕೇಳದ್ದು, ಅಪೂರ್ವವಾದ ಜಾಡು, ವಿಚಿತ್ರವಾದ ಅಲಂಕಾರಗಳು ಇವುಗಳನ್ನು ಹುಡುಕಿಕೊಂಡು ಹೋಗುವ ಅಭ್ಯಾಸ ಹೆಚ್ಚಾಗುತ್ತ ಬಂತು. ಛಂದಸ್ಸಿನಲ್ಲಿಯೂ ಅವನತಸ್ಥಿತಿಯೇ ಕಂಡುಬರುತ್ತಿತ್ತು. ಸ್ವಾತಂತ್ರ್ಯಕ್ಕೆ ಬದಲಾಗಿ ಸ್ವಚ್ಛಂದ ವೃತ್ತಿಯೇ ಹೆಚ್ಚಿ ಸಾಹಿತ್ಯದಲ್ಲಿ ಅರಾಜಕಸ್ಥಿತಿಯು ಬರಬಹುದೆಂಬ ಶಂಕೆಯುಂಟಾಯಿತು. ಬಿಗಿ, ಹಿಡಿತ, ತಪ್ಪಿಲ್ಲದ ಬರವಣಿಗೆ, ಗಾಂಭೀರ್ಯ, ಸ್ಪಷ್ಟತೆ, ನಿಯಮಗಳ ಕಟ್ಟು—ಇವುಗಳ ಅವಶ್ಯಕತೆ ಹೆಚ್ಚಾಯಿತು. ಫ್ರಾನ್ಸ್ ದೇಶದಲ್ಲಿ ಸಾಹಿತ್ಯಾಭಿಮಾನಿಗಳು ಈ ಗುಣಗಳನ್ನು ಪ್ರಧಾನವಾಗಿಟ್ಟು

ಕೊಂಡೇ ಕಾವ್ಯಗಳನ್ನು ಬರೆಯಬೇಕೆಂದು ಸಾರುತ್ತಿದ್ದರು. ಅವರ ಅಭಿಪ್ರಾಯಗಳು ಇಂಗ್ಲೆಂಡಿಗೂ ಬಂದು ಹೊಸ ತರದ ಕಾವ್ಯಗಳು ಹೊರಡಲಾರಂಭವಾಯಿತು.

## ಹೊಸ ಕಾವ್ಯ ಜೀವನ

ಈ ಹೊಸ ಅಭಿಪ್ರಾಯಗಳೂ ಹೊಸ ಪದ್ಧತಿಗಳೂ ಡ್ರೈಡನ್ ಎಂಬ ಕವಿಯ ಬರವಣಿಗೆಯಲ್ಲಿ ಕಂಡುಬರುವುವು. ಈತನನ್ನು ಆ ಕಾಲದ ಪ್ರತಿನಿಧಿಯಾಗಿ ತೆಗೆದುಕೊಳ್ಳಬಹುದು. ಈತನು ಹೊಸಯುಗದ ಮೊದಲನೆಯ ಕವಿ. ಪದ್ಯ, ಗದ್ಯ, ನಾಟಕ—ಎಲ್ಲದರಲ್ಲಿಯೂ ಪ್ರಸಿದ್ಧಿ ಪಡೆದವನು. ಆಬ್ಸಲೋಮ್ ಮತ್ತು ಆಕಿಟೋಫಲ್, ಮ್ಯಾಕ್‌ಫ್ಲೆಕ್ನೊ ಎಂಬುವು ಈತನಿಗೆ ಬಹಳ ಹೆಸರು ತಂದ ಕವನಗಳು. ಇವು ಕಟುಹಾಸ್ಯದ ಕಾವ್ಯಗಳು; ಹಿಂದಿನಿಂದಲೂ ಉಪಯೋಗದಲ್ಲಿದ್ದು ಆಗತಾನೆ ಪ್ರಬಲವಾಗುತ್ತಿದ್ದ ಕಪ್ಲೆಟ್ (ಎರಡೆರಡು ಸಾಲಿನ ಪ್ರಾಸಬದ್ಧವಾದ ಪದ್ಯಗಳು) ಎಂಬ ವೃತ್ತದಲ್ಲಿ ಬರೆದುವು. ಡ್ರೈಡನ್ನನು ಈ ಕವನಗಳನ್ನೂ ಕೆಲವು ಹಾಸ್ಯ ನಾಟಕಗಳನ್ನೂ ಬರೆದುದಲ್ಲದೆ ಹೆರೊಯಿಕ್ ನಾಟಕ ಎಂಬುದೊಂದು ಹೊಸ ಮಾದರಿಯ ನಾಟಕವನ್ನು ಪ್ರಚಾರಕ್ಕೆ ತಂದನು. ಆದರೆ ಈ ನಾಟಕಗಳಲ್ಲಿ ಶೈಲಿಯೂ ಪಾತ್ರಗಳೂ ಅಸ್ವಾಭಾವಿಕವಾಗಿದ್ದುದರಿಂದ ಆ ನಾಟಕದ ಸಂಪ್ರದಾಯವು ಇಂಗ್ಲೆಂಡಿನಲ್ಲಿ ಬೇರೂರಲಿಲ್ಲ.

ಹೆರೋಯಿಕ್ ನಾಟಕದ ಪ್ರಾಬಲ್ಯ ಕಡಿಮೆಯಾಗುವ ವೇಳೆಗೆ ಇಂಗ್ಲೆಂಡಿನಲ್ಲಿ ಹೊಸ ತರದ ಹಾಸ್ಯ ನಾಟಕವೊಂದು ಏಳಿಗೆಗೆ ಬರುತ್ತಿತ್ತು. ಈ ತರದ ನಾಟಕವನ್ನು ಬರೆದವರಲ್ಲಿ ವೈಚರ್ಲಿ, ಕಾಂಗ್ರೀವ್ ಎಂಬವರು ಮುಖ್ಯಸ್ಥರು. ಇವರ ನಾಟಕಗಳಲ್ಲಿ ಕೆಲವು ದೃಶ್ಯಗಳು ಚಮತ್ಕಾರವಾಗಿವೆ; ವಾಕ್ಚಾತುರ್ಯವು ಬಹು ಸೊಗಸಾಗಿದೆ. ಆದರೆ ನೀತಿಯ ದೃಷ್ಟಿಯಿಂದ ನೋಡಿದರೆ ಈ ನಾಟಕಗಳು ಅಸಹ್ಯವನ್ನುಂಟುಮಾಡುತ್ತವೆ. ಅವುಗಳ ದುರ್ನೀತಿಯನ್ನು ಖಂಡಿಸಿ ಕಾಲಿಯರ್ ಎಂಬಾತನು ಒಂದು ಪುಸ್ತಕವನ್ನು ಬರೆದನು. ಅಲ್ಲಿಂದಾಚೆಗೆ ಹೊರಟ ಹಾಸ್ಯ ನಾಟಕಗಳು ನೀತಿಯ ವಿಷಯದಲ್ಲಿ ಅಷ್ಟು ಕೆಟ್ಟಿಲ್ಲದಿದ್ದರೂ ಕಲಾದೃಷ್ಟಿಯಿಂದ ಸಮರ್ಪಕವಾಗಿರಲಿಲ್ಲ. ಹದಿನೆಂಟನೆಯ ಶತಮಾನದ ನಾಟಕದ ಏಳಿಯ...



ಗಿಯೂ ಹೆಚ್ಚು ಬರೆಯಬೇಕಾಗಿಲ್ಲ. ನಾಟಕ... ಕಾಲದಲ್ಲಿ ಹೀನಸ್ಥಿತಿಗೆ ಬಂದಿತು. ಮೇಲು ... ಸೇರುವ ನಾಟಕಗಳನ್ನು ಬರೆದವರು ಶೆರಿ... ಗೋಲ್ಡ್‌ಸ್ಮಿತ್ ಎಂಬವರಿಬ್ಬರೇ.

ಹದಿನೆಂಟನೆಯ ಶತಮಾನದ ಪದ್ಯಗಳ ... ಇನ್ನೂ ಕೆಲವು ಮಾತುಗಳನ್ನು ಹೇಳಬೇಕಾ... ಡ್ರೈಡನ್ನನು ಕಪ್ಲೆಟ್ ವೃತ್ತದಲ್ಲಿ ತನ್ನ ಕಾವ್ಯಗ... ಬರೆದಮೇಲೆ ಇಂಗ್ಲೀಷ್ ಕವನಗಳಿಗೆ ಅದೇ ಮು... ವೃತ್ತವಾಗಿ ಹೋಯಿತು. ಆ ಶತಮಾನದಲ್ಲಿ ಪ್ರ... ಪಡೆದ ಕವಿಗಳೆಲ್ಲರೂ ತಮ್ಮ ಮುಖ್ಯ ಕಾವ್ಯಗ... ಆ ವೃತ್ತವನ್ನೇ ಉಪಯೋಗಿಸಿದರು. ಈ ಶತಮಾ... ಕವಿಗಳಲ್ಲಿ ಪೋಪ್ ಎಂಬಾತನು ಬಹಳ ಹೆಸರು... ಪಡೆದನು. ಈತನು ಗ್ರೀಕ್ ಕವಿಯಾದ ಹೋಮ... ಕಾವ್ಯಗಳನ್ನು ಭಾಷಾಂತರಿಸಿದ್ದಲ್ಲದೆ ಕೆಲವು ಸ್ವ... ವಾದ ಕಟುಹಾಸ್ಯ ಕಾವ್ಯಗಳನ್ನೂ ಬ... ಗೋಲ್ಡ್‌ಸ್ಮಿತ್, ಜಾನ್ಸನ್ ಮೊದಲಾದವರೂ ... ಶ್ರೇಷ್ಠ ಕವನಗಳನ್ನು ಕಪ್ಲೆಟ್ ವೃತ್ತದಲ್ಲಿಯೇ ... ದರು. ಈ ಹದಿನೆಂಟನೆಯ ಶತಮಾನದ ಕವಿ... ಒಟ್ಟಿನಲ್ಲಿ ಪ್ರತಿಭಾಶಕ್ತಿ ಕಡಿಮೆ.

## ಗದ್ಯಕಾವ್ಯ

ಈ ಪ್ರಬಂಧದಲ್ಲಿ ಇದುವರೆಗೆ ಗದ್ಯಕಾ... ಮಾತನ್ನೇ ಎತ್ತಿಲ್ಲ. ಆದರೆ ಗದ್ಯಕಾವ್ಯ ಹದಿ... ನೆಯ ಶತಮಾನದವರೆಗೂ ಇಂಗ್ಲೆಂಡಿನಲ್ಲಿ ಇ... ಇಲ್ಲವೆಂದಲ್ಲ. ಹದಿನಾಲ್ಕು ಹದಿನೈದನೆಯ ಶತಮಾ... ದಲ್ಲಿಯೂ ಉತ್ತಮವಾದ ಗದ್ಯ ಕಾವ್ಯಗ... ಮ್ಯಾಂಡೆವಿಲ್, ಮೇಲೊರಿ ಮೊದಲಾದವರು ... ದ್ದರು; ಇನ್ನು ಸ್ವಲ್ಪ ಕಾಲದಮೇಲೆ ಬಹು ... ಸಾದ ಶೈಲಿಯಲ್ಲಿ ಬರೆದಿರುವ ಇಂಗ್ಲಿಷ್ ಬೈ... ಬಂದಿತು. ಹದಿನೇಳನೆಯ ಶತಮಾನದಲ್ಲಿ ... ಮಿಲ್ಟನ್, ಬ್ರೌನ್ ಮೊದಲಾದವರು ಅದ್ಭುತ... ಲಯ, ಸೌಂದರ್ಯ, ಮಾಧುರ್ಯಗಳನ್ನುಳ್ಳ... ಶೈಲಿಯಲ್ಲಿ ಬರೆದಿದ್ದರು. ಆದರೆ ಅವರ ಶೈಲಿ... ಸಾಧಾರಣ ಜನರ ಕೈಗೆ ಸಿಕ್ಕುವಂಥದಲ್ಲ. ... ಕೈಯಲ್ಲಿಯೇ ಕೆಲವುವೇಳೆ ಕೆಟ್ಟುಹೋಗುತ್ತಿದ್ದಿ... ಅದಲ್ಲದೆ ಚರಿತ್ರೆ, ಪ್ರಬಂಧ, ತತ್ವಶಾಸ್ತ್ರ, ಕಾದಂ... ಮೊದಲಾದ ಕಾವ್ಯಗಳಿಗೆ ಈ ಶೈಲಿಯು ಸುಲಭವಾ... ಹೊಂದುವುದಿಲ್ಲ. ಮಿಲ್ಟನ್ ಮೊದಲಾದವರ ...

ಗಳು ಬಹು ದೀರ್ಘವಾದುವು; ವಾಕ್ಯರಚನೆಯಲ್ಲಿ ತೊಡಕು ಹೆಚ್ಚು; ಸುಲಭವಾಗಿ ಅರ್ಥವಾಗುವುದಿಲ್ಲ. ಈ ತೊಂದರೆಗಳಿಲ್ಲದಿರುವ, ಅನೇಕತರಹ ಕಾವ್ಯಗಳಿಗೆ ಹೊಂದುವ ಆಧುನಿಕ ಇಂಗ್ಲಿಷ್ ಗದ್ಯ ಶೈಲಿಯು ಹದಿನೆಂಟನೆಯ ಶತಮಾನದಲ್ಲಿ ಪ್ರಚಾರಕ್ಕೆ ಬಂದಿತು. ನಾವು ಮೊದಲು ವರ್ಣಿಸಿದ ಹಿಂದಿನ ಶೈಲಿಯನ್ನು ಆಲಂಕಾರಿಕ ಶೈಲಿಯೆಂದೂ, ಹೊಸ ಶೈಲಿಯನ್ನು ಸರಳ ಶೈಲಿಯೆಂದೂ ಕರೆಯಬಹುದು. ಈ ಸರಳ ಶೈಲಿಯು ಹಿಂದೆ ಇರಲೇ ಇಲ್ಲವೆಂದು ಹೇಳಲಾಗುವುದಿಲ್ಲ. ಆದರೆ ಅದು ಉನ್ನತಸ್ಥಿತಿಗೆ ಬಂದದ್ದು ಡ್ರೈಡನ್ನನ ಕಾಲದಿಂದೀಚೆಗೆ. ಈ ಶೈಲಿಯಲ್ಲಿ ಅಲಂಕಾರ ಹೆಚ್ಚಾಗಿಲ್ಲ; ಲ್ಯಾಟಿನ್ ಪದಗಳು ಕಡಿಮೆ; ವಾಕ್ಯಗಳು ಚಿಕ್ಕವು; ಬರೆಯುವವನ ಅಭಿಪ್ರಾಯವು ಓದುವವನಿಗೆ ಸುಲಭವಾಗಿ ಅರ್ಥವಾಗುವುದು. ಈ ಶೈಲಿಯನ್ನು ಡೀಫೋ ಎಂಬಾತನು ತನ್ನ ಕಥೆಗಳಲ್ಲಿಯೂ, ಸ್ವಿಫ್ಟ್ ಎಂಬಾತನು ತನ್ನ ಕಟುಹಾಸ್ಯ ಕಾವ್ಯಗಳಲ್ಲಿಯೂ, ಅಡಿಸನ್, ಸ್ಟೀಲ್, ಗೋಲ್ಡ್‌ಸ್ಮಿತ್ ಮೊದಲಾದವರು ತಮ್ಮ ಪ್ರಬಂಧಗಳಲ್ಲಿಯೂ ಬಹು ಸ್ವಾರಸ್ಯವಾಗಿ ಉಪಯೋಗಿಸಿರುವರು. ಈ ಶತಮಾನದಲ್ಲಿ ಇನ್ನು ಕೆಲವರು—ಬರ್ಕ್, ಗಿಬ್ಬನ್ ಮೊದಲಾದವರು — ಆಲಂಕಾರಿಕ ಶೈಲಿಯಲ್ಲಿಯೇ ಉತ್ತಮವಾದ ಕಾವ್ಯಗಳನ್ನು ಬರೆದರು. ಇವರ ಶೈಲಿಯೂ ಬಹಳ ಮನೋರಂಜಕವಾಗಿರುವುದು.

## ೧೮ನೇ ಶತಮಾನ

ಒಟ್ಟಿನಲ್ಲಿ ಹದಿನೆಂಟನೆಯ ಶತಮಾನವು ಕಪ್ಲೆಟ್ ವೃತ್ತದ ಪದ್ಯಗಳಿಗೆ, ಕಟುಹಾಸ್ಯ ಕಾವ್ಯಗಳಿಗೆ, ಮತ್ತು ದ್ಯಕಾವ್ಯಗಳಿಗೆ ಏಳಿಗೆಯ ಕಾಲ. ಅನೇಕರು ದನ್ನು ಗದ್ಯದ ಶತಮಾನವೆಂದೇ ಕರೆದಿರುವರು. ಅಡಿನ್, ಸ್ಟೀಲ್, ಗೋಲ್ಡ್‌ಸ್ಮಿತ್ ಮೊದಲಾದವರು ಪ್ರಬಂಧವನ್ನು ಉನ್ನತಸ್ಥಿತಿಗೆ ತಂದರು. ಗಿಬ್ಬನ್ನನು ರೋಮನ ಚಕ್ರಾಧಿಪತ್ಯದ ವಿಷಯವಾಗಿ ಒಂದು ದ್ಯ ಮಹಾ ಕಾವ್ಯವನ್ನು ಬರೆದನು. ಬಾರ್ಕ್ಲೆಯು ನ್ನ ಸೊಗಸಾದ ಶೈಲಿಯಿಂದ ತತ್ವಶಾಸ್ತ್ರವನ್ನು ಸಾಹಿತ್ಯವಾಗಿ ಮಾಡಿದನು. ಇದಲ್ಲದೆ ಈ ಕಾಲದಲ್ಲಿ ಕಾದಂಬರಿಯೆಂಬ ಹೊಸತರದ ಗದ್ಯಕಾವ್ಯವು ಮುಂದಕ್ಕೆ ಬಂದಿತು. ಈ ಕಾದಂಬರಿಯ ಕುರುಹುಗಳು ಹಿಂದಿನ ಕೆಲವು ತರದ ಕಾವ್ಯಗಳಲ್ಲಿಯೇ ಕಂಡುಬಂದಿದ್ದವು. ಆದರೆ ಈ ಕಾಲದಲ್ಲಿ ರಿಚರ್ಡ್‌ಸನ್, ಫೀಲ್ಡಿಂಗ್ ಮೊದಲಾದ ಪ್ರಸಿದ್ಧ ಕಾದಂಬರಿಕಾರರು ಹುಟ್ಟಿ ಕಾದಂಬರಿಗೆ ಪೂರ್ಣರೂಪವನ್ನು ಕೊಟ್ಟರು.

## ಸ್ವಾತಂತ್ರ್ಯಾಭಿಲಾಷೆ

ಹದಿನೆಂಟನೆಯ ಶತಮಾನದ ಜನರಿಗೆ ಕಾವ್ಯಗಳಲ್ಲಿ ಪ್ರತಿಭೆಯು ಹೆಚ್ಚು ಬೇಕಾಗಿರಲಿಲ್ಲ; ಶುದ್ಧತೆ, ಲಾಲಿತ್ಯ, ವಿಚಾರಶಕ್ತಿ, ಗ್ರೀಕರ ಕಾಲದಿಂದ ಬಂದ ಸಾಹಿತ್ಯ ನಿಯಮಗಳನ್ನು ಮೀರದೆ ಇರುವುದು—ಇವೇ ಸಾಹಿತ್ಯದಲ್ಲಿ ಮುಖ್ಯ ಗುಣಗಳಾಗಿದ್ದವು. ಅವರು ಗ್ರೀಕರ ಸಂಪ್ರದಾಯವನ್ನು ಸ್ವಲ್ಪ ತಪ್ಪುತಪ್ಪಾಗಿ ಅರ್ಥಮಾಡಿಕೊಂಡಿದ್ದರು. ಕವಿಗಳು ಸ್ವತಂತ್ರರಾಗದೆ ಹಳೆಯ ಸಂಪ್ರದಾಯಕ್ಕನುಸಾರವಾಗಿಯೇ ಕಾವ್ಯಗಳನ್ನು ಬರೆಯಬೇಕೆಂದು ಅವರ ನಂಬಿಕೆ. ಅವರ ಕಾವ್ಯಗಳಲ್ಲಿ ಪ್ರಕೃತಿಯ ಸೌಂದರ್ಯಕ್ಕೇ ಆಗಲಿ, ಮಾನವನ ಹೃದಯದ ರಹಸ್ಯ ಜೀವನಕ್ಕೇ ಆಗಲಿ ಹೆಚ್ಚು ಸ್ಥಾನವಿರಲಿಲ್ಲ. ಅವರು ಪ್ರಕೃತಿಯ ಆರಾಧಕರಲ್ಲ; ಪಟ್ಟಣವಾಸದವರು. ಪ್ರಕೃತಿಯ ವಿಷಯ ಬರೆಯಲೇ ಬೇಕಾಗಿ ಬಂದರೆ ಏನೋ ಲೋಕಾಭಿರಾಮವಾದ ನಾಲ್ಕು ಮಾತು ಬರೆದುಬಿಡುತ್ತಿದ್ದರು. ಇದರ ಮೇಲೆ ಉತ್ತಮವಾದ ಪದ್ಯಕಾವ್ಯಗಳಿಗೆ ಕಪ್ಲೆಟ್ ವೃತ್ತವೇ ಅವಶ್ಯಕವೆಂದು ಇವರ ಭಾವನೆ. ಈ ಪದ್ಧತಿಗಳೆಲ್ಲ ಸ್ವಲ್ಪ ಕಾಲ ಪ್ರಚಾರದಲ್ಲಿದ್ದಮೇಲೆ ಜನಗಳಿಗೆ ಅವುಗಳಲ್ಲಿ ಜುಗುಪ್ಸೆಯುಂಟಾಯಿತು. ಆ ಶತಮಾನದ ಕವಿಗಳಲ್ಲಿಯೇ ಕೆಲವರು ಸೂತ್ರಗಳನ್ನು ಮೀರಿ ಬರೆದವರಿರುವರು; ಕೆಲವರು ಪ್ರಕೃತಿಯ ಸೌಂದರ್ಯವನ್ನು ನೋಡಿ ಆನಂದಪಟ್ಟು ವರ್ಣಿಸಿರುವರು; ಇನ್ನು ಕೆಲವರು ಕಪ್ಲೆಟ್ ವೃತ್ತವನ್ನು ಬಿಟ್ಟು ಬಿಡಿ ವೃತ್ತದಲ್ಲಿಯೂ ಇತರ ವೃತ್ತಗಳಲ್ಲಿಯೂ ಕವನಗಳನ್ನು ಬರೆದಿರುವರು. ಹೀಗೆ ಆ ಕಾಲದ ಸಂಪ್ರದಾಯಗಳಲ್ಲಿ ಅಸಮಾಧಾನ ತೋರುತ್ತಿದ್ದಾಗ, ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಫ್ರಾನ್ಸ್‌ದೇಶದಲ್ಲಿ ದೊಡ್ಡ ವಿಪ್ಲವವುಂಟಾಯಿತು. ಆಗ ಯೂರೋಪಿನಲ್ಲೆಲ್ಲಾ ಸ್ವಾತಂತ್ರ್ಯದ ಕೂಗೇ ಕೂಗು. ಈ ಸ್ವಾತಂತ್ರ್ಯಾಭಿಲಾಷೆ ಸಾಹಿತ್ಯದಲ್ಲಿಯೂ ಕಂಡುಬಂದಿತು. ಈ ಕಾಲದ ಕವಿಗಳು 'ಸಾಹಿತ್ಯದಲ್ಲಿ ಸೂತ್ರಗಳೂ ನಿಯಮಗಳೂ ಹಾಗಿರಲಿ; ಪ್ರತಿಭೆ, ಭಾವಗಳು, ಇವು ಮುಖ್ಯವಾದುವು' ಎಂದು ಸಾರಿದರು. ವರ್ಡ್ಸ್‌ವರ್ತ್ ಮತ್ತು ಕೋ

ಲಾರಿಜ್ ಎಂಬವರು ಹೊರಡಿಸಿದ "ಗೀತೆಗಳು ಮತ್ತು ಲಾವಣಿಗಳು" ಎಂಬ ಪುಸ್ತಕವೇ ಆಗಿನ ಕವಿಗಳ ದಂಗೆಯ ಮೊರಚಿಹ್ನೆ. ಈ ಪುಸ್ತಕವು ಪ್ರಕಟವಾದ ಮೇಲೆ ಬಂದೀಖಾನೆಯ ಸಲಾಕಿಗಳು ಸಡಿಲಿದಂತಾಗಿ, ಹೊಸ ಉತ್ಸಾಹವು ತಲೆದೋರಿ, ಹೊಸ ಕಾವ್ಯವಸ್ತುಗಳು, ಹೊಸ ಛಂದಸ್ಸು, ಪ್ರತಿಭೆ ಮತ್ತು ಭಾವನಾಶಕ್ತಿ, ಇವುಗಳನ್ನುಳ್ಳ ಕಾವ್ಯಗಳು ಬರತೊಡಗಿದವು. ಈ ಕಾಲದ ಸಾಹಿತ್ಯ ಚರಿತ್ರೆಯನ್ನೋದುವಾಗ ಈಗ ನಮ್ಮ ಕನ್ನಡದಲ್ಲಿ 'ಶ್ರೀ'ಯವರ 'ಇಂಗ್ಲಿಷ್ ಗೀತೆ'ಗಳು ಪ್ರಕಟವಾದ ಮೇಲೆ ಹೊಸ ಉತ್ಸಾಹ ತಲೆದೋರಿರುವುದು ನೆನಪಿಗೆ ಬರುವುದು.

ಈ ಕಾಲದಲ್ಲಿ ಮಹಾ ಕವಿಗಳನೇಕರು ಉದಯಿಸಿದರು. ಪ್ರಕೃತಿಯ ರಹಸ್ಯಜೀವನದ ವಿಷಯವನ್ನೂ ಆತ್ಮದ ವಿಷಯವನ್ನೂ ಕುರಿತು ಬರೆದ ವರ್ಡ್ಸ್‌ವರ್ತ್; ಮಾಯೆಯ ಮೊಬ್ಬೆಳಕಿನಲ್ಲಿ ಭಯಾಶ್ಚರ್ಯ ಜನಕಗಳಾದ ದೃಶ್ಯಗಳನ್ನು ನಿರ್ಮಿಸಿ ವಿಚಿತ್ರಮಾಧುರ್ಯವುಳ್ಳ ಲಯದಲ್ಲಿ ಕನಸಗಳನ್ನು ಬರೆದ ಕೋಲಾರಿಜ್; ಈ ಪ್ರಪಂಚವನ್ನು ಬಿಟ್ಟು ಗಗನಕ್ಕೆ ಹಾರಿ, ಅಲ್ಲಿ ಪ್ರತಿಭೆಯದೊಂದು ಪ್ರಪಂಚವನ್ನು ನಿರ್ಮಿಸಿ, ಅಲ್ಲಿಂದ ಬಾನಾಡಿಯಂತೆ ಹಾಡಿದ ಷೆಲ್ಲಿ; ಸೌಂದರ್ಯವೂ ಸತ್ಯವೂ ಒಂದೇ ಎಂದು ಸಾರಿದ ಕೀಟ್ಸ್; ಈ ಕವಿಗಳಷ್ಟು ಶುದ್ಧವಾದ ವಾಣಿಯಿಲ್ಲದಿದ್ದರೂ, ಸೊಗಸಾದ ಪ್ರತಿಭೆಯ ಹೊಳಪಿನಿಂದ ಕೂಡಿದ ಕಟುಹಾಸ್ಯಕಾವ್ಯವನ್ನು ಬರೆದ, ಜನಗಳನ್ನು ಮರುಳುಮಾಡುವಂಥ ಕಥೆಗಾರನಾದ ಬೈರನ್—ಇವರೆಲ್ಲರೂ ಈ ಕಾಲದವರು. ಇಷ್ಟು ಜನ ಮಹಾ ಕವಿಗಳು ಒಟ್ಟಿಗೆ ಒಂದು ಕಾಲದಲ್ಲಿ ಬರುವುದು ಅಪರೂಪ. ಈ ಪ್ರಬಂಧದಲ್ಲಿ ಇವರ ಹೆಸರುಗಳನ್ನು ಮಾತ್ರ ಹೇಳಿ ಮುಗಿಸಬೇಕಾಗಿದೆ.

ಈ ಕಾಲದ ಗದ್ಯಕಾವ್ಯಗಳೂ ಬಹಳ ಮಹತ್ವವುಳ್ಳವು. ಕೋಲ್‌ರಿಜ್ ಮತ್ತು ವರ್ಡ್ಸ್‌ವರ್ತರ ವಿಮರ್ಶೆಗಳು, ಲ್ಯಾಂಬ್ ಮತ್ತು ಹೆಸ್ಲಿಟ್ಟರ ಎಂದಿಗೂ ಮರೆಯಲಾಗದ ಪ್ರಬಂಧಗಳು, ಡಿಕ್ವೆನ್ಸಿಯ ಅಫೀಮು ಕನಸುಗಳು, ಸ್ಕಾಟನ ಮತ್ತು ಜೇನ್ ಆಸ್ಟೆನ್ನಿನ ಕಾದಂಬರಿಗಳು ಇವುಗಳನ್ನು ಎಷ್ಟು ಸಾರಿ ಓದಿದರೂ ಮನವು ದಣಿಯುವುದಿಲ್ಲ. ಈ ಕಾಲದ ಸಾಹಿತ್ಯವು ಮಹತ್ವದಲ್ಲಿ ಎಲಿಜಬೆತ್ ಕಾಲದ ಸಾಹಿತ್ಯಕ್ಕೆ ಎರಡನೆಯದಾಗಿದೆ.

## ವಿಕ್ಟೋರಿಯಾ ಯುಗ

ಇನ್ನು ಉಳಿದಿರುವುದು ವಿಕ್ಟೋರಿಯಾ ಯುಗದ ಕಾಲದ ಸಾಹಿತ್ಯ. ಈ ಕಾಲದಲ್ಲಿ ಟೆನಿಸನ್, ಬ್ರೌನಿಂಗ್ ಎಂಬವರೇ ಮುಖ್ಯಕವಿಗಳು. ಟೆನಿಸನು ಇಂಗ್ಲಿಷರಿಗೆ ಬ್ರೌನಿಂಗಿಗಿಂತ ಹೆಚ್ಚು [illegible]ಕೆಯ ಕವಿಯೆಂದು ತೋರುವುದು. ಆತನ ಕಾ[illegible]ಲ್ಲಿಯ ವಿಷಯಗಳು ಸರ್ವರಿಗೂ ತಿಳಿಯುವ[illegible]; ಶೈಲಿಯೂ ತಿಳಿಯಾದುದು; ವೃತ್ತಗಳು ಬಹು [illegible]ರವಾದವು. ಆತನು ಕಿವಿಗೆ ಇಂಪಾಗಿಲ್ಲದಿರು[illegible] ವೊಂದನ್ನೂ ಬರೆಯಲಿಲ್ಲವೆನ್ನಬಹುದು. ಬ್ರೌ[illegible] ಚರಣಗಳು ಅನೇಕವೇಳೆ ಕಿವಿಗೆ ಹಿತವಾಗಿ[illegible] ಶೈಲಿಯೂ ಸ್ವಲ್ಪ ಕಠಿಣ, ಎಲ್ಲರಿಗೂ ಸುಲಭವಾ[illegible]ನಾಗುವುದಿಲ್ಲ; ಆತನ ಕಾವ್ಯ ವಸ್ತುಗಳು [illegible] ಅನೇಕರ ಮನಸ್ಸನ್ನು ಆಕರ್ಷಿಸುವಂಥವು[illegible] ಕಾರಣಗಳಿಂದ ಬಹುದಿನಗಳವರೆಗೆ ಜನಗಳು [illegible]ದ್ಯಗಳನ್ನು ಮೆಚ್ಚಲಿಲ್ಲ. ಆದರೆ ಆತನ ಪದ್ಯಗಳ [illegible]ವಿಚಾರ ಶಕ್ತಿ, ಮನುಷ್ಯರ ಮನೋವೃತ್ತಿಯ[illegible]ವಾದ ತಿಳಿವಳಿಕೆ, ಭಾವನಾಶಕ್ತಿ, ಕೌಶಲ್ಯ [illegible]ವು—ಇವುಗಳಿಂದ ಆತನ ಹೆಸರು ದಿನದಿನಕ್ಕೆ [illegible] ಈಚೆಗೆ ಟೆನಿಸನ್ನಿನ ಮೇಲೆ ಜನಗಳ ಪ್ರೀತಿ ಕಡಿಮೆಯಾದರೂ ಬ್ರೌನಿಂಗನ ಕೀರ್ತಿ ಕ[illegible]ಗಿಲ್ಲ.

ಮಾರಿಸ್, ರಾಸೆಟ್ಟಿ, ಸ್ವಿನ್ಬರ್ನ್ ಮೊದಲಾ[illegible] ಈ ಕಾಲದ ಪ್ರಸಿದ್ಧ ಕವಿಗಳು. ಸ್ಥಳ ಸಂಕೋ[illegible] ಇಲ್ಲಿ ಇವರ ವಿಷಯ ಹೆಚ್ಚು ಹೇಳಲು ಸಾ[illegible]

ಹದಿನೆಂಟನೆಯ ಶತಮಾನದಲ್ಲಿ ಮೊದಲು [illegible] ರೂಪವನ್ನು ಹೊಂದಿದ ಕಾದಂಬರಿಯನ್ನು [illegible] ಜೇನ್ ಆಸ್ಟೆನ್ ಮೊದಲಾದವರು ಬೆಳೆಯಿಸುತ್ತಿದ್ದರು. ಈ ಕಾಲದಲ್ಲಿ ಡಿಕನ್ಸ್ ಎಂಬಾತ[illegible] ಹಾಸ್ಯಕಾದಂಬರಿಗಳನ್ನು ಬರೆದು ಜನಗಳಿಗೆ [illegible] ಹಬ್ಬವನ್ನು ಮಾಡಿದನು. ಥ್ಯಾಕರೆ, ಮೆರಿಡಿ[illegible]ದಲಾದವರು ಸಮಾಜದ ಹುಳುಕುಗಳನ್ನು [illegible] ಅಸಾಧಾರಣವಾದ ಪಾತ್ರರಚನಾ ಕೌಶಲವನ್ನು[illegible]ರಿ ಕಾದಂಬರಿಗಳನ್ನು ಬರೆದರು. ನಮ್ಮ [illegible]ಯೂ ಕೆಲವು ವರ್ಷಗಳು ಜೀವಿಸಿದ್ದ ಥಾಮಸ್ [illegible] ಎಂಬವನೂ ಬಹು ಪ್ರಸಿದ್ಧನಾದ ಕಾದಂಬರಿ[illegible] ಇಂಗ್ಲಿಷ್ ಕಾದಂಬರಿಕಾರರಲ್ಲಿ [illegible] ಪದವಿಯನ್ನು ಪಡೆದವರು.

ಹತ್ತೊಂಬತ್ತನೆಯ ಶತಮಾನದ ಮೊದಲನೆಯ ಭಾಗದಲ್ಲಿಯೇ ಅದರ ಹಿಂದಿನ ಶತಮಾನದ ಸರಳ ಶೈಲಿಯಲ್ಲಿ ಜನಗಳಿಗೆ ಉಪೇಕ್ಷೆ ಹುಟ್ಟಿ, ಆಲಂಕಾರಿಕ ಶೈಲಿಗೆ ಪ್ರಾಶಸ್ತ್ಯ ಬಂದಿತ್ತು. ಈ ಕಾಲದವರಿಗೂ ಸರಳಶೈಲಿಯಲ್ಲಿ ಹೆಚ್ಚು ಆದರವಿಲ್ಲ. ಕಲೆಯ ವಿಚಾರವಾಗಿ ಬರೆದ ರಸ್ಕಿನ್, ಚರಿತ್ರೆ ಮುಂತಾದ ವಿವಿಧ ವಿಷಯಗಳನ್ನು ಕುರಿತು ಬರೆದ ಕಾರ್ಲೈಲ್, ಮತ ವಿಚಾರವಾಗಿ ಬರೆದ ನ್ಯೂಮನ್—ಇವರೆಲ್ಲರೂ ಈ ಕಾಲದಲ್ಲಿ ಪ್ರಸಿದ್ಧರಾದ ಗದ್ಯಕವಿಗಳು. ಈ ಕಾರ್ಲೈಲ್, ರಸ್ಕಿನ್ ಮೊದಲಾದವರು ಗದ್ಯದಲ್ಲಿ ಪ್ರತಿಭೆಗೆ ಹೆಚ್ಚು ಸ್ಥಾನವನ್ನು ಕೊಟ್ಟರು. ಕೆಲವುವೇಳೆ ಅವರ ಗದ್ಯದಲ್ಲಿ ಪದ್ಯಕಾವ್ಯದ ಮಹತ್ವವೇ ಕಂಡು ಬರುವುದು.

ವಿಕ್ಟೋರಿಯಾ ರಾಣಿಯ ಕಾಲದಿಂದೀಚಿನ ಸಾಹಿತ್ಯದ ವಿಷಯ ಈಗ ಹೆಚ್ಚು ಬರೆಯಲಾಗುವುದಿಲ್ಲ. ಬ್ರಿಡ್ಜಸ್ ಮೊದಲಾದವರ ಪದ್ಯಕಾವ್ಯಗಳು, ಗ್ಯಾಲ್ಸ್‌ವರ್ಧಿ, ಬೆರ್ನಾರ್ಡ್‌ಷಾ ಮೊದಲಾದವರ ನಾಟಕಗಳು, ಕಾನ್ರಾಡ್, ವೆಲ್ಸ್, ಗ್ಯಾಲ್ಸ್‌ವರ್ಧಿ ಇವರ ಕಾದಂಬರಿಗಳು ನೆನಪಿಗೆ ಬರುತ್ತವೆ. ಉತ್ತಮ ತರದ ಸಾಹಿತ್ಯ ಸೃಷ್ಟಿಗೆ ಇದು ಕಾಲವೇ ಅಲ್ಲವೆಂದು ಕೆಲವರು ಹೇಳುತ್ತಾರೆ. ಈ ವಿಷಯದಲ್ಲಿ ಈಗ ಏನನ್ನೂ ಕಂಠೋಕ್ತವಾಗಿ ಹೇಳಲಾಗುವುದಿಲ್ಲ. ಕಾದಂಬರಿಗಳು, ಸಣ್ಣ ಕಥೆಗಳು, ನಾಟಕಗಳು, ಪದ್ಯಗಳು—ಎಲ್ಲವೂ ಪ್ರತಿ ತಿಂಗಳು ಪ್ರಕಟವಾಗುತ್ತಲೇನೊ ಇವೆ.

## ಮುಕ್ತಾಯ

ಅಪಾರವಾದ ಇಂಗ್ಲಿಷ್ ಸಾಹಿತ್ಯಸಾಗರವನ್ನು ಒಂದು ಸಲ ಆಪೋಶನ ತೆಗೆದುಕೊಳ್ಳುವುದಾಗಲಿ, ಇತರರಿಗೆ ಆಪೋಶನ ಹಾಕುವುದಾಗಲಿ ಅಸಾಧ್ಯವೆಂದು ಹೇಳಬೇಕಾಗಿಲ್ಲ. ಇಂಗ್ಲಿಷ್ ಸಾಹಿತ್ಯವು ಪ್ರಪಂಚದ ಸಾಹಿತ್ಯದಲ್ಲಿ ಬಹಳ ಉನ್ನತ ಸ್ಥಾನವನ್ನು ಪಡೆದಿದೆ. ಇಂಗ್ಲಿಷರು ಹೊಸ ಸಂಪ್ರದಾಯಗಳು ಬಂದರೆ ಏನಾಗುವುದೊ ಎಂಬ ಅಂಜುಬುರುಕತನವಿಲ್ಲದೆ, 'ಹೊರಗಿನವರಿಂದ ಕಲಿಯುವುದೇನು ನಮ್ಮಲ್ಲಿ ಸಾಹಿತ್ಯವಿಲ್ಲವೆ' ಎಂಬ ಜಂಬವಿಲ್ಲದೆ, ಇತರ ದೇಶದವರಿಂದ ತಮಗೆ ಅನುಕೂಲವಾದುದನ್ನೆಲ್ಲ ತೆಗೆದುಕೊಂಡಿರುವರು ; ಹೀಗೆ ತೆಗೆದುಕೊಂಡದ್ದನ್ನು ತಮ್ಮ ಸರಕಿನೊಡನೆ ಬೆರಸಿ ಅದನ್ನು ತಮ್ಮ ಸ್ವಂತ ಪದಾರ್ಥವಾಗಿ ಮಾಡಿಕೊಂಡಿರುವರು. ಸ್ವಾತಂತ್ರ್ಯ ಹೆಚ್ಚಿ ಕಾವ್ಯಗಳು ಕೆಟ್ಟಾಗ ನಿಯಮಕ್ಕೆ ಕಟ್ಟುಬಿದ್ದಿರುವರು ; ನಿಯಮದ ಆಳ್ವಿಕೆಯು ಹೆಚ್ಚಾಗಿ ದಾಸ್ಯತ್ವ ಬರುವುದೆಂದು ತೋರಿದಾಗ ಸ್ವಾತಂತ್ರ್ಯವನ್ನುವಹಿಸಿಕೊಂಡಿರುವರು. ಈಗ ಇನ್ನೂ ಬಾಲ್ಯಾವಸ್ಥೆಯಲ್ಲಿರುವ ಕನ್ನಡ ಸಾಹಿತ್ಯವು ಇಂಗ್ಲಿಷ್ ಸಾಹಿತ್ಯಪರಿಚಯದಿಂದ ಬಹುಮಟ್ಟಿಗೆ ಲಾಭವನ್ನು ಹೊಂದಬಹುದು.

---

# ತಮಿಳು ಸಾಹಿತ್ಯ ಕಥಾ ಪರಿಚಯ

(ರಾವ್ ಬಹದ್ದೂರ್ ಡಾಕ್ಟರ್ ಎಸ್. ಕೃಷ್ಣಸ್ವಾಮಯ್ಯಂಗಾರ್ ಎಂ. ಎ., ಮದರಾಸು)

## ದ್ರಾವಿಡ ಭಾಷಾಗಣ

ದಕ್ಷಿಣ ಹಿಂದೂಸ್ಥಾನದಲ್ಲಿ ಎಷ್ಟೋ ಭಾಷೆಗಳಿವೆ. ಸಾಹಿತ್ಯದ ಪ್ರಾಚೀನತೆ ಮತ್ತು ಆ ಭಾಷೆಯಲ್ಲಿರುವ ಅಪಾರ ಸಾಹಿತ್ಯವೈವಿಧ್ಯ ಇವೆರಡೂ ದೃಷ್ಟಿಯಿಂದಲೂ ತಮಿಳು ಉಚ್ಚಸ್ಥಾನವನ್ನು ಆಕ್ರಮಿಸಿದೆ. ಸಾಹಿತ್ಯ ರಾಶಿಯನ್ನು ಲಕ್ಷ್ಯದಲ್ಲಿರಿಸಿಕೊಂಡರೆ, ದ್ರಾವಿಡ ಭಾಷೆಗಳಲ್ಲೆಲ್ಲ ತಮಿಳು ಬಹಳ ಪುರಾತನವಾದುದೆಂದು ನಿಸ್ಸಂಶಯವಾಗಿ ಹೇಳಬಹುದು. ಕನ್ನಡ, ಮಲಯಾಳ, ಮತ್ತು ತೆಲುಗು ಇವೂ ಸಹ ತಮಿಳಿಗೆ ಸರಿಸಮಾನವಾಗಿ ನಿಲ್ಲುತ್ತವೆ. ಆದರೆ ಇವೆಲ್ಲ ದ್ರಾವಿಡ ಭಾಷೆಗಳಿಗೂ ತಮಿಳೇ ಮಾತೃಭಾಷೆಯೆಂದು ವಾದ ಹೂಡುವುದು ಕಷ್ಟಸಾಧ್ಯವೇ ಸರಿ. ಅದು ಹೇಗಾದರೂ ಇರಲಿ. ತಮಿಳು ಸಾಹಿತ್ಯದ ಪ್ರಾಚೀನತೆಯು ಬಹಳ ಹಿಂದಕ್ಕೆ ಹೋಗುತ್ತದೆ. ಈಗ ಇರುವ ಸಾಧನ ಸಂಪತ್ತಿಯ ಸಾಕ್ಷ್ಯದಮೇಲೆ ವಿಚಾರ ಮಾಡಿ ನೋಡಿದರೆ ತಮಿಳು ಬಹಳ ಪುರಾತನವಾದುದು. ಅವಾದನಂತರ ಕಾಲಮಾನದ ದೆಶೆಯಿಂದ

ಎರಡನೆಯ ಸ್ಥಾನವು ಕನ್ನಡ ಸಾಹಿತ್ಯಕ್ಕೆ ಹೋಗುತ್ತದೆ.

## ತಮಿಳು ಸಾಹಿತ್ಯ ಪ್ರಾಚೀನತೆ

ಯಾವ ಭಾಷೆಯೇ ಆಗಲಿ, 'ಸಂಸ್ಕೃತವಾದುದು' ಎಂಬ ಹೆಸರನ್ನು ಪಡೆಯಲು ಯೋಗ್ಯತೆ ಸಂಪಾದಿಸಬೇಕಾದರೆ, ಆ ಭಾಷೆಯಲ್ಲಿ ಬರೆದವುಗಳಿಗೆ ಸಾಹಿತ್ಯ ಸ್ಥಾನಗೌರವವು ಸಿಗಬೇಕಾದರೆ, ಆ ಗ್ರಾಂಥಿಕಾವಸ್ಥೆಗೆ ಬರುವುದಕ್ಕಿಂತ ಬಹಳ ಹಿಂದಣ ಕಾಲದಿಂದಲೂ ಭಾಷೆಯು ಜೀವಂತವಾಗಿ ಇದ್ದೇ ಇರಬೇಕೆಂದು ನಾವು ಭಾವಿಸಬಹುದು. ಅನೇಕ ಶತಮಾನಗಳಿಂದ ತಮಿಳು ಭಾಷೆಯು ಇದ್ದಿರಬಹುದೆಂದು ಭಾವಿಸೋಣ. ಆದರೆ ನಮಗೆ ಈಗ ದೊರೆತಿರುವ ತಮಿಳು ಸಾಹಿತ್ಯದ ಸಾಧನಗಳು ಕ್ರಿಸ್ತಪೂರ್ವ ೪ ನೆಯ ಶತಮಾನದವರೆಗೂ ನಮ್ಮನ್ನು ಕರೆದೊಯ್ಯುತ್ತವೆ. ಲಭ್ಯವಾಗಿರುವ ಸಾಹಿತ್ಯವು ಈ ಕಾಲಕ್ಕಿಂತ ಹಿಂದಕ್ಕೆ ಖಂಡಿತವಾಗಿ ಕರೆದೊಯ್ಯಲಾರದು. ಆದರೆ ಆ ಸಾಹಿತ್ಯ ವಿಶೇಷಗಳನ್ನು ಕ್ರಿಸ್ತಶಕದ ಪೂರ್ವಭಾಗಕ್ಕೊಂಡಷ್ಟು ಉತ್ತರ ಭಾಗಕ್ಕೊಂಡಷ್ಟು ಸೇರಿಸಬಹುದು.

## 'ತೊಲ್‌ಗಾಪ್ಪಿಯಂ'

ಪರಂಪರೆಯಾಗಿ ಲಬ್ಧವಾಗಿರುವ ತಮಿಳು ಇತಿವೃತ್ತದಲ್ಲಿ 'ತೊಲ್‌ಗಾಪ್ಪಿಯಂ' ಎಂಬ ವ್ಯಾಕರಣವೇ ತಮಿಳಿನಲ್ಲಿ ತಿಳಿದುಬಂದಿರುವ ಪುರಾತನ ಗ್ರಂಥ. 'ತೊಲ್‌ಗಾಪ್ಪಿಯಂ' ಅಂದರೆ 'ಹಳೆಯ ಕಾವ್ಯ' ಎಂದರ್ಥ. ತಮಿಳು ಭಾಷೆಯ ಪುರಾತನ ವ್ಯಾಕರಣವಿದೇ. ಇಂತಹ ವ್ಯಾಕರಣವೊಂದಿತ್ತು ಅಂದಕೂಡಲೇ ಅದಕ್ಕೆ ಹಿಂದೆ ಕೊಂಚ ಸಾಹಿತ್ಯರಾಶಿಯು ಇದ್ದೇ ಇರಬೇಕಷ್ಟೆ. ವಿವೇಕಯುತವಾದ ಪರಿಶೋಧನೆ ನಡೆಸಿದಾಗ 'ತೊಲ್‌ಗಾಪ್ಪಿಯಂ' ಎಂಬುದೇ ತಮಿಳಿನಲ್ಲಿ ಬರೆದ ಗ್ರಂಥಗಳಲ್ಲಿ ಮೊಟ್ಟಮೊದಲನೆಯದೆಂದು ಹೇಳಿದರೆ ಅದನ್ನು ನಂಬುವುದು ಕಷ್ಟ. ಈ ವ್ಯಾಕರಣ ರಚನೆಯ ಕಾಲವನ್ನು ತಕ್ಕಮಟ್ಟಿಗೆ ಹಿಂದೆಯೇ ಇಡಬೇಕಾಗುತ್ತದೆ. ಮತ್ತು ಅದಕ್ಕೆ ಮೊದಲೇ ಉಚಿತ ಪ್ರಮಾಣದಲ್ಲಿ ತಮಿಳು ಸಾಹಿತ್ಯ ಸೃಷ್ಟಿಯಾಗಿತ್ತೆಂದೂ ಊಹಿಸಬೇಕಾದುದು ಸಹಜವಾಗಿರುತ್ತದೆ. ಪೂರ್ವದಲ್ಲಿದ್ದ ಸಾಹಿತ್ಯವೇ ಈ ವ್ಯಾಕರಣ ರಚನೆಗೆ ಆಧಾರವಾಗಿದ್ದಿರಬೇಕು. ಹಿಂದಿನ ಸಾಹಿತ್ಯವೆಲ್ಲ ಈ ವ್ಯಾಕರಣ ವಿಧಿಗನುಸಾರವಾಗಿದೆಯೆಂಬ ಮತ್ತೊಂದು ಯಲ್ಲಿದೆ.

## ಸಂಗಂ ಸಾಹಿತ್ಯ

ಬಹಳ ಪ್ರಾಚೀನ ಗ್ರಂಥಸಮುದಾಯಕ್ಕೆ 'ಸಂಗಂ ಕಾವ್ಯರಾಶಿ' ಎಂದು ಹೆಸರಿಡಬಹುದು. ಈ ಕಾವ್ಯಗಳೆಲ್ಲವೂ ಪುರಾತನ ಮಾರ್ಗದ ಶೈಲಿಯಲ್ಲಿ ಬರೆಯಲ್ಪಟ್ಟು ಮಧುರೆಯ ರಾಜರ ಸಭೆಯನ್ನಲಂಕರಿಸಿದ್ದ ಪಂಡಿತರ ಅಂಗೀಕಾರ ಮುದ್ರೆ ಬಿದ್ದ ಗ್ರಂಥಗಳಿಗೆ ಸ್ಥಾನವೆಂದು ಗಣಿಸಲ್ಪಟ್ಟವೆಂದರ್ಥ. ಈ ಪಂಡಿತರ ಮುದ್ರೆ ಬಿತ್ತೆಂದರೆ ಆ ಕಾವ್ಯಗಳಿಗೆ ಒಂದು ಅಧಿಕಾರವೂ ಬೆಳೆಯುತ್ತ ಬಂದಹಾಗೆ. ಕಾಲ ಹಾಗೆಲ್ಲ ಈ ಕಾವ್ಯ ರಾಶಿಯು ಒಂದು ಸ್ಥಾನ ಕ್ರಮಿಸಿತು. ಮುಂದಿನ ಸಾಹಿತ್ಯಕ್ಕೆಲ್ಲ ಮಾದರಿಯಾಯಿತು. ಆದಕಾರಣನೇ ಅದಕ್ಕೆ 'ಸಂಗಂ ಸಾಹಿತ್ಯ' ನೆಂದು ಹೆಸರಾಯಿತು. ಈ ಸಾಹಿತ್ಯ ಅಪಾರವಾಗಿದೆ. ಕೆಲವು ಒಂದೇ ಛಂದಸ್ಸಿನ ಕಾವ್ಯಗಳು. ಈ ಛಂದೋರೂಪಗಳ ಲಕ್ಷಣಗಳು ಹೇಳಿದ ವ್ಯಾಕರಣದಲ್ಲಿ ವಿಪುಲವಾಗಿ ವರ್ಣಿತ

ಸದ್ಯಕ್ಕೆ ಈ ಸಾಹಿತ್ಯವು ಹಲವು ಕಾವ್ಯ ರೂಪದಲ್ಲಿ ಸಿಗುತ್ತದೆ. ಅವುಗಳಲ್ಲಿ ಎಂಟು ಮುಖ್ಯವಾದುವು. ಸಾಮಾನ್ಯವಾಗಿ ಈ ಕಾವ್ಯ ಯನ್ನು ಪರೀಕ್ಷಿಸೋಣದರಿಂದ ಅವುಗಳೆಲ್ಲ ಪೂರ್ವದಿಂದ ಕ್ರಿಸ್ತಶಕ ೪ನೆಯ ಶತಮಾನ ಕಾಲಕ್ಕೆ ಸಂಬಂಧಿಸಿದವೆಂದು ಧೈರ್ಯವಾಗಿ ಬಹುದು.

ಆ ಕಾವ್ಯರಾಶಿಯಲ್ಲಿ ಕೃತಿಭರ್ತರ ಗುಂಪು ಗಳಿವೆ. ಸಾಧಾರಣವಾಗಿ ಇವೆಲ್ಲ ಕ್ಷಾತ್ರ ಯಿಷ್ಟವಾದಂತಹವು. ರಾಜರ ಮತ್ತು ರಾಜ್ಯ ದವರ ಕೀರ್ತಿ ವಿಸ್ತಾರವೇ ಸಾಮಾನ್ಯವಾಗಿ ವಸ್ತು. ಆಮೇಲೆ ಹುಟ್ಟಿದ ಪುರಾಣಕಾವ್ಯ ಕಾಣಬರುವ ಲಕ್ಷಣಗಳ ಬೀಜಾಂಕುರಗಳು ಕಾವ್ಯಗಳಲ್ಲಿ ಕಾಣಬರುತ್ತವೆ. ರಾಮಾಯಣ ಕಾದಿ ಪುರಾಣಗಳು ಹುಟ್ಟುವುದಕ್ಕೆ ಮೊದಲು ನಾಯಕ ನಾಯಕಿಯರ ಗುಣಗಾನ ಸಂಬಂಧ ಕವಿಗಳನೇಕರು ಹಾಡಿರಬೇಕಷ್ಟೆ. ಅಂತಹ ಹಾಡು ಕವಿತೆಗಳಿಗೆ ಸಮವೆನ್ನಿ ಮೇಲೆ ಸೂಚಿಸಿದ

ರಾಶಿ. ಅನೇಕ ಕಾವ್ಯಮಾಲೆಗಳ ರೂಪದಲ್ಲಿ ಸಾಹಿತ್ಯವು ಸಿಗುತ್ತದೆಂದು ಹೇಳಿದ್ದಾಯಿತು. ಈ ಕಾವ್ಯಮಾಲೆಗಳೂ ಸಹ ವಿಷಯ ಮತ್ತು ಛಂದಸ್ಸುಗಳಿಗನುಸಾರವಾಗಿ ವಿಭಾಗಿಸಲ್ಪಟ್ಟಿವೆ. ದೀರ್ಘಕಾವ್ಯಗಳೇ ಒಂದು ಗುಂಪು. ಇನ್ನು ಬೇರೆ ಕಾವ್ಯಗಳೇ ಒಂದು ಗುಂಪು. 'ಅಹನಾನೂರು', 'ಪುರನಾನೂರು' ಮತ್ತು 'ಪದಿಟ್ರುಪತ್ತು' ಎಂಬುವು ಇಂತಹ ಕಾವ್ಯಮಾಲೆಗಳಿಗೆ ಕೆಲವು ಉದಾಹರಣೆಗಳು.

## ಪ್ರೌಢ ಕಾವ್ಯ ಯುಗ

ಈ ಕಾವ್ಯರಾಶಿ ಬಿಟ್ಟು ಮುಂದೆ ಹೊರಟರೆ ಬಹಳ ಸರಳವಾದ ಭಾಷೆಯಲ್ಲಿ ಬರೆದ ಬೋಧಕ ವಿಚಾರಗಳನ್ನು ಕುರಿತ ಕವಿತೆಗಳು ಸಿಗುತ್ತವೆ. ಸಂಪ್ರದಾಯವಾಗಿ ಬಂದ ಪೂರ್ವಪದ್ಧತಿಯ ತಮಿಳು ಶಿಕ್ಷಣ ವ್ಯವಸ್ಥೆಯಲ್ಲಿ ಈ ಕವಿತೆಗಳೇ ಪ್ರಥಮ ಪಾಠಗಳು. ಈ ಸರಳ ಶೈಲಿಯಲ್ಲಿ ತಮಿಳು ಭಾಷೆಯ ಸುಂದರ ಶಬ್ದ ಸಂಪತ್ತಿಯು ಕಾಣಬರುತ್ತದೆ.

ಅಲ್ಲಿಂದಾಚೆಗೆ ಭಕ್ತಿಪರವಾದ ಕವಿತೆಗಳೇ ಹೆಚ್ಚು, ಈ ದೈವಭಕ್ತಿ ಸಾಹಿತ್ಯದಲ್ಲಿ ಪೂರ್ವಾಚಾರದ ಲಕ್ಷಣಗಳಧಿಕ; ಸಂಸ್ಕೃತದ ಪ್ರಭಾವ ಹೆಚ್ಚು; ಅಲ್ಲದೆ ಇದರಿಂದ ಆ ಕಾಲದ ಜನರ ಮನಸ್ಸೆಲ್ಲ ಒಂದೊಂದು ಇಷ್ಟದೇವತಾರಾಧನೆಯಲ್ಲಿ ಲೀನವಾಗಿ ಹೋಗಿದ್ದಂತೆ ತಿಳಿಯಬರುತ್ತದೆ

ಸಾಧಾರಣವಾಗಿ ಕ್ರಿಸ್ತಶಕ ೪ ನೆಯ ಶತಮಾನದವರೆಗೆ ಬೋಧಕವಿಚಾರಗಳ ಸ್ಫೂರ್ತಿಯಾಗಿ ಉಳ್ಳ ಪ್ರೌಢ ಕಾವ್ಯಯುಗವೆಂದು ಕರೆಯಬಹುದು. ಈ ಯುಗದಲ್ಲ ಕಾವ್ಯಗಳೂ ಭಕ್ತಿಪರವಾಗಿಯೇ ಇದ್ದವೆಂದು ಹೇಳಲಾಗದು. ಆದರೆ ಹಿಂದಿನ ಸಾಂಪ್ರದಾಯಿಕ ಗುರೂಪವು ಮೂಲೆಗೆ ಬಿದ್ದು ರಂಜಕವಾದ ಹೊಸ ಸಾಹಿತ್ಯಸ್ವರೂಪವು ಎಲ್ಲ ಕಾವ್ಯಗಳಲ್ಲೂ ಕಾಣಬರುತ್ತಿತ್ತು. 'ಶಿಲಪ್ಪಧಿಕಾರಂ', 'ಮಣಿಮೇಖಲೈ' ಎಂಬ ಕಾವ್ಯಗಳನ್ನು ಕೊಂಚ ಹಿಂದಿನ ಕಾಲಕ್ಕೆ ಸೇರಿಸಬಹುದಾದರೂ 'ಚಿಂತಾಮಣಿ' ಎಂಬ ಕಾವ್ಯವು ಈ ಯುಗದ ಕವಿಕರ್ಮಕ್ಕೆ ಉತ್ತಮವಾದ ಉದಾಹರಣೆ. ಇದೇ ಯುಗದಲ್ಲೇ ಶೈವ, ವೈಷ್ಣವ ಸಾಧುಸಂತರು ಭಕ್ತಿಪರವಶರಾಗಿ 'ತೇವಾರಂ', 'ತಿರುವಾಚಕ'ಗಳನ್ನೂ 'ತಿರುವಾಯ್‌ಮೊಳಿ'ಯನ್ನೂ ಹಾಡಿದರು. ಇದೇ ಕಾಲದಲ್ಲೇ ಮಹಾಭಾರತವೂ ಬರೆಯಲ್ಪಟ್ಟಿತು. 'ಭಾರತವೆಣ್ಬಾ' ಎಂಬ ಕಾವ್ಯದ ಕೆಲವು ಭಾಗಗಳು ಮಾತ್ರ ಈಗ ಉಪಲಬ್ಧವಾಗಿವೆ.

## ಸ್ವರ್ಣಯುಗ

ಅನಂತರ ನಾವು ತಮಿಳುಸಾಹಿತ್ಯದ ಸ್ವರ್ಣಯುಗಕ್ಕೆ ಕಾಲಿಡುತ್ತೇವೆ. ಮಹಾಕವಿತೆಗಳ ಕಾಲವಿದು. 'ಕಂಬರಾಮಾಯಣಂ', 'ವಿಲ್ಲಿಪುತ್ತೂರಾರ್ ಭಾರತಂ' ಎಂಬೆರಡೂ ಉತ್ತಮ ಕಾವ್ಯಗಳಿಗೆ ಉದಾಹರಣೆಗಳು. ಈ ಕಾಲವಲ್ಲಿ ಇನ್ನೂ ಅನೇಕ ಕಾವ್ಯಗಳಿವೆ. ಸಾಹಿತ್ಯರಾಶಿಯ ಸೃಷ್ಟಿಯ ಪ್ರಮಾಣದೃಷ್ಟಿಯಲ್ಲಿ ಈ ಕಾಲವನ್ನು ಮುತ್ತಾಮವುದೂ ವಿಚಾರವಲ್ಲ. ಶೃಂಗಾರ ಕವಿತೆಗಳೂ, ಪ್ರೇಮಗೀತೆಗಳೂ, ಇನ್ನೂ ನಾನಾತರದ ಕವಿತೆಗಳೂ ಈ ಕಾಲದಲ್ಲಿ ಸಿಗುತ್ತವೆ. ಸಾಹಿತ್ಯಜೀವನದಲ್ಲಿದು ಬಹಳ ಚುರುಕಾಯುಗ.

## ಗದ್ಯ ವಾಙ್ಮಯ

ಕವಿತೆಯೊಂದಿಗೆ ಗದ್ಯವೂ ವೃದ್ಧಿಯಾಗುತ್ತ ಬಂತು. ಹಿಂದಿನ ಕಾಲದಿಂದಲೂ ಗದ್ಯವಿತ್ತು. ಹಲವು ಪುರಾಣಗಳಲ್ಲಿ ಅಲ್ಲಲ್ಲಿ ಗದ್ಯಗಳಿವೆ. ಆದರೆ ಅವೆಲ್ಲ ಪ್ರಾಸಬದ್ಧವಾದವು. ಟೀಕಾಕಾರರೂ, ವ್ಯಾಖ್ಯಾನಕಾರರೂ ನಿಜವಾಗಿ ಗದ್ಯ ಬರೆಯಲಾರಂಭಿಸಿದರು. ಹಲವು ವ್ಯಾಖ್ಯಾನಗಳ ಗದ್ಯಶೈಲಿಯು ಬಹಳ ಪ್ರೌಢವಾಗಿದೆ. ಟೀಕಾಕಾರರ ಪ್ರೌಢಶೈಲಿಯು ಗದ್ಯಕ್ಕೂ ಸಾಮಾನ್ಯ ಜನರ ಸಾಮಾನ್ಯಶೈಲಿಗೂ ಮಧ್ಯಸ್ಥವಾದ ಶೈಲಿಯೊಂದಿದೆ. ಆ ಶೈಲಿಯ ಗದ್ಯವು ತಮಿಳು ಶಾಸನಗಳಲ್ಲಿದೆ.

ಬಹಳ ಪ್ರಾಚೀನಕಾಲದ ತಮಿಳು ಶಾಸನಗಳೆಂದರೆ ಅವು ಕ್ರಿಸ್ತಶಕ ೬ನೆಯ ಶತಮಾನದ ಮಧ್ಯಕಾಲಕ್ಕೆ ಸಂಬಂಧಪಟ್ಟವು. ಪಲ್ಲವರಾಜ ವಂಶೀಯರ ಶಾಸನಗಳೇ ಹಳೆಯವು. ಅನಂತರ ಎರಡು ತಲೆಮಾರಿನ ಮೇಲೆ ಪಾಂಡ್ಯರಾಜಮನೆತನದವರ ಶಾಸನಗಳು ಕಾಣಬರುತ್ತವೆ. ಆ ಶಾಸನ ಸಾಹಿತ್ಯದಲ್ಲಿ ಕಾಣಬರುವ ಶಕ್ತಿಯೂ, ಜೀವಕಳೆಯೂ, ಶಬ್ದಪ್ರಯೋಗದಲ್ಲಿನ ಚಾತುರ್ಯವೂ ಅಪೂರ್ವವಾಗಿದೆ. ಈ ಸಾಹಿತ್ಯವನ್ನೇ ಒಂದು ವರ್ಗಕ್ಕೆ ಸೇರಿಸಬೇಕಾಗುತ್ತದೆ. ಈ ಸಾಹಿತ್ಯದ ಸುಲಕ್ಷಣಗಳು ಕೊಂಚಮಟ್ಟಿಗೆ ಕೈಬಿಟ್ಟುಹೋದುವಲ್ಲಾ ಎಂಬುದಾಗಿ ವ್ಯಸನವಾಗುತ್ತದೆ. ಆಧುನಿಕ ಗದ್ಯಲೇಖಕರು ಎಷ್ಟು ಪ್ರಯಾಸಪಟ್ಟರೂ ಪೂರ್ವಕಾ

ಲದ ಗದ್ಯಶಾಸನ ಶೈಲಿಗೆ ಸಮನಾದ ಶಕ್ತಿಯನ್ನು ತೋರಿಸಲಾರರು.

ಆದರೆ ಮೇಲೆ ಸೂಚಿಸಿದ ಮೂರನೆಯ ಕಾಲಕ್ಕೆ ಬರುವ ವೇಳೆಗೆ ಶಾಸನ ಸಾಹಿತ್ಯರಾಶಿಯು ಅಪಾರವಾಗಿ ಸಿಗುತ್ತದೆ. ಈ ಸಾಹಿತ್ಯಕ್ಕೇ ಒಂದು ಸ್ಥಾನ ಕಲ್ಪಿಸಬೇಕಾಗಿದೆ.

ಇದೇ ಕಾಲದಲ್ಲೇ ಪ್ರಖ್ಯಾತ ಟೀಕಾಕಾರರನೇಕರು ಹುಟ್ಟಿದರು. ತಮಿಳು ಮಹಾಕಾವ್ಯಗಳಮೇಲೆ ವ್ಯಾಖ್ಯಾನಗಳನ್ನು ಬರೆದರು. ಈ ವ್ಯಾಖ್ಯಾನಗಳ ರಚನೆಯಲ್ಲಿ ವಿಶೇಷ ಲಕ್ಷಣಯುತವಾದ ಗದ್ಯಶೈಲಿಯೊಂದನ್ನು ನಿರ್ಮಿಸಿದರು. ಈ ಕಾಲವು ಹತ್ತನೆಯ ಶತಮಾನದಿಂದ ಮೊದಲಾಗಿ ೧೩, ೧೪ನೆಯ ಶತಮಾನದವರೆಗೂ ವಿಸ್ತರಿಸುತ್ತದೆಂದು ಹೇಳಬಹುದು. ಇತ್ತೀಚಿನ ಕಾವ್ಯವೆಂದರೆ ವಿಜಯನಗರದ ಇಮ್ಮಡಿ ದೇವರಾಯನ ದಂಡನಾಯಕರಲ್ಲೊಬ್ಬನಾದ ಇರುಗನ ರಾಜಾಶ್ರಯದಲ್ಲಿ ರಚಿಸಿದ 'ಮೇರುಮಂದರಪುರಾಣಂ' ಎಂಬ ಜೈನ ಗ್ರಂಥ. ಮಲ್ಲಿಕಾರ್ಜುನ ಮತ್ತು ಕೃಷ್ಣದೇವರಾಯನ ಕಾಲದಲ್ಲೂ ಅನೇಕ ಗ್ರಂಥಗಳು ಬರೆಯಲ್ಪಟ್ಟವು.

## ಅವನತಿ

ಅನಂತರ ಅವನತಿಯ ಕಾಲ ಪ್ರಾಪ್ತವಾಯಿತು. ಸಾಹಿತ್ಯಕ್ಕೆ ರಾಜಾಶ್ರಯವು ಕಡಿಮೆಯಾಯಿತು. ಅದಕಾರಣ ಗ್ರಂಥರಚನೆಗೇ ಕ್ಷಾಮ ಬಂತು. ಅವನತಿಯುಂಟಾಗದೆ ಮತ್ತೇನು? ಈ ಕಾಲದಲ್ಲೇ ಪುಗಳ್‌ನೇಂದಿ ಎಂಬಾತನು ತಮಿಳು ಮಹಾಕಾವ್ಯಗಳಲ್ಲೊಂದಾದ 'ನಳ ದಮಯಂತಿ'ಯನ್ನು ರಚಿಸಿದನು. ಒಟ್ಟಕೂತ್ತರೆಂಬುವರು ಅನೇಕ ಕಾವ್ಯಗಳನ್ನು ಬರೆದರು. ಅವುಗಳಲ್ಲಿ 'ದಕ್ಷಯಾಗಪರಣಿ' ಯೆಂಬುದೇ ಅತ್ಯುತ್ತಮವಾದುದು. (ಶ್ರೀ ವಿ. ಸ್ವಾಮಿನಾಥ... ಈ ಗ್ರಂಥವನ್ನು ಪ್ರಕಟಿಸಿದ್ದಾರೆ). 'ತಿರುಪ್ಪ... ಮತ್ತು ಪಿಳ್ಳೈಪೆರುಮಾಳ್ ಅಯ್ಯಂಗಾರ್ಯ... ಗಳೂ ಈ ಕಾಲದಲ್ಲೇ ಆದುವು. ಅಯ್ಯಂಗಾ... ಗ್ರಂಥಗಳಲ್ಲಿ 'ಅಷ್ಟಪ್ರಬಂಧ' ವೆಂಬುದೇ ಹೆಸ... ಯಾದುದು.

## ಭವಿಷ್ಯ ನಿರೀಕ್ಷಣೆ

ತಮಿಳು ಸಾಹಿತ್ಯದಲ್ಲೂ (ಇತರ ಭಾಷೆಗಳ... ಹೊಸಯುಗದಾರಂಭದ ಪ್ರಭಾತ ಚಿಹ್ನೆಗಳ... ತ್ತಿವೆ. ಆದರೆ ಬಂಗಾಳದಲ್ಲೂ, ಮಹಾರಾಷ್ಟ್ರ... ಸಾಹಿತ್ಯ ಜೀವನದಲ್ಲಿ ಕಾಣಬರುತ್ತಿರುವ... ವಾಗಲಿ, ರಚನಾಶಕ್ತಿಯಾಗಲಿ ತಮಿಳುನಾಡ... ಅಷ್ಟೇ. ಅಲ್ಲಿ ಈ ಕಾಲದಲ್ಲಿ ಎಷ್ಟೋ ಗ್ರಂಥ... ಯಾಗಿದೆ. ಸಾಹಿತ್ಯವು ನಾನಾರೂಪಗೊಂಡು... ವಾಡುತ್ತಿದೆ. ಆದರೆ ಇಂದು ಹುಟ್ಟಿರುವ... 'ಯೋಗ್ಯ' ಸಾಹಿತ್ಯವೆಂದು ಹೇಳಲಿಕ್ಕಾಗ... ಆದರೆ ಸಾಹಿತ್ಯ ಪ್ರಪಂಚದಲ್ಲಿ ನಿಜವಾದ 'ಸ್ವ... ವಾಗುತ್ತಿದೆ. ಆ ಉದಯದ ಫಲಪ್ರಾಪ್ತಿ... ಹುಗಳೂ ತೋರಿಬರುತ್ತಿವೆ. ಜನಜೀವನದ... ಲಕಲ್ಲೋಲವಾಗಿದೆ. ಹೃದಯಗಳಲ್ಲಿ... ಗಿದೆ. ದೇಶ ಭಾಷೆಗಳಲ್ಲಿ ಸಾಮಾನ್ಯವಾಗಿ... ವಿಜ್ಞಾನ ಸಾಹಿತ್ಯಕ್ಕೆ ಸಂಬಂಧಪಟ್ಟ... ಇಲ್ಲ. ಅಂತಹ ವಿಜ್ಞಾನ ಗ್ರಂಥಗಳ ರಚನೆ... ಕೆಂಬ ಆಶೆಯೂ ಆತುರವೂ ಪ್ರಬಲವಾ... ಹೊಸಯುಗದ, ಹೊಸ ಆಶೆಯ ಮತ್ತು... ಫಲವಾಗಿ ಹೊಸದಾರಿಯು, ಹಿತ ಸಾಹಿತ್ಯ... ತೆಂದೂ, ಆ ಸಾಹಿತ್ಯವು ಹಿಂದಿನ ತಮಿಳು ಸ... ಸರಿಸಮನಾಗಿ ನಿಂತೀತೆಂದೂ ನಿರೀಕ್ಷಿಸ...

# ಆಂಧ್ರ ಸಾಹಿತ್ಯದ ಚರಿತ್ರಸಂಗ್ರಹ

(ರಾಳ್ಳಪಲ್ಲಿ ಶ್ರೀ ಅನಂತಕೃಷ್ಣ ಶರ್ಮ, ಮಹಾರಾಜಾ ಕಾಲೇಜು, ಮೈಸೂರು)

## ಆದಿಕವಿ

ನಮಗೆ ತಿಳಿದಮಟ್ಟಿಗೆ ತೆಲುಗು ಭಾಷೆಯಲ್ಲಿ ಸಾಹಿತ್ಯವು ಮೊದಲಾದದ್ದು ಕ್ರಿ. ಶ. ೧೧ನೆಯ ಶತಕದ ಆದಿಯಲ್ಲಿ. ಅದಕ್ಕೆ ಹಿಂದೆ ಸುಮಾರು ಮುನ್ನೂರು ನಾನೂರು ವರ್ಷಗಳಿಂದಲೂ ಸಲಕ್ಷಣವಾದ ಪದ್ಯ ರಚನೆಯು ನಡೆದು ಬರುತ್ತಿದ್ದಂತೆ ಶಾಸನಗಳ ಆಧಾರ ದಿಂದ ನಿಶ್ಚಯಿಸಬಹುದಾಗಿದ್ದರೂ, ಸಂಪೂರ್ಣವಾದ ಯಾವ ಕಾವ್ಯದ ಹೆಸರಾಗಲಿ, ಕವಿಯ ಹೆಸರಾಗಲಿ ನಮಗೆ ತಿಳಿದುಬಂದಿಲ್ಲ. ಮತ್ತು ಸಂಸ್ಕೃತ ಸಾಹಿತ್ಯ ದಲ್ಲಿ ವಾಲ್ಮೀಕಿಯ ಹಾಗೆ, ಆಂಧ್ರಭಾಷೆಯಲ್ಲಿ ಹನ್ನೊಂದನೆಯ ಶತಕದ ಆರಂಭದಲ್ಲಿದ್ದ "ನನ್ನಯ ಭಟ್ಟಾರಕ" ನೆಂಬ ಕವಿಯೇ 'ಆದಿಕವಿ' ಯೆಂಬ ವಾಡಿಕೆಯು ಬಹುಕಾಲದಿಂದಲೂ ಇರುವುದು. ಆತನೇ ಆಂಧ್ರಭಾಷೆಯನ್ನು ಕಾವ್ಯ ಪುರಾಣಾದಿ ರಚನೆಗೆ ಉಪಯೋಗವಾಗುವಂತೆ ಸಂಸ್ಕರಿಸಿ ಮೊಟ್ಟಮೊದಲು ವ್ಯಾಕರಣವನ್ನು ಬರೆದನೆಂದೂ ಪ್ರವಾದವುಂಟು.

ಆದರೆ, ಹನ್ನೊಂದನೆಯ ಶತಕದ ಹಿಂದೆ ದಕ್ಷಿಣ ದೇಶದಲ್ಲಿ ಬಹಳ ಪ್ರಬಲರಾಗಿದ್ದು ಇತರ ಭಾಷೆ ಗಳಲ್ಲಿ ಅನೇಕ ಮಹಾ ಗ್ರಂಥಗಳನ್ನು ಬರೆದ ಜೈನರು ಆಂಧ್ರ ಭಾಷೆಯಲ್ಲೂ ಬರೆಯದೇಯಿದ್ದಿರಲಾರರೆಂದೂ, ಆಂಧ್ರ ದೇಶದಲ್ಲಿ ಅದ್ವೈತಿಗಳೂ ಶೈವರೂ ವೈಷ್ಣ ವರೂ ಒಂದೊಂದುಕಡೆ ಪ್ರಬಲರಾಗಿ ಅದರಿಂದೀಚೆಗೆ ಜೈನರನ್ನು ದೇಶದಲ್ಲಿಯೇ ಇರಗೊಡಿಸದೆ ಹೊರಡಿಸಿ ದುದರಿಂದ, ಅವರು ಇತರ ದೇಶಗಳಿಗೆ ವಲಸೆ ಹೋದ ಕಾಲದಲ್ಲಿ ತಮ್ಮ ಗ್ರಂಥಗಳನ್ನೂ ಹಿಂದೆಯೇ ತೆಗೆ ದುಕೊಂಡು ಹೋಗಿರಬೇಕೆಂದೂ, ಕಾಲಕ್ರಮದಲ್ಲಿ ಇತರ ಭಾಷೆಗಳವರಿಗೆ ಈ ಗ್ರಂಥಗಳಲ್ಲಿ ಶ್ರದ್ಧೆ ಯಿಲ್ಲದೆ ಅವು ನಷ್ಟವಾಗಿರಬೇಕೆಂದೂ, ಕೆಲವರು ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಬೆಂಬಲವಾಗಿ ಆಂಧ್ರ ದೇಶದಲ್ಲಿ ಜೈನರ ಸಂಖ್ಯೆಯು ಅತಿಸ್ವಲ್ಪವಾಗಿ ರುವುದೂ, ಇದುವರೆಗೆ ಒಂದು ಜೈನ ಗ್ರಂಥವಾದರೂ ತೆಲುಗಿನಲ್ಲಿ ಕಣ್ಣಿಗೆ ಬೀಳದೆ ಇರುವುದೂ, ವಿಚಾರಾ ರ್ಹವಾಗಿದೆ.

## ಶಿಥಿಲಮತಾವೇಶ

ಜೈನರನ್ನು ಓಡಿಸುವುದರಲ್ಲಿ ಹೀಗೆ ಶೈವರೂ ವೈಷ್ಣವರೂ ಅದ್ವೈತಿಗಳೂ ಐಕಮತ್ಯದಿಂದ ಸೇರಿ ಕೆಲಸ ಮಾಡಿ ಕೃತಕೃತ್ಯರಾದರೂ, ಕೊನೆಗೆ ಅದ್ವೈತ ಮತವೇ ಉಳಿದ ಎರಡನ್ನೂ ಅಡಗಿಸಿ ಆಂಧ್ರ ಸಾಹಿತ್ಯ ದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದಿತು. ಬಸವೇಶ್ವ ರನ ಕಾಲದಲ್ಲಿ ಕೆಲವು ವೀರಶೈವ ಗ್ರಂಥಗಳೂ, ವಿಜಯನಗರದ ಅರಸರ ಕಾಲದಲ್ಲಿ ಕೆಲವು ವೀರವೈ ಷ್ಣವ ಗ್ರಂಥಗಳೂ ಹುಟ್ಟಿದರೂ ಒಟ್ಟದಲ್ಲಿ ಶಿವ ಕೇಶವರಲ್ಲಿ ಸಾಮ್ಯದೃಷ್ಟಿಯುಳ್ಳ ಗ್ರಂಥಗಳೇ ತೆಲುಗಿ ನಲ್ಲಿ ಹೆಚ್ಚಾಗಿ ಕಾಣಬರುವವು. ಈಗಲೂ ವೀರಶೈವ ರಿಗಾಗಲಿ, ವೀರವೈಷ್ಣವರಿಗಾಗಲಿ ತಮಿಳು ಕನ್ನಡ ದೇಶಗಳಲ್ಲಿರುವಷ್ಟು ಸಂಖ್ಯಾಬಲವು ತೆಲುಗು ದೇಶ ದಲ್ಲಿಲ್ಲ. ಇನ್ನು ಬೌದ್ಧಮತವು ಬಹುಕಾಲದ ಹಿಂ ದೆಯೇ ನಮ್ಮ ದೇಶದಲ್ಲಿ ಅಂತರ್ಧಾನವಾಗಿತ್ತು. ಈಚೆಗೆ ಬಂದ ಮಹಮ್ಮದೀಯ ಕ್ರಿಸ್ತ ಮತಗಳಿಗೆ ಸಂಸ್ಕಾರಿಗಳಾದ ಉತ್ತಮ ಜಾತಿಯವರು ಅಷ್ಟಾಗಿ ಸೇರದೇಯಿರುವುದರಿಂದ, ಸೇರಿದವರ ದೃಷ್ಟಿಯು ಉರ್ದು, ಇಂಗ್ಲೀಷು ಭಾಷೆಗಳಲ್ಲಿಯೇ ಇನ್ನೂ ನೆಟ್ಟಿ ರುವುದರಿಂದ, ಆ ಮತಗಳಿಗೆ ತೆಲುಗು ಭಾಷೆಯ ಸಾಹಿತ್ಯವನ್ನು ಸೃಷ್ಟಿಮಾಡುವ ಶಕ್ತಿಯು ಇನ್ನೂ ಬಂದಿಲ್ಲ.

ಆಂಧ್ರಾದ್ವೈತಬ್ರಾಹ್ಮಣರಲ್ಲಿ ವೈದಿಕರೆಂದೂ ನಿಯೋಗಿಗಳೆಂದೂ ಎರಡು ಮುಖ್ಯವಾದ ಪಂಗಡ ಗಳುಂಟು. ಮೊದಲನೆಯವರು ಶ್ರೌತಸ್ಮಾರ್ತ ಕರ್ಮ ಗಳಲ್ಲಿ ನಿರತರಾಗಿ ಸಂಸ್ಕೃತ ಸಾಹಿತ್ಯ ಸೇವೆಯಲ್ಲಿ ಹೆಚ್ಚು ಅಭಿಮಾನವುಳ್ಳವರು. ಎರಡನೆಯ ನಿಯೋಗಿ

ಗಳು ನೂತನ ಸಂಸ್ಕಾರಪ್ರಿಯರು; ಮತ್ತು ರಾಜಕೀಯ ತಂತ್ರಗಳಲ್ಲಿ ನಿಪುಣರು. ಆದಕಾರಣ ದೇಶಭಾಷೆಯಲ್ಲಿ ಇವರಿಗೆ ಸ್ವಾಮಿತ್ವವೂ ಅಭಿಮಾನವೂ ಹೆಚ್ಚು. ಆದುದರಿಂದ ಆಂಧ್ರ ಸಾರಸ್ವತದಲ್ಲಿ ಮುಕ್ಕಾಲು ಪಾಲು ಇವರು ಬರೆದ ಗ್ರಂಥಗಳೇ ಹೇರಳವಾಗಿರುವುವು. ಹೀಗೆ ಜೈನರು, ಬೌದ್ಧರು ಮುಂತಾದ ಅವೈದಿಕ ಮತದವರು ಆಂಧ್ರದೇಶವನ್ನೇ ಬಿಟ್ಟು ಹೋದುದರಿಂದಲೂ, ಮತಪ್ರಚಾರಕರಾದ ಬ್ರಾಹ್ಮಣರೆಲ್ಲಾ ಪ್ರಾಯಶಃ ಅದ್ವೈತಿಗಳಾಗಿದ್ದುದರಿಂದಲೂ, ಇತರರಿಗೆ ಶಿವನಲ್ಲಾಗಲಿ ವಿಷ್ಣುವಿನಲ್ಲಾಗಲಿ ಹಠದ ಭಕ್ತಿದ್ವೇಷಗಳುಂಟಾಗಲು ಹೆಚ್ಚು ಅವಕಾಶವಿಲ್ಲದೆ, ಆಂಧ್ರ ಸಾಹಿತ್ಯದಲ್ಲಿ ಮತಾವೇಶದ ಬೆಂಬಲವು ಕಡಮೆಯಾಯಿತು. ವೀರಶೈವನಾದ ಪಾಲ್ಕುರಿಕಿ ಸೋಮನ ಬಸವಪುರಾಣ, ವೀರವೈಷ್ಣವನಾದ ವಿಜಯನಗರ ಚಕ್ರವರ್ತಿ ಕೃಷ್ಣದೇವರಾಯನ 'ಆಮುಕ್ತಮಾಲ್ಯದ' ಸುಮಾರು ಹದಿನೇಳನೆಯ ಶತಮಾನದಿಂದೀಚೆಗೆ ಬ್ರಾಹ್ಮಣರ ಬಹಾಪಣೆಯನ್ನು ಪ್ರತಿಭಟಿಸಿ ಜಾತಿಭೇದಾದಿಗಳಿಗೆ ವಿರೋಧವಾಗಿ ಸರ್ವಸಮತ್ವವನ್ನೂ ಆತ್ಮಾನುಸಂಧಾನವನ್ನೂ ಬೋಧಿಸಿದ 'ವೇಮನ್ನ'ನ ಪದ್ಯಗಳು—ಇಂಥ ಕೆಲವನ್ನು ಬಿಟ್ಟರೆ, ಇತರ ಬ್ರಾಹ್ಮಣರು, ಬ್ರಾಹ್ಮಣೇತರರು ಬರೆದ ಗ್ರಂಥಗಳಲ್ಲೆಲ್ಲಾ ಅವರು ವಂಶಪರಂಪರೆಯಾಗಿ ಶೈವರೊ ವೈಷ್ಣವರೊ ಆಗಿದ್ದರೂ, ತ್ರಿಮೂರ್ತಿ ಸ್ತುತಿ, ಗಣಪತಿ ಪೂಜೆ ಮುಂತಾದ ಹರಿಹರಾದ್ವೈತಮತಚಿಹ್ನೆಗಳು ಪ್ರಾಯಶಃ ಸ್ಪಷ್ಟವಾಗಿ ಕಂಡುಬರುವುವು.

## ರಾಜಾಶ್ರಯ

ಹೀಗೆ ಸಾಮಾನ್ಯವಾಗಿ ದೇಶಭಾಷೆಗಳಲ್ಲಿ ಗ್ರಂಥರಚನೆಗೆ ಮುಖ್ಯಕಾರಣವಾದ ಮತಾವೇಶವು ಶಿಥಿಲವಾದುದರಿಂದ, ತೆಲುಗಿನಲ್ಲಿ ಬಹಳವಾಗಿ ಗ್ರಂಥರಚನೆಗೆ ಕೀರ್ತಿ, ದ್ರವ್ಯ ಮುಂತಾದ ಇತರ ಕಾರಣಗಳೇ ಮೂಲವಾಗಿ ಪರಿಣಮಿಸಿದವು. ಸಾಮಾನ್ಯವಾಗಿ ಕೀರ್ತಿ ದ್ರವ್ಯಗಳೆರಡೂ ಅರಸರ ಕೈಯ್ಯಲ್ಲಿದ್ದ ವಸ್ತುಗಳಾದುದರಿಂದ, ಕವಿಗಳು ರಾಜಾಶ್ರಯವನ್ನು ವಿಧಿಯಿಲ್ಲದೆ ಮಾಡಬೇಕಾಗಿ ಬಂದಿತು. ಆದರೆ ರಾಜರಿಗೆ ಕವಿಗಳನ್ನಾಶ್ರಯಿಸಬೇಕಾದ ನಿರ್ಬಂಧವು ಒದಗಿದ ಹೊರತು ಇವರಿಗೆ ಅವರಿಂದ ಲಾಭವುಂಟಾಗುವಂತಿಲ್ಲವಷ್ಟೆ? ಆದುದರಿಂದ, ಸಪ್ತಸಂತಾನಗಳಲ್ಲಿ ಪ್ರಬಂಧರಚನೆ ಮುಖ್ಯವಾಗಿ ಪರಿಗಣಿಸಬೇಕೆಂದೂ, ಶಾಸ್ತ್ರವು ಪ್ರಬಂಧವನ್ನು ಬರೆದವನಿಗಿಂತಲೂ ಅಂಕಿತ ಹೊಂದಿ ಪೋಷಿಸಿದವನಿಗೆ ಹೆಚ್ಚಾಗಿ ಅನ್ವಯಿಸುವುದೆಂದೂ ಅರಸನ ಮನಸ್ಸಿನಲ್ಲಿ ನಾಟುವಂತೆ ಕವಿಗಳು ಹೇಳುತ್ತಿದ್ದರು. ಈ ಕಾರಣದಿಂದ ಆಂಧ್ರಸಾಹಿತ್ಯದ ಬಹುಭಾಗವು ಅರಮನೆಗಳ ನೆರಳಿನಲ್ಲಿಯೇ ತಯಾರಾಯಿತು. ಮತ್ತು ಪೂರ್ವಕಾಲದಲ್ಲಿ ಅರಸನ ಕೈಕೆಳಗಿನ ಅಧಿಕಾರಿಗಳೂ ಯಥಾಶಕ್ತಿಯಾಗಿ ಎಲ್ಲಾ ವಿಷಯಗಳಲ್ಲಿಯೂ ಅರಸರ ಹಾಗೆಯೇ ವರ್ತಿಸುತ್ತಿದ್ದ ಕಾರಣ, ಅವರೂ ಕವಿಗಳನ್ನು ಬರಮಾಡಿಕೊಂಡು ಕೈಲಾದಷ್ಟು ಸನ್ಮಾನಿಸಿ ಅವರಿಂದ ಗ್ರಂಥಗಳನ್ನು ಬರೆಯಿಸಿ, ತಮಗಿಷ್ಟು ಆಶ್ರಯವನ್ನು ಕೊಟ್ಟು ಪೋಷಿಸಿದ 'ಭರ್ತ'ರ ಹೆಸರನ್ನು ಶಾಶ್ವತವಾಗಿ ಮಾಡಲು ಆ 'ಕರ್ತ'ರು ತಾವು ಬರೆದ ಗ್ರಂಥದಲ್ಲಿ ಅವನ ವಂಶವನ್ನೆಲ್ಲಾ ಪ್ರತ್ಯಕ್ಷವಾಗಿ ಅವರಿಗೆ ಪುರಾಣದಂತೆ ಆಶ್ವಾಸಾದ್ಯಂತಗಳಲ್ಲಿ ಅವರನ್ನು ಸ್ತುತಿಭಕ್ತಿಗಳಿಂದ ಸಂಬೋಧಿಸಿ ಬರೆದು, ಹೊಸದೊಂದು ಪದ್ಧತಿಯೊಂದನ್ನು ನೆಲೆಗೊಳಿಸಿದರು. ಹೀಗೆ ಶ್ರೀಮಂತನಾದ ಒಬ್ಬ ವ್ಯಕ್ತಿಯ ಆಶ್ರಯದಲ್ಲಿ ಗ್ರಂಥರಚನೆಯನ್ನು ಮಾಡುವ ಪದ್ಧತಿಯು ಈಗಲೂ ಹೋಗಿಲ್ಲ. ಆಂಧ್ರದೇಶದಲ್ಲಿ ಈಗಲೂ ಪಾಳೇಗಾರರೂ ಜಮೀನ್‌ದಾರರೂ ಪಲವರು ಇರುವರು. ಈಗಲೂ ತೆಲುಗು ಬರಹಗಾರರು ಆ ಆಶ್ರಯವನ್ನು ಬಿಡುವುದು ಸಾಧ್ಯವಾಗಿಲ್ಲ.

ಆದರೆ ರಾಜರ ಆಶ್ರಯದಲ್ಲಿ ಎಲ್ಲಾ ಸುಖವೆಂದು ಯಾರು ಹೇಳಬಲ್ಲರು? ಕೆಲವರಿಗೆ ಲಭಿಸುವುದಿಲ್ಲ; ಮತ್ತೆ ಕೆಲವರಿಗೆ ಲಭಿಸಿದರೂ ಅವರ ಮನಸ್ಸಿಗೆ ಒಗ್ಗಿಬರುವುದಿಲ್ಲ. ಜವಾಸನ ಮೊದಲು ಕೊನೆವರೆಗೂ ಒಂದೇ ವಿಧವಾಗಿ ತಲೆ ಬಾಗಿಸಿ ನಿಲ್ಲದಿದ್ದರೆ ಆಸ್ಥಾನದಲ್ಲಿ ಪ್ರವೇಶವೇ ಸಾಧ್ಯವಿಲ್ಲ; ಆದರೂ ಫಲಕಾರಿಯಾಗುವುದಿಲ್ಲ. ಆಂಧ್ರಕವಿಗಳಲ್ಲಿ ಕೆಲವರು ಅಂಥಾ ದೈನ್ಯಕ್ಕೆ ಒಳಗೊಡದೆ ಸ್ವತಂತ್ರರಾಗಿ ತಮ್ಮ ಇಷ್ಟದೇವತೆಗೆ ಅಂಕಿತವಾಗಿ ಗ್ರಂಥರಚನೆಯನ್ನು ಮಾಡಿದರು. ನರರಿಗೆ ಅಂಕಿತವಾಗಿ ಗ್ರಂಥಗಳನ್ನು ಬರೆಯುವುದು ನರಕಕ್ಕೆ ದಾರಿಯೆಂದೂ ಕೆಲವರು ನಂಬಿದರು! ಒಟ್ಟಿನಲ್ಲಿ ಆಂಧ್ರಸಾಹಿತ್ಯಕ್ಕೆ ಜೀವವನ್ನು ನಡೆಯಿಸಿದವರು ಅರಸರೇ ಎಂದು

ಹೇಳಬಹುದು. ತಮಗೆ ಅಂಕಿತವಾಗಿ ಗ್ರಂಥಗಳನ್ನು ಬರೆಯಿಸುವುದು ರಾಜಧರ್ಮಗಳಲ್ಲೊಂದೆಂಬ ನಂಬಿಕೆ ಅರಸರಿಗೆಲ್ಲಾ ಇದ್ದುದರಿಂದಲೇ ಹದಿನಾರನೆಯ ಶತಕದಲ್ಲಿ 'ಇಬ್ರಾಹಿಂ ಮಲ್ಕ್' ಎಂಬ ಗೋಲಕೊಂಡದ ಮುಹಮ್ಮದೀಯ ಸುಲ್ತಾನನೂ ಕೂಡ ಇಬ್ಬರಾಂಧ್ರ ಕವಿಗಳನ್ನು ಪೋಷಿಸಿ ಎರಡು ಉತ್ತಮ ಕಾವ್ಯಗಳನ್ನು ತನಗೆ ಅಂಕಿತವಾಗಿ ಬರೆಯಿಸಿಕೊಂಡಿರುವನು! ಕೆಲನರು ತೆಲುಗು ಅರಸರು ಸ್ವತಂತ್ರವಾಗಿ ಗ್ರಂಥರಚನೆಯನ್ನು ಮಾಡಿರುವರು. ಕೆಲವರು ಇತರರಿಂದ ಬರೆಯಿಸಿ ತಮ್ಮ ಹೆಸರಿನಲ್ಲಿ ಪ್ರಕಟಿಸಿಕೊಂಡಿರುವುದನ್ನು ಕಾಣಬಹುದು.

ಹೀಗೆ ರಾಜಾಶ್ರಯವನ್ನೇ ಹೆಚ್ಚಾಗಿ ನೆಚ್ಚಿಕೊಂಡಿದ್ದ ಆಂಧ್ರಸಾರಸ್ವತವು, ಹಿಂದೆ ಹೇಳಿದಂತೆ ಹನ್ನೊಂದನೆಯ ಕ್ರಿಸ್ತಶತಕದಲ್ಲಿ ವೆಂಗಿದೇಶದ ರಾಜಧಾನಿಯಾದ ರಾಜಮಹೇಂದ್ರವರದಲ್ಲಿ ಪೂರ್ವ ಚಾಳುಕ್ಯ ವಂಶಕ್ಕೆ ಸೇರಿದ ರಾಜರಾಜ ನರೇಂದ್ರನ ಆಸ್ಥಾನದಲ್ಲಿ ತಲೆದೋರಿ, ಅಲ್ಲಿಂದ ಕಾಕತೀಯರು, ರೆಡ್ಡಿಗಳು, ವಿಜಯನಗರದ ಅರಸರು, ಮುಂತಾದವರ ಸಾಮ್ರಾಜ್ಯಗಳಲ್ಲಿ, ಅವರ ಕೈಕೆಳಗಿನ ಸಣ್ಣಸಣ್ಣ ತೆಲುಗು ರಾಜ್ಯಗಳಲ್ಲಿ ಅಭಿವೃದ್ಧಿಗೆ ಬಂದು, ಕ್ರಮವಾಗಿ ಮಧುರೆ, ತಂಜಾವೂರು, ಮೈಸೂರು, ಪುದುಕೋಟೆ ಮುಂತಾದ ಆಂಧ್ರೇತರ ರಾಜ್ಯಗಳಲ್ಲಿಯೂ ಶಾಖೋಪಶಾಖೆಗಳಾಗಿ ಬೆಳೆಯಿತು.

## ಶಾಸ್ತ್ರಸಾಹಿತ್ಯ

ಆಂಧ್ರ ವಾಙ್ಮಯದಲ್ಲಿ ವೈದ್ಯ, ಜ್ಯೋತಿಷ, ಗಣಿತ, ಧರ್ಮ, ಸಾಮುದ್ರಿಕ, ಯೋಗ ಮುಂತಾದ ಶಾಸ್ತ್ರಗಳಲ್ಲಿ ಗ್ರಂಥಗಳು ಆದಿಯಿಂದಲೂ ಬರೆಯಲ್ಪಟ್ಟಿದ್ದರೂ ಅವುಗಳ ಸಂಖ್ಯೆಯೂ ಸ್ವಲ್ಪ; ಪ್ರಾಮಾಣ್ಯವೂ ಕಡಿಮೆ. ಇನ್ನು ತರ್ಕವೇದಾಂತಾದಿ ಚರ್ಚಾಶಾಸ್ತ್ರಗಳು ಕೇವಲ ಸಂಸ್ಕೃತ ಪರಿಭಾಷೆಯಿಂದ ತುಂಬಿರುವುದರಿಂದಲೂ, ಅವುಗಳಲ್ಲಿ ಕೆಲವು ದೇಶಭಾಷೆಯಲ್ಲಿ ಜನಸಾಮಾನ್ಯಕ್ಕೆ ತಿಳಿಸಬಾರದ ಪವಿತ್ರ ಗ್ರಂಥಗಳೆಂಬ ಭಾವವಿದ್ದುದರಿಂದಲೂ, ಅವುಗಳು ಸಂಸ್ಕೃತ ಪೀಠದಿಂದ ಕೆಳಕ್ಕಿಳಿದು ಬರಲಿಲ್ಲ. ಬಂದಿರುವ ಗ್ರಂಥಗಳೂ ಮುಖ್ಯವಾದ ತತ್ವವಿಷಯಗಳನ್ನು ಮಾತ್ರ ಸೂಚಿಸುತ್ತವೆಯೇ ಹೊರತು ವಿಸ್ತರವಾಗಿ ವಿಷಯ ಚರ್ಚೆಯನ್ನು ಮಾಡುವುದಿಲ್ಲ. ಹೀಗಾಗಿ ತೆಲುಗಿನಲ್ಲಿ ಬರೆದಿರುವ ಶಾಸ್ತ್ರಗ್ರಂಥಗಳೆಲ್ಲಾ ಮುಖ್ಯ ವಿಷಯಗಳು ಮರೆತುಹೋಗದೆ ಇರುವುದಕ್ಕಾಗಿ ಮಾಡಿಕೊಂಡಿರುವ ಗುರ್ತಿನ ಕಡತಗಳೆಂದು ಮಾತ್ರ ಹೇಳಬಹುದಾಗಿದೆ. ಮಲ್ಲಿನಾಥ, ಅನ್ನಂಭಟ್ಟ, ಪಂಡಿತರಾಜಜಗನ್ನಾಥ, ಲಕ್ಷ್ಮೀಧರ, ಮುಂತಾದ ಮಹಾಪ್ರತಿಭಾವಂತರಾದ ಶಾಸ್ತ್ರಜ್ಞರು ಆಂಧ್ರರಲ್ಲಿದ್ದರೂ ಅವರ ಪ್ರತಿಭೆಯೆಲ್ಲಾ ಸಂಸ್ಕೃತ ಭಾಷೆಯಲ್ಲಿ ಹೊರದೋರುವುದೇ ಹೊರತು ತೆಲುಗಿನಲ್ಲಿ ಅದರ ಸುಳಿವೇ ಕಾಣುವುದಿಲ್ಲ.

## ಪುರಾಣಯುಗ

ಆಂಧ್ರರ ಪ್ರತಿಭೆಯು ಆಂಧ್ರಭಾಷೆಯಲ್ಲಿ ಪುರಾಣಕಾವ್ಯಗಳ ರೂಪದಲ್ಲಿಯೇ ಹರಿಯಿತು. ಕಾವ್ಯಪ್ರಬಂಧದಲ್ಲಿಯೂ ನಾಟಕಗಳ ಗೋಜಿಗೆ ಅವರು ಹೋಗಲಿಲ್ಲ. ಸಂಸ್ಕೃತ ಕಾವ್ಯಪದ್ಧತಿಯನ್ನು ಆಮೂಲಾಗ್ರವಾಗಿ ಅನುಕರಿಸಿಕೊಂಡು ಬರೆದ ತೆಲುಗು ಕವಿಗಳಿಗೆ ಆ ಭಾಷೆಯಲ್ಲಿ ಬಹಳ ಅಭಿವೃದ್ಧಿಗೆ ಬಂದಿದ್ದ ನಾಟಕಗಳನ್ನು ತಮ್ಮ ಭಾಷೆಗೆ ತಂದುಕೊಳ್ಳಬೇಕೆಂಬ ಆಶೆಯು ಏಕೆ ಹುಟ್ಟಲಿಲ್ಲವೆಂಬುದು ಪ್ರತ್ಯುತ್ತರವಿಲ್ಲದ ಪ್ರಶ್ನೆಯಾಗಿರುವುದು. ಮತ್ತು ಶಾಕುಂತಲ, ಪ್ರಬೋಧಚಂದ್ರೋದಯ ಮುಂತಾದ ನಾಟಕಗಳನ್ನು ತೆಲುಗಿನಲ್ಲಿ ಪದ್ಯಕಾವ್ಯದ ರೂಪದಲ್ಲಿ ಬರೆದುಕೊಂಡವರಿರುವರು. ಆದರೆ ಅವುಗಳನ್ನು ನಾಟಕರೂಪವಾಗಿಯೇ ಪರಿವರ್ತನೆ ಮಾಡುವುದಕ್ಕಾದರೂ ಮೊನ್ನೆಮೊನ್ನೆವರೆಗೆ ಯಾರೂ ಪ್ರಯತ್ನಿಸಲಿಲ್ಲ. ಮತ್ತು ಕಾವ್ಯರಚನೆಗೆ ಬೇಕಾದ ಅಲಂಕಾರ, ಛಂದಸ್ಸು, ರಸ, ವ್ಯಾಕರಣ, ಇವುಗಳ ವಿಷಯವಾಗಿ ಕೆಲವು ಗ್ರಂಥಗಳಿದ್ದರೂ ಅವೂ ಕೂಡ ಮೇಲೆ ಹೇಳಿದ ಇತರ ಶಾಸ್ತ್ರಗ್ರಂಥಗಳಿಗಿಂತ ಹೆಚ್ಚು ಉತ್ತಮಸ್ಥಿತಿಯಲ್ಲಿರುವುವೆಂದು ಹೇಳಲಾಗುವುದಿಲ್ಲ.

ವಿಷಯಪ್ರಧಾನವಾದುದು ಪುರಾಣ; ರಚನಾಪ್ರಧಾನವಾದುದು ಕಾವ್ಯ. ಸುಲಭವಾದ ಶೈಲಿಯಲ್ಲಿ ಕಥೆ, ಧರ್ಮ, ನೀತಿ ಮುಂತಾದ ವಿಷಯಗಳನ್ನು ಸಾಮಾನ್ಯ ಜನರ ತಿಳುವಳಿಕೆಗಾಗಿ ಬೋಧಿಸುವುದೇ ಪೌರಾಣಿಕರ ಕರ್ತವ್ಯ. ಕಾವ್ಯದವರು ಹಾಗಲ್ಲದೆ ಮೇಲ್ಕಂಡ ವಿಷಯಗಳನ್ನಾಧಾರವಾಗಿಟ್ಟುಕೊಂಡು ಅದರ ಮೂಲಕ ಶಬ್ದಾರ್ಥಾಲಂಕಾರ ರಚನೆಯಲ್ಲಿ ತಮಗಿರುವ ಸಾಮರ್ಥ್ಯವನ್ನು ಪ್ರಕಟಿಸಬೇಕೆಂದು ಪ್ರಯತ್ನಿಸುವರು. ಈ ಕಾವ್ಯ ಶೈಲಿಗೆ 'ಪ್ರಬಂಧಶೈಲಿ' ಯೆಂದು ಈಚಿನ ಆಂಧ್ರರು ಹೆಸರಿಟ್ಟರು

ವರು. ನಿಜವಾದ ಕಾವ್ಯಧರ್ಮಗಳನ್ನು ಪರಿಶೀಲಿಸಿದರೆ ಕಾವ್ಯವೆಂಬ ಹೆಸರು ಪುರಾಣಗಳಿಗೇ ಸಲ್ಲಬೇಕಾಗಿದ್ದರೂ, ಕೆಲವು ಪುರಾಣಗಳಲ್ಲಿ ಕಾವ್ಯಶೈಲಿಯೂ ಕಾವ್ಯಗಳಲ್ಲಿ ಪುರಾಣಶೈಲಿಯೂ ಬೆರಕೆಯಾಗಿದ್ದರೂ, ಈ ಪುರಾಣಕಾವ್ಯ ವಿಭಾಗವು ಸಾಮಾನ್ಯ ವ್ಯವಹಾರದಲ್ಲಿ ಹೇಗೋ ಬಂದು ನಿಂತಿರುವುದು. ಆಂಧ್ರಸಾಹಿತ್ಯವು ಉಪಕ್ರಮವಾದಕಾಲದಲ್ಲಿಯೇ ಆದರ್ಶಭೂತವಾದ ಸಂಸ್ಕೃತ ವಾಙ್ಮಯದಲ್ಲಿ ಮೇಲ್ಕಂಡ ಎರಡು ತರಗತಿಯ ರಚನೆಗಳೂ ಬಹಳ ಪ್ರಾಮುಖ್ಯಕ್ಕೆ ಬಂದಿದ್ದವು. ಆದುದರಿಂದ ತೆಲುಗಿನಲ್ಲಿ ಸಾಹಿತ್ಯರಚನೆಗೆ ಕೈಹಾಕಿದ ಪಂಡಿತರಿಗೆ ಮೊದಲಿಂದಲೂ ಈ ಎರಡರಮೇಲೂ ದೃಷ್ಟಿಯು ಪ್ರಸರಿಸಿತು. ಆದರೆ ಸಂಸ್ಕೃತಭಾಷೆಯಲ್ಲಿನ ಮಹಾಭಾರತಾದಿ ಗ್ರಂಥಗಳನ್ನು ಪಂಡಿತರಿಂದ ಓದಿಸಿ ದೇಶಭಾಷೆಯಲ್ಲಿ ನಿತ್ಯವೂ ಪುರಾಣವನ್ನು ಕೇಳುವ ಸಾಮಾನ್ಯ ಜನರಿಗೆ ಆ ಗ್ರಂಥಗಳಲ್ಲಿ ಉಂಟಾಗುವಷ್ಟು ಅಭಿಮಾನವೂ ಅಭಿರುಚಿಯೂ ಕಾವ್ಯದ ಕಸರತ್ತುಗಳಲ್ಲಿ ಉಂಟಾಗುವುದಿಲ್ಲ. ಆದುದರಿಂದ ಆಂಧ್ರಕವಿಗಳಲ್ಲಿ ಬಹುಜನರು ಮೊದಲು ಮಹಾಭಾರತಾದಿ ಪುರಾಣಗಳನ್ನು ಸಂಗ್ರಹವಾಗಿ, ಯಥೋಚಿತವಾದ ಬದಲಾವಣೆಗಳೊಡನೆ ಅನುವಾದಮಾಡಲುಪಕ್ರಮಿಸಿದರು.

## ಕವಿತ್ರಯ

ರಾಜರಾಜನರೇಂದ್ರನ ಆಸ್ಥಾನ ಪಂಡಿತನಾದ ನನ್ನಯಭಟ್ಟಾರಕನೇ ಮಹಾಭಾರತದ ಭಾಷಾಂತರೀಕರಣವನ್ನುಪಕ್ರಮಮಾಡಿ ಅರಣ್ಯಪರ್ವದಲ್ಲಿ ಸ್ವಲ್ಪ ಭಾಗದವರೆಗೆ ನಡೆಯಿಸಿ ಕಾಲಾಧೀನನಾದನು. ಆಮೇಲೆ ಸುಮಾರು ಹದಿಮೂರನೆಯ ಶತಕದ ಮಧ್ಯಭಾಗದಲ್ಲಿ ನೆಲ್ಲೂರು ಸಂಸ್ಥಾನದಲ್ಲಿ ಮಂತ್ರಿಯಾಗಿದ್ದ ತಿಕ್ಕನ್ನನೆಂಬ ಸೋಮಯಾಜಿಯು ವಿರಾಟಪರ್ವದಿಂದ ಮೊದಲುಮಾಡಿ ೧೫ ಪರ್ವಗಳನ್ನು ಪೂರ್ತಿಮಾಡಿದನು. ಈತನಿಗೆ ಕವಿಬ್ರಹ್ಮನೆಂಬ ಬಿರುದುಂಟು. ಆಂಧ್ರಸಾಹಿತ್ಯದಲ್ಲಿ ಆ ಬಿರುದಿಗೆ ಈತನ ಹೊರತು ಮತ್ತಾರೂ ತಕ್ಕವರಿಲ್ಲವೆಂದು ಧಾರಾಳವಾಗಿ ಹೇಳಬಹುದು. ತರುವಾಯ ಹದಿನಾಲ್ಕನೆಯ ಶತಕದಲ್ಲಿ ಶಂಭುದಾಸನೆಂಬ ಕವಿಯು ಅರಣ್ಯಪರ್ವಶೇಷವನ್ನು ಪೂರ್ತಿಗೊಳಿಸಿದನು. ಈ ಮೂವರಿಗೂ ಕವಿತ್ರಯವೆಂಬ ಹೆಸರುಂಟು. ಇವರ ಪ್ರಯೋಗಗಳೇ ವೈಯಾಕರಣರಿಗೆ ಪರಮಪ್ರಮಾಣವಾಗಿ ನಿಂತಿರುವುವು.

ಹೀಗೆ ಉಪಕ್ರಮವಾದ ಪುರಾಣ... ಸುಮಾರು ೧೬ನೆಯ ಶತಕದವರೆಗೂ ... ರಾಮಾಯಣ, ಭಾಗವತ, ಹರಿವಂಶ, ಬ... ಮಾರ್ಕಂಡೇಯ ಪುರಾಣ, ವಿಷ್ಣುಪುರಾ... ಲಾದ ಹಲವು ಪುರಾಣಗಳು ತರ್ಜುಮೆ... ಮತ್ತು ರಾಮಾಯಣ ಮೊದಲಾದ ಕೆಲವ... ಬೇರೆಯಾಗಿ ಹಲವರು ಬರೆದರು. ಇವರ... ಶತಕದಲ್ಲಿ ಭಾಗವತವನ್ನು ಬರೆದ ಬಮ್ಮೆರ ಪೋ... ಬಹಳ ಪ್ರಖ್ಯಾತನು. ಭಕ್ತಿರಸಪ್ರಧಾನ... ಗ್ರಂಥಕ್ಕೆ ಇರುವಷ್ಟು ವ್ಯಾಪ್ತಿಯು ಇನ್ನಾ... ಗ್ರಂಥಕ್ಕೂ ಕಾಣುವುದಿಲ್ಲ. ರಾಜಾಶ್ರಯ... ಸ್ಕರಿಸಿ, ಸ್ವತಂತ್ರಿಸಿ, ಬಡತನದಲ್ಲೇ ... ಮಾಡಿದ ತೆಲುಗು ಕವಿಗಳಲ್ಲಿ ಈತನು ... ಕೆಲವರು ಹೀಗೆ ಪೂರ್ತಿಯಾಗಿ ಪುರಾಣ... ಯುವುದಕ್ಕೆ ಬದಲು ಅವುಗಳಲ್ಲಿನ ಕೆಲ... ಖ್ಯಾನಗಳನ್ನು ಮಾತ್ರ ತೆಗೆದು ಬರೆದರು. ... ವರಲ್ಲಿ ೧೫ನೇ ಶತಕದ ಶ್ರೀನಾಥನೆಂಬ... ಸುಪ್ರಸಿದ್ಧನಾಗಿರುವನು. ಈ ಐದಾರು ... ಗಳನ್ನು 'ಪುರಾಣಯುಗ' ವೆಂದು ಅಥ... ಯುವರು.

## ಚಿತ್ರಕವಿತ್ವ

ಈ ಯುಗದಲ್ಲಿಯೂ ಕಾವ್ಯರಚನೆಯ ... ವರ ದೃಷ್ಟಿಯು ಹೋಗದೆ ಇರಲಿಲ್ಲ. ... ಭವವೆಂಬ ವರ್ಣನಾಪ್ರಧಾನವಾದ ಕಾವ್ಯ... ಸರಿಗೆ 'ಔಷಧ' ವಾದ ನೈಷಧದ ಆಂಧ್ರ... ಈ ಕಾಲದಲ್ಲಿಯೇ ಹುಟ್ಟಿದವು. ದಶಕುಮಾ... ಭೋಜರಾಜೀಯ, ಮುಂತಾದ ಪುರಾಣ... ಅಲ್ಲದ ಮೃದುಕಥಾಗ್ರಂಥಗಳೂ ಕೆಲವರಿಂ... ಲ್ಪಟ್ಟವು. ರಾಘವಪಾಂಡವೀಯವೆಂಬ ದ್ವ... ವೂ ಈ ಯುಗದ ಆದಿಯಲ್ಲೇ ಭೀಮಕವಿಯ... ರಚಿಸಲ್ಪಟ್ಟಿತಂತೆ. ಆದರೆ ಅದು ಯಾವ... ಲೋ ನಷ್ಟವಾಗಿ ಹೋಯಿತು. ಕಲ್ಪನಾಪ್ರ... ಅಲಂಕಾರಮಯವಾಗಿ, ಕವಿಯ ಪಾಂ... ಶಕ್ತಿಯನ್ನೂ ಪ್ರಕಟಿಸುವುದರ ಸಲುವಾಗಿ ... ಖ್ಯವಾಗಿ ಹೊರಟ ಪ್ರಬಂಧ ಶೈಲಿಯು ಪುರಾ... ಯಿಂದ ಸ್ಪಷ್ಟವಾದ ಭೇದವನ್ನು ಹೊಂದಿ... ವನ್ನು ಪಡೆಯಬೇಕಾದರೆ, ಹದಿನಾರನೆಯ ...

ವಿಜಯನಗರ ಸಾಮ್ರಾಜ್ಯದ ಶ್ರೀ ಕೃಷ್ಣದೇವರಾಯ ಚಕ್ರವರ್ತಿಯ ಪ್ರೋತ್ಸಾಹವು ಸಿಗುವವರೆಗೂ ಕಾಯಬೇಕಾಯಿತು. ರಾಯರು ಕವಿಪಂಡಿತಾಭಿಮಾನಿಯೂ ಸ್ವತಃ ಬಹುಭಾಷಾಪ್ರವೀಣನೂ, ಆಂಧ್ರ ಸಂಸ್ಕೃತಗಳಲ್ಲಿ ಉತ್ತಮ ಕವಿಯೂ ಆಗಿದ್ದುದರಿಂದಲೂ, ದಕ್ಷಿಣ ಭರತಖಂಡದಲ್ಲೆಲ್ಲಾ ಒಂದು ಸಾಮ್ರಾಜ್ಯವನ್ನು ಸ್ಥಾಪಿಸಿ ಶಾಂತಿಯನ್ನು ನೆಲೆಗೊಳಿಸಿದುದರಿಂದಲೂ, ಮಹೋದಾರನಾದುದರಿಂದಲೂ, ಆತನ ಆಸ್ಥಾನದಲ್ಲಿ ತೆಲುಗು ಕವಿಗಳನೇಕರು ಸೇರಿ ಪರಸ್ಪರ ಸ್ಪರ್ಧೆಯಿಂದ ಕಾವ್ಯರಚನೆ ಮಾಡಲು ಅವಕಾಶವೊದಗಿತು. ಪುರಾಣರಚನೆಯು ಎಷ್ಟು ರಸವಂತವಾಗಿ ಹೃದಯಂಗಮವಾಗಿದ್ದರೂ ಸ್ಪರ್ಧಾಮಯವಾದ ಸನ್ನಿವೇಶದಲ್ಲಿ ಅದು ಸಪ್ಪೆಯಾಗಿ ತೋರುವುದು ಸಹಜ. ಆದುದರಿಂದ ಆ ಕಾಲದಲ್ಲಿ ಕಾವ್ಯದ ತತ್ತ್ವಪರೀಕ್ಷೆಯಲ್ಲಿ ಕವಿಯು ಪಟ್ಟಿರುವ ಕಷ್ಟವು ಮುಖ್ಯಸಾಧನವಾಯಿತು. ಕ್ಲಿಷ್ಟವಾದ ನಡೆಯಿಂದ, ಚಕ್ರ, ನಾಗ, ಮುರಜ, ಮುಂತಾದ ಬಂಧಗಳ ರೂಪವಾಗಿ ರಚಿಸುವುದು; ನಿರೋಷ್ಠ್ಯ, ಏಕಾಕ್ಷರ, ದ್ವ್ಯಕ್ಷರ, ಮೊದಲಾದ ನಿಯಮಗಳನ್ನಿಟ್ಟುಕೊಂಡು ಪದ್ಯಗಳನ್ನು ಹೊಸೆಯುವುದು; ಒಂದು ವೃತ್ತದಲ್ಲಿ ಮತ್ತೊಂದೋ ಹಲವೋ ವೃತ್ತಗಳನ್ನು ಗರ್ಭೀಕರಿಸಿ ಬರೆಯುವುದು; ಘಳಿಗೆಗಿಷ್ಟು ಪದ್ಯವೆಂದು ಆಶುಧಾರೆಯಿಂದ ಹೇಳುವುದು—ಹೀಗೆ ಬಂಧ, ಚಿತ್ರ, ಗರ್ಭ, ಆಶುಭೇದಗಳಿಂದ ಕವಿತ್ವವು ನಾಲ್ಕು ವಿಧವೆಂದು ಪ್ರಸಿದ್ಧಿಗೆ ಬಂದಿತು! ರಾಯರ ಆಸ್ಥಾನ ಕವಿಗಳಲ್ಲಿ ಅಗ್ರಗಣ್ಯನಾದ ಪೆದ್ದನ್ನ ಎಂಬ ಕವಿಯು, ತನ್ನ 'ಮನುಚರಿತ್ರೆ'ಯಲ್ಲಿ ಇಂಥಾ ರಚನೆಯೊಂದೂ ಮಾಡದೆ ಸರಸವಾಗಿ ಬರೆದಿದ್ದರೂ ತನಗೆ ಈಗ 'ಚತುರ್ವಿಧ ಕವಿತಾ ಮತಲ್ಲಿಕೆ' ವಶವಾಗಿರುವುದೆಂದು ಹೇಳಿಕೊಂಡಿರುವನು! ಈ ಕಾಲದಲ್ಲಿ ಹುಟ್ಟಿದ ಅನೇಕ ಗ್ರಂಥಗಳಲ್ಲಿ, ಪ್ರತಿ ಪದ್ಯದಲ್ಲಿಯೂ ಏನಾದರೊಂದು ಚಮತ್ಕಾರವಾದ ಶಬ್ದಾರ್ಥಕಲ್ಪನೆಯುಳ್ಳ 'ವಸುಚರಿತ್ರೆ' ಎಂಬ ಒಬ್ಬ ಶೂದ್ರ ಕವಿಯ ಕಾವ್ಯವೂ, ಹಿಂದೆ ನಷ್ಟವಾದ ರಾಘವಪಾಂಡವೀಯಕ್ಕೆ ಪ್ರತಿಯಾಗಿ ಸೂರಣ್ಣನೆಂಬ ಬ್ರಾಹ್ಮಣ ಕವಿಯು ಬರೆದ ಅದೇ ಹೆಸರಿನ ದ್ವ್ಯರ್ಥಕಾವ್ಯವೂ ಮುಂದೆ ಬರುವ ಕವಿಗಳಿಗೆ ಮಾರ್ಗದರ್ಶಕವಾಗಿ ಪರಿಣಮಿಸಿದವು. ಅನೇಕರು ತಮ್ಮ ಗ್ರಂಥಗಳಿಗೆ 'ಮರಿ ವಸುಚರಿತ್ರೆ'ಗಳೆಂಬ ಹೊಗಳಿಕೆ ಬಂದರೆ ಸಾಕೆಂಬಾಶೆಯಿಂದ ಬರೆದರು. ರಾಘವಪಾಂಡವೀಯದ ಹಾಗೆ ಎರಡು, ಮೂರು ಕಡೆಗೆ ನಾಲ್ಕು ಅರ್ಥಗಳುಳ್ಳ 'ಕಾವ್ಯ'ಗಳು ಹೊರಟವು! ನಿರೋಷ್ಠ್ಯವಾಗಿ-ಎಂದರೆ ಪ, ಫ, ಬ, ಭ, ಮ, ವ, ಎಂಬ ಅಕ್ಷರಗಳನ್ನೇ ಬಿಟ್ಟು ಕೆಲವು ಪ್ರಬಂಧಗಳು ಹೊರಬಿದ್ದವು! ಒಬ್ಬನು ಅಪಂಚವರ್ಗೀಯವಾಗಿ—ಎಂದರೆ ಕಕಾರದ ಮೊದಲು ಮಕಾರದವರೆಗೆ ಇರುವ ೨೫ ಅಕ್ಷರಗಳನ್ನೇ ಬಿಟ್ಟು 'ಶೇಷ ಶೈಲೇಶಲೀಲೆ' ಎಂಬ ಕಾವ್ಯವನ್ನು ಬರೆದನಂತೆ! ರಸ, ಭಾವ, ಪಾತ್ರವ್ಯಕ್ತೀಕರಣ, ಪ್ರಕೃತಿಸೌಂದರ್ಯಾನುಭವ ಮೊದಲಾದ ಕಾವ್ಯಜೀವತತ್ತ್ವಗಳೆಲ್ಲಾ ಹಿಂದುಳಿದು, ಶಬ್ದಾರ್ಥಗಳನ್ನು ನಾನಾವಿಧವಾಗಿ ಕಡಿದು, ಮುರಿದು, ಹೊಸೆದು, ಹೊಲೆದು ಮಾಡುವ ಕ್ಲಿಷ್ಟರಚನೆಯು ಮಿತಿಯಿಲ್ಲದೆ ಹರಿಯಲು ಪ್ರಕ್ರಮಿಸಿತು. ಚಿತ್ರಕವಿತ್ವದ ಅದ್ಭುತ ರಚನೆಗಳನ್ನು ನೋಡಿ ದಣಿಯಬೇಕಾದರೆ ಅದಕ್ಕೆ ಹದಿನಾರನೆಯ ಶತಕದಿಂದೀಚಿನ ಆಂಧ್ರ ಸಾಹಿತ್ಯದಲ್ಲಿರುವಷ್ಟು ಅವಕಾಶವು ನನಗೆ ತಿಳಿದಮಟ್ಟಿಗೆ ಇನ್ನಾವ ಸಾಹಿತ್ಯದಲ್ಲಿಯೂ ಇಲ್ಲ. ಈ ತೆರದ ರಚನೆಯು ಅಖಂಡವಾಗಿ ಹತ್ತೊಂಭತ್ತನೆಯ ಶತಕದ ಕೊನೆಯವರೆಗೂ ನಡೆದುಬಂದಿತು. ಇನ್ನೂ ಪೂರ್ತಿಯಾಗಿ ನಿಂತುಹೋಯಿತೆಂದು ಹೇಳಲಾಗುವುದಿಲ್ಲ.

ಇವೆಲ್ಲಾ ಪ್ರಾಯಶಃ ಗದ್ಯಪದ್ಯಾತ್ಮಕವಾದ ಚಂಪೂ ಗ್ರಂಥಗಳೇ. ಸಂಸ್ಕೃತ ಛಂದಸ್ಸಿನ ಅಕ್ಷರವೃತ್ತಗಳಾದ ಚಂಪಕಮಾಲೆ ಮೊದಲಾದವುಗಳಲ್ಲಿಯೂ, ದೇಶೀಯ ಛಂದಸ್ಸಿಗೆ ಸೇರಿದ್ದರೂ ಶಾಸ್ತ್ರಕಾರರಿಂದ ಅಂಗೀಕೃತವಾಗಿರುವ ಸೀಸ, ಗೀತ, ಕಂದ, ಅಪರೂಪವಾಗಿ ಅಕ್ಕರೆ ಮುಂತಾದ ಪದ್ಯಗಳಲ್ಲಿಯೂ ಬರೆಯಲ್ಪಟ್ಟಿರುವುವು. ಕೇವಲ ಪದ್ಯಗ್ರಂಥಗಳೂ ಅಪರೂಪವಾಗಿ ದೊರೆಯುವುವು. ಕೇವಲ ಗದ್ಯದಲ್ಲಿ ಬರೆದ ಗ್ರಂಥಗಳು ಪೂರ್ವಕಾಲದಲ್ಲಿ ಸಿಗುವುದಿಲ್ಲ. ಸುಮಾರು ಹದಿನೇಳನೆಯ ಶತಮಾನದಿಂದೀಚೆಗೆ ಕೆಲವುತಲೆದೋರುವುವು. ಆದರೆ ಅವುಗಳಿಗೆ ಪ್ರಾಮುಖ್ಯವು ಬರಲಿಲ್ಲ. ಬರಬೇಕಾದಷ್ಟು ಯೋಗ್ಯತೆಯೂ ಅವುಗಳಿಗೆ ಇಲ್ಲ.

## ಪಾಮರ ಸಾಹಿತ್ಯ

ಇದೆಲ್ಲವೂ ಪಂಡಿತ ಸಾಹಿತ್ಯದ ವಿಷಯ. ಪಂಡಿತರ ಮೆಚ್ಚುಗೆಯೇ ಪ್ರಧಾನಫಲವಾಗಿ ಅವರೇರ್ಪಡಿಸಿದ ವ್ಯಾಕರಣ, ಛಂದಸ್ಸು, ಅಲಂಕಾರ, ಸಂಪ್ರದಾಯ, ಮುಂತಾದ ನಿಯಮಗಳಿಗನುಸಾರವಾಗಿ ಬರೆ

ಯಲ್ಪಟ್ಟವು. ಇಂಥ ರಚನೆಗೆ ಬೇಕಾದ ಪಾಂಡಿತ್ಯ ವಿಲ್ಲದೆ, ಅಥವಾ ಅದನ್ನು ಸಂಪಾದಿಸುವುದಕ್ಕೆ ಇಷ್ಟ ವಿಲ್ಲದೆ, ಇರುವ 'ಪಾಮರ' ರಾದ ಸ್ತ್ರೀಶೂದ್ರಾದಿ ಗಳು ಕೇವಲ ಜಿಹ್ವಾಚಾಪಲ್ಯದಿಂದ ಪರೋಪದೇಶ ಕ್ಕಾಗಿ, ಆತ್ಮಾನಂದಕ್ಕಾಗಿ, ರಚಿಸಿದ ಸಾಹಿತ್ಯವು ಹೇರಳವಾಗಿರುವುದು ಹದಿನಾರನೆಯ ಶತಕದಿಂದೀಚೆಗೆ ನಾಲ್ಕೈದು ಮಂದಿ ಮಹಿಳೆಯರು ಪಂಡಿತ ಸಾಹಿತ್ಯಕ್ಕೆ ಕೈಹಾಕಿದವರಿದ್ದರೂ ಒಟ್ಟಿನಲ್ಲಿ ತೆಲುಗಿನಲ್ಲಿ ಸ್ತ್ರೀಯರು ಈ 'ಪಾಮರ' ಸಾಹಿತ್ಯಕ್ಕೇ ಹೆಚ್ಚಾಗಿ ಸೇವೆ ಮಾಡಿರುವರು. ಈ ಸಾಹಿತ್ಯವು ಪಂಡಿತ ಸಾಹಿತ್ಯಕ್ಕಿಂತಲೂ ಪ್ರಾಚೀನತೆಯಲ್ಲಿ ಕನಿಷ್ಠಪಕ್ಷ ಕಡಮೆ ಯಾದುದಲ್ಲವೆಂದು ಹೇಳಬಹುದು. ಆದರೆ ಇದು ದೊರೆಗಳ ಆಶ್ರಯದಲ್ಲಿ ಬೆಳೆದುದಲ್ಲವಾದುದರಿಂದ, ಶಾಸನಾದ್ಯಾಧಾರವಿಲ್ಲವಾಗಿ, ಇದರ ಕವಿಗಳ ಕಾಲ ವನ್ನು ಕ್ಲುಪ್ತವಾಗಿ ನಿರ್ಣಯಿಸುವುದು ಅಸಾಧ್ಯವಾಗಿದೆ. ಇದರಲ್ಲಿ ಅನೇಕಕರ್ತರ ಹೆಸರೇ ತಿಳಿದು ಬಂದಿಲ್ಲ. ಹಾಡಿನ ರೂಪದಲ್ಲಿರುವ ರಾಮಾಯಣ ಭಾರತಾದಿ ಪುರಾಣಗಳು, ಉಪಾಖ್ಯಾನಗಳು, ದೇಶೀಯ ವೀರರ ಕತೆಗಳು, ಯಕ್ಷಗಾನಗಳು, ಭಕ್ತಿರಸಪ್ರಧಾನ ವಾದ ಭಜನೆ ಕೀರ್ತನೆಗಳು, ಮದುವೆಯ ಹಾಡು, ಜೋಗುಳಗಳು, ಅದ್ವೈತವನ್ನು ಬೋಧಿಸುವ ತತ್ತ್ವ ಗಳೆಂಬ ಹಾಡುಗಳು, ಎಲ್ಲಕ್ಕಿಂತ ಹೆಚ್ಚಾಗಿ ಶೃಂಗಾರ ರಸಮಯವಾದ ಪದ, ಜಾವಡಿ ಮುಂತಾದವೂ, ಈ ತರಗತಿಗೆ ಸೇರುವವು ಇವುಗಳಲ್ಲಿ ಕೆಲವು ನೀರಸ ವಾಗಿಯೂ ಅಸಹ್ಯವಾಗಿಯೂ ಇದ್ದರೂ, ಮತ್ತೆಹಲವು ತೀಕ್ಷ್ಣವಾದ ರಸಧಾರೆಯಿಂದಲೂ, ಮುಚ್ಚುಮರೆಯಿಲ್ಲದ ನೇರವಾದ ನಡೆಯಿಂದಲೂ, ಹಾಡುವವರ, ಕೇಳುವವರ ಹೃದಯವನ್ನು ಭೇದಿಸಬಲ್ಲವು.

ಈ ಪಂಡಿತ ಪಾಮರ ಸಾಹಿತ್ಯಗಳೆರಡಕ್ಕೂ ಸೇರಿ ಯೂ ಸೇರದೆಯಿರುವ ಮಧ್ಯಸಾಹಿತ್ಯವು ಸಹಜವಾಗಿ ಎಲ್ಲಾ ಭಾಷೆಗಳಲ್ಲಿಯೂ ಇರುವುದು. ಪಾಮರ ಜನರು ಇದನ್ನು ಸುಲಭವಾಗಿ ಗ್ರಹಿಸಿ ಉದಾರ ರಸಭಾವ ಗಳನ್ನು ಸವಿಯಬಹುದಾದುದರಿಂದ, ಅವರಿಗೆ ಇದ ರಲ್ಲಿ ಭಕ್ತಿಯೂ ಅಭಿಮಾನವೂ ಉಂಟಾಗುವುದು. ಸಾಮಾನ್ಯವಾದ ಸಾಹಿತ್ಯ ನಿಯಮಗಳಿಗೊಳಪಟ್ಟೇ ಇರುವುದರಿಂದಲೂ, ರಸವಂತವಾಗಿರುವುದರಿಂದಲೂ, ಮಿದುಳಿಗೆ ಕಷ್ಟವನ್ನು ಕೊಡದಿದ್ದರೂ ಪಂಡಿತರು ಇದನ್ನು ಪೂರ್ತಿಯಾಗಿ ತಿರಸ್ಕಾರ ಮಾಡಲು ಸಾಧ್ಯ

ವಿಲ್ಲ. ಭಕ್ತಿ, ಶೃಂಗಾರ, ವೇದಾಂ
ಹಾಸ್ಯ, ಲೋಕಾನುಭವ ಮೊದಲಾದ ವಿ
ಪ್ರತಿಪಾದಿಸುವ ಶತಕಗಳು ಈ ಜಾತಿಗೆ
ಲೆಕ್ಕವಿಲ್ಲದೆ ತೆಲುಗಿನಲ್ಲಿರುವುವು.
ಸರ್ವಜ್ಞನಂತೆ ತೆಲುಗಿನಲ್ಲಿ ಬಹು
ಪ್ರಾಯಶಃ ಆವನ ಸಮಕಾಲಿಕನಾದ
ಪದ್ಯಗಳು ಈ ತೆರದವು. ದ್ವಿಪದಿ
ಬರೆದ ರಾಮಾಯಣ, ಭಾರತ ಪುರಾ
ಗಳೂ, ನಲಚರಿತ್ರೆ, ಹರಿಶ್ಚಂದ್ರ ಚ
ಲಾದ ಉಪಾಖ್ಯಾನಗಳೂ ಈ ಜಾತಿಯ
ದಲ್ಲಿ ಷಟ್ಪದಿ ಕಾವ್ಯಗಳ ಹಾಗೆ ತೆಲು
ದ್ವಿಪದಿ ಕಾವ್ಯಗಳು ಮೊದಲಿಂದಲೂ ಬ
ಬಂದಿರುವವು. ಕೆಲವರು "ದ್ವಿಪದಕಾ
ಸೂಳೆ......." ಇತ್ಯಾದಿಯಾಗಿ ನಿರು
ರ್ಥಗಳ ಪಟ್ಟಿಯಲ್ಲಿ ಸೇರಿಸಿ ನಕಲಿ
ಮತ್ತೆ ಕೆಲವರು ಪಂಡಿತರೇ, ಜನಸಾಮಾ
ಗಳಲ್ಲಿರುವ ಅಭಿಮಾನವನ್ನರಿತು, ಈ
ಗ್ರಂಥಗಳನ್ನು ಬರೆದರು. ಇದಲ್ಲದೆ ಚ
ದಲ್ಲಿಯೇ ಬರೆಯಲ್ಪಟ್ಟ ಶುಕಸಪ್ತ
ಶತಿ ಮೊದಲಾದ ಕಥಾಕಾವ್ಯಗಳು ಈ
ಸೇರಬೇಕಾದುವು. ಮತ್ತು ಸಂಸ್ಕೃತದ
ನಲ್ಲಿಯೂ ಅಸಂಖ್ಯಾತವಾಗಿರುವ '
ಗಳು' ಈ ತೆರದ ಸಾಹಿತ್ಯವೇ ಆಗುವುದು.
ಪದ್ಯಗಳೆಂದರೆ, ಕವಿಗಳು ಪ್ರಸ್ತಾವವಶ
ತೋರಿದ ವಿಷಯದಮೇಲೆ ಆಯಾ ಸ
ಆಶುಧಾರೆಯಾಗಿಯೊ, ಆಲೋಚನೆಮಾಡಿ
ಹಾಡಿದ ಪದ್ಯಗಳು. ಇವು ಪ್ರಾಯಶಃ
ಬಾಯಿಗೆ, ಅವುಗಳಿಗೆ ಸಂಬಂಧಿಸಿದ ಕಥೆ
ಹೆಸರು ಮುಂತಾದ ವಿಷಯಗಳೊಡನೆ,
ವಾಗಿ ಇಳಿದುಬಂದಿರುವುವು. ಈಚೆಗೆ '
ಮಣಿಮಂಜರಿ' ಎಂಬ ಹೆಸರಿನಿಂದ ಕೆಲ
ಹಿಸಿ ಒಬ್ಬ ವಿದ್ವಾಂಸರು ಪ್ರಕಟಿಸಿರುವರು.
ಗಳ ನಿಜವಾದ ಸಂಖ್ಯೆ ಕೆಲವು ಸಾವಿರಗ
ಯಿರಲಾರದೆಂದು ಧಾರಾಳವಾಗಿ ಹೇಳಬಹು
ಳಲ್ಲಿ ಎಲ್ಲಾ ವಿಧ ಭಾವಗಳೂ ರಚನೆಗಳ

ಇಂಗ್ಲಿಷ್ ಸಾಹಿತ್ಯದ ಬಿರು

ಇದೆಲ್ಲಾ ಇಂಗ್ಲೀಷು ಸಾಹಿತ್ಯದ
ನೋಡುವುದಕ್ಕೆ ಮುಂಚೆ ನಡೆದ ತೆಲುಗು

ಮುಖ್ಯ ವಿಷಯಗಳ ಸಂಗ್ರಹ ಸೂಚನೆ. ಇಂಗ್ಲೀಷು ಸಾಹಿತ್ಯದ ಸರ್ವವ್ಯಾಪಿಯಾದ ಸ್ವರೂಪವನ್ನರಿತವರು ಈಚೆಗೆ, ಎಂದರೆ ಹತ್ತೊಂಬತ್ತನೆಯ ಶತಕದ ಕೊನೆಯ ಭಾಗದಿಂದೀಚೆಗೆ ಆ ಸಾಹಿತ್ಯದ ಬಿರುಗಾಳಿಯ ಬಲೆಗೆ ಬಿದ್ದು ಬೆರಗಾದ ದೇಶಭಾಷಾ ಪ್ರಪಂಚವು ಎಷ್ಟೆಷ್ಟು ವಿಧವಾಗಿ ಕುಣಿದು, ಹಾರಿ, ಬಿದ್ದು, ಎದ್ದು, ನಾಟ್ಯವಾಡಬಲ್ಲದೊ ಊಹಿಸಬಹುದು. ಎಲ್ಲಾ ವಿಧವಾದ ಕಥೆ, ಕಾದಂಬರಿ, ನಾಟಕ, ನಕಲಿ, ಚರ್ಚೆ, ಚರಿತ್ರೆ ಮುಂತಾದ ಸಾಹಿತ್ಯದ ಕೆಲಸಗಳಲ್ಲಿಯೂ ಹೊಸ ಹೊಸ ಪ್ರಯತ್ನಗಳು ನಡೆಯುತ್ತಿರುವವು. ಹಳೆಯ ಸಂಪ್ರದಾಯಗಳೆಲ್ಲವೂ ದಿನೇ ದಿನೇ ಯುಕ್ತಾಯುಕ್ತ ವಿವೇಚನೆಯಿಲ್ಲದೆ ಕ್ಷೀಣವಾಗುತ್ತಿರುವುವು. ಹಾಗೆಯೇ ಇಂಗ್ಲೀಷು ಸಾಹಿತ್ಯದ ಸಾರ್ಥಕವಾದ, ನಿರರ್ಥಕವಾದ, ಅನರ್ಥಕವಾದ ಸಂಪ್ರದಾಯಗಳೆಲ್ಲವೂ ಒಂದು ತುಂಬುತ್ತಿರುವುವು. ಪದ್ಯಕ್ಕಿಂತ ಗದ್ಯಕ್ಕೆ ಹೆಚ್ಚು ಪ್ರಾಮುಖ್ಯವು ಏರ್ಪಡುತ್ತಿರುವುದರಿಂದ ಸಹಜವಾಗಿ ಭಾಷೆಯು ವ್ಯಾಕರಣದ ಸಂಕೋಲೆಗಳನ್ನು ಸಡಿಲಮಾಡಿಕೊಂಡು ವ್ಯಾವಹಾರಿಕ ರೂಪಕ್ಕೆ ಸಮೀಪವಾಗಿ ಬರುತ್ತಿರುವುದು. ಭಾಷಾದೇವಿಗೆ ಹೊಸ ಹೊಸ ಅಲಂಕಾರಗಳನ್ನೊದಗಿಸಬೇಕೆಂಬ ಆತುರವು ಎಲ್ಲೆಲ್ಲಿಯೂ ಮಿತಿಮೀರುತ್ತಿರುವುದು.

ಒಟ್ಟಿನಲ್ಲಿ ನೋಡಿದರೆ ಈಗಿನ ಆಂಧ್ರಸಾಹಿತ್ಯದಲ್ಲಿ ಸ್ವತಂತ್ರ ರಚನೆಯು ಬಹು ಸ್ವಲ್ಪ. ಸ್ವಾತಂತ್ರ್ಯ ಬುದ್ಧಿಯು ದಿನೇ ದಿನೇ ಹೆಚ್ಚುತ್ತಿದ್ದರೂ ಸ್ವತಂತ್ರ ಕಾರ್ಯವು ಇನ್ನೂ ನಡೆದಿಲ್ಲ. ನಮ್ಮ ಸ್ವತಂತ್ರ ಬುದ್ಧಿಯು ಪಾಶ್ಚಾತ್ಯ ಸಂಪ್ರದಾಯಗಳಿಗೆ ಪರತಂತ್ರವಾಗುವುದರಲ್ಲಿ ಪ್ರಬಲವಾಗುತ್ತಿದೆಯೇ ಹೊರತು ಪ್ರಪಂಚದ ನಾಗರಿಕತೆಗೆ ನಮ್ಮದೇ ಒಂದು ಹೊಸ ಕಾಣಿಕೆಯನ್ನು ಸಮರ್ಪಣೆ ಮಾಡಬೇಕೆನ್ನುವ ಆಶೆಯಾಗಲಿ, ಪ್ರಜ್ಞೆಯಲ್ಲಿ ಪ್ರತಿಭೆಯಲ್ಲಿ ನಾವಿತರರಿಗಿಂತಲೂ ಕಡಿಮೆಯಲ್ಲವೆಂಬ ಭರವಸೆಯಾಗಲಿ ಇನ್ನೂ ನಮ್ಮಲ್ಲಿ ತಲೆದೋರಲಿಲ್ಲ. ಇದು ಈಗಿನ ಭರತಖಂಡದವರ ಸಾಮಾನ್ಯ ಧರ್ಮವಾಗಿದೆ. ಈಗಿನ ತೆಲುಗು ಸಾಹಿತ್ಯದಲ್ಲೂ ಈ ಲಕ್ಷಣವು ಸ್ಪಷ್ಟವಾಗಿ ಕಾಣಬಹುದು. ಮತ್ತು ಸಮರ್ಥರಾದವರೆಲ್ಲಾ ಪ್ರಾಯಿಕರಾಗಿ ರಾಜಕೀಯ ರಣರಂಗದಲ್ಲಿ ಹೋರಾಡುತ್ತಿರುವುದರಿಂದ ಉತ್ತಮಾಂಧ್ರ ಪ್ರತಿಭಾಶಕ್ತಿಯ ಪ್ರಚಾರಕ್ಕೆ ಅವಕಾಶವಿಲ್ಲದೆ ಸಾಹಿತ್ಯದ ಏಳಿಗೆಯು ಹಿಂದು ಬಿದ್ದಿರುವುದು. ಆದರೆ ಜನರಲ್ಲಿ ಬಣ್ಣವಿಲ್ಲದೆ ಬರೀ ಬರೆ ಹಾಕಿಕೊಂಡು ಇತರರನ್ನು ತೃಪ್ತಿಪಡಿಸಿ ಆ ಮೂಲಕ ತಾವು ಕೃತಕೃತ್ಯರಾದೆವೆಂದು ನಂಬುವ ಲಕ್ಷಣವು ದಿನದಿನಕ್ಕೆ ಕ್ಷೀಣವಾಗುತ್ತಿರುವುದು ಶುಭ ಸೂಚನೆ. ಆದುದರಿಂದ ಆಂಧ್ರಭಾಷೆಯಲ್ಲಿ ಉತ್ತಮ ಸ್ವತಂತ್ರ ಸಾಹಿತ್ಯವು ಹೊರಡುವ ಕಾಲವು ಮುಂದೆ ಇರುವುದೆನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಎಷ್ಟು ಮುಂದೆ?

'ಕನ್ಯಾಶುಲ್ಕ'ವೆಂಬ ನಾಮಾಜಿಕ ಗದ್ಯ ರೂಪಕಕರ್ತೃದು ಇವರು. ಆಧುನಿಕ ತೆಲುಗು ಸಾಹಿತ್ಯದ



ಶ್ರೀ ಗುರು ಜಾಡ ಅಪ್ಪಾರಾವ್

'ಜೀವ' ಮತ್ತು 'ಬಲಿ'ದ ಪರಿಚಯವಾಗಬೇಕಾದರೆ ಈ ನಾಟಕವನ್ನು ಓದಬೇಕು.

# ಮಲಯಾಳ ವಾಙ್ಮಯ ಪರಿಚಯ

(ಡಾಕ್ಟರ್ ಕೆ. ಕುನ್ನಿಕಣ್ಣನ್ ಎಂ.ಎ., ಪಿ.ಹೆಚ್.ಡಿ., ಬೆಂಗಳೂರು)

ದ್ರಾವಿಡಭಾಷಾ ಸಂತತಿಯಲ್ಲಿ ಮಲಯಾಳ ಭಾಷೆಯು ಎಲ್ಲಕ್ಕಿಂತಲೂ ಕಿರಿಯದು. ಇದು ತಮಿಳಿನಿಂದ ಹುಟ್ಟಿತೆಂಬದಾಗಿ ರೂಢಮೂಲವಾದ ನಂಬಿಕೆ ಇದೆ. ಕ್ರಿಸ್ತಶಕ ೭ನೆಯ ಶತಮಾನದವರೆಗೆ ಮಲಯಾಳಕ್ಕೆ ಸ್ವಂತ ಅಕ್ಷರಮಾಲೆ ಇರಲಿಲ್ಲ. ಆದರೂ ಮಲಯಾಳದಲ್ಲಿ ವಾಙ್ಮಯವಿದೆ. ಅದು ವಸ್ತುವಿಸ್ತಾರದಲ್ಲೂ ಗುಣಗೌರವದಲ್ಲೂ ಇತರ ದ್ರಾವಿಡಭಾಷೆಗಳಿಗೆ ಸರಿಸಮನಾಗಿಯೇ ಇದೆ.

## ದೇಶ, ಸಮಾಜ ವ್ಯವಸ್ಥೆ

ಮಲಯಾಳ ವಾಙ್ಮಯವು ಇಷ್ಟು ಬೇಗ ಬೆಳೆದು ಹೇಗೆ ವೃದ್ಧಿಹೊಂದಿತೆಂಬುದನ್ನು ತಿಳಿಯಬೇಕಾದರೆ ಮಲಯಾಳದೇಶದ ಸ್ವರೂಪ ಪರಿಚಯವು ಕೊಂಚ ಬೇಕು. ಆ ದೇಶದ ಜನರು ಮತ್ತು ಅಲ್ಲಿನ ಸಮಾಜ ವ್ಯವಸ್ಥೆಯ ಜ್ಞಾನವು ಅವಶ್ಯಕ. ದಕ್ಷಿಣಭಾರತವನ್ನೂ ಪಶ್ಚಿಮ ಸಮುದ್ರತೀರವನ್ನೂ ಪಶ್ಚಿಮಘಟ್ಟಗಳು ಪ್ರತ್ಯೇಕಮಾಡಿವೆ. ಈ ತೀರಪ್ರದೇಶವು ಬಹಳ ವಿಶಾಲವಾಗಿರುವ ಕಡೆಯೆಂದರೆ ೫೦–೬೦ ಮೈಲಿಗಳ ಅಗಲಕ್ಕಿಂತ ಹೆಚ್ಚಿಲ್ಲ. ತೀರಪ್ರದೇಶ ನಿವಾಸಿಗಳಿಗೂ, ಅಂತರ್ಪ್ರದೇಶ ನಿವಾಸಿಗಳಿಗೂ ನಿಕಟ ಸಂಬಂಧ ಬೆಳೆಯಲು ಘಟ್ಟಗಳಲ್ಲಿ ದುರ್ಗಮವಲ್ಲದ ಅನೇಕ ದಾರಿಗಳಿಲ್ಲ. ಘಟ್ಟಗಳು ಕೆಲವುಕಡೆ ಸರಿ ಸುಮಾರು ೬–೭ ಸಾವಿರ ಅಡಿಗಳ ಮೇಲೆದ್ದು ಮೇಘಮಂಡಲವನ್ನು ಭೇದಿಸುತ್ತವೆ. ಇದರ ಫಲವೆಂದರೆ ಈ ಪ್ರಾಂತ್ಯದಲ್ಲಿ ೧೦೦ ರಿಂದ ೧೫೦ ಹದದವರೆಗೆ ಮಳೆಯಾಗುತ್ತದೆ. ಘಟ್ಟಗಳಲ್ಲಿ ಅನೇಕ ನದಿಗಳು ಹುಟ್ಟಿ, ಬೇಡದ ನೀರನ್ನೆಲ್ಲ ಸಮುದ್ರಕ್ಕೊಯ್ಯುತ್ತವೆ. ಅಂದರೆ ಈ ನದಿಗಳು ತೀರಪ್ರದೇಶವನ್ನೆಲ್ಲ ನಾನಾಖಂಡಗಳನ್ನಾಗಿ ಕಡಿದು, ಒಂದೊಂದನ್ನೂ ಪ್ರತ್ಯೇಕಮಾಡಿವೆ. ವರ್ಷಾಕಾಲದಲ್ಲಂತೂ ಈ ಸಣ್ಣಸಣ್ಣ ವಿಭಾಗಗಳೊಂದೊಂದಕ್ಕೂ ಸಂಬಂಧವೇ ಇಲ್ಲದಂತಾಯಿತು. ಒಂದೊಂದು ವಿಭಾಗವೂ ಒಂದೊಂದು ಪುಟ್ಟ ಸಂಸ್ಥಾನವಾಗಿ ... ಸಿತು. ಈ ಪುಟ್ಟ ಸಂಸ್ಥಾನಗಳ ಪುರುಷಾ... ಯಾದವೀಕಲಹದಲ್ಲಿ ಮುಕ್ತಾಯವಾಯಿತು. ಕೆಲವು ಸಣ್ಣಪುಟ್ಟ ಸಂಸ್ಥಾನಗಳೊಂದಾಗಿ ... ರಾಜ್ಯವೆನಿಸಿದರೂ ಪುಟ್ಟಪುಟ್ಟ ಸಂಸ್ಥಾನಗಳು ... ವ್ಯಕ್ತಿತ್ವವನ್ನು ನೀಗಿಕೊಳ್ಳಲಿಲ್ಲ; ಅಸ್ತಿ... ತ್ವವನ್ನುಳಿಸಿಕೊಂಡವು. ಈ ಅನೇಕ ಸಂಸ್ಥಾ... ನ್ಯಗಳಿಗೆ ಶಸ್ತ್ರೋಪಜೀವಿಗಳಾಗಿ ನಾಯರ ಕುಲದವರು ವೃದ್ಧಿಂಗತರಾಗುತ್ತ ಬಂದರು. ... ನಿಕರಿಗೆ ನಾಯರರು ಕ್ಷಾತ್ರಸೇವೆ ಮಾಡಿದ್ದಕ್ಕೆ ಫಲವಾಗಿ ಸಂಸ್ಥಾನಿಕರು ಇವರನ್ನು ದೊಡ್ಡ ಜಮೀನುದಾರರನ್ನಾಗಿ ಮಾಡಿದರು. ನಾಯ... ಕ್ಕಿಂತ ಕನಿಷ್ಠ ಜಾತಿಯವರು ಆ ಭೂಮಿ... ಉತ್ತು, ಬಿತ್ತಿ, ಬೆಳೆಯುತ್ತ ಬಂದರು. ಮಧ್ಯ... ಳಾದ ನಾಯರರು ತಮ್ಮ ಕೀರ್ತಿಪ್ರತಿಷ್ಠೆ... ಕಾಪಾಡಿಕೊಳ್ಳುವುದಕ್ಕಾಗಿಯೂ, ದುಡಿ... ತೆಗೆವ ರೈತನಿಂದ ದವಸಧಾನ್ಯಗಳಲ್ಲಿ ಪ್ರ... ಕಿತ್ತುಕೊಳ್ಳುವುದಕ್ಕಾಗಿಯೂ ಕೈಕೆಳಗಿನ... ಕೇವಲ ಶೋಚನೀಯಾವಸ್ಥೆಯಲ್ಲೇ ಇಟ್ಟ... ದರು. ಇನ್ನು ಕೆಲವುಕಡೆ ಈ ಸಂಸ್ಥಾನಿಕ... ವನ್ನು ನಂಬೂದರಿ ಬ್ರಾಹ್ಮಣರು ಆಕ್ರಮಿ... ಇವರ ಕಯ್ಯಲ್ಲಿ ಅಪಾರವಾದ ಭೂಮಿಕಾಣಿ... ಆ ಭೂಮಿಗಳನ್ನು ಅವರು ಸಂಸ್ಥಾನಿಕರ... ನಾಯರುಗಳಿಗೆ ಕಂದಾಯಕ್ಕೆ ಕೊಟ್ಟರು. ... ಆಸ್ತಿಪಾಸ್ತಿಗಳು ಛಿದ್ರವಾಗದೆ, ಅವಿಭಕ್ತ... ಯುತ್ತಾ ಬರಲೆಂಬ ಉದ್ದೇಶ್ಯದಿಂದ ಬಂದು... ದಲ್ಲಿ ಜ್ಯೇಷ್ಠಪುತ್ರನೊಬ್ಬನೇ ಮದುವೆಯಾಗ... ವಿಧಿಸಿದರು. ಉಳಿದ ಪುರು... ಸಂತಾನದ... ನಾಯರು ಸ್ತ್ರೀಯರೊಂದಿಗೆ ಕೂಡಿಕೆ ಮಾ... ಅಂತಹ ... ಅವಕಾಶ ಕಲ್ಪಿಸಿದರು. ... ಕೆಯ ಫಲವಾಗಿ ಆದ ಮಕ್ಕಳಿಗೆ ತಂದೆಯ ಆ...

ಯಾವವಿಧವಾದ ಹಕ್ಕು ಇಲ್ಲವೆಂದು ಸ್ಥಿರವಾಯಿತು ಈ 'ಮರುಮ ಕತಾಯಂ' (ಅಳಿಯ ಸಂತಾನ) ಎಂಬ ಪದ್ಧತಿಯು ಮಲಯಾಳದ ನಾಯರು ಸ್ತ್ರೀಯರಿಗೆ ಒಂದು ಸ್ಥಾನವನ್ನೂ ಬಲವನ್ನೂ ಕೊಟ್ಟಿತು. ಭರತಖಂಡದ ಮತ್ತಾವ ಕಡೆಯೂ ಸ್ತ್ರೀಯರಿಗೆ ಈ ಸ್ಥಾನ ಬಲವಿಲ್ಲ. ತಮ್ಮ ಮಕ್ಕಳ ಮರಿಗಳ ಭವಿಷ್ಯವು ಕಟ್ಟಿಕೊಂಡ ಗಂಡನ ಆಸ್ತಿಪಾಸ್ತಿಗಳ ಮೇಲೆ ಅವಲಂಬಿಸದೆ, ತಮ್ಮ ತಂದೆತಾಯಿಗಳ ಪಿತ್ರಾರ್ಜಿತದ ಮೇಲೆ ಅವಲಂಬಿಸಿತು. ಈ ಕಾರಣದಿಂದ ನಾಯರು ಸ್ತ್ರೀಯರು ಸ್ವಂತವಾಗಿ ತಮಗೆ ಇಷ್ಟಬಂದವನನ್ನು ಪತಿಯನ್ನಾಗಿ ಆರಿಸಿ, ಸ್ವೀಕರಿಸಲು ಸಾಧ್ಯವಾಯಿತು. ನಂಬೂದರಿಗಳ ಮತ್ತು ನಾಯರರ ಆಸ್ತಿಪಾಸ್ತಿಗಳು ಹಂಚಿ ಹೋಗದೆ, (ಅವರನುಸರಿಸಿದ ವ್ಯವಸ್ಥೆಯಿಂದ) ಸುರಕ್ಷಿತವಾದವು.

## ಸಾಹಿತ್ಯಸೃಷ್ಟಿಗೆ ಅನುಕೂಲ ಪರಿಸ್ಥಿತಿ

ಅಂದರೆ ಮಲೆಯಾಳ ಸಮಾಜವ್ಯವಸ್ಥೆಯಲ್ಲಿ ರಾಜರ ಅಧೀನಕ್ಕೊಳಗಾದ ಶ್ರೀಮಂತರನೇಕರುಂಟಾದರು. ಅವರಿಗಿಂತ ಅಧಿಕಸಂಖ್ಯಾಬಲವುಳ್ಳ ಮಧ್ಯವರ್ತಿ (ನಾಯರ್) ಪಂಗಡವೊಂದೇರ್ಪಟ್ಟಿತು. ಅವರ ಕೈಕೆಳಗೆ ಜನಸಾಮಾನ್ಯವಿತ್ತು. ಸ್ತ್ರೀಯರಾದರೋ ವಿಶೇಷ ಸ್ವಾತಂತ್ರ್ಯವನ್ನು ಅನುಭವಿಸುತ್ತ ಬಂದರು. ಗಂಡನ ಮನೆಗೆ ಹೋಗಿ, ಅವನ ಆಸ್ತಿಪಾಸ್ತಿಗಳ ಮೇಲೆಯೇ ಜೀವನವನ್ನೆಲ್ಲ ಅವಲಂಬನ ಮಾಡಿ, ಯಾವ ಕ್ಷಣದಲ್ಲಿ ಏನು ವಿಪತ್ತೋ ಎಂದು ಕಾತರಿಸುವ ಭರತಖಂಡದ ಇತರ ಭಾಗಗಳ ಸ್ತ್ರೀಯರಂತಲ್ಲದೆ ತಮ್ಮ ಪಿತ್ರಾರ್ಜಿತಕ್ಕೆ ತಾವೂ ತಮ್ಮ ಮಕ್ಕಳೂ ಹಕ್ಕುದಾರರಾಗಿ ನಿರುಪಾಧಿಕವಾಗಿ ಜೀವನವನ್ನು ನಡೆಸುತ್ತ ಬಂದರು. ಸಾಕಾದಷ್ಟು ವಿರಾಮ ಸುಖವನ್ನು ಅನುಭವಿಸುವ ಸಮಾಜವೆಲ್ಲುಂಟೋ ಅಲ್ಲೇ ಸಾಹಿತ್ಯಾಭಿವೃದ್ಧಿಯಾಗುವದೆಂಬ ಅಂಶವನ್ನು ಅನೇಕರು ಸಾಕಾದಷ್ಟು ತಿಳಿದಿಲ್ಲ. ಕವಿಗಳೂ, ಪ್ರಖ್ಯಾತ ಲೇಖಕರೂ ಸಾಮಾನ್ಯವಾಗಿ ಸಮಾಜದ ಕನಿಷ್ಟವರ್ಗದಲ್ಲೇ ಹುಟ್ಟುವುದು ನಿಜ. ಆದರೆ ಅವರ ಪ್ರತಿಭೆಯು ವಿಕಾಸವಾಗಬೇಕಾದರೆ ಸಮಾಜದಲ್ಲೊಂದು ಸ್ಥಾನಗೌರವ ಪಡೆದಿರುವವರಿಂದ ಉಚಿತ ಪ್ರೋತ್ಸಾಹವು ಅವಶ್ಯಕ. ಅವರು ಉಪಾರಾಶ್ರಯವನ್ನಿತ್ತರಂದರೆ ಲೇಖಕರ ಮರ್ಯಾದೆಯೂ ಹೆಚ್ಚುವುದು. ಅವರ ಐಹಿಕ ಜೀವನದ ಅನುಕೂಲಗಳೂ ಹೆಚ್ಚುವವು. ಸಮಾಜ ವ್ಯವಸ್ಥೆಯು ಶ್ರೇಣೀಬದ್ಧವಾಗಿರಬೇಕು; ಭಾಗ್ಯವೂ ಬಡತನವೂ, ಸುಖಲೋಲುಪತೆಯೂ ದುಃಖಯಾತನೆಯೂ ಅಕ್ಕಪಕ್ಕದಲ್ಲಿ ಕಾಣಬಂದಲ್ಲಿ, ಶ್ರೇಷ್ಠಕನಿಷ್ಠ ಭಾವನೆಯು ಬಲವಾಗಿ, ಉಗ್ರಸ್ವರೂಪದಲ್ಲಿ ಬಯಲಾಗಲು ಜನರಿಗೆ ಸಮಾಜದ ಅನ್ಯಾಯ ವ್ಯವಸ್ಥೆಯ ಜ್ಞಾನವು ಚನ್ನಾಗಿ ಮಂಡಟ್ಟಾಗುತ್ತದೆ. ಸಮಾಜದಲ್ಲಿ ತಾವು ಬಹುಕೀಳೆಂಬ ಪರಿಜ್ಞಾನವುಂಟಾಗುತ್ತಲೆ ಉನ್ನತಿಯ ಬಯಕೆಯು, ಅದನ್ನು ಸಾಧಿಸುವ ಸಾಹಸೇಚ್ಛೆಯು ಅವರ್ಣನೀಯವಾಗಿ ತೋರಿಬರುತ್ತದೆ. ಮಲಯಾಳದ ಸಮಾಜರಚನೆ; ಭೋಗಭಾಗ್ಯಗಳಿಂದ ಬೀಗುತ್ತಿರುವ ಜೀವನವೊಂದು ಕಡೆ, ಬಡತನ ಮತ್ತು ಅಧಃಪತನದ ನರಕಯಾತನೆಯ ಜೀವನವೊಂದು ಕಡೆ; ಈ ಪರಿಸ್ಥಿತಿ ಕ್ಷೇತ್ರವು ಪ್ರತಿಭಾವಂತರಾದ ಲೇಖಕರ ಸಾಹಿತ್ಯಸೃಷ್ಟಿಗೆ ಬಹಳ ಹುಲುಸಾಗಿದೆ. ಜೀವನ ಸುಖಸಂಪತಿಗಳಿಗೆಲ್ಲ ಒಡೆಯರಾಗಿ ಶ್ರೀಮಂತ ಪಂಗಡದವರು ಲೋಲರಾಗಿದ್ದರು. ಈ ವಿರಾಮ ವೈಭವಜೀವಿಗಳ ಮನಸ್ಸಿನ ಉಲ್ಲಾಸಕ್ಕಾಗಿ ಏನಾದರೂ ಕೆಲಸಬೇಕಷ್ಟೆ. ಸಹಜವಾಗಿ ಇವರು ಸಾಹಿತ್ಯವ್ಯವಸಾಯವನ್ನು ಪ್ರೋತ್ಸಾಹಿಸುತ್ತ ಬಂದರು; ಪೋಷಿಸುತ್ತ ಬಂದರು. ಅತ್ತಲಾಗಿ ಬಡತನದಲ್ಲಿ ಬೆಂದು, ಸಮಾಜದಲ್ಲಿ ಕೀಳು ಕ್ರಿಮಿಗಳೆಂದು ನೊಂದು, ಜಾಣರ ಬುದ್ಧಿಯು ಬಹಳ ಚುರುಕಾಯಿತು, ಹರಿತವೃದ್ಧವಾಯಿತು. ಇವರು ಸಮಾಜದ ಶ್ರೇಷ್ಠವರ್ಗದವರ ಪ್ರೀತಿಗೌರವಗಳನ್ನು ಸಂಪಾದಿಸಿದರು.

## ಕವಿತೆ

ವಿರಾಮಜೀವಿಗಳು ಕೂಡ ಗೊಡ್ಡುಗಳಾಗಿ ಕೂತಿರಲಿಲ್ಲ. ಮಲಯಾಳದಲ್ಲಿ ಸಂಸ್ಕೃತ ಮಹಾಕಾವ್ಯಗಳ, ನಾಟಕಗಳ ಭಾಷಾಂತರಗಳಿವೆ. ಇವುಗಳಿಗೆಲ್ಲ ಈ ವಿರಾಮಜೀವಿಗಳೇ ಕಾರಣ. ಮಲಯಾಳದ ಸಣ್ಣಪುಟ್ಟ ಸಂಸ್ಥಾನಿಕರನೇಕರೂ ಸಹ ಉಚಿತವಾದ ಸಾಹಿತ್ಯಸೇವೆ ಮಾಡಿದ್ದಾರೆ. ಮೂಕನಾಟಕಗಳು ಮಲಯಾಳ ದೇಶದ ವಿಶೇಷ ಲಕ್ಷಣ; ಇವರೇ ಈ ನಾಟಕಗಳ ಸೃಷ್ಟಿಕರ್ತರು. ಆದರೆ ಮಲಯಾಳ ಸಾಹಿತ್ಯದ ತಿರುಳು ನಿಜವಾಗಿ ಕನಿಷ್ಟ ಕುಲಪುತ್ರರಿಂದಲೇ ಸೃಷ್ಟವಾಯಿತೆಂದು ಹೇಳಬೇಕು. ಮಲಯಾಳ ಕವಿ ಸಾರ್ವಭೌಮನೆನಿಸಿದವನು ನಂಬೂದರಿಬ್ರಾಹ್ಮಣ

ಮತ್ತು ಬಡಗಿಯ ಕುಲಸ್ತ್ರೀ ಇವರಿಬ್ಬರ ಕೂಡಿಕೆಯ ಸಂತಾನ. ಇವನೇ ಮಲಯಾಳಕ್ಕೊಂದು ಲಿಪಿಯನ್ನು ಕೊಟ್ಟವನು. ರಾಮಾಯಣ, ಮಹಾಭಾರತ, ಭಾಗವತಗಳೇ ಅವನ ಮಹಾ ಕಾವ್ಯಗಳು. ಸಂಸ್ಕೃತ ಮೂಲವೇ ಇವನ ಸ್ಫೂರ್ತಿವಸ್ತುವೆಂಬುದು ನಿಜ. ಆದರೂ ಈ ಕಾವ್ಯಗಳ ಪ್ರತ್ಯಂಗದಲ್ಲೂ ಕವಿಯ ಸ್ವತಂತ್ರ ರಚನಾಕೌಶಲವೂ ಪ್ರತಿಭೆಯೂ ಕಾಣಬರುತ್ತದೆ. ಮೂಲದಿಂದ ಕತೆಗಳ ರೂಪುರೇಖೆಗಳನ್ನು ಮಾತ್ರ ತೆಗೆದುಕೊಂಡಿದ್ದಾನೆ. ವರ್ಣನಾವೈಚಿತ್ರ್ಯ, ಕಥಾಸರಣಿಯಲ್ಲಿ ಜಾಣತನದಿಂದ ಹೆಣೆದಿರುವ ವೇದಾಂತ ವಿದ್ಯುನ್ಮಾಲಾರುಚಿ ಇವೆಲ್ಲ ಅವನವೇ. ಇವಲ್ಲದೆ ನೂರಾರು ಸಣ್ಣಸಣ್ಣ ಕವನಗಳನ್ನು ಬರೆದಿದ್ದಾನೆ. ಬಾಲಕಬಾಲಕಿಯರು ಹಾಡುವುದಕ್ಕೆ ಅನುಕೂಲವಾಗಿ ರಚಿಸಲ್ಪಟ್ಟ ಗೀತೆಗಳಿವೆ. ಈ ಕವಿಯು ಸರಿ ಸುಮಾರು ೧,೦೦,೦೦೦ ಪಾದಗಳನ್ನು ರಚಿಸಿದ್ದಾನೆ.

ಇವನ ತರುವಾಯ ಉಲ್ಲೇಖನಯೋಗ್ಯ ಕವಿಯೆಂದರೆ ಕುಂಜನ್ ನಂಬಿಯಾರ್ ಎಂಬೊಬ್ಬ ಬಡ ನಾಯರು. ಇವನು ಕ್ಷಾತ್ರಯುಗದ ವೀರಶಿಖಾಮಣಿಗಳ ಸಾಹಸಗಳನ್ನೆಲ್ಲ ಲಾವಣಿಗಳಲ್ಲಿ ಚಿತ್ರಿಸಿದ್ದಾನೆ. ಈ ಲಾವಣಿಗಳು ಆ ಕಾಲದ ಚಿತ್ರವನ್ನು ಕಣ್ಣೆದುರಿಗೆ ಕಟ್ಟಿದಂತೆ ತೋರಿಸುತ್ತವೆ. ವಿಚಿತ್ರವಾಗಿ ವೇಷಹಾಕಿಕೊಂಡು, ನಾಟ್ಯಕ್ಕೂ, ಶಟದ ನಡಿಗೆಗೂ ಮಧ್ಯಸ್ಥವಾದೊಂದು ಬಗೆಯ ಅಭಿನಯದೊಂದಿಗೆ ಒಬ್ಬನು ಈ ಲಾವಣಿಗಳನ್ನು ನೂರಾರು ಮಂದಿಗೆ ಹಾಡುತ್ತಾನೆ. ಈ ಸಂದರ್ಭಗಳಲ್ಲಿ ಸ್ಥಳೀಯ ಸಾಮಾಜಿಕ ಕೊರತೆಗಳನ್ನೂ, ದೋಷಗಳನ್ನೂ ಉದ್ಘಾಟನಮಾಡದೆ ಇರುವುದಿಲ್ಲ. ಇಂತಹ ಲಾವಣಿಗಳು ಸುಮಾರು ೬೦ ಇವೆ; ಸುಮಾರು ೬೦,೦೦೦ ಪಾದಗಳಾಗುತ್ತವೆ. ಇವಲ್ಲದೆ 'ರುಕ್ಮಿಣೀ ಸ್ವಯಂವರಂ', 'ಭಗವದ್ದೂತಂ', 'ಭಾಗವತಂ', 'ನಲಚರಿತಂ', 'ಶೀಲವತಿ', 'ಚಾಣಕ್ಯಸೂತ್ರಂ' ಎಂಬ ಪ್ರತ್ಯೇಕ ಜಾತಿಯ ಲಾವಣಿಗಳಿವೆ.

ಕುಂಜನ್ ನಂಬಿಯಾರ್ ಕವಿತೆಯ ವಿಶೇಷ ಲಕ್ಷಣವಂದರೆ ಅದು ಸಂಸ್ಕೃತದಿಂದ ಸ್ವತಂತ್ರನಾಗಿದೆ. ಮಲಯಾಳದಲ್ಲಿ ೧೧,೦೦೦ ಶಬ್ದಗಳಿಗಿಂತ ಹೆಚ್ಚಾಗಿಲ್ಲ. ಆದಕಾರಣ ಮಲಯಾಳವು ಶಬ್ದಸಂಪತ್ತಿಗಾಗಿ ಸಂಸ್ಕೃತವನ್ನು ಆಶ್ರಯಿಸಲೇಬೇಕಾಯಿತು. ಭಾಷಾಜ್ಞಾನದ ಹೆಮ್ಮೆಯಿಂದಲೂ, ಆ ಭಾಷಾಸ್ತ್ರರವು ಬಹಳಮಟ್ಟಿಗೆ ಜನತೆಯಲ್ಲಿ ಆಗಿದ್ದ ಕಾರಣದಲೂ ಲೇಖಕರು ಆವಶ್ಯಕತೆ ಕಂಡು ಬಂದುದಕ್ಕಿಂತ ಹೆಚ್ಚಾಗಿಯೇ ಸಂಸ್ಕೃತ ಶಬ್ದಗಳನ್ನು ಉಪಯೋಗಿಸುತ್ತಬಂದರು. ಮಲಯಾಳವು ಸಂಸ್ಕೃತದಿಂದ ಸ್ವತಂತ್ರವಾಗಿ, ತನ್ನ ವ್ಯಕ್ತಿತ್ವವನ್ನು ಸ್ಥಾಪಿಸಲು ಪ್ರಯತ್ನಮಾಡಿತು. ಈ ಪ್ರಯತ್ನದಲ್ಲಿ ಕುಂಜನ್ ನಂಬಿಯಾರನ ಸಾಹಸವು ಅಪ್ಪಿಷ್ಟಲ್ಲ.

ಅನಂತರ 'ಕೃಷ್ಣಲೀಲಾ' ಎಂಬ ೧೧,೦೦೦ ಗಳುಳ್ಳ ಜೋಗುಳಗಳನ್ನು ಹಾಡಿದ ನಂಬೂದಿರಿಗಣನೇ ಗಣನಾರ್ಹನಾದ ಕವಿ. ಒಬ್ಬ ರಾಜನ ಮನೆಯಲ್ಲಿ ಕವಿಯೊಂದಿಗೆ ಚದುರಂಗವಾಡುತ್ತಿದ್ದ ಸಿದ. ರಾಜನು ಸೋಲುವಂತಾಯಿತು. ತನ್ನ ಕೂಸನ್ನು ತೊಟ್ಟಿಲಲ್ಲಿಟ್ಟು ತೂಗುತ್ತ ಹಾಡುತ್ತಿದ್ದಳು. ರಾಜನು ಸೋಲುವ ದಲ್ಲಿ ಬಹು ಯುಕ್ತಿಯಿಂದ ಜೋಗುಳದೊಂದಿಗೊಂದು ಸೂಚನೆ ಕೊಟ್ಟು ರಾಜನನ್ನು ಳಿಸಿದಳು. ಈ ಸನ್ನಿವೇಶವೇ ಕವಿಯ ಕಾವ್ಯಕ್ಕೆ ಣವಾಯಿತು. ಈ ಕಾವ್ಯದ ಉಪಮೆಗಳು ತೀತವಾದವು. ಕೆಲವಂತೂ ಶುದ್ಧ ನವು. ಸರಳಶೈಲಿ. ಮಲಯಾಳ ಈ ಕಾವ್ಯದಲ್ಲಿ ಬಹಳ ಪ್ರೇಮ.

ಮಲಯಾಳ ಧಾರ್ಮಿಕ ಕವಿತೆಯು ನೆಯುಳ್ಳದ್ದೂ, ಭಕ್ತಿರಸಾವೇಶವುಳ್ಳ ವಾರಿಯರ್ ಕುಲದವನೊಬ್ಬನಿಂದ ರಚಿತವಾದ ಯಣೀಯಂ' ಎಂಬ ಗ್ರಂಥಕ್ಕೆ ನೊದಲನೆ ವನ್ನು ಕೊಡಬೇಕು. ಆದರೆ ಇದು ಸಂಸ್ಕೃತ

ಇನ್ನು ಮಲಯಾಳದ ಕವಿತಾವಾಙ್ಮಯವನ್ನು ದುದೆಲ್ಲ ಸಾಮಾನ್ಯವಾಗಿ 'ಕಥಕಳಿ'ಗಳು, ಗಳು ಮತ್ತು ಲಾವಣಿಗಳು. ನಾಟಕಗಳಿಗೆ ಸ್ಕೃತ ಮಹಾಕಾವ್ಯಗಳೇ ಸ್ಫೂರ್ತಿ ಕೆಲಸ ಮಾಡುವಾಗಲೆಲ್ಲ ಜನರು ಹಾಡುತ್ತಾರಷ್ಟೆ. ಅವುಗಳಲ್ಲೆಲ್ಲ ಸಣ್ಣಪಣ್ಣ ಸಂಸ್ಥಾನಿಕರ, ವೀರರ ವರ್ಣನೆಯೇ ತುಂಬಿರುತ್ತದೆ. ವೈಭವದಿಂದಲೂ, ಶೈಲಿಯ ಸರಳತೆಯ

ತ್ಕೃಷ್ಟ ಕಾವ್ಯಗಳ ಸ್ಥಾನಮರ್ಯಾದೆ ಹೊಂದಿವೆ. ...ಪಾತುಗಬ್ಬಗಳೊಂದರಲ್ಲಿ ಒಬ್ಬ ಹೆಂಗಸನ್ನು ಮುಸ...ನ ಪಾಳಯಗಾರನೊಬ್ಬನು ತನ್ನ ಜನಾನಾಕ್ಕೆ ...ಯಲು ಪ್ರಯತ್ನಪಡುತ್ತಾನೆ. ಆಗ ಆ ಹೆಂ...ು ಮುಸಲ್ಮಾನ ಸೈನ್ಯವನ್ನೇ ಹೇಗೆ ಧ್ವಂಸ ...ಡಿದಳೆಂಬ ಕೀರ್ತಿ ವಿಸ್ತಾರ ವರ್ಣನೆಯಿದೆ.

## ಗದ್ಯ ವಾಙ್ಮಯ

ಗದ್ಯಗ್ರಂಥಗಳೇ ಇಲ್ಲ. ಇಂಗ್ಲೀಷು ವಿದ್ಯಾ...ಸಮಾಡಿದ ಗುಂಪಿನವರು ತಮ್ಮ ಯೋಗ್ಯತೆ...ತ್ತ ಜವಾಬ್ದಾರಿಗೆ ಉಚಿತವಾಗಿ ಸಾಹಿತ್ಯಸೇವೆ ...ಷ್ಟೂ ಮಾಡಲಿಲ್ಲ. ಅವರಿಗೆ ಸೇವೆಯ ಸಂಸಾರ, ...ರಿಯ ತಾಪತ್ರಯ ಇಷ್ಟರಲ್ಲೇ ಅವರ ಜೀವನ ...ಮುಕ್ತಾಯವಾಯಿತು. ಇದರಮೇಲೆ ಅವ... ದೇಶಭಾಷೆಗಳಲ್ಲಿ ಅಭಿಮಾನದ ಮಾತಿರಲಿ ಅಭಿ...ಕಿಯೇ ಕಡಿಮೆಯಾಯಿತು. ಇನ್ನು ಅದರ ವ್ಯವ...ಯವೆಲ್ಲಿಂದ ಬಂತು. 'ಇಂದುಲೇಖಾ' ಎಂ...ನೇ ಮಲಯಾಳ ಭಾಷೆಯಲ್ಲಿ ಸರ್ವಜನ ಸಮ್ಮತ...ದ ಕಾದಂಬರಿ. ಇದನ್ನು ಬರೆದವರೊಬ್ಬ ಸರ...ರಿ ಅಧಿಕಾರಿಗಳು. ಇದರಲ್ಲಿ ಮಲಯಾಳದೇಶದ ...ಯರ್ ನಂಬೂದರಿ ಸಂಬಂಧದ ಸಮಾಜ ಚಿತ್ರವಿದೆ. ...ಕಾದಂಬರಿಯು ನಾಯರ ಸಮಾಜಹೃದಯ ತಂತ್ರಿ...ನ್ನು ಮೀಟಿತು. ನಂಬುದರಿ ಬ್ರಾಹ್ಮಣ ಕುಲಾ...ರದ ನಿಗಡಬಂಧನದಿಂದ ಮುಕ್ತರಾಗಲೆಳಸಿದ ...ಯರ ಕುಲದ ಸ್ವಾತಂತ್ರ್ಯಸಾಧನೆಗೀಕಾದಂಬ...ು ಬಹಳ ಸಹಾಯಕವಾಯಿತು. ಇನ್ನೂ ಅನೇಕ ...ದಂಬರಿಗಳು ಹುಟ್ಟಿದವು. ಆದರೆ ಮಲಯಾಳ ...ಾಂಗ ಜೀವನಕ್ಕೂ ಅವುಗಳಿಗೂ ಬಹಳ ದೂರ ...ದ್ದರಿಂದ 'ಇಂದುಲೇಖೆ'ಯ ಸರ್ವವ್ಯಾಪಕತೆಯು ...ಗಳಲ್ಲಿಲ್ಲ. ಕಾದಂಬರಿಯ ಉದ್ದಿಶ್ಯವೇನೆಂಬು...ದೂ ಸ್ಪಷ್ಟವಾಗಿಲ್ಲ. ಪ್ರಾಚೀನ ಸಂಪ್ರದಾಯದ ...ಯಲ್ಲೇ ಸಮಾಜವಿನ್ನೂ ಸಿಕ್ಕಿರುವಾಗ ಕಾದಂಬರಿ...ನ್ನು ಬರೆಯುವುದು ಸುಲಭವಲ್ಲ- ಸಮಾಜದಲ್ಲಿ ...ಮೇಲುಗಳೂ, ಸ್ವತಂತ್ರಪರತಂತ್ರಘರ್ಷಣಗಳೂ ...ಲವಾಗಿದ್ದಾಗಲೇ ಕಾದಂಬರಿಗಳ ಪರಿಣಾಮವು ...ತೆಯ ಮೇಲೆ ಪೂರ್ಣಫಲಕಾರಿಯಾಗಬೇಕಾದರೆ. ...ಲಯಾಳದಲ್ಲಿ ಆ ಪರಿಸ್ಥಿತಿಯಿನ್ನೂ ಉಂಟಾಗಿಲ್ಲ. ...ದಂಬರಿಗಳಲ್ಲಿ ಸಾಮಾನ್ಯವಾಗಿ ರಸವೆಂದರೆ ಶೃಂಗಾರ. ಅದೂ ಭಾರತೀಯ ಹೃದಯಕ್ಕೆ ಹಿತವೆನಿಸುವ ರೀತಿಯಲ್ಲಿ ಈ ಶೃಂಗಾರರಸ ಪೋಷಣವಾಗಿಲ್ಲ; ಐರೋಪ್ಯ ರೀತಿರಂಗಕ್ಕನುಗುಣವಾಗಿ ಆಗಿದೆ. ಆಗಿರುವ ಭಾಷಾಂತರಗಳೆಲ್ಲ ಸಾಮಾನ್ಯವಾಗಿ ಕೀಳುತರದ ಆಂಗ್ಲ ಕಾದಂಬರಿಗಳಿಂದ. ಅದನ್ನು ಅಥ್ವಾಪನ್ನ ಮಲಯಾಳದಲ್ಲಿ ಬರೆದಿದ್ದಾರೆ. ಇತ್ತೀಚಿಗೆ ಈ ಜಾತಿಯ ಕಾದಂಬರಿಗಳು ಕಡಿಮೆಯಾಗಿವೆ. ಹಲಕೆಲವು ರಾಜಕೀಯ ವಿಚಾರ ಕಾದಂಬರಿಗಳೂ ತಲೆಹಾಕಿವೆ.

ಕಾದಂಬರಿಗಳ ಮಾತು ಹಾಗಿರಲಿ. ಶ್ರೇಷ್ಠ ಆಂಗ್ಲ ಲೇಖಕರ ಉತ್ತಮ ಕಾವ್ಯಗಳ ಭಾಷಾಂತರಗಳಾಗಿವೆ. ಅವುಗಳಲ್ಲಿ ಗತಿಸಿದ ಶ್ರೀ ಟಿ. ಕಣಾರನ್‌ರ ರಾಸೆಲಾಸ್, ಲೇಡಿ ಆಫ್ ದಿ ಲೇಕ್, ಮುಂತಾದ ಹಲವು ಗ್ರಂಥಗಳಿಗೆ ಮೊದಲನೆಯ ಸ್ಥಾನವನ್ನು ಕೊಡಬೇಕು. ಈತನು ಥೀಯ್ಯಕುಲದವನು. ಬಿ. ಎ. ಮಾಡಿದ್ದನು. ಈತನಲ್ಲಿ ಬಹಳ ಯೋಗ್ಯತೆಯಿತ್ತು. ಈತನು ಬರೆದ 'ಭಾಷಾಂತರ ಬೋಧಿನಿ' ಯಲ್ಲಿ ಈತನಿಗೆ ಮಲಯಾಳ ಮತ್ತು ಇಂಗ್ಲಿಷ್ ಭಾಷೆಗಳ ವ್ಯಾಕರಣ, ಅಲಂಕಾರ ಶಾಸ್ತ್ರಗಳಲ್ಲಿದ್ದ ಪರಿಶ್ರಮವು ಚನ್ನಾಗಿ ಕಾಣಬರುತ್ತದೆ. ರವೀಂದ್ರನಾಥ ಠಾಕೂರರ ಕಾವ್ಯಗಳೂ ಭಾಷಾಂತರಗಳಾಗಿವೆ. ಸ್ತ್ರೀಪುರುಷರು ಅನೇಕರು ನಾನಾಭಾಷಾಂತರಗಳಿಗೆ ಕೈಹಾಕಿದ್ದಾರೆ.

ಲೇಖಕರನೇಕರು ಮಲಯಾಳ ಗದ್ಯಕ್ಕೆ ಸಾಕಾದಷ್ಟು ಸೇವೆಮಾಡಿದ್ದಾರೆ. ಆದರೆ ಪೂರ್ವ ಸಂಪ್ರದಾಯಗಳಿಗೆ ಕೈಮುಗಿದು, ಹೊಸ ಹಾದಿಯನ್ನು ಧೈರ್ಯವಾಗಿ ಹಿಡಿದು, ಗದ್ಯಶೈಲಿಯಲ್ಲಿ ನಾನಾ ಪ್ರಯೋಗಗಳನ್ನು ಮಾಡಿ, ಗದ್ಯಶೈಲಿಗೊಂದು ರೂಪವನ್ನು ಕೊಟ್ಟ ಕೀರ್ತಿಯಲ್ಲಿ ಪ್ರಧಾನಾಂಶವು ವೃತ್ತಪತ್ರಿಕೆಗಳಿಗೆ ಹೋಗಬೇಕು. ಇಂದು 'ಸರ್ವಜನಾದರಣೀಯವಾದ ಮಲಯಾಳ ಗದ್ಯಶೈಲಿ ಇದು' ಎಂದು ಯಾವುದಕ್ಕೆ ಹೇಳಬಹುದೋ ಅದರ ಸೃಷ್ಟಿಗೆ ವೃತ್ತಪತ್ರಿಕೆಗಳು ಬಹಳ ಸಾಹಸಪಟ್ಟಿವೆ; ಶಬ್ದಸಂಪತ್ತಿಯನ್ನು ಬೆಳೆಸಿವೆ; ಸಾಹಿತ್ಯದಲ್ಲಿ ವಿಮರ್ಶೆಗೊಂದು ಗೌರವಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಮಲಯಾಳಗಲ್ಲಿ ದಿನಪತ್ರಿಕೆಗಳು, ವಾರಪತ್ರಿಕೆಗಳು, ಮಾಸಪತ್ರಿಕೆಗಳು, ಸಚಿತ್ರಪತ್ರಿಕೆಗಳು ಸ್ತ್ರೀಯರಿಗಾಗಿಯೇ, ಹಾಸ್ಯರಸಪೋಷಣೆಗಾಗಿಯೇ, ಹುಟ್ಟಿದ ಪತ್ರಿಕೆಗಳು ಬೇಕಾದಷ್ಟಿವೆ. ಇಷ್ಟು ಜಾಗ್ರತಿಗೆ

ಮಲಯಾಳದೇಶದಲ್ಲಿರುವ ಶಿಕ್ಷಣ ವ್ಯಾಪ್ತಿಯೇ ಕಾರಣ. ಭರತಖಂಡದಲ್ಲೆಲ್ಲ ಸರಾಸರಿ ೧೦೦ಕ್ಕೆ ೭|| ಮಂದಿಗೆ 'ಓನಾಮ' ಬಂದರೆ ಮಲಯಾಳದಲ್ಲಿ ೧೦೦ಕ್ಕೆ ೩೩ ಮಂದಿಗೆ ಓದುಬರಹ ಬರುತ್ತದೆ.

## ಛಂದೋರೂಪ ಪ್ರಯೋಗಗಳು

ಗದ್ಯಶೈಲಿಯಲ್ಲಿ ಧಾರಾಳವಾಗಿ ಪ್ರಯೋಗವಮಾಡಲು ವೃತ್ತಪತ್ರಿಕೆಗಳು ಬಹಳ ಸಹಾಯಮಾಡಿವೆ. ಆದರೆ ಕವಿತೆಯಲ್ಲಿ ಮಾತ್ರ ಸಂಪ್ರದಾಯ ಬಂಧನಗಳು ಬಹಳ ಸಾವಕಾಶವಾಗಿ ಸಡಿಲವಾಗುತ್ತಿವೆ. ಸಡಿಲವಾಗುವ ಸೂಚನೆಗಳು ಕೂಡ ಬಂದದ್ದು ಹತ್ತಿಪ್ಪತ್ತು ವರ್ಷಗಳಿಂದ ಮಾತ್ರ. 'ದ್ವಿತೀಯಾಕ್ಷರಪ್ರಾಸ', 'ಮಣಿಪ್ರವಾಳ' ಗಳ ಸೃಷ್ಟಿಯಲ್ಲೇ ಶಕ್ತಿಸಾಧನೆಗಳೆಷ್ಟೋ ನಷ್ಟವಾಗಿದೆಯಾದರೂ ಹೊಸ ಛಂದಸ್ಸೊಂದಾದರೂ ಹುಟ್ಟಲಿಲ್ಲ. ಛಂದೋರಚನೆಯಲ್ಲಿ ಬದಲಾವಣೆಗಳಾಗಬೇಕಾದರೆ ಜನರ ಚಿತ್ತವೃತ್ತಿಗಳೇ ಮಾರ್ಪಡಬೇಕು; ಯೋಜನಾರಚನೆಯಲ್ಲೇ ಪರಿವರ್ತನಗಳಾಗಬೇಕು. ಅಂತಹ ಪರಿವರ್ತನವಿನ್ನೂ ಆಗಿಲ್ಲವೆಂದು ಕಾಣುತ್ತದೆ. ಎಲ್ಲ ಕಲೆಗಳಂತೆಯೇ ಕವಿತೆಯೂ ಸಹ ಜನತೆಯ ಬುದ್ಧಿಯನ್ನು ಮತ್ತು ಹೃದಯವನ್ನು ಆಕರ್ಷಿಸಬೇಕಾದರೆ ಸಂಗೀತದಿಂದ. ಅದೇ ಪ್ರಧಾನವಾದ ಪ್ರಕೃತಿ. ಗಾನಶೂನ್ಯವಾದುದು ಹೃದಯಕ್ಕೆ ಬೇಕೆನಿಸುವುದಿಲ್ಲ; ಎಲ್ಲರಿಗೂ ಅದರಲ್ಲಿ ಉಪೇಕ್ಷೆಯುಂಟಾಗುತ್ತದೆ. ಪ್ರತಿಭಾಶೂನ್ಯನಾದ ಲೇಖಕನು ಸಂಪ್ರದಾಯ ಶರಣ್ಯನಾಗುವುದೇ ಉತ್ತಮ. ಯೋಜನಾರಚನೆಯಲ್ಲಿ ರಸಪ್ರಧಾನವಾದ ಜಾತಿಯೊಂದು; ಜ್ಞಾನ ಅಥವಾ ಬುದ್ಧಿಪ್ರಧಾನವಾದ ಜಾತಿಯೊಂದು. ಜ್ಞಾನ ಅಥವಾ ಬುದ್ಧಿಯ ಹಿಡಿತದಿಂದ ಅಲ್ಪಕಾಲ ಮುಕ್ತಿಹೊಂದಿ, ರಸಾವೇಶ ಪಡೆದಂತಹ ಜಾತಿಯೊಂದುಂಟಲ್ಲ, ಅದು ರಸವನ್ನು ಮೆಟ್ಟಿ ಪದ್ದಿನಲ್ಲಿರಿಸಿರುವಕಾರಣ ಶುದ್ಧವಾದ ರಸಪ್ರಧಾನದ ಜಾತಿಗೆ ಎಂದಿಗೂ ಸಮನಾಗಲಾರದು. ಇತ್ತೀಚೆಗೆ ಆಂಗ್ಲ ಕವಿತೆಯ ಪ್ರಭಾವವು ಬಲವಾಗಿದೆ. ಆಂಗ್ಲ ಕವಿತೆಯ ಹಲವು ಛಂದೋರೂಪಗಳ ಅನುಕರಣವು ಬಹಳ ರಭಸದಿಂದ ನಡೆಯುತ್ತಿದೆ. ಆದರೆ ಜ್ಞಾನಮಯ ಸಂಗೀತವೂ ಮತ್ತು ರಸಹೃದಯ ಸಂಗೀತವು– ಅಲ್ಲ– ಆತ್ಮದ ಗಾನವೂ ಒಂದೇ ಎಂದು (ಕಣ್ಣುಮುಚ್ಚಿ) ಎಣಿಸುವುದು ಶುದ್ಧತಪ್ಪು. ಭಾವಪ್ರ

ಕಾಶದ ರೀತಿಗಳೇ ಬೇರೆ, ನಿರೂಪಣದ ... ಬೇರೆ. ಛಂದೋರೂಪಗಳಲ್ಲಿ ಪ್ರ... ಆವಶ್ಯಕವಾಗಿ ನಡೆಯಬೇಕಾದ್ದೆ; ... ನಿರೀಕ್ಷಿಸುವ ಆಶೆಗಳನ್ನು ಪೂರೈಸುವ ... ಪ್ರಯೋಗಗಳು ನಡೆಯುವುದು ಸಾಧ... ಅನ್ಯಥಾ ಅಲ್ಲ. ಯೋಜನೆಗಳನ್ನು ... ಸ್ಪಷ್ಟವಾಗಿ, ಕಲಾಪ್ರಪೂರ್ಣವಾಗಿ ... ನಿರೂಪಣಮಾರ್ಗವು ಬಹಳಮಟ್ಟಿಗೆ ... ತ್ತದೆ. ಮಲಬಾರಿನ ಕವಿತಾಪ್ರಪಂಚ... ತ್ತಿರುವವರಲ್ಲಿ ಯಾರೊಬ್ಬರಲ್ಲೂ ಹೊ... ರೂಪಗಳ ಆವಶ್ಯಕತೆಯು ನಿಜವಾಗಿ ... ವೆಂದೂ, ಜನಸಾಮಾನ್ಯಕ್ಕದರ ವಾ... ವೆಂದೂ ನನಗೆ ತೋರುತ್ತದೆ. ಆದಾ... ಯಾಳ ಕವಿತಾಕನ್ಯೆಯು ಪ್ರಾಚೀನ ... ವಿಹರಿಸುವುದು ಮೇಲು.

## ಕುಮಾರನ್ ಆಶ...

ಛಂದೋರೂಪಗಳಲ್ಲಿ ಬದಲಾವಣೆ... ಕಾವ್ಯವಸ್ತುಗಳನ್ನಾರಿಸುವಿಕೆಯಲ್ಲಿ ಮಾ...



ಕುಮಾರನ್ ಆಶನ್

(ಪಂಚಮ ಜಾರ್ಜ್ ಸಾರ್ವಭೌಮರು ... ಭರತಖಂಡಕ್ಕೆ ಬಂದಿದ್ದಾಗ ಈ ಕವಿಗಳಿಗೆ ... ಹಾಕಿ, ಜೋಡುಶಾಲು ಮರ್ಯಾದೆಮಾಡಿ...

ಪ್ರದಾಯವು ಬಹಳ ಪೆಟ್ಟುತಿಂದಿದೆ; ಪೂರ್ವಕಾ ರೂಪಕಾಲಂಕಾರ ವೈಖರಿಗಳೂ, ಉಪಮೋ ಪ್ರೇಕ್ಷೆಗಳೂ ಮೂಲೆಗೆ ಬಿದ್ದವು. ಈ ಹೊಸ ರ್ಗವನ್ನು ಹಿಡಿದು, ವಿಜಯವೈಭವದ ಹಂತವನ್ನೇ ನಂದರೆ ಕುಮಾರನ್‌ಆಶನ್ ಎಂಬ ಕವಿ. ಇವನು ಟ್ಟಿದ್ದಾದರೂ ಎಲ್ಲಿ? ತಿರುವಾಂಕೂರಿನಲ್ಲಿ ಬಹು ಎಂದು ಭಾವಿಸಲ್ಪಟ್ಟಿರುವ ಕುಲದಲ್ಲಿ. ನಿರ್ಭಾಗ್ಯ ನೆಯಲ್ಲಿ ಹುಟ್ಟಿ, ನಿರ್ಗತಿಕನಾಗಿ ಬೆಳೆದನು. ಸೂರು ಸರಕಾರದಲ್ಲಿ ಹಿಂದೆ 'ಸ್ಯಾನಿಟರಿ ಕಮಿಷ ರ್' ಆಗಿ ಕೆಲಸಮಾಡಿದ ಡಾಕ್ಟರ್ ಪಲ್‌ಪುರವರು ನಮೇಲೆ ಕನಿಕರಪಟ್ಟು, ಕಾಪಾಡಿದರು; ವಿದ್ಯಾ ಹೇಳಿಸಿದರು; ಇಂಗ್ಲೀಷು ಸಂಸ್ಕೃತ ಕಲಿಸಿ . ಎಲ್ಲ ವಿಧದಲ್ಲೂ ಜೀವದಾನಮಾಡಿದರೆಂದೇ ಬಹುದು. ಚಿತ್ತಾಕರ್ಷಕ ಸಂಸ್ಕೃತ ಸಾಹಿತ್ಯ ಲ್ಲಿತನಿಗುಂಟಾದ ಅಭಿರುಚಿಯಿಂದ ಇಂಗ್ಲೀಷಿನ ತನು ಹೆಚ್ಚು ಪರಿಶ್ರಮ ಪಡೆಯಲಿಲ್ಲ.

ಕೇರಳದ ಪ್ರಾಚೀನ ಸಾಹಿತ್ಯಸಂಪ್ರದಾಯ ಬದ್ಧ ವಾತಾವರಣದಿಂದ ಮುಕ್ತನಾಗಿ ಈತನು ದೂರ ದ್ದು ಬೆಳೆದನು. 'ಉದುರಿದ ಹೂ' ಎಂಬ ಕವಿ ಆವನ ಪ್ರತಿಭೆಯ ಪ್ರಥಮ ಕುಸುಮ. ಈ ಕವಿ ಲ್ಲಿ ಕವಿಯು ಬಿದ್ದಹೂವೊಂದಕ್ಕಾಗಿನೊಂದು ಸುಯ್ಯುವನು. ಒಂದು ಹೂ ಹುಟ್ಟಿತು-- ಯಿತು, ತನ್ನ ಸೋದರಿಯರೊಂದಿಗೆ ಕೂಡಿ ಮಂದ ರುತನ ಸುಣ್ಣರಕ್ಕನುವಾಗಿ ನೃತ್ಯಮಾಡಿ ನಲಿ . ಪ್ರಫುಲ್ಲಿತವಾಗುತ್ತಲೇ ತನ್ನಿನಿಯ ಷಟ್ಪದ ದಿಗೆ ಕೂಡಿ ಪ್ರೇಮರೆಯಿತು. ಕಡೆಗೆ ನೆಲಕ್ಕುರು ಸಾವಿನ ಗಂಟಲಲ್ಲಿ ಸಿಕ್ಕಿ ಸವೆಯುತ್ತಿರುವ ನಾಗಿ, ಷಟ್ಪದನು ನೊಂದು ಮರ್ಮಚ್ಛೇದಕ ಕಾರದೊಂದಿಗೆ ಗಿರ್ರನೆ ತಿರುತಿರುಗಿ ತಲೆಯನ್ನು ಪ್ಪನೆ ನೆಲಕ್ಕಪ್ಪಳಿಸಿ ಗೋಳಿಟ್ಟನು. ಇದೇ ಆ ಕವಿ ವಸ್ತುವಿಶೇಷ. ದೊಡ್ಡಕರಿಯ ಜೇನುಹುಳು ಕ್ಕರುಳಿದ ಹೂಗಳ ರಾಶಿಯನ್ನು ಮುತ್ತಿ ಮೊರೆ ನ್ನ ಕಣ್ಣಾರ ಕಂಡವರಿಗೆಲ್ಲ ಈ ಸಣ್ಣಕವಿತೆಯ ದರ್ಯರಸಾನುಭವವಾಗುವುದರಲ್ಲೇನೇನೂ ಸಂಶ ಲ್ಲ.

ಈ ಕವಿಯು ಆರ್ನಾಲ್ಡನ 'ಲೈಟ್ ಆಫ್ ಏಷ್ಯಾ', ಮೇರಿ ಮ್ಯಾಗ್‌ಡೇಲನ್', ನಳಿನಿ, ಲೀಲಾ, ಸೀತಾ, ದುರವಸ್ಥೆ ಎಂಬನೇಕ ಕವಿತೆಗಳನ್ನು ಬರೆದನು. 'ದುರವಸ್ಥೆ' ಯೆಂಬ ಕವಿತೆಯು ಪರಮಾದ್ಭುತವಾದುದು. ಮಾಪಿಳ್ಳಾದಂಗೆಯಲ್ಲಿ ಸೌಂದರ್ಯದಧಿದೇವತೆಯಂತಿದ್ದ ನಂಬೂದರಿ ಕುಲಸ್ತ್ರೀಯೊಬ್ಬಳು, ಅನಾಥಳಾಗಿ 'ತ್ವಮೇವ ಶರಣಂ ಮಮ' ಎಂದು ಹೇಳಿ ಪರಚೇರಿಗೆ ಬಂದು, ಗುಡಿಸಲೊಂದರ ಬಳಿ ನಿಲ್ಲುವಳು. ಆ ಪರಯನು ನಂಬೂದರಿ ಕನ್ಯೆಯ ಮಾನಪ್ರಾಣಗಳ ಸಂರಕ್ಷಕನಾದನು. ಆ ಕನ್ಯೆಯ ಜೀವನವನ್ನು ಎಷ್ಟು ಸುಖಮಯವನ್ನಾಗಿ ಮಾಡಲು ಸಾಧ್ಯವೋ ಅಷ್ಟನ್ನೂ ಆ ಪರಯನು ಮಾಡಿದನು; ಆವಳಿಗಾಗಿ ತನ್ನ ಸರ್ವಸುಖ ಸೌಕರ್ಯಗಳನ್ನು ತೊರೆದನು; ಶುಕಪಿಕಕೋಗಿಲೆಗಳನ್ನು ಹಿಡಿದು ತಂದು ಆಕೆಯ ವಿನೋದವಿಲಾಸಕ್ಕೆ ಅಣಿಮಾಡುವನು. ಹೆಚ್ಚೇನು ಆಕೆಯನ್ನು ಸುಖಪಡಿಸಲು ತಾನು ದಾಸನಾಗಿ ದುಡಿದನು. ನಿಷ್ಕಾಮ ಕರ್ಮ ಸಂನ್ಯಾಸಿಯಂತೆ ದುಡಿಯುತ್ತಿದ್ದ ಪರಯನ ಹೃದಯವು ನಿರ್ಮಲ ವಾತ್ಸಲ್ಯಹೃದಯಿಯಾದ ನಂಬೂದರಿ ಕನ್ಯೆಯನ್ನಾಕರ್ಷಿಸಿತು. ಇದೇ ಕಥಾವಸ್ತು.

ವರ್ಣಕಕವಿ ಚಕ್ರವರ್ತಿ ಈ ಕುಮಾರನ್ ಆಶನ್. ಆತನ ರಸಹೃದಯದ ಚಿತ್ರಗಳು ನಮ್ಮ ಕಣ್ಣೆದುರಿಗೆ ಜೀವಕಳೆಯಿಂದ, ಪರಿಪೂರ್ಣ ಅಂಗಾಂಗ ಶೋಭೆಯಿಂದ ನಿಲ್ಲುತ್ತವೆ. ಆತನ ಉಪಮೆಗಳ ಸೌಭಾಗ್ಯವನ್ನು ಮೂಲದಲ್ಲಿಯೇ ಕಂಡಾನಂದಿಸಬೇಕು. ಈತನು ಆಂಗ್ಲಕವಿತೆಗಳಿಂದ ಸ್ಫೂರ್ತಿಹೊಂದಿ ಅನೇಕ ಸಣ್ಣಸಣ್ಣ ಕವಿತೆಗಳನ್ನು ರಚಿಸಿದ್ದಾನೆ; ಗೆಳೆಯರನ್ನು ಕುರಿತು ಬರೆದವಿವೆ; ಅವರ ನೆನಪಿಗಾಗಿ ಬರೆದ ಕವಿತೆಗಳೂ ಇವೆ. ಸ್ಟೀಂಬೋಟ್ (ನೌಕೆ) ನಲ್ಲಿ ಈತನು ಪ್ರಯಾಣಮಾಡುತ್ತಿರುವಾಗ ವಿಪತ್ತುಂಟಾಗಿ ಕುಮಾರನ್ ಆಶನ್‌ಕವಿಯ ಜೀವನಲತೆಯು ಕತ್ತರಿಸಿಬಿತ್ತು. ಇಲ್ಲವಾಗಿದ್ದರೆ ಮಲಯಾಳ ಕವಿತಾಕನ್ಯೆಯ ಕೀರ್ತಿ ವಿಸ್ತಾರಕ್ಕಾತನು ಅಪಾರ ಸೇವೆಮಾಡುತ್ತಿದ್ದನೆಂಬುದಕ್ಕೆ ವಿರೋಧವಾಣಿಯೇ ಇಲ್ಲ. ಆತನ ಪ್ರತಿಭೆಯು ವಿಕಾಸವಾಗುತ್ತ ಬಂದಿದ್ದು, ವೃದ್ಧಿಯಾಗುತ್ತಲಿತ್ತು. ಆದರೆ ಆಕಸ್ಮಿಕ ವಿಷಾದಾಂತ ಜೀವನದಿಂದ ಮಲಯಾಳ ಕವಿತೆಗೆ ಅಪಾರಕೊರತೆಯುಂಟಾಯಿತು.

ಆಶನ್ ಕವಿಯಂತೆಯೇ ಕೀರ್ತಿಯನ್ನು ಗಳಿಸಿದ ಮತ್ತು ವಿಶೇಷ ಪ್ರಮಾಣದಲ್ಲಿ ಬರೆದ ಕವಿಯೆಂದರೆ ವಲ್ಲತ್ತೋಳ್. ನಮ್ಮ ಅದೃಷ್ಟದಿಂದ ಆತನು ಜೀವಂ

ತನಾಗಿದ್ದು ಪ್ರತಿಕ್ಷಣವೂ ಮಲಯಾಳದ ಆತ್ಮವನ್ನೇ ಳಿಸುತ್ತಿದ್ದಾನೆ. ಭಾರತರಾಷ್ಟ್ರೀಯತೆಯು ವಲ್ಲತ್ತೋಳನ ಹೃದಯವನ್ನಾಕರ್ಷಿಸಿತು; ಅವನಿಗದೇ ಸ್ಫೂರ್ತಿಯ ಪರವಸ್ತುವಾಯಿತು. ರಾಷ್ಟ್ರಗೀತೆಗಳು ನೂರಾರು ಹಾಡಿ ಮಲಯಾಳ ಹೃದಯಾಂತರಾಳವನ್ನೇ ಅಳತೆಮಾಡಿ ಬಿಟ್ಟಿದ್ದಾನೆ. ಸ್ವದೇಶಿ, ಖಾದಿ, ಸ್ವರಾಜ್ಯಗಳ ಮೇಲೆಲ್ಲ ಕವಿತೆಗಳನ್ನು ಕಟ್ಟಿದ್ದಾನೆ.

## ಕೊನೆಯಮಾತು

ಕೊಚಿನ್, ತಿರುವಾಂಕೂರು, ಮಲಬಾರಿನ ಅನೇಕ ಕವಿಗಳ ಮತ್ತು ಗದ್ಯಲೇಖಕರ ಹೆಸರುಗಳಿಲ್ಲಿ ಬಿಟ್ಟು ಹೋಗಿವೆ. ಇಲ್ಲಿನ ಅವಕಾಶದಲ್ಲಿ ವಿಪುಲವಾಗಿ ಆಯಾ ಕವಿಗಳೆಲ್ಲರ ಗ್ರಂಥಗಳ ವಿಮರ್ಶೆಮಾಡಲು ಸಾಧ್ಯವೇ ಇಲ್ಲ. ಸ್ತ್ರೀಪುರುಷರನೇಕರು ಬರೆಯುತ್ತಿರುವುದು ನಿಜ. ಆದರೆ ಮೇಲೆ ಸೂಚಿಸಿದ ಕವಿಗಣದೊಂದಿಗೆ ಇವರಾರೂ ಸರಿತೂಗಲಾರರು. ಆದರೆ ಸಾಹಿತ್ಯದಲ್ಲಿವರಿಗೆ ಒಂದು ಸ್ಥಾನವಿದೆ. ಜನತೆಯಲ್ಲಿ ಕವಿಜೀವನಕ್ಕೆ ಚ್ಯುತಿಬಾರದಂತೆ ಇವರು ಸೇವೆಮಾಡುತ್ತ ಬಂದಿದ್ದಾರೆ. ವ್ಯಕ್ತಿಗಳಲ್ಲಿ ಆಶೆಯನ್ನು, ಸಾಹಸೇಚ್ಛೆಯನ್ನು ಹುಟ್ಟಿಸಿ, ಪ್ರೋ... ಬರುತ್ತಿದ್ದಾರೆ. ಪ್ರತಿಭಾಶಾಲಿಗಳ ಬರು... ರೆಲ್ಲ ಶ್ರಮಿಸುತ್ತಿದ್ದಾರೆ; ಪ್ರತಿಭಾಶಾ... ಉಚಿತ ಪರಿಸ್ಥಿತಿಯನ್ನು ಕಲ್ಪಿಸುವ ಕ್ಷೇ... ಲಿಗಳಾಗಿ ಕೆಲಸಮಾಡುತ್ತಿದ್ದಾರೆ. ... ರಣವಾಗಿ ಸ್ವತಂತ್ರವಾದಿಗಳು; ಪ್ರೋ... ರಲ್ಲ; ಸಾಹಸಿಗಳು. ಇಂತಹ ಸಾಹಿತ್ಯ... ಖ್ಯೆಯು ಹೆಚ್ಚಿ, ಪ್ರಯೋಗಕ್ಷೇತ್ರವು... ಜನತೆಯಲ್ಲಿ ಸಾಹಿತ್ಯಾಭಿರುಚಿಯು ಹೆ... ಸಾಹಿತ್ಯವ್ಯವಸಾಯವು ಚುರುಕಾ... ದೆಂದೂ ಹಾರೈಸಲಾಗಿದೆ. ಈ ಬಗೆಯ... ಜೀವನವು 'ಅನ್ಯವಿಂದ್ರಂ ಕರಿಷ್ಯಾಮಿ'... ಕನಂತೆ ಪ್ರತಿಭಾಶಾಲಿಗಳು ಜನ್ಮಧಾ... ಹಿಂದಿನ ಮತ್ತು ಇಂದಿನ ಮಾರ್ಗಗ... ಸ್ಯವನ್ನುಂಟುಮಾಡುವರೆಂದೂ, ಹೊ... ಹಾಕಿ ವೈಭವಯುಗದ ಎಝುತ್ತಚ್ಛ... ನಂಬಿಯಾರ್, ಕುಮಾರನ್ ಆಶನ್... ಕುಲ ಸಂತಾನದ ಆಗಮನಕ್ಕೆ ಆ... ರೆಂದೂ ಹಾರೈಸೋಣ.

# ಮರಾಠಿ ವಾಙ್ಮಯ ಪರಿಚಯ

(ಶ್ರೀ. ರಾ. ಗೋ. ಭಿಡೆ. ಉಪಸಂಪಾದಕ, 'ಕೇಸರೀ' ಪುಣೆ)

## ಪ್ರವೇಶ

ರಾಷ್ಟ್ರದ ವಾಙ್ಮಯ ನಿರ್ಮಿತಿಯೇ ಆ ರಾಷ್ಟ್ರದ ಉತ್ಕರ್ಷಾಪಕರ್ಷದ, ಯಶೋಮಾನದ ನಿಜವಾದ ...ನ. ಮನುಷ್ಯನ ಚಾರಿತ್ರ್ಯವನ್ನು ಅವನಿಗೆ ಸಂ...ಸಪಟ್ಟವರ ಚಾರಿತ್ರ್ಯದಿಂದ ಹೇಗೆ ಅನುಮಾನಿಸ...ದೋ ಹಾಗೆಯೇ ರಾಷ್ಟ್ರದ ಚಾರಿತ್ರ್ಯಸ್ಥಿತಿಯನ್ನು ...ಮ ವಾಙ್ಮಯದಿಂದ ಊಹಿಸಬಹುದು ರಾಷ್ಟ್ರದ ... ತೇಜಸ್ಸು ಮತ್ತು ಅದರ ಉತ್ಕರ್ಷೇಚ್ಛೆಯ ...ರ್ಥಜ್ಞಾನಕ್ಕೆ ಆ ರಾಷ್ಟ್ರದ ವಾಙ್ಮಯವೇ ...ಯೋಗ್ಯಸಾಧನವೆನ್ನಬಹುದು. ರಾಷ್ಟ್ರದ ಶಕ್ತಿ ...ರ್ಶನವೇ ವಾಙ್ಮಯದ ಮುಖ್ಯ ಮತ್ತು ಮಹತ್ವದ ...ವಾಗಿರುತ್ತದೆ ಆದ್ದರಿಂದಲೇ ಯಾವ ಗ್ರಂಥ...ದ ನೈತಿಕ ಸತ್ಯ ಮತ್ತು ಮಾನವೀಯ ಮನೋ...ರಗಳಿಗೆ ಒಂದು ರೀತಿಯ ವಿಶಾಲತೆ, ವಿಚಾರ...ತೆ ಮತ್ತು ಸೌಂದರ್ಯವುಂಟಾಗುವುದೋ ಅಂ... ಗ್ರಂಥಗಳ ಏಕೀಭಾವವು ವಾಙ್ಮಯಸೊಳಗಾಗು...ನೆಂಬದಾಗಿ ಮಾರ್ಲೆಯವರು ವಾಙ್ಮಯದ ವ್ಯುತ್ಪ...ಡುತ್ತಾರೆ.

ವ್ಯುತ್ಪತ್ತಿವಾದಕ್ಕನುಸಾರವಾಗಿ ನಾವು ಮರಾಠೀ...ತ್ಯ ಭಂಡಾರದ ಕಡೆನೋಡಿದರೆ ಇಂದು ಮರಾಠೀ...ತ್ಯದಲ್ಲಾಗಿರುವ ಉತ್ಕರ್ಷದ ಅಭಿವೃದ್ಧಿಯು ... ಅರ್ಧ ಶತಮಾನದಲ್ಲಿಯೇ ಆಗಿರುತ್ತದೆಂದು ... ಬರುತ್ತದೆ. ಮರಾಠೀ ಸಾಹಿತ್ಯಕ್ಕೆ ಪ್ರಾಪ್ತ...ುವ ಇಂದಿನ ಸುಸಂಬದ್ಧಸ್ವರೂಪಕ್ಕಾಗಿ ಅನೇಕ...ರಾದ ಸಾಹಿತ್ಯ ಶಿಲ್ಪಿಗಳು ತಮ್ಮ ಜೀವಮಾನ... ಅರ್ಪಿಸಿರುತ್ತಾರೆಂಬುದನ್ನು ಇಲ್ಲಿ ಗಮನದಲ್ಲಿಡ... ನಾವೀಗ ಮರಾಠೀಭಾಷೆಯ ವರ್ತಮಾನ...ಸನ್ನು ವಿಚಾರಿಸುವ ಮೊದಲು ಗತಸಾಹಿತ್ಯದ ...ವಲೋಕನ ಮಾಡುವುದು ಉಚಿತವಾಗಿದೆ.

## ಮೊದಲಿಗರು

ಮರಾಠಿ ಭಾಷೆಯಲ್ಲಿ ಲೇಖನ ಪ್ರಾರಂಭವಾದುದೆಂದು? ಈ ವಿಚಾರವಾಗಿ ವಿಮರ್ಶೆಮಾಡುತ್ತಾ ಸುಪ್ರಸಿದ್ಧ ಇತಿಹಾಸ ಸಂಶೋಧಕರಾದ ಕೈಲಾಸವಾಸಿ ಪಿ. ಲ. ಭಾವೆಯವರು ತಮ್ಮ 'ಮಹಾರಾಷ್ಟ್ರ ಸಾರಸ್ವತ'ವೆಂಬ ಗ್ರಂಥದಲ್ಲಿ ಇದರ ಮಾನವನ್ನು ಸುಪ್ರಸಿದ್ಧ ಜ್ಯೋತಿಷ್ಯಾಚಾರ್ಯರಾದ ಭಾಸ್ಕರಾಚಾರ್ಯರ ಪೌತ್ರ ಚಾಂಗದೇವ ಎಂಬವರಿಗೆ ಸಲ್ಲಿಸಿರುತ್ತಾರೆ. ಇದಲ್ಲದೆ ಜ್ಯೋತಿಷಿಗಳ ಪೈಕಿ ಶ್ರೀಪತಿ ಮತ್ತು ಬ್ರಹ್ಮದೇವ ಇವರ ಕೆಲವು ಗ್ರಂಥಗಳೂ ಇವೆ. ಶ್ರೀಪತಿಯು ಸರಿ ಸುಮಾರು ಕ್ರಿ. ಶ. ೧೦೫೦ರಲ್ಲಿ ಇದ್ದನೆಂದು ಹೇಳಬಹುದು. ಇವನು 'ರತ್ನಮಾಲಾ' ಎಂಬ ಗ್ರಂಥಕ್ಕೆ ಮರಾಠಿಯಲ್ಲಿ ಟೀಕೆ ಬರೆದನು. ಇವನ ಅನಂತರ ಮುಕುಂದರಾಜ, ಜ್ಞಾನೇಶ್ವರ, ಹೇಮಾದ್ರಿ ಮುಂತಾದವರು ಸಾಹಿತ್ಯಸೇವಕರಾಗಿ ಹೋದರು. ಆವೇಳೆ ನಾಮದೇವ, ಏಕನಾಥರ ಕಾಲವು ಉದಯವಾಯಿತು. ಇವರ ಕಾಲವಾಗುತ್ತಲೆ ಮುಕ್ತೇಶ್ವರ, ತುಕಾರಾಮ, ರಾಮದಾಸ, ವಾಮನಾದಿ ಗ್ರಂಥಕರ್ತರು ಹುಟ್ಟಿದರು. ಮತ್ತು ಶ್ರೀಧರ ಮುಂತಾದ ಕವಿಗಳೂ, ಪೇಶವಾಯಿ ಕೊನೆಯ ಮೋರೋಪಂತರೂ ಉಲ್ಲೇಖನೀಯರಾಗಿದ್ದಾರೆ.

## ಪ್ರಾಚೀನ ವಾಙ್ಮಯ ವೈಶಿಷ್ಟ್ಯ.

ಮುಕುಂದರಾಜನನ್ನು ಮೊದಲುಗೊಂಡು ಮೋರೋಪಂತರತನಕ ಎಲ್ಲಾ ಗ್ರಂಥಗಳನ್ನೂ ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಎಲ್ಲ ಲೇಖಕರ ದೃಷ್ಟಿಕೋಣವು 'ಧಾರ್ಮಿಕ' ವಿಚಾರಗಳ ಕಡೆಗಿತ್ತೆಂಬುದು ಗೊತ್ತಾಗುತ್ತದೆ.

ಶ್ರೀಮದ್ಭಾಗವತ 'ಓವೀ ಅನುವಾದ'ವು ಮರಾಠಿಗೆ ಆಯಿತು. ಓವೀಗೀತೆಯು ವಿರಚಿತವಾಯಿತು.

ಅಷ್ಟು ಮಾತ್ರವಲ್ಲ ಮಹಾಭಾರತ, ಶ್ರೀಮದ್ರಾಮಾಯಣಗಳು ಅನುವಾದಿತವಾದುವು. ಮತ್ತು ಇಲ್ಲಿಯ ತನಕ ಸಂಸ್ಕೃತದಲ್ಲಿಯೇ ಅಡಗಿದ್ದ ಈ ಗ್ರಂಥಭಂಡಾರವು ಮರಾಠಿಗೂ ಪರಿವರ್ತಿತವಾಗಿ ಸಾಮಾನ್ಯ ಜನತೆಗೆ ಬಹಳ ಉಪಕಾರವಾದಂತಾಯಿತು. ತುಕಾರಾಮ, ವಾಮನ, ಮೋರೋಪಂತ ಮೊದಲಾದ ಕವಿರತ್ನಗಳಾದರೋ ತಮ್ಮ ರಸವತ್ತಾದ ವಾಣಿಯಿಂದಲೂ, ಪ್ರಾಸಾದಿಕ ಭಾಷೆಯಿಂದಲೂ ಮರಾಠಿಯ ಮಹತ್ವವನ್ನು ಲೋಕಕ್ಕೆ ತೋರಿದರೆಂಬುದರಲ್ಲಿ ಸಂದೇಹವೇ ಇಲ್ಲ.

## ಶ್ರೀ ಸಮರ್ಥರ ಅಪೂರ್ವಕಾರ್ಯ

ಶ್ರೀಸಮರ್ಥ ರಾಮದಾಸರು ತಮ್ಮ ವಾಙ್ಮಯಕ್ಕೆ ಮೊದಲಿಗಿಂತ ಕೊಂಚ ಭಿನ್ನವಾದ ರೂಪವನ್ನು ಕೊಟ್ಟರು. ಇದು ಸರ್ವಥಾ ಇಷ್ಟವೂ, ಶ್ರೇಯಸ್ಕರವೂ ಆಗಿತ್ತು. ರಾಷ್ಟ್ರದ ಉನ್ನತಿಗೆ ರಾಜಕೀಯ ಉನ್ನತಿಯಾದರೇನೇ ಸಾಲದು. ರಾಷ್ಟ್ರದ ಸರ್ವಾಂಗೀಣ ಉನ್ನತಿಗೆ ರಾಜಕೀಯ ಉನ್ನತಿಯಷ್ಟೇ ಇತರ ಅಂಗಗಳ ವಿಕಾಸವಾಗುವುದೂ ಅಗತ್ಯವಾಗಿದೆ ಎಂಬುದು ನಿಜ. ಆದರೆ ಈ ಸರ್ವಾಂಗೀಣ ಉನ್ನತಿಯಾಗಲು ಸಮಾಜಕ್ಕೆ ಯಾವ ಸ್ವಾಸ್ಥ್ಯವು ಅಪೇಕ್ಷಿತವಾಗಿರುತ್ತದೆಯೋ ಆ ಸ್ವಾಸ್ಥ್ಯಲಾಭವು ರಾಜಕೀಯ ಉನ್ನತಿಯಾಗದೆ ಆಗುವಹಾಗಿಲ್ಲವೆಂಬ ಗುಟ್ಟನ್ನು ಶ್ರೀ ಸಮರ್ಥರು ತಿಳಿದಿದ್ದರು. ಮತ್ತು ತದನುಸಾರವಾಗಿಯೇ ತಮ್ಮ ವಾಙ್ಮಯ ನಿರ್ಮಿತಿಯ ನಿರ್ಧಾರವನ್ನು ಮಾಡಿದರು. ಆಸಮಯದಲ್ಲಿ ಮಹಾರಾಷ್ಟ್ರವು ದಾಸ್ಯಬದ್ಧವಾಗಿತ್ತು. ಆದರ ಅವನತಿಯು ಸರ್ವಾಂಗಗಳಲ್ಲಿಯೂ ಆಗಿತ್ತು. ಆ ದಾಸ್ಯಬಂಧನದಿಂದ ಮಹಾರಾಷ್ಟ್ರವನ್ನು ಹೊರತೆಗೆದು ಸ್ವತಂತ್ರವನ್ನಾಗಿ ಮಾಡಬೇಕಾಗಿತ್ತು. ಮತ್ತು ಆ ಕೆಲಸವನ್ನು ಮಾಡುವುದರಲ್ಲಿ ಶ್ರೀ ಸಮರ್ಥರು ಸಮರ್ಥರಾದರು! ಅಷ್ಟೇ ಅಲ್ಲ; ಯಾವ ರಾಷ್ಟ್ರಕ್ಕಾದರೂ ಆಪತ್ತು ಬಂದರೆ ಅದನ್ನು ನಿವಾರಿಸಿ, ದೂರಗೊಳಿಸಿ, ರಾಷ್ಟ್ರಕ್ಕೆ ನವಜೀವನ ಸಂಜೀವಿನಿಯನ್ನೆರೆಯುವ ಸಾಮರ್ಥ್ಯವು ಶ್ರೀ ಸಮರ್ಥರ 'ದಾಸಬೋಧೆ' ಯಲ್ಲಿ ಇಂದಿಗೂ ಇದೆ. ಆದರೆ ನೋಡುವುದು ಮಾತ್ರ ನಮ್ಮ ಅಧೀನ. ಶ್ರೀ ಸಮರ್ಥರ ಕೈಲಾಸಯಾತ್ರೆಯ ಸಮಯವು ಉಪಸ್ಥಿತವಾದಾಗ ಅವರ ಭಕ್ತರೆಲ್ಲರಿಗೆ ಬಹಳ ದುಃಖವಾಯಿತು. ಆಗ ಶ್ರೀ ಸಮರ್ಥರು ಅವರಿಗೆ ಹೀಗೆ ಬೋಧಿಸಿದರು:-

ಭಕ್ತಜನರೆ!

"ನನ್ನ ಶರೀರ ಮತ್ತು ವಾಣಿಯು ಮನಸ್ಸಿನಿಂದ ತೆನ್ನಬಹುದು. ಆದರೂ ನಾನು ಈ ಜಗತ್ತಿನಲ್ಲಿ ಗಲೂ ಜೀವಿಸುತ್ತಿದ್ದೇನೆ. ಆತ್ಮಾರಾಮ, ದಾಸಬೋಧೆ ಎಂಬ (ಗ್ರಂಥಗಳು) ನೈಸರ್ಗಿಕ ಸ್ವರೂಪದಲ್ಲಿ ವಾಗ ದುಃಖಪಡಲಿಕ್ಕೆ ಕಾರಣವಿಲ್ಲ."

ಮತ್ತು ಶ್ರೀ ಸಮರ್ಥರು ಜೀವಂತ ಪ್ರವಾಹದಂತೆ ತಮ್ಮ ಕುಶಲಸಂಘಟನ ಚಾತುರ್ಯದಿಂದ ಮತ್ತು ಓಜಸ್ವೀವಾಣಿಯಿಂದ ಮಹಾರಾಷ್ಟ್ರದಲ್ಲಿ ಎಂತಹ ಜಾಗೃತಿಯನ್ನುಂಟುಮಾಡಿದರೆಂಬುದು ಸ್ವರಾಜ್ಯಸ್ಥಾಪನೆಯಿಂದ ಸಿದ್ಧವಾಗಿರುತ್ತದೆ.

## ಸ್ವರಾಜ್ಯ ವಾಙ್ಮಯ

ಸ್ವರಾಜ್ಯ ಕಾಲದಲ್ಲಿ ಉಕ್ತಕವಿಗಳ ಗ್ರಂಥರಚನೆಯೆನ್ನಬಹುದಾದ ಕಾರ್ಯವು ಅದು 'ಬಖರೀ' ಗಳ ಮೂಲಕ ಆಗಿದೆ. ಮರಾಠಿಯಲ್ಲಿ ಸಂಗೀತ ಕಾವ್ಯದ ಸ್ಥಾನವು ದಾಗಿದೆ. ಈ ಸಂಗೀತ ಕಾವ್ಯಪ್ರಾರಂಭವು ಶಿವಾಜಿಮಹಾರಾಜರ ಕಾಲದಿಂದ ಪೇಶವಾಯಿಯತನಕ ಆಯಿತು. ಮರಾಠಾ ಇತಿಹಾಸದ ಓಜಸ್ವಿ ಮತ್ತು ವೀರರಸಪ್ರಧಾನ ಪ್ರಸಂಗಗಳು ರಚಿಸಿದ ಲಾವಣಿಗಳು (ಪೋವಾಡೆ) ಭಾವನೋದ್ದೀಪನಗಳಾಗಿವೆ. ಇಂದಿನ ಸಮಯದಲ್ಲೂ ಸಹ ಅಂತಃಕರಣಗಳು ಉದ್ದೀಪ್ತವಾಗದಿರುವುದಿಲ್ಲ. ಈ 'ಬಖರೀ' ಮತ್ತು ಲಾವಣಿಗಳ ಮಹತ್ವವು ಎಂದಿನತನಕ ರಾಷ್ಟ್ರವು ಸ್ವಾತಂತ್ರ್ಯವನ್ನುಣ್ಣುತ್ತಿತ್ತೋ ಅಂದಿನತನಕ ಇತ್ತು. ಸ್ವಾತಂತ್ರ್ಯದಲ್ಲಿ ಯಾರು ಯಾರ ಲಾವಣಿಗಳನ್ನು ಹಾಡುವುದು? ಮತ್ತು ಯಾವುದರ 'ಬಖರೀ' ಬರೆಯತಕ್ಕದ್ದು?

## ಬ್ರಿಟಿಷ್ ಆಳ್ವಿಕೆಯಲ್ಲಿ

ಲೇಖಕನಿಗಿರುವ ಸ್ಥಳಮರ್ಯಾದೆಯನ್ನು ಮೀರಿ ಪ್ರಾಚೀನ ವಾಙ್ಮಯೇತಿಹಾಸವನ್ನು ಸ್ಥೂಲಮಾನದಲ್ಲಿ ಮಾಡುವುದು

...ಟಿಷ್ ಆಳ್ವಿಕೆಯವರೆಗೆ ಸಂಕ್ಷಿಪ್ತವಾಗಿ ಹೇಳಿದ್ದಾ...ತು. ಈ ಮೇಲಿನ ಕಾಲದಲ್ಲಿ ಯಾವ ಪ್ರಮಾಣ...ದ ವಾಙ್ಮಯ ನಿರ್ಮಾಣವಾಗಬೇಕೋ ಅದು ಇಂ...ನವರೆಗೂ ಆಗಿಲ್ಲವೆಂಬುದು ಸರ್ವಸಮ್ಮತವಾದ ವಿಷ...ವಾಗಿದೆ. ಆದರೆ ಬ್ರಿಟಿಷ್ ರಾಜ್ಯಕಾಲದಲ್ಲಿ ವಾಙ್ಮ...ಕ್ಷೇತ್ರದ ವಿಕಾಸವುಂಟಾಯಿತು. ಮತ್ತು ಅದು ...ದರೂಪಗಳಿಂದಾಯಿತೆಂಬುದೂ ಒಪ್ಪತಕಮಾತು.

ಪಾಶ್ಚಾತ್ಯ ಸಂಸರ್ಗವಾಗುವ ಮೊದಲು ವಾಙ್ಮಯ ಪ್ರವಾಹವು ಒಂದು ವಿಶಿಷ್ಟ ದಿಕ್ಕಿನಲ್ಲಿಯೇ ಪ್ರವಹಿಸು...ತ್ತು. ಆದರೆ, ಈ ಕಾಲದಲ್ಲಿ ಅದು ವಿಸ್ತೃತವಾಗಿ ...ಙ್ಮಯಕ್ಷೇತ್ರವು ಸರ್ವತೋಮುಖವಾಗಿ ರಂಜಿತವಾ...ಯಿತು ಮತ್ತು ವಾಙ್ಮಯವಾಹಿನಿಯು ನಾನಾ ದಿಕ್ಕು...ಲ್ಲಿ ಹೊರಟಿತು ಆದರೊಂದಿಗೆ ಭಾಷೆಯ ಮಾಧು...ವೃದ್ಧಿಯೂ ಆಗ ತೊಡಗಿತು.

## ವಿಷ್ಣುಶಾಸ್ತ್ರಿ ಚಿಪಳೂಣಕರ್

...ಅರ್ವಾಚೀನ ಮರಾಠಿ ವಾಙ್ಮಯಕ್ಕೆ ಪ್ರಾಪ್ತ...ಗಿರುವ ಇಂದಿನ ಸ್ವರೂಪಕ್ಕೆ ಹಲವು ಮಹನೀ...ಯರು ಕಾರಣರಾದರು. ಅವರಲ್ಲಿ ಕೈಲಾಸವಾಸಿ ...ಷ್ಣುಶಾಸ್ತ್ರಿ ಚಿಪಳೂಣಕರರ ಸ್ಥಾನವು ಮಹತ್ವ...ಗಿದೆ. 'ಮರಾಠಿಯ ಶಿವಾಜಿ' ಎಂಬ ಬಿರುದು ...ಷ್ಣುಶಾಸ್ತ್ರಿಗಳಿಗೆ ಸಲ್ಲುತ್ತದೆ! ವಿಷ್ಣುಶಾಸ್ತ್ರಿಗಳ ...ಬಂಧ ಮಾಲೆ' ಗೆ ಮೊದಲು ಮರಾಠಿ ಗ್ರಂಥ...ಖನಕ್ಕೆ ಮೊದಲಾಗಿರಲಿಲ್ಲವೆಂದಲ್ಲ. ಕೃಷ್ಣ...ಸ್ತ್ರಿ ಚಿಪಳೂಣಕರ, ಪರಶುರಾಮ ಪಂತಗೋಡ...ಬೋಲೆ ಮೊದಲಾದವರ ಗ್ರಂಥಗಳ ಉದಯವಾಗಿತ್ತು. ...ಗೆಯೇ ೧೮೪೦ ರ ಆಂದಾಜಿನಲ್ಲಿ ಮರಾಠಿಯಲ್ಲಿ ...ತ್ತಪತ್ರಿಕೆಗಳೂ ಮೊದಲಾದುವು. ಆದರಲ್ಲಿ 'ಜ್ಞಾನ ...ಕಾಶ' ಎಂದು ದೈನಿಕನಾಗಿ ನಮಗೆ ಕಾಣಸಿಗುತ್ತ... ಆದರೆ ವಿಷ್ಣುಶಾಸ್ತ್ರಿಗಳ ಮೊದಲು ಆದ ಪ್ರಯ...ಗಳು ಸಮರ್ಪಕವಾಗಿರಲಿಲ್ಲ. ಆದರೆ ಶಾಸ್ತ್ರಿಗಳು ...ಖನ ಕಲೆಯಲ್ಲಿ ಯೋಗ್ಯವಾಗಿ ಕಂಡ ಅನುಕರಣ...ನ್ನು ಮಾಡಿದರು. ಮತ್ತು ಲೋಕಜಾಗೃತಿಯ ...ಸದಲ್ಲಿ ತಮ್ಮ ಲೇಖನಿಯನ್ನು ಪ್ರವರ್ತಿಸಿದರು. ...ಕಾರಣವೇ ಶಾಸ್ತ್ರಿಗಳ 'ನಿಬಂಧ ಮಾಲೆ' ಯು ...ದಿಗೂ ಮನೋಹರ ಮತ್ತು ಸುಗಂಧಯುಕ್ತವಾ...ಗಿ...

## ಮರಾಠಿ ನಾಟಕ

ವಾಙ್ಮಯ ರಾಜ್ಯದಲ್ಲಿ ನೋಡಿದರೆ ನಾಟಕ, ಕಾದಂಬರಿ, ಕಾವ್ಯ, ರಾಜಕಾರಣ ಸಾಹಿತ್ಯ, ಮತ್ತು ವೃತ್ತಪತ್ರ ಮಾಸಪತ್ರಿಕೆಗಳು ಇವೆಲ್ಲ ಕಾಣಬರು ತ್ತವೆ. ಮತ್ತು ಮರಾಠಿ ವಾಙ್ಮಯ ಸ್ಥಾನವು ಇವು ಗಳಲ್ಲೆಲ್ಲ ಎಲ್ಲಿದೆಯೆಂಬುದನ್ನು ನೋಡಬೇಕು. ಮರಾಠಿಯಲ್ಲಿ ನೂತನ ನಾಟಕ ಲೇಖನದ ಆದ್ಯ ಪ್ರವರ್ತಕರು ಪರಶುರಾಮ ಪಂತ ಗೋಡಬೋಲೆ. ಆದರೆ ಅವರ ನಾಟಕಗಳೆಲ್ಲ ಸಂಸ್ಕೃತ ನಾಟಕಗಳ ಅನುವಾದಗಳು. ಕೈಲಾಸವಾಸಿ ಅಣ್ಣಾಸಾಹೇಬ ಕಿರ್ಲೋಸ್ಕರ ಇವರು ಗೋಡಬೋಲೆಯವರಿಗಿಂತ ಹೆಚ್ಚಿನ ಪ್ರಗತಿ ಹೊಂದಿದರೆನ್ನಬಹುದು. ಆದರೆ ಸ್ವತಂತ್ರ ನಾಟಕ ರಚನಾಕಾರರಲ್ಲಿ ಶ್ರೀ ಖಾಡಿಲ ಕರ್ ಮತ್ತು ಶ್ರೀ ಕೋಲ್ಹಟಕರರೇ ಮುಖ್ಯರು. ಇವರು ಮರಾಠಿ ರಂಗಭೂಮಿಯ ಸ್ವರೂಪವನ್ನೇ ಪರಿವರ್ತಿಸಿದರು. ಇವರನ್ನು ಅರ್ವಾಚೀನ ನಾಟಕ ಸೃಷ್ಟಿಯ ಜನಕರೆನ್ನಬಹುದು. ಕೈಲಾಸವಾಸಿ ಗಡ ಕರೀಯವರು ಪ್ರತಿಭಾಸಂಪನ್ನ ನಾಟಕಕಾರರಾಗಿದ್ದರು. ಮತ್ತು ಇತ್ತೀಚಿಗೆ ಕೆಲವು ನಾಟಕ ಕರ್ತೃಗಳು ತಲೆ ಯೆತ್ತಿ ಪ್ರಕಾಶಕ್ಕೆ ಬಂದಿದ್ದಾರೆ ಆದರೆ ಖಾಡಿಲ್‌ಕರ್ ಮತ್ತು ಕೋಲ್ಹಟಕರರ ಸ್ಪರ್ಧೆಗೆ ನಿಲ್ಲುವವರು ಇಲ್ಲ ವೆಂದೇ ಹೇಳಬಹುದು. ನಾಟಕ ಪ್ರಾಂಗಣದಲ್ಲಿ ಒಂದೇಸವನೆ ನಡೆಯುತ್ತಿರುವ ಉನ್ನತಿ ಪ್ರಯತ್ನವು ಸಂತೋಷಜನಕವಾದುದಾಗಿದೆ.

## ಕಾದಂಬರಿ

ಕಾದಂಬರಿ ಲೇಖನ ಪ್ರಾರಂಭವು ಸುಮಾರು ೪೦-೫೦ ವರ್ಷಗಳ ಹಿಂದಾಯಿತು. ಪ್ರಾರಂಭಕಾಲದ ಉಲ್ಲೇ ಖನೀಯ ಕಾದಂಬರಿಕಾರರಲ್ಲಿ ಕೈಲಾಸವಾಸಿ ಶಂಕರ ಮೋರೋ ರಾನಡೆಯವರೊಬ್ಬರೆ ಆದರೆ ಅವರ ಕಾದಂ ಬರಿಗಳು ಹೆಚ್ಚಾಗಿ ಅನುವಾದಗಳು. ರೂಪಾಂತರದ ಮಾಧುರ್ಯವನ್ನೆಷ್ಟೆಂದು ಹೇಳೋಣ. ಪರಭಾಷಾ ಕನ್ನೆಗೆ ಸ್ವಭಾಷಾ ವೇಷವನ್ನು ಹಾಕುತ್ತಲೇ ಸ್ವಕೀ ಯಳಲ್ಲವೆಂದು ಹೇಳುವ ಧೈರ್ಯವು ಯಾರಿಗೂ ಉಂ ಟಾಗದು. ಸ್ವತಂತ್ರ ಪ್ರತಿಭಾವಂತ ಕಾದಂಬರಿಕಾರ ರಂದರೆ ಕೈಲಾಸವಾಸಿ ಹರಿನಾರಾಯಣ ಆಪಟೆಯವರೊ ಬ್ಬರೆ. ಇವರ ಹೆಸರು ಮರಾಠಿ ವಾಙ್ಮಯದಲ್ಲಿ ಎಂ

ದಿಗೂ ಆಳಿಸಲಾರದಂತಹುದು. ಅವರ ರಾಜಕೀಯ ಸಾಮಾಜಿಕ ಕಾದಂಬರಿಗಳೆಲ್ಲವೂ ಮರಾಠಿಯಲ್ಲಿ ಲೋಕಪ್ರಿಯಗಳಾಗಿವೆ. ಮತ್ತೆ ಇವರ ಕಾದಂಬರಿಗಳಲ್ಲಿ ಕೆಲವು ಹಿಂದಿ, ಗುಜರಾತಿ, ಕನ್ನಡಭಾಷೆಗಳಿಗೆ ಅನುವಾದವಾಗಿದೆ. ಆಪಟೆಯವರ ಶೈಲಿಯಾದರೋ ಸರ್ವಾಂಗಗಳಲ್ಲೂ ಅನುಪಮವಾದುದೆಂದು ಪ್ರಸಿದ್ಧಿಯಿದೆ. ಕೈಲಾಸವಾಸಿ ಆಪಟೆಯವರ ಅನಂತರ ಅವರ ಸ್ಥಾನವನ್ನಲಂಕರಿಸತಕ್ಕವರು ಹುಟ್ಟಲಿಲ್ಲವಾದರೂ ಅನೇಕ ಕಾದಂಬರಿಕಾರರು ಕಾಣಬರುತ್ತಿದ್ದಾರೆ. ಮತ್ತು ಈ ಕ್ಷೇತ್ರದ ಪ್ರಸಿದ್ಧಿಯು ಸ್ಥಿರವಾಗಿದ್ದು ಶಾಶ್ವತವಾಗಿ ಉಳಿಯಬಹುದೆಂಬ ಸಂಪೂರ್ಣ ವಿಶ್ವಾಸವಿದೆ. ಪ್ರೊ. ವಾ. ಮ. ಜೋಶೀ, ಪ್ರೊ. ಆಳತೇಕರ, ನಾ. ಹ. ಆಪಟೆ, ಪ್ರೊ. ಫಡಕೆ, ಶ್ರೀ ಗೂರ್ಜರ, ಪ್ರೊ. ಬೇಲಾರೆ ಇತ್ಯಾದಿ ಪ್ರಸಿದ್ಧ ಲೇಖಕರಲ್ಲಿ ಉತ್ತಮರೆಂದು ಶ್ರೀ ಕರಂದೀಕರರ ಖ್ಯಾತಿಯಿದೆ.

## ಕಾವ್ಯಭಂಡಾರ

ಪ್ರಾಚೀನಕಾಲದ ಮರಾಠಿ ಗ್ರಂಥಸಂಪತ್ತಿಯಲ್ಲಿ ಅಧಿಕಾಂಶವು ಕಾವ್ಯರೂಪವಾಗಿಯೇ ಇದೆ. ಅವುಗಳಲ್ಲಿ ಜ್ಞಾನೇಶ್ವರ, ತುಕಾರಾಮ, ರಾಮದಾಸ, ವಾಮನ, ಮೋರೋಪಂತರ ಕಾವ್ಯಗಳು ವರ್ಣನ, ಉಪಮ ಮತ್ತು ಉತ್ಪ್ರೇಕ್ಷೆಗಳಿಂದ ನಿಬಿಡವಾಗಿವೆ. ಆ ಪದ್ಧತಿಯ ಕಾವ್ಯಗಳು ಈಗ ಇಲ್ಲವಾದರೂ ಇಂದಿನ ಕಾವ್ಯಗಳು ಮಧುರವಲ್ಲವೆಂದು ಹೇಳಲಾಗುವುದಿಲ್ಲ. ವಿವಿಧವಿಷಯ, ಹೊಸ ಹೊಸ ಛಂದಸ್ಸುಗಳು, ನಾನಾ ಪ್ರಕಾರದ ಪ್ರಸಂಗಗಳು ಇವುಗಳಿಂದ ಅನೇಕ ಸುಂದರ ಮತ್ತು ಭಾವನೋತ್ಕಟ ಕಾವ್ಯಗಳಿಂದು ಮರಾಠಿಯಲ್ಲಿ ಹುಟ್ಟುತ್ತಿವೆ ಗತಸಮುಸುದ ಕಾವ್ಯಹೃದಯ ಸ್ವರೂಪವು ಪ್ರಧಾನವಾಗಿ ಧಾರ್ಮಿಕ ಅಥವಾ ಪೌರಾಣಿಕವಾಗಿತ್ತು. ಇತ್ತಲಾಗಿ ಆ ಸ್ವರೂಪವು ಪರಿವರ್ತಿತವಾಗಿ ಕಲಾಪ್ರದರ್ಶನಕ್ಕೆ ಬೇಕಾಗುವ ದೃಷ್ಟಿಗನುಗುಣವಾಗಿ ಕಾವ್ಯರಚನೆಯಾಗುತ್ತಲಿದೆ. ಅರ್ವಾಚೀನ ಕವಿಗಳಲ್ಲಿ ರೆ. ತಿಳಕ, ಟೋಂಬರೆ, ಕೇಶವಸುತ, ರೇಂದಾಳಕರ ಮುಂತಾದವರ ಕಾವ್ಯಗಳು ಸರಸವಾದವುಗಳೆಂದು ಹೆಸರುವಾಸಿಯಾಗಿವೆ. ಅರ್ವಾಚೀನ ಕವಿಕುಲಗುರುಗಳು 'ಕೇಶವಸುತ' ರಾಗಿದ್ದಾರೆ. ಆಧುನಿಕ ಕವಿಗಳಲ್ಲಿ ಗಿರೀಶ, ಯಶವಂತ, ಮಾಯದೇವ, ಟೀಕಾಡೆ, ಖಾಪರ್ಡೆ, ಮೊದಲಾದವರ ಕೃತಿಗಳು ರಸಜ್ಞ

ಮತ್ತು ಪ್ರತಿಭಾವಂತರಗಳಿದ್ದು ಅವರು ಕ್ಷ
ಕ್ರಮದಿಂದ ಕಾವ್ಯದೇವತೆಯ ಸೇವೆಯನ್ನು
ತ್ತಿದ್ದಾರೆ.

## ಸಂಶೋಧನಾತ್ಮಕ ವಾಙ್ಮಯ

ಶಾಸ್ತ್ರೀಯ ತತ್ವಜ್ಞಾನಸಂಬಂಧ ವಾಙ್ಮ
ತ್ಮಕ್ಕೇನೂ ಕಡಿಮೆಯಿಲ್ಲ. ಧಾರ್ಮಿಕ ಮತ್ತು
ಜಿಕ ಪ್ರಶ್ನಸಂಬಂಧದಲ್ಲಿ ಅನೇಕ ಮಹತ್ವ
ಥಗಳ ನಿರ್ಮಾಣವಾಗಿದೆ. ಪರಂತು
ಲೋಕಮಾನ್ಯ ಟಿಳಕರ 'ಗೀತಾ ರಹಸ್ಯ
ಶ್ರೇಷ್ಠಸ್ಥಾನವನ್ನು ಸಂಪಾದಿಸಿದೆ ಇತಿ
ಶೋಧನದಲ್ಲಿ ಮಹಾರಾಷ್ಟ್ರದಲ್ಲಾದಷ್ಟು
ಇತರ ಪ್ರಾಂತ್ಯಗಳಲ್ಲಿ ಆಗಿಲ್ಲವೆಂದರೆ
ಮಾತಾಗದು. ಆತ್ಮಸಂಶೋಧನಯುಗ
ವಾಗುತ್ತಲೇ ಇತಿಹಾಸ ಸಂಶೋಧನವೂ
ಯಿತು. ಕೈಲಾಸವಾಸಿ ರಾವ್‌ಬಹದ್ದೂರ
ಸಾನೆ, ಕೈಲಾಸವಾಸಿ ಇತಿಹಾಸಾಚಾರ್ಯ
ಕೈ. ಪಾಂಡುಕೃಷ್ಣ ಪಟ್ಟವರ್ಧನ', ಶ್ರೀ. ದ
ಪೋದ್ದಾರ್ ಶ್ರೀ ಆಪಟೆ, ಆ. ಬಾ. ಚಾಂದೋ
ಮದಾರರೇ ಮೊದಲಾದವರ ಸಾಹಸ ಮತ್ತು
ರಿಶ್ರಮಗಳ ಪ್ರಯತ್ನದಿಂದ ಮರಾಠಿಯ ಇ
ಪವು ಚೆನ್ನಾಗಿ ಪುಷ್ಟವಾಗಿದೆ. ಇಂದಿಗೂ
ಲಿದೆ. ಈಗತಾನೇ ಶ್ರೀ ಶಿವಾಜೀಮಹಾರಾ
ತಸಂವತ್ಸರ ಜನ್ಮೋತ್ಸವವು ನಡೆಯಿತು.
ಉಕ್ತಸಂಶೋಧಕರು ೭-೮ ಪ್ರಚಂಡ ಗ್ರ
ಶಿವಾಜೀಮಹಾರಾಜರ ಸಂಬಂಧವಾಗಿ
ಸಮ್ಮತವಾಗಿರುವಂತೆ ಪ್ರಸಿದ್ಧಪಡಿಸಿದರು
ರಿಂದ ಮರಾಠೀಯಲ್ಲಿರುವ ಸಂಶೋಧನ
ಕಲ್ಪನೆಯಾಗಬಲ್ಲುದು.

## ಧಾರ್ಮಿಕ ವಾಙ್ಮಯ

ಈ ಭಾಗದಲ್ಲಿಯೂ ಮರಾಠಿಯಲ್ಲಿ ಉಣ
ರುವುದಿಲ್ಲ. ಈ ವಿಚಾರದಲ್ಲಿ ಹೆಚ್ಚಿನ ದಿನ
ತ್ನವನ್ನು ಶ್ರೀಕ್ಷೇತ್ರ ವಾಈ ಧರ್ಮ
ಕೈ. ಕಾ ವಾ. ಲೇಲೇ ಶಾಸ್ತ್ರೀಯವರು
ಮಹಾಭಾರತ, ರಾಮಾಯಣ, ಗೀತಾ,
ಣ, ಗಣೇಶಪುರಾಣ, ಋಗ್ವೇದ (ಕೆಲವು
ಇನ್ನು ಹಲವು ಚಿಕ್ಕದೊಡ್ಡ ಧಾರ್ಮಿಕ ಗ್ರ

ಸಂಸ್ಕೃತದಿಂದ ಭಾಷಾಂತರಿಸಿದರು. ಮತ್ತು ಸ್ವತಂತ್ರವಾಗಿ ರಚಿಸಿ ಮರಾಠಿ ಸಾಹಿತ್ಯದೇವಿಗೆ ಅರ್ಪಿಸಿದರು. ಆ ಊರಿನಲ್ಲಿದ್ದ ಪುರಾಣ ಪ್ರಕಾಶಮಂಡಲಿಯೂ ಈ ಕಾರ್ಯದಲ್ಲಿ ಪರಿಶ್ರಮವಹಿಸಿತು ಪುಣೆಯ ಚಿಪಳೂಣಕರ ಮಂಡಲಿಯವರು ಹಲವು ಪುರಾಣಗಳನ್ನು ಮರಾಠಿಗೆ ತಂದರು. ಆಚಾರ್ಯಭಕ್ತ ವಿಷ್ಣುಶಾಸ್ತ್ರಿಯವರು ಆದ್ಯಶಂಕರಾಚಾರ್ಯರ ಹಲವು ಗ್ರಂಥಗಳನ್ನು ಮರಾಠಿಗೆ ಪರಿವರ್ತಿಸಿದರು. ಪಾಂಗಾರಕರರು 'ಮುಮುಕ್ಷು' ಮಾಸಿಕದ ಮೂಲಕ ಧರ್ಮಶಿಕ್ಷಣದ ಕಾರ್ಯವನ್ನು ನೆರವೇರಿಸುತ್ತಿದ್ದಾರೆ. ಗೀತಾವಾಚಸ್ಪತಿ ಸದಾಶಿವಶಾಸ್ತ್ರಿ ಭಿಡೆಯವರು ಉಪನಿಷತ್ಪ್ರಕಾಶದ ಮೂಲಕ ಧಾರ್ಮಿಕ ಶಿಕ್ಷಣಕಾರ್ಯವನ್ನು ಸಮರ್ಪಕ ರೀತಿಯಿಂದ ನಡೆಸುತ್ತಿದ್ದಾರೆ.

## ಶಾಸ್ತ್ರೀಯ ವಾಙ್ಮಯ

ಜ್ಯೋತಿಷಶಾಸ್ತ್ರದ ಸಂಶೋಧನ ಕಾರ್ಯವನ್ನು ಲೋ. ಟಿಳಕರು ಕೈಕೊಂಡರು. ಅದರ ಫಲವಾಗಿ ಇಂದು ಶುದ್ಧಪಂಚಾಗ ಮತ್ತು "ಕರಣಕಲ್ಪಲತೆ" ಯಉತ್ಪತ್ತಿಯಾಯಿತು. (ಶುದ್ಧ ಪಂಚಾಗವು ಇಂದಿಗೂ ನಡೆಯುತ್ತಿರುವದಲ್ಲದೆ ದಿನೇ ದಿನೇ ಅಭಿವೃದ್ಧಿಗೊಳ್ಳುತ್ತಿದೆ) ಇವಲ್ಲದೆ ಸಂಗೀತ, ಆಯುರ್ವೇದ, ವಾಸ್ತುಶಾಸ್ತ್ರ ಇತ್ಯಾದಿ ಶಾಸ್ತ್ರೀಯ ವಿಷಯಗಳಲ್ಲಿಯೂ ಮರಾಠೀವಾಙ್ಮಯವು ಹಿಂದಿಲ್ಲ. "ರಾಜಕಾರಣ" ಮಹಾರಾಷ್ಟ್ರದ ಇಷ್ಟವಾದ ವಿಷಯವಾದರೂ ಆ ಭಾಗದಲ್ಲಿ ಸಾಕಷ್ಟು ಗ್ರಂಥ ನಿರ್ಮಾಣವಾಗಿರುವುದಿಲ್ಲವೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿದೆ ಶ್ರೀ|| ಜ. ಸ. ಕರಂದೀಕರರು ಕೌಟಿಲ್ಯ ಅರ್ಥಶಾಸ್ತ್ರವನ್ನು ಕೆಲವು ದಿನಗಳ ಹಿಂದೆಯೇ ಮರಾಠಿಯಲ್ಲಿ ಪ್ರಸಿದ್ಧಪಡಿಸಿದ್ದಾರೆ. ವೃತ್ತಪತ್ರಿಕೆಗಳ ಮೂಲಕ ರಾಜಕೀಯ ಶಿಕ್ಷಣಕೊಡುವ ಕೆಲಸವು ಮಹಾರಾಷ್ಟ್ರದಲ್ಲಿ ಉತ್ತಮ ರೀತಿಯಿಂದ ನಡೆಯುತ್ತಿದೆ. ಈ ಸಂಬಂಧದಲ್ಲಿ "ಕೇಸರಿ"ಯು ಉತ್ತಮರೀತಿಯಿಂದ ಕೆಲಸ ನಡಿಸಿದೆ. ನಡಿಸುತ್ತಲೂ ಇದೆ. ಅಲ್ಲದೆ ಮುಂದೆಯೂ ನಡಿಸೀತು.

## ಜೀವನ ಚರಿತ್ರಾತ್ಮಕ ವಾಙ್ಮಯ

ಚರಿತ್ರಗ್ರಂಥಗಳಿಗೆ ವಾಙ್ಮಯದಲ್ಲಿ ಶ್ರೇಷ್ಠಸ್ಥಾನವಿದೆ. ಈ ಭಾಗದಲ್ಲಿಯೂ ಮರಾಠೀ ವಾಙ್ಮಯವು ಹಿಂದಿಲ್ಲ. ಮಾನನೀಯರಾದ ಐತಿಹಾಸಿಕ ಸ್ತ್ರೀಪುರುಷರಚರಿತ್ರೆ ಮತ್ತು ಮಾನನೀಯ ಆಂಗ್ಲೇಯರ ಚರಿತ್ರೆಗಳೂ ಮರಾಠಿಯಲ್ಲಿ ಸಿಗುತ್ತವೆ. ಇತ್ತೀಚೆಗಿನ ಉಲ್ಲೇಖನೀಯ ಪ್ರಯತ್ನವೆಂದರೆ, ಶ್ರೀ ಕೇಳಕರರು ಬರದ ಲೋಕಮಾನ್ಯ ಟಿಳಕರ ಚರಿತ್ರೆಯಾಗಿದೆ. ಈ ಗ್ರಂಥವು ೨೫೦೦-೩೦೦೦ ಪುಟಗಳಿದ್ದು ೩ ಖಂಡಗಳಲ್ಲಿ ವಿಭಕ್ತವಾಗಿದೆ. ಮರಾಠಿ ವಾಙ್ಮಯದಲ್ಲಿ ಇಷ್ಟು ದೊಡ್ಡ ಐತಿಹಾಸಿಕ ಗ್ರಂಥ ಬೇರೊಂದಿಲ್ಲ. ಇದಲ್ಲದೆ "ಲೋಕಮಾನ್ಯರ--ಆಠವಣಿ ವ ಆಖ್ಯಾಯಿಕಾ"ಎಂಬ ಗ್ರಂಥದ ೩ ಭಾಗಗಳು ಪ್ರಸಿದ್ಧವಾಗಿವೆ. ಮತ್ತು ಟಿಳಕರ "ಆರಿಸಿದ ಲೇಖನಗಳು" ನಾಲ್ಕು ಭಾಗಗಳಲ್ಲಿ ಪ್ರಕಟಗೊಂಡಿವೆ. ಟಿಳಕರ ಸಂಬಂಧದಲ್ಲಿ ಉಪಲಬ್ಧವಾಗಿರುವಷ್ಟು ಸಾಹಿತ್ಯವು ಮರಾಠಿಯಲ್ಲಿ ಬೇರೆ ಯಾರ ಸಂಬಂಧದಲ್ಲಿಯೂ ಆಗಿರುವುದಿಲ್ಲ.

## ವೃತ್ತಪತ್ರಗಳು

ವಾಙ್ಮಯಕ್ಷೇತ್ರದ ಇನ್ನೊಂದು ಮೆಟ್ಟಲೆಂದರೆ ವೃತ್ತಪತ್ರಿಕೆಗಳು, ಮತ್ತು ಮಾಸಪತ್ರಿಕೆಗಳು ಮರಾಠಿ ಮಾತನಾಡುವವರ ಜನಸಂಖ್ಯೆಯು ಒಂದು ಕೋಟಿಯಷ್ಟೂ ಇಲ್ಲ ಅದರಲ್ಲಿಯೂ ನಿರಕ್ಷರತೆಯ ಸಾಮ್ರಾಜ್ಯವು ಅಪ್ರ್ಯಾಹತವಾಗಿ ನಡೆಯುತ್ತಲಿದೆ. ರಾಜದಂಡವು ತಲೆಯಮೇಲೆಯೇ ತೂಗಾಡುತ್ತಿದೆ. ಈ ಎಲ್ಲ ಪರಿಸ್ಥಿತಿಗಳನ್ನೂ ಪರಿಶೀಲಿಸುವಾಗ ಇತರ ಪ್ರಾಂತ್ಯಗಳಿಗಿಂತ ಮರಾಠಿ ವಾಙ್ಮಯವು ಈ ಭಾಗದಲ್ಲೂ ಹಿಂದಿಲ್ಲವೆಂದು ಹೇಳಬಹುದು. ಇಂದು ಕೆಲವು ಮರಾಠಿ ವೃತ್ತಪತ್ರಿಕೆಗಳಿವೆ. ಅವುಗಳಲ್ಲಿ ದೈನಿಕ ಸಾಪ್ತಾಹಿಕಗಳೂ ಸಾಕಷ್ಟಿವೆ. ಮಾಸಪತ್ರಿಕೆಗಳಲ್ಲೂ ಹಿಂದಿಲ್ಲ. ಕೇವಲ ಮನೋರಂಜನವೇ ಹೇತುವಾಗಿರದೆ ಲೋಕಶಿಕ್ಷಣ, ವಿಚಾರ ಮತ್ತು ಜನರಲ್ಲಿ ಸ್ವದೇಶಭಕ್ತಿಯ ಜ್ಞಾನ ಉಂಟುಮಾಡಿಕೊಡುವುದೇ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡು ಉತ್ತಮ ತರಗತಿಯ ಮಾಸಪತ್ರಿಕೆಗಳು ಗಣನೆಗೆ ಬಂದಿವೆ. 'ಚಿತ್ರಮಯಂ ಜಗತ್', 'ಸ್ಫೂರ್ತಿ', 'ವಾಗೀಶ್ವರೀ', 'ರತ್ನಾಕರ', 'ಪುರುಷಾರ್ಥ', 'ಮಧುಕರ', 'ಕಿರ್ಲೋಸ್ಕರ ಖಬರ್', 'ಸ್ತ್ರೀ', 'ಆನಂದ' 'ಸೃಷ್ಟಿವಿಜ್ಞಾನ', 'ಯಶವಂತ', 'ಆಯುರ್ವೇದ', 'ಮುಮುಕ್ಷು', 'ಶ್ರೀದಾಸಬೋಧ', 'ಜ್ಞಾನೇಶ್ವರೀ', ಭಾರತ ಇತಿಹಾಸ ಸಂಶೋಧನ ಮಂಡ

ಳಿಯ ತ್ರೈಮಾಸಿಕ, ಮರಾಠಿ ಸಾಹಿತ್ಯ ಪರಿಷತ್ಪತ್ರಿಕೆ ಇತ್ಯಾದಿ ನಾನಾ ಪತ್ರಿಕೆಗಳು ಮರಾಠಿ ವಾಙ್ಮಯದ ಗೌರವವನ್ನು ಅಭಿವೃದ್ಧಿಗೊಳಿಸಲು ತಮ್ಮ ಶಕ್ತಿ ಸರ್ವಸ್ವವನ್ನು ಉಪಯೋಗ ಮಾಡುತ್ತಲಿವೆ.

## ಸಾಹಿತ್ಯವೃದ್ಧಿ

ಮರಾಠಿ ಸಾಹಿತ್ಯ ಸಮ್ಮೇಳನದ ಅಧಿವೇಶನಗಳು ಕ್ರಮವಾಗಿ ಸೇರುತ್ತಲಿದ್ದು ಸಾಹಿತ್ಯಸೇವಕರ ಲಕ್ಷ್ಯವು ಮರಾಠಿ ವಾಙ್ಮಯದ ಸರ್ವಾಂಗೀಣ ಉನ್ನತಿಯು ಹೇಗಾಗಬಲ್ಲುದೆಂಬುವದರಕಡೆಗೆ ತಿರುಗಿದೆ. ಮತ್ತು ಉತ್ತಮೋತ್ತಮ ಲೇಖಕರಿಗೆ ಸಾರ್ವಜನಿಕ ಸಂಸ್ಥೆಗಳು ಆಗಾಗ ಪಾರಿತೋಷಿಕಗಳನ್ನು ಕೊಡುತ್ತಿವೆ. ರಾಜಾಶ್ರಯದ ಅಭಾವ, ಶಿಕ್ಷಣಪ್ರಚಾರದಲ್ಲಿ ನೌಕರಶಾಹಿಯ ಉದಾಸೀನತೆ ಮತ್ತು ಮಹಾರಾಷ್ಟ್ರದ ನಿರ್ಧನತೆ ಇವುಗಳಕಡೆಗೆ ಲಕ್ಷ್ಯಕೊಟ್ಟರೆ ಮರಾಠಿ ವಾಙ್ಮಯದಲ್ಲಾಗುತ್ತಿರುವ ಅಭಿವೃದ್ಧಿಯು ಭಾಷಾಭಿಮಾನಿಗಳಿಗೆ ಅಭಿಮಾನಾಸ್ಪದವೇ ಆಗಿರುತ್ತದೆ.

## ವಿದ್ಯಮಾನ ಸಾಹಿತ್ಯಸೇವಕರು

ವಿದ್ಯಮಾನ ಸಾಹಿತ್ಯಸೇವಕರಲ್ಲಿ ಉಲ್ಲೇಖನೀಯ ಮತ್ತು ಮರಾಠಿಭಾಷೆಗೆ ಭೂಷಣಾಸ್ಪದರಾದವರಲ್ಲಿ ಕೆಲವರ ಹೆಸರನ್ನು ಸೂಚಿಸಿ ಈ ಲೇಖನವನ್ನು ಮುಗಿಸುವೆನು

ಭಾರತಾಚಾರ್ಯ ಚಿಂತಾಮಣಿರಾವ ವೈದ್ಯರು ಸೂಕ್ಷ್ಮಸಂಶೋಧಕರೆಂಬ ಬಿರುದನ್ನು ಸಂಪಾದಿಸಿದ್ದಾರೆ. ಶ್ರೀ ನರಸಿಂಹ ಚಿಂತಾಮಣಿ ಕೇಳಕರರು ಮರಾಠಿಭಾಷೆಯ ಸಿದ್ಧಹಸ್ತಲೇಖಕರು. ಕಾವ್ಯಾಲಂಕಾರಗಳ ನಿಬಿಡತೆಯು ಅವರ ಲೇಖನಗಳಲ್ಲಿ ಸ್ಥಳವಿಲ್ಲ. ಮತ್ತು ಅವರು ಪ್ರವೇಶಮಾಡದ ಕ್ಷೇತ್ರವೊಂದೂ ಇಲ್ಲ. ವಿದ್ಯಮಾನ ಸಾಹಿತ್ಯಸೇವಕರು ಅವರಂತೆ ವಿವಿಧ ವಿಸ್ತೃತಲೇಖನಗಳನ್ನು ಬರೆದವರಿಲ್ಲ. ಜ. ಸ. ಕರಂದೀಕರರು ಅತ್ಯಂತ ಚಿಕಿತ್ಸಕ ಮಾರ್ಮಿಕಲೇಖಕರೂ, ಟೀಕಾಕಾರರೂ ಆಗಿರುತ್ತಾರೆ. ಇವರಲ್ಲದೆ ಶ್ರೀ ಕೋಲ್ಹಟಕರ, ಖಾಡಿಲಕರ, [illegible]ಕರ, ಜೋಶೀ, ಮಟೇ, ಇತಿಹಾಸ ಸಂಶೋಧಕರು ಆಪಟೇ, ಸರದೇಸಾಯಿ, ಬೆಲಾರೇ, ಸಾವರಕರ [illegible]ತಿ ಅನೇಕ ಸಾಹಿತ್ಯಸೇವಕರು ಇದ್ದಾರೆ. [illegible] ಈ ಪರಂಪರೆಯು ಅಖಂಡವಾಗಿರುವತನಕ ಮ[illegible] ವಾಙ್ಮಯದ ಅಭಿವೃದ್ಧಿಯಲ್ಲಿ ನಿರಾಶರಾಗುವ ಕಾ[illegible]ವಿಲ್ಲ.



ಲೋಕಮಾನ್ಯ ತಿಲಕ



ವಿಷ್ಣುಶಾಸ್ತ್ರಿ ಚಿಪಳೂಣಕರ



(ಮರಾಠಿಯ ಲೇಖನವನ್ನು ಕನ್ನಡಕ್ಕೆ ಅನುವಾದಮಾಡಿದವರು ಶ್ರೀ ಜಿ. ಎಲ್. ಭಿಡೆ, ಬೆಂಗಳೂರು)

# ಹಿಂದೀ ವಾಙ್ಮಯ ವಿಸ್ತಾರ

(ಲೇಖಕ :—ಜಿ. ಎನ್. ಭಿಡೆ, ಹಿಂದೀ ಪ್ರಚಾರಕ, ಬೆಂಗಳೂರು ನಗರ.)



ಜಗತ್ತಿನ ಭಾಷೆಗಳಿಗೂ ಜನಾಂಗಗಳಿಗಿರುವಂತೆಯೇ ಇತಿಹಾಸವಿದೆ. ಅವುಗಳ ಇತಿಹಾಸವೂ ಇತರ ಇತಿಹಾಸಗಳಂತೆಯೇ ಅವುಗಳ ಪ್ರಾಚೀನತೆ ಹೆಚ್ಚಿದ ಹಾಗೆಲ್ಲ ಪರಿವರ್ತನಕೃತ ಮನೋರಂಜಕತೆಯಿಂದ ತುಂಬಿ ಚಿತ್ತಾಕರ್ಷಕವಾಗುತ್ತದೆ. ಈ ನಿಯಮಕ್ಕೆ ಭಾರತೀಯ ಬಾಷೆಗಳೇನೂ ಅಪವಾದವಾಗಿಲ್ಲ ಇಂದಿನತನಕ ಭಾರತ ವರ್ಷವು ಎಷ್ಟು ಪರಿವರ್ತನಗಳನ್ನು ತಂದಿದೆಯೆಂಬುದನ್ನು ಪ್ರತ್ಯೇಕ ಬರಿಯಬೇಕಾಗಿಲ್ಲ ರಾಜಕೀಯ, ಧಾರ್ಮಿಕ ಅಥವಾ ಸಾಮಾಜಿಕ ಯಾವದೇ ಆಗಲಿ, ಪರಿವರ್ತನವು ಜಾತಿಯ ಮೇಲೆ ಮಾತ್ರ ತನ್ನ ಪ್ರಭಾವವನ್ನು ಪೂರ್ಣಗೊಳಿಸದೆ, ಭಾಷೆಯ ಮೇಲೂ ಬೀರದಿರುವುದಿಲ್ಲ. ಈ ಕಾರಣದಿಂದಲೇ ಭಾಷೆಗಳು ರೂಪಾಂತರಗೊಳ್ಳುತ್ತಿರುತ್ತವೆ. ಹೀಗಿರುತ್ತ ನಮ್ಮ ವೃದ್ಧ ಭಾರತದ ಮತ್ತು ಇಂದಿನ ನವ ಭಾರತದ ಭಾಷೆಗಳ ಅನುಶೀಲನ ಮಾಡಿದರೆ, ತೋರಿಬರುವ ಮಹದಂತರವು ಆಶ್ಚರ್ಯಕರವಾದ್ದಲ್ಲ; ಅದು ಸ್ವಾಭಾವಿಕವೇ ಆದರೆ ಇದರ ತಥ್ಯಾಂಶದ ವಿವೇಚನವನ್ನು ಮಾಡಿದರೆ ವಿಸ್ಮಯಜನಕ ಆಗದಿರದು. ಭಾಷಾವಿಕಾಸದ ಮುಖ್ಯ ಅವಸ್ಥೆಗಳೆರಡಿರುತ್ತವೆ. ವಿಯೋಗಾವಸ್ಥೆ ಮತ್ತು ಸಂಯೋಗಾವಸ್ಥೆ ಎಂದು. ಈ ವಿಚಾರವಾಗಿ ಇಲ್ಲಿ ವಿವರಿಸುವುದನಗತ್ಯ. ಜಾತಿಗಳ ಸ್ಥಿತಿ ಪರಿವರ್ತನದಂತೇ ಭಾಷೆಗಳ ರೂಪ ಪರಿವರ್ತನವೂ ನೈಸರ್ಗಿಕವೇ ಆಗಿರುತ್ತದೆ.

## ' ಪುರಾಣೀ ಹಿಂದೀ '

ಪ್ರಾಚೀನ ಆರ್ಯರು, ಅಂದರೆ ನಮ್ಮ ಪೂರ್ವಜರು, ಭಾರತದ ಹೊರಗಿನ ಪ್ರದೇಶಗಳಿಂದ ಹಿಂದೂಕುಷ್, ಮತ್ತು ಅಫಗಾನಿಸ್ತಾನದ ಮಾರ್ಗವಾಗಿ ಭಾರತವನ್ನು ಪ್ರವೇಶಿಸಿದರು. ಇವರ ಆಗಮನವು ಏಕಕಾಲದಲ್ಲಾಗಲಿಲ್ಲ. ಹಲವು ಶತಾಬ್ದಗಳು ಹಿಡಿದಿರಬಹುದು. ಸಾಕಷ್ಟು ಇತಿಹಾಸಪ್ರಮಾಣದ ಅಭಾವದಿಂದ ಈವಾದವಿನ್ನೂ ಸಂದಿಗ್ಧವಾಗಿಯೇ ಇದೆ. ಹಾಗೆಯೇ ಅವರ ಭಾಷೆಯೂ ಅಜ್ಞಾತಾವಸ್ಥೆಯಲ್ಲೇ ಇರುವುದಾದರೂ, ಆಗಿನಕಾಲದ ಕೆಲವು ಗ್ರಂಥಗಳು ಉಪಲಬ್ಧವಿರುವುದರಿಂದ ಭಾಷೆಯನ್ನು ಕಂಡುಹಿಡಿಯಬಹುದಾಗಿದೆ. ಇಂತಹ ಗ್ರಂಥಗಳಲ್ಲಿ ' ಋಗ್ವೇದವೂ ' ಬ್ರಾಹ್ಮಣ, ಸೂಕ್ತಗಳೂ ಆಗಿರುತ್ತವೆ. ಇವುಗಳ ಭಾಷೆಯಲ್ಲೂ ಭೇದವಿರುವುದಾದರೂ, ಮಹಾ ಭೇದವಿಲ್ಲ. ಸಮಯ ಮತ್ತು ಸ್ಥಾನಕೃತ ಭೇದವದು. ಆಕಾಲದ ಭಾಷೆಯು ವ್ಯಾವಹಾರಿಕ ಮತ್ತು ಸಾಹಿತ್ಯಾತ್ಮಕವೆಂದು ವಿಭಾಗಗೊಂಡಾಗ, ಸಾಹಿತ್ಯದ ಭಾಷೆಯು ಪರಿಮಾರ್ಜಿಸಲ್ಪಟ್ಟ ವ್ಯಾಕರಣದಿಂದ ಸಂಸ್ಕಾರಗೊಂಡು ' ಸಂಸ್ಕೃತ ' ವೆಂದು ಹೆಸರುಗೊಂಡಿತು. ಆದರೆ, ವ್ಯಾವಹಾರಿಕ ಭಾಷೆಯ ಅವಸ್ಥೆಯು ಬೇರೆಯೇ ಆಯಿತು. ಸಾಹಿತ್ಯಕ ಭಾಷೆಯು ನಿರ್ಬಂಧಗಳಿಗೊಳಗಾದಕಾರಣ ಇಂದಿಗೂ ತನ್ನ ರೂಪವನ್ನು ಅವಿಚಲಿತವಾಗಿಟ್ಟುಕೊಂಡಿರುತ್ತಿದ್ದರೂ, ವ್ಯಾವಹಾರಿಕ ಭಾಷೆಯು ಮುಂಚಿನ ರೂಪದಲ್ಲಿಲ್ಲ. ಪರಿವರ್ತಿತವಾಗಿದೆ. ಆಗಿನ ವ್ಯಾವಹಾರಿಕ ಭಾಷೆಯೇ ಪ್ರಾಕೃತವು. ಇದನ್ನೇ ಸಂಸ್ಕೃತ ಪಂಡಿತರು 'ಸರಸ್ವತಿಯ ಬಾಲಭಾಷೆ' ಎನ್ನುತ್ತಾರೆ. ಇದೇ ಸಂಸ್ಕೃತದ ಜನನಿಯು. ಈ ಪ್ರಾಕೃತದ ಉದಾಹರಣೆಗಳು ಮೌರ್ಯ ಕಾಲಕ್ಕಿಂತ ಮುಂಚಿನವು ಸಿಗುವುದಿಲ್ಲ. ಆದುದರಿಂದ ಅದೇ ಮೊದಲಿನ ರೂಪವೆಂದು ನಂಬಲು ನಾವು ಬಾಧ್ಯರಾಗಿದ್ದೇವೆ. ಇದನ್ನೇ " ಪಾಲಿ " ಯೆಂದು ಕರೆಯುತ್ತಾರೆ.

ಪಾಲಿಯ ಅನಂತರವೇ ಪ್ರಾಕೃತದಲ್ಲಿ ಸಾಹಿತ್ಯಕ್ಕೆ ಮೊದಲಾಯಿತು. ಪ್ರಾಕೃತದ ಸಾಹಿತ್ಯವು ಮುಖ್ಯವಾಗಿ, ಮಹಾರಾಷ್ಟ್ರೀ, ಮಾಗಧೀ, ಶೌರಸೇನೀ, ಉಪಭೇದಗಳಲ್ಲಿದೆ. ಪೈಶಾಚೀ ಇತ್ಯಾದಿ ಇನ್ನೂ ಹಲವು ಉಪಭೇದಗಳಿವೆ. ಈ ಪ್ರಾಕೃತವು ಸಾಹಿ

ತ್ಮಕ ರೂಪಗೊಳ್ಳುತ್ತಲೇ ಪಂಡಿತರು ಆದರ ಮೇಲೆ ತಮ್ಮ ವೈಯಾಕರಣ ನಿರ್ಬಂಧವನ್ನು ಹಾಕಿದರು. ಆದುದರಿಂದ, ಅದು ರೂಪಾಂತರಗೊಳ್ಳುವುದು ನಿಂತು, ಸಂಸ್ಕೃತ ಮತ್ತು ಪ್ರಾಕೃತ ಮಿಶ್ರಿತವಾದ ಒಂದು ವ್ಯಾವಹಾರಿಕ ಭಾಷೆಯುಂಟಾಯಿತು. ಇದರ ಹೆಸರೇ "ಅಪಭ್ರಂಶ"ವೆಂದು. ಇದರ ಉತ್ಪತ್ತಿಯು ಕ್ರಿಸ್ತ ಶಕ ೩೦೦ ರಲ್ಲಿ ಆಯಿತೆನ್ನಬಹುದು. ಆದರೆ ಇದರಲ್ಲೂ ಸಾಹಿತ್ಯರಚನೆ ಆಗತೊಡಗಿ, ವ್ಯಾವಹಾರಿಕ ಭಾಷೆಯು ರೂಪಾಂತರಗೊಂಡಿತು. ಅಪಭ್ರಂಶವೂ ವ್ಯಾಕರಣಕ್ಕೆ ಒಳಪಟ್ಟಿತು. ಆಗ ಪ್ರಾಕೃತ ಮತ್ತು ಅಪಭ್ರಂಶದಿಂದ ಒಂದು ವ್ಯಾವಹಾರಿಕ ಭಾಷೆಯುತ್ಪತ್ತಿಯಾಯಿತು. ಇದನ್ನೇ 'ಪುರಾಣೀಹಿಂದೀ' ಎಂದು ಒಂದೆನ್ನುತ್ತಾರೆ.

ಈ ನಮ್ಮ 'ಹಿಂದಿ'ಯ ಉತ್ಪತ್ತಿಯನ್ನು ಅರಿಯಲಿಕ್ಕೆ ಮುಖ್ಯವಾಗಿ ಇಂದಿನ ಹಲವು ಪಂಡಿತಪುರುಷರೂ 'ಯವನ ಭಾಷೆ' ಯೆಂದೆನ್ನುವುದೇ ಕಾರಣವಾಯಿತು.

ಅಂತೂ ಈ ರೀತಿಯ ವಿವೇಚನೆಯಿಂದ, ಮೂಲ ಭಾಷೆಯಿಂದ, ವೈದಿಕ, ಸಂಸ್ಕೃತಗಳ ಉತ್ಪತ್ತಿಯಾಯಿತೆಂದೂ, ಅದಕ್ಕೆ ಸಾಹಿತ್ಯಕ ರೂಪಬರುತ್ತಲೇ, ವ್ಯಾವಹಾರಿಕ ಭಾಷೆಯಾಗಿ ನಡಿಯುತ್ತಿದ್ದುದನ್ನು ಪ್ರಾಕೃತವೆಂದರೆಂದೂ, ಇದರ ಮೇಲೆಯೂ ವೈಯಾಕರಣಿಗಳ ಪ್ರಭುತ್ವದಾಗ, ಅಪಭ್ರಂಶವೇ ವ್ಯಾವಹಾರಿಕ ಭಾಷೆಯಾಗಿ ಉಳಿಯಿತೆಂದೂ, ತಿಳಿಯುತ್ತದೆ. ಆದರೆ, ಅಪಭ್ರಂಶವೂ ಸಾಹಿತ್ಯಕ ಭಾಷೆಯಾಯಿತು. ಸಾಹಿತ್ಯಕ ಭಾಷೆಯು ವ್ಯಾವಹಾರಿಕ ಭಾಷೆಯಾಗಿ, ಶುದ್ಧ ಸ್ವರೂಪದಿಂದುಳಿಯುವುದು ಕಷ್ಟವೇ ಸರಿ. ಆದುದರಿಂದ ಈ ಅಪಭ್ರಂಶ—ಪ್ರಾಕೃತದಿಂದಲೇ ಆಧುನಿಕ ಆರ್ಯಭಾಷೆಗಳ ಉತ್ಪತ್ತಿಯಾಯಿತೆಂದು ಸಿದ್ಧವಾಗುತ್ತದೆ. ಯಾವಾಗ ವ್ಯಾವಹಾರಿಕ ಮತ್ತು ಸಾಹಿತ್ಯಕ ಭಾಷೆಗಳು ಭಿನ್ನ ಭಿನ್ನ ಮಾರ್ಗಗಳಲ್ಲಿ ನಡೆಯಲಾರಂಭಿಸುವುವೋ ಆಗ ಅವುಗಳೂ ಭಿನ್ನ ಭಿನ್ನ ರೂಪಗಳನ್ನು ಹೊಂದುತ್ತವೆಂಬುದು ನಿಸರ್ಗ ಸಿದ್ಧವು. ಆದಕಾರಣ ಇಂದು ಹಿಂದೀ ಅಥವಾ ಇತರ ಆರ್ಯಭಾಷೆಗಳಿಗೂ, ಅವುಗಳ ಜನನಿಯಾದ ಮೂಲ ಭಾಷೆಗೂ ತೋರದಿರುವ ಮಹದಂತರವು ಆಕ್ಷೇಪಣೀಯವಲ್ಲ.

## ಶುದ್ಧ ಹಿಂದೀ

ಹಿಂದೀಯಲ್ಲಿ ಪಶ್ಚಿಮ ಹಿಂದೀ, ಪೂರ್ವ ಹಿಂ ಎಂಬ ಭೇದಗಳಿರುತ್ತವಾದರೂ ಅವು ಸಾಮಾನ್ಯ ಗಳಾಗಿರುವುದರಿಂದ, ಪ್ರಕೃತ ಲೇಖನದಲ್ಲಿ "ಹಿಂದೀ" ಎಂಬ ಒಂದು ಸಾಮೂಹಿಕವಾ ಶಬ್ದದಿಂದಲೇ ವಿವೇಚಿಸುವೆವು.

ಶುದ್ಧ ಹಿಂದೀ ಭಾಷೆಯು ಇಂದು ದಿಲ್ಲೀ, ಪ್ರಾಂತಗಳಲ್ಲಿ ವ್ಯಾವಹಾರಿಕವಾಗಿದ್ದು, ಅಖಿಲ ಭಾರತದ ಸಾಹಿತ್ಯಕ ಭಾಷೆಯಾಗಿರುತ್ತದೆ. ಮತ್ತು ಉರ್ದೂ ಆಧುನಿಕಸಾಹಿತ್ಯವು ಇದರಲ್ಲಿ ತವಾಗಿದೆ ಈ ಶುದ್ಧ ಹಿಂದಿಯೇ ರೂಹೇಲಖಂ "ಕನ್ನೌಜೀ" ಎಂದೂ—ಅಂಬಾಲೆಯಿಂದ ಮು ವರಿದಾಗ "ಪಂಜಾಬೀ" ಯೆಂದೂ, ಗುಡಗಾ ದಕ್ಷಿಣ ಪೂರ್ವದಲ್ಲಿ "ವೃಜಭಾಷೆ"ಯೆಂದೂ ಕ ಡುತ್ತದೆ.

ಹಿಂದೀ-ಉರ್ದೂ—ಹಿಂದೂಸ್ಥಾನಿಯು ವಸ್ತು ಒಂದೇ ಭಾಷೆ. ಹಿಂದಿಯ ಹಿಂದೂಸ್ಥಾನೀ ಸಾ ರಣವು ಆಂಗ್ಲೇಯ ಪ್ರಭುಗಳಿಂದಲೂ, ಉರ್ದೂ ವಾ ರೇಖಕಾ ಎಂಬುದು, ಅರಬೀ-ಫಾರ್ಶಿ ಭಾಷೆಗ ಹಲವು ಶಬ್ದಗಳನ್ನು ಸೇರಿಸಿ, ಮುಸಲ್ಮಾನರಿಂದ ಮಾಡಲ್ಪಟ್ಟಿತು. ವಸ್ತುತಃ ಇದರ ಹೆಸರು "ಹಿಂ

ಹಿಂದಿಯಲ್ಲಿ ವೃಜಭಾಷಾ, ಅವಧಿ, ರಾಜಸ್ಥಾ ಳೆಂದು ಮುಖ್ಯ ವಿಭಾಗಗಳಿವೆ. "ಬುಂದೇಲಖಂ ಯು ವೃಜಭಾಷೆಯು ಅಂತರ್ಗತ ಉಪಭೇದವಾ

ಈ ಭಾಷೆಗಳ ಶಬ್ದ ಭಂಡಾರವನ್ನು ವಿಮರ್ಶಿ ಸಂಸ್ಕೃತ ಯಾ ಪ್ರಾಕೃತದಿಂದ ಬಂದ ತ ತದ್ಭವ, ಅರ್ಧ ತತ್ಸಮ, ಶಬ್ದಗಳಿಂದಲೇ ತ್ತದೆನ್ನಬೇಕು. ಇನ್ನು ಹಲವು ಶಬ್ದಗಳು "ದೇ ಗಳೆಂದು ಹೇಳಲ್ಪಡುತ್ತವೆ. ಇದರ ಉತ್ಪ ತಿಳುವಳಿಕೆಯು ಈವರೆಗೂ ಗೊತ್ತಾಗಿಲ್ಲದಕಾರಣ ಮಕರಣವಿದನ್ನು ಮಾಡಿರುತ್ತಾರೆ.

## ಅನ್ಯಭಾಷೆಗಳ ಪ್ರಭಾವ

ಹಿಂದೀಯ ಮೇಲೆ ಭಾರತೀಯ ಇತರ ಭಾ ಮತ್ತು ವಿದೇಶೀ ಭಾಷೆಗಳ ಪ್ರಭಾವವೂ

ಬಿದ್ದಿದೆ. ಆದರೆ, ಆದಿನಿವಾಸಿ ದ್ರಾವಿಡರ ಭಾಷೆಗಳ ಪ್ರಭಾವವು ಮಾತ್ರ "ಪ್ರಾಕೃತ"ದ ಮೂಲಕ ಬಿದ್ದಿರುತ್ತದೆಂದು ಮಿ|| ಕೇಲಾಗರ ಮತ.

ಈಗ ಆಧುನಿಕ ಆರ್ಯ ಭಾಷೆಗಳ ಅಂದರೆ, ಮರಾಠೀ, ಬಂಗಾಲೀ, ಮೊದಲಾದುವುಗಳ ಪ್ರಭಾವವೂ ಸಾಕಷ್ಟು ಬೀಳುತ್ತಲೇ ಇದೆ

ವಿದೇಶೀ ಭಾಷೆಗಳಲ್ಲಿ ಮುಸಲ್ಮಾನರ ಭಾಷೆಗಳ ಪ್ರಭಾವವೂ, ಇಂದು ಇಂಗ್ಲಿಷ್ ಮತ್ತು ಪೋರ್ಚುಗೀಸ ಭಾಷೆಯ ಪ್ರಭಾವವೂ ಬೀಳದಿಲ್ಲ. ಮುಸಲ್ಮಾನರ ಭಾಷೆಗಳು, ಫಾರಸೀ, ಅರಬೀ, ಮತ್ತು ತುರ್ಕಿಯೆಂದು ಪರಿಗಣಿಸಲ್ಪಟ್ಟಿವೆ. ಉತ್ತರ ದೇಶದಲ್ಲಿ ಮುಸಲ್ಮಾನರ ಅಧಿಪತ್ಯವು ಹಲವು ಕಾಲದವರೆಗೇ ಇದ್ದ ಕಾರಣ ಈ ಭಾಷೆಗಳ ಶಬ್ದಗಳು ವ್ಯಾವಹಾರಿಕವಾಗಿ ಮಾತ್ರವಲ್ಲ, ಸಾಹಿತ್ಯದಲ್ಲಿಯೂ ಪ್ರಚಾರಗೊಂಡಿವೆ. ಅದೇ ರೀತಿ ಇಂಗ್ಲಿಷ್‌ನಿಂದಲೂ, ಇಂದು ವ್ಯವಹಾರದಲ್ಲಿ ಬೆಳದಿರುತ್ತವೆ. ಮತ್ತು ಸಾಹಿತ್ಯದಲ್ಲಿಯೂ ಸೇರುವ ಸಂಭವವಿದೆ.

## ಸಾಹಿತ್ಯ ಪ್ರವಾಹ

ಹಿಂದೀ ಸಾಹಿತ್ಯದ ಇತಿಹಾಸವನ್ನು ಧ್ಯಾನಪೂರ್ವಕವಾಗಿ ನೋಡಿದರೆ, ಅದನ್ನು ನಾವು ಭಿನ್ನಭಿನ್ನ ಕಾಲಗಳಲ್ಲಿ ವಿಭಾಗಮಾಡಲು ಅಸಮರ್ಥರಾಗುತ್ತೇವೆ. ಅದರ ಇತಿಹಾಸವು ಒಂದು ದೊಡ್ಡ ನದಿಯಹಾಗೆ ಇದೆ. ಅದರ ಉತ್ಪತ್ತಿ ಸ್ಥಾನವು ಒಂದೇ ಆಗಿರುತ್ತನಾದರೂ, ಕೆಲವುಕಡೆ ಪೀನಕಾಯವಾಗಿಯೂ, ಕೆಲವುಕಡೆ ಕ್ಷೀಣಕಾಯವಾಗಿಯೂ ಪ್ರವಹಿಸುತ್ತಲಿದೆ. ಯಾವರೀತಿ ನದಿಯ ಒಂದು ಧಾರೆಯು ಬೇರೆಯಾಗಿ ಎಂದೂ ಜೊತೆ ಸೇರದೆ, ಬೇರೆಯಾಗಿಯೇ ಹರಿಯುತ್ತಿರುತ್ತದೆಯೋ, ಮತ್ತು ಹಲವು ಭೂಭಾಗಗಳಿಗಾಗಿ ಹೋಗುತ್ತಿರುತ್ತದೆಯೋ ಅದೇರೀತಿ ಹಿಂದೀ ಸಾಹಿತ್ಯರೀತಿಯೂ, ಆರಂಭಿಕ ಅವಸ್ಥೆಯಿಂದ ಮೊದಲ್ಗೊಂಡು ಅನೇಕ ಪ್ರವಾಹಗಳ ರೂಪವಾಗಿ ಹರಿಯುತ್ತಲಿದೆ. ಮೊದಲು ಕವಿಗಳು ರಾಜಾಶ್ರಿತರಾಗಿ ಅವರ ಯಶೋಗಾನಕ್ಕೆ ತೊಡಗಿದರು. ಮತ್ತು ದೇಶದ ಇತಿಹಾಸವನ್ನು ಕವಿತಾರೂಪವಾಗಿ ಬರೆಯುತ್ತಿದ್ದರು. ಸಮಯ ಪರಿವರ್ತನದಿಂದ ಸಾಹಿತ್ಯದ ಈ ಸ್ಥೂಲಧಾರೆಯನೀರು ಭಗವದ್ಭಕ್ತಿರೂಪೀ ಇನ್ನೊಂದು ಧಾರೆಗೆ ಸೇರಿ ಕೃಶವಾಯಿತು. ಈ ಭಗವದ್ಭಕ್ತಿರೂಪೀ ಧಾರೆಯು ರಾಮಾನಂದ ಮತ್ತು ವಲ್ಲಭಾಚಾರ್ಯರ ಅನರೋಧದಿಂದ ಕೃಷ್ಣ--ಮತ್ತು-ರಾಮಭಕ್ತಿ ರೂಪವಾಗಿ ವಿಭಕ್ತವಾಯಿತು. ಮುಂದೆ ಕೇಶವದಾಸರ ಪ್ರತಿಭಾಪ್ರವಾಹದಿಂದ ಈ ಧಾರೆಗಳೆರಡರ ರೂಪವೂ ಪರಿವರ್ತಿತವಾಯಿತು. ಮೊದಲು ಭಾವವ್ಯಂಜನೆ ಮತ್ತು ವಿಚಾರಗಳ ಪ್ರತ್ಯಕ್ಷೀಕರಣದ ಕಡೆಗೆ ವಿಶೇಷಧ್ಯಾನವಿರುತ್ತಿತ್ತು. ಆದರೆ ಕೇಶವನ ಕಾಲದಲ್ಲಿ, ಸಾಹಿತ್ಯಶಾಸ್ತ್ರದ ಅಂಗಪ್ರತ್ಯಂಗದಮೇಲೂ ವಿಶೇಷ ದೃಷ್ಟಿಯಿಡಲಾರಂಭವಾಯಿತು. ಆದರೆ, ಈ ಸಾಹಿತ್ಯರಚನೆಗಳೆಲ್ಲವೂ, ಧಾರ್ಮಿಕ ಮತ್ತು ನೈತಿಕ ಮಾತ್ರವೇ ಆಗಿರುತ್ತಿದ್ದುವಲ್ಲದೆ, ವೈಜ್ಞಾನಿಕ, ಭೌಗೋಲಿಕ ಮೊದಲಾದುವುಗಳು ಸರ್ವಥಾ ಇಲ್ಲವೆಂದೇ ಹೇಳಬೇಕು.

## ಉತ್ಪತ್ತಿ ಮತ್ತು ವಿಕಾಸ

ಹಿಂದೀ ಸಾಹಿತ್ಯದ ಉತ್ಪತ್ತಿ ಮತ್ತು ವಿಕಾಸವು ಸಾಧಾರಣ ಇಂಗ್ಲಿಷ್ ಮತ್ತು ಹಿಂದೀದು ಒಂದೇರೀತಿ ನಡೆದಿದೆಯೆಂದು ಪಂಡಿತರ ಮತವಾಗಿದೆ. ಹಿಂದಿಯ ಉತ್ಪತ್ತಿಯ ಕಾಲವು ಅನಿಶ್ಚಿತವಾಗಿರುತ್ತದಾದರೂ, ಇತಿಹಾಸಜ್ಞರು ವಿಕ್ರಮೀಯ ೭೦೦ ರೆಂದು ಹೇಳುತ್ತಾರೆ. ಇದೇ ಕಾಲವು ಇಂಗ್ಲಿಷ್ ಸಾಹಿತ್ಯದ್ದೂ ಆಗಿದೆ. ಆದರೆ, ಇಂಗ್ಲಿಷ್ ಸಾಹಿತ್ಯವು ಇಷ್ಟು ಪ್ರಗತಿಪರ ಸ್ಥಿತಿಯಲ್ಲಿರುವುದಕ್ಕೂ ಹಿಂದೀ ಸಾಹಿತ್ಯವು ದುರ್ಗತಿಪರ ಸ್ಥಿತಿಯಲ್ಲಿರುವುದಕ್ಕೂ ಕಾರಣವೇನೆಂದು ಕೇಳಬಹುದು. ಅದಕ್ಕೆ ಒಂದೇ ಉತ್ತರವೇನಂದರೆ, ಯಾವ ಜಾತಿಯ ಪ್ರಾಪಂಚಿಕ ಉನ್ನತಿಯು ಮುಂದುವರಿಯುವಂತೆಯೇ ಅದರ ಭಾಷೆಯು ಉನ್ನತಿಗೊಳ್ಳುತ್ತದೆ. ಹಿಂದೀಯರೆಂದೂ, ಪಾರಲೌಕಿಕದಲ್ಲಿ ಆಸಕ್ತಿ 'ಯಿಟ್ಟಷ್ಟು ಐಹಿಕದಲ್ಲಿಟ್ಟವರಲ್ಲವಾದಕಾರಣವೇ ಹಿಂದೀ ಸಾಹಿತ್ಯದ ಪ್ರಗತಿಯೂ ಕುಂಠಿತವಾಯಿತು. ಆದರೆ, ಈ ಕುಂಠಿತವಾದ ಅಂಗವು ಈ ೨೦ನೇ ಶತಮಾನದಲ್ಲಿ ಬೆಳೆಯುತ್ತಿರುವುದು ಸಂತೋಷಕರ.

## ಕವಿಜನ ಪರಿಚಯ

ಈಗ ನಾವು 'ಹಿಂದೀ ಕವಿಧುರೀಣ'ರಲ್ಲಿ ಕೆಲವರ ಪರಿಚಯಮಾಡಿ ಕೊಡುವುದು ನಮ್ಮ ಕರ್ತವ್ಯವೆಂದೆಣಿಸುತ್ತೇವೆ.

ಭಾಷೆಯುತ್ಪತ್ತಿಯ ಜೊತೆಯಲ್ಲೇ ಸಾಹಿತ್ಯವೂ ಉಂಟಾಗುವುದಿಲ್ಲ. ಆದಕಾರಣ ಹಿಂದೀ ಭಾಷೆಯ ಉತ್ಪತ್ತಿಯನಂತರ ಸಾಹಿತ್ಯದ ಉತ್ಪತ್ತಿಯು ಮೂರು ಶತಮಾನಗಳು ಕಳೆದಮೇಲೂ ಆಯಿತು. ಅಂದಿನಿಂ ದಲೇ ಅಂದರೆ ವಿಕ್ರಮಾಯ ೧೦೦೦ದಿಂದಲೇ ಹಿಂದೀ ಸಾಹಿತ್ಯದ ಪುಷ್ಟವಾದ ಮತ್ತು ವಿಶ್ವಾಸಾರ್ಹವಾದ ಇತಿಹಾಸವು ಸಿಗುತ್ತದೆ.

ಇದರ ಮೊದಲು ಅಂದರೆ, ವಿಕ್ರಮಾಯ ೭೭೦ರಲ್ಲಿ ಭಾಟನೂ, ೧೦೦೦ದಲ್ಲಿ ಭೂಪಾಲನೂ, ೧೧೩೭ರಲ್ಲಿ ರಾಜಾನಂದರೂ ಕವಿಗಳಾಗಿದ್ದರೆಂದು ಅಸ್ಪಷ್ಟಪ್ರಮಾಣಗಳಿಂದ ಊಹಿಸಲ್ಪಟ್ಟಿದೆ. ೧೧೮೦ರ ಸಮಯ ಮುಸಲ್ಮಾನರಲ್ಲಿ ಹಿಂದೀಕವಿಗಳಿಬ್ಬರಾಗಿದ್ದರೆಂದು ತಿಳಿಯುತ್ತದೆ. ಆದರೆ ಇವರಲ್ಲಿ ಯಾರ ಕವಿತೆಗಳೂ ಸಿಗುವುದಿಲ್ಲ. ಭೂಪಾಲನ ಶ್ರೀ ಭಗವದ್ಗೀತಾ ಅನುವಾದವು ಪದ್ಯರೂಪದಲ್ಲಿ ವಿರಚಿತವಾಗಿರುವುದು ಸಿಗುತ್ತದೆ. ಆದಕಾರಣ ಇವರೆಲ್ಲರನ್ನು ಪುರಾತನ ಕವಿಗಳೆಂದಷ್ಟೇ ಹೇಳಿ ಆದಿಕವಿಯ ಮಾನವನ್ನು "ಚಂದವರದಾಯಿ" ಯವರಿಗೆ ಸಲ್ಲಿಸುತ್ತೇವೆ.

ಹಿಂದೀ ಸಾಹಿತ್ಯದ ಜನನಕಾಲವು ಭಾರತೀಯ ರಾಜ್ಯಕ್ರಾಂತಿಯ ಸಮಯವಾಗಿತ್ತು. ಜನರ ಲಕ್ಷ್ಯವು ಪರಕೀಯ ಆಕ್ರಮಣಕಾರಿಗಳಿಂದ ತಮ್ಮ ರಕ್ಷಣೆಮಾಡಿಕೊಳ್ಳುವುದರಲ್ಲೇ ವ್ಯಗ್ರವಾಗಿತ್ತು. ಆದುದರಿಂದ ಸಾಹಿತ್ಯದ ಕಡೆಗೆ ಹೋಗದಿದ್ದುದು ಸ್ವಾಭಾವಿಕವೇ. ಅಂತಹ ವಿಕಟಸಮಯದಲ್ಲಿಯೂ ಜನರಿಗೆ ಸಾಹಿತ್ಯ ರುಚಿಯಿರಲಿಲ್ಲವೆಂದಲ್ಲ. ಆದರೆ ಆಗ, ಶೃಂಗಾರ ಕವಿತೆಗಳಿಗೆ ಗೌರವವಿರದೆ, ಖಡ್ಗ ಮತ್ತು ಲೇಖನಿಗಳೆರಡರಲ್ಲಿಯೂ ಸಿದ್ಧ ಹಸ್ತರಾದ ಕವಿಗಳಿಗೇನೇ ಆದರ ಸಿಗುತ್ತಿತ್ತು. ಇಂತಹ ಕವಿಗಳಲ್ಲಿ ಆದಿಕವಿ ಚಂದವರದಾಯಿಯವರೂ, ಅವರ ಸಮಕಾಲೀನರಾದ ಜಗನಿಕ ಮತ್ತು ಕೇದಾರರು ಉಲ್ಲೇಖನೀಯರು. "ಚಂದ"ನು ಕೇವಲ ಕವಿಯಾಗಿರದೆ, ಪೃಥ್ವೀರಾಜನ ಮಂತ್ರಿಯೂ, ವೀರಭಟನೂ ಆಗಿದ್ದನು. ಇವನಿಂದ ರಚಿತವಾದ "ಪೃಥ್ವೀರಾಜರಾಸೋ" ಎಂಬ ನವರಸಭರಿತವಾದ ಕಾವ್ಯವು ರಸಜ್ಞರಿಗೆ ರಸಿಕವಾಗಿದೆ. ಈ ರೀತಿ ನಾವು ಹಿಂದೀ ಸಾಹಿತ್ಯದ ಆದಿಕಾಲವನ್ನು ೧೦೦೦ದಿಂದ ೧೩೦೦ ತನಕವೆಂದು ಎಣಿಸುತ್ತೇವೆ. ಈ ಕಾಲದಲ್ಲಿ ವೀರಕಾವ್ಯ ರಚನೆಗಳೇ ಅಧಿಕವು.

ಅನಂತರ ಮಾಧ್ಯಮಿಕ ಕಾಲವು ಮೊದಲಾ[ಯಿತು]. ಇದನ್ನು ನಾವು ೧೩೦೦ ರಿಂದ ೧೫೦೦ ರ ತನ[ಕ], ೧೫೦೦ ರಿಂದ ೧೮೦೦ ತನಕ ಎರಡು ಭಾಗಗ[ಳಾ]ಗಿಸುತ್ತೇವೆ. ಈ ಕಾಲಗಳಲ್ಲಿ (ಆದಿಕಾಲ[ದಲ್ಲಿಯೂ]) ಕೇವಲ ಸಾಹಿತ್ಯಕ ದೃಷ್ಟಿಯಿಂದ ಕಾವ್ಯರಚ[ನೆ]ವೇ ಹೊರತು, ಇವುಗಳ ಮೂಲಕ [ಸಾ]ಸರ್ವಾಂಗೀಣಉನ್ನತಿಯಾಗಲಿಲ್ಲ. ಇವುಗಳ[ಲ್ಲಿ ...]ಜಿಕ, ವೈಜ್ಞಾನಿಕ, ಭೌಗೌಳಿಕ ಮೊದಲಾದ [...]ಗಳಿಂದ ಅಭಾವವೇ ತುಂಬಿತ್ತು. ಈ ಕಾಲಗಳ[ಲ್ಲಿ] ಪದ್ಯರಚನೆಯಾಗುತ್ತಿತ್ತೇ ಹೊರತು ಗದ್ಯ[ರಚನೆಯಾ]ಗುತ್ತಿರಲಿಲ್ಲ. ಈ ಮಾಧ್ಯಮಿಕ ಕಾಲದ [ಪೂರ್ವಾರ್ಧ]ದಲ್ಲಿ 'ಕಬೀರ'ರ ಹೆಸರು ಸುಪ್ರಸಿದ್ಧವಾಗಿ[ದೆ]. ಹಿಂದೂ ಮುಸಲ್ಮಾನರ ಐಕ್ಯ ಮತ್ತು ಸ[...] ಧರ್ಮದ ಹೆಸರಿನಿಂದ ನಡೆಯುತ್ತಿದ್ದ ಕೆಟ್ಟ[...]ಗಳನ್ನು ದೂರಮಾಡುವುದಕ್ಕಾಗಿ ಬಹಳ [...]ಪಟ್ಟರು. ಇವರ ಕವಿತೆಯು ಸರಳವಾಗಿ[ಯೂ] ವನೋದ್ದೀಪಕವಾಗಿಯೂ ಇರುತ್ತದೆ. [...] ಮಾಜಿಕ ಕ್ರಾಂತಿಕಾರರಲ್ಲಿ ಮೊದಲನೆಯ[...]ದು. ಕಾಶೀಯಲ್ಲಿ ಸತ್ತರೆ ಮುಕ್ತಿ ಎಂಬ [...] ಹಿಂದೂಗಳಲ್ಲಿ ಇಂದಿಗೂ ಪ್ರಚಲಿತವಾಗಿದೆ. ಇದು ಧಾರ್ಮಿಕ ತತ್ವಕ್ಕೆ ವಿರುದ್ಧವಾಗಿ[...] ಕಬೀರರು ಮನಗೊಂಡು, ಇದಕ್ಕೆ ಪ್ರತಿಯಾ[...] ಕಾಶೀವಾಸಿಗಳಾಗಿದ್ದಾಗ್ಯೂ ಅಂತ ಸಮಯ[ದಲ್ಲಿ ಮಗ]ಹರ ಎಂಬಲ್ಲಿಗೆ ಹೋದರು. ಆಗ [...]ನವರು ಕಬೀರಾ ಕಾಶೀಮರ್‍ಗೆ ತೋ ರಾಮ್ಕೆ ಕೌನನಿ[...] ಎಂದು ಸಮಾಧಾನ ಪಡಿಸಿದರಂತೆ! ಇವ[ರ ಅ]ನುಯಾಯಿಗಳು 'ಕಬೀರಪಂಥೀ' ಎನ್ನಿ[ಸು]ತ್ತಾರೆ. ಇವರ ಕಾಲ ೧೪೭೭.

ಇವರ ನಂತರ ಧಾರ್ಮಿಕ ಸಾಹಿತ್ಯಕ್ಕೆ [...]ಯಿತು. ಇದರ ಅಸ್ತಿಭಾರವು ಶ್ರೀ ರಾಮಾ[ನಂದರಿಂದ] (೧೪೫೬) ಹಾಕಲ್ಪಟ್ಟು ಅವರ ಶಿಷ್ಯರ[...] ವಲ್ಲಭಾಚಾರ್ಯರ (೧೫೬೦) ಕಾಲದಲ್ಲಿ [...]ಗೊಂಡಿತು.

ನಂತರದ ಉನ್ನತಿಯು ಭಕ್ತಿರಸಪ್ರಧಾ[ನ]ದಿಂದಾಯಿತು. ಇದರಲ್ಲಿ ಎರಡು ವಿಭಾಗ[ಗಳು]: ರಾಮ-ಕೃಷ್ಣ! ರಾಮಭಕ್ತಿ ಸರಿತೆಯ ಪ್ರವಾ[ಹವು] [...] ಕಾಲದಲ್ಲಿ ಬೆಳೆಯಿತು. [...] ಸೀದಾಸರ ಹೆಸರನ್ನು ತಿಳಿಯದ ಹಿಂದೂವಿಲ್ಲ

ಕಾಲವು ೧೬೩೧ ರಿಂದ ೧೬೮೦ ರ ತನಕವೆನ್ನಬಹುದು ಇವರು ವಾಙ್ಮಯದಲ್ಲಿ ಕವಿಗಳೂ, ಧರ್ಮದಲ್ಲಿ ಆಚಾರ್ಯರೂ ಆಗಿದ್ದರು. ಇವರಿಂದ ಉಪಕೃತವಾದಷ್ಟು ಹಿಂದೀ ವಾಙ್ಮಯ ಮತ್ತು ಹಿಂದೂ ಸಮಾಜವು ಬೇರೆಯವರಿಂದ ಆಗಿರಲಿಕ್ಕಿಲ್ಲ. ಇವರ ಪ್ರತಿಸ್ಪರ್ಧಿ ಕವಿಗಳು ಹಿಂದೀ ಸಂಸಾರದಲ್ಲಿ ಸಿಗುವುದು ವಿರಳ. ಶ್ರೀ ತುಲಸೀದಾಸರು ತಮ್ಮ ಕವಿತಾ ತರಂಗಿಣಿಯಲ್ಲಿ ಪ್ರಕೃತಿಯ ಯಥಾರ್ಥವಾದ ಮತ್ತು ಮನೋಹರವಾದ ವರ್ಣನದಿಂದ ಈಶ್ವರ ಪ್ರಕೃತಿ, ಶಾಂತರಸ, ಕಾವ್ಯಾಂಗಗಳ ಮತ್ತು ಭಕ್ತಿರಸದ ಗಂಭೀರ ತರಂಗಗಳನ್ನುಂಟುಮಾಡಿದರೆಂದು ಅವರ ಕವಿತಾಸರಿತೆಯಲ್ಲಿ ಅವಗಾಹಿಸಿದವನಿಗೆ ವಿದಿತವೇ ಆಗಿರುತ್ತದೆ. ಭಕ್ತಿರಸದ ಗಂಭೀರ ಭಾವಗಳು ಇವರ ಕವಿತೆಯ ಪ್ರತಿ ಪದದಲ್ಲೂ ಗೋಚರವಾಗುತ್ತಿವೆ ಇವರ ರಾಮಚರಿತಮಾನಸವೆಂಬ ಹಿಂದೀ ಮಹಾ ಕಾವ್ಯವು ಸುಪ್ರಸಿದ್ಧವಾಗಿದೆ. ಇದನ್ನಲ್ಲದೆ ಇನ್ನೂ ಅವರು ಸಾಧಾರಣ ೨೫ ಗ್ರಂಥಗಳನ್ನು ರಚಿಸಿದರು !

ಶ್ರೀ ಕೃಷ್ಣಪ್ರೇಮೋನ್ಮತ್ತ ಕವಿಗಳಲ್ಲಿ ಸೂರದಾಸರ ಹೆಸರು ಅಮರವಾಗಿದೆ. ಅವರ ಒಂದೊಂದು ಕೃತಿಗಳು ಶ್ರೀ ಕೃಷ್ಣನ ಪ್ರೇಮ ಸರಿತೆಯ ಒಂದೊಂದು ತರಂಗಗಳಾಗಿವೆ. ಅದರಲ್ಲಿರುವ ಅಲಂಕಾರ ಸೌಂದರ್ಯ, ಭಾವಸೌಷ್ಠವ, ಶೈಲೀ ಮಾಧುರ್ಯ ಇವು ಅಪ್ರತಿಮವಾಗಿವೆ. ಇವರು ಕೃಷ್ಣನಲ್ಲಿ ಪ್ರಾರ್ಥಿಸಿಕೊಂಡು ಆಮರಣವಾಗಿ ಅಂಧರಾಗಿದ್ದರು. ಇವರು ರಚಿಸಿದ 'ಸೂರಸಾದರ'ವೆಂಬ ಕಾವ್ಯವು ಸುಂದರವಾಗಿದೆ. ಇವರ ರಚನೆಯು ಒಂದೂಕಾಲುಲಕ್ಷದಷ್ಟಿದೆಯಂತೆ! ಇವರ ಕಾಲವು ೧೫೬೦ ಆಗಿರುತ್ತದೆ.

ಬಾದಶಹ ಅಕಬರನ ಆಸ್ಥಾನವು, ಸೌಭಾಗ್ಯಸದನವಾಗಿದ್ದಂತೆ, ಸರಸ್ವತೀ ಸದನವೆಂದೂ ಖ್ಯಾಂತಿಗೊಂಡಿತ್ತು. ಅಲ್ಲಿ ಮಂಡಿಸಿರುತ್ತಿದ್ದ ಕವಿಗಳ ಕವಿತಾಜ್ಯೋತಿಯು ಇಂದೂ ಹಿಂದೀ ವಾಙ್ಮಯ ಪ್ರಪಂಚವನ್ನು ಬೆಳಗಿಸುತ್ತಲಿದೆ. ಬೀರಬಲ, ತಾನಸೇನ, ಮಹಾಕವಿಗಂಗ, ಮತ್ತು ಖಾನ ಖಾನಾ ರಹೀಮರು ಪ್ರಸಿದ್ಧರು. ರಹಿಮನ ಮುಸ್ಲಿಮ್ ಹೃದಯವು ಶ್ರೀಕೃಷ್ಣನ ಪ್ರೇಮದಿಂದ ಆಕೃಷ್ಟವಾಗಿ—ಕೃಷ್ಣಮಯವಾಗಿತ್ತು. ಈತನ ಕವಿತೆಗಳು ಹಿಂದೂ-ಮುಸ್ಲಿಮ್ ಐಕ್ಯವನ್ನು ಸಾಧಿಸುವುದಕ್ಕಾಗಿ ಬಹಳ ಉಪಯೋಗಗಳಾದುವು. ಅವನ ಹೃದಯವು ಸಾಂಸಾರಿಕ ವ್ಯವಹಾರದಿಂದ ಹೆದರುತ್ತಿತ್ತು. "ಸಾಂ ಚೇಸೇ ತೋ ಜಗನಾಹೀಂ—ಝೂಠೇ ಮಿಲ್ಯೆಂ ನ ರಾಮ ?"

೧೬೪೮ ರಿಂದ ೬೮ ರ ತನಕ 'ಹಿಂದೀ ಆಚಾರ್ಯ' ಕೇಶವದಾಸರ ಅಖಂಡವಾದ ಕವಿತಾ ತರಂಗಿಣಿಯು ಹಿಂದೀ ವಾಙ್ಮಯ ಕ್ಷೇತ್ರವನ್ನು ಸಮೃದ್ಧವಾಗಿಟ್ಟಿತು. ಇವರ ರಚನಾಪ್ರಣಾಲಿಯು ಪ್ರಾಯಶಃ ಕ್ಲಿಷ್ಟ ಮತ್ತು ಶ್ಲಿಷ್ಟವಾಗಿರುತ್ತದಾದಕಾರಣ ಅಲ್ಪಜ್ಞರು ನಿಕೃಷ್ಟವೆನ್ನುತ್ತಾರೆ. ಆದರೆ ವಸ್ತುತಃ ಹಾಗಿಲ್ಲ ಇವರು ರಾಜಕವಿಗಳಾಗಿದ್ದರು. ಇವರು ಸಂಸ್ಕೃತದ ಪ್ರಕಾಂಡ ಪಂಡಿತರಾಗಿದ್ದ ಕಾರಣ ಹಿಂದೀಯಲ್ಲೂ ಇವರ ಸಂಸ್ಕೃತ ಪಾಂಡಿತ್ಯವು ಗೋಚರಿಸುತ್ತಿದೆ. ಇವರ ಕವಿತೆಗಳು ಸಾಮಾನ್ಯರಿಗಾಗಿ ರಚಿತವಾಗಿರದೆ, ಬುದ್ಧಿವಂತರಿಗೆ ಮಾತ್ರ ಅದರಲ್ಲಿ ಪ್ರವೇಶ ಇದೆಯೆಂದರೆ ಅತ್ಯುಕ್ತಿ ಆಗದು.

ಈ ಕಾಲದಲ್ಲಿ ಅಕಬರನ ದರ್ಬಾರಿನಿಂದ ಹಿಂದೀಗೆ ಅನುಪಮ ಸಹಾಯವಾಯಿತು. ಇದೇ ಕಾಲವು ಇಂಗ್ಲೆಂಡಿನ ಎಲಿಜಬೆತ್‌ಳ ಸಮಯ. ಅಲ್ಲಿಯೂ ಈ ಮಹಾರಾಣಿಯ ಕಾಲದಲ್ಲಿ ಸಾಹಿತ್ಯದ ಉನ್ನತಿಯು ಸಂತೋಷಕರವಾಗಿ ಆಗುತ್ತಿತ್ತು. ಈ ಕಾಲದಲ್ಲಿ ಕೃಷ್ಣಪರವರ್ಣನವೂ, ರಾಮಪರವರ್ಣನವೂ ವಿಶೇಷದಲ್ಲಿತ್ತು. ಮೊದಲು ವ್ರಜಭಾಷೆಯ ಆಧಿಕ್ಯವೂ ತುಲಸೀಗಳ ಕಾಲದಲ್ಲಿ ಅವಧೀ ಪ್ರಾಚುರ್ಯವೂ ಪ್ರಬಲವಾಯಿತು.

ಮಾಧ್ಯಮಕಾಲದ ಉತ್ತರಾರ್ಧದಿಂದ ಪದ್ಯದೊಡನೆ ಗದ್ಯರಚನೆಯು ಆಂಶಿಕ ರೂಪದಿಂದ ಆಗತೊಡಗಿತು.

ಈಕಾಲದಲ್ಲಿಯೂ ಮೊದಲು, ಜಹಾಂಗೀರ್, ಷಹಾಜಹಾರಿಂದ ಹಿಂದೀಯು ಗೌರವಿಸಲ್ಪಟ್ಟಿತಾದರೂ, ಔರಂಗಜೇಬನಿಂದ ತಿರಸ್ಕೃತವಾಗಿ ಫಾರ್ಶಿಯೇ ಮರ್ಯಾದಿಸಲ್ಪಟ್ಟಿತು. ಆದಕಾರಣ, ಇಂದಿನವರೆಗೆ ಹಿಂದೀ ವಾಙ್ಮಯದಲ್ಲಿ ನ್ಯೂನವಾಗಿದ್ದ ಭಾಗಗಳಲ್ಲೊಂದಾದ ಜಾತೀಯ ಸಾಹಿತ್ಯವು ಔರಂಗಜೇಬನ ಹಿಂದೀ ದ್ವೇಷದಿಂದ ಬೆಳೆಯಲು ಮೊದಲಾಯಿತು. ಈ ಬೆಳವಣಿಗೆಯು ಸಂಪೂರ್ಣವಾಗಿ ಆಗಲಿಲ್ಲವೆಂಬುದು ನಿಜ.

ಈ ಕಾಲವು ಆದಿಕಾಲದಂತೇ ವೀರರಚನಾಕಾಲವಾಗಿತ್ತೆನ್ನುವುದರ ಜೊತೆಗೆ ನವರಸರಸಿಕವೆಂದೂ ಅನ್ನಬೇಕು. ಸೇನಾಪತಿ ಕವಿಯ ಓಜಸ್ವಿನಿಯಾದ ವಾಣಿಯೂ ರಾಜಾ ಜಸವಂತರ ಶಾಸ್ತ್ರೀಯ ರಚನೆಗಳು, (೧೬೮೧-೧೭೦೬) ಕದನಧಾರಾಪ್ರವಾಹನಾಗಿದ್ದುವು.

ಬಿಹಾರೀಲಾಲರ ಹೆಸರು, ಹಿಂದೀ ವಾಙ್ಮಯ ಕ್ಷೇತ್ರದಲ್ಲಿ ದೃಢಮೂಲವಾಗಿದೆ. ಇವರ ರಚನೆಯು, ಅಮೋಘವೂ, ಹೃದಯಗ್ರಾಹಿಣಿಯೂ, ಭಾವನೋತ್ಕಟವೂ ಆಗಿರುತ್ತದೆ. ಇವರು ರಚಿಸಿದ ಕಾವ್ಯವು 'ಬಿಹಾರೀ ಸತ ಸ ಈ' ಎಂಬುದೊಂದೇ. ಆದರೆ, ಇವರು ಇಷ್ಟು ಚಿಕ್ಕ ಗ್ರಂಥದಲ್ಲಿ 'ಕೊಡದಲ್ಲಿ ಕಡಲು' ಎಂಬ ನಾಣ್ಣುಡಿಯನ್ನು ಸಾರ್ಥಕಪಡಿಸಿದ್ದಾರೆ. ಇವರ ಕವಿತೆಗಳು, ಆಲಂಕಾರಿಕ ಮತ್ತು ಭಾವಪ್ರದರ್ಶನದಲ್ಲಿ ಅನುಪಮಗಳಾಗಿರುತ್ತವೆ. ಇವರು 'ಹಿಂದೀ ಶೃಂಗಾರ'ರಾಗಿದ್ದರೆಂದರೆ ಅತಿಶಯೋಕ್ತಿಯಾಗದು.

ಭೂಷಣಕಾಲವು ಹಿಂದೀ ಭೂಷಣ ಮಾತ್ರವಲ್ಲದೆ ಹಿಂದೂ ಭೂಷಣವಾಗಿತ್ತು. ಭೂಷಣ ಕವಿಯ ಕವಿತೆಗಳು ಹಿಂದೂ ಪಾದಶಾಹಿಯ ಸ್ಥಾಪನೆಗೆ ಅತ್ಯಂತ ಉಪಯೋಗಿಗಳಾದುವು. ಇವನು ಛತ್ರಪತಿ ಶಿವಾಜಿ ಮಹಾರಾಜರ ರಾಜಕವಿಯೂ, ವೀರ ಭಟನೂ ಆಗಿದ್ದನಂತೆ! ಇವನ ಕವಿತೆಗಳಲ್ಲಿ ರಾಷ್ಟ್ರೀಯತೆ ಜಾತೀಯತೆಗಳು ಹೊರಸೂಸುತ್ತಿರುವಷ್ಟು ಬೇರೊಂದರಲ್ಲಿಲ್ಲ. ಇವನ ಕವಿತೆಗಳು ಸಾಕ್ಷಾತ್ ವೀರರಸದ ಪ್ರತಿಮೂರ್ತಿಗಳೇ ಆಗಿರುತ್ತವೆ. ಇವನ ಕಾಲವು ೧೭೩೧ ರಿಂದ ಮೊದಲಾಗುವುದು. ಇವನು ಶಿವರಾಜಭೂಷಣ, ಭೂಷಣ ಹಜಾರಾ, ಭೂಷಣ ಉಲ್ಲಾಸ ಎಂಬ ಗ್ರಂಥತ್ರಯವನ್ನು ರಚಿಸಿ ಹಿಂದೀ ಸಾಹಿತ್ಯ ದೇವಿಗೆ ರತ್ನತ್ರಯವನ್ನು ಸಮರ್ಪಿಸಿರುತ್ತಾನೆ. ಇವನ ಜೀವಮಾನವು ೧೦೨ ವರ್ಷದ ತನಕವಾಗಿತ್ತಂತೆ!

ಇವನ ಸಹೋದರ ಮತಿರಾಮನ ಕವಿತೆಗಳು, ಪ್ರಾಸಾದಗುಣಪೂರ್ಣವಾಗಿದ್ದು, ಶೃತಿ ಮಧುರವಾಗಿರುತ್ತವೆ.

ಹಿಂದೀ ವಾಙ್ಮಯಾಕಾಶದಲ್ಲಿ ಸೂರ-ತುಲಸೀಯವರನ್ನು 'ಸೂರ್ಯ-ಚಂದ್ರ'ರೆಂದು ಗೌರವಿಸುತ್ತಿರುವಾಗ 'ಆಕಾಶ' ನೆಂದು ಯಾರನ್ನು ಮರ್ಯಾದಿಸಬೇಕು ಎಂದರೆ, ಆ ಮಾನವು 'ಕವಿದೇವ' ನಿಗೆ ಸಲ್ಲಬೇಕೆನ್ನಬಹುದು! ಸೂರ, ತುಲಸೀ, ದೇವ ಇವರನ್ನು ನವರತ್ನಗಳಲ್ಲಿ ಆರಿಸಿದೆ. ರತ್ನತ್ರಯುಗಳೆಂದು ಹಿಂದೀ ಪಂಡಿತರು ಗೌರವಿಸುತ್ತಾರೆ ಈ ದೇವ ಕವಿಯ ಕಾಲವು ೧೭೫೭ರಿಂದ ಮೊದಲಾಗುವುದು. ಈ ಕಾಲದಲ್ಲಿ ಭಕ್ತ ಮೀರಾ, ಆಚಾರ್ಯ ಮನೀರಾಮ, ಗುರು ನಾನಕ, [illegible] ಹೆಸರು ಪ್ರಸಿದ್ಧವಾಗಿದೆ. ಈ ಕಾಲದಲ್ಲಿ ಸಂಸ್ಕೃತ ಗ್ರಂಥಗಳಲ್ಲಿ, ಕೆಲವು ಪೌರಾಣಿಕ, ಸಾಹಿತ್ಯಿಕ
ಅನುವಾದವಾಯಿತು. ಧರ್ಮಶಾಸ್ತ್ರ, ಜ್ಯೋ
ಭಾಷಾಂತರಗಳು ರಚಿತವಾದವು. ಮಧ್ಯಕಾ
ದುರಂಧರರ ಸಂಖ್ಯೆಯನ್ನು ಕೊಡುವುದು
ಧ್ಯವಾಗಿರುತ್ತದೆ.

ಈ ಕಾಲದಲ್ಲಿ ಮೊದಲು, ಸಂಸ್ಕೃ
ನಂತರ ವ್ರಜ-ಅವಧೀಮಿಶ್ರಿತ ಹಿಂದೀಯ
ಗಳಾಗುತ್ತಿದ್ದುವು. ಕೊನೆಗೆ ಸಂಸ್ಕೃತವೇ
ಬಂದಿತು. ಈ ಸಮಯದಲ್ಲಿಯೇ 'ಖಡೀ
ಯಲ್ಲಿ ಕಾವ್ಯರಚನೆಗೆ ಮೊದಲಾಯಿತು.
ಆದಿಕವಿಯು 'ಖುಸರೋ' ಎಂಬುವನು.
ಮದ ಕಾಲನಿರ್ಣಯವಿನ್ನೂ ಸಂದಿಗ್ಧವಾಗಿ
ಇದು ಒಂದು ಹಿಂದೀಯ ಭೇದವೆಂದಿಷ್ಟೇ
ದರಿಯುವೆವು. ಇದರ ಪೂರ್ಣವಿಕಾಸ
ಮಾನಕಾಲದಲ್ಲೇ ಆಯಿತು.

## ಆಂಗ್ಲರ ಪ್ರಭಾವ

೧೮೦೦ ರಿಂದ ನಾವು ವರ್ತಮಾನಕಾಲ
ಸುತ್ತೇವೆ. ಇದರ ಆದಿಕಾಲದಲ್ಲಿ 'ವೇಣೀ
ರೆಂಬ ಕವಿಗಳಾದರು. ಈ ಸಮಯದಿಂ
ಸಾಹಿತ್ಯದ ಮೇಲೆ ಆಂಗ್ಲೇಯರ ಪ್ರಭಾವ
ತೊಡಗಿತು. ಛಾಪಖಾನೆಗಳ ಸ್ಥಾಪನೆಯ
ಇದರಿಂದ ಆದ ಉಪಕಾರವು ಜಗತ್ತಿಗೇ
ಗಿದೆ. ಆದರೆ ಆಂಗ್ಲೇಯರ ಶಾಂತಿಯ
ಚಿರಸ್ಥಾಯಿಯಾದ ಫಲವಾಗಿ 'ಶಾಂತಿ'
ಭೀರುತೆಯಲ್ಲಿ ಪರ್ಯವಸಾನಗೊಂಡಿತು!
ದೇಶದ ಸ್ವಾತಂತ್ರ್ಯ ಸಂಗ್ರಾಮವೆಂದು
ಡುವ ಸಿಪಾಹೀ ವಿದ್ರೋಹದ ಕುರಿತಾಗಿ
ಒಂದು ರಚನೆಯೂ ಇಲ್ಲದಿರುವುದೇ ಇದರ
ವಾಗಿದೆ.

ಈ ಕಾಲದನಂತರ ಸ್ವಾಮೀ ದಯಾ
ಕ್ರಾಂತಿಕಾರೀ ಧಾರ್ಮಿಕ ಸಾಹಿತ್ಯದಿಂದ
ಅನುಪಮಸೇವೆ ಮಾಡಿದರು. ಇದೇ ಸಮ
ಪದ್ಯಕ್ಕೆ ಹ್ರಾಸವೂ, ಗದ್ಯಕ್ಕೆ ಉದಯಕಾ
ಗಿತು. ಈಗ ಆಂಗ್ಲೇಯರ ಸಹವಾಸದ
ಸಾಹಿತ್ಯಕ್ಷೇತ್ರದಲ್ಲಿ ಹಲವು ಪರಿವರ್ತನೆ
ದವು. ಇಂದಿನಿಂದಲೇ ಹಿಂದೀ ವಾಙ್ಮ
ಚಿಕ ಉನ್ನತಿ ಸಾಧಕವಾದ ಅಂಗಗಳು

ತೊಡಗಿದುವು. ಇದರಿಂದ ಹಿಂದೀ ಭಾಷೆಗೆ ಜಗತ್ತಿನ ಸ್ವರೂಪದರ್ಶನದ ಸಂಯೋಗವೊದಗಿತು. ೧೮೫೦ರಿಂದ ಪ್ರೆಸ್ಸುಗಳ ಸ್ಥಾಪನೆಯಾದಕಾರಣ ಗ್ರಂಥಾಭಿವೃದ್ಧಿಗೆ ಅನುಕೂಲವಾಯಿತು. ಕಲಾಕೌಶಲ್ಯದ ಅಭಿವೃದ್ಧಿಯಾದಂತೇ ತತ್ಸಂಬಂಧ ಸಾಹಿತ್ಯವೂ ವೃದ್ಧಿಗೊಳ್ಳತೊಡಗಿತು. ಈ ೧೮೫೦ರಿಂದ ಮೊದಲಾಗುವ ಕಾಲವನ್ನು ಎರಡು ಭಾಗಗಳನ್ನಾಗಿ ವಿಂಗಡಿಸುತ್ತೇವೆ. ಭಾರತೇಯ ಕಾಲ ಮತ್ತು ಗದ್ಯಕಾಲವೆಂದು. ಈ ಕಾಲದಲ್ಲಿ ಪದ್ಯರಚನೆಯೇ ಇಲ್ಲವೆಂದಲ್ಲ; ಆದರೆ ಗದ್ಯಕ್ಕೆ ಪ್ರಾಧಾನ್ಯತೆಯಿರುವಕಾರಣ ಹೀಗೆನ್ನಬೇಕಾಯಿತು.

## ಭಾರತೇಂದು

ಭಾರತೇಂದುಗಳು ಹಿಂದೀ ವಾಙ್ಮಯವನ್ನು ತಮ್ಮ ೩೪ ವರ್ಷಗಳ ಕಾರ್ಯಪ್ರಭಾವದಿಂದ ಉಪಕೃತ ಮಾಡಿದಷ್ಟು ಹಿಂದಿನ ಆಖಂಡಕಾಲದಲ್ಲೂ ಯಾರಿಂದಲೂ ಆಗಲಿಲ್ಲ. ಇವರೇ ಹಿಂದೀ ನಾಟಕಪ್ರವರ್ತಕರೆಂದು ಹೇಳಬೇಕು. ಇವರ ಮುಂಚೆ ಒಂದೆರಡು ಸಂಸ್ಕೃತ ನಾಟಕಗಳು ಅನುವಾದಿತವಾಗಿದ್ದುವಾದರೂ ಸ್ವತಂತ್ರ ನಾಟಕಗಳು ಇವರಿಂದಲೇ ಮೊದಲ್ಗೊಂಡುವು. ಇವರು ಗದ್ಯ-ಪದ್ಯ ರಚನೆಗಳೆರಡರಲ್ಲೂ ಪ್ರತಿಭಾಸಂಪನ್ನ ಸಿದ್ಧಹಸ್ತರಾಗಿದ್ದರು. ಇವರು ರಚಿಸಿದ ನಾಟಕಗಳು ೧೮ ಆಗಿದ್ದು ಇವರ ಚಿಕ್ಕ ದೊಡ್ಡ ಗ್ರಂಥಗಳ ಸಂಖ್ಯೆಯು ೧೭೫ ರಷ್ಟಿದೆ! ಈ ಕಾಲದಲ್ಲಿ ಶ್ರೀಧರ ಪಾಠಕ, ಚಿಂಚೋಲಕರ, ಬಾಲಕೃಷ್ಣಭಟ್ಟ ಮೊದಲಾದ ಅದ್ವಿತೀಯ ಕವಿವರರಾಗಿದ್ದರು. ಇವರಲ್ಲಿ ಹಲವರು ಭಿನ್ನ ಭಾಷಾಭಾಷಿಗಳಾಗಿದ್ದರು. ಮುನ್ಷೀದೇವೀ ಪ್ರಸಾದರು ಕವಿಗಳೂ, ಇತಿಹಾಸ ಸಂಗ್ರಾಹಕರೂ ಆಗಿದ್ದು ಉತ್ತಮ ಲೇಖಕರಾಗಿದ್ದರು.

## ಪತ್ರಸಂಪಾದನಕಲಾತರಂಗಿಣಿ

ಈ ಸಮಯದಲ್ಲಿಯೇ ಹಿಂದೀ ವಾಙ್ಮಯ ಸಾಹಿತ್ಯಕ್ಕೆ ಪತ್ರಸಂಪಾದನ ಕಲಾತರಂಗಿಣಿಯೂ ಸೇರಿತು. ಆದರಿಂದ ಆದ ವಾಙ್ಮಯದ ಅಭಿವೃದ್ಧಿಯು ಆಶಾತೀತವಾಗಿದೆಯೆನ್ನಬಹುದು. ಇಂದು ಹಿಂದೀ ವಾಙ್ಮಯದಲ್ಲಿ ಭಿನ್ನಭಿನ್ನ ವಿಷಯಕವಾದ ಉಚ್ಚಕೋಟಿಯ ಸಕಲವು, ಮಾಸಿಕ, ತ್ರೈಮಾಸಿಕ, ಪತ್ರ, ಪತ್ರಿಕೆಗಳಿರುವುದಲ್ಲದೆ ದೈನಿಕ, ಸಾಪ್ತಾಹಿಕ ವೃತ್ತಪತ್ರಗಳ ಸಂಖ್ಯೆಯು ಸಮರ್ಪಕವಾಗಿದೆ. ಹಿಂದೀ ಸಾಮಯಿಕ ಮತ್ತು ಸಾಹಿತ್ಯಕ ಪತ್ರ-ಪತ್ರಿಕೆಗಳು ಕೇವಲ ಹಿಂದೀ ತಾಯ್ನುಡಿಯಾಗಿರುವ ಪ್ರಾಂತದಲ್ಲೇ ಆಗಿರದೆ, ಪಂಜಾಬ್, ಬಂಗಾಳ, ಮಹಾರಾಷ್ಟ್ರ, ಗುಜರಾತ್, ಮದರಾಸ್, ಪ್ರಾಂತಗಳಲ್ಲಿಯೂ ನಡಿಯುತ್ತಲಿವೆ. ಇಂದಿನ ಯುಗದ ವಿಷಯವು 'ರಾಜಕೀಯ' ವಾಗಿರುವುದರಿಂದ ಈ ವಿಷಯದಲ್ಲಿ ಈ ಕ್ಷೇತ್ರವು ಮುಂದುವರಿಯುವಷ್ಟು ಬೇರೊಂದರಲ್ಲಿಲ್ಲವೆನ್ನಬಹುದು. ಸಾಮಾಜಿಕ, ಸಾಹಿತ್ಯಕ ಕ್ಷೇತ್ರಗಳಲ್ಲಿಯೂ ಉತ್ತಮ ತರಗತಿಯ ಪತ್ರ-ಪತ್ರಿಕೆಗಳಿವೆ. ಹಾಗೆಯೇ ಆಯುರ್ವೇದ, ಸಂಗೀತ, ವಿಜ್ಞಾನ ಧರ್ಮ ಇವುಗಳಿಗಾಗಿ ಪ್ರತ್ಯೇಕ ಪ್ರತ್ಯೇಕ ಸ್ವತಂತ್ರ ಪತ್ರಿಕೆಗಳಿವೆ. ಈ ಪತ್ರ-ಪತ್ರಿಕೆಗಳ ಮತ್ತು ಅವುಗಳ ಸುಯೋಗ್ಯ ಸಂಪಾದಕರ ಉಲ್ಲೇಖ ಮಾಡುವುದು ಈ ಸ್ಥಳ ಮರ್ಯಾದೆಯಲ್ಲಿ ಅಸಾಧ್ಯವಾಗಿರುತ್ತದೆ.

## ನವಯುಗ

ವರ್ತಮಾನ ಹಿಂದೀ ವಾಙ್ಮಯದ ಭಿನ್ನಾಭಿನ್ನ ಭಾಗಗಳಲ್ಲಿಯೂ ಪ್ರಗತಿಯಾಗುತ್ತಲಿದೆ. ನಾಟಕ, ಕಾದಂಬರೀ ವಿಜ್ಞಾನ, ಅರ್ಥಶಾಸ್ತ್ರ, ಇತಿಹಾಸ, ಚರಿತ್ರಾತ್ಮಕ ಮೊದಲಾದ ವಿಭಾಗಗಳ ದಿಗ್ದರ್ಶನ ಮಾಡುವುದು ಪ್ರಕೃತ ಸಾಧ್ಯವಾಗುವ ಹಾಗಿಲ್ಲವಾದ ಕಾರಣ ಕೆಲವು ಮುಖ್ಯ ಲೇಖಕರ ನಾಮಲೇಖವನ್ನು ಮಾತ್ರ ಇಲ್ಲಿ ಮಾಡುವುದಕ್ಕೆ ನಾವು ಬಾಧ್ಯವಾಗಿದ್ದೇವೆ.

ಶ್ರೀ ಮಹಾವೀರ ಪ್ರಸಾದ ದ್ವಿವೇದೀಗಳು 'ಹಿಂದೀ ಮಹಾರಥೀ' ಯೆಂದು ಸುಪ್ರಸಿದ್ಧರಾಗಿದ್ದಾರೆ. ಇವರ ಪ್ರವೇಶವಿಲ್ಲದ ವಾಙ್ಮಯಕ್ಷೇತ್ರವಿಲ್ಲ. ಇವರಿಂದ ಲಿಖಿತ ಮತ್ತು ಸಂಪಾದಿಕ ಗ್ರಂಥಗಳ ಸಂಖ್ಯೆಯು ೮೦ ಕ್ಕಿಂತ ಹೆಚ್ಚಿದೆ.

ಶ್ರೀ ಅಯೋಧ್ಯಾಸಿಂಹ ಉಪಾಧ್ಯಾಯರು 'ಖಡೀಬೋಲೀ' ಯ (ಹಿಂದೀ ಭೇದ) ಉತ್ತಮ ಕವಿಗಳು. ಇವರ 'ಪ್ರಿಯಪ್ರವಾಸ' ಕಾವ್ಯವು ಹಿಂದೀ ವಾಙ್ಮಯದಲ್ಲಿ ನೂತನ ಕ್ರಾಂತಿಯನ್ನೇ ಉಂಟುಮಾಡಿರುತ್ತದೆ.

ಶ್ರೀ ಕಿಶೋರೀಲಾಲ, 'ದೀನ' 'ರತ್ನಾಕರ' 'ಪೂರ್ಣ' 'ಭಗವಾನದಾಸ' 'ಮಿಶ್ರ' 'ಪೊದ್ದಾರ,

'ವೀರ' 'ರಾಮದಾಸಗೌಡ' 'ನವರತ್ನ' 'ಪುರುಷೋತ್ತಮದಾಸ ಟಂಡನ್' 'ಶುಕ್ಲ' 'ಸನೇಹೀ' 'ಪಾಂಡೇಯ' 'ಮೈಥಿಲೀಶರಣಗುಪ್ತ' ತ್ರಿಪಾಠೀ, 'ವಿಕಸಿತ' 'ವಿಯೋಗಿಹರಿ' 'ಕುಸುಮ' 'ನವೀನ' 'ಉಗ್ರ' 'ನಟವರ' 'ವಿಯೋಗೀ' ಇವರೇ ಮೊದಲಾದವರು ಖಡೀ ಬೋಲೀಯ ಕವಿಗಳೂ, ಉತ್ತಮ ಲೇಖಕರೂ, ಸಾಹಿತ್ಯ, ವಿಜ್ಞಾನ, ಛಾಯಾವಾದ, ನಾಟಕ, ಕಾದಂಬರೀ ಮೊದಲಾದ ಭಾಗಗಳಲ್ಲಿ ಹಿಂದೀವಾಙ್ಮಯ ವರ್ಧಕರೂ ಆಗಿರುತ್ತಾರೆ. ರಾಜನೈತಿಕ ಲೇಖಕರಲ್ಲಿ, ಕಾಲೀಲಕರ, ಜವಾಹಿರಲಾಲ, ದೇಸಾಈ, ಜೋಶೀ, ಗಣೇಶ್ಶಂಕರ ವಿದ್ಯಾರ್ಥಿ 'ಮಿಶ್ರ' ಇಂದ್ರ, ಕೃಷ್ಣಕಾಂತ ಮಾಲವೀಯ, ಶ್ಯಾಮಸುಂದರ ದಾಸ್, ಮೊದಲಾದ ಗಣ್ಯಮಾನ್ಯ ಹಿಂದೂ ಮುಸಲ್ಮಾನ ಲೇಖಕರು ಪ್ರಸಿದ್ಧರಾಗಿದ್ದಾರೆ. ಇವರಲ್ಲ ಅನೇಕರು ಪತ್ರಸಂಪಾದಕರೂ, ಮಹಾಕವಿಗಳೂ, ವಿಶ್ವವಿದ್ಯಾನಿಲಯಗಳ ಆಚಾರ್ಯರೂ, ಆಗಿರುತ್ತಾರೆ. ಸಾಮಾಜಿಕ ಲೇಖಕರಲ್ಲಿ ಶ್ರೀ ರಾಮರಖಸಿಂಗಸಹಗಲರ ಹೆಸರು ಸುಪ್ರಸಿದ್ಧವಾಗಿದೆ. ಮಹಾತ್ಮಾಜೀಯವರ ಹೆಸರನ್ನು ಯಾವ ಲೇಖಕರೆನ್ನುವುದೋ ತೋರುವುದಿಲ್ಲ. ಕಾರಣ ಅವರು ಬರಿಯದ ವಿಷಯವಿಲ್ಲ. ಅವರು ಬರೆದಿರುವ ಸಾಹಿತ್ಯ, ಧಾರ್ಮಿಕ ಮೊದಲಾದ ಗ್ರಂಥಗಳ ವಿಮರ್ಶೆಯನ್ನು ಓದಿದರೆ ಇವರನ್ನು ಒಂದು ಶಾಖೆಯ ಮರ್ಯಾದಿತ ಲೇಖಕರೆನ್ನುವುದಸಾಧ್ಯ.

ಕಾದಂಬರೀ ಲೇಖಕರಲ್ಲಿ ಶ್ರೀ ಪ್ರೇಮಚಂದ ಬಿ. ಎ. ಯವರು ಅಪ್ರತಿಮರಾಗಿದ್ದಾರೆ. ಇವರಿಗೆ ಹಿಂದೀ ಪಂಡಿತರು 'ಉಪನ್ಯಾಸ ಸಮ್ರಾಟ್' ಎಂದು ಗೌರವಿಸುತ್ತಾರೆ. ಇವರು 'ಹಂಸ' ಎಂಬ ಮಾಸಿಕ ಪತ್ರಿಕೆಯ ಸಂಪಾದಕರು. ನಾಟಕ ವಿಭಾಗದಲ್ಲಿ ಶ್ರೀ ರಾಧೇಶ್ಯಾಮ, ಈಶ್ವರೀ ಪ್ರಸಾದರ ಹೆಸರುಗಳು ಸುಪ್ರಸಿದ್ಧವಾಗಿವೆ.

ಹಿಂದೀ ಸಾಹಿತ್ಯ ಸಮ್ಮೇಳನದ ಅಧಿವೇಶನಗಳು ಕ್ರಮವಾಗಿ ನಡಿಯುತ್ತಲಿದ್ದು ಹಿಂದೀ ವಾಙ್ಮಯದ ಅಭಿವೃದ್ಧಿಯು ಈ ಸಂಸ್ಥೆಯಿಂದ ಉತ್ತಮರೀತಿಯಾಗಿ ಸಂಪಾದಿಸಲ್ಪಡುತ್ತಿದೆ. ಈ ಸಮ್ಮೇಳನವು ಉತ್ತಮೋತ್ತಮ ಗ್ರಂಥಸಂಗ್ರಹ, ಗ್ರಂಥರಚನೆ, ಪತ್ರಸಂಪಾದನಗಳನ್ನು ನಡಿಸುತ್ತಿದ್ದು, ಸಂಸ್ಥೆಯ ಕಡೆಯಿಂದ ಪ್ರತಿವರ್ಷವೂ ಹಿಂದೀ ಪರೀಕ್ಷೆಗಳು ನಡಿಯುತ್ತಲಿದೆ.

## ರಾಷ್ಟ್ರಭಾಷೆ

ಹಿಂದೀ ವಾಙ್ಮಯದ ಮುಖ್ಯ ವಿಶೇಷಗಳ... ಹಿಂದೂಸ್ಥಾನಿಗಳಿಗೆ ಹಿಂದೀ ಒಂದನ್ನು ಕಲಿತನಂ... ರಿಂದಲೇ ಜಗತ್ತಿನ ವಾಙ್ಮಯ ದರ್ಶನವನ್ನು ಸವಾ... ಬಹುದು. ಹಿಂದೀಯಲ್ಲಿ ಭಾರತೀಯ ವಾಙ್ಮಯ... ದಲೂ, ಇತರ ವಿದೇಶೀಯ ವಾಙ್ಮಯಗಳಿಂದರಾ... ದಿನೇ ದಿನೇ ಅನುವಾದಗಳು ಉತ್ತಮವಾಗಿನಾಲ... ಆಗುತ್ತಲಿವೆ ಈ ತರಹದ ಸೌಲಭ್ಯವನ್ನು... ಯಾವ ಭಾರತೀಯ ಭಾಷೆಯಲ್ಲೂ ಇಲ್ಲವೆಂದು... ದೇಹವಾಗಿ ಹೇಳಬಹುದು. ಹಿಂದಿಯೇ... ದೇಶದ ರಾಷ್ಟ್ರಭಾಷೆಯೆಂದು ಮೊದಲೇ... ಸಿದ್ಧವಾಗಿತ್ತಾದರೂ, ಇವರ ಆವಶ್ಯಕತೆ, ... ಕ್ತತೆ, ಅರ್ಹತೆಯನ್ನು ಮಹಾತ್ಮಾಜೀಯವ... ತೆಗೆ ತೋರಿಸಿದರು. ಇದಕ್ಕೆ ಮೊದಲೇ... ಮಾನ್ಯ ತಿಲಕರೂ ಹಿಂದಿಯೇ ಹಿಂದೂಸ್ಥಾನ... ಭಾಷೆಯೆಂದು ಹೇಳಿದ್ದರು

ಹಿಂದಿಯು ಭಾಷಾದೃಷ್ಟಿಯಿಂದ ಮತ್ತು... ದೃಷ್ಟಿಯಿಂದ ಹಿಮಾಲಯದಿಂದ ಮಹಾ... ವರೆಗೂ, ಪರಿಚಿತವಾಗಿದೆ. ಇಲ್ಲವೆಂದರೆ... ದೇಶಗಳಲ್ಲಿ. ಇಂದು ಹಿಂದಿಯ ರಾಷ್ಟ್ರ... ಕಾರವು ಸಿದ್ಧವಾಯಿತು. ರಾಷ್ಟ್ರಪತಿ ಜವಾಹಿ... ಲರು, ರಾಷ್ಟ್ರಪತಿಯ ಭದ್ರಾಸನದಿಂದ ತಮ್ಮ... ಘುಭಾಷಣವನ್ನು ಹಿಂದೀಯಲ್ಲಿ ಮಾಡಿದರು.

ಇಂತು ಆದರ್ಶ ಪುರುಷರ ಬೆಂಬಲ... ಹಿಂದಿಯು ಹಿಂದಾಗದು. ಇಂದು ... ಹಿಂದೀಭಾಷೆಯೇ ಹಿಂದೂದೇಶದ ರಾಷ್ಟ್ರಭಾ... ಮನಗಂಡಂತೆ ಕಾಣಬರುತ್ತಲಿದೆ. ಅಲ್ಲಲ್ಲಿ... ವಿದ್ಯಾಇಲಾಖೆಗಳಲ್ಲಿ ಹಿಂದಿಗೂ ಸ್ಥಾನ ದೊ... ಗಿದೆ. ಈ ರೀತಿಯಲ್ಲಿ ಜನತೆ ಮತ್ತು ... ಸಹಾಯವು ದೊರಕಿದರೆ, ನಮ್ಮ ಮಾತೃಭೂ... ಹಿಂದೀನುಡಿಯಲ್ಲಿ ಮಾತನಾಡುತ್ತಿರುವುದನ್ನು... ಕಾಣಬಹುದು; ಹಾಗಾಗಬಹುದೆಂಬ ವಿ... ದೃಢವಾಗಿದೆ.

## ಮಂಗಳಸೂಚನೆ

ಪ್ರಾಚೀನ ಕಾಲದಲ್ಲಿ ರಾಜಕೀಯ ... ಹರಿಮ್ಮ ... ಆದರೆ ಈ ಇಪ್ಪತ್ತನೇ ಶತಮಾನದಲ್ಲಿ ... ವೃದ್ಧಿಗೊಳ್ಳುತ್ತಲಿದೆ. ಇದರಲ್ಲಿಯೂ, ಇಂದಿ...

ತಂತ್ರ್ಯರಣ ದುಂದುಭಿಯು ಮೊಳಗಿದಂದಿನಿಂದ, ಕವಿಗಳ ವೀರವಾಣಿಯೂ ಧ್ವನಿತವಾಗತೊಡಗಿದೆ. ಈಗಿನ ತನಕ ಆಗಿರುವ ಹಿಂದೀ ವಾಙ್ಮಯದ ಉನ್ನತಿಯು ಸರ್ವಾಂಗೀಣವಾಗಿರುವುದಿಲ್ಲವಾದರೂ, ಇಂದಿನ ವಾಙ್ಮಯ ವೃದ್ಧಿಯ ನೋಟವನ್ನು ನೋಡಿದರೆ, ನಿರಾಶರಾಗುವ ಕಾರಣವಿಲ್ಲ. ಸದ್ಯದಲ್ಲೇ ನಮ್ಮ ಹಿಂದೀ ಬಾಲೆಯೂ ಯೋಗ್ಯಳಾಗಿ, ಸುಯೋಗ್ಯಪುರಸ್ಕಾರವನ್ನು ಭಾರತಮಾತೆಯಿಂದ ಹೊಂದುವಳೆಂಬ ವಿಶ್ವಾಸ ಇದೆ. ಆ ಪುರಸ್ಕಾರವು ರಾಷ್ಟ್ರಭಾಷಾಪದಪ್ರದಾನ! ಹಿಂದಿಯ ಭಿನ್ನ ಭಾಷಾಭಾಷಿಗಳಲ್ಲಿ, ಶ್ರೀ ಪಾದ ದಾಮೋದರ ಸಾತವಳೇಕರ್, ಕಾಲೇಲಕರ, ಭಿಡೆ, ತಾಮ್ಹನಕರ್, ಗರ್ದೆ, ಫಡಕೆ, ಬಾಪಟ, ವೈದ್ಯ ಮೊದಲಾದ ಮಹಾರಾಷ್ಟ್ರೀಯರೂ, ಇನ್ನು ಇತರ ಪಂಜಾಬೀಗಳೂ, ಬಂಗಾಲೀಗಳೂ, ಜಹೂರ್‌ಬಖ್ಷ, ಅನ್ಸಾರೀ, ಮೊದಲಾದ ಮುಸಲ್ಮಾನರೂ, ಶ್ರೀ ತಾರಾನಾಥ ಮೊದಲಾದ ಕನ್ನಡಿಗರೂ, ಪ್ರಸಿದ್ಧ ಲೇಖಕರಾಗಿದ್ದಾರೆ ಮಹಾತ್ಮಾಜೀಯವರ ಮಾತೃಭಾಷೆಯು ಗುಜರಾಥೀ. ಅವರ ಹಿಂದೀ ಪಾಂಡಿತ್ಯವು ಹಿಂದೀಯರಿಂದ ಮರೆಯಾಗಿಲ್ಲ!

# ವಂಗ ವಾಙ್ಮಯ ಕಥಾನಕ

(ಶ್ರೀ ಬಾಬು ಮೋಹಿತ ಕುಮಾರ ಬಾನರ್ಜಿ, ಶಾಂತಿನಿಕೇತನ)

## ಕವಿತೆಯ ನಾಡು

ಬಂಗಾಳವು ಕವಿತೆಯ ನಾಡು; ಹಕ್ಕಿಗಳ ಚಿಲಿಪಿಲಿಯೇ ಕವಿತೆ; ನದಿಗಳಾದರೋ ಸರಾಗವಾಗಿ ಹರಿಯುತ್ತವೆ; ಮಕ್ಕಳ ಅಳುವು ಶೃತಿಬದ್ಧವಾಗಿರುತ್ತದೆ. ಈ ನಾಡಿನಲ್ಲಿ ಪಾಮರ ಜನರ ಧರ್ಮಪ್ರಸಂಗಗಳೆಲ್ಲ ಕವಿತೆಗಳೇ. ಖಗೋಳ, ಆಯುರ್ವೇದ, ಮೊದಲಾದ ಶಾಸ್ತ್ರಗಳೂ ಸಹ ಕವಿತೆಯಲ್ಲಿವೆ. ಹೆಚ್ಚೇನು ನಮ್ಮ ಹಿರಿಯರು ನಮಗೆ ಬಿಟ್ಟಿರುವ ಆಸ್ತಿಯೆಲ್ಲ ಕವಿತೆಯೆ. ಪ್ರಾಚೀನ ವಂಗೀಯ ವಾಙ್ಮಯವೆಲ್ಲ ಕವಿತಾಪ್ರಧಾನವಾದುದು.

ಮಾನವ ಹೃದಯದೊಳಗಿನ ಭಾವತರಂಗಗಳನ್ನೂ, ಕ್ರಿಯಾಕಲಾಪಗಳನ್ನೂ ಅವನು ಹೊರಪಡಿಸಲೇಬೇಕು. ಅದೇ ವಾಙ್ಮಯದ ಮೂಲ. ಇದು ಎಲ್ಲ ನಾಡುಗಳಿಗೂ ಸಮಾನವಾದ ಧರ್ಮ. ಈ ನಿಸರ್ಗ ಧರ್ಮಕ್ಕೆ ಬಂಗಾಳವೂ ಕಟ್ಟುಬಿದ್ದಿದೆ.

## ಬೌದ್ಧಧರ್ಮಪ್ರಭಾವ

ಬುದ್ಧ ಧರ್ಮವಾಹಿನಿಯು ಸುಂದರ ವಂಗರಾಷ್ಟ್ರದಲ್ಲಿ ಹರಿಯಲಾರಂಭಿಸಿತು. ಆಗ ಉತ್ತಮ ಕುಲದವರು ಜನಸಾಮಾನ್ಯದ ಭಾಷೆಯಾದ ಪ್ರಾಕೃತವನ್ನು ಸಂಸ್ಕೃತಗೊಳಿಸಿದರು; ಬ್ರಾಹ್ಮಣ ಧರ್ಮಪ್ರಚಾರ ಸಾಧನವನ್ನಾಗಿ ಮಾಡಿದರು. ಜನಸಾಮಾನ್ಯರಲ್ಲಿ ಬೌದ್ಧ ಧರ್ಮ ಶ್ರದ್ಧೆಯು ಬೇರೂರಿತ್ತು. ಬ್ರಾಹ್ಮಣ ಧರ್ಮಪ್ರಚಾರಕರು ಉಪಯೋಗಿಸಿದ ಭಾಷೆಯು ಸಾಮಾನ್ಯ ಜನರಿಗೆ ಕಷ್ಟವಾಗಿತ್ತು. ಆದಕಾರಣ ಅವರು ಸುಲಭವಾದ ಭಾಷೆಯ ಕಡೆ ದೃಷ್ಟಿಯಿಟ್ಟರು. ಅದೇ 'ಬಂಗಾಳಿ'ಗೆ ಮೂಲ. ಪಾಮರಜನಸೇವೆಗಾಗಿ ರಾಮಾಯಿ ಪಂಡಿತನು 'ಸನ್ಯಪುರಾಣ' ಬರೆದನು; ಮಾಣಿಕಚಂದ್, ರಾಜಗೋವಿಂದ ಚಂದ್ರ, ಮಯನವತಿ ಮೊದಲಾದವರು (ಸುಮಾರು ಕ್ರಿ. ಶ. ೧೦೦೦) ಹಾಡಿದರು. ಇವರ ಬರಹಗಳಲ್ಲೂ ಬೌದ್ಧಧರ್ಮ ಪ್ರಕೃತಿಯ ಲಕ್ಷಣಗಳು ಕಾಣಬರುತ್ತವೆ.

## ವೈಷ್ಣವಯುಗ

ಕೊಂಚಕಾಲಾನಂತರ ಬೌದ್ಧಯುಗ ಲಕ್ಷಣಗಳಿಂದ ಬಂಗಾಳಿಯು ದೂರವಾಯಿತು. ಆದರೇನು ಕೂಡಲೆ ವಾಙ್ಮಯವು ವೈಷ್ಣವಧರ್ಮ ಪ್ರಭಾವಕ್ಕೆ ಸಿಕ್ಕಿಬಿದ್ದಿತು. ಲಕ್ಷ್ಮಣಸೇನನ ಆಸ್ಥಾನ ಕವಿಯಾದ ಜಯದೇವ, ಶಿವಸಿಂಹರಾಯನ ಆಸ್ಥಾನಕವಿಯಾದ ವಿದ್ಯಾಪತಿ,

ಚಂಡಿದಾಸ ಮುಂತಾದವರು ಬಂಗಾಳಿ ವಾಙ್ಮಯ ಕ್ಕೊಂದು ಅದ್ಭುತ ಸಂಗೀತ ಶೋಭೆಯನ್ನು ಕಲ್ಪಿಸಿ ಕೊಟ್ಟರು. ಈ ಗಾನ ಸೌಭಾಗ್ಯದಿಂದ ಶೋಭಿಸುವ ಚಂಡಿದಾಸನ 'ಪದಾವಳಿ'ಯು ಇಂದಿಗೂ ತನ್ನ ಸ್ಥಾನವನ್ನುಳಿಸಿಕೊಂಡಿದೆ.

ಚಂಡಿದಾಸನ ಅನಂತರ ಅರ್ಧ ಶತಮಾನವಾದ ಮೇಲೆ ಶ್ರೀ ಚೈತನ್ಯನು ಜಗತ್ತಿಗೆ ತನ್ನ ಸಂದೇಶಾಮೃತವನ್ನು ಎರೆದನು. ಗಾನಹೃದಯದಿಂದ, ಪ್ರೇಮಪೂರ್ಣವಾದ ಮಾನವನ ಆತ್ಮವು ಸ್ವರ್ಗೀಯ ವಾಣಿಯಿಂದ ಪರಮಾತ್ಮನನ್ನು ಹಾಡಲಾರಂಭಿಸಿತು. ಇದರಿಂದ ಬಂಗಾಳಿ ವಾಙ್ಮಯಕ್ಕಾದ ಉಪಕಾರವು ಅವರ್ಣನೀಯವಾದುದು. ಸುಮಾರು ೨೦೦ ಮಂದಿ ವೈಷ್ಣವ ಕವಿಗಳೂ ಕವಯಿತ್ರಿಯರೂ ಹಾಡಿ ಹಾಡಿ ಸುಂದರ ವಿಪ್ಲವವನ್ನುಂಟುಮಾಡಿದರು ಕವಿತಾ ಪ್ರಪಂಚದಲ್ಲಿ. ಈ ಕವಿಗಣದಲ್ಲಿ ಅಗ್ರಸ್ಥಾನವು ಗೋವಿಂದ ದಾಸ, ಜ್ಞಾನದಾಸರಿಗೇ ಹೋಗಬೇಕು. ಇವರಿಬ್ಬರೂ ಜಯದೇವ, ವಿದ್ಯಾಪತಿಗಳಕಾರ್ಯವನ್ನು ಮುಂದುವರಿಸಿದರು. ಈ ಸರಳ, ಸುಂದರ ವೈಷ್ಣವ ಕವಿತೆಯು ಪಾಮರಜನರ ಹೃದಯಗಳನ್ನಾಕರ್ಷಿಸಿಬಿಟ್ಟಿತು ಈ ಕಾಲದ ವಾಙ್ಮಯ ಲಕ್ಷಣಗಳನ್ನು ಹೀಗೆ ಹೇಳಿ ಮುಗಿಸಿಬಿಡಬಹುದು ;

(೧) ಭಾವಗೀತೆಯು ಕಾಲವಿದು. ವೈಷ್ಣವಯುಗದ ಸ್ವರವೆಲ್ಲ ಸಂಗೀತಮಯವಾಗಿದೆ; ಚಿತ್ತವೃತ್ತಿಯೇ ಗಾನಮಯವಾಗಿದೆ.

(೨) ವಾಙ್ಮಯ ಪ್ರಪಂಚದಲ್ಲೆಲ್ಲ ಧರ್ಮವೇ ತಾಂಡವವಾಡುತ್ತಿದೆ.

(೩) ಪ್ರೇಮಗೀತೆಯು ಪರಮಾವಧಿಯನ್ನು ಮುಟ್ಟಿತು.

## ಶಕ್ತಿಪೂಜಕರು

೧೫-೧೬ನೆಯ ಶತಮಾನಗಳ ಅಂತರಲ್ಲಿ ಸಂಸ್ಕೃತ ಮಹಾ ಕಾವ್ಯಗಳ ಭಾಷಾಂತರವಾಯಿತು. ರಾಜ ಕಂಸನಾರಾಯಣನ ಆಸ್ಥಾನಕವಿ ಕೃತ್ತಿವಾಸ ಓಜನು ರಾಮಾಯಣವನ್ನು, ಕಾಶೀರಾಮದಾಸನು ಮಹಾಭಾರತವನ್ನು ಬಂಗಾಳೀ ಕವಿತೆಗಿಳಿಸಿದರು. ಇಂದಿಗೂ ಇವುಗಳನ್ನೋದದ ಬಂಗಾಳಿಯಿಲ್ಲ.

ಈ ಕಾಲದಲ್ಲಿ ಶಾಕ್ತೇಯರು ವೈಷ್ಣವರ ಪ್ರಭಾವವನ್ನು ತಗ್ಗಿಸಲು ಪ್ರಯತ್ನಪಟ್ಟರು. ಚಂಡೀ, ಕಾಳೀ- ಈ ಸಂಗ್ರಾಮ ಭೈರವಿಗಳನ್ನು ಕುರಿತು ಹಾಡತೊಡಗಿದರು. ವೈಷ್ಣವ ಕವಿಗಳ 'ಪ್ರೇಮಗೀತೆ'ಗಳು ಜನರ ಮನಗಳನ್ನು ಹೇಗೆ ಆಕರ್ಷಿಸಿ, ಅವರನ್ನೆ... ಹಾಗೆಯೇ ಈ 'ಶಕ್ತಿಗೀತೆ'ಗಳೂ ಜನಪದ... ಬ್ಬಿಸಿದುವು; ಎಬ್ಬಿಸಿದುವು ೧೬-೧೭ನೆಯ... ನದಲ್ಲಿ ಚೈತನ್ಯ ಪಂಥಿಗಳಲ್ಲಿ ಪತನವ... ರಾಧಾಕೃಷ್ಣನ ಪ್ರೇಮಗಾಯಕರ ಸಂತಾನ... ಗುತ್ತ ಬಂತು. ಶಿವ, ಚಂಡಿ, ಕಾಳಿಯ... ವಾಣಿಯೇ ಬಂಗಾಳೀ ಕವಿತೆಯಲ್ಲಿ ಹೆಚ್ಚುತ್ತ...

ಈ ಗುಂಪಿನ ಕವಿಕೂಟದಲ್ಲಿ ಮುಕು... ಚಕ್ರವರ್ತಿಯೇ ಶ್ರೇಷ್ಠನು. ಅವನ 'ಚಂ... ವು ಅವನಿಗೆ 'ಕವಿಕಂಕಣ' ನೆಂಬ ಬಿರುದ... ನ್ನು ತಂದಿತು. ಈ ಕವಿತೆಯಲ್ಲಿ ಕವಿಯ... ಗೃಹದ ಪ್ರಾಚೀನ ಚಿತ್ರವನ್ನು ಹೃದಯ... ಮಾಡಿದ್ದಾನೆ. ನಿಸರ್ಗ ಸೌಂದರ್ಯನಿರೂಪ... ವಸ್ತುಗಳ ಸತ್ಯಸ್ಥಿತಿಯ ವರ್ಣನೆಯಲ್ಲಿ... ಅನುಪಮಕವಿ. ರೊಮೇಶಚಂದ್ರದತ್ತ, ಹೆನೆಲ್ ಮುಂತಾದವರು ಇವನನ್ನು ಛಾಸ... ಹೋಲಿಸಿದರು. ಕತೆ ಹೇಳುವುದರಲ್ಲಿ ... ಯನ್ನೂ ಛಾಸರನ್ನೂ ಮೀರಿಸಿದವರಿಲ್ಲ.

೧೮ನೆಯ ಶತಮಾನದ ಕೀರ್ತಿಕಲಶಗಳೆ... ಚಂದ್ರರಾಯ ಗುಣಾಕರ ಮತ್ತು ರಾಮಪ್ರಸ... ಇವರಿಬ್ಬರೂ ಶಕ್ತಿಪೂಜಕರು. ಮಹಾರಾ... ಚಂದ್ರರಾಯನ (ನಂದಿ) ಆಸ್ಥಾನ ಕವಿಯಾ... ಚಂದ್ರನ ಪೂರ್ಣಪ್ರತಿಭೆಯು 'ವಿದ್ಯಾ... ಮತ್ತು 'ಅನಂದಮಂಗಳ' ವೆಂಬೆರಡು ... ಕಾಣಬರುತ್ತದೆ. ರಾಜಪುತ್ರಿಯೊಬ್ಬಳ ಪ್ರೇ... ಸದ ಸುಂದರ ಸನ್ನಿವೇಶಗಳ ಸೊಬಗಿನ ... 'ವಿದ್ಯಾಸುಂದರ'. ಈತನ ಕವಿತೆಯಲ್ಲಿ ... ಶೃಂಗಾರದ ಲಕ್ಷಣಗಳೂ ಕಾಣಬರುತ್ತವೆ ... ೧೭೬೦ರಲ್ಲಿ ಕಾಲವಾದನು.

ರಾಮಪ್ರಸಾದನೂ ಮಹಾರಾಜ ಕೃಷ್ಣ... ಆಶ್ರಯಕ್ಕೆ ಸೇರಿದನನೆ. ಇವನು ಮೊದಲು ... ದಾರನೊಬ್ಬನ ಬಳಿ ಗುಮಾಸ್ತನಾಗಿದ್ದು ... ರೋಜುವರ್ಗದಲ್ಲಿ (ಹಿಸಾಬ ಖಾತಾ) ... ದಿಡುತ್ತಿದ್ದನಂತೆ! ಯಜಮಾನನು ಇದನ್ನು ... ರಾಮಪ್ರಸಾದನಲ್ಲಿದ್ದ 'ಕವಿ' ಯನ್ನು ... ಹಿಸಲು ತಿಂಗಳಿಗೆ ೩೦ ರೂಪಾಯಿಗಳ ... ಬಳ ಕೊಟ್ಟನು. ಪ್ರತಿ ಬಂಗಾಳಿಯ ಗೃಹ...

ಈಕ್ಷಣವೂ ಸಹ ರಾಮಪ್ರಸಾದನ ಕಾಳೀಗೀತೆಗಳು ಕೇಳಿಬರುತ್ತಿವೆ. ನಿವೇದಿತಾ ಸೋದರಿಯು ಈತನನ್ನು ವಿಲಿಯಂ ಬ್ಲೇಕ್ ಕವಿಗೆ ಹೋಲಿಸಿದಳು. ಈ ಹೋಲಿಕೆಯಲ್ಲಿ ಎಳ್ಳಷ್ಟೂ ಅತಿಶಯವಿಲ್ಲ. ರಾಮಪ್ರಸಾದನ ಕವಿತೆಯಲ್ಲಿ ದಾರ್ಶನಿಕನ ಧ್ವನಿಯೂ ಭಕ್ತನ ಪರವಶತೆಯೂ ಕಂಡುಬರುತ್ತದೆ.

## ನವಯುಗ

೧೯ನೆಯ ಶತಮಾನ ಬಂತು. ನಮ್ಮ ಸಾಹಿತ್ಯವು ರೂಪವನ್ನೇ ಬದಲಾಯಿಸಿತು. ಬ್ರಿಟಿಷರು ಬಂದರು. ಪಾಶ್ಚಾತ್ಯವಿದ್ಯಾಪ್ರಚಾರವಾಗುತ್ತ ಬಂತು. ಶಿಕ್ಷಿತರಾದ ಬಂಗಾಳಿಗಳು ಸಾಹಿತ್ಯಕ್ಕೊಂದು ಹೊಸಹುರುಪು ಕೊಟ್ಟರು. ಈ ನವಜೀವನದಾತರಲ್ಲಿ ಕಾರೆ ಮತ್ತು ಮಾರ್ಷ್‌ಮನ್‌ರಂತಹ ಮಿಷನರಿಗಳ ಹೆಸರುಗಳನ್ನು ಹೇಳದಿರಲಾಗದು. ಈಶ್ವರಚಂದ್ರಗುಪ್ತನನ್ನು ನವಯುಗದ ಜನಕನೆಂದು ಹೇಳಬಹುದು. ಹೊಸಕಾಲದ ಹೊಸ ಕವಿತೆಗೆ ಮೊದಲಿಗನೀತನೆ. ಮತ, ಪ್ರೇಮಗಳೆಂಬೆರಡು ಪ್ರಕೃತಿಗಳಿಂದ ಬಂಧಿತವಾಗಿದ್ದ ಕವಿತೆಗೆ ಇವನು ಮೋಕ್ಷದಾಯಕನು. ಇವನು ಧಾರ್ಮಿಕ, ಸಾಮಾಜಿಕ, ನೈತಿಕ ಮೊದಲಾದ ಎಲ್ಲ ವಿಚಾರಗಳಮೇಲೂ ಕವಿತೆ ಕಟ್ಟಿದವನು. ಪ್ರಕೃತಿಯನ್ನಾರಾಧಿಸಿರುವನು; ಪ್ರೇಮಗಾನವನ್ನು ಹಾಡಿರುವನು. ಕವಿತಾಕ್ಷೇತ್ರದಲ್ಲೀತನನ್ನು ವೀರಶೂರ ವಿಕ್ರಮಾರ್ಕನೆನ್ನಬಹುದು. ಬ್ರಹ್ಮಸಮಾಜದ ಪ್ರಭಾವವೀತನಮೇಲೆ ಬಿದ್ದ ಕಾರಣ ಇವನ ಕವಿತೆಗಳಲ್ಲಿ ಒಬ್ಬ ಪರಮೇಶ್ವರನ ಗಾನ ಮಾತ್ರವಿದೆ.

ಕವಿತಾಗಾರರಲ್ಲಿ ದೇಶಮಾತೆಗೊಂದು ಗರ್ಭಗೃಹ ಕಟ್ಟಿಸಿದ ಕವಿಜ್ಯೇಷ್ಠನೀತನೆ. ರಾಷ್ಟ್ರೀಯ ಆಶಾವೇಶಗಳಿಂದ ವಾಙ್ಮಯವನ್ನು ಚೇತನಗೊಳಿಸಿದ ಕೀರ್ತಿಯು ಇವನಿಗೇ ಸಲ್ಲುವುದು.

ಅನಂತರ ರಂಗಲಾಲ ಬಂಜನೇ ಉತ್ತಮೋತ್ತಮ ಕವಿ. ಈಶ್ವರಚಂದ್ರಗುಪ್ತನಿಗಿಂತಲೂ ಒಂದು ಕೈ ಮೇಲೆನ್ನಬೇಕು. ಇವನು ದೇಶಭಾಷೆಗಳಲ್ಲಿ ಮಾತ್ರನೇ ಅಲ್ಲದೆ ಐರೋಪ್ಯ ಭಾಷೆಗಳಲ್ಲೂ ಪಾಂಡಿತ್ಯ ಸಂಪಾದನೆ ಮಾಡಿದ್ದನು. ರಜಪೂತರ ವೀರಜೀವನ ಕೀರ್ತನದಿಂದಿವನು ಜನರಲ್ಲಿ ಸ್ಫೂರ್ತಿಯನ್ನುಂಟುಮಾಡಿದನು. 'ಅಮೃತ ಸ್ವಾತಂತ್ರ್ಯ'ದ ಗುಣಗಾನ ಮಾಡಿದ, ಆತ್ಮಗಳನ್ನೇಳಿಸಿದ ಮೊದಲಕವಿ ಈತನೆ.

ಈಶ್ವರಚಂದ್ರ ಮತ್ತು ರಂಗಲಾಲರ ಸಮಕಾಲೀನರಾದ ಮೈಕೇಲ್ ಮಧುಸೂದನ ದತ್ತ, ಬೆಹಾರಿಲಾಲ್ ಚಕ್ರವರ್ತಿ, ಹೇಮಚಂದ್ರ, ನವೀನಚಂದ್ರಸೇನ ಮುಂತಾದ ಅನೇಕರು ಹೆಸರುವಾಸಿಯಾದವರು.

ಮಧುಸೂದನನು ರಿಚರ್ಡ್‌ಸನ್ ಡಿರೋಜಿಯೋ ಮುಂತಾದವರ ಪ್ರಭಾವದಿಂದ ತನ್ನ ೧೯ನೇ ವಯಸ್ಸಿನಲ್ಲೇ (೧೮೪೨) ಈಸಾಯಿ ಮತಕ್ಕೆ ಸೇರಿದನು. ಮದರಾಸಿಗೆ ಹೋಗಿ ಪತ್ರಿಕಾವೃತ್ತಿಯನ್ನು ಕೈಕೊಂಡನು. ಅಲ್ಲಿ ಆಂಗ್ಲ ಕವಿತೆಗಳನ್ನು ಬರೆದನು. ಭರತಖಂಡದಲ್ಲಿ ಮಾತ್ರವಲ್ಲ ಇಂಗ್ಲೆಂಡಿನಲ್ಲೂ ಈತನ ಕವಿತೆಗೆ ಕೀರ್ತಿ ಪ್ರಶಸ್ತಿ ಬಂತು. ಅನಂತರ ಕಲಿಕತ್ತೆಗೆ ಬಂದು ಬಂಗಾಳಿಯಲ್ಲಿ ನಾಟಕ ಬರೆಯಲಾರಂಭಿಸಿದನು. ಅವನ ನಾಟಕಗಳನೇಕ ರಂಗಭೂಮಿಗೆ ಬಂದವು. ಅನಂತರ ಆತನು ಸರಳರಗಳೆಯಲ್ಲಿ 'ತಿಲೋತ್ತಮಾ ಸಂಭವ ಕಾವ್ಯ' ಮತ್ತು 'ಮೇಘನಾದ ವಧ ಕಾವ್ಯ' ವೆಂಬೆರಡು ಮಹಾಕಾವ್ಯಗಳನ್ನು ರಚಿಸಿದನು. ಎರಡನೆಯದರ ಉಪಮಾಲಂಕರ ಸೌಂದರ್ಯ, ಪಾದಪಾದಗಳಲ್ಲೂ ಕುಣಿಯುತ್ತಿರುವ ಸಂಗೀತ ಇವು 'ಮೇಘನಾದ ವಧ ಕಾವ್ಯ' ವನ್ನಿಂದಿಗೂ ಮೊದಲ ಶ್ರೇಣಿಯಲ್ಲೇ ಇರಿಸಿವೆ. ಆತನ 'ಪ್ರಮಿಳೆ'ಯಂತೂ ಆನಂದವಸ್ತು. ಆ 'ಸತಿ'ಯ ಚಿತ್ರವಂತೂ ಅವರ್ಣನೀಯವಾದುದೇ ಸರಿ. ವಿಶ್ವಸಾಹಿತ್ಯದ ಉತ್ತಮೋತ್ತಮ ಸಾಹಿತ್ಯಗಳೊಂದಿಗೆ ಸರಿಸಮನಾಗಿ ನಿಲ್ಲತಕ್ಕಂತಹದಿದು; ಬಂಗಾಳೀ ಸಾಹಿತ್ಯಕ್ಕೆ 'ಸಾನೆಟ್'ಎಂಬ ಸಾಹಿತ್ಯಸ್ವರೂಪ ತಂದ ಮೊದಲಿಗನು ಮಧುಸೂದನ. ಅವನ 'ಸಾನೆಟ್'ಗಳು ಷೇಕ್ಸ್‌ಪಿಯರ್, ವರ್ಡ್ಸ್‌ವರ್ತರ ರಚನೆಗಳಿಗೆ ಸಮಾನವಾಗಿವೆ.

ಬೆಹಾರಿಲಾಲು ಚಕ್ರವರ್ತಿಯು ಕೊಂಚಕಾಲ ರವೀಂದ್ರನಾಥರಿಗೆ 'ಗುರು'ವಾಗಿದ್ದನು. ಪ್ರೇಮಗೀತೆಗಳನ್ನೆಷ್ಟೋ ಹಾಡಿದ್ದಾನೆ. 'ಶಾರದಾ ಮಂಗಳ'ವೇ ಅಮೋಘವಾದ ವರ್ಣಕಕವಿತೆ. ಡಾ|| ಬ್ರಜೇಂದ್ರನಾಥಶೀಲರು ಈ ಕವಿತೆಯನ್ನು ಬಹಳವಾಗಿ ಹೊಗಳಿದ್ದಾರೆ.

ಹೇಮಚಂದ್ರನು 'ವೃತ್ರಸಂಹಾರ' ಕಾವ್ಯ ಬರೆದು ವಂಗ ವಾಙ್ಮಯದಲ್ಲಿ ಶಾಶ್ವತ ಕೀರ್ತಿ ಸಂಪಾದನೆ ಮಾಡಿದನು. ರಾಷ್ಟ್ರೀಯ ಕವಿಗಣದಲ್ಲಿ ಇವನೂ ಮುಖ್ಯನೇ. ಅವನ 'ಭಾರತ ಸಂಗೀತ'ವು ಆತ್ಮಗಳನ್ನೇಳಿಸುವಂತಹ ವೀರಕವಿತೆ—ಸ್ವಾತಂತ್ರ್ಯದ ಜ್ವಾ

ಲೆಯು ಆತನೆದೆಯಲ್ಲಿ ಪ್ರಜ್ವಲಿಸುತ್ತಿತ್ತು. ಆತನ ಪಲ್ಲವಿಯು ಸದಾ ಸ್ವತಂತ್ರ ಭಾರತವೆ. ಹೇಮಚಂದ್ರನದು ಸರ್ವತೋಮುಖವಾದ ಪ್ರತಿಭೆ. ಐರೋಪ್ಯ ಕವಿತಾ ಸಂಪದವನ್ನು ಬೇಕಾದಷ್ಟು ವಂಗಭಾಷೆಗೆ ತಂದು ಕೊಟ್ಟಿದ್ದಾನೆ. ಕವಿತೆಗಳೂ, ನಾಟಕಗಳೂ ಅನೇಕ ಈತನ ಭಾಷಾಂತರಗಳೆ.

ನವೀನಚಂದ್ರನ 'ಪ್ಲಾಸಿಯುದ್ಧ'ವು ಪರಮಾದ್ಭುತ ಸಾಹಸವು. ಬೈರನ್ ಕವಿಯ, 'ಛೈಲ್ಡ್ ಹ್ಯಾರಲ್ಡ್' ಕಾವ್ಯಕ್ಕೆ ಸರಿತೂಗತಕ್ಕದ್ದು. 'ಕುರುಕ್ಷೇತ್ರ' ರೈವತಕ, 'ಪ್ರವಾಸ'ವೆಂಬೀ ಮೂರು ನವೀನ ಚಂದ್ರನ ಪ್ರತಿಭೆಗೆ ಶಾಶ್ವತ ಸ್ಮಾರಕಗಳು. ಇವುಗಳಲ್ಲಾತನು ಸರ್ವಧರ್ಮಸಮನ್ವಯ ಸಂದೇಶವನ್ನು ಸಾರಿದನು. ಬುದ್ಧದೇವನ ಜೀವನ ಬೋಧೆಯನ್ನು 'ಅಮಿತಾಬ' ಎಂಬ ಕಾವ್ಯದಲ್ಲಿ ಬೆಳಗಿಸಿದ್ದಾನೆ. ನವೀನನ ಕವಿತೆಯಲ್ಲಿ ಗಾನತಾನಗಳು ಮೇರೆವೀದು ಹರಿಯುತ್ತಿವೆ.

## ರವೀಂದ್ರನಾಥ ಠಾಕೂರ್

ರವೀಂದ್ರನು ಹೊಸಯುಗವನ್ನೇ ತಂದನು. ಬಾಲ್ಯದಲ್ಲೇ 'ವಾಲ್ಮೀಕಿ ಪ್ರತಿಭಾ' ಎಂಬ ಸಂಗೀತ ರೂಪಕ ಬರೆದು ಷೆಲ್ಲಿ, ಕೀಟ್ಸ್‌ರಂತಹ ಪ್ರತಿಭಾಶಾಲಿಗಳಂತೆ ಮೈದೋರಿದನು ಬೆಳೆದನು, ಕಲಿತನು, ವಿಲಾಯಿತಿಗೆ ಹೋಗಿ ಆಂಗ್ಲಸಾಹಿತ್ಯಪರಿಚಯ ಪ್ರಸಾದ ಪಡೆದನು. ಅಲ್ಲಿಂದ ಹಿಂತಿರುಗಿ ತಾನು ರಚಿಸಿದ ಕವಿತೆಗಳನ್ನೆಲ್ಲ ಸಂಗ್ರಹಿಸಿ 'ಸಂಧ್ಯಾ ಸಂಗೀತ' 'ಪ್ರಭಾತ ಸಂಗೀತ' ವೆಂಬೆರಡು ಪುಸ್ತಕಗಳನ್ನು ಪ್ರಕಟಿಸಿದನು. ಆತನು ಬರೆದ ಕವಿತೆಗಳು * ಲೆಕ್ಕವಿಲ್ಲದಷ್ಟಿವೆ.

ಇವೆಲ್ಲ ಸುಂದರವಾಗಿವೆ. ಇವು ರವೀಂದ್ರನಿಗೆ ಕೀರ್ತಿ ಗೌರವಗಳನ್ನು ತಂದವು ಗಳಗಳಲ್ಲಿ 'ಗೀತಾಂಜಲಿ'ಗೆ ನೋಬೆಲ್ ಬಹುಮಾನವು ಸಿಕ್ಕಿತು. ವಿಶ್ವಸಾಹಿತಿಗಳಲ್ಲಿ ಭಾರತೀಯನೊಬ್ಬನಿಗೆ ಸ್ಥಾನ ದೊರೆಯಿತು ಆ ಸ್ಥಾನಗೌರವವು ಮೊದಲು ರವೀಂದ್ರನ ಪಾಲಿಗೆ ಬಂತು. 'ವಿಶ್ವದ ದರ್ಬಾರಿನಲ್ಲಿ ವಂಗ ಸಾಹಿತ್ಯಕ್ಕೆ ಸ್ಥಾನವಿಲ್ಲವಲ್ಲಾ' ಎಂದು ಮೊದಲುಮೊದಲು ರವೀಂದ್ರನು ಹಂಬಲಿಸುತ್ತಿದ್ದನು. ತನ್ನ ತಾಯ್ನುಡಿಗೆ ... ನ್ನು ತಾನೇ ಸಂಪಾದಿಸಿಕೊಟ್ಟನು.

ಬಂಗಾಳದ ಸ್ವದೇಶೀ ಚಳವಳಿಯ ಕಾಲದ ... ದ್ರನು ಭಾರತ ರಾಷ್ಟ್ರೀಯತ್ವದ ಭಾವತ... ತನ್ನ ಕವಿತಾಲಹರಿಯಲ್ಲಿ ಬ್ಬಿಸಿದನು ... ಎಚ್ಚರಿಸಿದನು. ಸ್ವಾತಂತ್ರ್ಯ ಸಂದೇಶ ... ಯಿತು ಅವನ ಕವಿತೆ. ಇಂದಿಗೂ ರವೀಂದ್ರ... ಭಕ್ತಿಪರ ಕವಿತೆಗಳು ಮನೆಮಾತಾಗಿವೆ. ರವೀಂದ್ರ ಉಗ್ರಪಕ್ಷದ ಭಾರತೀಯನು. ... ಭಾರತೀಯನಲ್ಲ.

" ಗರಳಹೃದರೆದುರ ನಿಂತು, ಅಂಗಲಾಚಿ, ಸೆರಗ...
ಸ್ಥಾನಕಾಗಿ, ಮಾನಕಾಗಿ ಬೇಡು ಎಂಬೆಯಾ ...

ಎಂದು ಉರಿವ ಎದೆಯಿಂದ, ಪ್ರಜ್ವಲಿಸ... ಯಿಂದ ಹಾಡಿ, ಹುರುಪೇರಿಸಿದ ಗುಂಪಿನವ...

ರವೀಂದ್ರನು ಇಂದು ಸಾಹಿತ್ಯ ಸಮ್ರಾಟ... ಹವಿಲ್ಲ. ಸ್ವಾತಂತ್ರ್ಯ, ಸೌಂದರ್ಯ, ಪ್ರ... ರವೀಂದ್ರನ ಕವಿತೆಯ ಜೀವತಂತುಗಳು. ಅತ್ಯುಚ್ಚವರ್ಗದ ಭಾರತೀಯ ಮತ್ತು ಐರೋ... ಗಣದ ಪಕ್ವಹೃದಯವೀ ರವೀಂದ್ರನಲ್ಲಿ ಮ... ಗಿದೆ. ಪರಂಪರೆಯ ಪ್ರತಿಭಾಸೌಂದರ್ಯ... ನೆಲಸಿವೆ. ರವೀಂದ್ರನ ಕವಿತೆಗಳು ಡಬ್ಲ್ಯು... ಟ್ಸ್‌ರಂತಹ ಆಂಗ್ಲ ಕವಿಯ ಹೃದಯ... ಗೊಳಿಸಿದವು. 'ವೇದಯುಗದ ಮಹರ್ಷಿ... ಭವಾದ ಕವಿತೆಯು ಪರಂಪರೆಯಾಗಿ ... ಗೊಂಡು ರವೀಂದ್ರನಲ್ಲಿ ಪಕ್ವದ ... ಹೊಂದಿತು' ಎಂದು ಸಿಲ್ವನ್‌ಲೆವಿ (ಫ್ರೆಂಚ್ ... ತರು) ಯವರು ಹೇಳಿದರು. ರವೀಂದ್ರನ ... ಚಯದಿಂದ ಆಶಾಭರಿತರಾಗಿ ಲೆವಿಯವರು ... ಯುಗಾಂತರಗಳ ಧರ್ಮ ರಹಸ್ಯಗಳು, ಶಕ್ತಿ... ದಲಹರಿಗಳು ಭಾರತ ಹೃದಯಾಂತರಾ... ಇವೆ. ಪಾಶ್ಚಾತ್ಯರಿಗೆ ಗುರೂಪದೇಶ ... ಶಕ್ತಿ ಅದಕ್ಕಿನ್ನೂ ಇದೆ" ಎಂದರು.

ರವೀಂದ್ರನ ನಾಟಕರಚನಾ ಚಾತುರ್ಯ... ದ್ಭುತವಾದುದು. ಆತನ ಪ್ರತಿಭೆಯು ... ಲೋಕಗಳನ್ನು ವಿಹಾರಿಸಿದುದು. ಕಣ್ಣಿಗೆ ಕಾಣುವ... ಕ್ಕಿಂತ ಕಾಣಬಾರದ್ದನ್ನು ಕುರಿತು ಬರೆಯು... ತನ ಕುಶಲತೆಯು ಅವರ್ಣನೀಯವಾದುದು ... ಗಳು, ಚಿತ್ರರ್ಶಗಳು ಇವೇ ಆವನ ರೂಪಕ...

* ಪ್ರಕೃತೀರ ಪರಿಶೋಧ, ಛಬಿಓಗಾನ, ಕಡಿ ಓ ಕೋಮಲ, ಮಾನಸಿ, ಸೋನಾರ ತರಿ, ಚಿತ್ರ, ಚೈತಾಲಿ, ಕಥಾ, ಕಲ್ಪನಾ, ಕ್ಷಣಿಕ, ಶಿಶು, ನೈವೇದ್ಯ, ಖೇಯಾ, ಗೀತಾಂಜಲಿ, ಬಲಾಕಾ, ಪುರವಿ, ಮುಹಳ, ಶಿಶುಭೋಲೋನಾಥ, ಪಲಾತಕಾ, ಕಾಹಿನಿ

ಜೀವಾಳ. ಆತನ 'ವಿಸರ್ಜನ'ವು ಆತ್ಮಯಜ್ಞವೆಂಬ ಭಾವದ ರೂಪಕ. 'ಮುಕ್ತಧಾರೆ' ಯೊಳಗಿನ '...ಬಾಲ'ನು ಮಹಾತ್ಮ ಗಾಂಧಿಯ ನೆನಪನ್ನು ಮಾಡಿಕೊಡುತ್ತಾನೆ. ಆತನ 'ತಪತಿ'ಯು ರೂಪಕಕಾವ್ಯ ರಚನಾಕಲೆಯಲ್ಲಿ ಮೇಲ್ಮೆಟ್ಟಲನ್ನು ಮುಟ್ಟಿತೆನ್ನಬಹುದು. ರಾಜನ ಹೃದಯಪರಿವರ್ತನಕ್ಕಾಗಿ ರಾಣಿಯು ಮಾಡುವ 'ತಪಸ್ಯೆ'ಯ ಚಿತ್ರವು ಅದ್ಭುತಸೃಷ್ಟಿ; ಆನಂದದ ಸೃಷ್ಟಿ! ರವೀಂದ್ರನು ಸವಿಕನಸುಗಳನ್ನು ಕಾಣುವವನು; ಸಣ್ಣದನಿಯಿಂದ ಒಳಗೊಳಗೇ ಗಾನಮಾಡಿ ಸಮಾಧಿ ಸುಖವನ್ನು ಅನುಭವಿಸುವವನು; ಹೊಸಗೋತ್ರದ ಕವಿಗಳ, ಕಲಾವಿದರ, ಜನನಕಾರಣಭೂತನು.

## ಇತರ ಕವಿಗಣ

ಪ್ರೇಮಗೀತೆಗಳನ್ನು ಕಟ್ಟಿಹಾಡಿದ ಇತರ ಕವಿಗಳಲ್ಲಿ ೧೯೧೯ ರಲ್ಲಿ ಕಾಲವಾದ ಅಕ್ಷಯ ಕುಮಾರ ಬೋರಲನನ್ನೂ, ಹಾಡುಗಳನ್ನು ಬರೆಯುವುದರಲ್ಲಿ ಪರಮಾಚಾರ್ಯನೆನಿಸಿ ಬಹಳ ಸಣ್ಣ ವಯಸ್ಸಿನಲ್ಲೇ (೧೯೧೦) ತೀರಿಕೊಂಡ ರಜನೀಕಾಂತ ಸೇನನನ್ನೂ, ಪ್ರತಿಭಾ ಸರಸ್ವತಿಯಂತೆ ಅಲ್ಪಕಾಲ ಬೆಳಗಿದ ಸತ್ಯೇಂದ್ರನಾಥ ದತ್ತನನ್ನೂ ಮರೆಯಲಾಗದು. ಸತ್ಯೇಂದ್ರನಾಥನನ್ನು ಮೃತ್ಯುವು ಬಹು ಬೇಗ ಕೊಂಡೊಯ್ದಿತು. ಆಗ ರವೀಂದ್ರನು ಅವನನ್ನು ಕುರಿತೊಂದು ಮೌನಕವಿತೆಯನ್ನು ಹಾಡಿ, ಮರುಗಿದನು. ಸತ್ಯೇಂದ್ರನು ಐರೋಪ್ಯ ಉತ್ತಮ ಸಾಹಿತ್ಯವನ್ನು ಬಂಗಾಳಿಗಿಳಿಸಿದನು. ಅದಿರಲಿ ನವೀನ ಛಂದಸ್ಸುಗಳನ್ನು ಹಿಡಿದಾಡಿಸಿ, ...ಡಿಸಿ, ವಿಸ್ಮಯದಾಯಕವಾದ ಸಾಹಸವನ್ನು ತೋರಿ...ದ್ದಾನೆ.

ಜೋಗೀಂದ್ರನಾಥ ಬಸುವು ಪುರಾಣ ಕವಿತಾ ...ಸುಂದರಿಗೆ ಮತ್ತೆ ಜೀವದಾನಮಾಡಬೇಕೆಂದು 'ಪೃಥ್ವೀರಾಜ', 'ಶಿವಾಜಿ' ಎಂಬೆರಡು ಪುರಾಣಕಾವ್ಯಗಳನ್ನು ರಚಿಸಿದನು. ದೇಶಬಂಧು ಚಿತ್ತರಂಜನ ದಾಸರು '...ಸಾಗರ ಸಂಗೀತ', 'ಮಾಲಂಚ', 'ಅಂತರ್ಜಾಮಿ' '...ಕಿಶೋರ ಕಿಶೋರೀ' ಮುಂತಾದ ಕವಿತಾ ಗುಚ್ಛಗಳಿಂದ ಸಾಹಿತ್ಯೋದ್ಯಾನವನ್ನು ಅಲಂಕರಿಸಿದರು. ...ಅವರ ಕವಿತೆಗಳಲ್ಲಿ ವೈಷ್ಣವ ಹೃದಯದ ಮಿಡಿತ ಕೇಳಬರುತ್ತದೆ.

ಇಂದಿನ ದಿನ ಸಾಹಿತ್ಯಭೂಮಿಯಲ್ಲಿ ಸ್ತ್ರೀಯರೂ ...ಸುಂದರ ಸಾಹಸಿಗಳಾಗಿದ್ದಾರೆ. ಅವರಲ್ಲಿ ಶ್ರೀಮತಿ ಕಾಮಿನಿರಾಯಿ, ಶ್ರೀಮತಿ ಮಾನಕುಮಾರಿ ಬಸೆ, ಶ್ರೀಮತಿ ಗಿರೀಂದ್ರಮೋಹಿನಿ ದಾಸಿ ಮುಂತಾದವರ ಹೆಸರನ್ನು ಹೇಳದಿರಲಾಗದು. ಶ್ರೀಮತಿ ಕಾಮಿನಿರಾಯರ ಧ್ಯಾನಹೃದಯದಿಂದ ಹೊರಬೀಳುವ ಸರಳವಾದ ಕವಿತೆಗಳು ವರ್ಡ್ಸ್‌ವರ್ತನ ಕವಿತೆಗಳಿಗೆ ಸಮಾನವಾಗಿವೆ.

ಇಂದಿನ ಬಂಗಾಳದ ತರುಣ ಕವಿಗಣದಲ್ಲಿ ಕಾಳಿದಾಸರಾಯಿ, ಜತೀಂದ್ರನಾಥ ಬಗಚಿ, ಕುಮುದ್ವತಿ ಮಲ್ಲಿಕ್, ಸಾವಿತ್ರೀ ಪ್ರಸನ್ನ ಚಟರ್ಜಿ, ಕಾಜಿ ನಜರುಲ್ ಇಸ್ಲಾಂ ಮೊದಲಾದವರ ಪ್ರಭೆಯು ಜಾಜ್ವಲ್ಯವಾಗಿದೆ. ಕಾಜಿ ನಜರುಲ್ಲನು ವಿಪ್ಲವ ಕವಿ. ಅವನ ಕವಿತೆಯೊಳಗಣ ವಿಪ್ಲವ ವಾಹಿನಿಯು ಅವನನ್ನು ಸೆರೆಮನೆಗೆ ಕೊಚ್ಚಿಕೊಂಡು ಹೋಯಿತು. ಅವನ ಕವಿತೆಗಳಿಗೆಲ್ಲ ರಾಜದ್ರೋಹದ ಮುದ್ರೆ ಬಿತ್ತು.

ಒಟ್ಟಿನಲ್ಲಿ ಕವಿತಾ ಪ್ರಪಂಚದಲ್ಲಿ ರವೀಂದ್ರನು ನವಯುಗ ಪ್ರವರ್ತಕಾಚಾರ್ಯನಾಗಿದ್ದಾನೆ. ಅವನ ಪ್ರತಿಭಾದ್ಯುತಿಯಲ್ಲ ಕಡೆಯೂ ಬೆಳಗುತ್ತಿದೆ.

## ಮಿಷನರಿಗಳು

ಪರದಾಸ್ಯದಲ್ಲಿ ಕೊರಗುತ್ತಿರುವ ವಂಗ ಹೃದಯದ ಅಂತರ್ವಾಣಿಯು ಅದೃಶ್ಯವಾಯಿತೋ ಇಲ್ಲ ಜನಾಂಗ ಸಂಸ್ಕೃತಿಯ ವಿದ್ಯುತ್ ವಿಕಾಸಕ್ಕೆ ಕವಿತೆಯೇ ಸುಂದರ ಸಾಧನವೆಂಬ ಕಾರಣದಿಂದಲೋ ಏನೋ ಬಹಳ ಕಾಲದಿಂದ ವಂಗ ವಾಙ್ಮಯದಲ್ಲಿ ಗದ್ಯವೇ ಕಾಣಬರಲಿಲ್ಲ. ಬ್ರಿಟಿಷರ ಆಗಮನ, ಮಿಷನರಿಗಳ ಸಾಹಸ, ಏಸುಮತ ಪ್ರಚಾರಕಾರ್ಯ ಇವು ಗದ್ಯರಚನೆಗೆ ಬಹಳ ಸಹಕಾರಿಗಳಾದಂತೆ ಕಾಣಬರುತ್ತದೆ. ೧೭೭೮ರಲ್ಲಿ ಹಾಲ್ ಹೆಡ್ ಎಂಬವನು ವಂಗವ್ಯಾಕರಣ ಬರೆದನು. ಇನ್ನೊಬ್ಬನು ನಿಘಂಟನ್ನು ರಚಿಸಿದನು. ಮಿಷನರಿಗಳು ಒಂದು ಮುದ್ರಾಲಯವನ್ನು ತೆರೆದರು ಕಾರೆಯು ಬೈಬಲನ್ನು ಬಂಗಾಳಿಯಲ್ಲಿ ಬರೆದನು 'ಸಮಾಚಾರ ದರ್ಪಣ' ವೆಂಬ ಪತ್ರಿಕೆ ಹೊರಡಿಸಿದನು. ಆಂಗ್ಲ ತರುಣರಿಗೆ ಬಂಗಾಳಿ ಕಲಿಸಲು ಪಂಡಿತರ ಸಹಾಯದಿಂದ ಮಿಷನರಿಗಳು ಅನೇಕ ಪಠ್ಯಪುಸ್ತಕಗಳನ್ನು ಬರೆಸಿದರು. ಈ ಪುಸ್ತಕಗಳ ಶೈಲಿಯು ಬಿರುಸು; ಸಂಸ್ಕೃತಮಯ; ಪರ್ಶಿಯನ್, ಪೋರ್ಚುಗೀಸ್ ಶಬ್ದಗಳು ಹೇರಳವಾಗಿವೆ.

## ಗದ್ಯ ಲೇಖಕರು

ರಾಜಾರಾಮಮೋಹನರಾಯನ ಜನನವಾಯಿತು. ಗದ್ಯ ವಾಙ್ಮಯವು ನಿಜವಾಗಿ ಹುಟ್ಟಿತು. ಅವನ ಗಂಭೀರ ಹೃದಯದ, ಉದಾತ್ತ ಭಾವಗಳ, ಸರಳಶೈಲಿಯು ಗದ್ಯಕ್ಕೊಂದು ಅಪೂರ್ವ ಶೋಭೆಯನ್ನು ಕೊಟ್ಟಿತು. ರಾಮಮೋಹನನೇ ಗದ್ಯ ವಾಙ್ಮಯ ಪಿತಾಮಹನೆನ್ನಬೇಕು. ಪ್ರಾಚೀನ ಸಾಹಿತ್ಯ ಪರಿಚಯವಿತ್ತಾತನಿಗೆ. ಆಧುನಿಕ ಸಾಹಿತ್ಯದಲ್ಲಿ ಪೂರ್ಣ ಪಾಂಡಿತ್ಯವಿತ್ತು. ಆತನ ಮಾತೃಭಾಷಾಪ್ರೇಮವಂತೂ ಅಸದೃಶವಾದುದು. ೨೫ ಬಂಗಾಳಿ ಗ್ರಂಥಗಳನ್ನು ರಚಿಸಿದ್ದಾನೆ. ೧೮೧೬ ರಲ್ಲಿ ಉಪನಿಷತ್ತುಗಳನ್ನು ಬಂಗಾಳಿಗೆ ಭಾಷಾಂತರ ಮಾಡಿದನು. 'ಕೌಮುದಿ' ಎಂಬ ಪತ್ರಿಕೆಯನ್ನು, ಧಾರ್ಮಿಕವಿಚಾರ ಚರ್ಚೆಗಾಗಿ ಒಂದು ಪತ್ರಿಕೆಯನ್ನು ಹೊರಡಿಸಿದನು. ವ್ಯಾಕರಣವೊಂದನ್ನು ರಚಿಸಿದನು. ರಾಮಮೋಹನನ ಶೈಲಿಯು ಬಹಳ ಸರಳವಾದುದು. ಈತನನ್ನು ದೀರ್ಘಸಮಾಸವೈರಿಯೆಂದು ಕರೆಯಬಹುದು.

ಪಂಡಿತ ಈಶ್ವರಚಂದ್ರ ವಿದ್ಯಾಸಾಗರನೇ ಅನಂತರ ಗಣ್ಯ ಗದ್ಯಕಾರನು. ಅವನ ಶೈಲಿಯಲ್ಲಿ ಸೌಂದರ್ಯ ಸೌಕುಮಾರ್ಯಾದಿಗುಣಗಳು ತುಂಬಿವೆ. ಅವನ 'ಸೀತಾವನವಾಸ', 'ಶಕುಂತಲಾ' ಗಳನ್ನು ಓದಿದವರಿಗೆ ಈ ಮಾತು ಅರ್ಥವಾಗುತ್ತದೆ. ಇವನು ಅನೇಕ ಪಠ್ಯ ಪುಸ್ತಕಗಳನ್ನೂ ಬರೆದನು.

೧೮೪೩ ರಲ್ಲಿ ಮಹರ್ಷಿ ದೇವೇಂದ್ರನಾಥ ಠಾಕೂರನು 'ತತ್ವಬೋಧಿನೀ ಪತ್ರಿಕೆ' ಯನ್ನು ಹೊರಡಿಸಿ ಬಂಗಾಳೀ ಗದ್ಯ ಸಾಹಿತ್ಯಕ್ಕೆ ಅಮೂಲ್ಯ ಸೇವೆಮಾಡಿದನು ಅನಂತರ ಕಾಣಬರುವ ದೊಡ್ಡ ವ್ಯಕ್ತಿಯೆಂದರೆ ಅಕ್ಷಯಕುಮಾರ ದತ್ತ. ಅವನೂ ಬಹಳ ಕಾಲ 'ತತ್ವಬೋಧಿನೀ ಪತ್ರಿಕೆ'ಯ ಸಂಪಾದಕನಾಗಿದ್ದು ಗದ್ಯಕ್ಕೆ ಶುದ್ಧ, ಸರಳ, ಸುಂದರ, ಶಕ್ತಿಪೂರ್ಣ, ಸ್ವರೂಪವನ್ನು ಕೊಟ್ಟನು. 'ಐರೋಪ್ಯ ವಿಜ್ಞಾನಕ್ಕೆ ಭಾರತೀಯ ಮುದ್ರೆಯನ್ನೊತ್ತಿದವ' ನೆಂದಿವನನ್ನು ರೆವರೆಂಡ್ ಜಾರ್ಜ ಆಂಡ್ರುಸನ್ನರಂತಹವರು ಶ್ಲಾಘಿಸಿದರು. ನೂರಾರು ಮಂದಿ ಗದ್ಯ ಲೇಖಕರು ಹುಟ್ಟಿದರು. ಭೂದೇವಚಂದ್ರ ಮೂಕರ್ಜಿಯು 'ಬಂಗಾಳದ ಅಡಿಸನ್' ಎಂಬ ಹೆಸರು ಪಡೆದನು. ಪ್ಯಾರಿಚಂದಮಿತ್ರ ಅಥವಾ ತೇಕಚಂದ ಠಾಕೂರನೇ ಮೊದಲನೆಯ ಕತೆಗಾರ

## ಬಂಕಿಂಚಂದ್ರ

ಆದರೆ ಕಾದಂಬರಿಗೆ ತಂದೆ ಬಾಬು ಬಂ... ಚತರ್ಜಿ (೧೮೩೮-೧೮೯೪). ತನ್ನ ಸಾ... ವನ್ನು ಬಂಕಿಂಚಂದ್ರನು ಮೊದಲು ಈ... ಗುಪ್ತನ ಆಶ್ರಯದಲ್ಲಿ ಆರಂಭಿಸಿದನು... ಪ್ರಪಂಚದಲ್ಲಿ 'ಬ್ರಹ್ಮ' ಪಟ್ಟವು ಮಧುಸೂ... ನಿಗೆ ದೊರೆತರೆ ಗದ್ಯ ಸಾಮ್ರಾಜ್ಯದ ಪಟ್ಟ... ಬಾಬುವಿನ ಪಾಲಿಗೆ ಬಂತು.

'ನಮ್ಮ ಗದ್ಯದಲ್ಲಿ ಕವಿತಾ ಮಾಧುರಿಯು ... ಬೇಕಾದರೆ ಬಂಕಿಂಬಾಬುವನ್ನಾಶ್ರಯಿ...

ಎಂದರಲ್ಲವೆ ಬಾಬು ಅರವಿಂದ ಘೋಷರು... ನಂದಿಸಿಯು ಸ್ಕಾಟನ 'ಐವಾನ್ ಹೊ'... ತಂದು ಕೊಡುತ್ತದೆ. ಇದೇ ಅವನ ಮೊ... ಬರಿ. ಸಾಮಾಜಿಕ, ಐತಿಹಾಸಿಕ ಮ... ಮಾರ್ಗದ ಕಾದಂಬರಿಗಳನೇಕ ಇವನ ಕೃ... ದಿಂದ ಹೊರಟು ರೂಪುಗೊಂಡವು ವಿಷ... ಕಾಂತನ ಮರಣಶಾಸನ, ಚಂದ್ರಶೇಖರ, ... ಡಲ, ರಾಜಸಿಂಹ ಇವೇ ಉದಾಹರಣೆ... ದಿರಾ, ರಾಧಾರಾಣಿ, ಯುಗಳಾಂಗುರೀಯ... ದರ್ಯವನ್ನು ಅನುಭವಿಸಿದರೆ ಗೊತ್ತಾಗುತ್ತ... ಕುರುಡು 'ರಜನಿ'ಯು ಚಿತ್ತಾಕರ್ಷಕವಾ... ಬಂಕಿಮನ ಹೆಸರು, ಬಂಕಿಮನ ಕೀರ್ತಿಗೆ ... ಮಠ'ವೇ ಕಾರಣ. ಅವನ 'ವಂದೇಮಾ... ತೆಯು ಅವನಿಗೆ ಅಮರತ್ವವವನ್ನು ತಂದಿ... ಮಠ, ಸೀತಾರಾಮ, ದೇವೀಚೌಧುರಾಣಿ... ಯತ್ವವು ತುಂಬಿ ತುಳುಕಾಡುತ್ತಿದೆ. ... ದಿಂದ ತರುಣರ ಮೇಲಾದ ಪ್ರಭಾವವನ್ನು ... ವುದಸಾಧ್ಯ. ಬಂಗಾಳದ ವಿಪ್ಲ... 'ಗಾಯಿತ್ರಿ' ಯಾಯಿತು! ವಿಪ್ಲವವಾದಿ... ಗಳಿಗೆ ಆನಂದಮಠವೇ ಸೂಕ್ಷ್ಮಸೂಚಿಯಾ...

ಬಂಕಿಮನು ಕಾದಂಬರಿಕಾರ ಮಾತ್ರನ... ನಿಕ ಐತಿಹಾಸಿಕ ವಿಚಾರ ಲೇಖಕರಲ್ಲಿ ... ಉತ್ತಮ ವಿಮರ್ಶಕ.

ಬಂಕಿಮನ ತರುವಾಯ ಲೆಕ್ಕವಿಲ್ಲದಷ್ಟು ... ರರು ಬಂದರು. ಅವರಲ್ಲಿ ರೊಮೇಶಚಂದ್ರ... ಉಲ್ಲೇಖಾರ್ಹನು. ಬಂಕಿಮನಿಂದ ಸ್ಫೂ... ರೊಮೇಶನು ವಂಗವಿಜೇತ, ಮಾಧವೀ ಕಂ...

ಪೂತ ಜೀವನ ಸಂಧ್ಯಾ, ಮಹಾರಾಷ್ಟ್ರ ಜೀವನ ಪ್ರಭಾತ, ಸಂಸಾರ, ಸಮಾಜಗಳೆಂಬ ಆರು ಕಾದಂಬರಿಗಳನ್ನು ರಚಿಸಿದನು. ಉತ್ತಮ ಶ್ರೇಣಿಯ ಸಾಹಿತ್ಯಕ್ಕೆ ಸೇರಲರ್ಹವಾದುವು ಇವು. ಪಂಡಿತ ಸುರೇಶಚಂದ್ರ ಸಮಾಜಪತಿ, ಪಂಡಿತ ಶಿವನಾಥಶಾಸ್ತ್ರಿ, ಸ್ವರ್ಣಕುಮಾರಿದೇವಿ ಮೊದಲಾದವರ ಸೇವೆಯೂ ಸಹ ಚಿರಸ್ಮರಣೀಯವಾಗಿದೆ. ಸಣ್ಣ ಕತೆಗಳನ್ನು ಬರೆಯುವುದರಲ್ಲಿ ಪ್ರಭಾತಕುಮಾರ ಮೂಕರ್ಜಿಯು ಹೆಸರುವಾಸಿಯಾದನು. ಸ್ವಾಮಿ ವಿವೇಕಾನಂದರ ಧರ್ಮಸಾಹಿತ್ಯವಾದರೋ ತರುಣಲೋಕ ಸ್ಫೂರ್ತಿಯ ಜ್ವಾಲಾಕೇಂದ್ರವಾಯಿತು. ಶಿಶಿರಕುಮಾರ ಘೋಷ್, ಅಶ್ವಿನೀಕುಮಾರ ದತ್ತ ಮತ್ತು ಅರವಿಂದ ಘೋಷರ ಲೇಖನಗಳೂ ಸಹ ಸಾಹಿತ್ಯಕ್ಕೆ ಅಪೂರ್ವ ಶೋಭೆಯನ್ನುಂಟುಮಾಡಿವೆ.

ಗದ್ಯವಾಙ್ಮಯಕ್ಕೆ ರವೀಂದ್ರನಿಂದಾದ ಪರಮೋಪಕಾರವನ್ನು ಕೊಂಚ ಹೇಳದಿದ್ದರೆ ಮಹಾಪರಾಧವಾದೀತು. ಪ್ರಪಂಚದ ಸಣ್ಣ ಕತೆಗಳ ಲೇಖಕರಲ್ಲಿ ರವೀಂದ್ರನಿಗೊಂದು ಸ್ಥಾನ ದೊರೆತಿದೆ. ಕಾಳಿದಾಸನ ಮೇಘದೂತ, ಶಕುಂತಲ, ಕುಮಾರಸಂಭವ, ವಾಲ್ಮೀಕಿ ರಾಮಾಯಣಗಳ ಮೇಲೆ ಬರೆದಿರುವ ವಿಮರ್ಶಾತ್ಮಕ ಲೇಖನಗಳು ರವೀಂದ್ರನ ಪ್ರತಿಭೆಯ ಪ್ರಭಾವವನ್ನು ತೋರಿಸುತ್ತವೆ. ಅವನ ಶಿಕ್ಷ, ಸಮಾಜ, ಚರಿತ್ರಪೂಜ, ರಾಜಾಪ್ರಜಾ ಮೊದಲಾದ ಬರಹಗಳು ಸಂಯುಮಸಂಸ್ಕೃತಿಯ ಪಕ್ವ ಫಲಗಳು.

ರವೀಂದ್ರನ ಕಾದಂಬರಿಗಳಲ್ಲಿಯ ಪಾತ್ರಗಳು ಮಾನವೀಗುಣ ವಿಶೇಷಗಳನ್ನು ಆಶ್ಚರ್ಯಕರವಾಗಿ ತೋರಪಡಿಸುತ್ತವೆ. ಅವನ ಸಣ್ಣ ಕತೆಗಳಲ್ಲಿ ಯಾವ ತರದ ಪ್ರತಿಭೆಯುಂಟೋ ದೊಡ್ಡ ಕತೆಗಳಲ್ಲೂ ಅವಕ್ಕೆ ಮೀರಿದ ಪ್ರತಿಭೆಯು ಕಾಣಬರುತ್ತದೆ.

## ನಾಟಕ ವಾಙ್ಮಯ

ಬಂಗಾಳಿಯ ನಾಟಕದ ಜೀವದಾತನೆಂದರೆ ಮೈಕೇಲ್ ಮಧುಸೂದನ ದತ್ತ. ಅವನೇ ನಾಟಕ ರಚನಾಕಲೆಯನ್ನು ಊರ್ಜಿತಗೊಳಿಸಿದವನು. ಅನಂತರ ದಿನೇಶಬಂಧು ಮಿತ್ರನ 'ನೀಲದರ್ಪಣ'ವು ವಸ್ತುವಿಶೇಷ ಮತ್ತು ರಚನಾಕೌಶಲದಿಂದ ನಾಡಿನಲ್ಲೆಲ್ಲ ಹೊಸ ಜಾಗ್ರತಿಯನ್ನುಂಟುಮಾಡಿತು. ಆದರೆ ಗಿರೀಶಚಂದ್ರ ಘೋಷನೇ ಬಂಗಾಳಿ ನಾಟಕ ಸಾಹಿತ್ಯದ ಆಚಾರ್ಯಪುರುಷನು. ಸುಮಾರು ೬೦ ನಾಟಕಗಳನ್ನು ಬರೆದನು. ಎಲ್ಲವೂ ರಂಗಭೂಮಿಗೆ ಬಂದು ವಿಜಯಶ್ರೀಯನ್ನು ಪಡೆದವು! 'ಬಿಲ್ವಮಂಗಳ'ವೇ ಅವನ ಕೀರ್ತಿಕಲ್ಪತರು.

ಆದರೆ ಸರ್ವಾಂಗ ಸುಂದರವೂ, ರಸಪೂರ್ಣವೂ, ಅಪೂರ್ವರಚನಾವಿಜ್ಞಾನಕುಶಲತೆಯೂ ಉಳ್ಳ ನಾಟಕಗಳನ್ನು ರಚಿಸಿ ಬಂಗಾಳಕ್ಕೆ ಯಶಸ್ಸನ್ನು ಗಳಿಸುವ ಸುಯೋಗವು ದ್ವಿಜೇಂದ್ರಲಾಲ್‌ರಾಯನಿಗೆ ಲಭಿಸಿತು. ಐತಿಹಾಸಿಕ, ಸಾಮಾಜಿಕ, ಪೌರಾಣಿಕ ನಾಟಕಗಳನೇಕ ಆತನ ಪ್ರಸಾದದಿಂದ ನಮಗೆ ಲಭಿಸಿವೆ. ಆತನ ವರ್ಣಕಶೈಲಿಯು ಶಕ್ತಿಯುತ ರೂಪಕಕ್ಕೊಂದು ವಿಶೇಷ ಕಳೆಯನ್ನು ಕೊಟ್ಟಿದೆ. ಆತನು ಪ್ರತಿಭಾವಂತನೆನ್ನಲಿಕ್ಕೆ ಚಂದ್ರಗುಪ್ತ, ಷಹಜಹಾನ್, ಮೇವಾಡಪತನ ಇವು ಮೂರು ನಾಟಕಗಳೇ ಸಾಕು. ದ್ವಿಜೇಂದ್ರಲಾಲನು ಚಿತ್ತಗಳನ್ನು ಸೆಳೆಯಬಲ್ಲ ಅನೇಕ ರಾಷ್ಟ್ರಗೀತೆಗಳನ್ನು ಹಾಡಿದ್ದಾನೆ. (೧೯೧೩ರಲ್ಲಿ ಈತನು ಸ್ವರ್ಗಸ್ಥನಾದನು.)

ಅಮೃತಲಾಲಬಸು, ಕ್ಷೀರೋದ ವಿನೋದ ವಿದ್ಯಾವಿನೋದರೂ ಸಹ ಉತ್ತಮ ನಾಟಕ ಕರ್ತೃಗಳು. ಸ್ಥಳ ಸಂಕೋಚದಿಂದ ಇಲ್ಲಿ ಅವರ ವಿಚಾರವಾಗಿ ಏನನ್ನು ಹೇಳಲೂ ಸಾಧ್ಯವಿಲ್ಲ. ಇಂದು ನೂರಾರು ಮಂದಿ ನಾಟಕ ಲೇಖಕರಿದ್ದಾರೆ ಆದರೆ ಅವರ ವಿಚಾರವಾಗಿ ಈಗಲೇ ಏನು ಹೇಳಲೂ ಸಾಧ್ಯವಿಲ್ಲ. ಶಿಶಿರಕುಮಾರ ಬಹದ್ದೂರಿಯು ಬಂಗಾಳದಲ್ಲೇಕೆ ಅಂತರರಾಷ್ಟ್ರೀಯ ಕೀರ್ತಿಸಂಪಾದನೆಯನ್ನು ಸಹ ಮಾಡಿದ್ದಾನೆ. ರವೀಂದ್ರನಾಥನ ವಿಚಾರವನ್ನಾಗಲೇ ಹೇಳಿದ್ದಾಯಿತು. ರವೀಂದ್ರನ ಹಾದಿ ಹೊಸದು. ಕಲಿತವರೂ, ಆದರ್ಶ ಜೀವಿಗಳೂ ರವೀಂದ್ರನ ನಾಟಕಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ಆನಂದಿಸಬಲ್ಲರು.

## ಕೊನೆಮಾತು

ಬಂಗಾಳದಲ್ಲಿ ಈಗ ಹೊಸಮಾದರಿಯ ಕಾದಂಬರಿ ಲೇಖಕರು ಬೇಕಾದಷ್ಟು ಮಂದಿ ಇದ್ದಾರೆ. ಶಿಶುಸಾಹಿತ್ಯವು ತಲೆಹಾಕಿ ಸಾಹಿತ್ಯ ಲೋಕವು ಆನಂದಮಯವಾಗಿದೆ. ಇದೊಂದು ಹೊಸ ಸೃಷ್ಟಿ. ಸಾಹಿತ್ಯದಲ್ಲಿ ಬಗೆಬಗೆಯ ಸ್ವರೂಪ ಸೃಷ್ಟಿಗಾಗಿ ಪ್ರಯೋಗಗಳು

ನಡೆಯುತ್ತಿವೆ. ಶರಚ್ಚಂದ್ರ ಚಟರ್ಜಿಯು ಉತ್ತಮ ತರದ ನಗೆಗಾರ. ಅವನ ಬರಹಗಳು ಅವನಿಗೆ 'ಚಾರಲ್ಸ್ ಡಿಕಿನ್ಸ್' ಎಂಬ ಬಿರುದನ್ನು ತಂದಿವೆ. ಸರಳಶೈಲಿ; ಪಾತ್ರರಚನಾಚಾತುರೀಧುರೀಣನಿವ. ಕತೆ ಹೇಳುವುದರಲ್ಲಿ ನಿಸ್ಸೀಮ. ಇವನ .ಸಣ್ಣಕತೆಗಳನ್ನೋದಿ ಆನಂದಿಸದವರೇ ಇಲ್ಲವೆನ್ನಬೇಕು. ಮನ್ನೆ ಮನ್ನೆ ಅವನು ಬರೆದ 'ಪಾತರ ದಬಿ' ಎಂಬ ಕಾದಂಬರಿಯನ್ನು 'ಮುಟ್ಟುಗೋಲು' ಹಾಕಿಕ್ಕೊಂಡರು!

ಮಾತೃಭೂಮಿಯು ಬಂಧವಿಮೋಚನವೇ ಆ
ಯ ವಸ್ತು ವಿಶೇಷ.

ಸಾಹಿತ್ಯ ವಿಮರ್ಶಕರೂ, ಮತ, ದರ್ಶನ
ಇತಿಹಾಸ, ರಾಜನೀತಿ ಮೊದಲಾದ ವಿವಿಧ
ವಿಶಾರದರೂ ತಮ್ಮತಮ್ಮ ಯೋಗ್ಯತಾನುಸಾ
ಭಾಷಾ ಸೇವೆಮಾಡುತ್ತಿದ್ದಾರೆ. ಇಂದಿಲ್ಲ
ಗಾಳಿಯು ವಿಶ್ವಸಾಹಿತ್ಯಗಳ ಶ್ರೇಣಿಗೆ ಸೇ
ವಾದೀತೆಂಬುದರಲ್ಲಿ ಸಂದೇಹವಿಲ್ಲ.



ಬಾಬು ಬಂಕಿಂಚಂದ್ರ ಚಟರ್ಜಿ

# ಆಧುನಿಕ ಕನ್ನಡ ವಾಙ್ಮಯ

(ಶ್ರೀ ಕೆ. ವಿ. ಪುಟ್ಟಪ್ಪ ಎಂ. ಎ., ಇಂಟರ್ ಕಾಲೇಜ್, ಮೈಸೂರು)

## ಜೀವಂತ ಸಾಹಿತ್ಯ

ತಮುಳನ್ನು ಬಿಟ್ಟರೆ ದೇಶಭಾಷೆಗಳಲ್ಲಿ ಕನ್ನಡಸಾ ಹಿತ್ಯವೇ ಅತಿಪ್ರಾಚೀನವಾದುದೆಂದು ಹೇಳಬಹುದು. ಕನ್ನಡದಲ್ಲಿ ಇತರ ದೇಶಭಾಷಾ ಸಾಹಿತ್ಯಗಳಲ್ಲಿ ಸಾಮಾ ನ್ಯವಾಗಿ ತೋರದ ಒಂದು ವಿಶೇಷ ಗುಣವಿದೆ. ಅದು ಮೊ ದಲಿನಿಂದಲೂ ಹೊಸ ಹೊಸ ಹಾದಿಗಳಲ್ಲಿ ಹೆಜ್ಜೆಯಿಟ್ಟು ಕೊಂಡು ಬಂದಿದೆ. ಬರುತ್ತ ಬರುತ್ತ ಅನೇಕ ರೂಪಾಂ ತರಗಳನ್ನು ಹೊಂದಿದೆ. ಜೈನರು ಪ್ರಬಲರಾಗಿದ್ದ ಕಾಲದಲ್ಲಿ ವೃತ್ತ ಕಂದಗಳಿಂದ ಕೂಡಿದ ಚಂಪೂ ಕಾವ್ಯಗಳೇ ವಿಶೇಷವಾಗಿದ್ದುವು. ಬಸವೇಶ್ವರರು ಮತಪ್ರಚಾರ ಮಾಡಲು ತೊಡಗಿದ ಮೇಲೆ ವೀರ ಶೈವ ಕವಿಗಳು ಸಾಮಾನ್ಯ ಜನರೂ ಸುಲಭವಾಗಿ ತಿಳಿಯಬಹುದಾದ ವಚನಗಳನ್ನು, ಷಟ್ಪದೀಕಾವ್ಯ ಗಳನ್ನು ಬರೆದರು. ತರುವಾಯ ವೈಷ್ಣವ ಮತದ ಪ್ರಾಬಲ್ಯದ (?) ನಾಡಿನಲ್ಲಿ ಪ್ರವಹಿಸಿದಾಗ ಕವಿಗಳು ಭಾಗವತ, ಮಹಾಭಾರತ, ರಾಮಾಯಣ, ಮೊದ ಲಾದ ಮಹಾಕಾವ್ಯಗಳನ್ನು ಜನಸಾಮಾನ್ಯರೂ ಹಾಡು ವುದಂತೆ ಸುಲಭವಾದ ಷಟ್ಪದಿಗಳಲ್ಲಿಯೇ ಗ್ರಂಥ ರಚನೆಮಾಡಿದರು. ಅಲ್ಲದೆ ವೀರಶೈವರು ವಚನ ಗಳನ್ನು ಬರೆದಂತೆ ದಾಸರು ಮಾತನಾಡುವ ಭಾಷೆ ಯಲ್ಲಿಯೇ ಅನೇಕಾನೇಕ ಕೀರ್ತನೆಗಳನ್ನು ಬರೆದು, ನಾಡಿ ಜನರಲ್ಲಿ ಭಕ್ತಿಯು ಹೆಚ್ಚುವಂತೆ ಮಾಡಿದರು. ಹೀಗೆ ಒಂದೊಂದು ಹೊಸಮತವು ಹುಟ್ಟಿದಾಗ ಒಂದೊಂದು ಹೊಸ ಸನ್ನಿವೇಶವು ಬಂದೊದಗಿದಾಗ ಕನ್ನಡ ಸಾಹಿತ್ಯವು ಅದರದರ ಹೊಸ ಹುರುಪನ್ನು ಸೇರಿಕೊಂಡು ಹೊಸ ಹೊಸ ರೂಪಗಳನ್ನು ತಳೆದು ರಿಯುಸ್ವಾದಂತೆಲ್ಲಾ ತನ್ನ ಚಿರಯೌವನವನ್ನು ಕಾಪಾ ಡಿಕೊಂಡು ಬಂದಿದೆ. ಸನ್ನಿವೇಶಕ್ಕೆ ತಕ್ಕಹಾಗೆ ವೇಷಾವೇಶಗಳನ್ನು ಬದಲಾಯಿಸಿಕೊಳ್ಳುತ್ತ ತನ್ನ ತನದ ಆತ್ಮಸಾರವನ್ನು ತಿರಸ್ಕರಿಸದೆ, ನೂತನದ ಆಶೆ ಆಶಯಗಳನ್ನು ಅಸಡ್ಡೆ ಮಾಡದೆ ಮುಂದು ವರಿಯುವುದು ನಿಜವಾದ ಪ್ರಗತಿಯ ಚಿಹ್ನೆ; ನೈಜ ಜೀವನದ ಕುರುಹು; ಜೀವಂತ ಸಾಹಿತ್ಯದ ಲಕ್ಷಣ.

ಆಧುನಿಕ ಕನ್ನಡ ಸಾಹಿತ್ಯವು ಸನ್ನಿವೇಶದ ಪ್ರಭಾ ವದಿಂದ ಜನ್ಮವೆತ್ತಿದೆ. ಅಂದರೆ ಪಾಶ್ಚಾತ್ಯ ಸಾಹಿತ್ಯ ಮತ್ತು ಸಂಸ್ಕೃತಿಗಳ ಪ್ರಭಾವದಿಂದ ಉತ್ಪನ್ನ ವಾಗಿದೆ. ಅದರಲ್ಲಿಯೂ ವಿಶೇಷವಾಗಿ ಇಂಗ್ಲೀಷು ಸಾಹಿತ್ಯಜ್ಯೋತಿಯಿಂದ ಪ್ರದೀಪ್ತವಾದುದು. ಅಂದರೆ ನಮ್ಮ ಪ್ರಾಚೀನ ಸಾಹಿತ್ಯಕ್ಕೂ ಪಾಶ್ಚಾತ್ಯ ಸಾಹಿ ತ್ಯಕ್ಕೂ ಇರುವ ಭೇದಗಳೇ ಆಧುನಿಕ ಕನ್ನಡ ಸಾಹಿ ತ್ಯಕ್ಕೂ ಪ್ರಾಚೀನ ಕನ್ನಡಸಾಹಿತ್ಯಕ್ಕೂ ಇರುವುವೆಂದು ಹೇಳಬಹುದು. ವರ್ಣನಾಕಾವ್ಯಗಳು ಕಡಿಮೆಯಾಗಿ ವ್ಯಂಜಕ ಕಾವ್ಯಗಳು ಹೆಚ್ಚುತ್ತಿವೆ; ಪದ್ಯಕ್ಕಿಂತ ಗದ್ಯ ಹೆಚ್ಚಿದೆ; ಹಳಗನ್ನಡ ಸಾಹಿತ್ಯದಲ್ಲಿ ಎಲ್ಲಿಯೂ ತೋರದಿರುವ ವಾಙ್ಮಯಭಾಗವಾದ ನಾಟಕಗಳು ಹುಟ್ಟಿವೆ; ಕಾದಂಬರಿ, ಸಣ್ಣಕತೆ, ವಿಮರ್ಶೆ ಮೊದ ಲಾದ ಹೊಸ ಹೊಸ ರೂಪಗಳು ಮೈದೋರಿವೆ; ಸಿದ್ಧಾಂತಮಾರ್ಗಕ್ಕಿಂತಲೂ ಸ್ವತಂತ್ರಮಾರ್ಗಕ್ಕೆ ಹೆಚ್ಚಾದ ಮನ್ನಣೆ ದೊರತಿದೆ; ವಸ್ತುವಿನ ವರ್ಣನೆ ಗಿಂತಲೂ ವಸ್ತುವನ್ನು ಕಂಡು ಅನುಭವಿಸಿದ ವ್ಯಕ್ತಿಯ ಭಾವದ ವರ್ಣನೆಯು ಹೆಚ್ಚುತ್ತಿದೆ; ನಿರ್ಜೀವವಾದ ನಿಯಮ ಪಾಲನೆಗಿಂತಲೂ ಸಜೀವವಾದ ನಿಯಮೋ ಲ್ಲಂಘನವೇ ಕಲ್ಯಾಣಕರವೆಂಬಭಾವನೆಯು ಮೂಡು ತ್ತಿದೆ; ಸಾಹಿತ್ಯವಿರುವುದು ಎಲ್ಲಿಯೋ ಅಲ್ಪಸ್ವಲ್ಪ ವಿದ್ವಾಂಸರಿಗೆ ಎಂಬ ದೃಷ್ಟಿಗೆ ಬದಲಾಗಿ, ಮಾಯವಾಗಿ ಜನಸಾಮಾನ್ಯರೂ ಅದರ ರಸಾಸ್ವಾದನೆ ಮಾಡಬೇಕು ಎಂಬ ದೃಷ್ಟಿಯು ಉದ್ಭವಿಸಿದೆ. ಇಂತಹ ಧ್ಯೇಯ ದಿಂದ ಬರೆದ ಸಾಹಿತ್ಯವನ್ನೆಲ್ಲ ಆಧುನಿಕ ಸಾಹಿತ್ಯ ವೆಂದು ಕರೆಯಬಹುದು.

## ಕಾದಂಬರಿ, ನಾವೆಲು

ಮೇಲೆ ಹೇಳಿದ ದೃಷ್ಟಿಯಿಂದ ಆಧುನಿಕ ಕನ್ನಡ ಸಾಹಿತ್ಯವು ಕೀರ್ತಿಶೇಷರಾದ ಬಿ. ವೆಂಕಟಾಚಾರ್ಯರ ಕಾದಂಬರಿಗಳಿಂದ ಪ್ರಾರಂಭವಾಯಿತೆಂದು ಇಟ್ಟುಕೊಳ್ಳಬಹುದು. ವೆಂಕಟಾಚಾರ್ಯರು ಬಂಗಾಳಿ ಭಾಷೆಯಲ್ಲಿ ಬಂಕಿಮಚಂದ್ರರು ಬರೆದ ಕಾದಂಬರಿಗಳನ್ನು ಭಾಷಾಂತರಮಾಡಿದರು. ಬಂಕಿಮಚಂದ್ರರು ಇಂಗ್ಲೀಷು



ಶ್ರೀ ಬಿ. ವೆಂಕಟಾಚಾರ್

ಭಾಷೆಯನ್ನು ತಿಳಿದವರಾಗಿದ್ದರು. ಸ್ಕಾಟ್ ಮೊದಲಾದ ಆಂಗ್ಲೇಯ ಕಾದಂಬರಿಕಾರರ ಗ್ರಂಥಗಳನ್ನು ಓದಿ, ಅವುಗಳಿಂದ ಪ್ರೇರಿತರಾಗಿ ಕಾದಂಬರಿಗಳನ್ನು ಬರೆದರು. ಆದ್ದರಿಂದ ವೆಂಕಟಾಚಾರ್ಯರ ಕಾದಂಬರಿಗಳಿಗೆ ಆಂಗ್ಲೇಯ ಸಾಹಿತ್ಯವೇ ಪ್ರೇರಕವೆಂದು ಹೇಳಬಹುದು. ಪ್ರಾಚೀನ ಭರತವರ್ಷದ ಸಾಹಿತ್ಯ ಭಾಷೆಯಾದ ಸಂಸ್ಕೃತದಲ್ಲಿ ಪುರಾಣಗಳಿದ್ದವು; ನಾಟಕಗಳಿದ್ದವು; ಕಾದಂಬರಿ ಎಂಬ ಹೆಸರಿನ ಕಥೆಯೂ ಕೂಡ ಇದೆ. ಆದರೆ ನಾವೀಗ ಕಾದಂಬರಿ ಎನ್ನುವ ಕಾವ್ಯವನ್ನು ಹೋಲುವ ಗ್ರಂಥರಚನೆಯಾಗಿರಲಿಲ್ಲ. ಸಂಸ್ಕೃತವನ್ನೇ ಮಾದರಿಯನ್ನಾಗಿಟ್ಟುಕೊಂಡು ಬರೆದ



ದೇಶಭಾಷೆಯ ಸಾಹಿತ್ಯಗಳು ಇಂಗ್ಲೀಷಿ... ಲುಗಳನ್ನು ನಿರ್ಮಿಸಲಿಲ್ಲ. ನಾವೆಲು ಪುರಾಣ... ನಾಟಕದ ಸಮನ್ವಯದಿಂದ ಮೂಡಿದ... ನಾಗರೀಕ ಪುರಾಣ; ಕರತಲರಂಗಭೂಮಿ... ಪುರಾಣಗಳಲ್ಲಿರುವಂತೆ ಕಥೆ ಮತ್ತು... ಸ್ವಾರಸ್ಯವೂ ಇದೆ; ನಾಟಕಗಳಲ್ಲಿರುವ... ಸಂಭಾಷಣೆ ಇತ್ಯಾದಿಗಳ ಸ್ವಾರಸ್ಯ... ನಾಟಕದ ದೃಶ್ಯಗಳು ನಾವೆಲಿನಲ್ಲಿ ಆಖ್ಯಾ... ರೂಪಾಂತರ ಹೊಂದಿವೆ. ಪಾಶ್ಚಾತ್ಯ... ಪುರಾಣ ನಾಟಕಗಳು ಹುಟ್ಟಿ ಬಹ... ಮೇಲೆ ನಾವೆಲು ಹುಟ್ಟಿತು. ನಾ... ಹೆಚ್ಚುತ್ತ ಬಂದಹಾಗೆಲ್ಲ, ವಿಜ್ಞಾ... ದೇವ ದೇವತೆಗಳನ್ನು ಸ್ವರ್ಗಸಿಂಹಾಸನ... ಮಾಡುತ್ತ ಬಂದಹಾಗೆಲ್ಲ, ಜನರಿಗೆ ಪ್ರ... ನಂಬುಗೆಯೂ ಅಭಿರುಚಿಯೂ ಕಡಿ... ನಾಗರೀಕತೆಯ ಶೈಶವಾವಸ್ಥೆಯಲ್ಲಿ ಪ್ರ... ನೆಯು ಮಕ್ಕಳ ಕಲ್ಪನೆಯಂತೆ ಇದ್ದು ಪ್ರ... ಶಕ್ತಿಗಳಿಗೆಲ್ಲ ವ್ಯಕ್ತಿತ್ವವನ್ನು ಆರೋಪಿ... ದೇವತೆಗಳನ್ನು ಸೃಜಿಸಿ, ಪುರಾಣ, ಕಥೆ... ಬರೆದರು. ಸೃಷ್ಟಿಯ ಗೂಢ ತತ್ವ... ಮನುಷ್ಯನಿಗೆ ತಿಳಿದಂತೆಲ್ಲ ಅಮರರಾ... ಗಳು ಬಿಚ್ಚೊಬ್ಬರಾಗಿ ಆಕಾಶದಿಂದ ಉರು... ಹೋದರು. ಆದ್ದರಿಂದ ದೇವತೆಗಳ ... ಯಲ್ಲಿದ್ದ ಕುತೂಹಲವು ಮಾಯವಾಗಿ ... ಜೀವನಲೀಲೆಯಲ್ಲಿ ಕುತೂಹಲವು ... ಅದರ ಫಲವಾಗಿ ನಾವೆಲುಗಳೂ ನಾಟಕ... ಗಳೂ ಹುಟ್ಟಿದುವು. ಪಾಶ್ಚಾತ್ಯರ ... ನಮ್ಮವರ ನಯನಗಳು ಸ್ವರ್ಗದ ... ಮರ್ತ್ಯದ ಮಾನವರ ಕಡೆ ತಿರುಗಿದುವು. ... ಬಕಾಸುರನ ವಧೆ, ಶ್ರೀ ಕೃಷ್ಣನ ಲೀಲೆಗಳ... ಆನಂದಮಠ, ರಾಜಸಿಂಹ, ದೇವಿ... ವಿಷವೃಕ್ಷ ಮೊದಲಾದ ಮಾನವೀಯ ... ಸಾಹಿತ್ಯದ ವಿಷಯಗಳಾದವು. ಇಂಗ್ಲೀ... ಬಂಗಾಳಿಯ ಉಪನ್ಯಾಸಗಳ ಮುಖಾಂ... ಕಾದಂಬರಿಯಾಯಿತು. ವೆಂಕಟಾಚಾರ್ಯ... ದಿಂದ ನಮ್ಮಲ್ಲಿದ್ದ ಗದ್ಯದ ಕ್ಷಾಮವು ... ತೊಲಗಿತು. ಜನರು ಅವರ ಭಾಷಾಂತರ... ಆನಂದಪಟ್ಟರು.

ಅವರ ತರುವಾಯ ಅನೇಕರು ಕಾದಂಬರಿಗ ...ನ್ನು ಬರೆದಿದ್ದಾರೆ. ಅವರಲ್ಲಿ ಗಣ್ಯರಾದವರೆಂದರೆ ...ೀ ಗಳಗನಾಥರವರು. ಗಳಗನಾಥರು ಅನೇಕ ...ತಂತ್ರ ಕಾದಂಬರಿಗಳನ್ನು ಬರೆದರು. ವೆಂಕ ...ಾಚಾರ್ಯರು ಬಂಗಾಳಿ ಭಾಷೆಯ ಸಹಾಯ ...ನ್ನು ತೆಗೆದುಕೊಂಡಂತೆ ಗಳಗನಾಥರು ಮರಾಟಿ ...ಾಷೆಯನ್ನು ಆಶ್ರಯಿಸಿದರು. ಮರಾಟಿಯು ಆಗಾ ...ಲೇ ಆಂಗ್ಲೇಯ ಸಾಹಿತ್ಯದ ಪ್ರಭಾವಕ್ಕೆ ಸಿಲುಕಿತ್ತು. ...ಿತು ಎತ್ತ ಕಡೆಯಿಂದ ನೋಡಿದರೂ ಇಂಗ್ಲೀಷ್ ...ಾಹಿತ್ಯದ ಪ್ರೇರಣೆಯಿಂದಲೇ ನಮ್ಮ ಕಾದಂಬರಿಗಳು ...ೇರಬಿಟ್ಟವು. ಆದ್ದರಿಂದ ಕಾದಂಬರಿಗಳೆಲ್ಲ ನಿರ್ವಿ ...ಾದವಾಗಿ ಆಧುನಿಕ ಸಾಹಿತ್ಯಕ್ಕೆ ಸೇರಿದವು. ಗಳಗ ...ಾಥರಲ್ಲದೆ ಇನ್ನು ಇತರರು ಕಾದಂಬರಿಗಳನ್ನು ಬರದಿ ...ದ್ದಾರೆ. ಬಂಗಾಳಿ ಮರಾಟಿ ಸಾಹಿತ್ಯಗಳ ಮಾದರಿ ...ನ್ನು ಬಯಸದೆ ಸ್ಥಳೀಯ ಜೀವನವನ್ನೇ ಅರಮನೆ ...ಂದ ಗುಡಿಸಲಿನವರೆಗೆ ನಿರೀಕ್ಷಿಸಿ ಚಿತ್ರ ಕಣ್ಣಿಗೆ ...ಟ್ಟುವಂತೆ ಮನೆಮಾತಿನ ಶೈಲಿಯಲ್ಲಿ ಕಾದಂಬರಿ ...ಳನ್ನು ಬರೆದ ಪುಟ್ಟಣ್ಣನವರನ್ನು ಇಲ್ಲಿ ಮರೆಯಲಾ ...ವುದಿಲ್ಲ. ಗ್ರಂಥ ಬಾಹುಳ್ಯದ ದೃಷ್ಟಿಯಿಂದ ನಂಜನ ...ೂಡಿನ ಶ್ರೀಮತಿ ತಿರುಮಲಾಂಬಾರವರೂ ಶ್ರೀಮತಿ



ಶ್ರೀಮತಿ ಆರ್. ಕಲ್ಯಾಣಮ್ಮನವರು

...ರ್. ಕಲ್ಯಾಣಮ್ಮನವರೂ ಗಣನೀಯರಾದವರು. ...ವರಲ್ಲದೆ ಒಂದೆರಡು ಕಾದಂಬರಿಗಳನ್ನು ಬರೆದ ಮಹ ...ಿಯರು ಬಹಳವಿದ್ದಾರೆ. ಇಷ್ಟು ಕಾದಂಬರಿಗಳು ...ಟ್ಟಿದರೂ ಪ್ರಥಮ ಶ್ರೇಣಿಗೆ ಸೇರಬಹುದಾದ ...ತಂತ್ರ ಕಾದಂಬರಿಗಳು, ನಾವೆಲ್ಲ ಇನ್ನೂ ಬಂದಿಲ್ಲ. ...ಾರಿದ್ರ್ಯದಿಂದಲೋ, ಅನುಭವದದಾರಿದ್ರ್ಯದಿಂದಲೋ, ಇತಿಹಾಸ ಜ್ಞಾನಾಭಾವದಿಂದಲೋ, ಜನಜೀವನವನ್ನು ಚೆನ್ನಾಗಿ ಗ್ರಹಿಸುವ ಸಾಮರ್ಥ್ಯವಿಲ್ಲದಿರುವುದ ರಿಂದಲೋ, ಯಾವ ಕಾರಣದಿಂದಲೋ ಪ್ರಥಮ ವರ್ಗಕ್ಕೆ ಸೇರುವ ಕಾದಂಬರಿಕಾರನು ನಮ್ಮಲ್ಲಿ ಇನ್ನೂ ಹುಟ್ಟಿಲ್ಲ.

## ಸಣ್ಣ ಕತೆ

ಕಾದಂಬರಿಗೆ ಬದಲಾಗಿ ಸಣ್ಣ ಕತೆಗಳು ವಿಶೇಷ ವಾಗಿ ಹುಟ್ಟುತ್ತಿವೆ. ಸಾಹಿತ್ಯ ಪ್ರಪಂಚಕ್ಕೆ ಕಾಲಿ ಡಬೇಕು ಎನ್ನುವರೆಲ್ಲರೂ ಕೈ ಪಳಗಲಿ ಎಂದು ಮೊದಲು ಒಂದ ಸಣ್ಣ ಕತೆಯನ್ನು ಬರೆಯುತ್ತಾರೆ. ಸಣ್ಣಕತೆಯು ಬರೆಯಲು ಬಹು ಸುಲಭವಾದು ದೆಂದು ಅನೇಕರು ತಿಳಿದಂತಿದೆ. ಆದ್ದರಿಂದರು ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಪುರಾಣ, ನಾಟಕ, ಕಾದಂಬರಿಗಳು ಚೆನ್ನಾಗಿ ಅಭಿವೃದ್ಧಿ ಹೊಂದಿದ ಮೇಲೆ ಸಣ್ಣಕತೆಯು ರಂಗಕ್ಕಿಳಿದು ಪ್ರಮುಖವಾಯಿತು ಎಂಬುದನ್ನು ಮರೆಯದಿರಲಿ. ಅಲ್ಲಿ ಸಣ್ಣಕತೆಯು ಹೆಚ್ಚಿ ಕೊಂಡುದು ಸನ್ನಿವೇಶಪ್ರಭಾವದಿಂದ. ನಾಗರಿ ಕತೆಯೂ ಯಂತ್ರಕೌಶಲವೂ ವ್ಯಾಪಾರವೂ ಕೈಗಾರಿ ಕೆಯೂ ಜೀವನದ ಹೋರಾಟವೂ ಪ್ರಬಲವಾಗಲು ಜನಗಳಿಗೆ ದೊಡ್ಡ ದೊಡ್ಡ ಕಾದಂಬರಿಗಳನ್ನು ಓದಲು ಪುರಸತ್ತು ಕಡಿಮೆಯಾಯಿತು. ತಾಳ್ಮೆಯಿಲ್ಲದೆಹೋ ಯಿತು. ಆದ್ದರಿಂದಲೇ ಪುರಾಣವು ಭಾವಗೀತೆಗಳಾ ದಂತೆ ಕಾದಂಬರಿಯು ಸಣ್ಣಕತೆಯಾಯಿತು. ಆದರೆ ನಾವು ನಾತ್ರ ಇದೊಂದನ್ನೂ ಗಣನೆಗೆತಾರದೆ ಸಣ್ಣ ಕತೆಗಳಿಗೆ ಧುಮುಕಿದ್ದೇವೆ. ಸಣ್ಣಕತೆಯು ಈಗಿನ ರೂಪದಲ್ಲಿ ನಮಗೆ ಹೊಸದಾದರೂ ಸಂಪೂರ್ಣವಾಗಿ ಹೊಸದಲ್ಲ. ಸಂಸ್ಕೃತದಲ್ಲಿಯೂ ಬೇಕಾದಷ್ಟು ಸಣ್ಣ ಕತೆಗಳಿದ್ದುವು. ಕಥಾಸರಿತ್ಸಾಗರ, ಪಂಚತಂತ್ರ ಮೊದಲಾದವು ಸಣ್ಣಕತೆಗಳ ಜಾತಿಗೆ ಸೇರಿದವು. ಕನ್ನಡದಲ್ಲಿಯೂ ಅಂತಹ ಕಟ್ಟುಕತೆಗಳು ಬೇಕಾದ ಷ್ಟಿದ್ದುವು. ಹೊಸ ರೂಪದಲ್ಲಿ ಕನ್ನಡಕ್ಕೆ ಮೊದಲು ಸಣ್ಣಕತೆಯನ್ನು ತಂದವರು ಶ್ರೀಮಾನ್ ಮಾಸ್ತಿ ವೆಂಕಟೇಶಅಯ್ಯಂಗಾರ್ಯರು. ಅವರ ಕತೆಗಳನ್ನು ಓದಿ ನಾಡಿನ ಜನರು ನಲಿದರು. ಕೆಲಕಾಲದಲ್ಲಿಯೇ ಸಣ್ಣ ಕತೆ ಬರೆಯುವ ಹುಚ್ಚು ಅನೇಕರಿಗೆ ಹಿಡಿಯಿತು. ಮಾಸಪತ್ರಿಕೆಗಳಲ್ಲಿ ನೂರಾರು ಸಣ್ಣ ಕತೆಗಳು ಕಾಣಿ ಸಿಕೊಂಡವು. ಇನ್ನೂ ಕಾಣಿಸಿಕೊಳ್ಳುತ್ತಿವೆ. ಅವುಗ

ಳಲ್ಲಿ ಯೋಗ್ಯವಾದುದು ಒಂದು ಇದ್ದರೆ ಅಯೋಗ್ಯವಾದುವು ನೂರು ಇವೆ. ವೆಂಕಟೇಶಐಯಂಗಾರ್ಯರು ಪ್ರತಿಭಾಶಾಲಿಗಳಾದುದರಿಂದ ಅವರ ಕಥೆಗಳಲ್ಲಿ ಬೇಕಾದಷ್ಟು ವೈವಿಧ್ಯವಿದೆ; ಶಕ್ತಿಯಿದೆ. ಅವರ ಕತೆಗಳ ಹೆಸರುಗಳನ್ನು ನೋಡಿದರೆ ಅದು ಗೊತ್ತಾಗುವುದು. ಒಂದು ಕತೆ ನಗಿಸಿದರೆ ಮತ್ತೊಂದು ಅಳಿಸುವುದು;



ಶ್ರೀ ಮಾಸ್ತಿ ವೆಂಕಟೇಶಐಯಂಗಾರ್ಯರು

ಇನ್ನೊಂದು ಬೆದರಿಸುವುದು; ಬೇರೊಂದು ಸಂತೈಸುವುದು. ಅವರು ರಂಗಪ್ಪನ ಬಾಲಶೃಂಗಾರ ರಸವರ್ಣನೆಯೊಂದನ್ನೇ ಮಾಡಿ ಕೈ ತೊಳೆದುಕೊಳ್ಳಲಿಲ್ಲ; ಬಾದಶಹನ ನ್ಯಾಯವನ್ನೂ ಬರೆದರು; ವೆಂಕಟರಾಯನ ಪಿಶಾಚವನ್ನೂ ಬರೆದರು; ಭಯಂಕರವಾದ ಇಂದಿರೆಯನ್ನೂ ಬರೆದರು; ತತ್ತ್ವಪೂರ್ಣವಾದ ಸಾರಿಪುತ್ರನ ಕಡೆಯ ದಿನಗಳನ್ನೂ ಬರೆದರು. ಆದರೆ ಅವರನ್ನು ಹಿಂಬಾಲಿಸಿದ ಯುವಕರು ಬರೆಯುವುದರಲ್ಲಿ ಅವರನ್ನು ಅನುಕರಿಸಿದರೇ ಹೊರತು ಬರವಣಿಗೆಯಲ್ಲಿ ಅವರನ್ನು ಅನುಸರಿಸಲಿಲ್ಲ. ಅದರಲ್ಲಿಯೂ ವಿದ್ಯಾರ್ಥಿಗಳಿಗೆ ಹುಡುಗ ಹುಡುಗಿಯರ ಕೋರ್ಟ್‌ಷಿಪ್ಪಿನ ಕತೆಗಳನ್ನು ಬಿಟ್ಟು ಬೇರೆಯದನ್ನು ಬರೆಯುವುದೇ ಗೊತ್ತಿಲ್ಲವೋ ಏನೋ ಎನ್ನುವಂತೆ ತೋರುತ್ತಿದೆ. ಮುಂದೆ ಬರೆಯುವವರು ವಿಮರ್ಶೆಮಾಡಿ ಬರೆದರೆ ಉತ್ತಮ. ಸಣ್ಣ ಕತೆಗಳನ್ನು ಮೊದಲು ಬರೆದವರಲ್ಲಿ ವೆಂಕಟೇಶಐಯಂಗಾರ್ಯರು ಅಗ್ರಗಣ್ಯರಾದರೂ ಬಾಗಲಕೋಟೆಯ ವಾಸುದೇವಾಚಾರ್ಯರೂ ಎರಡನೆಯ ಸ್ಥಾನಕ್ಕೆ ಬರುವವರೆಂದು ಹೇಳಬಹುದು. ಅವರ... ಲಲಿತವಾಗಿವೆ. ಇತ್ತೀಚೆಗೆ ಸಣ್ಣ ಕತೆ... ತರುಣರಲ್ಲಿ "ಆನಂದ" ಎಂಬ ಸಂಕೇತ... ಜನರಿಗೆ ತಿಳಿದಿರುವ ಶ್ರೀಮಾನ್ ಎ. ... ರವರು ಗಣ್ಯರಾದವರು. ಅವರಿಗೆ ... ಶಕ್ತಿಯೂ ದೃಶ್ಯಗಳನ್ನು ಚಿತ್ರಿಸುವ ... ಸಾಕಾದಷ್ಟಿದೆ. ಅವರ ಸಣ್ಣಕತೆಗಳು ... ಮಧುರವಾಗಿವೆ. ಸಣ್ಣಕತೆಗಳೇನೋ ... ಬರಲಿ. ಆದರೆ ಈಗಿರುವ ಅನುಭವವು ... ರವು ಸಾಲದು. ಕಾದಂಬರಿಯನ್ನು ... ಕತೆಯನ್ನು ಬರೆಯಬಾರದು ಎಂದು ... ಆದರೆ ಸಣ್ಣಕತೆಯು ಕಾದಂಬರಿಯ ... ಎಂಬುದನ್ನು ಯಾರೂ ಮರೆಯಬಾರದು.

## ಗದ್ಯ ಸಾಹಿತ್ಯ

ಗದ್ಯಗ್ರಂಥಗಳಲ್ಲಿ ಕಾದಂಬರಿ, ಸಣ್ಣಕ... ಬಿಟ್ಟರೆ ಇನ್ನುಳಿದುವು ಚರಿತ್ರೆ, ಜೀವ... ಪ್ರಬಂಧ, ವಿಮರ್ಶೆ. ಶ್ರೀಯುತ ವಾಸು... ನವರ ಆರ್ಯಕೀರ್ತಿಯು ಗದ್ಯದ ಕೀರ್ತಿಯು ... ಹಬ್ಬಿದೆ. ಕನ್ನಡಭಾಷೆಗೆ ವೀರಶೈವ... ದಾನಮಾಡಿದವರಲ್ಲಿ ಅವರೂ ಒಬ್ಬ... ತಿಗಳು. ನಮ್ಮಲ್ಲಿ ಶ್ರೇಷ್ಠವಾದ ಗದ್ಯ... ಐತಾಪತವಾಗಿಯೇ ಇದೆ. ಪದ್ಯ, ನಾ... ಳಿಗಿಂತ ಗದ್ಯವು ಹೆಚ್ಚಬೇಕು. ಹಾಗಾ... ತ್ಯಕ್ಕೆ ಶ್ರೇಯಸ್ಸು. ಶ್ರೀಮಾನ್ ಡಿ. ... ನವರು ಜೀವನ ಚರಿತ್ರೆಗಳೇ ಮೊದಲಾದ ... ಗ್ರಂಥಗಳನ್ನು ಬರೆದಿದ್ದಾರೆ. ಪ್ರಬಂಧಗ... ಈಗೀಗ ಪ್ರಬಲವಾಗುತ್ತಿವೆ. ಶ್ರೀಮಾನ್ ... ರಾಮಯ್ಯನವರು ಅದ್ವಿತೀಯ ಪ್ರತಿಭೆ... ರುವ ಪಂಪಾಯಾತ್ರೆಯು ಅನ್ಯಾದೃಶ... ಹೇಳಬಹುದು. ದೊಡ್ಡ ಪ್ರಬಂಧಗಳ ... ಅದಕ್ಕೇ ಅಗ್ರಸ್ಥಾನ ಸಿಕ್ಕುವುದರಲ್ಲಿ ... ಅದರಲ್ಲಿ ಶೈಲಿಯು ವೈವಿಧ್ಯದಿಂದ ... ವಾಗಿದೆ. ಮನೆಮಾತಿನಶೈಲಿ, ... ಗಂಡು ಶೈಲಿ ಎಲ್ಲವೂ ಇವೆ. ಪಂಪಾಯಾ... ಬರೆದು ಶ್ರೀಮಾನ್ ಸೀತಾರಾಮಯ್ಯನವ... ಗದ್ಯ ನಿಕೇತನಕ್ಕೆ ಒಂದು ನೂತನ ದ್ವಾ... ಸಿದ್ಧರೆ. ವಿಮರ್ಶೆಯು ಸಾಹಿತ್ಯವನ್ನೇ...

ವಾಗುಳ್ಳ ಸಾಹಿತ್ಯ. ಅದು ಪ್ರತಿಭಾಶಾಲಿಯ ಕೈಯಲ್ಲಿ ಸಿಕ್ಕರೆ ಸಾಹಿತ್ಯಕ್ಕೆ ಸೇರುವುದು; ಇಲ್ಲದಿದ್ದರೆ ಹೊರಗಾಗುವುದು. ಅದು ಅಲಂಕಾರಶಾಸ್ತ್ರ, ಅಥವಾ ವ್ಯಾಖ್ಯಾನಗಳ ಗುಂಪಿಗೆ ಸೇರಿದರೆ ಸಾಹಿತ್ಯವೆನ್ನಿಸಿಕೊಳ್ಳದು. ವಿಮರ್ಶೆಯು ನಮಗೆ ಸಂಪೂರ್ಣವಾಗಿ ಹೊಸದೆಂದೇ ಹೇಳಬಹುದು.

## ವಿಮರ್ಶೆ

ಕನ್ನಡದಲ್ಲಿ ವಿಮರ್ಶೆಯಗ್ರಂಥಗಳು ಬಹಳ ಇಲ್ಲ. ವಿಮರ್ಶೆಯನ್ನು ಗ್ರಂಥರೂಪವಾಗಿ ಮೊದಲು ಪ್ರಕಟಿಸಿದವರು ಶ್ರೀ ಮಾಸ್ತಿ ವೆಂಕಟೇಶಐಯ್ಯಂಗಾರ್ಯರು. "ವಿಮರ್ಶೆ" ಎಂಬ ಹೆಸರಿನ ಎರಡುಗ್ರಂಥಗಳು ಅವರಿಂದ ಹೊರಬಿದ್ದಿವೆ. ಅಲ್ಲದೆ "ಸಾಹಿತ್ಯ" ಎಂಬುದೂ ಅದೇ ಜಾತಿಗೆ ಸೇರಿದ್ದು. ವಿದ್ವತ್‌ಸಭೆಗಳು ಪ್ರಕಟಿಸಿರುವ ಮುದ್ದಣ, ರನ್ನಕವಿಪ್ರಶಸ್ತಿ ಇವು ಒಬ್ಬ ಕವಿಯ ವಿಷಯವಾಗಿ ಅನೇಕರು ಅನೇಕ ದೃಷ್ಟಿಯಿಂದ ಮಾಡಿರುವ ವಿಮರ್ಶೆಯಾಗಿವೆ. ಬೆಳೆಯುವ ಸಾಹಿತ್ಯಕ್ಕಾಗಲಿ, ಬೆಳೆದ ಸಾಹಿತ್ಯಕ್ಕಾಗಲಿ ವಿಮರ್ಶೆಯು ಅತ್ಯಾವಶ್ಯಕ. ಅದು ಜನರಲ್ಲಿ ಕುರುಚಿಯನ್ನು ತಿದ್ದುವುದು; ಸಾಹಿತ್ಯದ ವಿಚಾರವಾಗಿ ಸರಿಯಾದ ದೃಷ್ಟಿಯನ್ನು ನೀಡುವುದು; ಬರೆಯುವವರಿಗೂ ಎಚ್ಚರಿಕೆ ಕೊಡುವುದು; ಜೊಳ್ಳಾವುದು ಗಟ್ಟಿಯಾವುದು ಎಂಬುದನ್ನು ನಿರ್ಣಯಿಸುವುದು. ಉತ್ತಮಗ್ರಂಥಗಳಲ್ಲಿ ಸಾಮಾನ್ಯರ ಕಣ್ಣಿಗೆ ಕಾಣದೆ ನುಣಿಚಿಕೊಂಡು ಹೋಗುವ ರಸವತ್ತಾದ ವಿಷಯಗಳನ್ನು ಒತ್ತಿಹೇಳಿ ಎತ್ತಿಹಿಡಿದು ತೋರಿಸುವುದು. ಈಗ ಮಾಸಪತ್ರಿಕೆಗಳಲ್ಲಿ ವಿಮರ್ಶೆಗಳು ಹೊರಬೀಳುತ್ತಿವೆ. ಎಲ್ಲರೂ ವಿಮರ್ಶೆಮಾಡಲು ಕುತೂಹಲ ಹೊಂದಿದ್ದಾರೆ ಸಣ್ಣಕತೆಗಳನ್ನು ಬರೆಯುವಂತೆ! ಆದರೆ ವಿಮರ್ಶೆಮಾಡುವುದು ಮೇಲೆ ತೋರುವಷ್ಟು ಸುಲಭಸಾಧ್ಯವಾದ ಕಾರ್ಯವಲ್ಲ. ಅದಕ್ಕೆ ಬಹಳ ಪರಿಶ್ರಮಬೇಕು. ಕೆಲವರು ಗ್ರಂಥಗಳನ್ನು ಓದದೇ ವಿಮರ್ಶೆ ಮಾಡುವರೋ ಎಂದು ತೋರುತ್ತದೆ. ಮತ್ತೆ ಕೆಲವರು ಅಲ್ಲಲ್ಲಿ ಗ್ರಂಥದ ಪದ್ಯಗಳನ್ನು ತೆಗೆದುಬರೆದು "ಇಲ್ಲಿ ಕವಿ ಎಷ್ಟುಚೆನ್ನಾಗಿ ಬರೆದಿದ್ದಾನೆ"; "ಇದು ಎಷ್ಟು ಮನೋಹರವಾಗಿದೆ"; "ಇಲ್ಲಿ ಕವಿಯ ಚಿತ್ರವು ಕಣ್ಣಿಗೆ ಕಟ್ಟುವಂತೆ ಬರೆದಿದ್ದಾನೆ", "ಇದು ಚೆನ್ನಾಗಿಲ್ಲ!" "ಆಹಾ! ಮೇಲಿನ ಪದ್ಯದಲ್ಲಿ ಕವಿಯು ಎದೆಯನ್ನು ಸೂರೆಮಾಡಿದ್ದಾನೆ!" ಎಂದು ಮೊದಲಾಗಿ ಬರೆದರೆ ಉತ್ತಮ ವಿಮರ್ಶೆಯಾಯಿತೆಂದು ತಿಳಿದಿದ್ದಾರೆ. ಅಭಿಪ್ರಾಯಗಳನ್ನು ಸೂಚಿಸಿದರೆ ತತ್ವಪ್ರತಿಪಾದನೆ ಮಾಡಿದಂತಾಗಲಿಲ್ಲ. ಅಭಿಪ್ರಾಯದಹಿಂದೆ ಬೇಕಾದಷ್ಟು ಕಾರಣಗಳಿದ್ದರೆ ಅದು ಮಾನ್ಯವಾಗುವುದು; ಇಲ್ಲದಿದ್ದರೆ ತಿರುಳಿಲ್ಲದ ಕೂಗಾಗುವುದು. ಆದ್ದರಿಂದ ವಿಮರ್ಶೆ ಮಾಡುವವರಿಗೆ ಆಯಾ ಸಾಹಿತ್ಯದ ಪರಿಚಯ ಬಹಳ ಚೆನ್ನಾಗಿರಬೇಕು. ಅಲ್ಪ ಪರಿಶ್ರಮದಿಂದಲೂ ಅಲ್ಪಾನುಭವದಿಂದಲೂ ಬರೆದ ದುಷ್ಟವಿಮರ್ಶೆಯು ಕುಕಾವ್ಯಕ್ಕಿಂತಲೂ ಹಾಸ್ಯಕರವಾದುದೆಂದು ಎಲ್ಲರೂ ನೆನಪಿನಲ್ಲಿಡಬೇಕು.

## ನಾಟಕ

ನಾಟಕವನ್ನು ಸಾಮಾನ್ಯವಾಗಿ ಗದ್ಯಸಾಹಿತ್ಯವೆಂದೇ ಕರೆಯಬಹುದು. ಹಳಗನ್ನಡ ಸಾಹಿತ್ಯದಲ್ಲಿ ನಾಟಕಗಳೇ ಇಲ್ಲ. ಇದು ಆಶ್ಚರ್ಯಕರವಾದ ವಿಷಯ. ಸಂಸ್ಕೃತದಲ್ಲಿ ಲೋಕಪ್ರಸಿದ್ಧರಾದ ನಾಟಕ ಕರ್ತರುಗಳು ಬಹಳ ಹಿಂದೆಯೇ ಆಗಿಹೋದರು. ನಮ್ಮ ಕವಿಗಳು ಅವರ ಕಾವ್ಯಗಳನ್ನು ಓದಿದ್ದರು ಎಂಬುದಕ್ಕೆ ಅವರ ಗ್ರಂಥಗಳಿಂದಲೇ ಆಧಾರ ಸಿಕ್ಕುತ್ತದೆ. ಆದರೂ ನಮ್ಮಲ್ಲಿ ನಾಟಕವೇ ಹುಟ್ಟಲಿಲ್ಲ. ಕನ್ನಡಕ್ಕೆ ನಾಟಕ ಬಂದದ್ದು ಈಚೀಚೆಗೆ. ಅಭಿನಯ ಚಕ್ರವರ್ತಿ ಎಂದು ಹೆಸರುಪಡೆದು ತೀರಿಹೋದ ಶ್ರೀಮಾನ್ ವರದಾಚಾರ್ಯರು ಕನ್ನಡ ರಂಗಭೂಮಿಗೆ ಸ್ಥಾಪನಾಚಾರ್ಯರೆಂದೇ ಹೇಳಬಹುದು. ಅನೇಕರು ರಂಗಭೂಮಿಗಾಗಿ ನಾಟಕಗಳನ್ನು ಬರೆದರು. ಷೇಕ್ಸ್ಪಿಯರ್ ಕವಿಯನಾಟಕಗಳೂ ಕನ್ನಡದಲ್ಲಿ ಭಾಷಾಂತರಿಸಲ್ಪಟ್ಟವು. ಶ್ರೇಷ್ಠರಾದ ಪಂಡಿತರು, ಬಸಪ್ಪಶಾಸ್ತ್ರಿಗಳಂಥ ಮನೀಷಿಗಳು ಶಾಕುಂತಲಾ ಮೊದಲಾದ ಸಂಸ್ಕೃತ ನಾಟಕಗಳನ್ನು ಅದ್ವಿತೀಯ ಪ್ರತಿಭೆಯಿಂದ ಕನ್ನಡಕ್ಕೆ ಪರಿವರ್ತಿಸಿದರು. ಅಂತೂ ನಾಟಕ ಯುಗವು ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಜಯಘೋಷವಾದ್ಯಧ್ವನಿಗಳಿಂದ ಕನ್ನಡ ಸಾಹಿತ್ಯದಲ್ಲಿ ಕಾಲಿಟ್ಟಿತು. ಆದರೆ ನಿಜವಾದ ಸಾಹಿತ್ಯದ ಒರೆಗಲ್ಲಿನ ಪರೀಕ್ಷೆಯಲ್ಲಿ ಉತ್ತೀರ್ಣವಾಗುವಂತಹ ನಾಟಕಗಳು ಎಲ್ಲಿಯೋ ಒಂದೆರಡು ಮಾತ್ರ ಹುಟ್ಟಿದವು. ಅಭಿನಯ ಚಕ್ರವರ್ತಿಯು ನಮ್ಮ ನಡುವೆ ಬಂದನು; ಆದರೆ ನಾಟಕ ಸಮ್ರಾಟನು ಬರಲಿಲ್ಲ. ನಾಟಕ ಸಮ್ರಾ

ಳಲ್ಲಿ ಯೋಗ್ಯವಾದುದು ಒಂದು ಇದ್ದರೆ ಅಯೋಗ್ಯವಾದುವು ನೂರು ಇವೆ. ವೆಂಕಟೇಶಐಯಂಗಾರ್ಯ್ಯರು ಪ್ರತಿಭಾಶಾಲಿಗಳಾದುದರಿಂದ ಅವರ ಕಥೆಗಳಲ್ಲಿ ಬೇಕಾದಷ್ಟು ವೈವಿಧ್ಯವಿದೆ; ಶಕ್ತಿಯಿದೆ. ಅವರ ಕತೆಗಳ ಹೆಸರುಗಳನ್ನು ನೋಡಿದರೆ ಅದು ಗೊತ್ತಾಗುವುದು. ಒಂದು ಕತೆ ನಗಿಸಿದರೆ ಮತ್ತೊಂದು ಅಳಿಸುವುದು;



ಶ್ರೀ ಮಾಸ್ತಿ ವೆಂಕಟೇಶಐಯಂಗಾರ್ಯ್ಯರು

ಇನ್ನೊಂದು ಬೆದರಿಸುವುದು; ಬೇರೊಂದು ಸಂತೈಸುವುದು. ಅವರು ರಂಗಪ್ಪನ ಬಾಲಶೃಂಗಾರ ರಸವರ್ಣನೆಯೊಂದನ್ನೇ ಮಾಡಿ ಕೈ ತೊಳೆದುಕೊಳ್ಳಲಿಲ್ಲ; ಬಾದಶಹನ ನ್ಯಾಯವನ್ನೂ ಬರೆದರು; ವೆಂಕಟರಾಯನ ಪಿಶಾಚವನ್ನೂ ಬರೆದರು; ಭಯಂಕರವಾದ ಇಂದಿರೆಯನ್ನೂ ಬರೆದರು; ತತ್ತ್ವಪೂರ್ಣವಾದ ಸಾರಿಪುತ್ರನ ಕಡೆಯ ದಿನಗಳನ್ನೂ ಬರೆದರು. ಆದರೆ ಅವರನ್ನು ಹಿಂಬಾಲಿಸಿದ ಯುವಕರು ಬರೆಯುವುದರಲ್ಲಿ ಅವರನ್ನು ಅನುಕರಿಸಿದರೇ ಹೊರತು ಬರವಣಿಗೆಯಲ್ಲಿ ಅವರನ್ನು ಅನುಸರಿಸಲಿಲ್ಲ. ಅದರಲ್ಲಿಯೂ ವಿದ್ಯಾರ್ಥಿಗಳಿಗೆ ಹುಡುಗ ಹುಡುಗಿಯರ ಕೋರ್ಟ್‌ಷಿಪ್ಪಿನ ಕತೆಗಳನ್ನು ಬಿಟ್ಟು ಬೇರೆಯದನ್ನು ಬರೆಯುವುದೇ ಗೊತ್ತಿಲ್ಲವೋ ಏನೋ ಎನ್ನುವಂತೆ ತೋರುತ್ತಿದೆ. ಮುಂದೆ ಬರೆಯುವವರು ವಿಮರ್ಶೆಮಾಡಿ ಬರೆದರೆ ಉತ್ತಮ. ಸಣ್ಣ ಕತೆಗಳನ್ನು ಮೊದಲು ಬರೆದವರಲ್ಲಿ ವೆಂಕಟೇಶಐಯಂಗಾರ್ಯರು ಅಗ್ರಗಣ್ಯರಾದರೂ ಬಾಗಲಕೋಟೆಯ ವಾಸುದೇವಾಚಾರ್ಯರೂ ಎರಡನೆಯ ಸ್ಥಾ-

ನಕ್ಕೆ ಬರುವವರೆಂದು ಹೇಳಬಹುದು. ಅವರ... ಲಲಿತವಾಗಿವೆ. ಇತ್ತೀಚೆಗೆ ಸಣ್ಣ ಕತೆಗ... ತರುಣರಲ್ಲಿ "ಆನಂದ" ಎಂಬ ಸಂಕೇತ... ಜನರಿಗೆ ತಿಳಿದಿರುವ ಶ್ರೀಮಾನ್ ಎ. ... ರವರು ಗಣ್ಯರಾದವರು. ಅವರಿಗೆ ... ಶಕ್ತಿಯೂ ದೃಶ್ಯಗಳನ್ನು ಚಿತ್ರಿಸುವ ... ಸಾಕಾದಷ್ಟಿದೆ. ಅವರ ಸಣ್ಣಕತೆಗಳ... ಮಧುರವಾಗಿವೆ. ಸಣ್ಣಕತೆಗಳೇನೋ ... ಬರಲಿ. ಆದರೆ ಈಗಿರುವ ಅನುಭವವು... ರವು ಸಾಲದು. ಕಾದಂಬರಿಯನ್ನು ಬ... ಕತೆಯನ್ನು ಬರೆಯಬಾರದು ಎಂದು ಯಾ... ಆದರೆ ಸಣ್ಣಕತೆಯು ಕಾದಂಬರಿಯು ... ಎಂಬುದನ್ನು ಯಾರೂ ಮರೆಯಬಾರದು.

## ಗದ್ಯ ಸಾಹಿತ್ಯ

ಗದ್ಯಗ್ರಂಥಗಳಲ್ಲಿ ಕಾದಂಬರಿ, ಸಣ್ಣಕ... ಬಿಟ್ಟರೆ ಇನ್ನುಳಿದುವು ಚರಿತ್ರೆ, ಜೀವ... ಪ್ರಬಂಧ, ವಿಮರ್ಶೆ. ಶ್ರೀಯುತ ವಾಸುದೇವ... ನವರ ಆರ್ಯಕೀರ್ತಿಯು ಗದ್ಯದ ಕೀರ್ತಿಯ... ಹಬ್ಬಿದೆ. ಕನ್ನಡಭಾಷೆಗೆ ಶೀಕೃತಿ... ದಾನಮಾಡಿದವರಲ್ಲಿ ಅವರೂ ಒಬ್ಬ... ತಿಗಳು. ನಮ್ಮಲ್ಲಿ ಶ್ರೇಷ್ಠವಾದ ಗದ್ಯ... ಐರಾವತವಾಗಿಯೇ ಇದೆ. ಪದ್ಯ, ನಾ... ಳಿಗಿಂತ ಗದ್ಯವು ಹೆಚ್ಚಬೇಕು. ಹಾಗಾ... ತ್ಯಕ್ಕೆ ಶ್ರೇಯಸ್ಸು. ಶ್ರೀಮಾನ್ ಡಿ. ... ನವರು ಜೀವನ ಚರಿತ್ರೆಗಳೇ ಮೊದಲಾದ ... ಗ್ರಂಥಗಳನ್ನು ಬರೆದಿದ್ದಾರೆ. ಪ್ರಬಂಧಗಳ... ಈಗೀಗ ಪ್ರಬಲವಾಗುತ್ತಿವೆ. ಶ್ರೀಮಾನ್ ... ರಾಮಯ್ಯನವರು ಅದ್ವಿತೀಯ ಪ್ರತಿಭೆ... ರುವ ಪಂಪಾಯಾತ್ರೆಯು ಅನ್ವಾದೃಶ... ಹೇಳಬಹುದು. ದೊಡ್ಡ ಪ್ರಬಂಧಗಳ ಪ್ರ... ಅದಕ್ಕೇ ಅಗ್ರಸ್ಥಾನ ಸಿಕ್ಕುವುದರಲ್ಲಿ ಸ... ಅದರಲ್ಲಿ ಶೈಲಿಯು ವೈವಿಧ್ಯದಿಂದ ಅತಿ... ವಾಗಿದೆ. ಮನೆಮಾತಿನಶೈಲಿ, ಹರಟೆ... ಗಂಡು ಶೈಲಿ ಎಲ್ಲವೂ ಇವೆ. ಪಂಪಾಯಾ... ಬರೆದು ಶ್ರೀಮಾನ್ ಸೀತಾರಾಮಯ್ಯನವರು ... ಗದ್ಯ ನಿಕೇತನಕ್ಕೆ ಒಂದು ನೂತನ ದ್ವಾರ... ಇದ್ದಾರೆ. ವಿಮರ್ಶೆಯು ಸಾಹಿತ್ಯವನ್ನೇ...

ವಾಗುಳ್ಳ ಸಾಹಿತ್ಯ. ಅದು ಪ್ರತಿಭಾಶಾಲಿಯ ಕೈಯಲ್ಲಿ ಸಿಕ್ಕರೆ ಸಾಹಿತ್ಯಕ್ಕೆ ಸೇರುವುದು; ಇಲ್ಲದಿದ್ದರೆ ಹೊರಗಾಗುವುದು. ಅದು ಅಲಂಕಾರಶಾಸ್ತ್ರ, ಅಥವಾ ವ್ಯಾಖ್ಯಾನಗಳ ಗುಂಪಿಗೆ ಸೇರಿದರೆ ಸಾಹಿತ್ಯ ಎನ್ನಿಸಿಕೊಳ್ಳದು. ವಿಮರ್ಶೆಯು ನಮಗೆ ಸಂಪೂರ್ಣವಾಗಿ ಹೊಸದೆಂದೇ ಹೇಳಬಹುದು.

## ವಿಮರ್ಶೆ

ಕನ್ನಡದಲ್ಲಿ ವಿಮರ್ಶೆಯಗ್ರಂಥಗಳು ಬಹಳ ಇಲ್ಲ. ವಿಮರ್ಶೆಯನ್ನು ಗ್ರಂಥರೂಪವಾಗಿ ಮೊದಲು ಪ್ರಕಟಿಸಿದವರು ಶ್ರೀ ಮಾಸ್ತಿ ವೆಂಕಟೇಶಅಯ್ಯಂಗಾರ್ಯರು. "ವಿಮರ್ಶೆ" ಎಂಬ ಹೆಸರಿನ ಎರಡುಗ್ರಂಥಗಳು ಅವರಿಂದ ಹೊರಬಿದ್ದಿವೆ. ಅಲ್ಲದೆ "ಸಾಹಿತ್ಯ" ಎಂಬುದೂ ಅದೇ ಜಾತಿಗೆ ಸೇರಿದ್ದು. ವಿದ್ವತ್ಸಭೆಗಳು ಪ್ರಕಟಿಸಿರುವ ಮುದ್ದಣ, ರನ್ನಕವಿಪ್ರಶಸ್ತಿ ಇವು ಒಬ್ಬ ಕವಿಯ ವಿಷಯವಾಗಿ ಅನೇಕರು ಅನೇಕ ದೃಷ್ಟಿಯಿಂದ ಮಾಡಿರುವ ವಿಮರ್ಶೆಯಾಗಿವೆ. ಬೆಳೆಯುವ ಸಾಹಿತ್ಯಕ್ಕಾಗಲಿ, ಬೆಳೆದ ಸಾಹಿತ್ಯಕ್ಕಾಗಲಿ ವಿಮರ್ಶೆಯು ಅತ್ಯಾವಶ್ಯಕ. ಅದು ಜನರಲ್ಲಿ ಕುರುಚಿಯನ್ನು ತಿದ್ದುವುದು; ಸಾಹಿತ್ಯದ ವಿಚಾರವಾಗಿ ಸರಿಯಾದ ದೃಷ್ಟಿಯನ್ನು ನೀಡುವುದು; ಬರೆಯುವವರಿಗೂ ಎಚ್ಚರಿಕೆ ಕೊಡುವುದು; ಟೊಳ್ಳಾವುದು ಗಟ್ಟಿಯಾವುದು ಎಂಬುದನ್ನು ನಿರ್ಣಯಿಸುವುದು. ಉತ್ತಮಗ್ರಂಥಗಳಲ್ಲಿ ಸಾಮಾನ್ಯರ ಕಣ್ಣಿಗೆ ಕಾಣದೆ ನುಣಿಚಿಕೊಂಡು ಹೋಗುವ ರಸವತ್ತಾದ ವಿಷಯಗಳನ್ನು ಒತ್ತಿಹೇಳಿ ಎತ್ತಿಹಿಡಿದು ತೋರಿಸುವುದು. ಈಗ ಮಾಸಪತ್ರಿಕೆಗಳಲ್ಲಿ ವಿಮರ್ಶೆಗಳು ಹೊರಬೀಳುತ್ತಿವೆ. ಎಲ್ಲರೂ ವಿಮರ್ಶೆಮಾಡಲು ಕುತೂಹಲವಿಂದಿದ್ದಾರೆ ಸಣ್ಣಕತೆಗಳನ್ನು ಬರೆಯುವಂತೆ! ಆದರೆ ವಿಮರ್ಶೆಮಾಡುವುದು ಮೇಲೆ ತೋರುವಷ್ಟು ಸುಲಭಸಾಧ್ಯವಾದ ಕಾರ್ಯವಲ್ಲ. ಅದಕ್ಕೆ ಬಹಳ ಪರಿಶ್ರಮಬೇಕು. ಕೆಲವರು ಗ್ರಂಥಗಳನ್ನು ಓದದೇ ವಿಮರ್ಶೆ ಮಾಡುವರೋ ಎಂದು ತೋರುತ್ತದೆ. ಮತ್ತೆ ಕೆಲವರು ಅಲ್ಲಲ್ಲಿ ಗ್ರಂಥದ ಪದ್ಯಗಳನ್ನು ತೆಗೆದುಬರೆದು "ಇಲ್ಲಿ ಕವಿ ಎಷ್ಟುಚೆನ್ನಾಗಿ ಬರೆದಿದ್ದಾನೆ"; "ಇದು ಎಷ್ಟು ಮನೋಹರವಾಗಿದೆ"; "ಇಲ್ಲಿ ಕವಿಯ ಚಿತ್ರವು ಕಣ್ಣಿಗೆ ಕಟ್ಟುವಂತೆ ಬರೆದಿದ್ದಾನೆ", "ಇದು ಚೆನ್ನಾಗಿಲ್ಲ!" "ಆಹಾ! ಮೇಲಿನ ಪದ್ಯದಲ್ಲಿ ಕವಿಯು ಎದೆಯನ್ನು ಸೂರೆಮಾಡಿದ್ದಾನೆ!" ಎಂದು ಮೊದಲಾಗಿ ಬರೆದರೆ ಉತ್ತಮ ವಿಮರ್ಶೆಯಾಯಿತೆಂದು ತಿಳಿದಿದ್ದಾರೆ. ಅಭಿಪ್ರಾಯಗಳನ್ನು ಸೂಚಿಸಿದರೆ ತತ್ವಪ್ರತಿಪಾದನೆ ಮಾಡಿದಂತಾಗಲಿಲ್ಲ. ಅಭಿಪ್ರಾಯದಹಿಂದೆ ಬೇಕಾದಷ್ಟು ಕಾರಣಗಳಿದ್ದರೆ ಅದು ಮಾನ್ಯವಾಗುವುದು; ಇಲ್ಲದಿದ್ದರೆ ತಿರುಳಿಲ್ಲದ ಕೂಗಾಗುವುದು. ಆದ್ದರಿಂದ ವಿಮರ್ಶೆ ಮಾಡುವವರಿಗೆ ಆಯಾ ಸಾಹಿತ್ಯದ ಪರಿಚಯ ಬಹಳ ಚೆನ್ನಾಗಿರಬೇಕು. ಅಲ್ಪ ಪರಿಶ್ರಮದಿಂದಲೂ ಅಲ್ಪಾನುಭವದಿಂದಲೂ ಬರೆದ ದುಷ್ಟವಿಮರ್ಶೆಯು ಕುಕಾವ್ಯಕ್ಕಿಂತಲೂ ಹಾಸ್ಯಕರವಾದುದೆಂದು ಎಲ್ಲರೂ ನೆನಪಿನಲ್ಲಿಡಬೇಕು.

## ನಾಟಕ

ನಾಟಕವನ್ನು ಸಾಮಾನ್ಯವಾಗಿ ಗದ್ಯಸಾಹಿತ್ಯವೆಂದೇ ಕರೆಯಬಹುದು. ಹಳಗನ್ನಡ ಸಾಹಿತ್ಯದಲ್ಲಿ ನಾಟಕಗಳೇ ಇಲ್ಲ. ಇದು ಆಶ್ಚರ್ಯಕರವಾದ ವಿಷಯ. ಸಂಸ್ಕೃತದಲ್ಲಿ ಲೋಕಪ್ರಸಿದ್ಧರಾದ ನಾಟಕ ಕರ್ತರುಗಳು ಬಹಳ ಹಿಂದೆಯೇ ಆಗಿಹೋದರು. ನಮ್ಮ ಕವಿಗಳು ಅವರ ಕಾವ್ಯಗಳನ್ನು ಓದಿದ್ದರು ಎಂಬುದಕ್ಕೆ ಅವರ ಗ್ರಂಥಗಳಿಂದಲೇ ಆಧಾರ ಸಿಕ್ಕುತ್ತದೆ. ಆದರೂ ನಮ್ಮಲ್ಲಿ ನಾಟಕವೇ ಹುಟ್ಟಲಿಲ್ಲ. ಕನ್ನಡಕ್ಕೆ ನಾಟಕ ಬಂದದ್ದು ಈಚೀಚೆಗೆ. ಅಭಿನಯ ಚಕ್ರವರ್ತಿ ಎಂದು ಹೆಸರುಪಡೆದು ತೀರಿಹೋದ ಶ್ರೀಮಾನ್ ವರದಾಚಾರ್ಯರು ಕನ್ನಡ ರಂಗಭೂಮಿಗೆ ಸ್ಥಾಪನಾಚಾರ್ಯರೆಂದೇ ಹೇಳಬಹುದು. ಅನೇಕರು ರಂಗಭೂಮಿಗಾಗಿ ನಾಟಕಗಳನ್ನು ಬರೆದರು. ಷೇಕ್ಸ್ಪಿಯರ್ ಕವಿಯನಾಟಕಗಳೂ ಕನ್ನಡದಲ್ಲಿ ಭಾಷಾಂತರಿಸಲ್ಪಟ್ಟವು. ಶ್ರೇಷ್ಠರಾದ ಪಂಡಿತರು, ಬಸಪ್ಪಶಾಸ್ತ್ರಿಗಳಂಥ ಮನೀಷಿಗಳು ಶಾಕುಂತಲಾ ಮೊದಲಾದ ಸಂಸ್ಕೃತ ನಾಟಕಗಳನ್ನು ಅದ್ವಿತೀಯ ಪ್ರತಿಭೆಯಿಂದ ಕನ್ನಡಕ್ಕೆ ಪರಿವರ್ತಿಸಿದರು. ಅಂತೂ ನಾಟಕ ಯುಗವು ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಜಯಘೋಷವಾದ್ಯಧ್ವನಿಗಳಿಂದ ಕನ್ನಡ ಸಾಹಿತ್ಯದಲ್ಲಿ ಕಾಲಿಟ್ಟಿತು. ಆದರೆ ನಿಜವಾದ ಸಾಹಿತ್ಯದ ಒರೆಗಲ್ಲಿನ ಪರೀಕ್ಷೆಯಲ್ಲಿ ಉತ್ತೀರ್ಣವಾಗುವಂತಹ ನಾಟಕಗಳು ಎಲ್ಲಿಯೋ ಒಂದೆರಡು ಮಾತ್ರ ಹುಟ್ಟಿದವು. ಅಭಿನಯ ಚಕ್ರವರ್ತಿಯು ನಮ್ಮ ನಡುವೆ ಬಂದನು; ಆದರೆ ನಾಟಕ ಸಮ್ರಾಟನು ಬರಲಿಲ್ಲ. ನಾಟಕ ಸಮ್ರಾ

ಟನೂ ಬಂದಿದ್ದರೆ ಅಭಿನಯ ಚಕ್ರವರ್ತಿಯು ಅಭಿನಯ ತ್ರಿಣೇತ್ರನಾಗುತ್ತಿದ್ದನೋ ಏನೋ! ಜನರ ಅಭಿರುಚಿಯು ಅತಿಸ್ಥೂಲವಾಗಿದ್ದುದರಿಂದ ಅಭಿನಯ ಚಕ್ರವರ್ತಿಯೂ ಜನರ ರುಚಿಗೆ ತಕ್ಕಂತೆ ಕುಣಿಯಬೇಕಾಗಿ ಬಂದುದು ನಮಗಿಂತಲೂ ಆತನಿಗೇ ಶೋಚನೀಯವಾಗಿತ್ತು ಎಂದು ಹೇಳಿದರೆ ವರದಾಚಾರ್ಯರ ಗೌರವಕ್ಕೆ ಹಾನಿಮಾಡಿದಂತಾಗದು. ಅಂತೂ ಅನೇಕರು ಅನೇಕ ನಾಟಕಗಳನ್ನು ಬರೆದರು. "ಸದಾರಮೆ"ಯಿಂದ ಹಿಡಿದು "ಶಾಕುಂತಲ"ದವರೆಗೂ ಬರೆದರು! ಅವುಗಳಲ್ಲಿ ಅನೇಕ ನಾಟಕಗಳು ನಾಗರಿಕತೆಯಿಂದ ಜಾತಿಕೆಟ್ಟ ಭಾಗವತರಾಟಗಳಂತಿವೆ! ಆ ಕುರುಚಿಯು ಇನ್ನೂ ಜನಗಳಲ್ಲಿ ಪೂರ್ಣವಾಗಿತೊಲಗಿಲ್ಲ. ಇನ್ನು ಅಪ್ರಕೃತವಾದ ಸಂಗೀತ, ಅನಾವಶ್ಯಕವಾದ ದೃಶ್ಯಾಡಂಬರ, ಪಟಾಸು ಹೊಡೆಯುವುದು, ದಶಾವತಾರಗಳು, ಡ್ರಿಲ್ ಮಾಡುವುದು ಇವೇ ನಾಟಕ ಕಲೆಯ ಉತ್ತಮಗುಣಗಳೆಂದು ತಿಳಿದಿರುವ ಮಹನೀಯರು ಬೇಕಾದಷ್ಟಿದ್ದಾರೆ. ರಂಗಭೂಮಿಯ ಸುಧಾರಣೆಯಾಗುತ್ತಿದೆ. ಮುಂದೆ ವಕ್ರದೃಷ್ಟಿಯು ಋಜುವಾಗಬಹುದು. ಹೋದವರ್ಷ ಜಯಕರ್ಣಾಟಕ ಪತ್ರಿಕೆಯಲ್ಲಿ ಪ್ರಕಟವಾದ ಕನ್ನಡ ನಾಟಕಗಳ ಪಟ್ಟಿಯನ್ನು ನೋಡಿದರೆ ಯಾವ ಕನ್ನಡಿಗನಾದರೂ ಹೆಮ್ಮೆಪಡದಿರಲಾರನು; ಓದಿದರೆ ಗೋಳಾಡದಿರಲಾರನು. ಅವುಗಳಲ್ಲಿ ಕೆಲವು ಸಹ್ಯವಾಗಿರಬಹುದು; ಉಳಿದುವೇನೋ ಅಸಹ್ಯ. ಆ ಪಟ್ಟಿಯು ಒಂದು ದೊಡ್ಡ ಕಸದ ಗಾಡಿಯಂತಿದೆ; ನಡುವೆ ಸಿಕ್ಕ ರಸದ ಗುಂಡುಗಳು ಕಸದಲ್ಲಿ ಮುಚ್ಚಿಹೋಗುವಂತಿದೆ.

ಶ್ರೀಮಾನ್ ವೆಂಕಟೇಶಯ್ಯಂಗಾರ್ಯರು ಕೆಲವು ಸಣ್ಣಸಣ್ಣ ನಾಟಕಗಳನ್ನೂ ಬರೆದರು. ಆದರೆ ಅವು ದೃಶ್ಯರೂಪದ ಗೀತೆಗಳಂತಿವೆ. ಆದರಿಂದ್ದ ರಂಗಭೂಮಿಯ ದೃಷ್ಟಿಯಿಂದ ಸುಕರವಾದುವಲ್ಲ ಎಂದು ಕೆಲವರ ಅಭಿಪ್ರಾಯ; ಭಿನ್ನಾಭಿಪ್ರಾಯುಗಳೂ ಉಂಟು. ಪಟಾಸು, ಸಂಗೀತ, ವಿದ್ಯುಚ್ಛಕ್ತಿಯ ದೀಪ ಇವುಗಳ ಯಮಾಲಿಂಗನದಿಂದ ರಂಗಭೂಮಿಯನ್ನು ತಪ್ಪಿಸುವುದಕ್ಕೆ ಪ್ರಯತ್ನಪಟ್ಟವರಲ್ಲಿ ಶ್ರೀ ಕೈಲಾಸಂರವರು ವಂದನೀಯರು. ಅವರ ಸಾಮಾಜಿಕ ನಾಟಕಗಳು ಸರ್ವಸಾಹಿತ್ಯ ದೃಷ್ಟಿಯಿಂದಲೂ ರಮಣೀಯವಾಗಿವೆ. ಪುರಾಣ ಪ್ರಪಂಚದಲ್ಲಿಯೇ ವಿಹರಿಸುತ್ತಿದ್ದ ನಾಟಕದೇವಿಯು ಅವರ ನಾಟಕಗಳಲ್ಲಿ ಬಡಗುಡಿಸಲುಗಳನ್ನು

ಪ್ರವೇಶಿಸಲು ಸಮ್ಮತಿಸಿದಳು. ಆದರೆ ...
ಏನುಮಾಡಿಯಾರು? ಜನರಿಗೆ "ಪಟಾಸಿ...
ಶ್ರೀಮನ್ನಾರಾಯಣನು ಹೊರಗಂತ...
ವಾಗನು; ನಾಟಕರಂಗದಲ್ಲಿ ಯಾದವ...



ಶ್ರೀ ಕೈಲಾಸಂರವರು

ನೋಡಿ ಜನ್ಮಸಾರ್ಥಕವಾಡಿಕೊಳ್ಳ...
ರಸಿಕ ಶ್ರಮಜೀವಿಗಳು ಅತಿಯಾಗಿರುವಾ...
ತಾನೇ ಏನುಮಾಡಿಯಾರು? ಅಂತೂ ವಿಷ್ಯ...
ದಂತೆಲ್ಲ, ನಿಜವಾದ ಕಲೆಯ ಸ್ವರೂಪವು ...
ಬ್ಬಿದಂತೆಲ್ಲ ಅವರ ಪ್ರಯತ್ನವು ಸಾರ್ಥಕವಾ...
ಶ್ರೀಯುತ ಡಿ. ವಿ. ಗುಂಡಪ್ಪನವರೂ ನಾಟಕ...
ಬರೆದಿದ್ದಾರೆ. ಅವರೇ ಅವು ನಾಟಕಗಳು ...
ವೋ ಎಂದು ಸಂಶಯಪಟ್ಟಿರುವುದರಿಂದ...
ವಿಮರ್ಶೆಯು ಇಲ್ಲಿ ಅನಾವಶ್ಯಕ. ಇತ್ತೀ...
ಕೆಲವರು ನಾಟಕರಚನೆಗೆ ಕೈ ಹಾಕಿರುತ್ತಾ...
ಷಿನಲ್ಲಿರುವ ಬ್ಲಾಂಕ್‌ವರ್ಸನ್ನು ಕನ್ನಡದಲ್ಲಿ...
ತಿರುಗಿಸಿ ಬರೆಯುತ್ತಾರೆ. ಸರಳರಗಳೆಯು...
ನೂತನವಾದುದರಿಂದ ಸಂಪ್ರದಾಯಲಂಪಟ...
ವರಿಗೆ ಅದು ವಿಲಕ್ಷಣವಾಗಿ ಕಾಣುವುದ...
ಆಶ್ಚರ್ಯವಿಲ್ಲ. ಆದರೆ ಅಂತಹ ಕೆಲವು...
ಗಳನ್ನು ಅಭಿನಯಿಸಿದಾಗ ಜನರು ನೋಡಿ...
ಪಟ್ಟಂತೆ ತಿಳಿದುಬಂದಿದೆ. ಆ ಜಾತಿಯ ...
ಸುಪ್ರಸಿದ್ಧವಾದುದೆಂದರೆ ಶ್ರೀಮಾನ್ ...
ಶ್ರೀಕಂಠಯ್ಯನವರ "ಅಶ್ವತ್ಥಾಮನ್" ...
ಅದರಮೇಲೆ ಈ ಹಿಂದೆ ಅನೇಕ ವಿಮರ್ಶೆಗಳು...
"ಥಿಯೇಟರ್" ಎಂಬ ಇಂಗ್ಲೀಷ್ ...
ದಲ್ಲಿಯೂ ಒಂದು ಸ್ವಾರಸ್ಯವಾದ ವಿಮ...



ಶ್ರೀ ಬಿ. ಎಂ. ಶ್ರೀಕಂಠಯ್ಯನವರ.

ಬೇಕಾದಷ್ಟು ಭಿನ್ನಾಭಿಪ್ರಾಯಗಳಿವೆ. ಈ ಎರಡರಗಳೆಯ ನಾಟಕಗಳು ಉಳಿಯುತ್ತವೆ ಕವೋ ಅಳಿಯುತ್ತವೆಯೋ ಈಗ ಹೇಳಲಾಗುವುದಿಲ್ಲ. ಕಾಲವು ಶ್ರೇಷ್ಠತಮ ವಿಮರ್ಶಕನಾದುದರಿಂದ ನಮಗೆ ಚಿಂತೆಬೇಡ. ಶ್ರೀ ಟಿ. ಸೀತಾರಾಮಯ್ಯನವರು ಒಂದು ಸಂಪೂರ್ಣವಾದ ಗದ್ಯ ನಾಟಕವನ್ನು ಬರೆದಿದ್ದಾರೆ. "ಸೊಹ್ರಾಬ್ ರುಸ್ತುಂ" ಆದಿಭಾಗ ಅಗದಿ ಭಯಂಕರವಾಗಿತ್ತು !". ಕೆಲವರು ಕೊನೆಯ ಭಾಗದಲ್ಲಿ ದೋಷವಿದೆ ಎಂದರು. ಒಟ್ಟಿನಲ್ಲಿ ನಾಟಕವು ವೀರ್ಯವತ್ತಾಗಿದೆ. ಕೊನೆ ಮೊನ್ನೆ ಶ್ರೀ ಸಿ. ಕೆ. ವೆಂಕಟರಾಮಯ್ಯನವರು "ನಮ್ಮ ಸಮಾಜ" ಎಂಬ ಸಾಮಾಜಿಕ ನಾಟಕವನ್ನು ಬರೆದಿದ್ದಾರೆ. ಇಲ್ಲದೆ ಶ್ರೀ ವೆಂಕಟೇಶಯ್ಯಂಗಾರ್ಯರು "ಮಂಜುಳಾ" ಎಂಬ ಉತ್ಕೃಷ್ಟ ಸಾಮಾಜಿಕ ನಾಟಕವನ್ನು ರಚಿಸಿದ್ದಾರೆ. ಇದಲ್ಲದೆ ಮೈಸೂರಿನಲ್ಲಿ ಶ್ರೀಮಾನ್ ಎ. ವೆಂಕಟಾಚಾರ್ಯರೂ, ಶ್ರೀಮಾನ್ ಮೂರ್ತಿರಾಯರೂ ಪಾಶ್ಚಾತ್ಯ ಸಾಮಾಜಿಕ ನಾಟಕಗಳನ್ನು ಆಧಾರವಾಗಿಟ್ಟುಕೊಂಡು ಮನೋಹರವೂ ಸಮಾಜಸುಧಾರಣೆಗೆಸಹಾಯಕವೂ ಆಗಿರುವ "ಎರಡು ಹೆಚ್ಚು ಅಥವಾ ಸಾವಿನ ಸಮಸ್ಯೆ" ಮತ್ತು "ಆಷಾಢಭೂತಿ" ಎಂಬ ನಾಟಕಗಳನ್ನು ಬರೆದಿದ್ದಾರೆ. ಆ ನಾಟಕಗಳು ಸರ್ವವಿಧದಿಂದಲೂ ಶ್ರೇಷ್ಠವಾದುವೆಂದು ನೋಡಿದವರೆಲ್ಲರ ನಂಬುಗೆ. ಅಂತಹ ನಾಟಕಗಳು ಹೆಚ್ಚಲಿ ಎಂಬುದು ಎಲ್ಲರ ಹಾರೈಕೆ.

ಆಧುನಿಕ ಸಾಹಿತ್ಯದಲ್ಲಿ ಹೆಚ್ಚು ವಿಮರ್ಶೆಗೆ ಸಿಕ್ಕಿರುವುದೆಂದರೆ ಕವಿತೆ. ಆಧುನಿಕ ಕವಿತೆಯು ಸರ್ವಾಂಶದಿಂದಲೂ ಸಂಪೂರ್ಣವಾಗಿ ಆಂಗ್ಲೇಯ ಸಾಹಿತ್ಯದಿಂದ ಪ್ರೇರಿತವಾದುದು. ಹೊಸ ಛಂದಸ್ಸು ಪಂಪನಿಗೆ ತಿಳಿದಿದ್ದರೂ ತಿಳಿಯದ ನಮಗೆ ವಿನೂತನವಾಗಿದೆ. ಆದರ ನೂತನ ಮಾರ್ಗಾವಲಂಬನೆಯು ಈನೇ ಶತಮಾನಕ್ಕೇ ಹೊಸದಲ್ಲ. ಹೊಸಹಾದಿಗಳಲ್ಲಿ ಹರಿಯುವುದು ಕನ್ನಡ ಸಾಹಿತ್ಯಕ್ಕೆ ಹಳೆಯಚಾಳಿ. ಇದನ್ನು

ಶ್ರೀಯುತ ಬೇಂದ್ರೆಯವರು



ಮೊದಲು ಮಾಡಿದವರು ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು. ಶ್ರೀನಿವಾಸನ "ಅರುಣ"ನು ಉದಯಿಸುವ ಮುನ್ನವೇ ವಿದ್ಯಾದಾಯಿನಿಯಲ್ಲಿ ಇಂಗ್ಲೀಷ್ ಗೀತೆಗಳು ಅಚ್ಚಾಗಿದ್ದವು. ಆದ್ದರಿಂದ "ಶ್ರೀ" ಯವರನ್ನು ನವಯುಗಪ್ರವರ್ತಕರೆಂದರೆ ತಪ್ಪಾಗದು. ಅವರು ಬಯಲಿಗೆ ಬಿ... "ಇಂಗ್ಲೀಷ್ ಗೀತೆಗಳು" ಗ್ರಂಥ... ಹೊರಬಿದ್ದಮೇಲೆ. ಆದರೂ ಅವರ ಪ್ರಭಾ... ಗಾಮಿನಿಯಾದ ವಾಹಿನಿಯಂತೆ ಅನೇಕ ... ಸೇರಿರದಿದೆ. ಆದ್ದರಿಂದಲೇ ಅವರು ಹ...



ಶ್ರೀ ಪಂಜೆ ಮಂಗೇಶರಾಯರು

ರಾಗಿಯೂ ಹೊಸಬರಿಗೆ ಹೊಸಬರಾಗಿಯೂ ಕಾಣುತ್ತಾರೆ. ಶ್ರೀಮಾನ್ ಡಿ. ವಿ. ಗುಂಡಪ್ಪನವರ "ನಿವೇದನ"ದಲ್ಲಿ ಕನ್ನಡ ಕಬ್ಬವನ್ನು ಪುರಾತನ ಮತ್ತು ನೂತನಗಳ ಮಧ್ಯ ಹೊಸ್ತಿಲಮೇಲೆ ನಿಂತಂತಿದೆ. ಅಲ್ಲಿರುವ ಅನೇಕ ಪದ್ಯಗಳು ವೃತ್ತ ಕಂದ... ಆತ್ಮವು ನೂತನವಾದರೂ ವೇಷವು [illegible]. ಶ್ರೀನಿವಾಸನ ಕವನಗಳ ವನಿತೆಯು ಹೊಸ್ತಿಲನ್ನು ದಾಟಿಬಂದಿವೆ...

ಗುಂಡಪ್ಪ ಮತ್ತು ಶ್ರೀನಿವಾಸರು ನವಸಂಪ್ರದಾಯ ಪ್ರಚಾರಕ್ಕೆ ಬಹಳ ಕೆಲಸಮಾಡಿದ್ದಾರೆ. ಧಾರವಾಡದ ಕಡೆ ಶ್ರೀಯುತ ಬೇಂದ್ರ್ರಯವರು ಹೊಸ ಸಂಪ್ರದಾಯ ವನ್ನು ತರಲು ಹೆಚ್ಚು ಪ್ರಯತ್ನಿಸಿದ್ದಾರೆ. "ಹಕ್ಕಿ ಹಾರುತಿದೆ" ಎಂಬ ಕವನ ಪುಸ್ತಕದಲ್ಲಿರುವ ಅವರ ಕವನಗಳು ಕರುಳಿರಿಯುವಂತಿವೆ. ಮಂಗ ಳೂರಿನ ಕಡೆ ಶ್ರೀಮಾನ್ ಪಂಜೆ ಮಂಗೇಶರಾಯರು ಹೊಸ ಕವನಗಳನ್ನು ಬರೆದು ಓದಿ ಬಹಳ ಹಿಂದಿನಿಂ ದಲೂ ಸಾಹಿತ್ಯಸೇವೆ ಮಾಡುತ್ತಿದ್ದಾರೆ. ಶ್ರೀ ಗೋವಿಂದ ಪೈಗಳೂ ಕವನಗಳನ್ನು ಬರೆದಿದ್ದಾರೆ; ಆದರೆ ಅವರು ವಿಶೇಷವಾಗಿ ಪ್ರಾಕ್ತನ ಸಂಶೋಧನ ಪಂಡಿತರು. ಶ್ರೀ ಕಡೆಂಗೋಡ್ಲು ಶಂಕರಭಟ್ಟರೇ ಮೊದ ಲಾದ ತರುಣರೂ ಅತ್ತಕಡೆ ಹೊಸ ಕವನಗಳನ್ನು ಬರೆಯುವುದರಲ್ಲಿ ಗಣ್ಯರೆನಿಸಿಕೊಂಡಿದ್ದಾರೆ. "ತಳಿರು" "ಕಿರಿಯ ಕಾಣಿಕೆ" ಗಳನ್ನು ಅಚ್ಚು ಹಾಕಿಸಿದ್ದಾರೆ. ಇದಲ್ಲದೆ ಪತ್ರಿಕೆಗಳಲ್ಲಿಯೂ ಮಾಸ ಪತ್ರಿಕೆಗಳಲ್ಲಿಯೂ ಎಷ್ಟೆಷ್ಟೋ ಕವನಗಳು ಬರುತ್ತಿವೆ. ಆದರೆ ಅವು ಗಳಲ್ಲಿ ಅನೇಕ ಕವನಗಳು ಹೊಸ ಸಂಪ್ರದಾಯಕ್ಕೆ ಮಾನ ತರುವಂತೆ ತೋರುವುದಿಲ್ಲ. ಆದರೂ ಓದು ಗರು ಕೆರಳಬಾರದು. "ಯೋಗ್ಯೋಸ್ತಿ" (ಅರ್ಹ ವಾದುದು ಉಳಿಯುವುದು; ಅಲ್ಲದುದು ಅಳಿಯು ವುದು) ಎಂಬ ಸಿದ್ಧಾಂತವನ್ನು ನೆನಪಿನಲ್ಲಿಟ್ಟುಕೊಂಡು ಧೈರ್ಯದಿಂದ ನವಸಾಹಸಕ್ಕೆ ಪ್ರೋತ್ಸಾಹ ಕೊಡ ಬೇಕು. ಲುಪ್ತಪಂಥದ ಕೊರಕಲು ದಾರಿಗಿಂತಲೂ ಹೊಸ ಪ್ರಯತ್ನದ ಹೆದ್ದಾರಿಯೇ ಶ್ರೇಯಸ್ಕರವಾ ದುದು. ಬದುಕಿನಲ್ಲಿ ತಪ್ಪಿದ್ದರೆ ತಿದ್ದಿಕೊಳ್ಳಬಹುದು. ಬದುಕೇ ಇಲ್ಲದಿದ್ದರೆ ತಿದ್ದುವುದೇನನ್ನು?

ಆಧುನಿಕಸಾಹಿತ್ಯ ಚರಿತ್ರೆಯ ಕಾಲವಿನ್ನೂ ಹತೋ ಟಿಗೆ ಬಂದಿಲ್ಲ; ರೂಪುಗೊಳ್ಳುತ್ತಿದೆ. ಕೈಯಾವುದೋ ತಲೆಯಾವುದೋ ಕಾಲಾವುದೋ ಸರಿಯಾಗಿ ಗೊತ್ತಾ ಗುವಂತಿಲ್ಲ. ಸಾಮಗ್ರಿಯೂ ಸರಿಯಾಗಿ ದೊರೆ ತಿಲ್ಲ. ಎಲ್ಲವೂ ಮಬ್ಬುಮಬ್ಬಾಗಿದೆ. ಸಣ್ಣದಾದ ಈ ಲೇಖನದಲ್ಲಿ ಬಿಟ್ಟ ಹೆಸರುಗಳು ಅಗಣ್ಯವೂ ಅಪ್ರಮುಖವೂ ಆದುವೆಂದು ಯಾರೂ ತಿಳಿಯಬಾ ರದು. ಅಲ್ಲದೆ ಲೇಖಕರನ್ನು ಅವರವರ ಯೋಗ್ಯ ತೆಗೆ ಅನುಗುಣವಾಗಿ ಶ್ರೇಣೀಬದ್ಧರನ್ನಾಗಿ ಮಾಡುವ ಸಾಹಸಕ್ಕು ಕೈಹಾಕಿಲ್ಲ. ಈ ಲೇಖನವನ್ನು ತಿಳಿದ ವರಿಗಾಗಿ ಬರೆದುದಲ್ಲ. ಸಾಮಾನ್ಯರಿಗೆ ಆಧುನಿಕ ಕನ್ನಡ ಸಾಹಿತ್ಯದ ಕತೆ ಹೇಳುವಂತೆ ಹೇಳಿದುದು. ನಾನೂ ತಪ್ಪು ಮಾಡಿ ತಿದ್ದಿಕೊಳ್ಳುವ ಸ್ಥಿತಿಯ ಲ್ಲಿಯೇ ಇರುವುದರಿಂದ ತಾತ್ಕಾಲಿಕವಾದ ಅಭಿಪ್ರಾಯ ಗಳನ್ನು ಅಂತಿಮ ಸಿದ್ಧಾಂತಗಳೆಂದು ಯಾರೂ ಗ್ರಹಿಸ ಬಾರದೆಂದು ಪ್ರಾರ್ಥನೆ.



# ಮೈಸೂರು ಕಬ್ಬಿಣದ ಕಾರ್ಖಾನೆ, ಭದ್ರಾವತಿ

೧. ಕಬ್ಬಿಣದ ಬೀಡ್:—ಎರಕದ ಸಾಮಾನುಗಳನ್ನು ಮಾಡಲು ಅತ್ಯುತ್ತಮವಾದ ಕಬ್ಬಿಣ.

೨. ನೀರಿನ ಕೊಳಾಯಿಗಳು ಅಥವ ಪೈಪುಗಳು—೨॥ ಅಂಗುಲದಿಂದ ೩೦ ಅಂಗುಲದವರೆಗೆ ದೊರೆಯುತ್ತೆ. ನೀರಿನ ಸರಬರಾಯಿ, ನಾಲಾ, ಚರಂಡಿ ಮುಂತಾದ ಕೆಲಸಗಳಿಗೆಲ್ಲಾ ಬಹು ಉಪಯೋಗವಾದುದು.

೩. ಎರಕದ ಸಾಮಾನುಗಳು:—ಅಗ್ಗಿಷ್ಟಿಕೆಗಳು, ತವಾಕಗಳು, ಕುಟ್ಟಾಣಿಗಳು, ಅಂದವಾದ ಕಟಕಟ್ಟೆಗಳು, ಸೀಮೆಯ ನೇಗಲಿನ ಗುಳಗಳು ಮತ್ತು ಫೌಂಟನ್ ಇವೇ ಮುಂತಾದುವುಗಳು ತಯಾರಾಗುತ್ತವೆ.

೪. ದಾಮರ್ ಎಣ್ಣೆ:—ಎಲ್ಲಾ ಮರದ ಸಾಮಾನುಗಳಿಗೂ, ಕಂಭಗಳಿಗೂ, ಮರಗಳಿಗೂ ಮತ್ತು ಇತರ ಅನೇಕ ಕೆಲಸಗಳಿಗೂ ಶ್ರೇಷ್ಟವಾದ ಪದಾರ್ಥ.

೫. ಕಪ್ಪು ಬಣ್ಣ:—ಲೋಹದ ಮತ್ತು ಮರದ ಸಾಮಾನುಗಳಿಗೆ ಜಪಾನಿನಂತೆಯೇ ಹೊಳಪನ್ನುಂಟುಮಾಡುವುದು.

೬. ಸ್ಪಿರಿಟ್ಸ್:—ಬಣ್ಣಗಳು, ವಾರ್ನೀಷ್ ಮತ್ತು ಪಾಲಿಷ್ ತಯಾರು ಮಾಡುವುದಕ್ಕೆ ಯುಕ್ತವಾದುದು. ಇದನ್ನು ಮೆಥಿಲೇಟೆಡ್ ಸ್ಪಿರಿಟ್ಸಿಗೆ ಬದಲಾಗಿ ಸ್ಟೋವುಗಳಿಗೆ ಉಪಯೋಗಿಸಬಹುದು.

೭. ಡಿಸಿನ್‌ಫೆಕ್ಟೆಂಟ್:—ಇದು ಮರದ ದ್ರಾವಕದಲ್ಲಿರುವ ಕ್ರಿಯೋಸೋಟಿನಿಂದ ತಯಾರಾದ್ದು. ಇದು ಫೆನೈಲಿಗಿಂತ ಬಹಳ ತೀಕ್ಷ್ಣಗುಣವುಳ್ಳದ್ದು. ಕ್ರಿಮಿಗಳನ್ನು ನಾಶ ಮಾಡಲು ಅತ್ಯುತ್ತಮವಾದದ್ದು.

# Mutualism is the keynote of Success.

**Circulate Indian Wealth with Indian People for INDIA'S PROSPERITY.**

**IN LIFE ASSURANCE** consult us without any OBLIGATION .......

PROTECTION AGAINST PERMANENT DISABILITY.
PROTECTION AGAINST ACCIDENTS.
PROTECTION AGAINST DEFAULT.

Two Lives Secured under "One" Premium.
Comprehensive Policy earns three times more.
Double protection Policy ensures over Double.

*For Agency Particulars please Apply:—*

**THE ARYAN MUTUAL ASSURANCE SOCIETY, Ltd.,**
Church Gate Street, Bombay

*Special Representative:*—Dr. S. Rangaswamy.
10, Police Station Road. Basavangudi.

# ವಿಶ್ವಕರ್ಣಾಟಕಕ್ಕೆ ಚಂದಾದಾರರಾಗಿರಿ

# ಶ್ರೀ ದತ್ತಾತ್ರೇಯ
## ಕಾಫೀ ವರ್ಕ್ಸ




ಇದು ನಿಮ್ಮ ಎಲ್ಲಾ ಕಲಸಗಳಿಗೂ ಉತ್ತೇಜನವನ್ನು ಕೊಡುತ್ತದೆ. ಈಗಲೇ ತರಿಸಿ, ಸೇವಿಸಿ, ಆನಂದಪಡಿರಿ.






ಎಲ್ಲಾವಿಷಯಗಳಿಗೂ ಕೆಳಗಿನವಿಳಾಸಕ್ಕೆ ಬರೆಯಿರಿ

**ಶ್ರೀ ದತ್ತಾತ್ರೇಯ ಕಾಫೀ ವರ್ಕ್ಸ್,**

ಮೈಸೂರು ರೋಡ್ ಬೆಂಗಳೂರು ಸಿಟಿ.

ಬ್ರಾಂಚು:— ಹಳೇ ತರಗು ಪೇಟೆ.

---

ಮೈಸೂರು ಪ್ರೋವಿನ್ಷಿಯಲ್ ಕೋ-ಆಪರೇಟಿವ್ ಎಪೆಕ್ಸ್ ಬ್ಯಾಂಕ್ ಲಿಮಿಟೆಡ್, ಬೆಂಗಳೂರು ಸಿಟಿ.

| | |
|---|---|
| ಹಂಚಿರುವ ಷೇರು ಬಂಡವಾಳ ರೂ. | ೩,೮೮,೭೦೦ |
| ಡಿಪಾಜಿಟ್ಟುಗಳು | ,, ೨೬,೯೭,೮೩೪ |
| ರಿಜರ್ವು ಫಂಡು | ,, ೧,೦೦,೦೧೨ |

೧. ಚಾಲ್ತಿ ಡಿಪಾಜಿಟ್ಟುಗಳನ್ನು ಶೇಕಡಾ ಸಾಲಿಯಾನಾ ೨½ ರ ದರದಲ್ಲೂ, ಖಾಯಂ ಡಿಪಾಜಿಟ್ಟುಗಳನ್ನು ೧೦ ಅಥವಾ ಕಡಿಮೆ ವರ್ಷಗಳ ಅವಧಿಗೆ ಶೇಕಡಾ ಸಾಲಿಯಾನಾ ೪ ರಿಂದ ೭ ರೂ. [illegible] ಕಾಲಗಳಿಗೆ ಕೊಡು ಹಣದ [illegible] ಸಹ ಸ್ವೀಕರಿಸಲಾಗುತ್ತೆ.

೨. ೫, ೧೦, ೫೦ ರೂ. [illegible] ಕಿಮ್ಮತ್ತಿಗೆ ದೊರೆಯುತ್ತವೆ.

೩. ಮೈಸೂರು [illegible] ಸಹಕಾರ ಸಂಘಗಳಿಗೆ [illegible] ಸಾಲವನ್ನು [illegible] ಮಂಜೂರ್ಮಾಡಲಾಗುತ್ತೆ.

ಹೆಚ್ಚಿನ ಸಂಗತಿಗಳಿಗೆ ಬ್ಯಾಂಕಿಗೆ ಬರೆದಲ್ಲಿ ತಿಳಿಸಲಾಗುತ್ತೆ.

ಎಸ್. ವೆಂಕಟಕೃಷ್ಣಯ್ಯ,
ಪ್ರೆಸಿಡೆಂಟ್

---

# ಗಾಂಧಿಯವರ ಸಂದೇ[illegible]

ಸ್ವರಾಜ್ಯ ಸಂಪಾದನೆಗೆ




ಈ ಚಿತ್ರದಲ್ಲಿ ತೋರಿಸಿದಂಥ ರಾಟೆ[illegible] ನೂತು ದೇಶಕಾರ್ಯಕ್ಕೆ ನೆರವಾಗಿರಿ. [illegible] ಟ ಹಳ್ಳಿಗಳಲ್ಲಿರುವ ಬಡಬಗ್ಗರ ಹೊಟ್ಟೆ[illegible] ಬಿಸಿ. ಈ ಕೈರಾಟೆಯ ಮೇಲೆ ಯಾರು [illegible] ದವರು ಸುಲಭವಾಗಿ ನೂಲಬಲ್ಲರು. [illegible] ತೂಕವು ೧೦ರೂ. ಯಷ್ಟು ಆದರೂ [illegible] ರಾಟೆಗಿಂತ ಬೇಗನೆ ನೂಲು ಹೊಂದುವ[illegible] ರಾಟೆಗೆ ಬೆಲೆ ಒಂದೇ ರೂಪಾಯಿ. ಒಟ್ಟ[illegible] ರಾಟೆಗಳನ್ನು ಕೊಂಡರೆ ಅಂಚೆವೆಚ್ಚ [illegible] ೫ ರಾಟೆಗಳನ್ನು ಕೊಂಡವರಿಗೆ ಅಂಚೆ[illegible] ಧರ್ಮಾರ್ಥವಲ್ಲದೆ ೧ ರಾಟೆಯನ್ನೂ [illegible] ಕೊಡುವೆವು. ತ್ವರೆಮಾಡಿರಿ.

(ಪತ್ರವ್ಯವಹಾರ ಇಂಗ್ಲೀಷಿನಲ್ಲಿಯೇ [illegible]

ಗ್ರೇಟ್ ಇಂಡಿಯನ್ ಸ್ಟೋ[illegible]

ಬೂರಾಬಸಾರ್, [illegible]

---

# ಸತ್ಯಶೋಧನ[illegible]

ಪುಸ್ತಕ ಭಂಡ[illegible]

ಕನ್ನಡ ಪುಸ್ತಕಗಳೆಲ್ಲ ನಮ್ಮಲ್ಲಿವೆ

| | |
|---|---|
| ಕವಿತೆಗಳು— | ಕತೆಗ[illegible] |
| ನಾಟಕಗಳು— | ಕಾದಂಬರಿಗ[illegible] |
| ವಿಮರ್ಶೆಗಳು— | ವ್ಯಾಖ್ಯಾನಗ[illegible] |

ಏನು ಬೇಕಾದರೂ ಇವೆ.

ಯಾವ ಲೇಖಕರದು ಬೇಕಾದರೂ ಇವೆ[illegible]

ಉಚಿತ ಕ್ಯಾಟಲಾಗಿಗೆ ಬರೆಯಿ[illegible]

ವ್ಯಾಪಾರಗಾರರಿಗೆ ಕಮಿಷನ್ ದರಗಳಿಗೆ ಬರೆ[illegible]

ಕೋಟೆ, ಬೆಂಗಳೂರು ಸಿ[illegible]

# ಸಾರಜನಕವು

ಬೆಳಸನ್ನು ವೃದ್ಧಿ ಪಡಿಸುವುದಕ್ಕೆ

ಅತ್ಯವಶ್ಯಕವಾದ ಪಸ್ಯಾಹಾರವು.

## ಈ ಸಾರಜನಕವು

ಚಿಲಿಯರ್ನ ನೈಟ್ರೇಟ್ ಉಪಯೋಗಿಸು

ವುದರಿಂದ ಸಂಪೂರ್ಣವಾಗಿ

ಒದಗುವುದು.

## ಚಿಲಿಯರ್ನ ನೈಟ್ರೇಟನ್ನು

ಎಲ್ಲಾ ಬೆಳೆಗೂ ಉಪಯೋಗಿಸಿ ಅತ್ಯಧಿಕ

ವಾದ ಆದಾಯವನ್ನು ಪಡೆಯಿರಿ.

ವ್ಯವಸಾಯಕ್ಕೆ ಸಂಬಂಧ ಪಡುವ ನಮ್ಮ

ಪತ್ರಿಕೆಗಳಿಗೆ ಬರೆಯಿರಿ. ಮುಫತ್ತಾಗಿ

ಕಳಿಸುವೆವು.

ನಮ್ಮ ವಿಳಾಸ:—

## ಚಿಲಿಯರ್ನ ನೈಟ್ರೇಟ್ ಕಮಿಟಿ

ತಪಾಲು ಪೆಟ್ಟಿಗೆ ೮೧೯, ಕಲ್ಕತ್ತಾ.





ಬ್ಯಾಂಕಿನಲ್ಲಿ ನಡಯಿಸುವ ಆಡಳಿತಗಳು.

ವ್ಯಾಪಾರಕ್ಕನುಕೂಲವಾದ ಎಲ್ಲಾ ವಿಧ ಬ್ಯಾಂಕಿನ ವ್ಯವಹಾರಗಳು, ಅಂದರೆ ಚಾಲ್ತಿ ಲೆಖ್ಖ, ಹುಂಡಿ ಡಿಸ್ಕೌಂಟಿಂಗ್ ತಾದದ್ದು :—

### ಬಡ್ಡಿ ದರತೆ

ಚಾಲ್ತಿ ಡಿಪಾಜಿಟ್ಟಿನ ಮೇಲೆ ೩||

ಫಿಕ್ಸೆಡ್ ಡಿಪಾಜಿಟ್ಟಿನ ಮೇಲೆ ೪||-೭

ಸೇವಿಂಗ್ಸ್ ಬ್ಯಾಂಕ್ ಡಿಪಾಜಿಟ್ಟಿನ ದಿನವಹಿ ಶಿಲ್ಕಿನ ಮೇಲೆ ಶೇಕಡ ೪ ರಂತೆ ಡಲಾಗುತ್ತೆ.

## ದಿ ಗ್ರೇನ್ ಮರ್ಚೆಂಟ್ಸ್

### ಕೋ-ಆಪರೇಟಿವ್ ಬ್ಯಾಂಕ್ ಲಿ.

ಹೊಸತರಗುಪೇಟೆ ಬೆಂಗಳೂರು

---

## 'ವಿನೋದ ಪ್ರಪಂಚ'

ಉತ್ತಮ ತರಗತಿಯ ಧರ್ಮಪ್ರಚಾರ ಕನ್ನಡದಲ್ಲಿ ಹಾಸ್ಯರಸಭರಿತ ಮಾಸಪತ್ರಿ ವಾರ್ಷಿಕ ಚಂದಾ ೧ ರೂ. ಬಿಡಿ ಪತ್ರಿಕೆ

ವಾಚನಾಲಯಗಳಿಗೆ ೧-೮-೦

### ಟಿ. ಗೋಪಾಲಾಚಾರ್ಯ ಶರ್ಮ

ಸಂಪಾದಕ

ಕನ್ನಡಿಗರೆ ಚಂದಾದಾರರಾಗಿ

(ಜಾಹೀರಾತಿಗೆ ಸುಸಮಯ)

'ವಿನೋದ ಪ್ರಪಂಚ' ಶ್ರೀ ಕೃಷ್ಣ

ಶೇಷಾದ್ರಿಪುರಂ ಬೆಂಗಳೂರು ನಗ

# ವಿಮಾ-ವಾಣಿಜ್ಯ

VIMA VANIJYA





## ಜನ್ಮೋತ್ಸವ ಸಂಚಿಕೆ


ವ್ಯವಸ್ಥಾಪಕ-ಸಂಪಾದಕ: ಜೆ. ವಿ. ದೊಡ್ಡವೀರಪ್ಪ.




# VIMA-VANIJYA

**A Kannada Illustrated Monthly of Insurance, Banking and Commerce.**

ವಿಮೆ, ಬ್ಯಾಂಕಿಂಗ್, ವಾಣಿಜ್ಯಗಳನ್ನು ಕುರಿತ ಸಚಿತ್ರ ಕನ್ನಡ ಮಾಸಪತ್ರಿಕೆ.

---



HIS HIGHNESS SIR SRI KRISHNARAJENDRA WADEYAR BAHADUR, G.C.S.I., G.B.E.

MAHARAJA IOF MYSORE

ಸರ್ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜ.ಬಿ.ಇ. ಅವರು



HIS HIGHNESS SIR SRI KRISHNARAJENDRA WADEYAR BAHADUR. G.C.S.I. G.B.E.

MAHARAJA OF MYSORE

ಸರ್ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, [illegible] ಜಿ.ಬಿ.ಇ. ಅವರು

# ಮೈಸೂರು ಬ್ಯಾಂಕ್, ಲಿಮಿಟೆಡ್.

# THE BANK OF MYSORE, LTD.

( Bankers to the Govt. of H. H. The Maharaja of Mysore )

**Established 1913.**

| | | |
|---|---|---|
| Capital Subscribed | ... | Rs. 20,00,000 |
| Capital Paid-up | ... | Rs. 20,00,000 |
| Reserve Fund | ... | Rs. 24,25,000 |



Mysore Bank Building.

*Head Office:*

Avenue Road, Bangalore City.

*Branches:*

[illegible]

[illegible]

(Bangalore),

DAVANGERE

HARIHAR

HASSAN

KOLAR

MYSORE

OORGAUM

SAGAR

SHIMOGA

TIPTUR

TUMKUR

*London Agents*: The Eastern Bank, Ltd.,

**BOARD OF DIRECTORS**

Dr. Sir K. P. Puttanna Chetty, Kt., C. I. E., LL. D., Chairman.

Rao Bahadur B. K. Garudachar

Messrs D. S. Mallappa

G. K. Mallappa

S. L. Manikoji Rao

Mirle N. Lakshminaranappa

Messrs T. Nanjappa

C. V. Narasimhaiengar

P. Subbarama Chetty

M. Venkatasubbiah

**M. H. DAS**

*Offg. M*



HIS HIGHNESS SIR SRI KRISHNARAJENDRA WADEYAR BAHADUR, G.C.S.I., G.B.E.

MAHARAJA IOF MYSORE

ಸರ್ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಅವರು

# ಜನ್ಮೋತ್ಸವ ಸಂಚಿಕೆ

---

ಋತಂ ಸತ್ಯಂ ತಪೋರಾಷ್ಟ್ರಂ ಶ್ರಮೋ ಧರ್ಮಶ್ಚ ಕರ್ಮಚ |
ಭೂತಂ ಭವಿಷ್ಯತ್ ಉಚ್ಛಿಷ್ಟೇ ವೀರ್ಯಂ ಲಕ್ಷ್ಮೀರ್ವಲಂ ವಲೇ ||

—ಅಥರ್ವ ವೇದ.

ಧರ್ಮ, ಸತ್ಕುಲ, ಮಹತ್ಪ್ರಯತ್ನಗಳು, ಸಾಮ್ರಾಜ್ಯ, ವೀರ್ಯ, ಮತ, ಸಾಹಸ, ಅಭ್ಯುದಯ, ಭೂತ ಮತ್ತು ಭವಿಷ್ಯಗಳೆಲ್ಲವೂ ಮಿಗತೆಯ ಮಹಾಶಕ್ತಿಯಲ್ಲಿ ಅಡಗಿವೆ.

ಇಂದು, ಅಖಂಡ ಕರ್ಣಾಟಕ ಸಿಂಹಾಸನಾಧೀಶ್ವರರಾದ ಶ್ರೀಮತ್ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್‌ರವರ ವರ್ಧಂತ್ಯುತ್ಸವದ ಪವಿತ್ರ ದಿನವು. ಹಾಗೆಯೇ ಅವರ ಕಳೆದ ಜನುಮ ದಿನೋತ್ಸವದ ದಿನವೇ ಜನ್ಮವೆತ್ತಿದ "ವಿಮಾ ವಾಣಿಜ್ಯ" ಪತ್ರಿಕೆಯ ಪ್ರಥಮ ವಾರ್ಷಿಕೋತ್ಸವ ಶುಭದಿನವು. ಮಹಾಪ್ರಭುಗಳವರ ಜನ್ಮೋತ್ಸವವೆಂಬ ಉತ್ಸಾಹದಿಂದ ಹಿಗ್ಗಿದ ನಮಗೆ ನಮ್ಮ ಪತ್ರಿಕೆಯ ಜನ್ಮೋತ್ಸವವೂ ಸೇರಿ ಬಂದುದು ಸುಯೋಗವು. ಇಂದಿನ ನಮ್ಮ ಆನಂದವು ಹಿರಿದು. ನಾಲುಮಡಿ ಶ್ರೀಮತ್ಕೃಷ್ಣರಾಜೇಂದ್ರರಿಗೂ, ರಾಜಮನೆತನದವರಿಗೂ ಸರ್ವದಾ ಮಂಗಳವನ್ನುಂಟುಮಾಡಲಿ, ಇಂತಹ ಜನ್ಮೋತ್ಸವಗಳನ್ನು ಇನ್ನೂ ಉತ್ಸಾಹದಿಂದ ನಡೆಸಿಕೊಂಡು ಬರಲು ನಮಗೆ ಅವಕಾಶವನ್ನನುಗ್ರಹಿಸಲಿ ಎಂದು ಜಗದೀಶ್ವರನಲ್ಲಿ ನಮ್ಮ ಸಂತತ ಪ್ರಾರ್ಥನೆ.

# ಸಂದೇಶಗಳು

## (MESSAGES)

Lake View, Mysore,
14th April 1936.



AMIN-UL-MULK SIR MIRZA M. ISMAIL, KT., C.I.E., O.B E., K.C.I.E.,
Dewan of Mysore.

I am glad to hear that you propose to bring out a Special Number of the 'Vima-Vanijya' in May next on the occasion of His Highness the Maharaja's Birthday.

I have had occasion to read some issues of your journal and can say that it is rendering much useful service in disseminating sound and progressive ideas in matters of insurance and banking among its readers.

I congratulate you on your enterprise and heartily wish you and your Special Number every success.

(Sd.) MIRZA M. ISMAIL,
Dewan of Mysore.

ಲೇಕ್ ವ್ಯೂ, ಮೈಸೂರು, ೧೪ ಏಪ್ರಿಲ್ ೧೯೩೬

ದಿವಾನ್ ಸಾಹೇಬರಾದ ಅಮೀನ್ - ಉಲ್ - ಮುಲ್ಕ್
**ಸರ್ ಮಿರ್ಜಾ ಎಂ. ಇಸ್ಮೇಲ್, ಕೆಟಿ., ಸಿ.ಐ.ಇ., ಒ.ಬಿ.ಇ., ಕೆ.ಸಿ.ಐ.ಇ., ಯವರು**

ಬರುವ ಮೇ ತಿಂಗಳಿನಲ್ಲಿ, ಘನಹೊಂದಿನ ಶ್ರೀಮನ್ಮಹಾರಾಜರವರ ಜನ್ಮೋತ್ಸವದ ದಿನ "ವಿಮಾ-ವಾಣಿಜ್ಯ"ದ ವಿಶೇಷ ಸಂಚಿಕೆಯನ್ನು ಪ್ರಕಟಿಸಲು ಉದ್ದೇಶಿಸಿರುವಿರೆಂದು ಕೇಳಿ ಸಂತೋಷಿಸುತ್ತೇನೆ.

ನಿಮ್ಮ ಪತ್ರಿಕೆಯ ಹಲವು ಸಂಚಿಕೆಗಳನ್ನು ಓದುವ ಅವಕಾಶ ನನಗೆ ದೊರಕಿತು. ಅದು ವಿಮಾ ಮತ್ತು ಬ್ಯಾಂಕಿಂಗ್ ವಿಚಾರಗಳಲ್ಲಿ ಪ್ರಗತಿಪರಜ್ಞಾನವನ್ನು ಸುರೀತಿಯಲ್ಲಿ ಓದುಗರಿಗೆ ತಿಳುಹಿ ಉಪಯುಕ್ತ ಸೇವೆ ಮಾಡುತ್ತಿದೆಯೆಂದು ಹೇಳಬಲ್ಲೆ.

ಈ ಸಾಹಸಕ್ಕಾಗಿ ನಿಮ್ಮನ್ನು ಅಭಿವಂದಿಸಿ, ನಿಮಗೂ ಮತ್ತು ನಿಮ್ಮ ವಿಶೇಷ ಸಂಚಿಕೆಗೂ ಎಲ್ಲಾ ಬಗೆಯ ಗೆಲುವಾಗಲೆಂದು ಹೃತ್ಪೂರ್ವಕವಾಗಿ ಬಯಸುವೆನು.

(ಸಹಿ) ಮಿರ್ಜಾ ಎಂ. ಇಸ್ಮೇಲ್, ಮೈಸೂರಿನ ದಿವಾನರು.

———o———

Indian Institute of Science,
Bangalore, 8th May 1936.



SIR C. V. RAMAN, Kt., M.A., Ph.D., D.Sc., LL.D., F.R.S., N.L.

Dear Mr. Doddaveerappa,

On the occasion of your publishing the first anniversary number of "Vima-Vanijya", I must congratulate you on the success of your periodical. I hope it will survive many anniversaries.

*Yours sincerely,*
(Sd.) C. V. RAMAN.

ಭಾರತ ವಿಜ್ಞಾನಶಾಲೆ, ಬೆಂಗಳೂರು, ೮ ಮೇ ೧೯೩೬,

ಸರ್ ಸಿ. ವಿ. ರಾಮನ್,

ಕೆಟಿ., ಎಂ. ಎ., ಪಿಹೆಚ್.ಡಿ., ಡಿ.ಎಸ್‌ಸಿ. ಎಲ್‌ಎಲ್.ಡಿ., ಎಫ್.ಆರ್.ಎಸ್., ಎನ್. ಎಲ್.

ಶ್ರೀಯುತ ದೊಡ್ಡವೀರಪ್ಪನವರೇ,

"ವಿಮಾ - ವಾಣಿಜ್ಯ" ಪತ್ರಿಕೆಯ ಪ್ರಥಮ ವಾರ್ಷಿಕ ಸಂಚಿಕೆಯ ಪ್ರಕಟಣೆಯ ಶುಭ ಸಂದರ್ಭದಲ್ಲಿ ನಿಮ್ಮ ಪತ್ರಿಕೆಗೆ ದೊರೆತಿರುವ ವಿಜಯಕ್ಕಾಗಿ ನಿಮ್ಮನ್ನು ಅಭಿವಂದಿಸುತ್ತೇನೆ. ಅದು ಇನ್ನೂ ಅನೇಕ ವಾರ್ಷಿಕೋತ್ಸವಗಳನ್ನು ಕಾಣಲು ಚಿರಕಾಲ ಉಳಿಯಲೆಂಬುದು ನನ್ನ ಆಶಯ.

ತಮ್ಮ ಪ್ರೀತಿ ಪೂರ್ವಕ,
(ಸಹಿ) ಸಿ. ವಿ. ರಾಮನ್,

——— o ———

Bombay, 1st May 1936.



SIR M. VISWESWARAYA, KT., K. C. I. E., D. SC., LL. D., etc.,

Dear Sir,

I note you are putting in a lot of useful matter into your Magazine and I wish the publication every success.

*Yours faithfully,*
(Sd.) M. VISWESWARAYA.

೧ ಮೇ ೩೬, ಬೊಂಬಾಯಿ.

ಸರ್ ಎಂ. ವಿಶ್ವೇಶ್ವರಯ್ಯ.
ಕೆಟಿ. ಕೆ. ಸಿ. ಐ. ಇ., ಡಿ. ಎಸ್‌ಸಿ., ಎಲ್‌ಎಲ್. ಡಿ., ಇತ್ಯಾದಿ.

ಪ್ರಿಯ ಮಹನೀಯರೇ

ನಿಮ್ಮ ಪತ್ರಿಕೆಯ ಜನ್ಮೋತ್ಸವ ಸಂಚಿಕೆಯಲ್ಲಿ ಅತ್ಯುಪಯುಕ್ತ ವಿಚಾರಗಳು ಪ್ರಕಟವಾಗಲಿರುವುದೆಂದು ತೋರುವುದು. ಅದಕ್ಕೆ ಎಲ್ಲ ವಿಧದ ಯಶಸ್ಸನ್ನು ಕೋರುವೆನು.

ನಿಮ್ಮ ಪ್ರೀತಿ ಪೂರ್ವಕ,
(ಸಹಿ) ಎಂ. ವಿಶ್ವೇಶ್ವರಯ್ಯ.

---

Bangalore City,
11th May 1936.



Rajasabhabhushana, Dewan Bahadur,
SIR K. P. PUTTANNA CHETTY, KT., LL.D.

I am glad to see that the "Vima-Vanijya" has completed a years's existence and survived the ills of infancy. Its articles are well-written and the Magazine contains much valuable information on insurance, banking and other allied economic subjects. Its editorial management is in capable hands. I wish it every success.

(Sd.) K. P. PUTTANNA CHETTY.

ಬೆಂಗಳೂರು ನಗರ, ೧೧ ಮೇ ೧೯೩೬.

ರಾಜ ಸಭಾಭೂಷಣ ದಿವಾನ್ ಬಹದ್ದೂರ್ ಸರ್ ಕೆ. ಪಿ. ಪುಟ್ಟಣ್ಣಚೆಟ್ಟಿ, ಕೆಟಿ., ಎಲ್‌ಎಲ್.ಡಿ.,

"ವಿಮಾ-ವಾಣಿಜ್ಯ"ವು ಬಾಲಾರಿಷ್ಟಗಳನ್ನು ಗೆಲಿದು ತನ್ನ ಪ್ರಥಮ ವರ್ಷವನ್ನು ಸುಖಮಯವಾಗಿ ಪೂರಯಿಸಿತೆಂಬುದನ್ನು ಕೇಳಿ ಅತ್ಯಾನಂದವಾಗಿದೆ. ವಿಮಾ, ಬ್ಯಾಂಕಿಂಗ್ ಮತ್ತು ಇತರ ಆರ್ಥಿಕ ವಿಚಾರಗಳನ್ನು ಕುರಿತ ಅತ್ಯುಪಯುಕ್ತ ವಿಷಯಗಳ ಮೇಲಣ ಉತ್ತಮ ಶೈಲಿಯ ಲೇಖನಗಳು ಇದರಲ್ಲಿವೆ. ಸಂಪಾದಕೀಯ ಆಡಳಿತವು ದಕ್ಷರಾದವರ ಕೈಲಿದೆ. ಇದಕ್ಕೆ ಸರ್ವವಿಧ ವಿಜಯವಾಗಲೆಂಬುದು ನನ್ನ ಹಾರೈಕೆ.

(ಸಹಿ) ಕೆ. ಪಿ. ಪುಟ್ಟಣ್ಣಚೆಟ್ಟಿ.

---

Bangalore, 21st May 1936.



Rajamantrapravina S. P. RAJAGOPALACHARI, B. A., B. L.,
Member of Council.

It gives me great pleasure to know that this useful Journal has completed its first year of existence. I hope that the Journal will flourish more and more and carry out its mission of diffusing knowledge on Insurance and other allied topics to the people of the State.

(Sd.) S. P. RAJAGOPALACHARI.

ಬೆಂಗಳೂರು ೨೧ ಮೇ ೧೯೩೬

ರಾಜಮಂತ್ರಪ್ರವೀಣ ಎಸ್. ಪಿ. ರಾಜಗೋಪಾಲಾಚಾರಿ, ಬಿ ಎ., ಬಿ.ಎಲ್.,
ಪ್ರಥಮ ಸಚಿವರು

ಈ ಉಪಯುಕ್ತ ಪತ್ರಿಕೆಯು ಒಂದು ವರ್ಷಕಾಲವನ್ನು ಪೂರಯಿಸಿತೆಂಬುದನ್ನು ಕೇಳಿ ಅತ್ಯಂತ ಹರ್ಷವಾಗಿದೆ. ಪತ್ರಿಕೆಯು ಇನ್ನೂ ಹೆಚ್ಚುಹೆಚ್ಚು ಪ್ರಬುದ್ಧಮಾನಕ್ಕೆ ಬಂದು ಸಂಸ್ಥಾನದ ಜನರಲ್ಲಿ ವಿಮಾ ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಚಾರಗಳ ಅರಿವನ್ನು ಹರಡುವ ಕಾರ್ಯವನ್ನು ನೆರವೇರಿಸುವುದೆಂದು ನನ್ನ ನಂಬಿಕೆ.

(ಸಹಿ) ಎಸ್. ಪಿ. ರಾಜಗೋಪಾಲಾಚಾರಿ.

---o---

Bangalore, 16th May 1936.



MR. N. MADHAVA RAU, B A, B.L.,
Member of Council.

Dear Sir,

It gives me great pleasure to learn that your Kannada Magazine the 'Vima-Vanijya' will be shortly celebrating its first birthday and that you propose issuing a Special Number on the occasion. The endeavours of the promoters of the Magazine to popularise ideas of insurance and banking are commendable and I trust that in the coming years, the Magazine will reach an ever increasing circle of readers. The high standard it has set up augurs well for its future success and popularity.

*Yours faithfully,*
(Sd.) N. MADHAVA RAU.

ಬೆಂಗಳೂರು, ೧೬ ಮೇ ೧೯೩೬.

**ಶ್ರೀ ಎನ್. ಮಾಧವರಾವ್, ಬಿ. ಎ., ಬಿ. ಎಲ್., ದ್ವಿತೀಯ ಸಚಿವರು.**

ಪ್ರಿಯ ಮಹನೀಯರೇ,

ನಿಮ್ಮ "ವಿಮಾ-ವಾಣಿಜ್ಯ" ಪತ್ರಿಕೆಯ ಪ್ರಥಮ ವಾರ್ಷಿಕೋತ್ಸವವು ನೆರವೇರುವುದೆಂದೂ, ಆ ಸಂದರ್ಭದಲ್ಲಿ ವಿಶೇಷ ಸಂಚಿಕೆಯೊಂದನ್ನು ಹೊರಡಿಸುವಿರೆಂದೂ ಕೇಳಿ ನನಗೆ ಮಹದಾನಂದವಾಗಿದೆ. ವಿಮಾ, ಬ್ಯಾಂಕಿಂಗ್ ವಿಚಾರಗಳ ಜ್ಞಾನಪ್ರಸಾರ ಮಾಡಬೇಕೆಂಬ ಪತ್ರಿಕೆಯ ಸಂಚಾಲಕರ ಧ್ಯೇಯವು ಉದಾತ್ತವಾದುದು. ಬರುವ ವರ್ಷಗಳಲ್ಲಿ ಈ ಪತ್ರಿಕೆಯ ಓದುಗರ ಸಂಖ್ಯೆ ವೃದ್ಧಿಯಾಗುತ್ತ ಹೋಗುವುದೆಂದು ನನ್ನ ನಂಬಿಕೆ. ಅದರ ಭವಿಷ್ಯವು ಹೆಚ್ಚು ಜಯಪ್ರದವಾದುದಾಗಿಯೂ, ಕೀರ್ತಿಯುತವಾದುದಾಗಿಯೂ ಇದೆ ಎನ್ನುವುದಕ್ಕೆ ಇಂದಿನ ಅದರ ವಸ್ತು ಶ್ರೇಷ್ಠತೆಯೇ ನಿದರ್ಶನವು.

ನಿಮ್ಮ ಪ್ರೀತಿಪೂರ್ವಕ,
(ಸಹಿ) ಎನ್. ಮಾಧವರಾವ್.

———o———

Chamarajpet, Bangalore,
8th May 1936.



Rajakaryaprasakta Rao Bahadur
M. SHAMA RAO, M. A.,
Retd., Inspector-General of Education in Mysore.

I have great pleasure to know that the "Vima-Vanijya" started a year ago will complete its anniversary on the coming Birthday of His Highness the Maharaja on the 31st instant. I have been a regular reader of this journal for the past twelve months and in everyway it has supplied a void which existed.

The journal is being all along written in a clear style and has contained much useful information to those interested in Banking, Insurance, Trade and connected matters. How lacking the people, in general, are in information on these subjects, I need not emphasise. I fully hope that the people interested in the above matters will help the promoters of the journal to extend its usefulness further by acquainting themselves with its contents and thus enabling them to completely fulfil their objects. I wish complete success to the special Birthday Number.

(Sd.) M. SHAMA RAO.

ಬೆಂಗಳೂರು, ೮ ಮೇ ೧೯೩೬.

ರಾಜಕಾರ್ಯ ಪ್ರಸಕ್ತ, ರಾವ್ ಬಹದ್ದೂರ್ ಎಂ. ಶಾಮರಾವ್, ಎಂ. ಎ.,
ನಿವೃತ್ತ ಮೈಸೂರು ದೇಶದ ವಿದ್ಯಾಶಾಖಾಧಿಕಾರಿಗಳು.

ಕಳೆದ ವರ್ಷ ಜನ್ಮತಳೆದ "ವಿಮಾ-ವಾಣಿಜ್ಯ" ಪತ್ರಿಕೆಯ ವಾರ್ಷಿಕೋತ್ಸವವು ಈ ತಿಂಗಳು ೨೧ನೇ ತಾರೀಖು ಬರಲಿರುವ ಘನಹೊಂದಿನ ಶ್ರೀಮನ್ಮಹಾರಾಜರವರ ಜನ್ಮೋತ್ಸವ ದಿನ ಕೂಡಿ ಬರುವುದೆಂದು ತಿಳಿದು ಆನಂದಿಸುತ್ತೇನೆ. ಕಳೆದ ಹನ್ನೆರಡು ತಿಂಗಳಿಂದಲೂ ಈ ಪತ್ರಿಕೆಯನ್ನು ನಾನು ತಪ್ಪದೆ ಓದುತ್ತಿದ್ದೇನೆ. ಅದು ಇದ್ದ ಕೊರತೆಯೊಂದನ್ನು ಎಲ್ಲಾ ವಿಧದಲ್ಲಿಯೂ ನಿವಾರಿಸಿದೆ. ಪತ್ರಿಕೆಯು ಸುಲಭ ಶೈಲಿಯಿಂದ ಕೂಡಿದುದಾಗಿ, ಬ್ಯಾಂಕಿಂಗ್, ವಿಮೆ, ವ್ಯಾಪಾರ ಮೊದಲಾದ ಉದ್ಯಮಗಳಲ್ಲಿ ತೊಡಗಿದವರಿಗೆ ಅತ್ಯುಪಯುಕ್ತ ವಿಚಾರಗಳನ್ನು ತಿಳಿಸಿ ಕೊಡುವುದಾಗಿರುತ್ತದೆ. ಇಂತಹ ವಿಷಯಗಳ ವಿಚಾರದಲ್ಲಿ ಸಾಮಾನ್ಯ ಜನತೆಯಲ್ಲಿ ಎಷ್ಟು ಅಜ್ಞಾನವು ಕವಿದಿದೆ ಯೆಂಬುದನ್ನು ನಾನು ಒತ್ತಿ ಹೇಳಬೇಕಾಗಿಲ್ಲ. ಈ ವಿಷಯಗಳಿಗೆ ಸಂಬಂಧಿಸಿದವರು ಪತ್ರಿಕೆಯ ಚಂದಾರರಾಗಿ, ಅದರಲ್ಲಿರುವ ವಿಷಯಗಳನ್ನು ಗ್ರಹಿಸಿ, ಪತ್ರಿಕೆಯು ಹೆಚ್ಚು ಉಪಯುಕ್ತವಾದುದಾಗುವುದಕ್ಕೂ, ಅದರ ಉದ್ದೇಶವು ಕೈಗೂಡುವುದಕ್ಕೂ ಪತ್ರಿಕೆಯ ಸಂಚಾಲಕರಿಗೆ ನೆರವಾಗುವರೆಂದು ನನಗೆ ಪೂರ್ಣ ನಂಬಿಕೆ ಇದೆ. ಈ ಪತ್ರಿಕೆಯ ಜನ್ಮೋತ್ಸವ ವಿಶೇಷ ಸಂಚಿಕೆಗೆ ಸಂಪೂರ್ಣವಾಗಿ ಜಯವು ದೊರೆಯಲೆಂದು ಹಾರೈಸುತ್ತೇನೆ.

(ಸಹಿ) ಎಮ್. ಶಾಮರಾವ್.

Bangalore, 16th May 1936.



N. S. SUBBA RAO, Esq. M. A., BAR-AT-LAW,
Vice-Chancellor, Mysore University.

It is important that in our country people should be educated to a full appreciation of the advantages of the method of insurance. It is, therefore, a matter for gratification that "Vima Vanijya" has been started and has succeeded in making a place for itself in the life of the State. I hope that the coming days will see the Journal increasingly popular and striking out new paths of usefulness to the community.

(Sd.) N. S. SUBBA RAO.

ಬೆಂಗಳೂರು, ೧೬ ಮೇ ೧೯೩೬.

ಶ್ರೀ ಎನ್. ಎಸ್. ಸುಬ್ಬರಾವ್, ಎಂ.ಎ., ಬಾರ್-ಅಟ್-ಲಾ ರವರು,
ವೈಸ್-ಛಾನ್ಸೆಲರ್, ಮೈಸೂರು ವಿಶ್ವವಿದ್ಯಾನಿಲಯ.

ನಮ್ಮ ದೇಶದ ಜನರು ವಿಮಾ ಪದ್ಧತಿಯಿಂದ ದೊರೆವ ಸೌಲಭ್ಯಗಳಿಂದ ಉಪಕೃತರಾಗಲು ಜ್ಞಾನಪ್ರಸಾರವು ಅತಿ ಮುಖ್ಯವಾದುದು. ಆದುದರಿಂದ "ವಿಮಾ-ವಾಣಿಜ್ಯ" ಪತ್ರಿಕೆಯು ಜನ್ಮವೆತ್ತಿ, ಸಂಸ್ಥಾನಿಕ ಜೀವನದಲ್ಲಿ ತನಗೊಂದು ಶ್ರೇಷ್ಠಸ್ಥಾನ ಗಳಿಸಿ ವಿಜಯಿಯಾಗಿರುವುದು ಸಂತಸವೀಯುವ ವಿಚಾರ. ಬರುವ ದಿನಗಳಲ್ಲಿ ಪತ್ರಿಕೆಯು ಸಮಾಜದ ಉಪಯುಕ್ತತೆಗಳಿಗಾಗಿ ನವೀನ ಮಾರ್ಗಗಳನ್ನು ನಿರ್ದೇಶಿಸುತ್ತಾ ಮತ್ತೂ ಹೆಚ್ಚಿನ ಕೀರ್ತಿಗಳಿಸುವುದೆಂದು ನನ್ನ ಭರವಸೆ.

(ಸಹಿ) ಎನ್. ಎಸ್. ಸುಬ್ಬರಾವ್.

ಬೆಂಗಳೂರು, ೨೦ ಮೇ ೧೯೩೬.



Mr. B. M. SRIKANTAIAH, M. A. B. L.,
Professor of English, Mysore University.
ಶ್ರೀ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.,
ಆಂಗ್ಲ ಭಾಷಾ ವಿಶಾರದರು, ಮೈಸೂರು ವಿಶ್ವವಿದ್ಯಾನಿಲಯ.

"ವಿಮಾ ವಾಣಿಜ್ಯ"ದ ಸಂಪಾದಕರಾದ ಶ್ರೀಮಾನ್ ದೊಡ್ಡವೀರಪ್ಪನವರು ಬಹುದಕ್ಷತೆಯಿಂದ ತಮ್ಮ ಪತ್ರಿಕೆಯನ್ನು ಒಂದು ವರ್ಷ ನಡಸಿ, ಈಗ ಒಂದು ವಿಶೇಷ ಸಂಚಿಕೆಯನ್ನು ಹೊರಡಿಸುತ್ತಿದ್ದಾರೆ. ಒಂದು ಜನಾಂಗದ ಏಳಿಗೆಗೆ ಮನಶ್ಶುದ್ಧಿ ಆವಶ್ಯಕ: ಅದು ಸಾಹಿತ್ಯ ಮತ್ತು ಕಲೆ ಇವುಗಳ ಆಸ್ವಾದನದಿಂದ ದೊರೆಯುವುದು. ಆದರೆ ಬರಿಯ ಸಾಹಿತ್ಯವೇ ಸಾಲದು. ಕ್ರಿಯಾ ಕೌಶಲ್ಯ, ವ್ಯಾಪಾರ ಕೈಗಾರಿಕೆಗಳ ಅಭಿವೃದ್ಧಿ ಇವೂ ಆವಶ್ಯಕ: ನಮ್ಮಲ್ಲಿ ಇವು ಸದ್ಯಕ್ಕೆ ಹೆಚ್ಚು ಅವಶ್ಯಕವೆಂದು ಹೇಳಿದರೂ ನ್ಯಾಯವಾಗುತ್ತದೆ. ಈಗ ನಾವು ಶಕ್ತಿಯನ್ನು ಸಾಧಿಸಬೇಕಾಗಿದೆ —ದ್ರವ್ಯಶಕ್ತಿ, ಕಾರ್ಯಶಕ್ತಿ, ಸಂಘಶಕ್ತಿ, ದ್ರವ್ಯವನ್ನು ಎಷ್ಟು ತಿರಸ್ಕರಿಸಿದ್ದೆವೋ—ಒಣ ವೈರಾಗ್ಯವನ್ನು ಅತಿಯಾಗಿ ಬೆಳಸಿ—ಅಷ್ಟೂ ಈಗ—ನಿಜವಾದ ವೈರಾಗ್ಯವನ್ನು ಬಿಡದೆ—ದ್ರವ್ಯವನ್ನು ನಾವು ಪುರಸ್ಕರಿಸಬೇಕಾಗಿದೆ. ಜನರ ಬಡತನವನ್ನು—ಎಲ್ಲಾ ಬಗೆಯ ನಿರ್ಭಾಗ್ಯ ತನವನ್ನು— ಈಗ ಹೋಗಲಾಡಿಸಬೇಕಾಗಿದೆ. ಇಂತಹ ಕಾರ್ಯಸಂಧಾನದಲ್ಲಿ ಶ್ರೀಮಾನ್ ದೊಡ್ಡವೀರಪ್ಪನವರು ನಿರಂತರವಾಗಿ ನಿರ್ಭಯರಾಗಿ ದುಡಿಯುತ್ತಿದ್ದಾರೆ. ಇವರ ಪತ್ರಿಕೆಯ ವಿಚಾರಗಳೂ, ಭಾಷಾಶೈಲಿಯೂ ಕನ್ನಡಿಗರಿಗೆಲ್ಲಾ ಹೃದಯಂಗಮವಾಗಿವೆ. ಇವರ ಉದ್ಯಮಕ್ಕೆ ಭಗವಂತನು ಜಯವನ್ನೇ ದಯಪಾಲಿಸಿ ಅವರಿಂದ ದೇಶಸೇವೆ ಇನ್ನೂ ಹೆಚ್ಚಾಗಿ ನಡೆಯುವಂತೆ ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

(ಸಹಿ) ಬಿ. ಎಂ. ಶ್ರೀಕಂಠಯ್ಯ.

Mysore, 14th April 1936.



A. R. WADIA, Esq., B. A., (Cantab), BAR-AT-LAW,
Professor of Philosophy, The University of Mysore.

My dear Doddaveerappa,

I am glad to learn that your " Vima Vanijya " is entering upon the second year of its existence. I have really nothing to send as a special message for this except that it carries my best wishes for its continued prosperity.

With kind regards,

*Yours sincerely,*
(Sd.) A. R. WADIA.

ವಿಶ್ವವಿದ್ಯಾನಿಲಯ, ಮೈಸೂರು.
೧೪, ಏಪ್ರಿಲ್ ೧೯೩೬.

**ಶ್ರೀ|| ಎ. ಆರ್. ವಾಡಿಯಾ, ಬಿ. ಎ., (ಕಾಂಟಬ್) ಬಾರ್ - ಆಟ್ - ಲಾ. ಅವರು,**
ತತ್ವಶಾಸ್ತ್ರವಿಶಾರದರು.

ಪ್ರಿಯ ದೊಡ್ಡವೀರಪ್ಪನವರೇ,

ನಿಮ್ಮ ‘‘ ವಿಮಾ - ವಾಣಿಜ್ಯ ’’ ಪತ್ರಿಕೆಗೆ ಎರಡನೆಯ ವರ್ಷವು ಆರಂಭವಾದುದನ್ನು ಕೇಳಿ ನನಗೆ ಸಂತೋಷ ಉಂಟಾಗಿದೆ. ಇದಕ್ಕಾಗಿ ಕಳುಹಿಸುವ ನನ್ನ ವಿಶೇಷ ಸಂದೇಶವಿಷ್ಟೇ. ಆದು ಮುಂದೆಯೂ ಏಕರೀತಿ ಅಭಿವೃದ್ಧಿ ಪಡೆಯಲೆಂಬುದೇ ನನ್ನ ಹೃತ್ಪೂರ್ವಕ ಸದಾಶಯವು.

ಇಂತು ತಮ್ಮ ಪ್ರೀತಿಪೂರ್ವಕ,
(ಸಹಿ) ಎ. ಆರ್. ವಾಡಿಯಾ.

Bangalore, 18th May1936.



Rao Bahadur B. K. GARUDACHAR, M. L. C.,
President, Municipal Council, Bangalore.

I took a special interest in reading the "Vima-Vanijya" issues as it was a novel one in this Country. The contents arranged was so good, that it induced any man to go through it very carefully. In these days of unemployment and depression, a paper of that sort was needed, very badly. I am sure the people will take more and more interest in the paper which is doing the good bit of work to the public. I wish every success for the Special Issue which shall be appreciated by one and all.

(Sd.) B. K. GARUDACHAR.

ಬೆಂಗಳೂರು, ೧೮ ಮೇ ೧೯೩೬.

ರಾವ್ ಬಹದ್ದೂರ್ ಬಿ. ಕೆ. ಗರುಡಾಚಾರ್, ಎಂ.ಎಲ್.ಸಿ.,
ಪೌರಸಭಾಧ್ಯಕ್ಷರು, ಬೆಂಗಳೂರು.

"ವಿಮಾ-ವಾಣಿಜ್ಯ" ವು ಈ ದೇಶದ ಒಂದು ನವೀನ ಸಾಹಸವಾದುದರಿಂದ ಅದರ ಸಂಚಿಕೆಗಳನ್ನು ವಿಶೇಷ ಆಸಕ್ತಿಯಿಂದ ಓದಿದ್ದೇನೆ. ವಸ್ತು ಜೋಡಣೆಯು ಬಹು ಉತ್ತಮವಿದ್ದು, ಯಾರಿಗೇ ಆಗಲಿ ಅದನ್ನು ಮನವಿಟ್ಟು ಓದಬೇಕೆಂಬ ಆಸಕ್ತಿಯನ್ನು ಹುಟ್ಟಿಸುವಂತಹುದಾಗಿದೆ. ನಿರುದ್ಯೋಗವೂ, ಆರ್ಥಿಕ ದುಃಸ್ಥಿತಿಯೂ ತಾನೆ ತಾನಾಗಿರುವ ದಿನಗಳಲ್ಲಿ, ಇಂತಹ ಪತ್ರಿಕೆಯ ಅವಶ್ಯಕತೆಯು ಬಹುವಾಗಿ ಇತ್ತು. ಜನತೆಗೆ ಉಪಯುಕ್ತ ಸೇವೆ ಸಲ್ಲಿಸುತ್ತಿರುವ ಈ ಈ ಪತ್ರಿಕೆಗೆ ಸಾರ್ವಜನಿಕರು ಹೆಚ್ಚು ಹೆಚ್ಚು ಆದರ ತೋರಿಸುವರೆಂದು ನನಗೆ ಪೂರ್ಣ ಭರವಸೆ ಇದೆ. ಈ ಪತ್ರಿಕೆಯ ವಿಶೇಷ ಸಂಚಿಕೆಯು ಸರ್ವಜನಾಕರ್ಷಕವಾಗಿರುವುದೆಂದು ನಾನು ಬಲ್ಲೆ. ಅದಕ್ಕೆ ಸರ್ವವಿಧ ಯಶಸ್ಸನ್ನೂ ಕೋರುವೆನು.

(ಸಹಿ) ಬಿ. ಕೆ. ಗರುಡಾಚಾರ್.

Bangalore City, 17th May 1936.



Rajacharitavisharada, Rao Saheb
C. HAYAVADANA RAO, B.A., B.L., M. L. C.

My Dear Mr. Doddaveerappa,

It gives me great pleasure to congratulate the "*Vima-Vanijya*" on its successful first year. That it has survived the ills of infancy is a matter to feel thankful for, especially as it is a pioneer in the field of Vernacular specialized Journalism. I should much like to see it encouraged to a larger extent by merchants, traders and bankers in the State. The Journal has many distinctive features and it is bound to do even better if public support is forthcoming in a larger measure. The idea of issuing of a well-got up Birthday Number in time for distribution on the auspicious occasion of the Next Birth Day of H. H. the Maharaja of Mysore is a most commendable one. I wish you and the Journal you have been editing and managing increasing success in the years to come.

*Yours sincerely,*
(Sd.) C. HAYAVADANA RAO.

ಬೆಂಗಳೂರು, ೧೭ ಮೇ ೧೯೩೬.

ರಾಜಚರಿತ ವಿಶಾರದ ರಾವ್ ಸಾಹೇಬ್ ಸಿ. **ಹಯವದನರಾವ್**, ಬಿ.ಎ., ಬಿ.ಎಲ್., ಎಂ.ಎಲ್.ಸಿ.

ಪ್ರಿಯ ಶ್ರೀ ದೊಡ್ಡವೀರಪ್ಪನವರೇ,

ಪ್ರಥಮ ವರ್ಷವನ್ನು ವಿಜಯಶಾಲಿಯಾಗಿ ಕಳೆದುದುಕ್ಕಾಗಿ "ವಿಮಾ-ವಾಣಿಜ್ಯ" ವನ್ನು ಅತ್ಯಾನಂದದಿಂದ ಅಭಿವಂದಿಸುತ್ತೇನೆ. ಕನ್ನಡದ ವಿಶಿಷ್ಟ ವಿಚಾರಗಳ ಪತ್ರಿಕೋದ್ಯಮ ಪ್ರಪಂಚದಲ್ಲಿ ಇದು ಮೊದಲಿನದಿದ್ದು, ಬಾಲಾರಿಷ್ಟಗಳನ್ನು ಗೆಲಿದು ಮುಂದಡಿಯಿಟ್ಟಿರುವುದು ಸಂತಸದ ವಿಚಾರ. ಸಂಸ್ಥಾನದ ವರ್ತಕರೂ, ವ್ಯಾಪಾರಿಗಳೂ ಮತ್ತು ಬ್ಯಾಂಕರುಗಳು ಈ ಪತ್ರಿಕೆಗೆ ಮತ್ತೂ ಹೆಚ್ಚಿನ ಉತ್ತೇಜನ ಕೊಡಬೇಕೆಂಬುದು ನನ್ನ ಆಶಯ. ಪತ್ರಿಕೆಯ ವಸ್ತು ವಿಭಾಗವು ಬಹು ವಿಧವಾಗಿದೆ, ಮತ್ತು ಸಾರ್ವಜನಿಕರ ಉದಾರಾಶ್ರಯವು ಇನ್ನೂ ಹೆಚ್ಚು ಪ್ರಮಾಣದಲ್ಲಿ ದೊರೆಯುವುದಾದರೆ ಅದು ಇನ್ನೂ ಉತ್ತಮವಾಗುವುದು. ಬರಲಿರುವ ಘನ ಹೊಂದಿದ ಶ್ರೀಮನ್ಮಹಾರಾಜರವರ ಜನ್ಮೋತ್ಸವ ದಿನದ ಶುಭ ಸಮಯದಲ್ಲಿ ಉತ್ತಮ ರೀತಿಯಲ್ಲಿ ಜನ್ಮೋತ್ಸವ ಸಂಚಿಕೆಯೊಂದನ್ನು ಪ್ರಕಟಿಸಬೇಕೆಂಬ ಉದ್ದೇಶವು ಪ್ರಶಂಸನೀಯವಾದುದು. ಬರುವ ವರ್ಷಗಳಲ್ಲಿ ನಿಮಗೂ, ನಿಮ್ಮ ಸಂಪಾದಕೀಯ ಮತ್ತು ಆಡಳಿತ ನೇತೃತ್ವದಲ್ಲಿರುವ ಪತ್ರಿಕೆಗೂ ಹೆಚ್ಚು ಹೆಚ್ಚು ಗೆಲುವು ದೊರೆಯಲೆಂದು ಹಾರೈಸುತ್ತೇನೆ.

ತಮ್ಮ ಪ್ರೀತಿಪೂರ್ವಕ,

(ಸಹಿ) ಸಿ. **ಹಯವದನರಾವ್**

---

Bangalore, 19th May 1936.



Praktanavimarsa Vichakshana, Mahamahopadhyaya, Rao Bahadur,
**R. NARASIMHACHARYA**, M. A., M. R. A. S.,
Retired Director of Archaeology in Mysore.

Dear Sir,

Your Journal "Vima-Vanijya", of which I have seen a few issues, is excellently got up and contains valuable information about Indian

Insurance, Banking, Commerce etc. It gives me much pleasure to learn that it has successfully completed its first year's career. Though it has not been a success financially at present, there is the satisfaction that it has spread a knowledge about Indian Insurance etc., among the Kannada-knowing public and I hope it will have a bright future.

I wish every success to this laudable enterprise.

*Yours sincerely,*
(Sd.) R. NARASIMHACHAR.

ಬೆಂಗಳೂರು, ೧೯ ಮೇ ೧೯೩೬.

ಪ್ರಾಕ್ತನ ವಿಮರ್ಶ ವಿಚಕ್ಷಣ ಮಹಾ ಮಹೋಪಾಧ್ಯಾಯ, ರಾವ್ ಬಹದ್ದೂರ್,
ಆರ್. ನರಸಿಂಹಾಚಾರ್ಯ, ಎಂ.ಎ., ಎಂ.ಆರ್.ಎ.ಎಸ್.
ಪುರಾತನ ಸಂಸ್ಕೃತಿ ಪರಿಶೋಧನ ಶಾಖೆಯ ನಿವೃತ್ತ ಡೈರೆಕ್ಟರರು.

ಪ್ರಿಯ ಮಹನೀಯರೆ,

ನಿಮ್ಮ "ವಿಮಾ ವಾಣಿಜ್ಯ" ಪತ್ರಿಕೆಯ ಹಲವು ಸಂಚಿಕೆಗಳನ್ನು ಓದಿದ್ದೇನೆ. ಅದು ವಿಮಾ, ಬ್ಯಾಂಕಿಂಗ್ ವಾಣಿಜ್ಯ ವಿಷಯಗಳ ಉದಾತ್ತ ವಿಚಾರಗಳನ್ನೊಳಗೊಂಡು ಬಹು ಅಂದವಾಗಿ ಪ್ರಕಟವಾಗುತ್ತಲಿದೆ. ಅದು ತನ್ನ ಪ್ರಥಮ ವರ್ಷವನ್ನು ಜಯಪ್ರದವಾಗಿ ಕಳೆದಿದೆಯೆಂಬುದನ್ನು ಕೇಳಿ ನನಗೆ ಅತ್ಯಾನಂದವಾಗಿದೆ. ಆದಕ್ಕೆ ಇಂದು ಆರ್ಥಿಕ ರೀತ್ಯಾ ಜಯವು ಲಭಿಸದಿದ್ದರೂ ಭಾರತೀಯ ವಿಮಾ ಜ್ಞಾನವನ್ನು ಕನ್ನಡ ನಾಡಿನ ಜನತೆಯಲ್ಲಿ ಹರಡಿರುವೆನೆಂಬ ತೃಪ್ತಿಯಿದೆ. ಆದಕ್ಕೆ ಶುಭ ಭವಿಷ್ಯವಿದೆಯೆಂಬ ನಂಬಿಕೆಯು ನನಗಿದೆ.

ಈ ಮಹತ್ಪ್ರಯತ್ನಕ್ಕೆ ಎಲ್ಲಾ ಬಗೆಯ ವಿಜಯವನ್ನೂ ಕೋರುವೆನು.

ತಮ್ಮ ಪ್ರೀತಿಪೂರ್ವಕ,
(ಸಹಿ) ಆರ್. ನರಸಿಂಹಾಚಾರ್.

———o———

Bangalore City, Dated 12th May 1936.



P. SUBBARAMA CHETTY, Esq., M. R. A., M. L. C.,
President of Mysore Chamber of Commerce, Director " Bank of Mysore, Ltd."

Dear Sir,

I am glad to learn that the 2nd year of your Magazine commences from the 31st May and that a Special Edition will be published on the birthday of our beloved Highness. During the short period of one year your Magazine has gained much in popularity and circulation. In these days of cut-throat competition, it is a matter of congratulation that your Magazine has been so successfully overcoming all initial difficulties and maintaining a high standard.

Wishing continued success and prosperity.

*Yours sincerely,*
(Sd.) P. SUBBARAMA CHETTY.

೧೨ ಮೇ ೧೯೩೬ ಬೆಂಗಳೂರು

**ಶ್ರೀ ಪಿ. ಸುಬ್ಬರಾಮಚೆಟ್ಟಿ, ಎಂ. ಆರ್., ಎಂ. ಎಲ್. ಸಿ. ಅವರು, ಅಧ್ಯಕ್ಷರು ಮೈಸೂರು ವಣಿಕ್ಸಂಘ,**
**ಡೈರೆಕ್ಟರು " ಬ್ಯಾಂಕ್ ಆಫ್ ಮೈಸೂರು ಲಿಮಿಟೆಡ್ "**

ಪ್ರಿಯ ಮಹನೀಯರೇ,

ಮೇ ೩೧ನೇ ತಾರೀಖಿಗೆ ತಮ್ಮ " ವಿದ್ಯಾ-ವಾಣಿಜ್ಯ " ಪತ್ರಿಕೆಗೆ ಎರಡನೆಯ ವರ್ಷವು ಪ್ರಾರಂಭವಾಗುವುದೆಂದೂ, ಆ ಸಂದರ್ಭದಲ್ಲಿ ನಮ್ಮ ಪ್ರಜಾವತ್ಸಲರಾದ ಶ್ರೀಮನ್ಮಹಾರಾಜರವರ ಜನ್ಮೋತ್ಸವ ದಿನ ವಿಶೇಷ ಸಂಚಿಕೆಯೊಂದನ್ನು ಹೊರಡಿಸುವಿರೆಂದೂ ಕೇಳಿ ಸಂತೋಷಿಸುತ್ತೇನೆ. ಒಂದು ವರ್ಷದ ಅಲ್ಪ ಅವಧಿಯಲ್ಲಿ ನಿಮ್ಮ ಪತ್ರಿಕೆಯು ಹೆಚ್ಚು ಆದರಣೆಯನ್ನೂ ಹೆಚ್ಚು ಓದುಗರನ್ನೂ ಪಡೆದಿದೆ. ಇಂದಿನ ವಿನಾಶಕಾರಕ ಸ್ಪರ್ಧೆಯಲ್ಲಿ ನಿಮ್ಮ ಪತ್ರಿಕೆಯು ಪ್ರಥಮದಲ್ಲಿ ಬರಬಹುದಾದ ತೊಡರುಗಳನ್ನೆಲ್ಲ ಗೆಲಿದು ತನ್ನ ವಸ್ತು ಶ್ರೇಷ್ಠತೆಯನ್ನುಳಿಸಿಕೊಂಡು ಮುಂದಡಿಯಿಟ್ಟಿರುವುದು ಅಭಿನಂದನಾರ್ಹವು. ಮುಂದೆಯೂ ಪತ್ರಿಕೆಗೆ ನಿರಂತರವಾದ ಜಯವೂ, ಯಶಸ್ಸೂ ದೊರೆಯಲೆಂದು ಹಾರೈಸುತ್ತೇನೆ.

ನಿಮ್ಮ ಪ್ರೀತಿಪೂರ್ವಕ,
(ಸಹಿ) ಪಿ. ಸುಬ್ಬರಾಮಚೆಟ್ಟಿ,

Bangalore City, 18th May 1936.



R. SUNDARAM IYER, Esq.
Merchant & Ex-President, Mysore Chamber of Commerce.

Dear Mr. Doddaveerappa,

I take great pleasure in voicing my good wishes to "VIMA-VANIJYA" on the completion of its first year of existence and the beginning of the second year of its useful career.

I feel confident that there is a great future for Journals like yours and I fully believe that you will spare no efforts in continuing your mission of popular education through your Journal despite the many odds and consolidate your position with the progress of time.

Please allow me to congratulate you on the 1ts anniversary of the Journal.

(Sd.) R. SUNDARAM IYER

ಬೆಂಗಳೂರು, ೧೮ ಮೇ ೧೯೩೬.

**ಶ್ರೀ|| ಆರ್. ಸುಂದರಂ ಅಯ್ಯರ್**, ವರ್ತಕರು ಮತ್ತು ಮೈಸೂರು ವಣಿಕ್ಸಂಘದ ಮಾಜಿ ಅಧ್ಯಕ್ಷರು

ಪ್ರಿಯ ಶ್ರೀ ದೊಡ್ಡವೀರಪ್ಪನವರೇ

"ವಿಮಾ-ವಾಣಿಜ್ಯ" ವು ತನ್ನ ಜೀವಮಾನದ ಪ್ರಥಮವರ್ಷವನ್ನು ಕಳೆದು, ತನ್ನ ಉಪಯುಕ್ತ ಕಾರ್ಯದ ದ್ವಿತೀಯ ವರ್ಷದಲ್ಲಿ ಕಾಲಿಟ್ಟಿರುವಾಗ ಅದಕ್ಕೆ ಅತ್ಯಾನಂದದಿಂದ ಶ್ರೇಯಸ್ಸು ಕೋರುತ್ತಿರುವೆನು.

ಈ ತರಹದ ಪತ್ರಿಕೆಗಳಿಗೆ ಭವ್ಯಭವಿಷ್ಯವಿದೆ ಯೆಂಬುದು ನನ್ನ ನಂಬಿಕೆ. ಬರುಬಹುದಾದ ಅಡ್ಡಿಗಳನೆಲ್ಲ ಎದುರಿಸಿ ನಿಮ್ಮ ಪತ್ರಿಕೆಯು ಮೂಲಕ ಜನತೆಗೆ ಜ್ಞಾನಪ್ರಸಾರ ಕಾರ್ಯವನ್ನು ಮುಂದುವರಿಸಲು ನಿಮ್ಮ ಕೈಲಾದ ಪ್ರಯತ್ನಗಳನ್ನೆಲ್ಲಾ ಮಾಡಿಯೇ ತೀರುವಿರೆಂದು ತಿಳಿದಿದ್ದೇನೆ. ಕಾಲಕ್ರಮೇಣ ನಿಮ್ಮ ಸ್ಥಾನವು ಮತ್ತೂ ಭದ್ರವಾಗುವುದೆಂದು ನನ್ನ ಭರವಸೆ.

ನಿಮ್ಮ ಪತ್ರಿಕೆಯ ವಾರ್ಷಿಕೋತ್ಸವದ ಈ ಸಮಯದಲ್ಲಿ ನಿಮ್ಮನ್ನು ಅಭಿವಂದಿಸಲಿಚ್ಛಿಸುತ್ತೇನೆ.

(ಸಹಿ) **ಆರ್. ಸುಂದರಂ ಅಯ್ಯರ್.**

(Camp). Mylapore, Madras.
3rd April 1936.



SIR S. RADHAKRISHNAN,
Professor of Oriental Philosophy, Oxford University.

Dear Sir,

I am glad to know that you have completed a year of useful service and activity. I have no doubt that your Journal will grow stronger and more vigorous in the New Year.

*Yours sincerely,*
(Sd.) S. RADHAKRISHNAN.

(ಮೊಕ್ಕಾಂ) ಮೈಲಾಪುರ ಮದ್ರಾಸು, ೩ ಏಪ್ರಿಲ್ ೧೯೩೬.

**ಸರ್ ಎಸ್. ರಾಧಾಕೃಷ್ಣನ್,** ಪೌರ್ವಾತ್ಯ ತತ್ವ ಶಾಸ್ತ್ರಾಧ್ಯಾಪಕರು, ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ.

ಪ್ರಿಯ ಮಹನೀಯರೇ,

ಉಪಯುಕ್ತ ಸೇವಾಕಾರ್ಯದ ಒಂದು ವರ್ಷವು ನಿಮ್ಮ ಪತ್ರಿಕೆಗೆ ಪೂರ್ಣವಾಯಿತೆಂಬುದನ್ನು ಕೇಳಿ ನನಗೆ ಸಂತಸವಾಯಿತು. ಹೊಸ ವರ್ಷದಲ್ಲಿ ನಿಮ್ಮ ಪತ್ರಿಕೆಯು ಹೆಚ್ಚು ಅಭಿವೃದ್ಧಿ ಹೊಂದಿ ಇನ್ನೂ ಹೆಚ್ಚು ಹುರುಪುಗೊಳ್ಳುವುದೆಂದು ನನಗೆ ಧೃಢನಂಬಿಕೆ ಇದೆ.

ನಿಮ್ಮ ಪ್ರೀತಿಪೂರ್ವಕ,
(ಸಹಿ) ಎಸ್. ರಾಧಾಕೃಷ್ಣನ್.

New Delhi, 17th April 1936.



S. SATYAMURTI, Esq., M. L. A.,
President, Tamil Nadu Congress Committee,
Chairman, "Swarajya Insurance Co., Ltd." New Delhi.

Dear Sir,

I am very happy to know that you are publishing the Birthday Number of "Vima Vanijya", the first journal of its kind in the whole of Karnataka. I wish the journal all success. There is a great future for good and sound journalism especially in the language of the country. I trust your journal will follow high ideals and serve Karnataka and Bharatha matha.

*Yours faithfully,*
(Sd.) S. SATYAMURTI.

ನವದೆಹಲಿ, ೧೭ ಏಪ್ರಿಲ್ ೩೬

ಶ್ರೀ ಎಸ್. ಸತ್ಯಮೂರ್ತಿ. ಎಂ. ಎಲ್. ಎ. ಅವರು ತಮಿಳುನಾಡು ಕಾಂಗ್ರೆಸು ಕಮಿಟಿ ಅಧ್ಯಕ್ಷರು,
ಅಧ್ಯಕ್ಷರು "ಸ್ವರಾಜ್ಯ ಇನ್ಷ್ಯೂರೆನ್ಸು ಕಂಪನಿ ಲಿಮಿಟೆಡ್" ನವದೆಹಲಿ

ಪ್ರಿಯ ಮಹನೀಯರೇ,

ಇಡೀ ಕರ್ಣಾಟಕದಲ್ಲಿ ವಿಮಾ ವಾಣಿಜ್ಯಗಳನ್ನು ಕುರಿತ ಏಕಮಾತ್ರ ಪತ್ರಿಕೆಯಾದ "ವಿಮಾ-ವಾಣಿಜ್ಯ" ದ ಜನ್ಮೋತ್ಸವ ಸಂಚಿಕೆಯನ್ನು ಹೊರಡಿಸುವಿರೆಂದು ಕೇಳಿ ನನಗೆ ಬಹಳ ಆನಂದವಾಗಿದೆ. ಪತ್ರಿಕೆಗೆ ಸರ್ವತೋಮುಖವಾದ ವಿಜಯವಾಗಲೆಂದು ಹಾರೈಸುತ್ತೇನೆ. ಉತ್ತಮ ಪತ್ರಿಕೋದ್ಯಮಕ್ಕೆ ಅದರಲ್ಲೂ ದೇಶಭಾಷೆಗಳಲ್ಲಿ ನಡೆಸಲ್ಪಡುವ ಅಂತಹ ಉದ್ಯಮಕ್ಕೆ ಭವ್ಯ ಭವಿಷ್ಯವಿದೆ. ನಿಮ್ಮ ಪತ್ರಿಕೆಯು ಉಚ್ಚ ಆದರ್ಶಗಳನ್ನು ಧ್ಯೇಯವಾಗಿಟ್ಟುಕೊಂಡು ಕರ್ಣಾಟಕ ಮತ್ತು ಭಾರತಮಾತೆಯ ಸೇವೆ ಮಾಡುವದೆಂದು ನಂಬಿದ್ದೇನೆ.

ನಿಮ್ಮ ಪ್ರೀತಿ ಪೂರ್ವಕ
(ಸಹಿ) ಎಸ್. ಸತ್ಯಮೂರ್ತಿ.

Calcutta, 20th April 193[illegible]



NALINI RANJAN SARKAR, Esq.,
General Manager, Hindusthan Co-operative Insurance Society Ltd.

I sent to the "Vima-Vanijya" my message of good wishes on its inception last year. I am very glad to notice that the Journal is soon completing the first year of its existence. I have always maintained that there is an infinite scope for good work by vernacular financial journals of the right type, and the success of the "Vima-Vanijya" gives me great pleasure. I wish the "Vima-Vanijya" a long and useful career, and I hope it will always strive for a correct, balanced and scientific approach to the important problems with which it deals. I once more wish it every success.

(Sd.) N. R. SARKAR.

ಕಲ್ಕತ್ತಾ, ೨೦ ಏಪ್ರಿಲ್ ೧೯೩೬.

ಶ್ರೀ|| ನಳಿನಿರಂಜನ್ ಸರ್ಕಾರ್ ಅವರು, ಜನರಲ್ ಮ್ಯಾನೇಜರು,
ಹಿಂದೂಸ್ಥಾನ್ ಕೋ-ಆಪರೇಟೀವ್ ಇನ್ಷ್ಯೂರೆನ್ಸ್ ಸೊಸೈಟಿ ಲಿಮಿಟೆಡ್, ಕಲ್ಕತ್ತ.

ಕಳೆದವರ್ಷ "ವಿಮಾ-ವಾಣಿಜ್ಯ"ವು ಜನ್ಮ ತಳೆದಂದು ನಾನು ಅದಕ್ಕೆ ಶುಭಸಂದೇಶ ಕಳುಹಿದೆನು. ಈ ಪತ್ರಿಕೆಗೆ ಇಷ್ಟರಲ್ಲಿಯೇ ಪ್ರಥಮವರ್ಷ ತುಂಬುವುದೆಂದು ಕೇಳಿ ಆನಂದಿಸುತ್ತೇನೆ. ನಾಡುನುಡಿಯಲ್ಲಿಯೇ ಅರ್ಥಸಂಬಂಧ ವಿಚಾರಗಳ ಅರಿವನ್ನು ಸಮರ್ಪಕರೀತಿ ಜನತೆಗೆ ತಿಳಿಸಿಕೊಡುವ ಪತ್ರಿಕೆಗಳು ಸಾಧಿಸಬಹುದಾದ ಉತ್ತಮ ಕಾರ್ಯವು ಅಗಾಧವಾಗಿದೆಯೆಂಬುದು ನನ್ನ ಯಾವತ್ತಿನ ಅಭಿಮತ. "ವಿಮಾ-ವಾಣಿಜ್ಯ"ದ ವಿಜಯವು ನನಗೆ ಅಧಿಕ ಸಂತಸವಿತ್ತಿದೆ. "ವಿಮಾ-ವಾಣಿಜ್ಯ"ವು ಬಹುಕಾಲ ಉಪಕಾರಿಯೆನಿಸಿ ಬಾಳಲಿ ಮತ್ತು ತನ್ನವಗಾಹನೆಗೆ ಬಂದ ವಿಚಾರಗಳನ್ನು ನ್ಯಾಯರೀತಿಯಿಂದ ಶಾಸ್ತ್ರೀಯ ವಿಮರ್ಶನಾತ್ಮಕ ದೃಷ್ಟಿಯಿಂದವಲೋಕಿಸಲು ಸದಾ ಪ್ರಯತ್ನಿಸಲಿ ಎಂಬುದು ನನ್ನ ಆಶಯ. ಅದಕ್ಕೆ ಸರ್ವ ವಿಧದಲ್ಲಿಯೂ ಶ್ರೇಯಸ್ಸುಂಟಾಗಲೆಂದು ಹಾರೈಸುತ್ತೇನೆ.

(ಸಹಿ) ಎನ್. ಆರ್. ಸರ್ಕಾರ್.

Calcutta, 14th May 1936.



S. C. RAY, Esq. M. A., B. L., F. R. E., Con. S.,
Editor, "Insurance World" and Manager, Aryasthan Insurance Co. Ltd ,

Dear Mr. J. V. Doddaveerappa,

The announcement that there will be a special issue of "*Vima-Vanijya*" next month affords me an opportunity, which I gladly take, to send you my warmest congratulations on the progress of your journal. Being the first vernacular journal on Insurance in Karnataka "Vima-Vanijya" has a claim to the good wishes of all who want to see the entire Indian people become really insurance minded. In the work of popularising insurance in India vernacular insurance journals are sure to play an important part. I have no doubt "Vima-Vanijya" is rendering valuable service in Karnataka. I wish it many many years of prosperous usefulness.

*Yours sincerely,*
(Sd.) S. C. RAY.

ಕಲ್ಕತ್ತಾ, ೧೪ ಮೇ ೧೯೩೬.

ಶ್ರೀ|| ಎಸ್. ಸಿ. ರೇ, ಎಂ. ಎ., ಬಿ. ಎಲ್., ಎಫ್. ಆರ್. ಇ., ಕಾರ್. ಎಸ್.
ಸಂಪಾದಕರು "ಇನ್ಷ್ಯೂರೆನ್ಸ್ ವರ್ಲ್ಡ್", ಮ್ಯಾನೇಜರು, ಆರ್ಯಸ್ಥಾನ್ ಇನ್ಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್.

ಪ್ರಿಯ ದೊಡ್ಡವೀರಪ್ಪನವರೇ,

"ವಿಮಾ ವಾಣಿಜ್ಯ"ಪತ್ರಿಕೆಯ ವಿಶೇಷ ಸಂಚಿಕೆಯೊಂದನ್ನು ಹೊರಡಿಸುವ ವಿಚಾರದ ಬಗ್ಗೆಯ ತಿಳುವಳಿಕೆಯು ನಿಮ್ಮ ಪತ್ರಿಕೆಯ ಅಭಿವೃದ್ಧಿಯನ್ನು ಕುರಿತು ನನ್ನ ಹೃತ್ಪೂರ್ವಕ ಅಭಿವಂದನೆಗಳನ್ನು ಆನಂದದಿಂದ ಅರ್ಪಿಸಲು ನನಗೊಂದು ಅವಕಾಶವನ್ನಿತ್ತಿದೆ.

'ವಿಮಾ-ವಾಣಿಜ್ಯ'ವು ಕರ್ಣಾಟಕದ ಮೊಟ್ಟಮೊದಲಿನ ವಿಮಾ ವಿಚಾರ ಪತ್ರಿಕೆಯಾಗಿದ್ದು, ಎಲ್ಲ ಭಾರತೀಯರಲ್ಲಿಯೂ ವಿಮಾ ಭಾವನೆಯು ಮೂಡಬೇಕೆಂದು ಆಶಿಸುವವರ ಆದರಕ್ಕೆ ಪಾತ್ರವಾಗಿದೆ. ಭಾರತದಲ್ಲಿ ವಿಮಾ ಉದ್ಯಮಕ್ಕೊಂದು ಶ್ರೇಷ್ಠ ಸ್ಥಾನವನ್ನು ಕಲ್ಪಿಸುವ ಕಾರ್ಯದಲ್ಲಿ ಮಾತೃಭಾಷೆಯ ವಿಮಾ ಪತ್ರಿಕೋದ್ಯಮವು ಮಹತ್ತಿನದು. "ವಿಮಾ-ವಾಣಿಜ್ಯ"ವು ಕರ್ಣಾಟಕಕ್ಕೆ ಅತ್ಯುತ್ತಮ ಸೇವೆ ಸಲ್ಲಿಸುತ್ತಿದೆಯೆಂಬುದು ನಿಸ್ಸಂಶಯವು. ಅದು ವೃದ್ಧಿಹೊಂದಿ ಅನೇಕಾನೇಕ ವರ್ಷಗಳು ಉಪಯೋಗಿಯೆನಿಸಿ ಬಾಳಲೆಂದು ಹಾರೈಸುತ್ತೇನೆ.

(ಸಹಿ) ಎಸ್. ಸಿ. ರೇ.

———o———

Premayatana, Tungabhadra,
18th April 1936.



PANDIT TARANATHAJI,
Editor: "Prema,"

Dear Sir,

I am very glad to hear your journal has gone through one year of its life and is now stepping into the second. It is creditable for a journal dealing with a subject like Insurance even to live that much, in this unfortunate land of "high infant mortality." "Vima-Vanijya" has proved its vitality already and must have an easier yet more useful life hereafter, I dare say.

I congratulate you and wish your journal a long and useful life.

*Yours sincerely,*
(Sd.) TARANATH.

ತುಂಗಭದ್ರಾ ೧೮ ಎಪ್ರಿಲ್, ೧೯೩೬.

**ಪಂಡಿತ ತಾರಾನಾಥಜಿ,** ಸಂಪಾದಕರು 'ಪ್ರೇಮ'

ಪ್ರಿಯ ಮಹನೀಯರೇ,

ತಮ್ಮ ಪತ್ರಿಕೆಗೆ ಪ್ರಥಮ ವರ್ಷವು ತುಂಬಿ ದ್ವಿತೀಯ ವರ್ಷವು ಆರಂಭಿಸುವುದೆಂಬುದನ್ನು ಕೇಳಿ ಅತ್ಯಂತ ಸಂತೋಷವಾಗಿದೆ. ಶೈಶವದಲ್ಲಿಯೇ ಅಧಿಕ ಮರಣವಿರುವ, ಬಾಲಾರಿಷ್ಟಗಳಿಂದ ನಿಬಿಡವಾದ ಈ ನಿರ್ಭಾಗ್ಯ ನಾಡಿನಲ್ಲಿ ವಿಮಾ ವಿಷಯಕ ಪತ್ರಿಕೆಯು ಅಷ್ಟುಕಾಲ ಬದುಕಿದುದೂ ಪ್ರಶಂಸನೀಯವಾದುದೇ ಸರಿ. "ವಿಮಾ-ವಾಣಿಜ್ಯ" ವು ತನ್ನ ಶಕ್ತಿ ಪ್ರತಿಭೆಗಳನ್ನು ಈಗಾಗಲೇ ವ್ಯಕ್ತಗೊಳಿಸಿದೆ. ಮತ್ತು ಇನ್ನು ಮುಂದಿನ ಅದರ ಜೀವನವು ಹೆಚ್ಚು ಸುಖಮಯವಾಗಿಯೂ ಹೆಚ್ಚು ಉಪಯುಕ್ತವಾಗಿಯೂ ಇರುವುದೆಂದು ಧೈರ್ಯದಿಂದ ಹೇಳಬಲ್ಲೆ.

ಅದಕ್ಕಾಗಿ ನಿಮ್ಮನ್ನು ಅಭಿವಂದಿಸುತ್ತೇನೆ. ಮತ್ತು ನಿಮ್ಮ ಪತ್ರಿಕೆಯು ಚಿರಕಾಲ ಉಪಕಾರಿಯೆನಿಸಿ ಬಾಳಲೆಂದು ಹಾರೈಸುತ್ತೇನೆ.

ತಮ್ಮ ಪ್ರೀತಿಪೂರ್ವಕ
(ಸಹಿ) **ತಾರಾನಾಥ.**

---

Lahore, 8th April, 1936.

SARDAR SARDUL SINGH CAVESHER,
Ex-President, National Congress.

Dear Sir,

All those who are trying to popularise insurance in India deserve every encouragement, as insurance is the mother of Industry and National Prosperity of a country.

I wish your paper every success.

*Yours faithfully,*
(Sd.) Sardar Sardul Singh Cavesher,

ಲಾಹೋರ್, ೮ ಏಪ್ರಿಲ್ ೧೯೩೬

**ಸರ್‌ದಾರ್ ಶಾರ್ದೂಲ್ ಸಿಂಗ್ ಕವೀಶ್ವರ್ ರಾಷ್ಟ್ರೀಯ ಕಾಂಗ್ರೆಸ್ಸಿನ ಮಾಜಿ ಅಧ್ಯಕ್ಷರು**

ಪ್ರಿಯ ಮಹನೀಯರೇ,

ವಿಮೆಯು ಕೈಗಾರಿಕೋನ್ನತಿಗೂ ಮತ್ತು ರಾಷ್ಟ್ರೀಯ ಸಂಪದಭಿವೃದ್ಧಿಗೂ ಆಧಾರ ಭೂತವಾದುದರಿಂದ ಭಾರತದಲ್ಲಿ ವಿಮಾಪ್ರಚಾರ ಕಾರ್ಯ ಕೈಗೊಂಡಿರುವವರೆಲ್ಲರೂ ಎಲ್ಲ ಬಗೆಯ ಉತ್ತೇಜನಕ್ಕೂ ಅರ್ಹರು.

ನಿಮ್ಮ ಪತ್ರಿಕೆಗೆ ಸರ್ವವಿಧ ಶ್ರೇಯಸ್ಸು ದೊರಕಲೆಂದು ಹಾರೈಸುತ್ತೇನೆ.

ನಿಮ್ಮ ಪ್ರೀತಿಪೂರ್ವಕ
(ಸಹಿ) **ಶಾರ್ದೂಲಸಿಂಗ್ ಕವೀಶ್ವರ್**

---

Madras, 13th May, 1936.



M. Ct. M. CHIDAMBARAM CHETTIAR, Esq.
Chairman, "The United India Life Assurance Co., Ltd.," Director, "Indian Bank Ltd."

Dear Sir,

I sincerely wish that "Vima-Vanijya" will be more and more useful to the Indian Insurance, Banking and Commerce public I wish the Magazine and your enterprise all success.

*Yours faithfully,*

(Sd.) M. ct. M. CHIDAMBARAM CHETTIAR.

ಮದ್ರಾಸ್, ೧೩ ಮೇ ೧೯೩೬.

ಎಂ. ಸಿಟಿ. ಎಂ. ಚಿದಂಬರಂ ಚೆಟ್ಟಿಯಾರ್
ಅಧ್ಯಕ್ಷರು ಯುನೈಟೆಡ್ ಇಂಡಿಯಾ ಲೈಫ್ ಅಷ್ಯೂರೆನ್ಸ್ ಕಂಪೆನಿ ಲಿಮಿಟೆಡ್.

ಪ್ರಿಯ ಮಹನೀಯರೇ,

"ವಿಮಾ-ವಾಣಿಜ್ಯ" ವು ಭಾರತೀಯ ಜೀವ ವಿಮಾ, ಬ್ಯಾಂಕಿಂಗ್ ಮತ್ತು ವಾಣಿಜ್ಯ ಉದ್ಯಮಗಳಲ್ಲಿ ತೊಡಗಿರುವ ಜನತೆಗೆ ಹೆಚ್ಚು ಹೆಚ್ಚು ಉಪಯುಕ್ತವಾದುದಾಗಿ ಚಿರಕಾಲ ಬಾಳಲೆಂಬುದು ನನ್ನ ಆಶಯ. ಪತ್ರಿಕೆಗೂ ಮತ್ತು ನಿಮ್ಮ ಸಾಹಸಕ್ಕೂ ಎಲ್ಲ ಜಯವುಂಟಾಗಲೆಂದು ಹಾರೈಸುತ್ತೇನೆ.

ನಿಮ್ಮ ಪ್ರೀತಿ ಪೂರ್ವಕ,
(ಸಹಿ) ಎಂ. ಚಿದಂಬರಂ ಚೆಟ್ಟಿಯಾರ್.

---

Calcutta, 21 st April 1936.

Mr. JATINDRA MOHAN SANYAL,
Superintendent, Bengal Mercantile Life Insurance Co., Ltd.

I congratulate the "Vima-Vanijya" on completion of its first year of progress.

The potentialities of insurance and banking of which your esteemed organ is an expotent and preacher, in developing the resources of this great land cannot be gainsaid.

Vast as our country is and diverse the languages spoken, the gospel of your mission must needs be preached to the peoples in their familiar tongue to be of real help. To this end, your journal is doing yeomen service and every honour and encouragement is due to it.

I have no doubt, and the popularity it has gained within the little space of time it has been in existence emboldens me to believe that the "Vima-Vanijya" will at no distant date acquire its rightful place of honour in contributing its quota to the economic life of Karnataka and thus of our motherland.

(Sd) J. M. SANYAL.

ಕಲ್ಕತ್ತಾ, ೨೧ ಏಪ್ರಿಲ್ ೧೯೩೬

ಶ್ರೀ|| ಜತೀಂದ್ರ ಮೋಹನ್ ಸಂನ್ಯಾಲ್, ಸೂಪರಿಂಟೆಂಡೆಂಟ್,
ಬೆಂಗಾಲ್ ಮರ್ಕೆಂಟೈಲ್ ಲೈಫ್ ಇನ್ಷ್ಯೂರೆನ್ಸ್ ಕಂಪನಿ, ಲಿಮಿಟೆಡ್

ತನ್ನ ಪ್ರಥಮ ವರ್ಷವನ್ನು ವಿಜಯಶಾಲಿಯಾಗಿ ಕಳೆದುದಕ್ಕಾಗಿ ನಾನು "ವಿಮಾ-ವಾಣಿಜ್ಯ" ವನ್ನು ಅಭಿವಂದಿಸುತ್ತೇನೆ.

"ವಿಮಾ-ವಾಣಿಜ್ಯ" ವು ಯಾವ ಅರಿವನ್ನು ಪ್ರಸಾರಮಾಡುತ್ತಿದೆಯೋ ಮತ್ತು ಯಾವುದರ ಏಳ್ಗೆಗಾಗಿ ಶ್ರಮಿಸುತ್ತಿದೆಯೋ ಆ ವಿಮಾ-ಬ್ಯಾಂಕಿಂಗ್ ವ್ಯವಹಾರಗಳು ಎಂಥಹ ಮಹಾಶಕ್ತಿಯುತವಾದವೆಂಬುದನ್ನೂ ಅವು ಗಳಿಂದ ನಮ್ಮ ನಾಡಿನ ಅಭಿವೃದ್ಧಿಗಿರುವ ಅನುಕೂಲಗಳೆಷ್ಟೆಂಬುದನ್ನೂ ಹೇಳತೀರದು.

ನಮ್ಮ ದೇಶವು ವಿಸ್ತಾರವಾದುದು, ಜನತೆಯು ನಾನಾ ಭಾಷೆಗಳನ್ನಾಡುವರು. ಹೀಗಿರುವಲ್ಲಿ ವಿಮಾ-ವಾಣಿಜ್ಯ ವಿಚಾರಗಳ ಸಂದೇಶವನ್ನು ಅವರವರ ಮಾತೃ ಭಾಷೆಯಲ್ಲಿ ಸಾರುವುದೇ ನಿಜವಾದ ಸಹಾಯ. ಈ ರೀತಿ ನಿಮ್ಮ ಪತ್ರಿಕೆಯು ಜನತೆಗೆ ಸಲ್ಲಿಸುತ್ತಿರುವ ಸೇವೆಯು ಅತ್ಯಮೂಲ್ಯವಾದುದು ಮತ್ತು ಅದು ಎಲ್ಲ ಮನ್ನಣೆ ಉತ್ತೇಜನಗಳಿಗೆ ಅರ್ಹವಾದುದು.

ಈ ಅತ್ಯಲ್ಪಕಾಲದಲ್ಲಿ "ವಿಮಾ-ವಾಣಿಜ್ಯ" ವು ಪಡೆದಿರುವ ಪ್ರಸಿದ್ಧಿಯನ್ನು ನೋಡಿದರೆ, ಅದು ಇನ್ನು ಕೆಲಕಾಲದಲ್ಲಿಯೇ, ಕರ್ಣಾಟಕದ ತನ್ಮೂಲಕ ನಮ್ಮ ತಾಯ್ನಾಡಿನ ಆರ್ಥಿಕ ಜೀವನೋದ್ಧಾರಕ ಉದ್ಯಮದಲ್ಲಿ ಗಣ್ಯಸ್ಥಾನ ಪಡೆದು ಮೆರೆವುದು ನಿಸ್ಸಂದೇಹವಾದುದೆಂದು ನನ್ನ ಧೃಢನಂಬಿಕೆ.

ತಮ್ಮ ಪ್ರೀತಿಪೂರ್ವಕ,
(ಸಹಿ) ಜೆ. ಎಮ್. ಸಂನ್ಯಾಲ್.

---

Dated, 14th April 1936.

J. N. BASU Esqr., M A., B.L., M.L.C.,
Director, Metropolitan Insurance Co., Ltd., Calcutta.

The "Vima Vanijya" is an important Magazine in connection with the spread of knowledge regarding Insurance amongst a large section of the people of this country. Most of the Magazines and Journals dealing with Insurance in India are in the English language. They do not reach the masses by reason of being conducted in a language unknown to the people in general. The idea of starting a Magazine in Kannada was one that was not only conceived for the best of purposes, but was also calculated to lead to the best results. I am glad that the conductors of the Magazine went forward courageously with their new venture. There work has gone on for a short time only. We should be satisfied with the results that have been achieved. I am certain that if the conductors proceed with the same courage and perseverence as they have already displayed, they will attain a wider and more permanent success. I heartily wish the Journal greater advance in its own sphere and much wider Circulation.

*Yours sincerely,*
(Sd.) J. N. BASU.

ಕಲ್ಕತ್ತ, ೧೪ ಏಪ್ರಿಲ್ ೧೯೩೬

**ಶ್ರೀ. ಜೆ. ಎಸ್. ಬಸು, ಎಂ. ಎ., ಬಿ, ಎಲ್., ಎಂ. ಎಲ್. ಸಿ,**
**ಡೈರೆಕ್ಟರು "ಮೆಟ್ರೊ ಪಾಲಿಟನ್ ಇನ್ಷ್ಯೂರೆನ್ಸು" ಕಂಪನಿ ಲಿಮಿಟೆಡ್.**

"ವಿಮಾ-ವಾಣಿಜ್ಯ"ವು ಈ ದೇಶದ ಒಂದು ದೊಡ್ಡ ನಾಡಿನ ಜನತೆಗೆ ವಿಮಾ ಜ್ಞಾನಪ್ರಸಾರ ಮಾಡುವ ಪ್ರಮುಖ ಪತ್ರಿಕೆ. ಭಾರತದಲ್ಲಿರುವ ವಿಮಾ ಪತ್ರಿಕೆಗಳಲ್ಲಿ ಅನೇಕವು ಆಂಗ್ಲೇಯ ಭಾಷೆಯವು ಭಾಷೆಯು ಜನರೆಲ್ಲರಿಗೂ ಸಾರ್ವತ್ರಿಕವಾಗಿ ತಿಳಿಯದಾದುದರಿಂದ ಆ ಭಾಷೆಯ ಪತ್ರಿಕೆಗಳು ಸಾಮಾನ್ಯ ಜನತೆಯನ್ನು ಮುಟ್ಟುವಂತಿಲ್ಲ. ಕನ್ನಡದಲ್ಲಿ ಪತ್ರಿಕೆಯನ್ನು ಹೊರಡಿಸಬೇಕೆಂಬ ಅಭಿಲಾಷೆಯು ಅತ್ಯುಪಯುಕ್ತವಾದುದಷ್ಟೇ ಅಲ್ಲದೆ ಅತ್ಯುತ್ತಮಫಲದಾಯಕವಾದುದು. ಪತ್ರಿಕೆಯ ಸಂಚಾಲಕರು ಧೈರ್ಯದಿಂದ ತಮ್ಮ ನವಸಾಹಸದಲ್ಲಿ ಮುಂದಡಿಯಿಟ್ಟಿರುವುದು ನನಗೆ ಸಂತಸವಿತ್ತಿದೆ. ಇನ್ನೂ ಕಾರ್ಯವಾರಂಭಿಸಿ ಬಹುಕಾಲವಾಗಿಲ್ಲ. ಇಂದು ಸಾಧಿಸಿರುವ ಫಲದಿಂದ ನಾವು ತೃಪ್ತಿಪಡಬೇಕಾಗಿದೆ. ಪತ್ರಿಕೆಯ ಸಂಚಾಲಕರು ಈಗಾಗಲೇ ಪ್ರದರ್ಶಿಸಿರುವ ಧೈರ್ಯಸ್ಥೈರ್ಯಗಳಿಂದಲೇ ಮುಂದುವರಿಯುವುದಾದರೆ ಇನ್ನೂ ಘನವಾದ ಮತ್ತು ಇನ್ನೂ ಶಾಶ್ವತವಾದ ಯಶಸ್ಸು ದೊರೆಯುವುದೆಂಬುದು ನನ್ನ ದೃಢನಂಬಿಕೆ. ಪತ್ರಿಕೆಗೆ ತನ್ನ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಪ್ರಗತಿಯೂ ಮತ್ತು ಇನ್ನೂ ಹೆಚ್ಚು ಚಂದಾದಾರರೂ ದೊರೆಯಲೆಂದು ಹೃತ್ಪೂರ್ವಕನಾಗಿ ಆಶಿಸುತ್ತೇನೆ.

(ಸಹಿ) ಜೆ. ಎಸ್. ಬಸು.

---

Calcutta, 15th May 1936.



SARAT CHANDRA BOSE Esq,
Director, Hindu Mutual Life Assurance Ltd.

Dear Sir,

I have watched the progress of your widely circulated journal with great interest and I am glad to have the privilege of welcoming your most useful journal on its second birthday.

I congratulate you for your successful efforts to popularise Insurance in a contry like ours where the need of Insurance in every home is to be considered a necessity just like our daily meals.

May god bless your ncble object once again and guide you onward to the path of all success. Thanking you.

I remain,

*Yours sincerely,*

(Sd) SARAT CHANDRA BOSE.

ಕಲ್ಕತ್ತಾ, ೧೫ ಮೇ ೧೯೩೮.

ಶ್ರೀ|| ಶರತ್‌ಚಂದ್ರ ಬೋಸ್‌ರವರು,

ಡೈರೆಕ್ಟರ್, ಹಿಂದೂ ಮ್ಯೂಚುಯಲ್ ಲೈಫ್ ಅಷ್ಯೂರೆನ್ಸ್ ಲಿಮಿಟೆಡ್.

ಪ್ರಿಯ ಮಹನೀಯರೇ,

ಬಹುಜನರ ಹಸ್ತಗತವಾಗುತ್ತಿರುವ ನಿಮ್ಮ ಪತ್ರಿಕೆಯ ಪ್ರಗತಿಯನ್ನು ಅತ್ತ್ಯುತ್ಸಾಹದಿಂದ ಗಮನಿಸಿದ್ದೇನೆ. ಅಂತೆಯೇ ನಿಮ್ಮ ಅತ್ತ್ಯುಪಯುಕ್ತ ಪತ್ರಿಕೆಗೆ ಅದರ ದ್ವಿತೀಯ ಜನ್ಮದಿನದ ಶುಭ ಸಮಯದಲ್ಲಿ ಅತ್ಯಾನಂದದಿಂದ ಸುಸ್ವಾಗತ ಕೋರುತ್ತೇನೆ.

ನಮಗೆ ನಿತ್ಯದ ಆಹಾರವು ಹೇಗೆ ಅವಶ್ಯಕವಿದೆಯೋ ಹಾಗೆ ನಮ್ಮ ನಾಡಿನ ಪ್ರತಿಯೊಂದು ಕುಟುಂಬಕ್ಕೆ ವಿಮೆಯ ಅವಶ್ಯಕತೆ ಇದೆ. ಇಂತಹ ನಾಡಿನಲ್ಲಿ ವಿಮಾ ಪ್ರಚಾರಕಾರ್ಯ ಕೈಗೊಂಡು ಜಯಪ್ರದವಾಗಿ ನಡೆಸಿಕೊಂಡು ಬರುತ್ತಿರುವ ನಿಮ್ಮನ್ನು ಅಭಿನಂದಿಸುತ್ತೇನೆ.

ಜಗದೀಶನು ನಿಮ್ಮ ಉದಾತ್ತ ಉದ್ದೇಶವು ಫಲಿಸಲೆಂದು ಹರಸಿ ಗೆಲುವಿನ ದಾರಿಯಲ್ಲಿ ಮುಂದುವರಿಯಲು ಮಾರ್ಗದರ್ಶಕನಾಗಲಿ.

ತಮ್ಮ ಪ್ರೀತಿಪೂರ್ವಕ,

(ಸಹಿ) ಶರತ್‌ಚಂದ್ರಬೋಸ್.



# ಪರಿವಿಡಿ.

ನ
ವ
ಸಾ
ಹಿ
ತ್ಯ

# ವಿಮಾ-ವಾಣಿಜ್ಯ

ಜೀವವಿಮೆ, ಬ್ಯಾಂಕಿಂಗ್, ವ್ಯಾಪಾರ ವಿಚಾರಗಳನ್ನು ಕುರಿತ ಅಖಿಲ ಕರ್ನಾಟಕದ ಏಕಮಾತ್ರ ಸಚಿತ್ರ ಮಾಸಪತ್ರಿಕೆ

ಜನ್ಮೋತ್ಸವ ಸಂಚಿಕೆ

## ನಮ್ಮ ಮಾತು

ಯಾವ ಉದಾತ್ತ ಧ್ಯೇಯದ ದೀಕ್ಷಾಬದ್ಧವಾಗಿ "ವಿಮಾ-ವಾಣಿಜ್ಯ"ವು ಜನ್ಮತಾಳಿತೋ ಆ ಪ್ರಗತಿ ಮಾರ್ಗದಲ್ಲಿ ಅದು ಹೆಜ್ಜೆಯಿಟ್ಟು, ಎಲ್ಲ ಬಗೆಯ ಕಷ್ಟ ನಷ್ಟ ಅಪವಾದಗಳಿಂದ ನಿಬಿಡವಾದ ಈ ಮೊದಲನೆಯ ವರ್ಷವನ್ನು ದಾಟಿ, ಅದು ಎರಡನೆಯ ವರ್ಷದಲ್ಲಿ ಪದಾರ್ಪಣ ಮಾಡಲು ಅನುಗ್ರಹಿಸಿದ ಪರಮೇಶ್ವರನಿಗೆ ನಮ್ಮ ಅನಂತ ಪ್ರಣಾಮಗಳು. "ವಿಮಾ-ವಾಣಿಜ್ಯ"ವು ನಮ್ಮ ದೇಶದ ಎಂತಹ ತೀವ್ರವಾದ ಕೊರತೆಯೊಂದನ್ನು ಹೋಗಲಾಡಿಸಿತು, ಅದರ ಆವಶ್ಯಕತೆಯಾದರೂ ಎಷ್ಟು ಎಂಬ ವಿಷಯವನ್ನು ಎಲ್ಲರೂ ತಿಳಿದೇ ಇದ್ದಾರೆ. ಹೀಗೆ ಅದನ್ನು ಮನವರಿತುಕೊಂಡ ನಮ್ಮ ಕನ್ನಡ ಜನತೆಯು ಇದಕ್ಕೆ ಯೋಗ್ಯ ಪ್ರೋತ್ಸಾಹ ಕೊಟ್ಟು, ತನ್ನ ಧ್ಯೇಯಸಾಧನದಲ್ಲಿ ಇದಕ್ಕೆ ನೆರವಾಗುವರೆಂದು ನಾವು ಖಂಡಿತವಾಗಿ ನಂಬಿದ್ದೆವು; ಆ ನಂಬಿಕೆಯೇ ನಮ್ಮನ್ನು ಈ ಮಹೋದ್ಯಮಕ್ಕೆ ಪ್ರೇರೇಪಿಸಿದ್ದು. ಆದರೆ ಆ ವಿಶ್ವಾಸವು ಸಂಪೂರ್ಣ ಫಲಿತವಾಗಲಿಲ್ಲ; ಅದು ಕನ್ನಡಿಗರ ಕೇವಲ ಕರ್ತವ್ಯಪರಾಙ್ಮುಖತೆ ಎಂದು ನಮ್ಮ ಅಭಿಪ್ರಾಯ. ವಿಮಾ-ಕುಸೀದ-ಸಂಸ್ಥೆಗಳಾಗಲೀ, ವಿಮಾ ವಾಣಿಜ್ಯ ಪ್ರಪಂಚದಲ್ಲಿ ತೊಡಗಿರುವವರಾಗಲೀ "ವಿಮಾ-ವಾಣಿಜ್ಯ"ಕ್ಕೆ ತಾವು ತೋರಿಸಬೇಕಾದಷ್ಟು ಪ್ರೋತ್ಸಾಹವನ್ನು ತೋರಿಸಲಿಲ್ಲವೆಂದು ನಾವು ವಿಷಾದದಿಂದ ನುಡಿಯಬೇಕಾಗಿದೆ. ಕನ್ನಡದಲ್ಲಿ, ಕರ್ನಾಟಕದಲ್ಲಿ ಈ ಬಗೆಯ ಪತ್ರಿಕೆಯು ಇದೊಂದೇ ಎಂದು ನಾವು ಒತ್ತಿಹೇಳುವ ಆವಶ್ಯಕತೆಯಿಲ್ಲವೆಂದು ತಿಳಿದಿದ್ದೇವೆ. ವಿಮಾ ಕಂಪೆನಿಗಳೂ, ವಿಮಾ ಉದ್ಯೋಗಿಗಳೂ ಮನಸ್ಸು ಮಾಡಿದರೆ ಈ ನಮ್ಮ ಮಹೋದ್ಯಮಕ್ಕೆ ಸಹಾಯವಾಗುವುದಾದರೂ ಕಷ್ಟವಾದೀತೆಂದು ನಾವು ತಿಳಿದಿಲ್ಲ. ಅವರಲ್ಲಿ ನಮ್ಮದೊಂದು ಬಿನ್ನಹವುಂಟು. ಅವರಿಗೆ ತಮ್ಮ ವೃತ್ತಿಯಲ್ಲಿ ಜಯಪ್ರದವಾಗಲು ಬೇಕಾಗುವ ಅರಿವನ್ನು ದೊರಕಿಸಿಕೊಡುವುದಕ್ಕಿಂತಲೂ ಮಿಗಿಲಾಗಿ ಅವರ ಕಾರ್‍ಯರಂಗವನ್ನು ಸಿದ್ಧಗೊಳಿಸಿ ಅವರ ಕಾರ್‍ಯವು ಸುಗಮವಾಗುವಂತೆ ಮಾಡಬೇಕೆಂಬುದು ನಮ್ಮ ಉದ್ದೇಶ; ಮಹಾಜನಾಭಿಪ್ರಾಯವನ್ನು ಈ ವೃತ್ತಿಗಳ ಕಡೆಗೆ ಹದಗೊಳಿಸುವುದೇ ನಮ್ಮ ಕೆಲಸ. ಆದಕಾರಣ ಮುಖ್ಯವಾಗಿ ವಿಮಾ-ವಾಣಿಜ್ಯ ಕುಸೀದ ವೃತ್ತಿಗಳಲ್ಲಿ ತೊಡಗಿರುವವರೇ "ವಿಮಾ-ವಾಣಿಜ್ಯ"ವನ್ನು ಆದರಿಸಿ ಪುರಸ್ಕರಿಸಬೇಕಾಗಿದೆ. ಹೀಗಿದ್ದೂ ಸಹ "ವಿಮಾ-ವಾಣಿಜ್ಯ"ಕ್ಕೆ ಈ ಒಂದು ವರ್ಷಕಾಲದಲ್ಲಿ ಎಷ್ಟೊಂದು, ಯಾವ ಯಾವ, ಸಹಾಯಗಳು ಒದಗುವುವೆಂದು ನಾವೂ, ನಮ್ಮನ್ನು ಈ ಕಾರ್‍ಯಕ್ಕೆ ಪ್ರೇರೇಪಿಸಿದ ವಿಮಾ-ವಾಣಿಜ್ಯ ಪ್ರೇಮಿಗಳೂ ನಿರೀಕ್ಷಿಸಿದ್ದೇವೋ ಅದು ಫಲಿಸಲಿಲ್ಲ.

ಕರ್ನಾಟಕದ ನಾನಾಭಾಗದ ವಿಮಾ ಕುಸೀದ ವೃತ್ತಿಗಳಲ್ಲಿ ತೊಡಗಿರುವ ಅನೇಕಮಂದಿ ವರ್ತಕ ಪ್ರಮುಖರುಗಳಿಗೂ ಮತ್ತು ಸಾಹಿತ್ಯಪ್ರೇಮಿಗಳಿಗೂ ನಾವು ನಮ್ಮ ಪತ್ರಿಕೆಗಳನ್ನು ಮೊದಲಿನಿಂದಲೂ ಉಚಿತವಾಗಿ ಕಳುಹಿಸುತ್ತಲೇ ಇದ್ದೇವೆ. ಅವರಲ್ಲಿ ಹಲವರು ನಮ್ಮ ಬುಕ್ ಪೋಸ್ಟನ್ನು ಕೂಡ (ವಿ. ಪಿ. ಯಲ್ಲ!) ಹಿಂದಕ್ಕೆ ಕಳುಹಿಸುವ ಸೌಜನ್ಯವನ್ನು ತೋರಿಸಿದ್ದಾರೆ! ನಾವು ಹಣ ಕೇಳಲಿಲ್ಲ. ಚಂದಾ ಬಾರದಿದ್ದರೂ ಚಿಂತೆಯಿಲ್ಲ; ವಿಮಾ ವಾಣಿಜ್ಯ ಕುಸೀದ ವೃತ್ತಿಗಳಲ್ಲಿ ತೊಡಗಿರುವ ಎಲ್ಲರಿಗೂ ಕರ್ನಾಟಕ ಸಾಹಿತ್ಯ ಪ್ರೇಮಿಗಳಿಗೂ, ಈ ನಮ್ಮ ಪತ್ರಿಕೆ

ಯು ತಲುಪಲೇಬೇಕೆಂಬುದು ನಮ್ಮ ಹಿರಿಯ ಆಶೆ. ಈ ಆಶೆಯು ಚಿರಕಾಲ ನಡೆದುಬರಲು ಮಹಾಜನರ ಉದಾರ ಸಹಾಯ ಬೇಕು. ವಿಮಾ-ವಾಣಿಜ್ಯ ವೃತ್ತಿಗಳಲ್ಲಿ ತೊಡಗಿರುವ ಪ್ರತಿಯೊಬ್ಬರೂ ನಮ್ಮ ಪ್ರಯತ್ನಕ್ಕೆ ನೆರವಾಗಬೇಕಾದುದು ಧರ್ಮ ಮತ್ತು ಅವರ ಕರ್ತವ್ಯ. ಅವರಿಂದ ನಾವು ಈ ಸಹಾಯವನ್ನು ಬೇಡುತ್ತಿರುವೆವು. ಇದರಿಂದ ಪರಸ್ಪರ ಹಿತವುಂಟು ; ಪರಸ್ಪರ ಬಾಂಧವ್ಯವುಂಟು.

ಈ ವಿಷಯದಲ್ಲಿ ನಮ್ಮದೊಂದು ದೃಢಸಂಕಲ್ಪವುಂಟು. ಏನೇ ಆಗಲಿ, ನಾಡಿನ ಆರ್ಥಿಕ ಮುಕ್ತಿಗೆ ಅವಶ್ಯಕವಾದ ವಿಮಾ ಕುಸೀದ ವಾಣಿಜ್ಯ ವಿಚಾರಗಳನ್ನು ಕುರಿತ ಅರಿವಿನ ಪ್ರಚಾರವನ್ನು ನಮ್ಮ ಯೋಗ್ಯತಾನುಸಾರ ಮತ್ತು ಶಕ್ತ್ಯಾನುಸಾರ ಮಾಡಬೇಕೆಂದೂ, ಅದಕ್ಕಾಗಿ ಒಂದು ನಿರ್ದಿಷ್ಟ ಅವಧಿಯವರೆಗಾದರೂ ಈ ಪತ್ರಿಕೆಯನ್ನು ನಡೆಸಲೇಬೇಕೆಂದೂ, ನಾವು ಸ್ಥಿರಸಂಕಲ್ಪಮಾಡಿದ್ದೇವೆ. ಆ ಸಂಕಲ್ಪದಿಂದ ಪ್ರೇರಿತರಾದ ನಾವು ಆ ನಿರ್ದಿಷ್ಟ ಅವಧಿಯವರೆಗೂ ಈ ಪತ್ರಿಕೆಯನ್ನು ನಡೆಸಿಯೇ ತೀರುತ್ತೇವೆ. ಆದರೂ ಕನ್ನಡಿಗರೂ, ವಿಮಾ-ಕುಸೀದ ಸಂಸ್ಥೆಗಳೂ, ವಿಮಾ-ವಾಣಿಜ್ಯ ಉದ್ಯೋಗಿಗಳೂ, ನಮ್ಮೊಡನೆ ಸಹಕರಿಸಿ ನಮ್ಮ ದೇಶದ ಆರ್ಥಿಕ ಮುಕ್ತಿಗಾಗಿ ಹೋರಾಡುತ್ತಿರುವ "ವಿಮಾ-ವಾಣಿಜ್ಯ" ಕ್ಕೆ ತಮ್ಮ ಸಹಾನುಭೂತಿ-ಬೆಂಬಲಗಳನ್ನು ಕೊಡಬೇಕಾದುದು ಅವರ ಕರ್ತವ್ಯವೆಂದು ತಿಳಿದಿದ್ದೇವೆ. ಇವೆಲ್ಲಕ್ಕೂ ತನ್ನ ಪಾತ್ರತೆಯನ್ನು, ಯೋಗ್ಯತಾಸಿದ್ಧತೆಯನ್ನೂ, "ವಿಮಾ-ವಾಣಿಜ್ಯ"ವು ಹೆಚ್ಚಿಸಿಕೊಳ್ಳುತ್ತಲೇ ಇದೆ ಎಂಬುದನ್ನು ಓದುಗರು ತಾವೇ ಪ್ರತಿಸಂಚಿಕೆಯಲ್ಲಿಯೂ ಕಾಣಬಹುದಾಗಿದೆ.

ಹೀಗೆ ಆರ್ಥಿಕ ಕ್ಷೇತ್ರದಲ್ಲಿ "ವಿಮಾ-ವಾಣಿಜ್ಯ"ವು ಮಾಡುತ್ತಿರುವ ಸೇವೆಯಷ್ಟೇ ಮಹತ್ವದ ಸೇವೆಯೆಂದರೆ ಅದು ಸಾಹಸಮಾಡಿ ಕೈಗೊಂಡಿರುವ ನೂತನ ಸಾಹಿತ್ಯ ಸೃಷ್ಟಿ. ಇಂತಹ ಕೇವಲ ವೈಶಿಷ್ಟ್ಯ (Technical) ವಿಷಯಗಳ ಮೇಲೆ ಕನ್ನಡದಲ್ಲಿ ಸರಳವಾದ ಲೇಖನಗಳನ್ನು ಬರೆಯಬಲ್ಲವರು ನಮ್ಮಲ್ಲಿ ಅತಿ ವಿರಳವೆಂದು ಎಲ್ಲರ ಎಣಿಕೆಯಾಗಿತ್ತು. ನಮಗೆ ತಮ್ಮ ಶುಭಾಶೀರ್ವಾದಗಳನ್ನು ದಯಪಾಲಿಸಿರುವ, ಕನ್ನಡ ಸಾಹಿತ್ಯದ ಪ್ರಪಂಚದಲ್ಲಿ ಪ್ರಖ್ಯಾತರಾದವರೊಬ್ಬರು. ಈ ಬಗೆಯ ಲೇಖನಗಳನ್ನು ಒದಗಿಸುವುದು ಬಹಳ ಕಷ್ಟವೆಂದೂ ಇಂತಹ ಉದ್ಯಮವು ಎಷ್ಟೇ ಪ್ರಶಂಸನೀಯವಾದುದಾದರೂ ಹೆಚ್ಚು ಆಶಾಜನಕವಾಗಿಲ್ಲವೆಂದೂ, ನಮಗೆ ಗುರುಸ್ಥಾನದಿಂದ ಎಚ್ಚರಿಕೆಯಿತ್ತುದನ್ನು ನಾವು ಇಲ್ಲಿ ನೆನೆಸಿಕೊಳ್ಳಬೇಕಾಗಿದೆ. ಅವರ ಕಾಲೋಚಿತವಾದ ಈ ಎಚ್ಚರಿಕೆಯ ಅನುಭವವು "ವಿಮಾ-ವಾಣಿಜ್ಯ"ಕ್ಕೆ ಸಾಕಷ್ಟು ಆಗಿದೆಯಾದರೂ, ಒಂದು ವರ್ಷಕಾಲ ಕನ್ನಡಿಗರ ಸೇವೆಮಾಡಿ, ಅವರೇ ನುಡಿದಂತೆ "ವಿಮಾ-ವಾಣಿಜ್ಯ"ವು ತನಗಿರುವ ಸ್ವದೇಶಪ್ರೇಮ, ಉತ್ಸಾಹ, ಉದ್ಯಮಶೀಲತೆಯನ್ನು ಸಾರ್ಥಕ ಪಡಿಸಿಕೊಂಡಿರುವುದು ಹೆಮ್ಮೆಯ ವಿಷಯವಾಗಿದೆ. ಟೀಕಿಸುವವರೇನೋ ಯಾವಾಗಲೂ ಎಲ್ಲೆಲ್ಲೂ ಇದ್ದಂತೆ-ಇರುವಂತೆ-ಪ್ರಥಮದಲ್ಲಿ ನಮ್ಮ ಹಿಂದಿನ ಸಂಚಿಕೆಗಳಲ್ಲಿ ಪ್ರಕಟವಾದ ಲೇಖನಗಳನ್ನು ಕುರಿತು ಹಾಸ್ಯದ ನುಡಿಗಳನ್ನಾಡಿದವರೂ ಇದ್ದಾರೆ. ಆದರೆ ಸಂತೋಷ, ಅಂತಹ ನುಡಿಗಳು ಉಡುಗಿಹೋದುದು ನಮ್ಮ ಪತ್ರಿಕೆಯ ಮಾನ್ಯಲೇಖಕರುಗಳ ನಿರಂತರ ಶ್ರಮದ ಫಲವೇ ಆಗಿದೆ.

ಆರ್ಥಿಕ ವಿಷಯಗಳೆಲ್ಲದರ ಮೇಲೂ ಸಾಹಿತ್ಯಕೃತಿಗಳು ಇನ್ನೂ ಕಲ್ಪಿತವಾಗಬೇಕಾಗಿವೆ. ಇಂತಹ ವಿಷಯಗಳನ್ನು ಕುರಿತ ಪ್ರಬಂಧ, ಕತೆ, ನಾಟಕ, ಕವಿತೆ ಈ ಬಗೆಯ ಯಾವುದೇ ಸಾಹಿತ್ಯವಿಶೇಷವು ಹುಟ್ಟಲಿ, ಅದರಿಂದ ನಾಡಿನ ನುಡಿಯ ಉನ್ನತಿಗೆ ಮಾರ್ಗವಾಗುವದೆಂದು ನಾವು ನಿಶ್ಚಯವಾಗಿ ನಂಬಿದ್ದೇವೆ. ಹೀಗೆ ದೇಶದ ಎಲ್ಲ ಸುಖ-ಬಲ-ಗೌರವಗಳಿಗೆ ಆದಿಯಾದ ಆರ್ಥಿಕ ಉನ್ನತಿಯ ಕಡೆಗೆ ಕನ್ನಡ ಲೇಖಕರೂ ಗಮನಕೊಡಬೇಕಾದುದು ಮೊದಲನೆಯ ಕರ್ತವ್ಯವೆಂದೂ ಅವರಲ್ಲಿ ನಾವು ಬಿನ್ನವಿಸಿಕೊಳ್ಳುತ್ತೇವೆ. ಇಂತಹ ನೂತನ ಸಾಹಿತ್ಯ ಸೃಷ್ಟಿಗೆ ಶಕ್ತರಾದವರು ನಮ್ಮಲ್ಲಿ ಇಲ್ಲವೆಂದಲ್ಲ. ಉತ್ಕೃಷ್ಟವಾದ ಈ ಬಗೆಯ ಲೇಖನಗಳನ್ನು ಬರೆಯಬಲ್ಲವರೂ, ಇಡೀ ಭರತಖಂಡಕ್ಕೇ — ಇಡೀ ವಿಶ್ವಕ್ಕೇ - ಆರ್ಥಿಕ ಸಂಬಂಧವಾದ ಹೊಸ ವಿಷಯ-ವಿಚಾರ-ವಿಮರ್ಶೆ-ಸಮಸ್ಯೆಗಳನ್ನು ತೋರಿಸಬಲ್ಲವರೂ ನಮ್ಮಲ್ಲಿ ಇದ್ದಾರೆ. ಇದಕ್ಕೆ ಉದಾಹರಣೆಯಾಗಿ ನಮ್ಮ ಕಳೆದ ಮತ್ತು ಈ ಸಂಚಿಕೆಯ ಬರೆಹಗಾರರನ್ನು ನಾವು ನಿರ್ದೇಶಿಸಬಹುದು. ನಮ್ಮ ಪತ್ರಿಕೆಯ ಪ್ರಾರಂಭದಲ್ಲಿಯೇ ಮುಂದೆ ಬಂದು, ಸಾಹಸದಿಂದ ನಮ್ಮೊಡನೆ ಸಹಕರಿಸಿ, ಇನ್ನೂ ಮುಂದೆ ಸಹಕರಿಸಲು ಸಿದ್ಧರಾಗಿರುವ ಸುಪ್ರಸಿದ್ಧ ಲೇಖಕ ಲೇಖಕಿಯರಿಗೆ ನಾವು ಚಿರಋಣಿಗಳು. ಹಾಗೆಯೇ ಅಖಿಲಕರ್ಣಾಟಕದ ಇನ್ನುಳಿದ ಪ್ರಖ್ಯಾತ ಲೇಖಕರೂ, ಲೇಖನ ಶಕ್ತಿಯುಳ್ಳವರೂ, ವಿಮಾ ಮೊದಲಾದ ಆರ್ಥಿಕೋದ್ಯೋಗಗಳಲ್ಲಿ ತೊಡಗಿರುವವರೂ ನಮ್ಮೊಡನೆ ಆತ್ಮೀಯತೆಯಿಂದ ಸಹಕರಿಸಿ ಈ ನೂತನ ಸಾಹಿತ್ಯ ಸೃಷ್ಟಿಯಲ್ಲಿ ನಮ್ಮ ನೆರವಾಗಬೇಕೆಂದು ಬಿನ್ನವಿಸಿಕೊಳ್ಳುತ್ತೇವೆ

ನಮ್ಮ ಪತ್ರಿಕೆಯ ಪುರೋಭಿವೃದ್ಧಿಯನ್ನೂ ಧ್ಯೇಯ ಸಾಧನೆಯನ್ನೂ ಬಯಸಿ ಅದಕ್ಕೆ ತಮ್ಮ ಅಮೂಲ್ಯವಾದ ಆಶೀರ್ವಾದಗಳನ್ನು ದಯಪಾಲಿಸಿ, ಸದಾಶಯಪೂರ್ವಕ ವಾದ ಸಂದೇಶಗಳನ್ನು ಕಳುಹಿಸಿಕೊಟ್ಟ ಪೂಜ್ಯ ಮಹನೀಯರೆಲ್ಲರಿಗೂ ನಾವು ಅನಂತ ಅಭಿನಂದನೆಗಳನ್ನು ಒಪ್ಪಿಸಲು ಬಯಸುತ್ತೇವೆ. ಅವರ ಸಂದೇಶಗಳನ್ನು ಗಮನಿಸಿ ನೋಡಿದರೆ ಅವರಲ್ಲಿ ಪ್ರತಿಯೊಬ್ಬರೂ ನಮ್ಮ ಪತ್ರಿಕೆಯಿಂದ ಜನೋಪಯೋಗವಾದ ಸೇವಾಕಾರ್ಯವನ್ನು ನಿರೀಕ್ಷಿಸುತ್ತಿದ್ದಾರೆಂದು ತಿಳಿಯಬಹುದು ; ಇದರಿಂದ ನಮ್ಮ ಹೊಣೆಯ ಭಾರವು ಹೆಚ್ಚಾಗಿದೆ. ನಿರ್ಮಲವಾದ ಕರ್ತವ್ಯದೀಕ್ಷೆಯನ್ನು ವಹಿಸಿ, ಈ ನಮ್ಮ ಹೊಣೆಯನ್ನು ಸಾರ್ವಜನಿಕ ಕ್ಷೇಮದ ದೃಷ್ಟಿಯಿಂದ ನಿರ್ವಹಿಸಿಕೊಳ್ಳಲೂ, ಆ ಪೂಜ್ಯ ಮಹನೀಯರೆಲ್ಲರೂ ನಿರ್ದೇಶಿಸಿರುವ ಮಾರ್ಗದಲ್ಲಿ ಪ್ರಗತಿಪರವಾಗಿ ಮುಂದುವರಿಯಲೂ, ಅವರ ಆಶೀರ್ವಾದಗಳೇ ನಮಗೆ ಬೆಂಬಲವಾಗಿರುವುದರಲ್ಲಿ ಸಂಶಯವಿಲ್ಲ. ಅದಕ್ಕಾಗಿ ನಾವು ಅವರಿಗೆ ಚಿರಋಣಿಗಳು.

ಈ ಪ್ರಗತಿಮಾರ್ಗದಲ್ಲಿ "ವಿಮಾ-ವಾಣಿಜ್ಯ" ವು ಹೇಗೆ ಮುಂದಡಿಯನ್ನು ಹಾಕುತ್ತಿದೆ ಎಂಬುದು ಸ್ವತಃವ್ಯಕ್ತವಾಗಿರುವ ವಿಷಯ. ಪ್ರತಿಸಂಚಿಕೆಯಲ್ಲಿಯೂ ವಸ್ತು— ವಿಷಯಗಳು ಉತ್ತಮಗೊಂಡಿರುವುದೂ, ಹೊಸ - ಹೊಸ ಬಗೆಯ ಲೇಖನ-ಲೇಖಕರುಗಳು ಕಾಣಬರುತ್ತಿರುವುದೂ, ಪತ್ರಿಕೆಯ ಪ್ರಚಾರವು ವಿಸ್ತೃತವಾಗುತ್ತಿರುವ ಚಿಹ್ನೆಗಳೂ- ಇವೆಲ್ಲವೂ ನಮ್ಮ ಓದುಗರ ಗಮನಕ್ಕೆ ಬಂದಿರುವ ವಿಷಯಗಳೇ ಆಗಿವೆ. ಪತ್ರಿಕೆಯನ್ನು ಇನ್ನೂ ಉತ್ತಮಗೊಳಿಸಲು ಪ್ರಯತ್ನ ಮಾಡುತ್ತಲೇ ಇದ್ದೇವೆ. ಇದು ಕನ್ನಡ ಜನತೆಯ ಅಭಿವೃದ್ಧಿಗಾಗಿ-ಸೇವೆಗಾಗಿ - ಸಾಹಸ ಮಾಡಿ ಹೊರಟಿರುವ ಪತ್ರಿಕೆ ; ಆದುದರಿಂದ ಇದಕ್ಕೆ ಅವರ ಯೋಗ್ಯ ಪ್ರೋತ್ಸಾಹವು ತೀರ ಅವಶ್ಯಕವಾದುದು. ಈ ಪ್ರೋತ್ಸಾಹವನ್ನು "ವಿಮಾ - ವಾಣಿಜ್ಯ" ವು ಕನ್ನಡಿಗರಲ್ಲಿ ಅಧಿಕಾರಯುತವಾಗಿಯೇ ಕೇಳುತ್ತಿದೆ. ಅದರಲ್ಲಿಯೂ ವಿಮಾ ಸಂಸ್ಥೆಗಳೂ, ಬ್ಯಾಂಕುಗಳೂ, ಅಂತಹ ಸಂಸ್ಥೆಗಳಲ್ಲಿ ಕೆಲಸಮಾಡುವವರೂ, ಏಜೆಂಟರೂ, ಪಾಲಿಸಿದಾರರೂ ಇತರ ಎಲ್ಲ ವಿಮಾ ಉದ್ಯೋಗಿಗಳೂ, ವರ್ತಕರೂ, ಈ ಪತ್ರಿಕೆಗೆ ಚಂದಾದಾರರಾಗಲೇ ಬೇಕು.

ಈ ಹರಿದು ಹಂಚಿಹೋದ ಕರ್ಣಾಟಕದಲ್ಲಿ ಪತ್ರಿಕೋದ್ಯಮದ ಸುಖದ ಸವಿಯನ್ನು ಅನೇಕರು ಬಲ್ಲರು. ಅದರಲ್ಲೂ ಕೆಲವೊಂದು ವಿಶಿಷ್ಟ ವಿಷಯಗಳಿಗಾಗಿಯೇ ಮೀಸಲಾಗಿರಿಸಲಾದ "ವಿಮಾ - ವಾಣಿಜ್ಯ" ದಂತಹ ಪತ್ರಿಕೆಯ ಜೀವನನಿರ್ವಹಣವು ಹೇಗೆ ಮುಳ್ಳು ಕಲ್ಲಿಡಿದ ಮಾರ್ಗದ್ದೆಂಬುದನ್ನೂ ಅರಿತವರು ಊಹಿಸಬಲ್ಲರು. ದಿನ ದಿನವೂ ಸಹಾಯಕ್ಕೆ ಸೆರಗೊಡ್ಡುವುದು. ದಿನ ದಿನವೂ ಎಲ್ಲಿಂದಲಾದರೂ ಯಾವ ಮೂಲೆಯಿಂದಲಾದರೂ ಸಹಾಯ ಬಂದೀತೆ ಎಂದು ಇದಿರು ನೋಡುವದು, ನಿರಾಶರಾಗುವದು. ಎಲ್ಲ ಬಗೆಯ ಕಷ್ಟ, ನಷ್ಟಗಳನ್ನೂ ಅನುಭವಿಸಿದೆವು. ಸಾಕು, ಈ ಬೇಡಿಕೆಯ-ಬಿಕ್ಷಾನ್ನವೃತ್ತಿಯ ಜೀವನವು ಎಂದು ಹಲವು ಸಲ ಅನಿಸಿತು. ಆರ್ಥಿಕ ಸ್ವರಾಜ್ಯವೇ ರಾಜಕೀಯ ಸ್ವರಾಜ್ಯಕ್ಕೆ ಮೂಲವೆಂದೂ. ವಿವಿಧ ಆರ್ಥಿಕ ವಿಚಾರಗಳ ವಿದ್ಯಾಪ್ರಚಾರವು ದೇಶದ ದಾರಿದ್ರ್ಯ ವಿಮೋಚನಕ್ಕೂ, ಆರ್ಥಿಕ ಮೋಕ್ಷಕ್ಕೂ ಪ್ರಧಾನಾಧಾರವೆಂದೂ ಅರಿತು, ಈ ಹಾದಿಯಲ್ಲಿ ನಮ್ಮ ಶಕ್ತ್ಯಾನುಸಾರ ಸೇವೆ ಸಲಿಸಬೇಕೆಂಬ ಉದಾತ್ತ ಧ್ಯೇಯವೇ ನಮ್ಮನ್ನು ಕಳೆದುದನ್ನು ಮರೆತು ಬರುವುದರಲ್ಲಿ ನಂಬುಗೆಯನ್ನಿರಿಸಿ ನಮ್ಮ ಕಾರ್ಯವನ್ನು ಮುಂದುವರಿಸುವಂತೆ ಮಾಡಿದೆ. ಇಂದು ಹೊಸ ವರುಷದ ಹೊಸ್ತಿಲ ಮೇಲೆ ನಿಂತು ಹಳೆಯ ನಿರಾಶೆ, ಕಷ್ಟ ನಷ್ಟ ಅಪವಾದಗಳನ್ನು ಮರೆತು ಭವಿಷ್ಯಾಕಾಶವನ್ನು ನೋಡೋಣ. ಹಿಂದೆ ಸಹಾಯ ನೀಡಿದವರು ಮತ್ತೂ ಹೆಚ್ಚಿನ ಸಹಾಯ ನೀಡುವರೆಂದೂ ಇಲ್ಲವೆಂದವರೆಲ್ಲ ಸಹಕಾರ ತೋರುವರೆಂದೂ ನಂಬೋಣ ಭವಿಷ್ಯಾಕಾಶದ ಕಾರ್ಮೋಡದ ಕಾಳರಾತ್ರಿಯಲ್ಲಿ ಮಸಕುಮಸಕಾಗಿ ಕಾಣುವ ಬೆಳಕಿನ ಬೆಳ್ಳಿಯ ಗೆರೆಯಮೇಲೆ, ಮುಂದುವರಿದೇ ತೀರುವೆವೆಂಬ ಅಚಲವಾದ ಶ್ರದ್ಧೆ ನಂಬುಗೆ ಹಟಗಳ ಮೇಲೆ ಭವ್ಯ ಭವಿಷ್ಯವನ್ನು ಕಟ್ಟೋಣ! ಈ ನವೋದಯವು ನಮ್ಮೊಡನೆಲ್ಲರಿಗೂ ಸ್ವಾತಂತ್ರ್ಯ, ಸಮತೆ, ಸುಖ ಸಂಪದಗಳನ್ನು ತರಲಿ. ಈ ಹೊಸ ಹುಟ್ಟು ನಮ್ಮ ಎದೆಯಲ್ಲಿ ಹೊಸತೊಂದು ನಂಬುಗೆಯನ್ನೂ ನಮ್ಮ ಕಣ್ಣಿಗೊಂದು ನವೋಜ್ವಲವಾದ ಬೆಳಕನ್ನೂ, ನಮ್ಮ ಮುಖದ ಮೇಲೊಂದು ನವೀನ ನೂತನ ಮಂದಹಾಸವನ್ನೂ ತರಲಿ! ಈ ಹೊಸ ಹರುಷದಲ್ಲಿ ನಮ್ಮ ಸುತ್ತಣ ಜಗತ್ತನ್ನು ವಿಶಾಲ ವಿಶ್ವಪ್ರೇಮದಿಂದ ನೋಡಿ ನಮ್ಮ ನಾಡಿಗೆ ಹಿರಿತನವನ್ನೂ ಸಿರಿತನವನ್ನೂ ಕೋರಿ, ನಮ್ಮ ನಾಡಿನ ವಿಮಾ ಕುಸೀದವೇ ಮೊದಲಾದ ಎಲ್ಲ ಆರ್ಥಿಕ ಸಂಸ್ಥೆಗಳಿಗೆ ಹೊಸ ಗೆಲುವಾಗಲೆಂದು ಬಯಸೋಣ. ವಿಮಾ ವಾಣಿಜ್ಯದಂತಹ ನೂತನ ಸಾಹಸೋದ್ಯಮಗಳಿಗೆ ನಮ್ಮ ಜನತೆಯು ಎಷ್ಟರಮಟ್ಟಿಗೆ ಬೆಂಬಲ ವೀಯುವದೆಂಬುದನ್ನು ನಾವು ಹೊರಗಿನವರಿಗೆ ಹೆಮ್ಮೆಯಿಂದ ತೋರಿಸಿಕೊಡೋಣ. ಅದು ನಮ್ಮ ಜನತೆಯ ಮಹತ್ತ್ವದ ಚಿಹ್ನೆಯಲ್ಲವೇ ?

# ಹಣವನ್ನು ಮತ್ತೆ ಹಳ್ಳಿಗರಿಗೇ ಕಳುಹಿಸಬೇಕು



ಲೇಖಕರು :

ಶ್ರೀ|| ಸಿ. ರಾಜಗೋಪಾಲಾಚಾರಿ

ಯವರು

ದೇಶದ ಕೈಗಾರಿಕಾಭಿವೃದ್ಧಿಗೆ ಗಮನಕೊಟ್ಟ ಹೊರತು ನಮ್ಮ ದೇಶಕ್ಕೆ ಮುಕ್ತಿ ದೊರಕದು. ನಮ್ಮ ಕೈಗಾರಿಕೆಗಳಿಗೆ ರಕ್ಷಣೆ ನೀಡದ ಎಂತಹ ಪ್ರೌಢ ರಾಜನೀತಿಯಿಂದಲೂ ಉಪಯೋಗವಿಲ್ಲ. ದಾರವಿಲ್ಲದ ಲಾಳಿಯನ್ನು ಅತ್ತ ಇತ್ತ ಎಸೆದುದಾದರೆ ಬಟ್ಟೆಯಾಗಲಾರದು. ಬಟ್ಟೆಗೆ ದಾರವು ಅವಶ್ಯಕ ವಿರುವಂತೆ ದೇಶದ ಸೌಖ್ಯಕ್ಕೆ ಕೈಗಾರಿಕೆಗಳು ಅವಶ್ಯಕ. ಲಾಳಿಯು ದಾರದ ಮಾರ್ಗದರ್ಶಿಯಿರುವಂತೆ ರಾಜನೀತಿಯು ರಾಷ್ಟ್ರೀಯ ಕೈಗಾರಿಕೆಗಳ ಮಾರ್ಗದರ್ಶಿಯು. ಸರಕಾರವು ಕೈಗಾರಿಕೆಗಳನ್ನು ಸಮರ್ಪಕವಾಗಿ ನಡೆಸಿಕೊಂಡು ಬರದಿದ್ದರೆ, ಚೆನ್ನಾಗಿ ನೇಯದ ಬಟ್ಟೆಯಲ್ಲಿ ತೂತುಗಳಿರುವಂತೆ, ರಾಷ್ಟ್ರೀಯ ಹಿತಕ್ಕೆ ಎಡರುಗಳಿರುವುವು. ದಾರವು ಯಾವೊಂದು ಪದರವನ್ನೂ ತಪ್ಪದೆ ನೇರವಾಗಿ ಹೋಗಬೇಕು. ಅದೇ ರೀತಿ ಪ್ರತಿಯೊಬ್ಬ ಮನುಷ್ಯನೂ ಯಾವುದಾದರೊಂದು ಉತ್ಪನ್ನ ಕಾರ್ಯದಲ್ಲಿ ತೊಡಗಿರಬೇಕು. ಯಾರೂ ನಿರುದ್ಯೋಗಿಯಾಗಿರ ಬಾರದು. ಹಲವು ಜನರ ತಲೆಯ ಮೇಲೆ ಕೈಗಾರಿಕೆಯ ಅಧಿಕ ಹೊರೆ ಹೊರಿಸಿ ಅನೇಕರನ್ನು ನಿರುದ್ಯೋಗಿಗಳನ್ನಾಗಿ ಮಾಡಬಾರದು. ನಾವು ಏಕರೀತಿ ನೆಯ್ದಿರುವ ಬಟ್ಟೆಯನ್ನು ಅಪೇಕ್ಷಿಸುವಂತೆ, ರಾಷ್ಟ್ರವು ತನ್ನ ಕೈಗಾರಿಕೆಗಳನ್ನು ಸಮಸ್ತ ಜನರಿಗೆ ಹಂಚಿಕೊಡಬೇಕು. ಜನರು ರಾಜಕೀಯ ವಿಚಾರಗಳಿಗೆ ಗಮನಕೊಡುವುದರ ಉದ್ದೇಶವಾದರೂ ಇದೇ ಆಗಿದೆ. ಪರರಾಷ್ಟ್ರವು ನಮ್ಮನ್ನಾಳುತ್ತಿದೆ. ಆ ಪರದೇಶದ ಜನರು ಉದ್ಯೋಗಪ್ರಿಯರು. ಬೇಕಾದಷ್ಟು ಹಣಗಳಿಸುತ್ತಿದ್ದಾರೆ. ಅವರ ಕೈಗಾರಿಕೆಗಳು ನಮ್ಮ ಕೈಗಾರಿಕೆಗಳ ಏಳ್ಗೆಗೆ ಅಡಚಣೆಯಾಗಿ ಪರಿಣಮಿಸಿದೆ. ಅವರ ಕೈಗಾರಿಕೆಗಳ ರಕ್ಷಣೆಯು ಅವರ ಸರಕಾರದ ಕಾರ್ಯ. ಆದುದರಿಂದ ನಮ್ಮ ಮತ್ತು ಅವರ ಸರಕಾರಗಳ ಧ್ಯೇಯವು ವಿರೋಧವಾದುದು. ಈ ವಿಚಾರದಲ್ಲಿ ಜ್ಞಾನವಿದ್ದರೆ ಗವರ್ನಮೆಂಟ್ ಆಫ್ ಇಂಡಿಯಾ ಆಕ್ಟನ್ನು ಒಮ್ಮೆ ಓದಿದರೂ ಸಾಕು. ಅದರಲ್ಲಿ ಇಂಗ್ಲೆಂಡಿನ ಕೈಗಾರಿಕೆಗಳ ರಕ್ಷಣೆಗಾಗಿ ಎಷ್ಟು ಶ್ರದ್ಧೆ ವಹಿಸಿದ್ದಾರೆಂಬುದು ತಿಳಿದುಬರುವುದು. ಆದಕಾರಣ, ನಮ್ಮ ಕೈಗಾರಿಕೆಗಳ ಹಿತಸಾಧನೆಯನ್ನು ನಾವೇ ಕೈಗೊಳ್ಳಬೇಕಾಗಿದೆ.

## ಸ್ವದೇಶೀ ಕೊಂಡುಕೊಳ್ಳಿ

ಒಂದು ಕೈಗಾರಿಕೆಯ ರಕ್ಷಣೆಗಿರುವ ಮುಖ್ಯ ಗುಟ್ಟು ಆ ಕೈಗಾರಿಕೆಯ ಉತ್ಪನ್ನ ವಸ್ತುಗಳನ್ನು ಕೊಳ್ಳುವುದು. ನಮ್ಮವರು ತಯಾರಿಸಿದ ವಸ್ತುಗಳನ್ನು ನಾವು ಕೊಳ್ಳದಿದ್ದರೆ, ಆ ಕೈಗಾರಿಕೆಯು ಕಾಲಕ್ರಮೇಣ ನಶಿಸಿಹೋಗುವುದರಲ್ಲಿ ಸಂದೇಹವಿಲ್ಲ. ನಾವು ಬಿದುರು ಬುಟ್ಟಿಗಳನ್ನು ಕೊಳ್ಳದೆ ಬಿಟ್ಟರೆ, ಬುಟ್ಟಿ ಮಾಡುವವನು ತನ್ನ ಕಸುಬು ಮರೆತುಬಿಡುವನು. ಮತ್ತು ಕಾಲಾಂತರದಲ್ಲಿ ನಾವು ಬುಟ್ಟಿಯನ್ನು ನೋಡುವುದು ಮ್ಯೂಜಿಯಂನಲ್ಲಿ ಮಾತ್ರ. ಗರಿಲೇಖನಿಯನ್ನು ಉಪಯೋಗಿಸುವುದನ್ನು ಬಿಟ್ಟದ್ದರಿಂದ ಈಗ ಅದನ್ನು ಮ್ಯೂಜಿಯಂನಲ್ಲಿ ಅಥವಾ ಮಹಾತ್ಮಾ ಗಾಂಧೀಯವರ ಕಾರ್ಯಾಲಯದಲ್ಲಿ ಮಾತ್ರ ಕಾಣಬಹುದಾಗಿದೆ. ನಾವು ಮಗ್ಗದ ಚಾಪೆಗಳನ್ನು ಕೊಳ್ಳುವುದು ಬಿಟ್ಟುಬಿಟ್ಟು ಗಿರಣಿ ಚಾಪೆಗಳನ್ನೂ ರಗ್ಗುಗಳನ್ನೂ ಕೊಳ್ಳಲು ಮೊದಲುಮಾಡಿದರೆ ಸುಂದರವಾದ ಚಾಪೆಯ ನೆಯ್ಗೆಯ ಕಸುಬು ಮಾಯವಾಗಿ ನಂತರ ಅದನ್ನು ನಾವು ಮ್ಯೂಜಿಯಂನಲ್ಲಿಯೂ ಕಾಣಲಾರದೆ ಇರಬಹುದು. ನಾವು ಆಸ್ಟ್ರೇಲಿಯಾದ ಮರದ ಸಾಮಾನುಗಳನ್ನು ಕೊಳ್ಳಲುಪಕ್ರಮಿಸಿದರೆ ನಮ್ಮ ಮರಗೆಲಸದವರ ಉಳಿಯ ಚತುರ ಉಪಯುಕ್ತತೆಯನ್ನು ಮರೆತುಬಿಡಬಹುದು. ನಾವಂದು ಕುರ್ಚಿ ಮೇಜು ಮುಂತಾದ ಸಾಮಾನುಗಳ ಭಿನ್ನಭಾಗಗಳನ್ನು ಪರದೇಶದಿಂದ ತರಿಸಿ ಇಲ್ಲಿ ಒಂದಾಗಿ ಸೇರಿಸಬೇಕಾದೀತು. ಪರದೇಶವಸ್ತುಗಳನ್ನು ಕೊಳ್ಳುವವರು ನಮ್ಮ ದೇಶದ ಬಡಕೆಲಸಗಾರರ ಅನ್ನವನ್ನು ಕಿತ್ತುಕೊಂಡಂತೆಯೇ ಸರಿ. ವಿವಿಧ ಆರ್ಥಿಕ ವಿಚಾ

ರಗಳ ಚರ್ಚಾಭರದಲ್ಲಿ ನಿಮಗೆ ನಿಶ್ಚಿತಮಾರ್ಗ ಕಾಣದಿರಬಹುದು. ಆದರೆ ಪರದೇಶದ ಮತ್ತು ಗಿರಣಿಯಿಂದ ತಯಾರಾದ ವಸ್ತುಗಳ ಉಪಯೋಗಕ್ಕೆ ಮನಸ್ಸು ಮಾಡಿದರೆ ನಮ್ಮ ಸಹೋದರರಿಗೆ ಉದ್ಯೋಗ ದೊರೆಯುವುದಿಲ್ಲವೆನ್ನುವುದು ಯಥಾರ್ಥವು. ನಮ್ಮ ಸಹೋದರರು ಹೊಟ್ಟೆಗಿಲ್ಲದೆ ಕೊರಗುತ್ತಿರುವಲ್ಲಿ ನಾವು ನಾಗರಿಕರೆನಿಸಿಕೊಂಡರೆ ನಮಗೆ ಬರುವ ಕೀರ್ತಿಯಾದರು ಏನು ?

### ಸಾಲತಂದ ನಾಗರೀಕತೆ.

ಇತರರಿಂದ ಸಾಲತಂದ ನಾಗರೀಕತೆಯಿಂದ ಶೋಭಿಸುವುದಾದರೆ ಯಾವ ಪ್ರಯೋಜನವೂ ಇಲ್ಲ. ರಾಷ್ಟ್ರವು ಸೇನಾಪಡೆಯಂತೆ ಒಗ್ಗಟ್ಟಿನಿಂದ ಮುಂದುವರಿಯಬೇಕು. ನಮ್ಮಲ್ಲಿ ಹಲವರು ಇತರರ ಸಾಲದ ನಾಗರೀಕತೆಯಲ್ಲಿ ಮೆರೆಯುತ್ತಾ ನಮ್ಮ ಕೆಲಸಗಾರರ ಸಮೂಹವನ್ನು ಹಿಂದೆ ಬಿಟ್ಟು ನಡೆವುದಾದರೆ ರಾಷ್ಟ್ರವು ನಿರ್ನಾಮವಾಗುವುದು. ಯೂರೋಪಿನ ನಾಗರೀಕತೆಯನ್ನು ನೋಡಿ ಕಲಿಯಬೇಕಾದ ಅಂಶವಿದೆ. ಪಾಶ್ಚಾತ್ಯ ಜನರು ಒಗಟ್ಟಿನಿಂದ ಮುಂದುವರಿಯುತ್ತಿದ್ದಾರೆ. ನಮ್ಮಲ್ಲಾದರೋ ಹಲವರು ಸಾಲಮಾಡಿದ ಯೂರೋಪಿನ ನಾಗರೀಕತೆಯಲ್ಲಿ ಓಲಾಡುತ್ತ ರಾಷ್ಟ್ರವನ್ನು ಹಿಂದೆ ಬಿಟ್ಟು ಅದನ್ನು ಛಿದ್ರಮಾಡಿ ಮುಂದುವರಿಯುತ್ತಿದ್ದಾರೆ. ನಮ್ಮ ಜನರಿಂದ ತಯಾರಾದ ಚಾಪೆಯಮೇಲೆ ಕುಳಿತು, ನಮ್ಮ ದೇಶದ ಕುಂಬಾರನಿಂದ ಅಥವಾ ಕಮ್ಮಾರನಿಂದ ತಯಾರಾದ ತಟ್ಟೆಯಲ್ಲಿ ನಮ್ಮ ದೇಶದಲ್ಲಿ ಬೆಳೆದ ಪದಾರ್ಥಗಳನ್ನು ತಿಂದು ಆನಂದಪಡುವುದನ್ನು ಕಲಿಯಬೇಕಾಗಿದೆ. ಅದೇ ನೈಜನಾಗರೀಕತೆ. ಅದೇ ನೈಜಮಾನವತ್ವ. ಅದೇ ನೈಜದೇಶಭಕ್ತಿ. ಆದುದರಿಂದಲೇ ಖಾದಿಗೆ ಉತ್ತೇಜನ ಕೊಡಿರಿ, ನಮ್ಮ ಗ್ರಾಮ ಕೈಗಾರಿಕೆಗಳಿಗೆ ಉತ್ತೇಜನಕೊಡಿರಿ, ಎಂದು ನಾನೆಲ್ಲರನ್ನು ಪ್ರಾರ್ಥಿಸುವುದು. ಪೇಟೆಯಲ್ಲಿ ಯಾವುದನ್ನೇ ಕೊಳ್ಳುವಾಗ, ಯಾವುದೇ ಸಂದರ್ಭವಿರಲಿ "ಎಲ್ಲಿ ತಯಾರಾದ ವಸ್ತುವಿದು" ಎಂಬ ಪ್ರಶ್ನೆಯನ್ನು ನಿಮಗೆ ನೀವೇ ಕೇಳಿಕೊಳ್ಳಿ. "ಅದನ್ನು ನನ್ನ ದೇಶದ ನನ್ನ ಬಡಸಹೋದರರು ತಯಾರಿಸಿದ್ದಾರೆ. ಆದಕ್ಕಾಗಿ ನಾನದನ್ನು ಕೊಳ್ಳುತ್ತೇನೆ." ಎಂದು ನಿಮ್ಮ ಆತ್ಮನಿಗೆ ಸಮಾಧಾನ ನುಡಿಯಿರಿ. ನೀವು ವ್ಯಾಪಾರಸ್ಥರಿಗೆ ಕೊಡುವ ಹಣವು ಹಳ್ಳಿಯಿಂದ ಬಂದುದೆಂಬುದನ್ನು ಮರೆಯಲಾಗದು. ಆ ಹಣವು ನಿಮ್ಮದಲ್ಲ. ಸದ್ವಿನಿಯೋಗಪಡಿಸಲು ನಿಮ್ಮಲ್ಲಿಟ್ಟ ಹಣವದು. ಆದುದರಿಂದ ಆ ಹಣವನ್ನು ಮತ್ತೆ ಹಳ್ಳಿಗರಿಗೇ ಕಳುಹಿಸಬೇಕು.



# ಚಲನಚಿತ್ರ ಕೈಗಾರಿಕೆಗಿರುವ ಭವ್ಯ ಭವಿಷ್ಯ



ಲೇಖಕರು :

ಸರ್. ಎಂ. ವಿಶ್ವೇಶ್ವರಯ್ಯನವರು

ವಿಸ್ಮಯ, ಪ್ರಗತಿ, ಸಾರ್ವಜನಿಕ ಉಪಯುಕ್ತತೆ ಇವುಗಳಲ್ಲಿ ಚಲನಚಿತ್ರ ಕೈಗಾರಿಕೆಯು ಆಧುನಿಕ ಜಗತ್ತಿನ ಎರಡು ಅಚ್ಚರಿಯ ಸಂಶೋಧನೆಗಳಾದ ಮೋಟಾರು ಮತ್ತು ವಿಮಾನಗಳಿಗೆ ಸಾಟಿಯೆನಿಸುವುದು. ಚಲನ ಚಿತ್ರವು ರೇಡಿಯೋದೊಂದಿಗೆ ಸಣ್ಣದಾಗಿ ಅಂಕುರಿಸಿ—ಒಂದಿರುಳಿನಲ್ಲಿ ಎಂದರೂ ಒಪ್ಪುವುದು—ಇಂದಿನ ಪೂರ್ಣತೆ ಪಡೆದ ಮಾತನಾಡುವ ನಾಟಕ ರೂಪಕ್ಕೆ ಅಭಿವೃದ್ಧಿ ಹೊಂದಿದೆ.

ಸಮಸ್ತ ಜನಾಂಗಕ್ಕೆ, ಆದರಲ್ಲೂ ಸಾಮಾನ್ಯ ಜನರ ಸಮೂಹಕ್ಕೆ ಸುಲಭ ವೆಚ್ಚದಲ್ಲಿ ಸಂತಸವೀಯುವ ಹವಣಿಕೆಗಳಲ್ಲಿ ಸಿನೀಮಾಕ್ಕೆ ಸಮವೆನಿಸಿದುದು ಯಾವುದೂ ಇಲ್ಲ. ಅದುಕಾರಣ ಅದು ಉತ್ತೇಜನಕ್ಕೆ ಯೋಗ್ಯವಾದುದು. ಆದರಿಂದ ವಿಶೇಷ ಉಪಯೋಗವಿದೆ. ಅಂತೆಯೇ ಕೆಡಕೂ ಇದೆಯೆಂದು ಹಲವರು ಆಡಬಹುದು. ಆದರೂ ಅದು ಅವಶ್ಯಕ ವಸ್ತುಗಳಲ್ಲೊಂದೆನಿಸಿ ಸ್ಥಿರವಾಗುಳಿಯಲು ಬಂದಿದೆ. ನಾವದನ್ನು ಆದರದಿಂದ ಸಲಹಿ ಅದಕ್ಕಾಗಿ ದುಡಿದು, ಸಾಧ್ಯವಿರುವೆಡೆ ಅದನ್ನು ತಿದ್ದಬೇಕು. ಮತ್ತು ಎಲ್ಲ ಪಾಶ್ಚಾತ್ಯರಾಷ್ಟ್ರಗಳು ಈಗಾಗಲೇ ಮಾಡಿಕೊಂಡಿರುವಂತೆ ನಾವೂ ಅದನ್ನು ರಾಷ್ಟ್ರೀಯ ಹಿತದ ಅತ್ಯುಪಯುಕ್ತ ಸಾಧನವನ್ನಾಗಿ ಮಾಡಿಕೊಳ್ಳಬೇಕು.

ಈ ದೇಶದಲ್ಲಿಂದು ಪ್ರಚುರದಲ್ಲಿರುವ ಚಲನಚಿತ್ರ ಕೈಗಾರಿಕೆಯು ಪ್ರಮುಖವಾಗಿ ಭಾರತೀಯ ಕೈಗಾರಿಕೆಯಾಗಿದೆ. ಬಂಡವಾಳವು ಭಾರತೀಯರದು. ಆಡಳಿತ ನಿರ್ವಾಹಕರು ಭಾರತೀಯರು. ಅವುಗಳ ತಯಾರಿ, ವಿನಿಮಯ ಮತ್ತು ಪ್ರದರ್ಶನ ಇವೆಲ್ಲವೂ ಭಾರತೀಯರ ಕೈಯಲ್ಲಿದೆ. ಚಲನ ಚಿತ್ರಗಳ ವಿಶಿಷ್ಟ ವಿಚಾರಗಳ[...] ಅರಿತವರಲ್ಲಿ ಹಲವರು ಪಾಶ್ಚಾತ್ಯ ಶಿಕ್ಷಣ ಪಡೆದವರಿದ್ದಾ[...] ಆದರೆ ಅವರಲ್ಲಿ ಬಹು ಜನರು ಅನುಭವದಿಂದ ಜ್ಞಾನ[...] ದವರೇ ಇರುವರು.

ಬೊಂಬಾಯಿ ಮತ್ತು ಕಲ್ಕತ್ತಾ ನಗರಗಳು ಇ[...] ಚಲನಚಿತ್ರ ತಯಾರಿಯ ಮುಖ್ಯ ಕೇಂದ್ರಗಳು. ಪೂನಾ[...] ಕೊಲ್ಹಾಪುರ, ಮದ್ರಾಸ್ ಮತ್ತು ಲಾಹೋರುಗಳು ದ್ವಿ[...] ಯ ಪಂಙ್ತಿಗೆ ಸೇರುವುವು. ಸರಕಾರದಿಂದ ಪ್ರಕಟವಾ[...] ಅಧಿಕಾರಯುತವಾದ ಸಂಖ್ಯೆಗಳಾವುವೂ ಇಲ್ಲದಿದ್ದರೂ[...] ಉದ್ಯಮದ ನಿಪುಣರೊಡನೆಯ ಸಂಭಾಷಣೆಯಿಂದ [...] ಕೈಗಾರಿಕೆಗೆ ಒಟ್ಟು ೩ ಕೋಟಿಗಿಂತ ಹೆಚ್ಚು ಬಂಡವಾಳ[...] ವಿನಿಮಯವಾಗಿದೆಯೆಂದು ತಿಳಿದುಬರುತ್ತದೆ. ಇಂಡಿ[...] ಮತ್ತು ಬರ್ಮಗಳಿಂದ ಒಟ್ಟು ೬೭೫ ಸಿನೀಮಾ ಪ್ರದರ್ಶ[...] ಮಂದಿರಗಳಿವೆ; ೧೦೭ ಚಲನಚಿತ್ರ ತಯಾರಿ ಕೇಂ[...] ಗಳಿವೆ; ಮತ್ತು ಕೈಗಾರಿಕೆಯು ಒಟ್ಟು ೨೦,೦೦೦ ಜ[...] ರಿಗೆ ಉದ್ಯೋಗ ಕಲ್ಪಿಸಿದೆ.

ಪ್ರತಿವರ್ಷ ಆಮದಾಗುತ್ತಿರುವ ಈ ಕೈಗಾರಿಕೆ[...] ಬೇಕಾಗುವ ಫಿಲ್ಮ್, ಯಂತ್ರ ಸಾಮುಗ್ರಿಗಳ ಬೆಲೆಯು[...] ಸುಮಾರು ೫೬ ಲಕ್ಷ ರೂಪಾಯಿಗಳಾಗುತ್ತದೆ ಫಿಲ್ಮ್‌ಗಳು[...] ಇಂಗ್ಲೆಂಡ್, ಜರ್ಮನಿ, ಅಮೆರಿಕಾದ ಸಂಯುಕ್ತ ಸಂಸ್ಥಾ[...] ಮತ್ತು ಬೆಲ್ಜಿಯಂಗಳಿಂದ ಬರುತ್ತದೆ. ಯಂತ್ರ ಸಾಮು[...] ಗಳ ಮುಕ್ಕಾಲುಪಾಲು ಭಾಗವು ಅಮೆರಿಕದ ಸಂಯುಕ್ತ[...] ಸಂಸ್ಥಾನದಿಂದಲೂ ಕಾಲುಪಾಲು ಭಾಗವು ಗ್ರೇಟ್‌ಬ್ರಿಟನ್[...] ನಿಂದಲೂ ಬರುತ್ತದೆ.

ನಮ್ಮ ದೇಶದಲ್ಲಿ ಈ ಕೈಗಾರಿಕೆಯು ಪಡೆದಿರು[...] ಪ್ರಗತಿಗೂ ಇತರ ದೇಶಗಳಲ್ಲಿ ಪಡೆದಿರುವ ಪ್ರಗತಿಗೂ[...] ಇರುವ ತಾರತಮ್ಯವನ್ನು ಸೂಚಿಸಲು ಅಮೆರಿಕ[...] ಸಂಯುಕ್ತ ಸಂಸ್ಥಾನವನ್ನು ಉದಾಹರಿಸಬಹುದಾಗಿ[...] ಆದೇಶದಲ್ಲಿ ೧೯೩೩ ರ ವರೆಗೆ ಈ ಕೈಗಾರಿಕೆಗೆ ವಿನಿಮಯ[...] ವಾಗಿರುವ ಬಂಡವಾಳವು ಸುಮಾರು ೫೦೦ ಕೋಟಿ ಡ[...]

ಗಳು. ಅಲ್ಲಿನ ಉತ್ತಮ ಪ್ರದರ್ಶನ ಮಂದಿರಗಳ ಸಂಖ್ಯೆ ೧೯,೫೦೦೦. ಅವುಗಳಲ್ಲಿ ೧೨ ಮಿಲಿಯನ್ ಜನರು ಕುಳಿತು ಕೊಳ್ಳಲು ಅನುಕೂಲವಿದೆ. ವಾರದಲ್ಲಿ ಸುಮಾರು ೯೦ ಅಥವ ೧೦೦ ಮಿಲಿಯನ್ ಜನರು ಪ್ರದರ್ಶನ ಮಂದಿರಕ್ಕೆ ಬರುವರು. ಆ ದೇಶದ ಪ್ರಮುಖ ಕೈಗಾರಿಕೆಗಳಲ್ಲಿ ಇದು ನಾಲ್ಕನೆಯದು. ಸುಮಾರು ೨೦೦,೦೦೦ ಜನರಿಗೆ ಇದ ರಲ್ಲಿ ಉದ್ಯೋಗ ದೊರತಿದೆ.

## ಸಿನಿಮಾಗಳ ಉಪಯೋಗ

ಸಿನೀಮಾದಿಂದಿರುವ ಮುಖ್ಯ ಉಪಯೋಗವೆಂದರೆ ಮನೋರಂಜನೆ. ಕೈಗಾರಿಕೆಯು ಮೇಲೆ ಹಿಡಿತವಿರಿಸಿ ಅದು ಸುಮಾರ್ಗದಲ್ಲಿ ಅಭಿವೃದ್ಧಿ ಹೊಂದುವಂತೆ ಮಾಡು ವುದಾದರೆ ಜನತೆಗೆ ವಿದ್ಯಾ ಪ್ರಸಾರ ಮಾಡುವ ಮಹತ್ವದ ಸಾಧನವಾಗಿ ಉಪಯೋಗಿಸಿಕೊಳ್ಳಬಹುದು. ನಿತ್ಯ ಜೀವನ ದಲ್ಲಿ ಅನುಭವಕ್ಕೆ ಬರಬಹುದಾದ ವಿಚಾರಗಳಿಗಿಂತ ಉನ್ನತ ವಿಚಾರಗಳ ಕಡೆಗೆ ಜನತೆಯ ಕಲ್ಪನಾಶಕ್ತಿಯು ಹರಿವಂತೆ ಮಾಡಬಹುದು. ಜನರ ಸಾಮಾಜಿಕ ನಡೆನುಡಿಗಳಲ್ಲಿ ಮಾರ್ಪಾಟುಗಳನ್ನು ತರಲು ವಿದ್ಯಾಪ್ರಸಾರ ಮಾಡಲು ಇದನ್ನು ಉಪಯೋಗಿಸಿಕೊಳ್ಳಬಹುದು. ರಾಷ್ಟ್ರ ನಿರ್ಮಾಣಕ ಕಾರ್ಯಗಳಿಗೆ ಅಂದರೆ ಗ್ರಾಮ ಪುನರುಜ್ಜೀ ವನ, ಗ್ರಾಮ ಕೈಗಾರಿಕೆಗಳ ಉದ್ಧಾರ, ಗಿರಣಿ ಕೈಗಾರಿಕೆ ವಸ್ತುಗಳ ಪ್ರದರ್ಶನ ಇವುಗಳಿಗೆ ಸಹಾಯಾರ್ಥವಾಗಿ ಉಪ ಯೋಗಿಸಬಹುದು. ಚಲನ ಚಿತ್ರದ ಒಂದು ಮುಖ್ಯ ಉಪ ಯೋಗವೆಂದರೆ ನಾನಾ ದೇಶಗಳ ಜನರ ನಡೆನುಡಿ ಆಚಾರ ವ್ಯವಹಾರಗಳ ಅರಿವು ನಮ್ಮ ಜನರಿಗುಂಟಾಗುತ್ತದೆ. ಅಜ್ಞಾ ನವು ತಾನೇ ತಾನಾಗಿ ತುಂಬಿರುವ ನಮ್ಮ ನಾಡಿಗೆ ಇದ ರಿಂದಾಗುವ ಉಪಯೋಗವು ಹಿರಿದೆಂಬುದನ್ನು ಒತ್ತಿ ಹೇಳ ಬೇಕಾಗಿಲ್ಲ.

ಈ ಕೈಗಾರಿಕೆಯಲ್ಲಿರುವ ಮುಖ್ಯ ಕುಂದು ವ್ಯವಸ್ಥೆ ಯಿಲ್ಲದಿರುವುದು. ವ್ಯಕ್ತಿಗಳೇ ಸ್ವಂತ ಜವಾಬ್ದಾರಿ ಹೊತ್ತು ಕೆಲಸ ನಡೆಸುತ್ತಿದ್ದಾರೆ. ವಿದ್ಯಾವಂತರು ಪರದೇಶದ ಚಿತ್ರ ಗಳಿಗೇ ಹೋಗುವರು. ಸಾಮಾನ್ಯ ಜನರು ಭಾರತೀಯ ಚಿತ್ರಗಳಿಗೆ ಹೋಗುವರು. ಅದಕ್ಕೆ ಕಾರಣವಿದೆ. ನಮ್ಮಲ್ಲಿ ಚಿತ್ರ ತಯಾರಿಯ ಕಾರ್ಯನಿರ್ವಹಿಸುತ್ತಿರುವವರಿಗೆ, ಉದ್ಯ ಮವನ್ನು ವ್ಯವಸ್ಥೆಗೊಳಿಸಬೇಕು, ಅದನ್ನು ಸರ್ವಜನಾದ ರಣೀಯವಾದುದನ್ನಾಗಿ ಮಾಡಬೇಕು ಎಂಬ ಆಕಾಂಕ್ಷೆಯು ಮೂಡದಿದೆ. ಉತ್ತಮರು ಈ ಉದ್ಯಮವನ್ನು ಅವಲಂಬಿ ಸುವಂತೆ ಮಾಡಬೇಕೆಂಬ ಪ್ರಯತ್ನವಿಲ್ಲ. ಕೆಲವು ಅಭಿ ನೇತ್ರಿಗಳು ತಿಂಗಳಿಗೆ ೨೫೦೦ ರಿಂದ ೪೫೦೦ ರವರೆಗೆ ವೇತನ ತೆಗೆದುಕೊಳ್ಳುವುದು ನಿಜವಿದ್ದರೂ ಉತ್ತಮ ಪಂಗಡದ ಸ್ತ್ರೀಯರು ಈ ಉದ್ಯೋಗ ಕೈಗೊಳ್ಳಲು ಮುಂದೆ ಬರು ತ್ತಿಲ್ಲ. ತಯಾರಿಯ ಸಂವಿಧಾನ ಮತ್ತು ರೀತಿಯಲ್ಲಿ ವ್ಯವ ಸ್ಥೆಯಿಲ್ಲವೆಂದು ತಿಳಿದುಬರುತ್ತದೆ.

## ಕೈಗಾರಿಕೆಯ ಅವಶ್ಯಕತೆಗಳು

ಯಾವುದೇ ಕೈಗಾರಿಕೆಯ ಸ್ಥಿತಿಯನ್ನು ತಿಳಿದುಕೊ ಳ್ಳಲು ಆ ಕೈಗಾರಿಕೆಯ ಮಾಹಿತಿಗಳು ಅವಶ್ಯಕ. ನಮ್ಮ ದೇಶದ ಈ ಕೈಗಾರಿಕೆಯ ಮಾಹಿತಿ ಪಡೆವುದೆ ದುರ್ಲಭ ವಾಗಿದೆ. ಕೈಗಾರಿಕೆಯ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಎಷ್ಟು ಪ್ರದರ್ಶನ ಮಂದಿರಗಳಿವೆ, ಎಷ್ಟು ತಯಾರಿಸುವ ಕೇಂದ್ರಗಳಿವೆ, ಹಾಕಿರುವ ಬಂಡವಾಳವೇನು, ಸಾಮಾನು ಗಳ ಬೆಲೆ ಎಷ್ಟು, ಈ ಉದ್ಯೋಗದಲ್ಲಿ ತೊಡಗಿರುವವರು ಎಷ್ಟು ಜನ, ಅವರಿಗೆ ದೊರೆಯುತ್ತಿರುವ ವೇತನವೇನು, ಎಷ್ಟು ಲಾಭ ಬರುತ್ತಿದೆ, ವಾರದಲ್ಲಿ ಎಷ್ಟು ಜನರು ಪ್ರದರ್ಶನ ಮಂದಿರಕ್ಕೆ ಬರುವರು ಇವೆಲ್ಲ ಮಾಹಿತಿಗಳು ಅವಶ್ಯಕ. ಇವುಗಳಲ್ಲನೇಕ ಮಾಹಿತಿಗಳನಿಶ್ಚಿತ ಸಂಖ್ಯೆಯು ನಮಗಿಂದು ತಿಳಿಯದು.

ಈ ಕೈಗಾರಿಕೆಗೆ ಬೇಕಾಗುವ ಫಿಲ್ಮ್ ಮತ್ತು ಯಂತ್ರ ಗಳ ಆಮದು ತೆರಿಗೆಯನ್ನು ಕಡಮೆ ಮಾಡಬೇಕೆಂದು ಈ ಕೈಗಾರಿಕೆಯಲ್ಲಿ ತೊಡಗಿರುವವರು ಪ್ರಾರ್ಥಿಸುತ್ತಿದ್ದಾರೆ. ೧೯೪೭-೪೮ರ ಅರ್ಥ ಕಮಿಷನ್ನಿನವರೂ ೧೯೪೭-೪೮ ರ ಭಾರತೀಯ ಚಲನಚಿತ್ರ ಸಮಿತಿಯವರೂ ಇದೇ ಅಭಿ ಪ್ರಾಯ ಕೊಟ್ಟಿದ್ದಾರೆ. ಚಲನ ಚಿತ್ರಕ್ಕೆ ಬೇಕಾದ ಫಿಲ್ಮ್ ಇಂಡಿಯದಲ್ಲಿ ತಯಾರಾಗುವುದಿಲ್ಲ. ೧೯೨೪ ರಿಂದ ಇದರ ಆಮದಿನ ಮೇಲಿನ ತೆರಿಗೆಯು ಶೇಕಡ ೫ರಿಂದ ಶೇಕಡ ೨೫ ರಷ್ಟಕ್ಕೆ ಹೆಚ್ಚಿದೆ. ಈ ಪ್ರಾರ್ಥನೆಗೆ ಸರಕಾರದವರು ತಕ್ಕ ಗಮನ ಕೊಡಬೇಕಾಗಿದೆ.

೧೯೪೭-೪೮ ರ ಭಾರತೀಯ ಚಲನ ಚಿತ್ರ ಸಮಿತಿ ಯವರು, ಚಲನ ಚಿತ್ರಗಳಲ್ಲಿ ಶೇಕಡ ಕೊಂಚಭಾಗವು ವಿದ್ಯಾಪ್ರಸಾರ ಚಿತ್ರಗಳಾಗಿರಬೇಕೆಂದು ಅಭಿಪ್ರಾಯ ಪಟ್ಟರು. ಈ ಕೆಲಸವನ್ನು ತನ್ನ ಒಂದು ಧ್ಯೇಯವಾಗುಳ್ಳ ಚಲನಚಿತ್ರ ಸೊಸೈಟಿಗೆ ವಿದ್ಯಾಪ್ರಸಾರ ಸಂಘಗಳೂ, ದಾನ ಸಂಸ್ಥೆಗಳೂ ಬಂಡವಾಳ ಒದಗಿಸಿ ಸಹಾಯ ಮಾಡಲು ಮುಂದೆ ಬರಬೇಕಾಗಿದೆ.

ಕೈಗಾರಿಕೆಯ ಮತ್ತೊಂದು ಆವಶ್ಯಕತೆ ಯೆಂದರೆ ದೇಶದಲ್ಲಿಯೇ ಚಲನಚಿತ್ರಕ್ಕೆ ಬೇಕಾಗುವ ಫಿಲ್ಮ್ ಮತ್ತು ಯಂತ್ರಗಳನ್ನು ತಯಾರಿಸುವುದು. ನಮ್ಮಲ್ಲಿ ಇವುಗಳ ವಿಷಯವನ್ನು ಸಂಪೂರ್ಣವಾಗಿ ಅರಿತ ವಿ ಜ್ಞಾ ನಿ ಗ ಳು ವಿರಳ. ಈ ಅವಶ್ಯಕತೆಯನ್ನು ತೃಪ್ತಿಗೊಳಿಸಲು ಪಾಶ್ಚಾತ್ಯ ರಾಷ್ಟ್ರಗಳಲ್ಲಿನಂತೆ ನಮ್ಮ ದೇಶದ ಸರಕಾರವೂ ಸಹಾಯ ನೀಡಲು ಮುಂದೆ ಬರಬೇಕಾಗಿದೆ.

ಈ ಕೈಗಾರಿಕೆಗೆ ಬಂಡವಾಳ ದೊರೆಯುವುದೇ ಕಷ್ಟವಾಗಿದೆ. ಚಿತ್ರವನ್ನು ತಯಾರಿಸುವ ಖರ್ಚು ಹೆಚ್ಚು, ಅಲ್ಲದೆ ಅದರಿಂದ ಲಾಭ ಬರುವುದು ನಿಶ್ಚಿತವಿಲ್ಲ ಆದುದರಿಂದ ಬಂಡವಾಳ ಒದಗಿಸುವವರು ವಿಶೇಷ ಬಡ್ಡಿ ಕೇಳುತ್ತಾರೆ. ಜಾಯಿಂಟ್ ಸ್ಟಾಕ್ ಕಂಪೆನಿಗಳ ಸಾಹಸಕ್ಕೆ ಇಲ್ಲಿಯವರೆಗೆ ವಿಜಯವಿಲ್ಲದಾಗಿದೆ. ಆದುದರಿಂದ ಇದಕ್ಕೆ ಬ್ಯಾಂಕುಗಳ ಸಹಾಯ ಒದಗಿಸುವುದೇ ತಕ್ಕ ಮಾರ್ಗ ಈ ಹವಣಿಕೆಗೆ ಜರ್ಮನಿಯು ಮಾದರಿಯಾಗಿದೆ. ನಾಜಿ ಸರಕಾರವು ಚಲನಚಿತ್ರ ಕೈಗಾರಿಕೆಗೆ ಬಂಡವಾಳ ಒದಗಿಸುವುದಕ್ಕಾಗಿಯೇ ಒಂದು ಬ್ಯಾಂಕನ್ನು ಸ್ಥಾಪಿಸಿದೆ.

ಬೊಂಬಾಯಿ ಮತ್ತು ಕಲ್ಕತ್ತಾಗಳಲ್ಲಿ ಒಂದೊಂದು ಸಂಶೋಧನಾಗೃಹವೂ ವಾಚನಾಲಯವೂ ಅವಶ್ಯಕ. ವೃತ್ತಿ ಶಿಕ್ಷಣ ಶಾಲೆಗಳಲ್ಲಿ ಚಲನಚಿತ್ರ ಕೈಗಾರಿಕೆಯ ಶಿಕ್ಷಣವನ್ನೂ ಕೊಡಬೇಕು. ವಿಶ್ವವಿದ್ಯಾನಿಲಯಗಳಲ್ಲಿ ಈ ವೃತ್ತಿಗೆ ಸಂಬಂಧಿಸಿದ ಪ್ರೌಢವಿಚಾರಗಳನ್ನು ತಿಳಿಸಿಕೊಡಬೇಕು. ವಿದೇಶಗಳಿಗೆ ಹೋಗಿ ಈ ಕೈಗಾರಿಕೆಯ ಜ್ಞಾನವನ್ನು ಪಡೆದುಬರುವುದಕ್ಕಾಗಿ ಯುವಕರಿಗೆ ವಿದ್ಯಾರ್ಥಿವೇತನ ಕೊಡಬೇಕು. ಸರಕಾರದ ಪುರಾತನ ಸಂಸ್ಕೃತಿ ರಕ್ಷಣಾಶಾಖೆಯವರು ತಮ್ಮ ಆಡಳಿತದಲ್ಲಿರುವ ಪುರಾತನ ಶಿಲ್ಪಕೃತಿಗಳನ್ನೂ ಭವನಗಳನ್ನೂ ಚಲನಚಿತ್ರಗಳಿಗೆ ಉಪಯೋಗಿಸಿಕೊಳ್ಳಲು ಅವಕಾಶ ಕೊಟ್ಟಿರುವರೆಂದು ಕೇಳುತ್ತೇನೆ. ಇದೇ ರೀತಿ ಸೇನಾ ಇಲಾಖೆಯವರನ್ನೂ ಈ ಕೈಗಾರಿಕೆಗೆ ನೆರವಾಗಲು ಕೋರಬೇಕು.

ಇವೆಲ್ಲವೂ ಸರಕಾರದವರೂ ಸಾರ್ವಜನಿಕರೂ ಈ ಕೈಗಾರಿಕೆಗೆ ಸಹಾಯಮಾಡಲು ಇರುವ ಹಲವು ಮಾರ್ಗಗಳು. ಇತ್ತೀಚೆಗೆ ಈ ದೇಶದ ವೃತ್ತ ಪತ್ರಿಕೆಗಳು ಮನೋರಂಜಕ ವಿಚಾರಗಳ ಪ್ರಚಾರವನ್ನು ಕೈಗೊಂಡಿವೆ. ಇನ್ನು ಮುಂದೆ ವಿದ್ಯಾಪ್ರಸಾರ ದೃಷ್ಟಿಯಿಂದಲೂ ಆರ್ಥಿಕ ದೃಷ್ಟಿಯಿಂದಲೂ ಇದಕ್ಕೆ ಅವಶ್ಯಕವಾದ ಪ್ರಚಾರಕ್ಕೆ ಅವರು ಗಮನಕೊಡಬಹುದಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ಕೈಗಾರಿಕೆಯು ಪ್ರಾಮುಖ್ಯತೆ ಪಡೆದಂದಿನಿಂದಲೂ ವೃ ಪತ್ರಿಕೆಗಳು ಈ ಕಾರ್ಯ ಕೈಗೊಂಡಿವೆ.

ಶಾಂತಿ ಕಾಲದಲ್ಲಿಯೂ, ಯುದ್ಧ ಕಾಲದಲ್ಲಿ ಚಲನಚಿತ್ರ ಕೈಗಾರಿಕೆಯು ಏಕರೀತಿ ಉಪಯೋಗ ಬರುವುದು. ಆದುದರಿಂದ ಪಾಶ್ಚಾತ್ಯ ರಾಷ್ಟ್ರಗಳು ಕೈಗಾರಿಕೆಯನ್ನು ಉನ್ನತ ಸ್ಥಿತಿಯಲ್ಲಿಡಲು ಸತತ ಪ್ರ ಸುತ್ತಿದ್ದಾರೆ. ಅನುಕೂಲವಾದ ಕಾನೂನು, ತೆರಿಗೆ ಕ ಮಾಡುವುದು, ತಯಾರಿಸುವವರಿಗೆ ಧನಸಹಾಯ, ಉ ಚಿತ್ರಗಳಿಗೆ ಬಹುಮಾನ ಇವೇ ಮೊದಲಾದುವು ಮುಖೇನ ಕೈಗಾರಿಕೆಗೆ ಸಹಾಯಮಾಡಲು ಅವರು ಸ ಸಿದ್ಧರಿದ್ದಾರೆ. ಭಾರತದಲ್ಲಾದರೋ ನಿರ್ಭಂಧಗಳೇ ಹೆಚ್ಚು ಹಾಗೂ ದೊರಕಿರುವ ಅನುಕೂಲಗಳಲ್ಲಂತೂ ಉಪಾ ಭಾವನೆ ಇಲ್ಲವೇ ಇಲ್ಲ.

## ಸರಕಾರವು ಮಾಡಬಹುದಾದುದೇನು.

ಸರಕಾರದ ಕೈಗಾರಿಕಾ ಶಾಖೆಯಲ್ಲಿ ಈ ಕೈಗಾ ಕೆಯ ಅವಶ್ಯಕತೆಗಳಿಗೆ ಗಮನ ಕೊಡುವುದಕ್ಕಾಗಿ ಒಂದು ಉಪಶಾಖೆಯನ್ನು ಏರ್ಪಡಿಸುವುದು ಮೊಟ್ಟಮೊ ಲಿನ ಕೆಲಸ.

ಭಾರತದಲ್ಲಿ ಐದು ಚಲನಚಿತ್ರ ವಿಮರ್ಶಕ ಸಮಿ ಗಳಿವೆ. ಬೊಂಬಾಯಿ, ಕಲ್ಕತ್ತಾ, ಮದ್ರಾಸ್, ಲಾಹೋರ್ ಮತ್ತು ರಂಗೂನ್‌ಗಳಲ್ಲಿ ಒಂದೊಂದು ಸಮಿತಿಯಿದೆ

ಬೊಂಬಾಯಿ ವಿಮರ್ಶಕ ಸಮಿತಿಯಲ್ಲಿ ೫ ಜನ ಸದಸ್ಯರೂ ಒಬ್ಬ ಅಧ್ಯಕ್ಷರೂ ಇದ್ದಾರೆ. ಇವರಲ್ಲಿ ಯಾರೂ ಚುನಾಯಿತರಾದವರಲ್ಲ. ಒಮ್ಮೆ ಚುನಾಯಿತ ರಾಗಿಬಿಟ್ಟರೆ ಜೀವಾವಧಿ ಸದಸ್ಯರಾದಂತೆಂಬ ಭಾವನೆ ಇರುವುದು.

"ಚಲನ ಚಿತ್ರ ಸೊಸೈಟಿ" ಎಂಬ ವ್ಯಾಪಾರೀ ಸಂಸ್ಥೆ ಯೊಂದು ಕಂಪೆನಿ ಆಕ್ಟಿಗನುಸಾರವಾಗಿ ಸ್ಥಾಪಿತವಾಗಿದೆ. ಸರಕಾರದವರು ಇದಕ್ಕೆ ಮನ್ನಣೆಯಿತ್ತು, ಧನ ಸಹಾಯವಿತ್ತು, ಸರಕಾರದ ರಿಕಾರ್ಡುಗಳಲ್ಲಿರುವ ವಿಷಯವನ್ನು ಅವರಿಗೆ ತಿಳುಹಿಸಬಹುದು. ಈ ಸೊಸೈಟಿಗೆ ಕೈಗಾರಿಕೆಯ ತಯಾರಿ, ವಿನಿಮಯ ಮತ್ತು ಪ್ರದರ್ಶನ ಈ ಮೂರು ವಿಭಾಗಗಳಲ್ಲಿ ಮಾಹಿತಿಯನ್ನು ಕೂಡಿಸಲು ಅಧಿಕಾರ ಕೊಡಬಹುದು. ಅದರ ಸಹಾಯದಿಂದ ಆಮದು ಮತ್ತು

ರೆಸ್ಟ್ರನ ಮಾಹಿತಿಯನ್ನು ವ್ಯವಸ್ಥೆಗೊಳಿಸಬಹುದು. ಈ ಕೈಗಾರಿಕೆ ವಿಷಯದ ಪ್ರಶ್ನೆಗಳು ಯಾವುದಾದರೂ ಸರಕಾರದ ಮುಂದೆ ಬಂದಾಗ ಸೊಸೈಟಿಯ ಸಲಹೆ ತೆಗೆದುಕೊಳ್ಳಬಹುದು

ಇಂಗ್ಲೆಂಡಿನಲ್ಲಿ, ಬ್ರಿಟಿಷ್ ಚಲನಚಿತ್ರ ವಿಮರ್ಶಕ ಸಮಿತಿಯು ವ್ಯಾಪಾರಿ ಸಂಸ್ಥೆಯಿದ್ದು ಸರಕಾರದೊಡನೆ ಈ ವಿಧದ ಸಂಬಂಧವಿಟ್ಟುಕೊಂಡಿದೆ. ಇದಕ್ಕೆ ಸರಕಾರದಿಂದ ಧನಸಹಾಯ ದೊರೆಯುತ್ತಿದೆ. ಹಾಗೆಯೇ ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ಚಲನಚಿತ್ರ ವಿಮರ್ಶಕ ರಾಷ್ಟ್ರೀಯ ಸಮಿತಿಯೊಂದಿದೆ. ಈ ಸಂಸ್ಥೆಯ ಮುಖ್ಯ ವಿಮರ್ಶಕರು ಸರಕಾರದೊಡನೆ ಸಂಬಂಧ ವಿಟ್ಟುಕೊಂಡಿದ್ದಾರೆ.

ಈ ಸೊಸೈಟಿಯು ಸರಕಾರದೊಡನೆ ಸಹಕರಿಸಲು ಸಿದ್ಧವಿರುವುದೆಂದು ನನ್ನ ನಂಬಿಕೆ ಅಷ್ಟೇ ಅಲ್ಲದೆ ತನ್ನ ರಚನೆಯಲ್ಲಿ ಸರಕಾರದವರು ಕೇಳಬಹುದಾದ ಹಲವು ತಿದ್ದುಪಾಟುಗಳನ್ನು ತರಲು ಹಿಂಜರಿಯಲಾರದೆಂದು ತೋರುವುದು.

ಈ ಸಂಸ್ಥೆಯು ಯಾವುದೇ ಕಾರಣದಿಂದ ಸರಿಯಾದುದಲ್ಲವೆಂದು ತೋರಿದುದಾದರೆ, ಸರಕಾರದವರೇ ಸ್ವತಃ ಇಂತಹ ವ್ಯಾಪಾರಿ ಸಂಸ್ಥೆಯೊಂದನ್ನು ಸ್ಥಾಪಿಸಿ ಅದರ ಮೂಲಕ ಕೆಲಸ ಮಾಡಬಹುದು. ಸರಕಾರವು ಇಂತಹ ಹವಣಿಕೆ ಯಾವುದನ್ನಾದರೂ ಮಾಡಿಯೇ ತೀರಬೇಕು. ಚಲನಚಿತ್ರ ಕೈಗಾರಿಕೆ ಹಿತವನ್ನು ಚಿಂತಿಸಿ ಅದಕ್ಕಾಗಿ ದುಡಿಯುವ ಯಾವುದಾದರೊಂದು ವ್ಯವಸ್ಥೆಯನ್ನು ಮಾಡಬೇಕಾದುದು ಅತ್ಯಗತ್ಯ. ಪಾಶ್ಚಾತ್ಯದೇಶಗಳಲ್ಲಿ ಸರಕಾರಗಳು ತಮ್ಮ ಚಲನಚಿತ್ರ ಕೈಗಾರಿಕೆಗೆ ಕಲ್ಪಿಸಿರುವ ಅನುಕೂಲಗಳನ್ನು ಇಂಡಿಯಾ ಸರಕಾರವೂ ಇಲ್ಲಿನ ಕೈಗಾರಿಕೆಗೆ ಕಲ್ಪಿಸುವುದೆಂದು ಭಾರತೀಯರು ನಿರೀಕ್ಷಿಸುತ್ತಿದ್ದಾರೆ.

## ಭವ್ಯ ಭವಿಷ್ಯ

ಈ ಕೈಗಾರಿಕೆಗೆ ಭವ್ಯ ಭವಿಷ್ಯವಿದೆ. ಆದರೆ ಅದನ್ನು ಕಾಣುವ ಮೊದಲು ವ್ಯವಸ್ಥೆಬೇಕು, ಉತ್ತಮಧೋರಣಬೇಕು, ಸಂವಿಧಾನಬೇಕು, ಕಾರ್ಯಕ್ರಮಬೇಕು ಮತ್ತು ಅದು ಪ್ರಗತಿಮಾರ್ಗದಲ್ಲಿ ಕಾಲಿಡಲು ತಕ್ಕ ಏರ್ಪಾಟು ಬೇಕು. ಈ ಆಶಯಗಳನ್ನು ಕಾರ್ಯರೂಪದಲ್ಲಿ ತರಲು ಚಳವಳಿಯು ಮೂಡಿದುದಾದರೆ ಅದಕ್ಕೆ ಹಣದ ಸಹಾಯ ಒದಗುವುದು ಕಠಿಣವಾಗಲಾರದು. ಆದಾಯತೆರಿಗೆ ಬಿಟ್ಟು ಆಮದು ತೆರಿಗೆಯ ಮುಖಾಂತರವೇ ಕೇಂದ್ರ ಸರಕಾರಕ್ಕೆ ಈಗ ೧೫ ಲಕ್ಷ ರೂ. ಗಳ ಆದಾಯವಿದೆ. ೧೯೪೭ರ ಸೀ ಕಸ್ಟಮ್ಸ್ ಆಕ್ಟಿನ ಇತ್ತೀಚಿನ ತಿದ್ದುಪಾಟಿನ ಪ್ರಕಾರ ಈ ಆದಾಯವು ಇನ್ನೂ ೭ ಅಥವಾ ೮ ಲಕ್ಷದಷ್ಟು ಹೆಚ್ಚುವುದೆಂದು ನಿರೀಕ್ಷಿಸಲಾಗಿದೆ. ಪ್ರಾಂತಿಕ ಸರಕಾರಗಳು ಮನೋರಂಜಕ ಹವಣಿಕೆಗಳ ಮೇಲಣ ತೆರಿಗೆಯ ಮತ್ತು ಇತರ ತೆರಿಗೆಗಳ ಲೆಕ್ಕವನ್ನು ಪ್ರತ್ಯೇಕವಾಗಿಡುತ್ತವೆ.

ಮನೋರಂಜನೆಯೇ ಈ ಕೈಗಾರಿಕೆಯ ಮುಖ್ಯ ಕಾರ್ಯವೆಂಬುದನ್ನು ನಾವು ಮರೆಯಲಾಗದು. ಚಲನಚಿತ್ರಗಳಿಂದ ನಮ್ಮ ಮನಸ್ಸಿಗೆ ಆನಂದವುಂಟು, ಉಲ್ಲಾಸವುಂಟು. ಆದರೆ ಅದು ಜನತೆಯ ಸಂಪತ್ತನ್ನು ಹೆಚ್ಚಿಸುವ ಕೈಗಾರಿಕೆಯಾಗಿಲ್ಲ. ಫಿಲ್ಮ್‌ಗಳನ್ನೂ ಯಂತ್ರಗಳನ್ನೂ ಈ ದೇಶದಲ್ಲಿ ತಯಾರಿಸುವ ಪರ್ಯಂತ, ಆರ್ಥಿಕ ದೃಷ್ಟಿಯಿಂದ ನೋಡಿದರೆ, ಒಟ್ಟಿನಲ್ಲಿ ಪ್ರತಿವರ್ಷ ಮುಕ್ಕಾಲು ಕೋಟಿಯಿಂದ ಒಂದು ಕೋಟಿ ರೂಪಾಯಿಗಳು ನಮ್ಮ ದೇಶದ ಕೈಬಿಟ್ಟು ಹೋಗುತ್ತದೆ.

ಈ ಕೈಗಾರಿಕೆಯಿಂದ ಇದುವರೆಗೂ, ಸರಕಾರವು ಕಂದಾಯ ನಿರೀಕ್ಷಿಸುತ್ತಿದೆ, ಸಾರ್ವಜನಿಕರು ಆನಂದ ನಿರೀಕ್ಷಿಸುತ್ತಿದ್ದಾರೆ, ಮತ್ತು ವ್ಯಾಪಾರಿಗಳು ಲಾಭ ನಿರೀಕ್ಷಿಸುತ್ತಿದ್ದಾರೆ. ಅಷ್ಟೇ ಹೊರತು ಅದರಿಂದ ಆರ್ಥಿಕರೀತ್ಯಾ ಆಗುವ ಪರಿಣಾಮಕ್ಕೂ ಅಥವಾ ಸಾರ್ವಜನಿಕರ ನಡೆನುಡಿಗಳ ಮೇಲೆ ಉಂಟಾಗುವ ಪ್ರಭಾವಕ್ಕೂ ಗಮನ ಕೊಟ್ಟಿಲ್ಲ.



# ಸಂಸ್ಕಾರಕ್ಕೆ ತಕ್ಕ ಸಂಸ್ಥೆ



ಲೇಖಕರು :

ಪಂಡಿತ ತಾರಾನಾಥಜಿ

( Pandit Taranathji )

ದೇಶ ಕಾಲಪರಿಸ್ಥಿತಿಗೆ ಹೊಂದುವಂತೆ ಮಾಡಿದ ಕೆಲಸದಲ್ಲಿಯೇ ಇರುವದು ಯಶಸ್ಸು ಅದನ್ನು ಬಿಟ್ಟು ಎಲ್ಲಿಯೋ ಇನ್ನೊಂದು ಕಡೆ ಒಂದು ಕೆಲಸ ಒಂದು ರೀತಿಯಿಂದ ಸರಿಯಾಗಿ ಜರಗುತ್ತಿರುವದನ್ನು ನೋಡಿ ಅದನ್ನು ಆ ರೀತಿಯಿಂದಲೇ ನಮ್ಮಲ್ಲಿಯೂ ಮಾಡಿದರೆ ಬರುವದೇನು ? ನಷ್ಟ, ಅಪಜಯ : ಅಲ್ಲದೆ ಮತ್ತೇನಿಲ್ಲ.

ದೇಶಕಾಲ ಪರಿಸ್ಥಿತಿಯನ್ನು ಪರೀಕ್ಷಿಸದೆ ಗಮನಿಸದೆ ಕೋರಿದ ಲಾಭವು ಬರುವದಿಲ್ಲವಾದರೆ ಹಳಿಯುವದು ಜನರನ್ನು ಮತ್ತೆ ! "ಈ ನಮ್ಮ ಜನರ ಹಣೇಬರೆಹವೇ ಅಷ್ಟು ಯೂರೋಪ್‌ನಲ್ಲಿ ನೋಡಿ ಇದೇ ಕೆಲಸ ಎಷ್ಟು ರಭಸದಿಂದ ನಡೆದಿದೆ. ಅವರೂ ಮನುಷ್ಯರೇ ಅಲ್ಲವೆ........" ಇಂಥ ಮಾತುಗಳ ಸುರಿಮಳೆಯೇ ಮತ್ತೆ !! ಇದಕ್ಕೆ ಉತ್ತರ ಇಷ್ಟೇ—ಅದು ಯೂರೋಪ್ ಇದು ಇಂಡಿಯ.

ಯಾವ ಸಾರ್ವಜನಿಕ ಕೆಲಸಕ್ಕೇ ಆಗಲಿ ಜಯವಾಗ ಬೇಕಾದರೆ ಈ ಮೂರು ವಿಷಯಗಳನ್ನು ಚೆನ್ನಾಗಿ ಗಮನಿಸಬೇಕು :—

೧. ಆ ಜನರ ಸಂಪ್ರದಾಯ, ಮನಸ್ಥಿತಿಗತಿ ಗಮ್ಯಗಳು ;
೨. ,, ,, ಆರ್ಥಿಕ ಸ್ಥಿತಿಗತಿ ಗಮ್ಯಗಳು ;
೩. ,, ,, ಅವಸರಾವಶ್ಯಕತೆಗಳು.

ಇವುಗಳಲ್ಲಿ ಒಂದೊಂದನ್ನು ವಿವೇಚಿಸೋಣ. ದೃಷ್ಟಾಂತಕ್ಕೆ ವಿಮೆಯನ್ನೇ ಮೂರು ದೃಷ್ಟಿಗಳಿಂದ ನೋಡೋಣ.

೧. ನಮ್ಮ ಪುರಾತನ ಗ್ರಂಥಗಳಲ್ಲಿ ವಿವೆ ಪ್ರ... ಪ್ರಸ್ತಾಪವಿದ್ದರೂ ಪಾಶ್ಚಿಮಾತ್ಯ ಪದ್ಧತಿ ಪರಿಷ್ಕಾ...ಗಳ ವಿಮೆಯು ನಮ್ಮಲ್ಲಿ ಕಮ್ಮಿ. ಚಿಟ್‌ಫಂಡ್‌ನಂಥ ಚಿಕ್ಕ ಪುಟ್ಟ ಚಂದಾಹಣದಿಂದ ಉಂಟಾದ ಫಂಡುಗಳು ನಮ್ಮಲ್ಲಿ ಎಷ್ಟೋ ಇವೆ. ಇವುಗಳಿಂದ ಲಕ್ಷೋಪಲಕ್ಷ ಜನರು ಲಾಭ ಹೊಂದುತ್ತಿದ್ದಾರೆ. ಆದಕ್ಕಾಗಿ ಅವು ಜನಪ್ರಿಯವಾಗಿದ್ದು ಬೆಳೆಯುತ್ತಲೂ ಇವೆ.

ಹೀಗೆ ಬೆಳೆಯಲಿಕ್ಕೆ ಕಾರಣವೇನು ಎಂದು ನೋಡಿದರೆ ವಿಷಯವು ಸಹಜವಾಗಿ ೩ನೆ ಭಾಗದ ಕಡೆಗೆ ಹರಿಯುತ್ತದೆ. ಆದು ಹೇಗೆ ? ನಮ್ಮಲ್ಲಿ ಜನಸಾಮಾನ್ಯದ ಅವಸರಾವಶ್ಯಕತೆಗಳು ಅವುಗಳಿಂದ ನೆರವೇರುತ್ತವೆ. ನಮ್ಮದು ಕೃಷಿಕರ್ಮದ ದೇಶ. ಇದರ ರೂಢಿಗಳು ಹೊಲಗದ್ದೆಗಳ ವಾತಾವರಣದಲ್ಲಿ ಉಂಟಾಗಿವೆ : ಅಲ್ಲದೆ ಪಶ್ಚಿಮದೇಶಗಳಲ್ಲಿದ್ದಂತೆ ಮಾರ್ಕೆಟ್‌ಗಳ ಒತ್ತಾಯದಿಂದ ಉಂಟಾಗಿಲ್ಲ. ವರ್ಷವೆಲ್ಲಕ್ಕೂ ಬೇಕಾದಷ್ಟು ಕಾಳು, ಮತ್ತು ಇತರ ಉಳಿದ ಸಾಮಗ್ರಿಗಳನ್ನು ಒಮ್ಮೆಲೇ ತುಂಬಿಸಿಟ್ಟುಕೊಳ್ಳುವದು ನಮ್ಮ ಜನರ ರೂಢಿ. ಇದಕ್ಕೆ ಅನೇಕ ಕಾರಣಗಳಿವೆ. ಅವುಗಳನ್ನೆಲ್ಲ ಚರ್ಚಿಸುವದು ಈ ಲೇಖನದ ಉದ್ದೇಶವಲ್ಲ. ಇರಲಿ, ಆ ರೂಢಿಯನ್ನು ಪೂರೈಸಿದ ಮೇಲೆ ನಮ್ಮ ಜನರಿಗೆ ದುಡ್ಡಿನ ಆಡಚಣೆ ಉಂಟಾಗುವದು ಎಂದರೆ ಮುಖ್ಯವಾಗಿ (ಅ) ತೆರಿಗೆ ತೆತ್ತಬೇಕಾದ ಕಾಲಕ್ಕೆ (ಆ)ಮದುವೆ ಮುಂಜಿ ಶ್ರಾದ್ಧ ಮುಂತಾದ ಶುಭಾ ಶುಭಗಳ ಕಾಲಕ್ಕೆ. ಮೊದಲನೆಯದಕ್ಕೊಂದು ನಿಶ್ಚಿತ ಕಾಲವಿದ್ದಂತೆ ಎರಡನೆಯದಕ್ಕೆ ಇಲ್ಲ. ಆದರೆ ಅದು ಬಂದಾಗ ದುಡ್ಡಿನ ಅವಸರ ಬಿಟ್ಟಿದ್ದಲ್ಲ. ಇಂಥ ಕಾಲಕ್ಕೆ ಸರಿಯಾಗಿ ಹೆಚ್ಚು ಕಾಗದಪತ್ರಗಳ ತೊಂದರೆಯಿಲ್ಲದಂತೆ ಈ ಚಿಟ್‌ಫಂಡ್‌ಗಳಿಂದ ಜನಸಾಮಾನ್ಯಕ್ಕೆ ಸುಲಭವಾಗಿ ಹಣ ಸಿಕ್ಕುತ್ತದೆ. ಈ ಕಾರಣದಿಂದಲೇ ಅಂಥ ಫಂಡ್‌ಗಳಿಗೆ ತುಂಬ ಪ್ರೋತ್ಸಾಹ ದೊರೆಯುತ್ತದೆ. ಸಾಕ್ಷರತೆಯಿಲ್ಲದ ಜನಸಮುದಾಯಕ್ಕೆ 'ಆಫಿಶಿಯಲ್' ಗಲಾಟೆ ಎಷ್ಟು ಕಮ್ಮಿಯೋ ಅಷ್ಟು ಅನುಕೂಲವಲ್ಲವೆ ?

ಈಗ "ಇನ್ಶುರೆನ್ಸ್" ಎಂಬುದು ಮುಖ್ಯವಾಗಿ ತಾವು ಸತ್ತಮೇಲೆ ತಮ್ಮ ಹೆಂಡತಿ ಮಕ್ಕಳಿಗಾಗಿ ಮಾಡುವ ಆರ್ಥಿಕ ವ್ಯವಸ್ಥೆ: ಅದಕ್ಕೂ ಇದಕ್ಕೂ ಸಂಬಂಧವೇನು?—ಎಂದು ಯಾರಾದರೂ ವಾದಿಸಬಹುದು. ಅದು ಸರಿಯೇ. ಆದರೆ ನಮ್ಮ ಪ್ರಶ್ನೆ ಇದು. ಬಹುಮಟ್ಟಿಗೆ ಕೃಷೀವಲರಾದ ನಮ್ಮ ಜನರಿಗೆ ಇರುವ ಹೊಲಗದ್ದೆಗಳೇ ಅಲ್ಲವೆ ಅವರು ಸತ್ತಮೇಲೆ ಅವರ ಹೆಂಡತಿ ಮಕ್ಕಳಿಗೆ ಹೋಗತಕ್ಕ ಆಸ್ತಿ? ಅಪ್ಪ ಸತ್ತರೆ ಅಪ್ಪನ ಸಂಬಳ ನಿಂತೀತು ಅವನ ಸ್ಥಾವರ ಆಸ್ತಿಯೂ ಸತ್ತುಹೋಗುವದಿಲ್ಲ ತಾನೆ? ಉದ್ಯಮಪ್ರಧಾನ (industrial) ದೇಶಗಳಲ್ಲಿ ಹಾಗಾಗದು. ಅಲ್ಲಿ ಜೀವನಕ್ಕೆ ಕೂಲಿ ಸಂಬಳಗಳೇ ಮುಖ್ಯ. ಮತ್ತು ಇವನ್ನು ಘಳಿಸುವವನು ಬಿದ್ದನೋ, ಇವಕ್ಕೂ ಆಗಲೇ ಕಾಟು! ಅಪ್ಪನ ಕೂಲಿಸಂಬಳಗಳು ಕೆಲಸವಿಲ್ಲದೆ ಮಕ್ಕಳಿಗೆ ಸಿಕ್ಕಲಾರವು. ಆದುದರಿಂದ ಇವುಗಳನ್ನೇ ವಿಧವಿಧವಾಗಿ ಕಲೆಹಾಕಿ ಮುಂದೆ ಹೆಂಡತಿ ಮಕ್ಕಳಿಗೆ ಕೊಡುವ ಉಪಾಯಗಳು ಉದ್ಯಮಪ್ರಧಾನ ದೇಶಗಳಲ್ಲಿ ಸಹಜವಾಗಿ ಹುಟ್ಟಿದವು. ಈ ಕಲೆಹಾಕಿದ ದುಡ್ಡೇ ಸಂತಾನಕ್ಕೆ ಮುಖ್ಯ ಆಧಾರ. ಅದರಿಂದ ಬರುವ ಲಾಭದಿಂದಲೋ ಬಡ್ಡಿಯಿಂದಲೋ ಮಕ್ಕಳು ಬದುಕಬೇಕು. ಸಾಕಷ್ಟು ಬಡ್ಡಿ ಬರಬೇಕಾದರೆ ಮೊತ್ತವೂ ಧಾರಾಳವಾಗಿರಬೇಕು. ಈ ಅವಶ್ಯಕತೆಗೆ ತಕ್ಕಂತೆ ದುಡ್ಡಿಗೇ ಪ್ರಾಮುಖ್ಯತೆ ಬಂತು ಆ ಜನರಲ್ಲಿ.

ಕೃಷಿಪ್ರಧಾನ ದೇಶದಲ್ಲಿ ಹಾಗಲ್ಲ, ಹಾಗಾಗದು. ಇಲ್ಲಿ ಅಪ್ಪನ ನಂತರ ಮಕ್ಕಳಿಗೆ ಆಧಾರ ಅಂದರೆ ಭೂಮಿ. ಆದರೆ ಬದುಕಬೇಕಾದರೆ ದುಡ್ಡಿಗೆ ಬಡ್ಡಿ ಹೇಗೆ ಬರಬೇಕೋ, ಹಾಗೆಯೇ ಭೂಮಿಗೆ ಪೈರು ಬರಬೇಕು. ಅದು ಬರಬೇಕಾದರೆ ತಕ್ಕ ಕೃಷಿಯಾಗಬೇಕಷ್ಟೆ? ಆ ಕೃಷಿಗೆ ತಕ್ಕ ಅನುಕೂಲತೆಯೇ ಜನರ ಅವಶ್ಯರಾವಶ್ಯಕತೆ. ಈ ಅನುಕೂಲತೆಯು ಬೆಳೆಯುವಂತೆ ನಮ್ಮ ವಿಮಾ ಸಂಸ್ಥಾಪಕರು ವ್ಯವಸ್ಥೆ ಮಾಡಿದರೆ ಸಂಸ್ಥೆಗೆ ಪ್ರೋತ್ಸಾಹ ಜನರ ನೈಸರ್ಗಿತ ಒತ್ತಾಯದಿಂದಲೇ ಲಭಿಸುವದು, ಜನರಿಗೂ ಹಿತವಾಗುವದು.

ಈಗ ೨ನೇ ಅಂಗವನ್ನು ವಿವೇಚಿಸೋಣ. ಕೃಷೀವಲ ಜನತೆಯ ಆರ್ಥಿಕಗಮ್ಯವು ಸಹಜವಾಗಿಯೂ ಹೊಲಗದ್ದೆಗಳು, ಅವುಗಳ ಅಭಿವೃದ್ಧಿ, ಅದಕ್ಕೆ ಬೇಕಾದ ಅನುಕೂಲತೆ. ದುಡ್ಡೇ ಆಗಲಿ, ಹೊಲಗದ್ದೆಗಳೇ ಆಗಲಿ, ಬೇಕಾದ್ದು ಬದುಕಿಗಾಗಿ. ಈ ಬದುಕಿಗಾಗಿ ಉದ್ಯಮಗಳಿಗೆ ದುಡ್ಡು ವ್ಯಾಪಾರ ಮುಖ್ಯ, ಕೃಷೀವಲ ರೈತರಿಗೆ ಹೊಲಗದ್ದೆ ಪೈರು ಮುಖ್ಯ. ನಿಸರ್ಗವೇ ಈ ಪ್ರಾಮುಖ್ಯತೆಯನ್ನು ಹಂಚಿಕೊಟ್ಟಿದೆ. ಹೀಗಿರುವಾಗ ನಿಸರ್ಗವನ್ನು ನಿಂದಿಸಿ ಯಾವ ಸಂಸ್ಥೆಯಾದರೂ ಮುಂದುವರಿದೀತು? ಹಾಗಾಗುವದು ನಿಸರ್ಗ ವಿರುದ್ಧ, ಅಸಾಧ್ಯ ಎಂಬುದನ್ನು ಮರೆಯಲಿಕ್ಕಾಗದು

ಇಂಡಿಯದಲ್ಲಿ ವ್ಯಾಪಾರವಿಲ್ಲ, ವ್ಯಾಪಾರ ಹೆಚ್ಚಕೂಡದು ಎಂದಲ್ಲ ನಮ್ಮ ಅಭಿಪ್ರಾಯ. ನಿಸರ್ಗವು ಅದಕ್ಕೆ ಅನುಕೂಲತೆಯನ್ನು ಒದಗಿಸಿದ್ದಲ್ಲಿ ಅದು ತಾನಾಗಿಯೇ ಬೆಳೆಯುವದು, ಬೆಳೆಯಬೇಕು. ಅದು ಬೆಳೆದ ಕಡೆ ಅದಕ್ಕೆ ಅನುಕೂಲವಾಗಿರುವ ಸಂಸ್ಥೆಗಳು ಬೆಳೆಯುವವು, ಬೆಳೆಯಲೇಬೇಕು. ಆದರೆ ಒಬ್ಬ ವ್ಯಾಪಾರೋದ್ಯಮಿಗೆ ಸಾವಿರ ರೈತರಿದ್ದ ಈ ದೇಶದಲ್ಲಿ ಆ ಸಾವಿರವನ್ನು ಮರೆತುಬಿಟ್ಟು ಈ ಒಬ್ಬೊಬ್ಬರಿಗೆ ಯೋಗ್ಯವಾದ ಸಂಸ್ಥೆಗಳನ್ನೇ ಬೆಳೆಸಲೆತ್ನಿಸಿದರೆ ದೇಶಹಿತವಾಗುವದಂತಿರಲಿ ಬರಬರುತ್ತ ಆ ಸಾವಿರಾರರ ದುಡಿಮೆಯ ಆಧಾರದಿಂದಲೇ ಧನಾಢ್ಯರಾಗುವ ಈ ಒಬ್ಬೊಬ್ಬರ ಹಿತವಾದರೂ ಹೇಗಾದೀತು?



# ಬಂಗಲೆಯ ಬಾಡಿಗೆ



ಬರೆದವರು :

ಶ್ರೀ॥

ಎಂ. ಎನ್. ಗೋಪಾಲರಾವ್,

ಬೆಂಗಳೂರು.

( Mr. M. N. Gopala Rao )

ಅಶ್ವತ್ಥ ಅನಾಥಾಲಯದ ಹುಡುಗ. ಓದಿನಲ್ಲಿ ಬುದ್ಧಿವಂತ. ಮೇಷ್ಟ್ರಿಗೆ ಅಚ್ಚುಮೆಚ್ಚು. ಮೆಟ್ರಿಕ್ ಪರೀಕ್ಷೆ ಮೊದಲನೆಯ ವರ್ಗದಲ್ಲಿ ಪ್ಯಾಸುಮಾಡಿದ. ಅಮಲದಾರು ಅನಂತಯ್ಯನವರು ತಮ್ಮ ಏಕಮಾತ್ರ ಪುತ್ರಿಯಾದ ಜಯಮ್ಮನನ್ನು ಅವನಿಗೆ ಕೊಟ್ಟು ಮದುವೆ ಮಾಡಿದರು. ಆದರೆ ದುರ್ದೈವದಿಂದ, ಮದುವೆಯಾದ ಆರೇ ತಿಂಗಳಲ್ಲಿ ಅನಂತಯ್ಯನವರು ಪರಲೋಕ ಗತರಾದರು. ಅವರ ಪತ್ನಿ ಮೊದಲೇ ತೀರಿಕೊಂಡಿದ್ದರು. ಅವರಿಗೆ ಗಂಡು ಸಂತತಿ ಇರಲಿಲ್ಲವಾಗಿ ಅವರ ಆಸ್ತಿಗೆ ಜಯಮ್ಮನೇ ಹಕ್ಕುದಾರಳಾದಳು.

ಅನಂತಯ್ಯನವರು ಖರ್ಚುಗಾರರಾಗಿದ್ದರು. ಹೆಚ್ಚು ಹಣ ಕೂಡಿಟ್ಟಿರಲಿಲ್ಲ. ಸ್ಥಿರಚರ ಆಸ್ತಿಗಳನ್ನೇನೂ ಮಾಡಿರಲಿಲ್ಲ. ಐದುಸಾವಿರ ರೂಪಾಯಿಗಳಿಗೆ ಇನ್ಷ್ಯೂರು ಮಾತ್ರ ಮಾಡಿದ್ದರು. ಅವರ ವಿಲ್ಲಿನ ಪ್ರಕಾರ ಜಯಮ್ಮನ ಸೋದರಮಾವ ವಕೀಲ ಶಾಮಣ್ಣನವರೇ ಜಯಮ್ಮನ ಗಾರ್ಡಿಯನ್ ಆಗಿ ಇನ್ಷ್ಯೂರೆನ್ಸಿನ ಹಣ ಬರಮಾಡಿಕೊಂಡು ಮೈಸೂರಲ್ಲಿ ಒಂದು ಮನೆಯನ್ನು ಕ್ರಯಕ್ಕೆ ತೆಗೆದು ಅದನ್ನು ಜಯಮ್ಮನ ಹೆಸರಿಗೆ ಮಾಡಿಕೊಡಬೇಕಾಗಿತ್ತು. ಅದರಂತೆ ಮೈಸೂರು ಲಕ್ಷ್ಮೀಪುರದಲ್ಲಿ ಅನುಕೂಲವಾದ ಒಂದು ಸಣ್ಣ ಬಂಗಲೆಯೂ ಖರೀದಿಗೆ ಸಿಕ್ಕಿತು. ತಿಂಗಳು ತಿಂಗಳಿಗೂ ಮೂವತ್ತು ರೂಪಾಯಿಗಳ ಬಾಡಿಗೆ ಬರುವುದಕ್ಕೆ ಮೊದಲಾಯಿತು.

ಮೆಟ್ರಿಕ್ ಪಾಸಾದಮೇಲೆ ಅಶ್ವತ್ಥ ಎರಡು ವರುಷ ಎಫ್. ಎ. ತರಗತಿಯಲ್ಲಿ ಓದಿದ. ಮದುವೆಯಾದನಂತರ ಅವನಿಗೆ ಸ್ವಲ್ಪ ಜಂಭವುಂಟಾಯಿತು. 'ಸ್ಟೂಡೆಂಟ್ ಹೋಮಿ'ನಲ್ಲಿದ್ದರೂ ಸರಿಯಾಗಿ ಅವನು ಓದಲಿಲ್ಲ. ಫಲಿತಾಂಶವಾಗಿ ಅವನಿಗೆ ಪರೀಕ್ಷೆಯಲ್ಲಿ ಪಾಸಾಗಲಿಲ್ಲ. ಮುಂದೆ ಓದುವುದಕ್ಕೆ ಅವನಿಗೇ ಮನಸ್ಸು ಬರಲಿಲ್ಲ.

ಎಫ್. ಎ. ತರಗತಿಯಲ್ಲಿದ್ದ ಎರಡು ವರುಷಗಳು ಅವನಿಗೆ ತಿಂಗಳೊಂದಕ್ಕೆ ಹತ್ತು ರೂಪಾಯಿನಂತೆ ಸರ್ಕಾರಿ 'ಸ್ಕಾಲರ್‌ಷಿಪ್ಪು' ಸಿಗುತ್ತಿತ್ತು. ಅದರ ಜೊತೆಗೆ ಬಂಗಲೆಯ ಬಾಡಿಗೆಯಲ್ಲಿ ಇಪ್ಪತ್ತು ರೂಪಾಯಿಗಳು ಅವನ ವೆಚ್ಚಕ್ಕೆ ಬೇಕಾಗುತ್ತಿತ್ತು. ತನ್ನ ಆಸ್ತಿಯ ಹುಟ್ಟುವಳಿಯು ತನ್ನ ಗಂಡನಿಗೆ ಉಪಯೋಗವಾಗುವುದು ಜಯಮ್ಮನಿಗೆ ತುಂಬಾ ಸಂತೋಷ, ಅಭಿಮಾನ.

ಶಾಮಣ್ಣನವರು ಮೊದಲನೆಯ ಸಲ ದೀಪಾವಳಿ ಹಬ್ಬಕ್ಕೆ ಅಳಿಯನನ್ನು ಕರೆಯಿಸಿಕೊಂಡು ಔತಣಮಾಡಿ ಹಬ್ಬದ ಉಡುಗೊರೆಯಾಗಿ ಒಂದು ಕೈ ಗಡಿಯಾರವನ್ನು ಕೊಟ್ಟರು. ಅದು ಬಹಳ ಫ್ಯಾಷನಬಲ್ ಗಡಿಯಾರ. ಅದನ್ನು ನೋಡಿ ನೋಡಿ ಜಯಮ್ಮ ಹಿಗ್ಗುತ್ತಿದ್ದಳು. ಏಕೆಂದರೆ ಅದು ಅವಳ ಬಂಗಲೆಯ ಬಾಡಿಗೆ ಹಣದಿಂದ ಕೊಂಡುಕೊಂಡದ್ದು.

ಓದನ್ನು ನಿಲ್ಲಿಸಿದಮೇಲೆ ಅಶ್ವತ್ಥ ಕೆಲವು ತಿಂಗಳು ನಿರುದ್ಯೋಗದಿಂದ ಕಾಲಹರಣ ಮಾಡಬೇಕಾಯಿತು. ಶಾಮಣ್ಣನವರ ಸ್ನೇಹಿತನೊಬ್ಬನಿಗೆ ಮದರಾಸಿನ ಒಂದು ಕಂಪೆನಿಯಲ್ಲಿ ದೊಡ್ಡ ಕೆಲಸವಿತ್ತು. ಆ ಸ್ನೇಹಿತನ ಶಿಫಾರಸ್ಸಿನಿಂದ ಅಶ್ವತ್ಥನಿಗೆ ಆ ಕಂಪೆನಿಯಲ್ಲಿ ಒಂದು ಗುಮಾಸ್ತಗಿರಿ ಸಿಕ್ಕಿತು.

ಅಶ್ವತ್ಥನಿಗೆ ಅದೃಷ್ಟ ಖುಲಾಯಿಸಿತೆಂದು ಕಾಣುತ್ತದೆ. ಜಾಗ್ರತೆ ಜಾಗ್ರತೆಯಾಗಿ ಕಂಪೆನಿಯ ಕೆಲಸದಲ್ಲಿ ಬಡ್ತಿ ಹೊಂದಿ ಕ್ರಮೇಣ ತಿಂಗಳಿಗೆ ನೂರೈವತ್ತು ರೂಪಾಯಿ ಸಂಬಳ ತೆಗೆಯುವ ಅಧಿಕಾರಿಯಾದ.

ಮಾಮಲೇದಾರನ ಮಗಳಾದರೂ ಜಯಮ್ಮ ಬಹಳ ಮಿತವ್ಯಯಿ. ಮನೆಯ ಆಡಳಿತವನ್ನು ವಿಚಕ್ಷಣೆಯಿಂದ

ನೋಡಿಕೊಳ್ಳುವಳು. ಅವಳಿಗೆ ಪತಿಯಲ್ಲಿ ಪರಮ ಭಕ್ತಿ. ಆದರೆ ಅಶ್ವತ್ಥನಿಗೆ ಉದ್ಯೋಗದ ದರ್ಜೆ ಹೆಚ್ಚಿದಂತೆಲ್ಲಾ ತಲೆ ತಿರುಗುತ್ತಾ ಬಂತು. ತನ್ನ ಸಮಾನರಿಲ್ಲೆಂಬ ಸೊಕ್ಕು ಹೆಚ್ಚಾಯಿತು. ಹೆಂಡತಿಯನ್ನು ಕಂಡರೆ ಅಲಕ್ಷ್ಯಕ್ಕೆ ಆರಂಭವಾಯ್ತು. ಬಂಗಲೆಯ ಬಾಡಿಗೆಯ ವಿಷಯವಾಗಿ ಜಯಮ್ಮ ಅಭಿಮಾನದಿಂದ ಏನಾದರೂ ಮಾತಾಡಿದರೆ ಅಶ್ವತ್ಥನಿಗೆ ಆಗದು. ತಾತ್ಸಾರವಾಗಿ ನೋಡಿ ಅವಳನ್ನು ನಿಕೃಷ್ಟ ಮಾಡುವನು. ಜಯಮ್ಮನಿಗೆ ಅವಳ ತಂದೆಯು ಬಳುವಳಿಯಾಗಿ ಬಿಟ್ಟ ಆಸ್ತಿಯ ಹುಟ್ಟುವಳಿಯು ತನ್ನ ಗಂಡನ ಉಪಯೋಗಕ್ಕೆ ಬರಬೇಕೆಂದು ತುಂಬಾ ಆಸೆ. ಆದರೂ ತನ್ನ ಗಂಡ ಆ ಆಸ್ತಿಯ ವಿಷಯವಾಗಿ ನಿಕೃಷ್ಟವಾಗಿ ಮಾತಾಡುತ್ತಿದ್ದುದರಿಂದಲೂ, ಇನ್ನುಮೇಲೆ ಬಂಗಲೆಯ ಬಾಡಿಗೆಯ ಹಣದ ಗೋಜು ತನಗೆ ಬೇಡವಾಗಿ, ಇನ್ನೆಂದಿಗೂ ಜಯಮ್ಮ ಆ ಪ್ರಸ್ತಾವವನ್ನು ತನ್ನಮುಂದೆ ಖಂಡಿತವಾಗಿಯೂ ಎತ್ತಕೂಡದೆಂದು ಕಠಿಣವಾದ 'ತಾಕೀದು' ಮಾಡಿದ್ದರಿಂದಲೂ, ಮತ್ತು ಹಬ್ಬಕ್ಕೆ ಉಡುಗೊರೆಯಾಗಿ ಕೊಟ್ಟಿದ್ದ ಕೈ ಗಡಿಯಾರವನ್ನು ಸಹ ಉಪಯೋಗಿಸದೆ ಒಂದುಕಡೆ ಇಟ್ಟುಬಿಟ್ಟದ್ದರಿಂದಲೂ ಜಯಮ್ಮನು ಖಿನ್ನಮನಸ್ಕಳಾಗುತ್ತಿದ್ದಳು. ಆದಾಗ್ಯೂ ಅವಳು ಎಂದಿನಂತೆಯೇ ಗಂಡನಲ್ಲಿ ಪ್ರೀತಿಯಿಟ್ಟುಕೊಂಡು ಅವನ ಇಷ್ಟಾನುಸಾರವಾಗಿ ನಡೆದುಕೊಳ್ಳುತ್ತಿದ್ದಳು. ಹೀಗೆಯೇ ಕೆಲಕಾಲ ಕಳೆಯಿತು. ಈ ಮಧ್ಯೆ ಅವಳಿಗೊಂದು ಹೆಣ್ಣು ಮಗುವಾಯಿತು.

ಶಾಮಣ್ಣನವರು ಒಂದೆರಡುಸಾರಿ ಅಶ್ವತ್ಥನಿಗೆ ವಿಮೆ ಮಾಡುವಂತೆ ಸೂಚಿಸಿದರು. ಅಶ್ವತ್ಥ ಅವರ ಮಾತನ್ನು ಲಕ್ಷಿಸಲಿಲ್ಲ. "ನಾನೇಕೆ ವಿಮೆ ಮಾಡಬೇಕು? ಅದೇ ಹಣವನ್ನು ಆರ್ಬತ್ನಾಟು ಕಂಪನಿಯಲ್ಲಿ ಹಾಕಿದರೆ ಎಷ್ಟೋ ಮೇಲು. ಪುಷ್ಕಳವಾಗಿ ಬಡ್ಡಿ ದೊರೆಯುತ್ತದೆ. ನನ್ನ ಹಣವನ್ನು ಅಲ್ಲಿಯೇ ಇಡುತ್ತೇನಲ್ಲದೆ ನಾನೆಂದಿಗೂ ವಿಮೆ ಮಾಡುವುದಿಲ್ಲ. ಇನ್ನುಮೇಲೆ ಅದರ ಪ್ರಸ್ತಾವವನ್ನು ನನ್ನೊಂದಿಗೆ ಯಾರೂ ಎತ್ತಕೂಡದು." ಎಂದು ಒರಟೊರಟಾಗಿ ಹೇಳಿಬಿಟ್ಟ. ಶಾಮಣ್ಣನವರಿಗೆ ಬೇರೆ ಉಪಾಯವಿಲ್ಲದೆ ಸುಮ್ಮನಾಗಬೇಕಾಯಿತು.

ಒಂದು ಕ್ರಿಸ್ಮಸ್ ರಜಾದಲ್ಲಿ ಶಾಮಣ್ಣನವರು ಮದರಾಸಿಗೆ ಬಂದು ಜಯಮ್ಮನನ್ನು ನೋಡಿದರು. ಜಯಮ್ಮ ಕೃಶಳಾಗಿದ್ದಳು. ಅವರಿಗೂ ಅಶ್ವತ್ಥನ ಅನಾದರಣೆಯ ವಿಷಯ ಸ್ವಲ್ಪ ಸ್ವಲ್ಪ ಗೊತ್ತಿತ್ತು.

"ಏನು ಜಯಮ್ಮ! ಏಕೆ ಸಪ್ಪಗಿದ್ದೀಯೆ? ಈಗ ಅತ್ತು ಕಣ್ಣೊರಸಿಕೊಂಡಂತೆ ಇದೆ. ಪುನಃ ಅಶ್ವತ್ಥನ ಅಲಕ್ಷ್ಯವೋ? ಅವನೆಲ್ಲಿ ಮನೆಯಲ್ಲಿಲ್ಲವೋ?"

"ಈ ನಡುವೆ ಅವರಾಯಿತು. ಅವರ ಆಫೀಸಾಯಿತು. ಬೆಳಿಗ್ಗೆ ಸಹ ಮನೆಯಲ್ಲಿರುವುದಿಲ್ಲ. ಎಲ್ಲೆಲ್ಲಿಯೋ ತಿರುಗಾಡುವುದಕ್ಕೆ ಹೊರಟುಬಿಡುತ್ತಾರೆ. ಮನೆಯಲ್ಲಿರುವುದೇ ಅಪರೂಪ. ರಾತ್ರಿ ಎಷ್ಟೋ ಹೊತ್ತಾದಮೇಲೆ ಮನೆಗೆ ಬರುತ್ತಾರೆ."

"ಏನು ಅಂಥಾ ಕೊಳ್ಳೇ ಹೋಗುವ ಭಾರೀಕೆಲಸ ಆಫೀಸಿನಲ್ಲಿ? ಬೆಳಗಿನಹೊತ್ತು ಮನೆಯಲ್ಲಿಲ್ಲದೆ ಎಲ್ಲಿ ಹೋಗುತ್ತಾನೆ? ರಾತ್ರಿ ಹೊತ್ತುಮಾಡಿಕೊಂಡು ಬರುವುದೇಕೆ?"

"ಇವರ ಹಣವನ್ನೆಲ್ಲ ಲೇವಾದೇವಿ ಮಾಡುತ್ತಾರೆ. ಕೆಲವು ವರ್ತಕರಿಗೂ ದಳ್ಳಾಳಿಗಳಿಗೂ ಬಡ್ಡಿಗೆ ಕೊಟ್ಟಿದ್ದಾರೆ. ಎಲ್ಲಾ ಲೆಕ್ಕಾಚಾರವೂ ಆರ್ಬತ್ನಾಟು ಕಂಪನಿಯಲ್ಲಿ ಮಾಡುತ್ತಾರೆ. ಈ ಕೆಲಸದ ಧಾವಂತದಲ್ಲಿ ಅವರಿಗೆ ಬಿಡುವೇ ಇಲ್ಲ. ಮನೆಯಲ್ಲಿದ್ದ ಸ್ವಲ್ಪ ಹೊತ್ತೂ ಉರಿಯುತ್ತಲೂ ಸಿಡಿಯುತ್ತಲೂ ಇರುತ್ತಾರೆ."

"ಆರ್ಬತ್ನಾಟು ಕಂಪನಿಯವರು ಈಸಾರಿ ಭಾರೀ ಡಿವಿಡೆಂಡು ಹಂಚುತ್ತಾರಂತಲ್ಲಾ?"

"ಇರಬಹುದು. ಭಾರೀ ವರಮಾನವೇ ಬರಬಹುದು. ಬಂದದ್ದನ್ನೆಲ್ಲಾ ಇವರು ಪುನಃ ಅದೇ ಕಂಪನೀಗೆ ಜಮಾ ಕಟ್ಟಿಬಿಡುತ್ತಾರೆ ಹಣ ಹೆಚ್ಚಾಗಿಟ್ಟಷ್ಟೂ ಹೆಚ್ಚು ಹೆಚ್ಚು ಬಡ್ಡಿ ಗಿಟ್ಟುತ್ತದಂತೆ. ಹತ್ತು ಹನ್ನೆರಡು ವರುಷಗಳಲ್ಲಿ ಒಂದಕ್ಕೆ ನಾಲ್ಕರಷ್ಟು ಹಣ ಕೊಡುತ್ತಾರಂತೆ."

"ಏನೋ ಅಮ್ಮಾ! ಏನಾದರೂ ಮಾಡಿಕೊಳ್ಳಲಿ. ಸಧ್ಯ ನೀವು ನೀವು ಸುಖವಾಗಿದ್ದರೆ ಸಾಕು. ನಿಮ್ಮ ಬಂಗಲೆಯ ಬಾಡಿಗೆ ವಸೂಲಾಗಿದೆ, ತಂದಿದ್ದೇನೆ"

"ಇನ್ನುಮೇಲೆ ಬಾಡಿಗೆ ಹಣದ ವಿಷಯ ಅವರೊಂದಿಗೆ ಪ್ರಸ್ತಾವ ಮಾಡಕೂಡದಂತೆ. ನಾನೇ ಬೇಕಾದ್ದು ಮಾಡಿಕೊಳ್ಳಬೇಕಂತೆ."

"ಏನು ಮಾಡಬೇಕೆನ್ನುತ್ತೀಯೆ?"

"ನೀನೇ ಏನಾದರೂ ಮಾಡು, ಮಾವ ನಮ್ಮ ಲಲಿತೆಯ ಮದುವೇ ಹೊತ್ತಿಗೆ ಏನಾದರೂ ಕೈಗೆ ಬರುವ ಹಾಗೆ ಮಾಡು."

"ಈ ಪರದೇಶೀ ಕಂಪನಿಗಳಲ್ಲಿ ನನಗೆ ವಿಶ್ವಾಸವಿಲ್ಲ. ನಮ್ಮ ದೇಶದಲ್ಲಿಯೇ ಈಗೊಂದು ಇನ್ಷೂರೆನ್ಸ್ ಕಂಪನಿ ಸ್ಥಾಪಿತವಾಗಿದೆ. ಈ ಬಾಡಿಗೆಯ ಹಣವನ್ನು ಕಟ್ಟಿ ಅದರಲ್ಲ ವಿಮೆ ಮಾಡಿಬಿಟ್ಟರೆ ಇನ್ನು ಹನ್ನೆರಡು ವರುಷಗಳ ನಂತರ ಒಟ್ಟಾಗಿ ಹಣ ಬರುತ್ತೆ. ಅಂತೂ ಮದುವೆಯ ಹೊತ್ತಿಗೆ ಒದಗುತ್ತದೆ."

ಜಯಮ್ಮ ಶಾಮಣ್ಣನವರ ಮಾತಿಗೆ ಒಪ್ಪಿಕೊಂಡಳು. ಅಶ್ವತ್ಥನ ಕಿವಿಗೂ ಹಾಕಿದ್ದಾಯಿತು. "ಏನಾದರೂ ಮಾಡಿಕೊಳ್ಳಿರಿ. ಪುನಃ ಆ ಬಾಡಿಗೆ ಸುದ್ದಿ ನನ್ನಲ್ಲಿ ತ್ತಿದರೆ ಜೋಕೆ!" ಎಂದು ಹೇಳಿ ಅಶ್ವತ್ಥ ಆಫೀಸಿಗೆ ನಡೆದುಬಿಟ್ಟ.

ಹನ್ನೆರಡು ವರ್ಷಕ್ಕೆ ಹಣ ಒದಗುವಂತೆ ವಿಮೆ ಮಾಡಿದ್ದಾಯಿತು. ಪ್ರತಿ ತಿಂಗಳಲ್ಲೂ ಬಂದ ಬಾಡಿಗೆ ಹಣವನ್ನು ಅದಕ್ಕೆ ಕಟ್ಟುವಂತೆ ಏರ್ಪಾಡೂ ಆಯಿತು.

ಮೇಲಿನ ಸಂಗತಿಗಳು ನಡೆದು ಹತ್ತು ಹನ್ನೆರಡು ವರ್ಷಗಳಾದವು. ಈ ಮಧ್ಯೆ ಅಶ್ವತ್ಥನ ಸಂಬಳ ಇನ್ನೂರೈವತ್ತುವರೆಗೂ ಏರಿತು. ಸಂಬಳ ಹೆಚ್ಚಿದಂತೆ ಅವನ ಗರ್ವವೂ ವೃದ್ಧಿಯಾಯಿತು. ಮನೆಯಲ್ಲಿ ಅನಾದರಣೆಯೂ ಕಠೋರವಾಕ್ಕೂ ಹೆಚ್ಚಾದವು. ಲಲಿತೆಯ ಹೊರತು ಬೇರೆ ಮಕ್ಕಳಾಗಲಿಲ್ಲ. ಮನೆಯ ವೆಚ್ಚ ಒಂದೇ ಸಮನಾಗಿ ಮಿತವಾಗಿಯೇ ಇತ್ತು. ಪ್ರತಿ ತಿಂಗಳಲ್ಲಿಯೂ ಸುಮಾರು ನೂರಿಪ್ಪತ್ತು ರೂಪಾಯಿ ಮಿಗುತ್ತಿತ್ತು. ಎಲ್ಲಾ ಹಣವನ್ನೂ ಅಶ್ವತ್ಥ ಅರ್ಬತ್ನಾಟು ಕಂಪನಿಯಲ್ಲಿಯೇ ಠೇವಣಾತಿ ಇಡುತ್ತಿದ್ದನು. ಹನ್ನೆರಡು ವರ್ಷಗಳಲ್ಲಿ ಒಂದಕ್ಕೆ ನಾಲ್ಕರಷ್ಟು ಹಣ ಬರಬಹುದೆಂದು ನಿರೀಕ್ಷಣೆ ಇತ್ತು. ಕನಿಷ್ಟಪಕ್ಷ ಮೂವತ್ತಾರು ಸಾವಿರ ರೂಪಾಯಿಗಳಾದರೂ ಬರಬಹುದೆಂದು ಅವನ ನಂಬಿಕೆ ಇತ್ತು. ಮದರಾಸಿನಲ್ಲಿ ಒಳ್ಳೇ ಬಂಗಲೆಯನ್ನು ಕಟ್ಟಿಸಿ ಅದರಲ್ಲಿ ಲಲಿತೆಯ ಮದುವೆಯನ್ನು ಅತ್ಯಂತ ವಿಜೃಂಭಣೆಯಿಂದ ಜರುಗಿಸಬೇಕೆಂದು ಅವನ ಮನಸ್ಸಿನಲ್ಲಿತ್ತು. ಬಾಯಿಂದಲೂ ಜಂಬ ಕೊಚ್ಚುತ್ತಿದ್ದನು.

ಲಲಿತೆ ಮದುವೆಗೆ ನೆರೆದು ನಿಂತಿದ್ದಳು. ಒಂದು ಸೋಮವಾರ ಪ್ರಾತಃಕಾಲ ಅಶ್ವತ್ಥ ಹೊರಗಡೆ ವಾಕಿಂಗ್ ಹೋಗುತ್ತಿದ್ದ. ಜನಗಳ ಗುಂಪು ಸೇರಿತ್ತು. ಗದ್ದಲವೋ ಗದ್ದಲ! ಏನೆಂದು ವಿಚಾರಿಸಲಾಗಿ ಅರ್ಬತ್ನಾಟ್ ಕಂಪನಿ ದಿವಾಳಿಯಾಯಿತೆಂದು ಎದೆಯೊಡೆಯುವ ಸುದ್ದಿ ತಿಳಿ ಬಂತು. ಈ ಕೆಟ್ಟ ಸುದ್ದಿಯನ್ನು ಅವನು ಏಕಾಏಕಿ ನಂಬಲಿಲ್ಲ. ತಕ್ಷಣ ಆ ಆಫೀಸಿನ ದಾರಿ ಹಿಡಿದನು. ಅದು ಯಾವಾಗಲೂ ತೆರೆದಿದ್ದು ಬಾಗಿಲಿನಲ್ಲಿ ಕಾವಲುಗಾರ ಇರುತ್ತಿದ್ದ. ಈ ದಿನ ಕದಗಳಿಗೆ ಭದ್ರವಾಗಿ ಬೀಗ ಮುದ್ರೆ ಬಿದ್ದಿದೆ. ಕಂಪೆನಿ ಮುಚ್ಚಿತೆಂದು ದೊಡ್ಡದಾಗಿ ಒಂದು ನೋಟೀಸು ಹಾಕಿತ್ತು. ಅದರ ಸುತ್ತಲೂ ಜನಸಮೂಹ! ಅನೇಕ ಹುದ್ದೇದಾರರೂ, ನೌಕರರೂ ಕೂಡ ಬಂದು ಸೇರಿದ್ದರು. ಅವರೆಲ್ಲರೂ ದುರದೃಷ್ಟವಂತರು. ಯಾವತ್ತೂ ಆಸ್ತಿಯನ್ನು ಕಳೆದುಕೊಂಡವರೇ ಆಗಿದ್ದರು. ಅತಿಶಯ ಕಷ್ಟಾರ್ಜಿತದಿಂದ ಅನೇಕ ತೊಂದರೆಗಳನ್ನನುಭವಿಸಿ, ಆಪತ್ಕಾಲದ ರಕ್ಷಣೆಗೋಸ್ಕರ ಅವನು ತ್ತಾಗಿಟ್ಟಿದ್ದ ಅಪಾರ ನಿಧಿಯನ್ನು ಅನ್ಯದೇಶೀಯ ಅರ್ಬತ್ನಾಟ್ ಕಂಪೆನಿಯವರು ಅಪಹರಿಸಿದರು. ಅನ್ಯಾಯ! ಅಪರಿಮಿತ ಅನ್ಯಾಯ!!

ಅಶ್ವತ್ಥನಿಗೆ ಮನೆಗೆ ಹೋಗುವುದಕ್ಕೆ ಕಾಲು ಬಾರದು. ಗಟ್ಟಿ ಗುಂಡಿಗೆಯಾದರೂ ಕೈಕಾಲುಗಳು ನಡುಗಹತ್ತಿದುವು. ತಲೇತಿರುಗಿ ಬೀಳುವಹಾಗಾಯ್ತು. ಅಲ್ಲಿದ್ದ ಒಂದು ಕಲ್ಲುಮೆಟ್ಟಲಮೇಲೆ ಹಾಗೆಯೇ ಕುಳಿತುಕೊಂಡನು "ಹಾಯ್! ದುರ್ದೈವವೇ, ಏನು ಬುದ್ಧಿಹೀನನು ನಾನು? ನನ್ನ ಸರ್ವಸ್ವವನ್ನೂ ಈ ಪರಕೀಯ ಕಂಪೆನಿಯ ವಶಮಾಡುವಷ್ಟು ಮೂರ್ಖತನವನ್ನೇಕೆ ಮಾಡಿದೆ? ಇತರರು ಹಿತದ ದೃಷ್ಟಿಯಿಂದ ಸಕಾಲದಲ್ಲಿ ಕೊಟ್ಟ ಎಚ್ಚರಿಕೆಯನ್ನೂ ಗ್ರಹಿಸದೆ ಮೋಸಹೋದೆನಲ್ಲಾ! ಒಂದೇ ಒಂದು ದಿನಕ್ಕೇ ನನ್ನ ಸಾಂಪತ್ತಿಕ ಸ್ಥಿತಿಯಲ್ಲಿ ಎಷ್ಟೊಂದು ವ್ಯತ್ಯಾಸವಾಗಿಹೋಯಿತು" ಎಂದು ಪೇಚಾಡಿಕೊಳ್ಳುತ್ತ ಮೆಲ್ಲಮೆಲ್ಲಗೆ ಮನೆಯದಾರಿ ಹಿಡಿದು ಹಾಗೆಯೇ ಯೋಚಿಸಿದನು. "ಈ ದ್ರವ್ಯಹಾನಿಯ ವಿಷಯ ಜಯಾಗೆ ತಿಳಿದರೆ ಎಷ್ಟು ಗಾಬರಿಯಾಗುವಳೋ? ಈ ಹೆಂಗಸಿಗೆ ದುಡ್ಡುಕಾಸಿನ ವಿಷಯ ಏನುಗೊತ್ತು? ಈಗ ನಾನು ಧೈರ್ಯವನ್ನು ತೋರಿಸಬೇಕಲ್ಲದೆ ಗಾಬರಿಯಾಗಬಾರದು."

ಅಶ್ವತ್ಥ ಪ್ರತಿದಿನ ಹತ್ತುಗಂಟೆಗೆ ಊಟಮಾಡಿ ಆಫೀಸಿಗೆ ಹೋಗುವ ವಾಡಿಕೆ. ಈ ದಿನ ಬೆಳಗ್ಗೆ ವಾಕಿಂಗ್ ಹೊರಟವನು ಹನ್ನೊಂದು ಗಂಟೆಯಾದರೂ ಮನೆಗೇ ಬರ

ಲ್ಲವಲ್ಲಾ ಎಂದು ಜಯಮ್ಮ ಗಂಡನ ನಿರೀಕ್ಷಣೆಯಲ್ಲಿ ದ್ದಳು. ಹನ್ನೊಂದೂಕಾಲು ಗಂಟೆಗೆ ಸರಿಯಾಗಿ ಅವನು ಮನೆಗೆ ಬಂದು ಸ್ನಾನಮಾಡಿ ಊಟಮಾಡಿದ. ಎಂದಿ ನಂತೆಯೇ ಇರಬೇಕೆಂದು ಅವನು ಎಷ್ಟೇ ಪ್ರಯತ್ನಿಸಿದರೂ ಅವನ ಮುಖಭಾವವು ಬದಲಾಯಿಸಿದ್ದಂತೆ ಜಯಮ್ಮನಿಗೆ ತೋರಿತು. ಊಟವಾದಮೇಲೆಯೂ ಆಫೀಸಿಗೆ ಹೊರ ಡದೆ ಮನೆಯಲ್ಲಿಯೇ ಉಳಿದ ಗಂಡನನ್ನು ನೋಡಿ ಜಯಮ್ಮ ಧೈರ್ಯಮಾಡಿ ಕೇಳಿದಳು.

"ಏನು ಈ ದಿನ ಆಫೀಸಿಗೆ ರಜವೇ ?"

"ಇನ್ನುಮೇಲೆ ಯಾವಾಗಲೂ ರಜವೇ ಸರಿ"

ಜಯಮ್ಮ ಆಶ್ಚರ್ಯದಿಂದ "ಅದೇನು?" ಎಂದಳು.

"ನಮ್ಮ ಕಂಪನಿ ಮುಳುಗಿಹೋಯಿತು. ಅದರ ಜೊತೆಗೆ ಅನೇಕ ಸಾವಿರ ಕುಟುಂಬಗಳ ಸರ್ವನಾಶವಾ ಯಿತು."

ಜಯಮ್ಮ ಆಧೈರ್ಯಪಡಲಿಲ್ಲ. ಆದರೆ ಅತಿಶಯ ಆಶ್ಚರ್ಯದಿಂದ ಮತ್ತೆ ಕೇಳಿದಳು. ಅವಳ ಮುಖದ ಮೇಲೆ ಲೇಶವಾದರೂ ಕಳವಳದ ಚಿಹ್ನೆಯಿರಲಿಲ್ಲ.

"ಹಾಗಾದರೆ ಇನ್ನುಮೇಲೆ ನೀವು ಆಫೀಸಿಗೆ ಹೋಗ ಬೇಕಾದ್ದಿಲ್ಲವೇ ?"

ಅಶ್ವತ್ಥ ನಸುನಗುವುದಕ್ಕೆ ಪ್ರಯತ್ನಿಸಿ ಕೃತಕೃತ್ಯ ನಾಗದೆ ನಿಟ್ಟುಸಿರುಬಿಟ್ಟು "ಅಷ್ಟೇ ಅಲ್ಲ........ಇದುವರೆಗೆ ನಾನು ಸಂಪಾದಿಸಿ ಕಂಪನಿಯಲ್ಲಿ ಡಿಪಾಜಿಟ್ಟು ಇಟ್ಟಿದ್ದೆ ನಲ್ಲಾ, ಅದೆಲ್ಲಾ ಹಣವೂ ಮುಳುಗಿಹೋಯಿತು....... ಇನ್ನೊಂದು ಕಾಸೂ ಬರುವಹಾಗಿಲ್ಲ." ಎಂದು ನಿಧಾನ ವಾಗಿ ತಡವರಿಸುತ್ತಾ ಹೇಳಿದ.

"ಸುಮಾರು ಎಷ್ಟಿರಬಹುದು ನಿಮ್ಮ ಸ್ವಂತಕ್ಕಾದ ನಷ್ಟ ?"

"ಬರಬೇಕಾದ ಬಡ್ಡೀಬಾಚಿ ಅಲ್ಲದೆ ಸುಮಾರು ಹನ್ನೆರಡುಸಾವಿರ ರೂಪಾಯಿಗಳು ! ನನ್ನ ಕಷ್ಟಾರ್ಜಿತ ವ್ಯರ್ಥವಾಯಿತು. ಈ ನಡುವೆ ನಮ್ಮ ಕಂಪನಿಯವರ ಆಡಳಿತ ನನಗೆ ಸ್ವಲ್ಪವೂ ಸರಿಬೀಳುತ್ತಿರಲಿಲ್ಲ. ಹೊಸ ಮ್ಯಾನೇಜರನ ಹಿಂಸೆಯೂ ಬಹಳವಾಗಿತ್ತು. ಈ ತಿಂಗಳು ಮುಗಿದಮೇಲೆ ನಾನೇ ಕೆಲಸಕ್ಕೆ ರಾಜೀನಾಮೆ ಕೊಟ್ಟು, ನನ್ನ ಡಿಪಾಜಿಟ್ಟನ್ನು ಬಡ್ಡಿ ಸಹಿತ ವಾಪಸು ಪಡೆಯಬೇ ಕೆಂದಿದ್ದೆ. ಅಷ್ಟರೊಳಗೆ ಈಗತಿ ಬಂತು.

"ಕೆಲಸ ಬಿಟ್ಟುಬಿಟ್ಟು ಏನುಮಾಡಬೇಕೆಂದಿತ್ತು ನಿಮ್ಮ ಉದ್ದೇಶ ?"

"ಮೈಸೂರಿನ ಸಮೀಪದಲ್ಲಿ ನಾನೇ ಒಂದು ಹೆಂಚಿನ ಕಾರ್ಖಾನೆಯನ್ನು ತೆಗೆಯಬೇಕೆಂದಿದ್ದೆ. ನಮ್ಮ ಕಂಪನಿ ಯವರದು ಒಂದು ಹೆಂಚಿನ ಕಾರ್ಖಾನೆ ಬೆಂಗಳೂರಲ್ಲಿತ್ತು. ನಾನು ಅಲ್ಲಿಗೆ ಆಗಾಗ್ಯೆ ಕೆಲಸದಮೇಲೆ ಹೋಗಿಬರುತ್ತಾ ಇದ್ದುದರಿಂದ ಅದನ್ನು ನಡೆಸುವ ವಿಷಯವಾಗಿ ನನಗೆ ಒಳ್ಳೇ ಮಾಹಿತಿ ಇದೆ. ಅದು ಯಥೇಷ್ಟ ಲಾಭಕಾರಿಯಾ ದದ್ದು. ಅನೇಕರಿಗೆ ಜೀವನವೂ ಜರುಗುತ್ತೆ ಆದರಿಂದ.

"ಅದಕ್ಕೆ ಎಷ್ಟು ಬಂಡವಾಳ ಬೇಕು ?"

"ಇಪ್ಪತ್ತುಸಾವಿರವಾದರೂ ಬೇಕಾಗುತ್ತೆ! ಈಗ ಕನಸಿನ ಗಂಟಾಯಿತು."

"ಹಾಗೆಯೇ ಆಗಲಿ, ಕಾರ್ಖಾನೆಯನ್ನು ಸ್ಥಾಪಿ ಸಿರಿ. ನಿಮಗೆ ಪ್ರತ್ಯಕ್ಷ ಗಂಟೇ ಸಿಕ್ಕಿದೆಯಲ್ಲಾ !"

"ನೀನೂ ನನ್ನನ್ನು ಹಾಸ್ಯಮಾಡುವಂತೆ ಆಯಿತು. ಇದು ಹಾಸ್ಯಕ್ಕೆ ಸಮಯವೇ ?"

"ಅಲ್ಲ ನಮ್ಮ ಬಂಗಲೆಯನ್ನು ಮಾರಿಬಿಡೋಣ. ಹತ್ತು ಸಾವಿರವಾದರೂ ಬರುತ್ತೆ, ಇನ್ಷ್ಯೂರೆನ್ಸಿನ ಅವ ಧಿಯೂ ಮುಗಿದು ಈ ತಿಂಗಳಲ್ಲಿಯೇ ಹನ್ನೆರಡು ಸಾವಿರ ರೂಪಾಯಿ ಕೈಗೆ ಬರುತ್ತದೆ. ಇದರಲ್ಲಿ ಲಲಿತೆಯ ಮದು ವೆಗೆ ಎರಡು ಸಾವಿರ ರೂಪಾಯಿ ತೆಗೆದಿಟ್ಟರೆ ಮಿಕ್ಕದ್ದು ನಿಮ್ಮ ಬಂಡವಾಳಕ್ಕೆ ಸರಿಹೋಗುತ್ತದೆ."

ಅಶ್ವತ್ಥ ಆಶ್ಚರ್ಯದಿಂದ ಸ್ಥಂಭೀಭೂತನಾಗಿ "ಇನ್ಷ್ಯೂರೆನ್ಸ್ ಹಣ ಯಾವದು" ಎಂದು ಕೇಳಿದ.

"ಹನ್ನೆರಡು ವರ್ಷದಿಂದ ಬಂದ ಬಂಗಲೆ ಬಾಡಿಗೆ ಯನ್ನು ಮಾವ ನನ್ನ ಹೆಸರಿನಲ್ಲಿ ಇನ್ಷ್ಯೂರೆನ್ಸ್ ಕಂಪನಿಗೆ ಕಟ್ಟುತ್ತಿದ್ದಾನೆ. ಈಗ ಅದರ ಬಾಡಿಗೆ ಅರವತ್ತು ರೂಪಾ ಯಿವರೆಗೂ ಹೆಚ್ಚಿದೆ. ಈ ತಿಂಗಳು ಆ ಹಣ ಒಟ್ಟಾಗಿ ಕೈಗೆ ಬರುತ್ತಂತೆ. ಇನ್ನುಮೇಲೆ ಕಂತುಗಳು ಕಟ್ಟಬೇಕಾ ಗಿಲ್ಲವಂತೆ.

ಅನೇಕ ವರ್ಷಗಳ ಮೇಲೆ ಅಶ್ವತ್ಥನ ಕಣ್ಣು ತೆರೆ ಯಿತು. ತನ್ನ ಹೆಂಡತಿಯ ನಿಜವಾದ ಯೋಗ್ಯತೆಯೂ, ವಿವೇಕವೂ, ಪ್ರೇಮವೂ ಮನಸ್ಸಿಗೆ ತಟ್ಟಿದುವು. ತನ್ನ ಹಿಂದಿನ ನಡತೆಯು ನೆನಪಿಗೆ ಬಂತು. ಪಶ್ಚಾತ್ತಾಪವಾ

ಯಿತು. ಗಂಟಲು ಸೆರೆಬಿಗಿದುಕೊಂಡು ಬಂದಿತು. ಕಣ್ಣುಗಳು ಹನಿಗೂಡಿದುವು. ಮಾತು ಹೊರಡದು. ಇಷ್ಟು ವರ್ಷಗಳ ತರುವಾಯ ತನ್ನ ಹೆಂಡತಿಯಮೇಲೆ ನಿಜವಾದ ಅಂತಃಕರಣವುಂಟಾಯಿತು. ಅವಳನ್ನು ತಬ್ಬಿಕೊಂಡು ಗದ್ಗದಸ್ವರದಿಂದ "ಜಯಾ! ಜಯಾ! ನೀನು ನನ್ನ ಭಾಗ್ಯದೇವತೆ! ನಿನ್ನ ಅದೃಷ್ಟದಿಂದಲೇ ನಾನು ಒಂದಿಷ್ಟು ಹಣ ಸಂಪಾದನೆ ಮಾಡಿದೆ. ಆದರೆ ಅದೇ ಧನ ಮದದಿಂದ ನಿನ್ನನ್ನು ಅನಾದರಣೆ ಮಾಡಿ ಯಾವಾಗಲೂ ಕೆಲಸ, ಕೆಲಸ ಎಂದು ಮನೇ ಸೇರದೆ ನಿನ್ನನ್ನು ಉಪೇಕ್ಷಿಸಿದೆ, ನಿಕೃಷ್ಟವಾಗಿ ನೋಡಿದೆ, ನಿನ್ನೊಂದಿಗೆ ಕಠೋರವಾಗಿ ನಡೆದುಕೊಂಡೆ. ನೀನು ಮಾತ್ರ ಒಂದೇ ಸಮನಾಗಿ ಮನೆ ಆಡಳಿತವನ್ನು ನಡೆಸಿಕೊಂಡು ಬಂದುದಲ್ಲದೆ ಒಂದು ನಿಧಿಯನ್ನೂ ಕೂಡಿಟ್ಟದ್ದೀಯೇ ನನಗೆ ಎಷ್ಟೋ ಜನರು ಇನ್ಷೂರು ಮಾಡೆಂದು ಹೇಳಿದರು, ಕೇಳಲಿಲ್ಲ. ಒಂದಕ್ಕೆ ನಾಲ್ಕರಷ್ಟು ಬಡ್ಡಿ ಸಂಪಾದಿಸಬೇಕೆಂಬ ದುರಾಶೆಯಿಂದ ಬಂದ ಸಂಪಾದನೆಯನ್ನೆಲ್ಲಾ ಈ ಪರದೇಶೀಯರ ಬಾಯಿಗೆ ಸುರಿದು ಸರ್ವಸ್ವವನ್ನೂ ಹಾಳುಮಾಡಿಕೊಂಡು ಬಿಟ್ಟೆ. ಆದಗೂ ಚಿಂತೆಯಿಲ್ಲ. ಈ ದಿನವೇ ಸುದಿನ! ಈ ದಿನವೇ ನನಗೆ ನಿಜವಾದ ಆನಂದದ ದಿನ. ಈ ದಿನ ನನ್ನ ಕಣ್ಣು ತೆರೆದ ಹಾಗಾಯಿತು. ನೀನು ನನ್ನ ಅಪರಾಧವನ್ನು ಕ್ಷಮಿಸುತ್ತೀಯಾ?"

"ಅಯ್ಯೋ! ನೀವು ಅಪರಾಧ ಮಾಡಿದ್ದೀರೆಂದು ನಾನು ತಿಳಿದುಕೊಂಡಿದ್ದರೆ ತಾನೆ. ಇದನ್ನೆಲ್ಲಾ ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಈಗ ಬಂಗಲೆ ಮಾ... ಹಣ, ಇನ್ಷೂರೆನ್ಸ್ ಹಣ ಎಲ್ಲಾ ತೆಗೆದುಕೊಂ... ಮುಂದಿನ ಏರ್ಪಾಡು ಏನು ಬೇಕೋ ಮಾಡಿಕೊಳ್ಳಿ."

"ಈಗ ಬಂಗಲೆ ಮಾರುವುದು ಬೇಕಾಗಿ... ಮೊಟ್ಟಮೊದಲು ಹತ್ತು ಸಾವಿರ ರೂಪಾಯಿನ ಬಂ... ಳವೇ ಸಾಕು. ಇದಕ್ಕೆ ಇನ್ಷೂರೆನ್ಸಿನ ಹಣವನ್ನು ... ಯೋಗಿಸಿಕೊಳ್ಳಬಹುದು. ಲಲಿತೆಯ ಮದುವೆಗೂ ... ಉಳಿಯುವುದು. ಆಪದ್ರಕ್ಷಕವಾದ ಇನ್ಷೂರೆನ್ಸಿನ ಕ... ಗಳಿಗೆ ಹಣವನ್ನೊದಗಿಸಿದ ಬಂಗಲೆಯನ್ನು ಮಾರಿಬಿ... ವುದು ಸರ್ವಥಾ ಸರಿಯಿಲ್ಲ. ಅದನ್ನು ಎಂದೆಂದಿ... ಮಾರುವುದು ಬೇಡ."

ಜಯಮ್ಮನಿಗೆ ಬಹಳ ಸಂತೋಷವಾಯಿತು. ... ಲೆಯ ಮೇಲೆ ಅವಳಿಗೆ ಅಪರಿಮಿತವಾದ ಅಭಿಮಾ... ಬಂಗಲೆಯೂ ಉಳಿಯಿತು. ಕಷ್ಟವೂ ಕಳೆಯಿ... ಕಾರ್ಖಾನೆಯೂ ಬೆಳೆಯಿತು. ಲಲಿತೆಗೆ ಯೋಗ್ಯ ಸ್ಥ... ದಲ್ಲಿ ಮದುವೆಯಾಗಿ ಅವಳ ಗಂಡನೂ ಕಾರ್ಖಾನೆಯ... ಕೆಲಸ ಮಾಡುತ್ತಿದ್ದಾನೆ. ಜಯಮ್ಮನಿಗೆ ಈಚೆಗೆ ಇಬ್ಬ... ಗಂಡುಮಕ್ಕಳು.

ಅಶ್ವತ್ಥ ಮಕ್ಕಳ ಹೆಸರಿನಲ್ಲಿ ಇಪ್ಪತ್ತೈದು ಸಾ... ರೂಪಾಯಿಗೆ ವಿಮೆ ಮಾಡಿದಾನೆ. ಅಲ್ಲದೆ ತನ್ನ ಕಾರ್ಖಾ... ನೆಯಲ್ಲಿ ಇರುವವರಿಗೆಲ್ಲಾ ಅವರವರ ಯೋಗ್ಯತಾನುಸಾ... ವಿಮೆ ಮಾಡಿಸಿದ್ದಾನೆ.








ಲೇಖಕರು :
ಶ್ರೀ|| ಸಿ. ನರಸಿಂಹಮೂರ್ತಿ,
ಎಂ. ಎ., ಅವರು
(Mr.C. Narasimha Moorthy,
M. A.)

[ಈ ಲೇಖಕರು ಮೈಸೂರು ವಿಶ್ವವಿದ್ಯಾನಿಲಯದ ಕೀರ್ತಿಯುತ ಪದವೀಧರರು. ಎಂ. ಎ. ಪರೀಕ್ಷೆಯಲ್ಲಿ ಮೊದಲನೆಯ ಸ್ಥಾನವನ್ನು ಪಡೆದುದಲ್ಲದೆ, ಅನೇಕ ಬಹುಮಾನಗಳನ್ನೂ, ಮುಖ್ಯವಾಗಿ ವೈಸ್‌ಛಾನ್‌ಸೆಲರ್ ಪದಕ (First Vice-chancellors' Medal) ವನ್ನೂ ಪಡೆದಿದ್ದಾರೆ. ಕಳೆದ ವರ್ಷ ವಿಶ್ವವಿದ್ಯಾನಿಲಯದಲ್ಲಿ ಸಂಶೋಧನ ವಿದ್ಯಾರ್ಥಿ (Research Scholar) ಯಾಗಿದ್ದು, ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯಲ್ಲಿ ದೇಶೀಯ ಸಂಸ್ಥಾನಗಳು ಸೇರುವ ಸಂದರ್ಭದಲ್ಲಿನ ಆರ್ಥಿಕ ಪ್ರಶ್ನೆಗಳನ್ನು ಕುರಿತು ವಿಶೇಷ ರೀತಿಯ ವ್ಯಾಸಂಗವನ್ನು ಮಾಡಿದರು. ಆದುದರಿಂದ ಮೈಸೂರಿನ ಪೊಗದಿಯ ವಿಚಾರವಾದ ಇವರ ಈ ಲೇಖನವು ವಿಶೇಷ ಅಧಿಕಾರಯುತವಾದ್ದೆಂದು ಹೇಳಬಹುದು. ಬೆಂಗಳೂರು ಮೈಸೂರು ಪಟ್ಟಣಗಳಲ್ಲಿನ ಗೃಹವಸತಿ ಸಮಸ್ಯೆ (Housing problem) ಯ ವಿಚಾರದಲ್ಲಿ ಸಹಾ ಇವರು ಸಂಶೋಧನೆ ಮಾಡಿದ್ದಾರೆ.]

ವಿಮಾ, ವಾಣಿಜ್ಯ, ಮತ್ತು ಕೈಗಾರಿಕೆಗಳನ್ನು ಕುರಿತ ಪ್ರಶ್ನೆಗಳ ಚರ್ಚೆಗೆ ಮೀಸಲಾಗಿರುವ ಈ ಪತ್ರಿಕೆಯಲ್ಲಿ ಮೈಸೂರು ಪೊಗದಿಯ ವಿಚಾರವಾದ ಲೇಖನವನ್ನು ಬರೆದಿರುವುದರ ಔಚಿತ್ಯವನ್ನು ಸಮರ್ಥಿಸಲು ಹೆಚ್ಚು ಹೇಳಬೇಕಾಗಿಲ್ಲ. ವಾಣಿಜ್ಯ, ಕೈಗಾರಿಕೆಗಳ ಉತ್ಕರ್ಷಕ್ಕೆ ಸಾಕಷ್ಟು ಹಣಕಾಸಿನ ಉಪಪತ್ತಿ ಬೇಕೆಂಬುದು ನಿರ್ವಿವಾದದ ಮಾತು. ಆರ್ಥಿಕ ಪ್ರಗತಿಯ ಸಾಧಕ ಬಾಧಕಗಳನ್ನು ಪರೀಕ್ಷಿಸಲು, ಹಣ ಕಾಸಿನ ಮತ್ತು ಇತರ ಸಾಧನ ಸಂಪತ್ತಿಯನ್ನು ಏರಿಳಿಸುವ ಅಂಶಗಳನ್ನು ಮುಖ್ಯವಾಗಿ ಗಮನಿಸಬೇಕು. ಇಂಡಿಯಾ ಸರ್ಕಾರಕ್ಕೆ ಮೈಸೂರು ಪ್ರತಿವರ್ಷವೂ ಸಲ್ಲಿಸುತ್ತಿರುವ ಪೊಗದಿಯು, ಮೊತ್ತದ ಆಧಿಕ್ಯ ಮತ್ತು ಇರವಿನ ಅನ್ಯಾಯದಿಂದ, ಮೈಸೂರು ಸಂಸ್ಥಾನದ ಬಡ ಆದಾಯದಲ್ಲಿ ದೊಡ್ಡ ಕೋಡಿಯಾಗಿ ಪರಿಣಮಿಸಿ, ಅದರ ಆರ್ಥಿಕ ಪ್ರಗತಿಗೆ ಅಡಚಣೆಯಾಗಿದೆ. ಈ ವಿಚಾರವಾಗಿ ಕೇವಲ ನಿಷ್ಪಕ್ಷಪಾತ ದೃಷ್ಟಿಯಿಂದ ಇಲ್ಲಿ ಎರಡು ಮಾತು ಹೇಳುವುದು ಅನುಚಿತವಲ್ಲ.

### ಐತಿಹಾಸಿಕ ಸಮಾಲೋಚನೆ

ಪೊಗದಿಯ ಜನ್ಮಕಾಲವು ಹದಿನೆಂಟನೆಯ ಶತಮಾನದ ಅಂತ್ಯ ಭಾಗ; ದೇಶದ ಶಾಂತಿಯು ಸಂತತವಾಗಿ ಆಪಾಯದಲ್ಲಿರುತ್ತಿದ್ದ ದಿನಗಳು. ಟಪ್ಪೂ ಸುಲ್ತಾನನ ಸೋಲು, ಸಾವುಗಳು ಆಗಿ, ಮೈಸೂರು ರಾಜ್ಯವು ಒಡೆಯರ ಪ್ರಭುತ್ವಕ್ಕೆ ಹಿಂದಿರುಗಿದ್ದ ಆ ಕಾಲದಲ್ಲಿ, ಹಿಂದೂಸ್ಥಾನ ಸಾಮ್ರಾಜ್ಯ ಸ್ಥಾಪನೆಯ ಉದ್ಯಮವು ಫ್ರೆಂಚರಲ್ಲಿ ಇನ್ನೂ ತಣ್ಣಗಾಗಿರಲಿಲ್ಲ. ಮೈಸೂರು ಸಂಸ್ಥಾನದ ಉತ್ತರ ಸರಹದ್ದಿನ ವರೆಗೂ ವ್ಯಾಪಿಸಿದ್ದ ಮರಾಟರ ಬಲವೂ ಮಹತ್ತೂ ದಿನ ದಿನಕ್ಕೂ ವೃದ್ಧಿಗೊಳ್ಳುತ್ತಲಿದ್ದುವು. ಲಾರ್ಡ್ ಇರ್ವಿನ್ (ಈಗ ಲಾರ್ಡ್ ಹ್ಯಾಲಿಫಾಕ್ಸ್) ರವರು ಹೇಳಿರುವಂತೆ "ಮೈಸೂರಿನ ಹೆಬ್ಬಾಗಿಲನ್ನು ವಿಪತ್ತುಗಳು ತಟ್ಟುತ್ತಿದ್ದುವು." ಆ ಸಂದರ್ಭಗಳಲ್ಲಿ. ಸಂಸ್ಥಾನದ ಆಂತರಿಕ ಶಾಂತಿಗೂ, ಪರಕೀಯರ ದಾಳಿಯಿಂದ ರಕ್ಷಣೆಗೂ ಬ್ರಿಟಿಷ್ ಸಬ್ಸಿಡಿಯರಿ ಸೈನ್ಯದ ಆವಶ್ಯಕತೆಯುಂಟಾಯಿತು. ಮೈಸೂರು ಮಹಾರಾಜರ ಪ್ರಾಂತ್ಯಗಳ ರಕ್ಷಣೆ ಮತ್ತು ಭದ್ರತೆಗಳಿಗಾಗಿ ಬ್ರಿಟಿಷ್ ಮಿಲಿಟರಿ ದಳವೊಂದು ಸ್ಥಾಪಿತವಾಗಬೇಕೆಂದೂ ಅದಕ್ಕೆ ಪ್ರತಿಫಲವಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ಏಳು ಲಕ್ಷ ಸ್ಟಾರ್ ಪಗೋಡಾಗಳನ್ನು (ಈಗಿನ ನಾಣ್ಯಗಳಲ್ಲಿ ೨೪|| ಲಕ್ಷ ರೂಪಾಯಿಗಳು) ಪ್ರತಿ ವರ್ಷವೂ ಈಸ್ಟ್ ಇಂಡಿಯಾ ಕಂಪೆನಿಗೆ ಕೊಡಬೇಕೆಂದೂ, ೧೭೯೯ನೇ ಇಸ್ವಿಯ ಸಬ್ಸಿಡಿಯರಿ ಒಪ್ಪಂದ (Subsidiary Treaty of 1799) ದ ಎರಡನೇ ಸೂತ್ರದಲ್ಲಿ ಅಡಕವಾಯಿತು. ಆಗಿನ ಕಾಲದ ಮೈಸೂರು ದೇಶದ ವರಮಾನದಲ್ಲಿ ಈ ಪೊಗದಿಯು ಶೇಕಡಾ ೪೪ರಷ್ಟು ಭಾಗ.

ಇದಲ್ಲದೆ ಮಹಾರಾಜರು ೧೮೦೭ ನೇ ಇಸ್ವಿಯ ಒಪ್ಪಂದದಂತೆ ಕುದುರೆ ದಳವೊಂದನ್ನು ಇಟ್ಟುಕೊಂಡು ಪೋಷಿಸಬೇಕೆಂಬ ಒತ್ತಾಯವಿತ್ತು. ೧೮೮೧ ರಲ್ಲಿ, ಐವತ್ತು ವರ್ಷ ಬ್ರಿಟಿಷರ ಆಳ್ವಿಕೆಯ ತರುವಾಯ ಸಂಸ್ಥಾನದ ರಾಜ್ಯಭಾರವು ಶ್ರೀ ಚಾಮರಾಜ ಒಡೆಯರಿಗೆ ವಹಿಸಲ್ಪಟ್ಟಾಗ ಈ ಒತ್ತಾಯವನ್ನು ತೆಗೆದುಹಾಕಲಾಗಿ ಅದಕ್ಕೆ ಪ್ರತಿಯಾಗಿ ಮೂಲ ಮೊತ್ತಕ್ಕೆ ೧೦|| ಲಕ್ಷ ಸೇರಿಸಿ ಪೊಗದಿಯನ್ನು ೩೫ ಲಕ್ಷ ರೂಪಾಯಿಗಳಿಗೆ ಹೆಚ್ಚಿಸಲಾಯಿತು. ಆದರೆ ೧೮೭೭-೭೮ ನೇ ಸಾಲಿನ ಕ್ಷಾಮದಿಂದ ಸಂಸ್ಥಾನದ ಆದಾಯ ಬಹಳ ಕ್ಷೀಣವಾಗಿದ್ದ ಕಾರಣ, ಹೊಸದಾಗಿ ಹೆಚ್ಚಿಸಲ್ಪಟ್ಟ ೧೦|| ಲಕ್ಷ ರೂಪಾಯಿಗಳನ್ನು ಹದಿನೈದು ವರ್ಷಗಳು, ಎಂದರೆ ೧೮೯೬ ನೇ ಇಸವಿಯವರೆಗೂ ವಸೂಲುಮಾಡದೆ ತಡೆಯಲಾಯಿತು. ಅಲ್ಲಿಂದ ಮುಂದೆ ಮೂವತ್ತೆರಡು ವರ್ಷಗಳ ಕಾಲ, ಅಂದರೆ ೧೮೯೬ ರಿಂದ ೧೯೨೮ರ ವರೆವಿಗೂ, ಸಂವತ್ಸರಕ್ಕೆ ೩೫ ಲಕ್ಷ ರೂಪಾಯಿಗಳಂತೆ ಪೊಗದಿಯು ಮೈಸೂರು ಸಂಸ್ಥಾನದ ಕೈಬಿಟ್ಟು ಹೋಯಿತು. ಈ ಕಾಲದಲ್ಲಿ ಅದನ್ನು ಕಡಿಮೆಮಾಡಿಸಲು ಪಟ್ಟ ಪ್ರಯತ್ನಗಳೆಲ್ಲಾ ವಿಫಲವಾದವು.

ಘನಹೊಂದಿದ ಲಾರ್ಡ್ ಇರ್ವಿನ್ನರು, ಹಿಂದೂಸ್ಥಾನದ ವೈಸ್ರಾಯರಾಗಿದ್ದಾಗ, ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳಂತೆಯೇ, ದೇಶೀಯಸಂಸ್ಥಾನಗಳೂ ಕೂಡಾ, ತಮ್ಮನ್ನು ನಂಬಿದ್ದ ಲಕ್ಷಾಂತರ ಪ್ರಜೆಗಳ ಹಿತಸಾಧನೆಗಾಗಿ ಮುಖ್ಯ ಕಾರ್ಯಗಳನ್ನು ಮಾಡಬೇಕೆಂದೂ, ಅದಕ್ಕಾಗಿ ಅವುಗಳಿಗೆ ಹಣದ ಆವಶ್ಯಕತೆಯಿದೆಯೆಂದೂ ಒಪ್ಪಿಕೊಂಡರು. ಈ ಯೋಜನೆಯಿಂದಲೂ, ಇತರ ಕಾರಣಗಳಿಂದಲೂ ಪ್ರೇರಿತರಾದ ಆ ಘನ ವೈಸ್ರಾಯರು ೧೯೨೭ ರಲ್ಲಿ ಮೈಸೂರಿಗೆ ದಯಮಾಡಿಸಿದಾಗ ಸಂಸ್ಥಾನದ ಪೊಗದಿಯಲ್ಲಿ ೧೦|| ಲಕ್ಷ ರೂಪಾಯಿಗಳನ್ನು ಶಾಶ್ವತವಾಗಿ ಕಡಿಮೆಮಾಡಿರುವುದಾಗಿ ಸಾರಿದರು.

ಪೊಗದಿಯನ್ನು ನಿರ್ಮೂಲಗೊಳಿಸಲು ಹೊಡೆದಾಡುವುದು ಇತ್ತೀಚಿನ ಹೊಸ ಕಾರ್ಯಕ್ರಮವಲ್ಲ. ಹುಟ್ಟಿದಂದಿನಿಂದಲೇ ಸಂಪೂರ್ಣ ಉತ್ಪಾಟನೆಗಲ್ಲದಿದ್ದರೂ, ಆದರ ಮೊತ್ತವನ್ನು ಇಳಿಸುವುದಕ್ಕಾಗಿ, ಪ್ರಯತ್ನ ನಡೆದಿದೆ. ಒಂದು ಶತಮಾನದ ಕಾಲದ ಬೇಡಿಕೆ, ವಿಜ್ಞಪ್ತಿಗಳ ಫಲವಾಗಿ ಈಗ ಪೊಗದಿ ಮೊಬಲಗು, ಮೊದಲ ಅಂದರೆ ೧೮೯೬ ರಲ್ಲಿದ್ದ ಮೊತ್ತಕ್ಕೆ ಇಳಿದಿದೆ. ದಿವಾನ್ ಪದವಿಗೆ ಬಂದಾರಭ್ಯ, ಸರ್ [illegible] ಇಸ್ಮಯಿಲ್ ರವರು ಪೊಗದಿಯನ್ನು ತೆಗೆದು ಹಾಕಿಸಲು ಸತತ[illegible] ಶ್ರಮಿಸಿದ್ದಾರೆ. ಅವರ ದೃಢವಾದ ವಾದಕ್ಕೂ, ವಿಚಾ[illegible] ಸಂತ್ಯಾಂಶಕ್ಕೂ ಅರ್ಹವಾದ ಯಶಸ್ಸು ಇನ್ನೂ ದೊರೆ[illegible]ದಿರುವುದು ಶೋಚನೀಯವಾದ ವಿಷಯ.

## ಪೊಗದಿಯನ್ನು ತೊಡೆದುಹಾಕುವ ಪಕ್ಷದ ಪ್ರತಿಪಾದನೆ

ಪೊಗದಿಯನ್ನು ನಿರ್ಮೂಲಗೊಳಿಸಲು ಅನೇಕ [illegible]ವಾದ ವಾದವನ್ನು ಹೂಡಬಹುದು. ಈ ಸಣ್ಣ [illegible]ದಲ್ಲಿ ಅವೆಲ್ಲವನ್ನೂ ವಿಮರ್ಶೆ ಮಾಡಲು ಸಾಧ್ಯ[illegible] ಪೊಗದಿಯ ಉತ್ಪಾಟನೆಯ ಆವಶ್ಯಕತೆಯನ್ನು ಸಾಧಿಸ[illegible] ಈ ಕೆಳಗೆ ಹೇಳಿರುವ ನಾಲ್ಕು ಕಾರಣಗಳು ಸಾಕು.

(೧) ೧೭೯೯ನೇ ಇಸ್ವಿಯ ಸಬ್ಸಿಡಿಯರಿ ಒಪ್ಪಂ[illegible]೯ನೇ ಸೂತ್ರದಲ್ಲಿ ಪೊಗದಿಯ ಹುಟ್ಟುವಿಕೆಗೆ ಕಾರ[illegible]ಳನ್ನು ನಮೂದಿಸಿದೆ. ಆದರ ಪ್ರಕಾರ, ಆಗ "ಮೈಸ[illegible] ಕೃಷ್ಣರಾಜರನ್ನು ರಾಜ್ಯಾಡಳಿತದಲ್ಲಿ ಭದ್ರವಾಗಿ ಕೂರಿಸ[illegible] ಅವರ ಸಹಾಯಕ್ಕೆ ಸರಿಯಾದ ಸಬ್ಸಿಡಿಯರಿ ದಳ ಅಗತ್ಯ[illegible]ವೆಂದು ತೋರಿಬಂದಿತು. ಶ್ರೀಮನ್ಮಹಾರಾಜರ ಸಿಂಹಾ[illegible]ವನ್ನು ದೃಢವಾಗಿ ಭದ್ರಗೊಳಿಸುವ ಆವಶ್ಯಕತೆ ಇನ್ನ[illegible] ಇದೆಯೆಂದು ಹೇಳಲಾದೀತೆ! ಲಾರ್ಡ್ ಇರ್ವಿನ್ನರು ಸೂ[illegible]ಸಿದ್ದ "ಮೈಸೂರ ಹೆಬ್ಬಾಗಿಲನ್ನು ಸದಾ ತಟ್ಟುತ್ತಿ[illegible] ವಿಪ್ಪತ್ತು"ಗಳು ಅದೃಶ್ಯವಾಗಿರುವ ಈ ಕಾಲದಲ್ಲೂ ಮೊ[illegible]ಲಿನಂತೆ ಪೊಗದಿ ವಸೂಲುಮಾಡುವುದನ್ನು ತರ್ಕಪೂರ್[illegible]ವಾಗಿ ಸಮರ್ಥಿಸಲಾಗುವುದಿಲ್ಲ.

(೨) ಮೈಸೂರೂ ಸಹಾ, ಹಿಂದೂಸ್ಥಾನದ ಇತ[illegible] ಭಾಗಗಳಂತೆಯೇ ಇಂಡಿಯಾ ಸರ್ಕಾರದವರ ಪರೋ[illegible] ತೆರಿಗೆ (Indirect Taxation) ಯನ್ನು ಹೊರುತ್ತಿ[illegible] ಸಾಮ್ರಾಜ್ಯಾಡಳಿತ ಮತ್ತು ದೇಶರಕ್ಷಣೆ (Imperi[illegible] Services and Defence) ಗಳ ಮೂಲಕ ಮೈಸ[illegible]ರಿಗೆ ಉಂಟಾಗುತ್ತಿರುವ ಪ್ರಯೋಜನದ ಬೆಲೆಗೆ ಮಿಗಿ[illegible]ಗಿಯೇ ಸುಂಕ, ತೆರಿಗೆ, ಉಪ್ಪಿನ ತೆರಿಗೆ, ಪೆಟ್ರೋಲ್, ಸೀಮೆ[illegible]ಯೆಣ್ಣೆ, ಬೆಳ್ಳಿ ಮತ್ತು ಸಕ್ಕರೆ ಇವುಗಳ ಮೇಲಿನ ಸುಂ[illegible] (Excise duties) ಮತ್ತು ನಾಣ್ಯ ನೋಟುಗಳ ಚಲ[illegible]ವಣೆಗಳ ಮೇಲಿನ ನಫೆ (Currency and coinage profits) ಇವುಗಳ ಮೂಲಕ ಮೈಸೂರು ಪ್ರಜೆಗಳು ಇಂಡಿಯಾ ಸರ್ಕಾರಕ್ಕೆ ಹಣ ತೆರುತ್ತಿದ್ದಾರೆ. ಇದರಮೇ[illegible] ಪೊಗದಿ ಸಹಾ ಕೊಡುವುದು ಸಂಸ್ಥಾನಕ್ಕೆ ಹೆಚ್ಚಿನ ಹೊ[illegible]

(೩) ಹಿಂದೂಸ್ಥಾನದ ಒಟ್ಟು ೫೬೨ ದೇಶೀಯ ಸಂಸ್ಥಾನಗಳಲ್ಲಿ ಸುಮಾರು ೨೦೦ ಮಾತ್ರ ಇಂಡಿಯಾ ಸರಕಾರಕ್ಕೆ ಬೇರೆಬೇರೆ ಮೊತ್ತದ ಹಣರೂಪ ಕಪ್ಪಗಳನ್ನು ಕೊಡುತ್ತಿವೆ. ಇವುಗಳಲ್ಲಿ ಅತಿ ಹೆಚ್ಚಿನ ಪೊಗದಿಯನ್ನು ಕೊಡುವ ಅನಸೂಯಾಜನಕ ಹಕ್ಕು ಮೈಸೂರಿಗಿದೆ. ಇಂಡಿಯಾ ಸರ್ಕಾರಕ್ಕೆ ಬರುವ ಒಟ್ಟು ಪೊಗದಿ ಹಣದಲ್ಲಿ ಶೇಕಡಾ ೩೭|| ಭಾಗ ಮೈಸೂರು ಒಂದೇ ಕೊಡುವುದು; ಉಳಿದ ೬೨|| ಭಾಗ ಉಳಿದ ಸಂಸ್ಥಾನಗಳೆಲ್ಲಾ ಸೇರಿ ಕೊಡುವುವು. ಈ ರೀತಿ ಮೈಸೂರಿನ ಪೊಗದಿ ಅತ್ಯಧಿಕ ಮಾತ್ರವಲ್ಲದೆ ವ್ಯಕ್ತಿವಿಶೇಷವಾಗಿಯೂ ಇದೆ. ಪೊಗದಿಯನ್ನು ನಿರ್ಣಯಿಸಿರುವುದರಲ್ಲಿ ಒಂದು ಕ್ರಮವಿಲ್ಲ, ನ್ಯಾಯವಿಲ್ಲ, ಸಮೀಕರಣವಿಲ್ಲ ಎಂಬ ಡೇವಿಡ್‌ಸರ್ ಕಮಿಟಿಯವರ ಹೇಳಿಕೆಗೆ ಮೈಸೂರು ಒಳ್ಳೆಯ ಉದಾಹರಣೆಯಾಗಿದೆ. ಈ ಸಂದರ್ಭದಲ್ಲಿ ಇನ್ನೊಂದು ವಿಚಿತ್ರ ವಿಷಯವನ್ನು ಇಲ್ಲಿ ಹೇಳಬಹುದು. ಪಶ್ಚಿಮ ಇಂಡಿಯಾ ಸಂಸ್ಥಾನಗಳ ಏಜೆನ್ಸಿಗೆ ಸೇರಿದ ರಾಣಾಸಾನ್ ಸಂಸ್ಥಾನವು ಇಂಡಿಯಾ ಸರ್ಕಾರಕ್ಕೆ ಕೊಡುವ ಹಣ ಕಾಣಿಕೆ, ವರ್ಷಕ್ಕೆ ಮೂರು ರೂಪಾಯಿಗಳು! ಕಾಶ್ಮೀರ ಸಂಸ್ಥಾನಾಧಿಪತಿಯು ಕೊಡುವ ಕಪ್ಪ ವರ್ಷಕ್ಕೆ ಎರಡು ಕಾಶ್ಮೀರ ಶಾಲುಗಳು ಮತ್ತು ಮೂರು ರುಮಾಲುಗಳು!

(೪) ಮೈಸೂರಿನ ಈ ಭಾರಿ ಹೊರೆಯು ಸರ್ಕಾರ ಆರ್ಥಿಕ ಸ್ಥಿತಿಯನ್ನು ಬಹಳಮಟ್ಟಿಗೆ ಕ್ಷೀಣಗೊಳಿಸಿದೆ. ಪ್ರಗತಿಪರ ಉದ್ಯಮಗಳನ್ನೂ, ಔದ್ಯೋಗಿಕ ಮತ್ತು ವ್ಯಾವಹಾರಿಕ ಯೋಜನೆಗಳನ್ನೂ ಸರ್ಕಾರದವರು ವರ್ಷವರ್ಷವೂ ಹೆಚ್ಚುಮಾಡುವ ಕಾರ್ಯಕ್ರಮವನ್ನು ಕೈಗೊಂಡು ಅದಕ್ಕೆ ಹಣ ಒದಗಿಸಲು ಅಗಾಧವಾದ ಸಾಲವನ್ನು ಮಾಡುತ್ತಿದ್ದಾರೆ. ೧೮೮೧ನೇ ಇಸ್ವಿಯಿಂದ ಈವರೆಗೂ ೩೫ ಕೋಟಿ ರೂಪಾಯಿಗಳಿಗೆ ಮೇಲ್ಪಟ್ಟ ಮೊತ್ತವು ಮೈಸೂರಿನಿಂದ ಇಂಡಿಯಾ ಸರ್ಕಾರಕ್ಕೆ ಪೊಗದಿ ರೂಪವಾಗಿ ಸಂದಾಯವಾಗಿದೆ. ಈ ಹಣವು ಅಥವಾ ಇದರ ಬಹ್ವಂಶವು ಮೈಸೂರು ಸರ್ಕಾರಕ್ಕೆ ಉಳಿದು, ಆರ್ಥಿಕ ಉನ್ನತಿಯನ್ನು ಕುರಿತ ಏರ್ಪಾಡುಗಳಿಗೆ ದೊರಕಿದ್ದಿದ್ದರೆ ಕಸಬು ವಾಣಿಜ್ಯಗಳು ಈಗಿರುವುದಕ್ಕಿಂತಲೂ ಅನೇಕಪಾಲು ಊರ್ಜಿತ ಸ್ಥಿತಿಯಲ್ಲಿರುತ್ತಿದ್ದುವು.

## ಸಂಯುಕ್ತ ರಾಜ್ಯದಲ್ಲಿ (Federation) ಪೊಗದಿಯ ಅನನ್ವಯಸ್ಥಾನ

ಹಿಂದಿನ ಚರಿತ್ರೆಯಲ್ಲಿ ಕಪ್ಪಕಾಣಿಕೆಗಳ ವಸೂಲಿಗೆ ಯಾವ ನ್ಯಾಯ ವಿದ್ದಾಗ್ಯೂ, ಅಖಿಲ ಹಿಂದೂಸ್ಥಾನ ಸಂಯುಕ್ತ ಸಾಮ್ರಾಜ್ಯವಾಗಬೇಕಾಗಿರುವಾಗ, ಮೈಸೂರು ಇತರ ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳೊಡನೆ ಸಮಾನ ಸ್ಕಂಧವಾಗಿ ಸಾಮ್ರಾಜ್ಯದಲ್ಲಿ ಸೇರಬೇಕಾಗಿರುವಾಗ, ಪೊಗದಿಗೆ ಖಂಡಿತ ಸ್ಥಾನವಿಲ್ಲ. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ಘನವಾದ ಮಾತುಗಳಲ್ಲಿ ಹೇಳುವುದಾದರೆ, ಪೊಗದಿ "ಈಗಿನ ಸಂದರ್ಭಗಳಲ್ಲೇ ಅಕಾಲೀಯ ಮುಂದೆ ಬಂದಿರುವ ಸಂದರ್ಭಗಳಲ್ಲಂತೂ ತೀರಾ ವಿರುದ್ಧ" ಚಕ್ರಗೋಷ್ಠಿಗಳಲ್ಲಿ ಪೊಗದಿ ತೆಗೆದುಹಾಕುವ ವಿಷಯವಾಗಿ ಸರ್ವ ಸಮ್ಮತವಾದ ಒಪ್ಪಿಗೆಯು ಪ್ರಕಟವಾಯಿತು. ಸಂಯುಕ್ತ ರಾಜ್ಯವ್ಯವಸ್ಥೆಯಲ್ಲಿ ಅಧೀನ ಸೂಚಕವಾದ (of a feudal nature) ಈ ಹಣ ಕಾಣಿಕೆಗಳ ವಸೂಲಿಗೆ ಸ್ಥಳವಿಲ್ಲವೆಂದು ಪೀಲ್ ಕಮಿಟಿಯವರು ಒಪ್ಪಿದರು. ಸಂಯುಕ್ತ ವರಮಾನಕ್ಕೆ ಸೇರುವ ಪ್ರಾಂತ್ಯಗಳು ಪಾವತಿ ಮಾಡುವ ಹಣವು ಸಮಾನವಾಗಿರಬೇಕಾದುದು, ಆ ರಾಜ್ಯ ವ್ಯವಸ್ಥೆಯ ನ್ಯಾಯಪೂರ್ಣ ಮೂಲತತ್ತ್ವವಾಗಿದ್ದು ಅದಕ್ಕೆ ವಿರೋಧವಾಗಿರುವ ಕಪ್ಪ ಕಾಣಿಕೆಗಳಿಗೆ ಅದರಲ್ಲಿ ಎಡೆಗೊಡುವುದು ತರ್ಕಸಮ್ಮತವಲ್ಲವೆಂದು ಡೇವಿಡ್ ಸರ್ ಕಮಿಟಿಯು ಉದ್ಘೋಷಿಸಿದೆ. ಪ್ರಾಂತ್ಯಗಳಿಗೆ ವರಮಾನ ತೆರಿಗೆಯ ನಿರ್ದಿಷ್ಟ ಭಾಗವನ್ನು ವಾಪಸು ಕೊಡುವಾಗ ಪೊಗದಿಗಳ ಹೊರೆಯನ್ನು ತೆಗೆದು ಹಾಕಬೇಕೆಂದು ಆ ಕಮಿಟಿಯವರು ಶಿಫಾರಸು ಮಾಡಿದ್ದಾರೆ. ತತ್‌ಕ್ಷಣದ ಪರಿಹಾರದ ಏರ್ಪಾಡಾಗಿ, ಪೊಗದಿ ಕೊಡುವ ಸಂಸ್ಥಾನದ ವರಮಾನದ ಶೇಕಡಾ ಐದರಷ್ಟು ಅಂಶಕ್ಕಿಂತ ಹೆಚ್ಚಾದ ಪೊಗದಿಯನ್ನು ಕೂಡಲೇ ಮನ್ನಾಮಾಡಬೇಕೆಂದೂ ಡೇವಿಡ್ ಸರ್ ಕಮಿಟಿಯವರು ಶಿಫಾರಸು ಮಾಡಿದರು. ಇದು ೧೯೩೨ರ ಮಾತು. ಆಗಲೇ ಈ ಅವಸರ ಪರಿಹಾರದ ಶಿಫಾರಸನ್ನು ಇಂಡಿಯಾ ಸರ್ಕಾರದವರು ಜಾರಿಗೆ ತಂದಿದ್ದರೆ, ಕಳೆದ ೪ ವರ್ಷಗಳಿಂದಲೂ, ಸಂವತ್ಸರ ಒಂದಕ್ಕೆ ಏಳು ಲಕ್ಷಗಳಂತೆ ಉಳಿತಾಯವಾಗುತ್ತಿತ್ತು. ಆದರೆ ಇಂಡಿಯಾ ಸರ್ಕಾರದವರು ಹಣದ ಮುಗ್ಗಟ್ಟಿನ ಕಾರಣವನ್ನು ಮುಂದಿಟ್ಟು, ಎಮರ್ಜೆನ್ಸಿ ಸರ್ ಚಾರ್ಜುಗಳನ್ನೂ (Emergency Surcharges) ಸಂಬಳದ ಕೋತಾವನ್ನೂ (Salary cut) ತೆಗೆದುಹಾಕಿ ವರಮಾನ ಕಡಮೆ

ಯಾದ ಪ್ರಾಂತ್ಯಗಳಿಗೆ ವಿಶೇಷ ಸಹಾಯದ ಪ್ರಶ್ನೆಯನ್ನು ತೃಪ್ತಿಕರವಾಗಿ ನಿರ್ವಹಿಸುವವರೆಗೂ ಪೊಗದಿಯನ್ನು ಕಡಮೆಮಾಡಲಾಗುವುದಿಲ್ಲವೆಂದು ದೇಶೀಯ ಸಂಸ್ಥಾನಗಳಿಗೆ ತಿಳಿಸಿಬಿಟ್ಟರು.

ಜಾಯಿಂಟ್ ಸೆಲೆಕ್ಟ್ ಕಮಿಟಿಯ ಅಧಿವೇಶನಗಳಲ್ಲಿ, ದೇಶೀಯ ಸಂಸ್ಥಾನಗಳ ಪರವಾಗಿ ಪುನಃ ಪೊಗದಿಯ ಉತ್ಪಾಟನೆಗೆ ಪ್ರಯತ್ನ ನಡೆಯಿತು. ಮಿ|| ಜಫರುಲ್ಲಾ ಖಾನರ ಪ್ರಶ್ನೆಗೆ ಉತ್ತರ ಕೊಡುತ್ತಾ, ಆಗಿನ ಸ್ಟೇಟ್ ಸೆಕ್ರೆಟರಿ, ಸರ್ ಸ್ಯಾಮುಯಲ್ ಹೋರರು, ಇಂಡಿಯಾ ಸರ್ಕಾರದ ಹೊಸ ರಚನೆಯ ಚಿತ್ರದಿಂದ ಪೊಗದಿಗಳನ್ನು ಅಳಿಸಿ ಹಾಕುವುದು ಒಳ್ಳೆಯದೆಂದೂ, ಆದರಿಂದ ನಷ್ಟವಾಗುವ ಹಣ ಅಲ್ಪವೆಂದೂ, ಹೇಳಿದರು. ಆದರೆ, ಡೇವಿಡ್‌ಸರ್ ಕಮಿಟಿಯವರು ಸೂಚಿಸಿದ್ದ ಅವಸರ ಪರಿಹಾರವನ್ನು ಕೊಡಬೇಕೆಂದು ಕೇಳಿದಾಗ, ಹೋರರೂ ಹಣದ ಮುಗ್ಗಟ್ಟಿನ ನೆವವನ್ನು ಹೇಳಿಬಿಟ್ಟರು. ಪೊಗದಿಗಳ ಅಂತ್ಯವಿನಾಶದ ವಿಷಯದಲ್ಲಿ ಜಾಯಿಂಟ್ ಸೆಲೆಕ್ಟ್ ಕಮಿಟಿಯವರೂ ಡೇವಿಡ್‌ಸರ್ ಕಮಿಟಿಯವರ ಶಿಫಾರಸುಗಳನ್ನೇ ಅನುಮೋದಿಸಿದರು.

೧೯೩೫ನೇ ಇಸ್ವಿಯ ಇಂಡಿಯಾ ಸರ್ಕಾರದ ಮಸೂದೆ (Government of India Act of 1935) ಯ ಪ್ರಕಾರ, ಯಾವಾಗ ಬೇಕಾದರಾಗ ಪೊಗದಿಯನ್ನು ಸಂಪೂರ್ಣವಾಗಿ ಅಥವಾ ಭಾಗಶಃ ಮನ್ನಾ ಮಾಡುವ ಅಧಿಕಾರ ಚಕ್ರವರ್ತಿ ಸಾರ್ವಭೌಮರಿಗೆ ಸೇರಿದೆ. ಈ ಅಧಿಕಾರ ಒಂದುವೇಳೆ ಉಪಯೋಗಿಸಲ್ಪಡದೇ ಹೋದರೆ, ಸಂಸ್ಥಾನಗಳು ಸಂಯುಕ್ತ ರಾಜ್ಯಾಂಗವಾಗಿ ಸೇರಿದ ಇಪ್ಪತ್ತು ವರ್ಷಗಳೊಳಗಾಗಿ, ಪ್ರಾಂತ್ಯಗಳಿಗೆ ವರಮಾನ ತೆರಿಗೆಯನ್ನು ವಾಪಸು ಕೊಡುವ ಕ್ರಮಕ್ಕೆ ಅನುಸಾರವಾಗಿ ಈ ಪೊಗದಿಯು ವಜಾ ಆಗಲೇ ಬೇಕು. ಸರ್ ಆಟೊನೈಮಿಯರ್‌ರವರು ಮಾಡಿರುವ ಶಿಫಾರಸುಗಳು ಜಾರಿಗೆ ಬಂದರೆ, ಪ್ರಾಂತಿಕ ಸ್ವಾತಂತ್ರ್ಯ ಸರ್ಕಾರವು ಬ್ರಿಟಿಷ್ ಇಂಡಿಯಾದಲ್ಲಿ ಸ್ಥಾಪಿತವಾದ ಹತ್ತು ವರ್ಷಗಳೊಳಗಾಗಿ ಸಂಸ್ಥಾನಗಳು ಕೊಡುವ ಪೊಗದಿಯು ವಜಾ ಆಗಬೇಕು. ಆದರೆ ಪೊಗದಿಯ ಹಣದಲ್ಲಿ ಸಂಸ್ಥಾನವು ಅನುಭವಿಸುವ ಹಣಕಾಸಿನ ವಿನಾಯಿತಿಗಳ (Privilege and immunities) ಬೆಲೆಗಿಂತ ಹೆಚ್ಚಾಗುವ ಅಂಶ ಮಾತ್ರ, ಹೀಗೆ ವಜಾ ಆಗುವುದು.

ಸರ್ಕಾರೀ ಕಾಗದ ಪತ್ರಗಳ ಉಚಿತ ಒಯ್ಯುವಿಕೆ... ನಿಮಿತ್ತ ೫,೫೭,೭೦೦ ರೂಪಾಯಿಗಳ ಮತ್ತು ಸಂಸ್ಥಾನ... ಲ್ಲಿನ ಚೌಳುಪ್ಪಿನ ಮೇಲಿನ ವರಮಾನದ ನಿಮಿತ್ತ ... ರೂಪಾಯಿಗಳ ಸಮಾನ ಬೆಲೆಯ ವಿನಾಯಿತಿ (Immunity) ಯನ್ನು ಮೈಸೂರು ಅನುಭವಿಸುತ್ತಿದೆ... ಡೇವಿಡ್‌ಸರ್ ಕಮಿಟಿಯವರು ಅಭಿಪ್ರಾಯ ಪಟ್ಟ... ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು "ಅಂಚೆ... ವಿನಾಯಿತಿ" (Postal immunity) ಬಾಬ... ಕಮಿಟಿಯವರ ಅಭಿಪ್ರಾಯವನ್ನು ವಿರೋಧಿಸಿ, ೧೯... ಇಸ್ವಿ ಅಕ್ಟೋಬರು ತಿಂಗಳಿನಲ್ಲಿ ನಡೆದ ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ಅಧಿವೇಶನದಲ್ಲಿ ತಾವು ಮಾಡಿದ ... ಭಾಷಣದಲ್ಲಿ ಹೀಗೆಂದು ಹೇಳುವರು: "ಸಂಸ್ಥಾನದ ಸರ... ಕಾರೀ ಕಾಗದ ಪತ್ರಗಳನ್ನು ಅಂಚೆಯ ಹಾಸಲಿಲ್ಲದೆ ... ತವಾಗಿ ಸಾಗಿಸುವ ಅಲ್ಪವಾದ ಹಕ್ಕನ್ನುಳಿಸಿಕೊ... ಅದಕ್ಕೆ ಪ್ರತಿಯಾಗಿ ಬ್ರಿಟಿಷ್ ಇಂಡಿಯಾದ ಅಂಚೆ... ಏರ್ಪಾಡು ಇಲ್ಲಿಯೂ ಆಚರಣೆಯಲ್ಲಿರಲು ಹಿಂದೆ ಸಮ್ಮತಿ... ಲಾಯಿತು. ಈಗ ಸಮಿತಿಯವರು ಈ ಹಕ್ಕಿಗೂ ಹಣ... ರೂಪದ ಮೌಲ್ಯವುಂಟೆಂದೂ, ಅಂಚೆಯ ಇಲಾಖೆಯವ... ಸ್ಥಳದಿಂದ ಸ್ಥಳಕ್ಕೆ ಸಾಗಿಸುವ ಸಂಸ್ಥಾನದ ಸರ್ಕಾ... ಕಾಗದ ಪತ್ರಗಳ ಬಾಬತು ಹಾಸಲು ಮೊಬಲಗನ್ನು ಪೊಗದಿಯಲ್ಲಿ ಬಿಟ್ಟು ಕೊಡಬೇಕಾದ ಮೊಬಲಗಿನ... ಉತ್ತಾರ ಹಾಕಬೇಕೆಂದೂ ಸಲಹೆ ಮಾಡಿದ್ದಾರೆ..... ಯಾವ ನಿರ್ದಿಷ್ಟವಾದ ಷರತ್ತಿನ ಮೇಲೆ ಅಂಚೆಯನ್ನು ಬಿಟ್ಟು ಕೊಡಲಾಯಿತೋ ಆ ಷರತ್ತೇ ಸಂಸ್ಥಾನದವ... ತಕ್ಕ ಪ್ರತಿ ಫಲ ರೂಪದ ಹಕ್ಕು. ಆದರೆ ಈ ಷರತ್ತನ್ನು ನೆರವೇರಿಸುವುದಕ್ಕೆ ಮಾತ್ರ ಹಣ ರೂಪದ ಮೌಲ್ಯ... ಟೆಂದೂ, ಅಂಚೆಯ ಇಲಾಖೆಯನ್ನು ನಡೆಯಿಸು... ಹಕ್ಕಿಗೆ ಮಾತ್ರ ಯಾವ ನಗದು ಮೌಲ್ಯವೂ ಇಲ್ಲವೆಂ... ಸಮಿತಿಯವರು ಅಭಿಪ್ರಾಯಪಟ್ಟಿರುವುದರಲ್ಲಿ ಯಾ... ನ್ಯಾಯವೂ ಕಂಡು ಬರುವದಿಲ್ಲ" ಉಚಿತ ಅಂಚೆ... ವಿನಾಯಿತಿಯು ಮೌಲ್ಯ ಕಟ್ಟತಕ್ಕ ಬಾಬೇ ಅಲ್ಲವೇ ಎಂ... ಭಿನ್ನಾಭಿಪ್ರಾಯದ ಚರ್ಚೆಗೆ ಇಲ್ಲಿ ಅವಕಾಶವಿಲ್ಲ. ಡೇವಿಡ್‌ಸರ್ ಕಮಿಟಿಯವರ ಅಭಿಪ್ರಾಯವನ್ನು ಅನುಸರಿಸಿ... ಪೊಗದಿಯ ಪರಿಹಾರದಲ್ಲಿ ಐದೂವರೆ ಲಕ್ಷದಷ್ಟು ಕಡಮೆಯಾಗುವುದು. ಮೈಸೂರು ಸರ್ಕಾರದ ಪ್ರತಿಪಾದನೆಯನ್ನಂಗೀಕರಿಸಿದರೆ ಪೊಗದಿ ಪೂರ್ಣವಾಗಿ ಹೋಗುವುದು.

**ಮುಕ್ತಾಯ**

ಮೈಸೂರು ಪೊಗದಿಯ ಉತ್ಪಾಟನೆಯು ಸಂಯುಕ್ತ ರಾಜ್ಯಾಂಗ ವ್ಯವಸ್ಥೆಗೆ ಸಂಬಂಧಪಟ್ಟ ವಿಷಯಕ್ಕಿಂತಲೂ (federal issue) ಹೆಚ್ಚಾಗಿ ಆರ್ಥಿಕ ನ್ಯಾಯದ ಪ್ರಶ್ನೆಯಾಗಿದೆ ದೀರ್ಘಕಾಲದಿಂದ ಈ ಅನ್ಯಾಯದ ಹೊರೆ ಹೊತ್ತಿರುವ ಸಂಸ್ಥಾನಕ್ಕೆ ಅವಸರ ಪರಿಹಾರವು ಅತ್ಯವಶ್ಯಕ. ನಿರ್ವಿವಾದವಾಗಿ ಉಚಿತವಲ್ಲವೆಂದೂ ಪರಿಗಣಿಸಲ್ಪಟ್ಟಿರುವ ಈ ಹೊರೆಯನ್ನು ಇನ್ನೂ ಇಳಿಸದಿರುವ ವಿಷಯದಲ್ಲಿ ಮೈಸೂರು ಸರ್ಕಾರಕ್ಕೆ ಅಸಮಾಧಾನವಾಗಿರುವಂತೆಯೇ ವಿದ್ಯಾವಂತ ಪ್ರಜಾ ವರ್ಗವೂ ಅತಿಶಯವಾಗಿ ಅತೃಪ್ತಿ ಪಟ್ಟಿದೆ. ಇಂಡಿಯಾದ ಹೊಸ ವೈಸ್ರಾಯರಾದ ಲಾರ್ಡ್ ಲಿನ್‌ಲಿತ್‌ಗೋರವರು, ಸದ್ಯದಲ್ಲೇ ಮೈಸೂರಿಗೆ ದಯಮಾಡಿಸುವ ಸಂಭವವಿದೆ. ಆಗಲಾದರೂ ಅವರು ಈ ಕಾಲ ವಿರುದ್ಧವಾದ ಹೊರೆಯಲ್ಲಿ ಬಹು ಭಾಗವನ್ನಾದರೂ ಇಳಿಸಿರುವ ಸಂದೇಶವನ್ನು ಸಾರುವರೆಂದು ಹಾರೈಸಿದೆ.



ನಿಮಗೆ ಅಂದವಾದ ಮನೆಯಿದೆ

ಪ್ರೇಮದ ಗೆಳತಿಯಿದ್ದಾಳೆ

ಮುದ್ದು ಮಗುವಿದೆ

ಸದಾಕಾಲವೂ ಆನಂದದಿಂದಲೇ ಇರುವಿರಿ

ಆದರೆ, ವೃದ್ಧಾಪ್ಯದ ಮತ್ತು ಅನಾರೋಗ್ಯದ ಕಪ್ಪು ಕವಿದಂದು, ನಿಮ್ಮ ಆನಂದವು ಬರಿಯ ಕನಸಾಗಲು ಅವಕಾಶ ಕೊಡವಿರಾ?

ಇಲ್ಲವೆಂಬುದೇ ನಿಮ್ಮ ಉತ್ತರ. ಅದು ನಿಜವಾಗಲು

# ನೀವಿಂದೇ ವಿಮೆ ಮಾಡಿರಿ

# ರಿಜರ್ವ್ ಬ್ಯಾಂಕ್



ಲೇಖಕರು :
ಶ್ರೀ|| ಆರ್. ಯಸ್. ಆರಾಧ್ಯ
ತುಂಕೂರು.
(Mr. R.S. Aradhya)

ಬ್ಯಾಂಕುಗಳೆಂದರೆ ಧನ ಸಂಚಯದ ವಸತಿಗೃಹಗಳು; ಸಂಪತ್ತಿನ ಸಂಗ್ರಹ ನಿಧಿಗಳು. ನೀರಿನ ವಿಷಯದಲ್ಲಿ ಕೆರೆಗಳ ಕಲ್ಪನೆ ಯಿದ್ದಂತೆ ಹಣದ ವಿಷಯದಲ್ಲಿ ಬ್ಯಾಂಕಿನ ಕಲ್ಪನೆ ಯಿರುವುದು. ಮಳೆಯಿಂದ ಭೂಮಿಯಮೇಲೆ ಬಿದ್ದ ಎಷ್ಟು ನೀರು ಹರಿದು ನಿಷ್ಫಲವಾಗುವುದನ್ನು ನಾವು ಕಣ್ಣಿನಿಂದ ನೋಡುತ್ತಿದ್ದೇವೆ. ಆದರೆ ಅದೇ ನೀರನ್ನು ಒಂದು ಕೆರೆಯಲ್ಲಿ ನಿಲ್ಲುವಂತೆ ಮಾಡುವುದಾದರೆ ಪ್ರಾಣಿವರ್ಗಕ್ಕೆ ಅದರಿಂದಾಗುವ ಲಾಭವು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಅಂತೆಯೇ ಎಷ್ಟೋ ಹಣವು ಸುಮ್ಮನೆ ನಿಷ್ಫಲವಾಗಿ ಹರಿಯುತ್ತಿದೆ. ಕೆರೆಯಲ್ಲಿ ನೀರನ್ನು ನಿಲ್ಲಿಸಿದಂತೆ ಹರಿಯುತ್ತಿರುವ ಹಣವನ್ನು ಬ್ಯಾಂಕಿನಂತಹ ಒಂದು ನಿಧಿಯಲ್ಲಿ ಸಂಗ್ರಹವಾಗುವಂತೆ ಮಾಡಿದರೆ ಅದರಿಂದ ನಮ್ಮ ಆರ್ಥಿಕ ಏಳಿಗೆಗೆ ಬಹಳ ಸಹಾಯ ಮಾಡಿದಂತಾಗುವುದರಲ್ಲಿ ಸಂದೇಹವಿಲ್ಲ. ಏಕೆಂದರೆ ಬ್ಯಾಂಕುಗಳು ನಮ್ಮ ಆರ್ಥಿಕ ಜೀವಿತದ ನಿಜವಾದ ರಕ್ತವಾಹನಿಗಳಾಗಿವೆ. ಧನವಿಲ್ಲದೆ ಯಾವ ವ್ಯವಹಾರವು ನಡೆಯುವಂತಿಲ್ಲ. ಹಣದಿಂದ ಹೆಚ್ಚು ಕೆಲಸ ಮಾಡಿಸಿಕೊಳ್ಳಲಿಕ್ಕೂ ಚಲನವನ್ನು ಮಿತ್ಯಯದಿಂದ ಉಪಯೋಗಿಸಲಿಕ್ಕೂ ಬ್ಯಾಂಕುಗಳು ಬೇಕೇ ಬೇಕು. ಬ್ಯಾಂಕುಗಳು ಈಗಿನ ಉನ್ನತ ರಾಷ್ಟ್ರಗಳ ಉನ್ನತಿಗೆ ಬಹುಮಟ್ಟಿಗೆ ಸಹಾಯಮಾಡಿವೆ.

ಪ್ರತಿಯೊಂದು ದೇಶದಲ್ಲಿಯೂ ಆ ದೇಶದ ಆರ್ಥಿಕ ಸ್ಥಿತಿಯ ಉನ್ನತಿಗೆ ಕೆಲಸ ಮಾಡುವ ಸಂಸ್ಥೆಗಳು ಇದ್ದೇ ಇವೆ. ಇವುಗಳ ಪೈಕಿ ಸೆಂಟ್ರಲ್ ಬ್ಯಾಂಕು ಒಂದು. ಆರ್ಥಿಕ ಸ್ಥಿತಿಯ ಉನ್ನತಿಗೆ ಕೆಲಸ ಮಾಡುವುದೆಂದರೆ ಸಾರ್ವಜನಿಕ ಹಿತವನ್ನು ಮರೆತು ಕೃತ್ರಿಮ ರೀತಿಗಳಿಂದಲಾದರೂ ಜನಾಂಗಕ್ಕೆ ದುಡಿಯುವುದು ಎಂದರ್ಥವಲ್ಲ. ಸಾತ್ವಿಕ ರೀತಿಯಿಂದ ತನ್ನ ಜನಗಳಿಗೆ ನೆರವಾಗುವುದೆಂಬ ಭಾವ.

ಸೆಂಟ್ರಲ್ ಬ್ಯಾಂಕ್ ಎಂದರೆ ಅದಕ್ಕೆ ಅನೇಕ ಹಕ್ಕು ಬಾಧ್ಯತೆಗಳು ಇರುತ್ತವೆ. ಇದು ದೇಶದ ಮತ್ತು ಜನಾಂಗದ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲು ಸ್ಥಾಪಿಸಲ್ಪಟ್ಟ ಸಂಸ್ಥೆಯೇ ಹೊರತು ಕೇವಲ ಲಾಭಾಪೇಕ್ಷೆಯಿಂದ ಸ್ಥಾಪಿಸಲ್ಪಡುವುದಲ್ಲವೆಂದು ಮತ್ತೊಮ್ಮೆ ಹೇಳಬೇಕಾದುದಿಲ್ಲ. ನಮಗೆ ಆರ್ಥಿಕ ಪ್ರಪಂಚದಲ್ಲಿ ಸ್ವಾತಂತ್ರ್ಯವು ಬೇಕಾದರೆ ಸೆಂಟ್ರಲ್ ಬ್ಯಾಂಕ್ ಅತ್ಯಾವಶ್ಯಕ. ಇದು ಇಲ್ಲದೆ ಯಿರುವ ಸ್ವತಂತ್ರ ರಾಜ್ಯವಿಲ್ಲ. ಈ ಸಂಸ್ಥೆಯನ್ನು ಒಂದೊಂದು ದೇಶದಲ್ಲಿ ಒಂದೊಂದು ಹೆಸರಿನಿಂದ ಕರೆಯುತ್ತಿದ್ದಾರೆ. ಅಮೇರಿಕಾದಲ್ಲಿ 'ಫೆಡರಲ್ ರಿಜರ್ವ್‌ಬ್ಯಾಂಕ್' ಎಂದೂ, ಇಂಗ್ಲೆಂಡಿನಲ್ಲಿ 'ದಿ ಬ್ಯಾಂಕ್ ಆಫ್ ಇಂಗ್ಲೆಂಡ್' ಎಂದೂ, ಜರ್ಮನಿಯಲ್ಲಿ 'ರಿಷ್ ಬ್ಯಾಂಕ್' ಎಂದೂ ಕರೆಯಲ್ಪಟ್ಟಿವೆ. ಇವುಗಳ ಧ್ಯೇಯವು ಮಾತ್ರ ಒಂದೇ. ಹೀಗೆಯೇ ನಮ್ಮ ಇಂಡಿಯಾ ದೇಶದಲ್ಲಿ ಸ್ಥಾಪಿಸಲ್ಪಟ್ಟಿರುವ ಬ್ಯಾಂಕಿಗೆ 'ರಿಜರ್ವ್ ಬ್ಯಾಂಕ್' ಎಂದೂ ಹೆಸರು ಕೊಟ್ಟಿರುವರು

ಈ ಬ್ಯಾಂಕ್ ಸ್ಥಾಪನೆಯ ಬಗ್ಗೆ ಈಗ ಸುಮಾರು ೨೦-೨೧ ವರ್ಷಗಳಿಂದಲೂ ಪ್ರಯತ್ನಗಳು ನಡೆಯುತ್ತಿದ್ದುವು. ಇವರ ಆವಶ್ಯಕತೆಯನ್ನು ನಮ್ಮ ಸರ್ಕಾರದ ಮನವಿಗೆ ತಂದವರು ಸರ್. ಜೆ. ಕೀನ್ಸರವರು ಇವರು ೧೯೧೩ರಲ್ಲಿ ಏರ್ಪಾಟಾಗಿದ್ದ ರಾಯಲ್ ಕಮಿಷನ್ ಮುಂದೆ ಈ ವಿಷಯವನ್ನು ಬಹಳವಾಗಿ ಚರ್ಚಿಸಿದರು. ಆಗ ಯುದ್ಧದ ಕಾರ್ಮೋಡವು ಕವಿಯಲು, ಈ ವಿಷಯವು ಬಾಲ್ಯಾವಸ್ಥೆಯಲ್ಲಿಯೇ ಕೈ ಬಿಡಲ್ಪಟ್ಟಿತು. ಆದರೆ ಈ ವಿಚಾರವು ಅನೇಕ ಮುಖಂಡರ ಮನಸ್ಸನ್ನು ವೇದಿಸುತ್ತಲೇ ಇದ್ದು ಎಲ್ಲೆಲ್ಲಿಯೂ ಅಶಾಂತಿಯು ತಲೆದೋರಿತು. ಈ ವಿಷಮ ಪರಿಸ್ಥಿತಿಯಲ್ಲಿ ಸರ್. ಬೇಸಿಲ್ ಬ್ಲಾಕೆಟ್‌ರವರು 'ಒಂದು ರಿಜರ್ವ್ ಬ್ಯಾಂಕ್ ಬಿಲ್ಲ'ನ್ನು ೧೯೨೭ರಲ್ಲಿ ತಯಾರಿಸಿ ಅಸೆಂಬ್ಲಿಯ ಮುಂದಿಟ್ಟರು. ಅದರಲ್ಲಿನ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳುಂಟಾಗಲು ಅದು ಒತ್ತಟ್ಟಿಗಿಡಲ್ಪಟ್ಟಿತು. ೧೯೨೮ರಲ್ಲಿ ಈ ಬಿಲ್ಲಿಗೆ ಅಸೆಂಬ್ಲಿಯಲ್ಲಿ ಬಹಿಷ್ಕಾರವು ಕೂಡ ಉಂಟಾಯಿತು. ಅವರಿಗೆ ಉತ್ಸಾಹ ಭಂಗವಾದರೂ, ಅವರು ಆ ಹುಟ್ಟಿನಲ್ಲಿಯೇ ಕಾಲ ಕಳೆಯ ತೊಡಗಿದರು.

ಮೊದಲನೆಯ ರೌಂಡ್ ಟೇಬಲ್ ಕಾನ್ಫರೆನ್ಸ್

ಕೆಲವರು ತಮ್ಮ ಹಿಂದಿನ ಈ ಹುಚ್ಚನ್ನು ಪೂರ್ತಿಗೊಳಿಸ ಬೇಕೆಂದು ಪ್ರಯತ್ನಪಟ್ಟರು. ಸರ್ಕಾರವೂ ಸಹ ತನ್ನ ಅನುಮತಿಯನ್ನು ಕೊಟ್ಟಿತು. ಈ ರಿಜರ್ವ್ ಬ್ಯಾಂಕಿನ ವಿಷಯವನ್ನು ಕೂಲಂಕುಷವಾಗಿ ವಿಚಾರ ಮಾಡಲು ಮೂರನೆ ರೌಂಡ್ ಟೇಬಲ್ ಕಾನ್ಫರೆನ್ಸಿನಲ್ಲಿ ಒಂದು ಉಪ ಸಮಿತಿಯನ್ನು ಏರ್ಪಡಿಸಿದರು. ಅನೇಕ ಜನ ದೇಶಾಭಿ ಮಾನಿಗಳನ್ನೂ, ಶಾಸ್ತ್ರವೇತ್ತರನ್ನೂ ಒಳಗೊಂಡ ಈ ಸಮಿತಿಯಲ್ಲಿ ಅನೇಕ ಪ್ರಾಮುಖ್ಯ ವಿಷಯಗಳು ವಿಮರ್ಶಿ ಸಲ್ಪಟ್ಟವು. ಈ ಸಮಿತಿಯು ಹೆಚ್ಚಾಗಿ ಚರ್ಚಿಸಿದ ವಿಷಯ ಗಳಲ್ಲಿ ಈ ಬ್ಯಾಂಕ್ ಷೇರ್ ಹೋಲ್ಡರ ಬ್ಯಾಂಕಾಗಿರಬೇಕೆ ಅಥವ ಸ್ಟೇಟ್ ಬ್ಯಾಂಕಾಗಿರಬೇಕೆ ಎಂಬ ವಿಷಯವು ಅತಿ ಮುಖ್ಯವಾದುದು. ಈ ವಿಷಯವನ್ನು ಬಗೆ ಹರಿಸಲು ಅರ್ಥಶಾಸ್ತ್ರವೇತ್ತರಿಂದ ಸಾಧ್ಯವೇ ಹೊರತು ಮಿಕ್ಕವರಿಂದ ಅಷ್ಟು ಸುಲಭಸಾಧ್ಯವಲ್ಲ. ಅದರಲ್ಲಿಯೂ ಕೂಡ ಭಿನ್ನಾ ಭಿಪ್ರಾಯಗಳಿವೆ. ಮಿ|| ಬೇಬಿ || ಮಿ || ರೀಸಾ ಮೊದ ಲಾದ ಪ್ರಸಿದ್ಧ ಅರ್ಥವೇತ್ತರೂ ಕೂಡ ಷೇರ್ ಹೋಲ್ಡರ್ ಬ್ಯಾಂಕೇ ಉತ್ತಮವೆಂಬ ಅಭಿಪ್ರಾಯವನ್ನು ಸೂಚಿಸಿದರು. ಈ ಅಭಿಪ್ರಾಯವು ಬಹುಮತದಿಂದ ಅಂಗೀಕೃತವಾಯಿತು. ಇವರ ಗುಣಾವಗುಣಗಳನ್ನು ಈ ಚಿಕ್ಕ ಲೇಖನದಲ್ಲಿ ತಿಳಿಸ ಲಸಾಧ್ಯವಿಲ್ಲವಾದರೂ ಒಂದೆರಡು ಮಾತುಗಳನ್ನು ಹೇಳು ವುದು ಸೂಕ್ತವೆಂದು ಕಾಣುತ್ತದೆ.

ಷೇರ್ ಹೋಲ್ಡರ್ ಬ್ಯಾಂಕಿನ ಆಡಳಿತವು ಕೆಲವು ಜನ ಧನಿಕರ ಕೈಯ್ಯಲ್ಲಿಯೇ ಇರುವುದರಿಂದ ಅವರು ಯಾವಾಗಲೂ ತಮಗೆ ಲಾಭದಾಯಕವಾದ ರೀತಿಯಲ್ಲಿಯೇ ನಡೆಸುವರೇ ಹೊರತು, ತಮಗೆ ಲಾಭದಾಯಕವಲ್ಲವಾ ದರೂ ಜನಾಂಗಕ್ಕೆ ಒಳ್ಳೆಯದಾಗಬೇಕೆಂಬ ಅಭಿಪ್ರಾಯ ದಿಂದ ಕೆಲಸ ಮಾಡುವುದು ಕಷ್ಟಸಾಧ್ಯ. ಇಂತಹ ಬ್ಯಾಂಕನ್ನು ಸ್ಥಾಪಿಸಿದ್ದಾದರೆ ಸಾರ್ವಜನಿಕ ಹಿತವನ್ನು ಸಾಧಿಸಿದಂತಾಗದು. ಇದನ್ನು ತಹಬಂದಿಗೆ ತರಬೇಕಾದ ಪಕ್ಷದಲ್ಲಿ ಸರ್ಕಾರವು ಇದರಲ್ಲಿ ಭಾಗವಹಿಸಿ ಪ್ರಜೆಗಳ ಹಿತ ಸಾಧಕವಲ್ಲದ ವ್ಯಾಪಾರಗಳನ್ನೂ, ಮಿಕ್ಕ ಆಡಳಿತಗಳನ್ನೂ ಸೆಂಟ್ರಲ್ ಬ್ಯಾಂಕ್ ಮಾಡದಂತೆ ಕಟ್ಟುಮಾಡಬೇಕು. ಹೀಗೆ ಕಟ್ಟುಮಾಡುವುದಲ್ಲದೆ ಇದರ ಮೇಲ್ವಿಚಾರಣೆಯ ಲ್ಲಿಯೂ ಕೆಲವು ಸರ್ಕಾರಿ ಅಧಿಕಾರಿಗಳನ್ನು ನೇಮಿಸಬೇಕು. ಈ ಬ್ಯಾಂಕು ಶೇಕಡ ೫ ಕ್ಕಿಂತ ಹೆಚ್ಚಾಗಿ ಲಾಭವನ್ನು ಹಂಚದಂತೆ ಕಟ್ಟುಮಾಡಬೇಕು. ಹೀಗೆ ಮಾಡುವುದರಿಂದ ಈ ಬ್ಯಾಂಕಿಗೆ ಹೆಚ್ಚು ಲಾಭ ಸಂಪಾದಿಸಬೇಕೆಂಬ ಅಪೇ ಕ್ಷೆಯು ತಪ್ಪುತ್ತದೆ. ಈರೀತಿ ಮಾಡಿದರೆ ಷೇರ್ ಹೋಲ್ಡರ್ ಬ್ಯಾಂಕು ಆಗ ಸಾರ್ವಜನಿಕ ಹಿತವನ್ನು ಸಾಧಿಸುವುದಕ್ಕೆ ಪ್ರಯತ್ನಮಾಡಬಹುದು.

ಸ್ಟೇಟ್ ಬ್ಯಾಂಕ್ ಆದ ಪಕ್ಷದಲ್ಲಿ ಸರ್ಕಾರವು ಮಾಡ ಬೇಕಾದ ಕೆಲಸವು ಬಹಳವಿರುತ್ತದೆ. ಒಂದೊಂದು ವೇಳೆ ಸರ್ಕಾರವೂ ಕೂಡ ಜನರ ಹಿತವನ್ನು ಮರೆಯಬಹುದು. ಪ್ರಜೆಗಳ ಹಿತ ಮತ್ತು ಅಪೇಕ್ಷೆಯನ್ನು ಕಂಡುಹಿಡಿಯು ವುದು ಸರ್ಕಾರದವರಿಗೆ ಅಷ್ಟು ಸುಲಭವಲ್ಲ. ಆದ್ದರಿಂದ ಸ್ಟೇಟ್ ಬ್ಯಾಂಕ್ ಅಷ್ಟೇ ಉತ್ತಮವಲ್ಲವೆಂದು ತಿಳಿಯು ತ್ತದೆ. ಈ ವಿಚಾರದಲ್ಲಿ ಅನೇಕ ಚರ್ಚೆಗಳು ಹುಟ್ಟಿ ಕೊನೆಗೆ ನಮ್ಮ ದೇಶದಲ್ಲಿ ಸ್ಥಾಪಿಸಲ್ಪಟ್ಟಿರುವ ರಿಜರ್ವ್ ಬ್ಯಾಂಕು ಷೇರ್ ಹೋಲ್ಡರ್ಸ್ ಬ್ಯಾಂಕಾಗಬೇಕೆಂದು ಸಮಿತಿ ಯವರು ತೀರ್ಮಾನಿಸಿದರು.

ಈ ಬ್ಯಾಂಕಿನಿಂದ ಪಡೆಯಬೇಕಾದ ಸೌಕರ್ಯಗಳು ಬಹಳವಾಗಿವೆ. ಮೊದಲನೆಯದು ಬಡ್ಡಿ ವಿಚಾರ. ನಮ್ಮ ದೇಶದಲ್ಲಿ ಬಡ್ಡಿಗಳನ್ನು ತೆತ್ತು ಎಷ್ಟು ಬ್ಯಾಂಕುಗಳು ಹಾಳಾ ಗಿವೆಯೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಆದ ರಲ್ಲು ವ್ಯಾಪಾರಸ್ಥರು ಇಂತಹ ಬ್ಯಾಂಕುಗಳಿಗೆ ಬಡ್ಡಿಯನ್ನು ಕೊಟ್ಟು ವ್ಯಾಪಾರ ಮಾಡುವದು ಸುಲಭಸಾಧ್ಯವಲ್ಲ. ರಿಜರ್ವ್ ಬ್ಯಾಂಕಿನ ಸಾಲದ ಮೂಲಕ ವ್ಯಾಪಾರಸ್ಥರು ತಮ್ಮ ವ್ಯಾಪಾರಗಳನ್ನು ಬಹಳ ಅಭಿವೃದ್ಧಿ ಪಡಿಸಿಕೊಳ್ಳ ಬಹುದಾಗಿದೆ. ಎರಡನೆಯ ಅನುಕೂಲವೆಂದರೆ ದೇಶದೊ ಳಗಿನ ಹಣಕಾಸಿನ ವ್ಯವಹಾರವು ಸ್ಥಿಮಿತದಲ್ಲಿರು ವಂತೆ ಚಲಾವಣೆ ಮತ್ತು ಸಂಪತ್ತಿನ ವ್ಯವಹಾರದಲ್ಲಿ ಮಾರ್ಪಾಟುಗಳನ್ನು ಮಾಡುವುದು. ಹಣದ ಮುಗ್ಗ ಟ್ಟನ್ನು ಮತ್ತು ಆಧಿಕ್ಯವನ್ನು ಬ್ಯಾಂಕುಗಳು ತಿಳಿದು ಕೊಳ್ಳುವಷ್ಟು ಬೇಗನೆ ಸರ್ಕಾರದವರು ತಿಳಿದುಕೊಳ್ಳ ಲಾರರು. ನಾಣ್ಯಗಳ ಮತ್ತು ನೋಟುಗಳ ಬದಲಾವಣೆ ಯಿಂದ ಜನರ ಸೌಕರ್ಯವನ್ನು ತಿಳಿದು ಈ ಬ್ಯಾಂಕು ಹಣ ವನ್ನು ಒದಗಿಸುವುದೋ ಅಥವ ಚಲಾವಣೆಯಲ್ಲಿರುವ ಹಣವನ್ನು ಹಿಂದಕ್ಕೆ ತೆಗೆದುಕೊಳ್ಳುವುದೋ, ಯಾವುದು ಸೂಕ್ತವೋ ಅದನ್ನು ಮಾಡಬಹುದು. ಮೊದಲನೆಯ ಮತ್ತು ಮುಖ್ಯವಾದ ಉಪಯೋಗವು ಅಂತರ ರಾಷ್ಟ್ರೀಯ ವ್ಯಾಪಾರವನ್ನು ಅಭಿವೃದ್ಧಿ ಪಡಿಸುವುದು. ನಮ್ಮ ದೇಶವು ಪರದೇಶಗಳೊಡನೆ ವ್ಯಾಪಾರ ಮಾಡಲು ಸೆಂಟ್ರಲ್ ಬ್ಯಾಂ ಕಿನ ಸಹಾಯವು ಅತ್ಯವಶ್ಯಕ. ಇವುಗಳ ಜೊತೆಗೆ ಕೈಗಾ ರಿಕೆ ಮತ್ತು ವ್ಯವಸಾಯಗಳನ್ನು ಪ್ರೋತ್ಸಾಹಿಸುವ ಘನ ಉದ್ದೇಶವೂ ಸಹ ಇರುತ್ತದೆ.

# ಹಿಂದೂದೇಶದ ನಿರುದ್ಯೋಗ ಸಮಸ್ಯೆ



ಲೇಖಕರು :
ಶ್ರೀ|| ಆರ್. ಎಸ್. ಶಣೈ,
(Mr. R. S. Shenai.)
ಸಂಪಾದಕ : ವರ್ತಕಧುರೀಣ
ಮಾಸಪತ್ರಿಕೆ, ಉಡುಪಿ.

ಸ್ವರ್ಣಧಾತ್ರಿಯ ೩೩ ಕೋಟಿ ಸುಪುತ್ರ ಪುತ್ರಿಯರಿಂದು ದಾರಿದ್ರ್ಯವಂಶದಲ್ಲಿ ಮುಳುಗಿ, ಪುರಾಣಗಳಲ್ಲಿ ವರ್ಣಿಸಿರುವ ಅವರ ದೇವತ್ವವು ನಷ್ಟವಾಗಿರುವುದು. ಅಜರಾಮರರಾಗಿ ಬಾಳಿ ಮೆರೆಯುವುದರ ಬದಲಾಗಿ ಪ್ಲೇಗ್, ಕಾಲರಾ, ಇನ್ಫ್ಲುಯೆಂಜಾ, ಮಲೇರಿಯಾ, ಮೊದಲಾದ ಘೋರ ವ್ಯಾಧಿಗಳಿಗೆ ತುತ್ತಾಗಿ ಸಾಯುತ್ತಿರುವರಲ್ಲದೆ, ಸ್ವಾತಂತ್ರ್ಯವನ್ನು ಕಳಕೊಂಡವರಾಗಿ, ಬಹುಸಂಖ್ಯಾತ ಜನರು ಅನ್ನಕ್ಕೂ, ಬಟ್ಟೆಗೂ ಕಷ್ಟಪಟ್ಟು ನರಳುತ್ತಿರಬೇಕಾಗಿರುವುದು. ಇಂತಹ ಕಷ್ಟತರವಾದ ಪರಿಸ್ಥಿತಿಯಿಂದ ಪಾರಾಗಲು ಒಬ್ಬೊಬ್ಬ ವಿದ್ವಾಂಸರು ಯಾ ಧುರೀಣರು ಒಂದೊಂದು ವಿಧವಾಗಿ ಜನತೆಯು ಅನುಸರಿಸಬೇಕಾದ ಸೂತ್ರಗಳನ್ನು ಬೋಧಿಸುತ್ತಿರುವರು.

ಕೆಲವರು ವಿದ್ಯಾಪ್ರಸಾರದಿಂದ ಎಲ್ಲವೂ ಸಾಧ್ಯವಾಗುವುದು, ಆದಕ್ಕಾಗಿ ನಾವು ಮೊದಲು ಸ್ತ್ರೀ ಪುರುಷರೆಂಬ ಭೇದವೆಣಿಸದೆ, ಚಿಕ್ಕ ಬಾಲಕರಿಂದ—ವೃದ್ಧರವರೆಗೂ ವಿದ್ಯಾಪ್ರಸಾರ ಮಾಡಬೇಕೆನ್ನುತ್ತಿರುವರು. ಕೆಲವರು ಸಾಮಾಜಿಕ ಸುಧಾರಣೆಯೇ ದೇಶದ ತರಣೋಪಾಯವು, ಆದುದರಿಂದ ಮೊದಲು ನಮ್ಮಲ್ಲಿರುವ ಜಾತಿಭೇಧಗಳನ್ನು ನಿರ್ಮೂಲನಗೊಳಿಸಿ, ಶ್ರೀಮಂತರು ಬಡವರು ಎಂಬ ಅಸಮಾನತೆಯನ್ನು ನಷ್ಟಗೊಳಿಸಿ, ಸಮಾನತೆಯನ್ನುಂಟುಮಾಡಬೇಕೆನ್ನುತ್ತಿರುವರು. ಉಗ್ರ ರಾಷ್ಟ್ರೀಯ ಪಕ್ಷದವರು ಏನಕೇನ ಪ್ರಕಾರದಿಂದ ಸರಕಾರವನ್ನು ಮುರಿದಿಕ್ಕಿ ಸ್ವಾತಂತ್ರ್ಯ ಪಡೆಯಬೇಕೆನ್ನುತ್ತಿರುವರು. ರಾಷ್ಟ್ರೀಯ ಸಭೆಯವರು ಸಂಪೂರ್ಣ ಸ್ವಾತಂತ್ರ್ಯವನ್ನು ಗಳಿಸಿದ ವಿನಹ ಹಿಂದೂದೇಶವು ಭಾಗ್ಯಶಾಲಿಯಾಗಿ ಮೆರೆಯಲಾರದು, ಆದಕ್ಕಾಗಿ ಅಖಿಲ ಹಿಂದೀರಾಷ್ಟ್ರವು ರಾಷ್ಟ್ರಸಭೆಯ ಆಜ್ಞಾನುಸಾರ ಶಾಂತತೆಯಿಂದ ವರ್ತಿಸಿ ಸ್ವರಾಜ್ಯವನ್ನು ಸಾಧಿಸಬೇಕೆನ್ನುತ್ತಿರುವರು. ಔದ್ಯೋಗಿಕ ಮತ್ತು ವಿಜ್ಞಾನ ತಜ್ಞರು, "ಸರ್ವೇಗುಣಾ ಕಾಂಚನ ಮಾಶ್ರಯಂತಿ" ಎಲ್ಲವು ದ್ರವ್ಯದಿಂದ ಸಾಧಿಸಬಹುದು, ಆದಕಾರಣ ಮೊದಲು ದೇಶಿ ಕೈಗಾರಿಕೆಯ ಪುನರುಜ್ಜೀವನ, ಸ್ವದೇಶದಲ್ಲಿ ಅನೇಕಾನೇಕ ದೊಡ್ಡದೊಡ್ಡ ಕಾರ್ಖಾನೆಗಳನ್ನು ಸ್ಥಾಪಿಸಿ ದೇಶದ ಸಂಪತ್ತನ್ನು ವೃದ್ಧಿಗೊಳಿಸುವುದಲ್ಲದೆ, ಇಷ್ಟರ ತನಕ ವ್ಯಾಪಾರಮೂಲಕ ವಿದೇಶಗಳಿಗೆ ಗಂಗಾಪ್ರವಾಹದಂತೆ ಹರಿದೋದ ಸಂಪತ್ತನ್ನು ಹಿಂದಕ್ಕೆ ಸೆಳೆದು ತರಬೇಕೆನ್ನುವರು.

ಆದರೆ, ಮೇಲಿನಂತೆ ಪ್ರತಿಯೋರ್ವರೂ ಹೇಳುತ್ತಿರುವುದರಲ್ಲಿ ನಾವು ಯಾವುದನ್ನು ಸತ್ಯವೆಂದೆಣಿಸಿ ಅವನ್ನು ಅನುಸರಿಸಬಹುದು ? ಪ್ರತಿಯೋರ್ವರ ಮಾತೂ ಸತ್ಯವಾದುದೆ. ಆದರೆ, ಮೇಲಿನ ಉಪಾಯಗಳಲ್ಲಿ ಯಾವುದಾದರು ಒಂದೇ ಉಪಾಯದಿಂದ ಭಾರತೀಯರ ಕಾರ್ಯವು ಸಾಧ್ಯವಾಗಲಾರದು. ಆದಕಾರಣ ಮೇಲಿನ ವಿಚಾರಗಳಿಗೆ ಸೇರದಿರುವ ಒಂದು ವಿಚಾರವಿರುವುದು. ಅದೇ ಗ್ರಾಮ ಸಂಘಟನೆ ಯಾ ಹಳ್ಳಿಗಳ ಪುನರುಜ್ಜೀವನ "ಸರ್ವಾರಂಭೇಸ್ತಂಡುಲಾ ಪ್ರಸ್ತಮೂಲಃ" ಎಂಬುವಂತೆ ಹೊಟ್ಟೆಗೆ ಅನ್ನವಿಲ್ಲದೆ ಯಾವುದೂ ಸಾಧ್ಯವಾಗಲಾರದು! ಆದಕಾರಣ ಕೃಷಿಯೇ ದೇಶದ ಭಾಗ್ಯವು, ಸರ್ವ ಸಂಪತ್ತು. ಅಥಏವ ನಮ್ಮ ದೇಶದ ೯೩.೭ನೇ ಇಸವಿಯ ಖಾನೇಷು ಮಾರಿಯ ಲೆಖ್ಖದಂತೆ ನಮ್ಮಲ್ಲಿರುವ ನಿರುದ್ಯೋಗಿಗಳೆಷ್ಟೆಂಬುದನ್ನು ಮೊದಲು ತಿಳಕೊಂಡು ಅನಂತರ ಮೇಲಿನ ವಿಷಯಗಳೊಂದಿಗೆ ಕೃಷಿ ಸುಧಾರಣೆಯೂ ಅತ್ಯಗತದ ಯಾ ಪ್ರಾಮುಖ್ಯ ವಿಷಯವೆಂಬುದನ್ನಾಗಿ ಕೂಡಿಸುವಾ. ನಮಗೆ ತಿಳದೀತು ಮಾನವನ ಸರ್ವಾಂಗಗಳೂ ಸಂಯೋಗ ರೀತ್ಯಾ ಸರ್ವೇಂದ್ರಿಯಗಳೂ ಕೆಲಸ ಮಾಡಬೇಕು. ಇಲ್ಲದೆಹೋದರೆ ಆ ಮಾನವನ ಜೀವನವು ಸರಿಯಾಗಿ ನಡೆ

ಯಲಾರದು. ಇದರಂತೆಯೇ ಎಲ್ಲಾ ಪಕ್ಷ ಯಾ ವಿಚಾರದವರು ಒಂದಾಗಿ ನಡೆದರೆ ಭರತಭೂಮಿಯು ಬೇಗನೆ ಸುಸನ್ನಳಾಗುವಳು, ಸ್ವತಂತ್ರಳಾಗುವಳು.

ಕಳೆದ ೧೯೩೧ನೇ ಇಸವಿಯಲ್ಲಾದ ಖಾನೇಶುಮಾರಿ (Census) ಪ್ರಕಾರ ಉದ್ಯೋಗಿಗಳು ಅಂದರೆ ದ್ರವ್ಯಾರ್ಜನೆ ಮಾಡುವವರು ಮತ್ತು ನಿರುದ್ಯೋಗಿಗಳು ಯಾ ಸಂಪಾದನೆಯಿಲ್ಲದರೆಂಬ ಮಾಮೂಲಿನ ಎರಡು ವಿಭಾಗಗಳು ಮಾಡಲ್ಪಟ್ಟಿರುವವಲ್ಲದೆ, ಈ ಸಲ ಹೆಚ್ಚಾಗಿ ಒಬ್ಬರು ಹಣ ಸಂಪಾದಿಸುವುರಾದರೆ ಅವರ ಸಂಪಾದನೆಯುಮೇಲೆ ಅವಲಂಬಿಸಿ ಎಷ್ಟು ಜನರು ಜೀವ ನಡಿಸುತ್ತಿರುವರೆಂಬ ಒಂದು ಹೆಚ್ಚಿನ ವಿಭಾಗ ಕೂಡಿಸಿ ತಯಾರಿಸಿದ ಕೋಷ್ಟಕದಂತೆ ಈ ಕೆಳಗಿನ ಸಂಖ್ಯೆಗಳು ಕೊಡಲ್ಪಟ್ಟಿವೆ.

| | ಜನಸಂಖ್ಯೆ |
|---|---|
| (೧) ಕೆಲಸ ಮಾಡುವ ಜನಗಳು | ೧೨,೫೨,೭೦,೮೨೭ |
| ಮನೆಕೆಲಸದಿಂದ ಜೀವಿಸುವವರು. ಅಂದರೆ ಮೇಲಿನವರ ಮೇಲೆ ಅವಲಂಬಿಸಿರುವವರು | ೨,೮೬,೧೫,೧೬೩ |
| (೨) ಏನೂ ಕೆಲಸವಿಲ್ಲದೆ ಪರಾವಲಂಬನದಿಂದ ಕಾಲಹರಣ ಮಾಡುವವರು | ೧೯,೬೬,೪೩,೬೬೭ |
| ಒಟ್ಟಿಗೆ | ೩೫,೦೫,೨೯,೫೫೭ |

ಮೇಲಿನ ಕೋಷ್ಟಕದಂತೆ ಹೆಚ್ಚುಕಡಿಮೆ ಮನೆಯಲ್ಲಾಗಲೀ ಹೊರಗಾಗಲೀ ಉದ್ಯೋಗ ಮಾಡುವ ಜನಸಂಖ್ಯೆಯು ೧೫,೩೮,೮೫,೮೯೦ ರಷ್ಟು ಇರುವುದು. ಅಂದರೆ ಶೇಕಡ ೪೪ ರಷ್ಟು. ಒಟ್ಟಾರೆ ಹೇಳುವುದಾದರೆ ೧೪ ಯಾ ೧೫ ಕೋಟಿ ಜನರು ಉದ್ಯೋಗಿಗಳಾಗಿ ಮಿಕ್ಕುಳಿದ ೧೯ ಕೋಟಿ ಜನರು ನಿರುದ್ಯೋಗಿಗಳಾಗಿರುವರು !!

## ಹಿಂದಣ ಸಂಖ್ಯೆಯನ್ನು ನೋಡಿ

| | ಕೆಲಸ ಮಾಡುವವರು | ನಿರುದ್ಯೋಗಿಗಳು | ಜುಮ್ಲಾ |
|---|---|---|---|
| ೧೯೧೧ ನೂರಕ್ಕೆ | ೪೭ | ೫೩ | ೧೦೦ |
| ೧೯೨೧ ,, | ೪೬ | ೫೪ | ೧೦೦ |
| ೧೯೩೧ ,, | ೪೪ | ೫೬ | ೧೦೦ |

ನಿರುದ್ಯೋಗಿಗಳ ಈ ಸಂಖ್ಯೆಯು ಅತೀ ದೊಡ್ಡದಾಗಿರುವುದಾದರೂ ಇದರಲ್ಲಿ ವಜಾಮಾಡುವ ಅಂಶವಿರುವುದು. ಕೆಲಸಮಾಡಿ ಹಣ ಸಂಪಾದಿಸುವ ಪ್ರಾಯದ ಮಿತಿಯು ವರ್ಷ ೧೫ ರಿಂದ ೬೦ರ ಪರಿಯಂತವಿರುವುದು. ಮಿಕ್ಕುಳಿದವರು ಚಿಕ್ಕಬಾಲಕರೂ ವೃದ್ಧರೂ ಕೂಡಿರುತ್ತಾರೆ. ಆದಕಾರಣ ಜನರ ವಯೋಮಾನದಂತೆ ವಿಚಾರ ಮಾಡಬೇಕಾಗಿರುವುದು.

ವಯಸ್ಸಿಗನುಸಾರವಾಗಿ ಜನಸಂಖ್ಯೆ

| | | | ಜನಸಂಖ್ಯೆ |
|---|---|---|---|
| ೧೯೩೧ ರಲ್ಲಿ | (೧) | ಪ್ರಾಯ ೧೫ ರಿಂದ ೨೦ | ೩,೧೯,೩೭,೭೯೨ |
| | (೨) | ,, ೨೦ ರಿಂದ ೨೫ | ೩,೩೦,೦೯,೭೭೧ |
| | (೩) | ,, ೨೫ ರಿಂದ ೩೦ | ೩,೦೭,೯೦,೬೪೮ |
| | (೪) | ,, ೩೦ ರಿಂದ ೩೫ | ೨,೭೦,೨೭,೫೨೨ |
| | (೫) | ,, ೩೫ ರಿಂದ ೪೦ | ೨,೧೬,೩೩,೨೭೧ |
| | (೬) | ,, ೪೦ ರಿಂದ ೪೫ | ೧,೮೪,೧೧,೩೨೦ |
| | (೭) | ,, ೪೫ ರಿಂದ ೫೦ | ೧,೪೨,೨೧,೪೦೮ |
| | (೮) | ,, ೫೦ ರಿಂದ ೫೫ | ೧,೧೩,೮೧,೨೦೬ |
| | (೯) | ,, ೫೫ ರಿಂದ ೬೦ | ೩೦,೮೩,೯೫೪ |
| | | | ೧೯,೫೩,೯೭,೩೮೩ |

ಅಂದರೆ ೧೯ ಕೋಟಿ, ೬೦ ಲಕ್ಷ ಜನರು ಕೆಲಸ ಮಾಡಿ ಹಣ ಸಂಪಾದಿಸಬೇಕು. ಈ ಪೈಕಿ ೧೫ ಕೋಟಿ ೪೦ಲಕ್ಷ ಜನರು ಮೇಲೆ ಕಾಣಿಸಿದಂತೆ ಕೆಲಸ ಮಾಡುವವರು (ಉದ್ಯೋಗಿಗಳು) ಇದ್ದೇ ಇರುವರು. ಆದಕಾರಣ ೪ ಕೋಟಿ ೨೦ ಲಕ್ಷ ಜನರು ಅಗತ್ಯವಾಗಿ ಉದ್ಯೋಗಿಗಳಾಗಬೇಕು. ಯಾ ಅವರಿಗೆ ಕೆಲಸ ಒದಗಿಸಬೇಕು. ಇವರಲ್ಲಿಯೂ ಅಶಕ್ತರಾಗಿಯೂ ಕೆಲಸ ಮಾಡಲು ಅಯೋಗ್ಯರಾಗಿಯೂ ಇರುವವರಿದ್ದೇ ಇರಬಹುದು. ಅದಕ್ಕಾಗಿ ಮೇಲಿನ ೪ ಕೋಟಿ ೨೦ ಲಕ್ಷ ಜನಸಂಖ್ಯೆಯಲ್ಲಿ ಅರ್ಧಾಂಶ ಅಂದರೆ, ೨ ಕೋಟಿ ೧೦ ಲಕ್ಷ ಜನರು ನಿಶ್ಚಿತವಾಗಿ ನಿರುದ್ಯೋಗಿಗಳಾಗಿ ಎಣಿಸಬೇಕು. ಇವರಿಗೆ ಕೆಲಸವನ್ನು ಪೂರೈಸುವುದು ಅಗತ್ಯವಿದೆ.

ಮೇಲಿನ ನಿರುದ್ಯೋಗಿ ಜನಸಂಖ್ಯೆಯು ಬಹಳ ದೊಡ್ಡದಾಗಿ ಯಾರಿಗೂ ಕಾಣಲಾರದು. ಆದರೆ ಸಂಖ್ಯೆಯಾ ಅಂಶಗಳ ಮೇಲೆಯೇ ಅವಲಂಬಿಸಿದರದು ಸಮಂಜಸವಾಗಲಾರದು. ಅದು ಸಿದ್ಧಾಂತವಲ್ಲ. ಹಿಂದೂದೇಶದ ನಿರುದ್ಯೋಗಿಗಳ ತಂಡಗಳೇ ಬೇರಾಗಿವೆ. ಇದಲ್ಲದೆ ೧೫ ಕೋಟಿ ೪೦ ಲಕ್ಷ ಜನರಿಗೆ ಸಿಗುವ ಕೆಲಸವು ಅವರು ಉದ್ಯೋಗಿಗಳಾಗಿರುವರೆಂದು ಹೇಳುವಷ್ಟಿರುವುದಲ್ಲದೆ, ನಿಜವಾಗಿ ಅವರಿಗೆ ಅವರ ಉದ್ಯೋಗದ ಪ್ರತಿಫಲವು ಸರಿಯಾಗಿ ಸಿಗದೆ, ಅವರೂ ಅವರ ಕುಟುಂಬದವರೂ, ಅರೆಹೊಟ್ಟೆ ಆಹಾರ ಪಡೆಯುವಂತವರಾಗಿರುತ್ತಾರೆ. ಅವರ ಕಾಯಕಷ್ಟ ಮತ್ತು ಬುದ್ಧಿ ಚಾತುರ್ಯದ ಉಪಯೋಗವು ಅವರು ಸ್ವಂತಕ್ಕಾಗಿ ಆಗುವುದರ ಬದಲಾಗಿ ಪರರ ಉನ್ನತಿಗಾಗಿ ... ಗುತ್ತದೆ. ಇದರ ಅರ್ಥವೇನೆಂದು ಊಹಿಸಬೇಕು? ಪ್ರತ್ಯೇಕವಾಗಿ ಕಂಡು ಬರುವ ೨ ಕೋಟಿ

೧೦ ಲಕ್ಷ ಜನರಿಗೆ ಕೆಲಸಮಾಡುವ ಶಕ್ತಿ ಇದ್ದರೂ ಅವರಿಗೆ ಕೆಲಸವಿಲ್ಲ! ಕೆಲಸ ಮಾಡಿದರೂ ಏನೂ ಲಾಭವಿಲ್ಲ!

### ಸುಶಿಕ್ಷಿತ ನಿರುದ್ಯೋಗಿಗಳು

ಶಿಕ್ಷಣ ಪಡೆದಿರುವ ಜನರ ಅವಸ್ಥೆಯು ಮೇಲಿನದಕ್ಕಿಂತಲೂ ಕಠಿಣತರದ್ದಾಗಿರುವುದು. ಪ್ರತಿ ವರ್ಷ ಶಾಲಾ ಕಾಲೇಜುಗಳಿಂದ ಸಾವಿರಗಟ್ಟಲೆ ಮತ್ತು ಲಕ್ಷಗಟ್ಟಲೆ ವಿದ್ಯಾರ್ಥಿಗಳು ಹೊರಬೀಳುತ್ತಾರೆ. ಇವರೆಲ್ಲರು ನಿರುದ್ಯೋಗಿಗಳಾಗಬೇಕಾಗುತ್ತದೆ. ಇವರ ಯೋಗ್ಯತೆಯು ಸರಕಾರಿ ಯಾ ಖಾಸಗಿ ಸಂಸ್ಥೆಗಳಲ್ಲಿ ನೌಕರಿ, ವಕಾಲತ್ತು, ಇಂಜಿನೀಯರ, ಇತ್ಯಾದಿ ಉದ್ಯೋಗಮಾತ್ರಕ್ಕದ್ದಿರುತ್ತದೆ. ಇಂತಹ ಸಂಸ್ಥೆಗಳು ಈಗ ಸಂಪೂರ್ಣ ಭರ್ತಿಯಾಗಿ ಅವುಗಳ ಬಾಗಿಲು ಮುಚ್ಚಲ್ಪಟ್ಟವೆ. ಎಲ್ಲಿಯಾದರೂ ಕೆಲವರಿಗೆ ದೈವವಶಾತ್ ಪ್ರವೇಶ ದೊರಕಿದರೆ ಅಲ್ಲಿ ಸಿಗುವ ಅಲ್ಪ ವೇತನವು ಹೊಟ್ಟೆತುಂಬುವಂತಿಲ್ಲ! ಕಡೆಗೆ ಅವರಮೇಲೆ ಅವಲಂಬಿಸಿರುವವರ ಮಾತೆತ್ತುವುದೇ ಬೇಡ. ಈಗಿನ ಶಿಕ್ಷಣ ಪದ್ಧತಿಯು ವಿಲಕ್ಷಣವಾಗಿರುವುದು. ಡೊಂಬರವನು ಒಂದೊಂದೇ ಮೆಟ್ಟಲನ್ನು ಹತ್ತಿ ಏಣಿಯಮೇಲೇರುವಂತೆ, ಆ ಏಣಿಯ ಕೊನೆಯ ಮೆಟ್ಟಲಾದ ಬಿ. ಎ., ತಲುಪಿದರೆ ಸರಿ, ಇಲ್ಲವಾದರೆ ಮಧ್ಯದಲ್ಲಿಯೇ ಎಲ್ಲಿಯಾದರೂ ಕಾಲುಜಾರಿದಂತೆ ನಾಶನ ಆಗಿಬಿಟ್ಟರೆ, ಅಂಥವನ ಗತಿಯು "ತ್ರಿಶಂಕು" ವಿನವೆ ಸರಿ! ಶಿಕ್ಷಣದ ದೆಸೆಯಿಂದಾಗಿ ಹಣಕಾಸೂ ಶರೀರ ಸಾಮರ್ಥ್ಯವೂ ನಷ್ಟ! ಹೀಗಾಗಿ ಕಾಯಕಷ್ಟಕ್ಕವರು ಅಂಜುತ್ತಾರೆ. ಸುಶಿಕ್ಷಿತರೆಂದು ಸ್ವಲ್ಪ ಅಭಿಮಾನವೂ ಇದ್ದೇ ಇರುತ್ತದೆ. ಔದ್ಯೋಗಿಕ ಶಿಕ್ಷಣದ ವಾಸನೆಯೂ ಕೂಡಾ ಇಲ್ಲದಿರುವುದರಿಂದ ಅವರ ಸ್ಥಿತಿಯು ಹೇಗಿರಬೇಕು—ಮತ್ತದು ಹೇಗಿರುವುದೆಂಬುದು ಜನಸಾಮಾನ್ಯರ ಅನು-ದಿನದ ಅನುಭವದ ಮಾತಾಗಿದೆ. ಇಂತಹ ಜನರು ನಿರುದ್ಯೋಗಿಗಳೇ ಆಗಿರುತ್ತಾರೆ. ಇಂತಹ ಸುಶಿಕ್ಷಿತ ಸ್ತ್ರೀಪುರುಷರಿಗೆ ಉದ್ಯೋಗವನ್ನು ಒದಗಿಸಿ ಕೊಡುವರಾರು?

ಫ್ರಾನ್ಸ್. ಜರ್ಮನಿ, ಇಂಗ್ಲೆಂಡ್, ಅಮೇರಿಕ, ಆಸ್ಟ್ರೇಲಿಯಾ ಮೊದಲಾದ ಸ್ವತಂತ್ರ ರಾಷ್ಟ್ರಗಳಲ್ಲಿ ಪ್ರತಿ ತಿಂಗಳಲ್ಲೂ ಯಾ ಆಗಾಗ್ಗೆ ಎಷ್ಟು ಜನರು ನಿರುದ್ಯೋಗಿಗಳಾಗಿರುವರೆಂಬ ಸಂಖ್ಯೆಯನ್ನು ಆಯಾ ರಾಷ್ಟ್ರಗಳ ರಾಷ್ಟ್ರೀಯ ಸರಕಾರವು ಪ್ರಕಟಿಸಿ, ಅಂತಹ ಸುಶಿಕ್ಷಿತ ಯಾ ಅಶಿಕ್ಷಿತ ನಿರುದ್ಯೋಗಿ ಬಾಂಧವರಿಗೆ ತಕ್ಕ ಉದ್ಯೋಗವನ್ನು ಒದಗಿಸಿ ತನ್ಮೂಲಕ ಅನ್ನ ಬಟ್ಟೆಯನ್ನು ಪೂರೈಸುತ್ತಾರೆ. ಒಮ್ಮೆಗೆ ಉದ್ಯೋಗ ಒದಗಿಸಲು ಸಾಧ್ಯವಿಲ್ಲವೆಂದಾದರೆ ಸರಕಾರದ ಖಜಾನೆಯಿಂದ ಅವರಿಗೆ ಖರ್ಚಿಗೆ ಕೊಡುತ್ತಾರೆ. ಆದರೆ ನಮ್ಮ ಭರತಭೂಮಿಯಲ್ಲಿ ಇಷ್ಟರತನಕ ಎಷ್ಟು ಜನರು ನಿರುದ್ಯೋಗಿಗಳಾಗಿರುವರೆಂಬ ಸಂಖ್ಯೆಯೇ ಸರಿಯಾಗಿ ಹೊರಬೀಳುವುದಿಲ್ಲ. ಅವರ ಹೊಟ್ಟೆಗೂ ಬಟ್ಟೆಗೂ ಹಣ ಒದಗಿಸುವ ಮಾತಂತಿರಲಿ, ಅವರ ಹೊಟ್ಟೆಗಾಗಿ ಉಪಯೋಗಿಸಲ್ಪಡುವ ಜೀವನಾಧಾರವಾದ ಸ್ವಲ್ಪ ಉಪ್ಪಿಗೂ ಪ್ರತಿಬಾಧಕವಿರುವದು.

ಈ ಮೇಲಿನ ವಿಚಾರಗಳನ್ನು ನಮ್ಮ ಕರ್ಣಾಟಕ ಬಂಧಭಗಿನಿಯರು ಮನಸ್ಸಿಗೆ ತೆಗೆದುಕೊಂಡರೆ, ಅವರ ತಮ್ಮ ಕರ್ತವ್ಯವೇನೆಂಬುದು ಮನಸ್ಸಿಗೆ ಹೊಳೆಯುವುದು. ಆಲಸ್ಯವೃತ್ತಿ, ಅಜ್ಞಾನ ನೈಸರ್ಗಿಕ ಅಡಚಣೆಗಳಿತ್ಯಾದಿಯಿಂದವರು ಪಾರಾಗಲು ಸ್ವಲ್ಪವೂ ಕಾಲವ್ಯಯ ಮಾಡದೆ, ದೇಶದ ಸಂಪದಭಿವೃದ್ಧಿ, ಸ್ವಾತಂತ್ರ್ಯ ಜಾಗ್ರತಿ, ವಿದ್ಯಾಪ್ರಸಾರ, ಶಾರೀರಕ ಶಿಕ್ಷಣ ಮೊದಲಾದ ವಿಷಯಗಳ ಕಡೆಗೆ ತಮ್ಮ ತೀವ್ರವಾದ ದೃಷ್ಟಿಯನ್ನಿಟ್ಟು ಮುಂದರಿಯಬೇಕು. ಕರ್ಣಾಟಕದ ಮುಖಂಡರೂ ಸರಕಾರಗಳೂ ಮೈಸೂರು ಮಹಾರಾಜರ ತಜ್ಞರಾದ ಅಧಿಕಾರಿಗಳೂ ಕರ್ಣಾಟಕದ ಎಲ್ಲಾ ಪತ್ರಿಕೆಗಳೂ ಜಾಗ್ರುತಿಯನ್ನುಂಟು ಮಾಡಿ ಕರ್ಣಾಟಕ ಮಾತೆಯು ಚೇತರಿಸಿಕೊಳ್ಳುವಂತೆ ಪ್ರಯತ್ನಿಸುತ್ತಿರುವರು. ಇದೇ ವಿಚಾರದಿಂದ ಆರ್ಥಿಕ ಸುಧಾರಣೆಗಾಗಿ ಕರ್ಣಾಟಕದ ವಿಮಾವಾಣಿಜ್ಯ ಪತ್ರಿಕೆಯು ವಿಮೆಯ ಮತ್ತು ಬ್ಯಾಂಕುಗಳ ಮಹತ್ವವನ್ನು ಜನತೆಗೆ ಸಾರುತ್ತಿರುವುದು, ವರ್ತಕಧುರೀಣ ಪತ್ರಿಕೆಯು ವ್ಯಾಪಾರ, ನಿರುದ್ಯೋಗಸಮಸ್ಯೆ, ಕೈಗಾರಿಕೆ, ಕೃಷಿಗೋರಕ್ಷಣೆ ಇತ್ಯಾದಿ ಸಾರುತ್ತಿರುವುದು. ಹಳ್ಳಿಯ ಆಳು ಅಥವಾ ಗ್ರಾಮ ಸೇವಕ, ಅರ್ಥಸಾಧಕಪತ್ರಿಕೆ, ಮೊದಲಾದ ಪತ್ರಿಕೆಗಳು ದೇಶದ ಸಂಪದಭಿವೃದ್ಧಿಗಾಗಿ ಪ್ರಯತ್ನ ಪಡುತ್ತಿರುವವು. ಕರ್ಣಾಟಕ ಜನತೆಯು ಇತರ ರಾಷ್ಟ್ರೀಯ; ಸಾಮಾಜಿಕ ವಾಙ್ಮಯಾತ್ಮಕ ಪತ್ರಿಕೆಗಳಿಗೆ ಕೊಡುತ್ತಿರುವ ಪ್ರೋತ್ಸಾಹದಂತೆಯೇ ಇವುಗಳಿಗೂ ಪ್ರೋತ್ಸಾಹವಿತ್ತರೆ, ಕರ್ಣಾಟಕದ ಆರ್ಥಿಕ ಸುಧಾರಣೆಗೆ ಸಹಾಯವಾಗುವುದಲ್ಲದೆ, ಮೇಲಿನ ಪತ್ರಿಕೆಗಳು ಜನ್ಮವೆತ್ತಿರುವ ಉದ್ದಿಶ್ಯಗಳೂ ಸಫಲವಾಗಲಾರವೆ?





# ಕೂಲಿಕಾರರು ಮತ್ತು ಔದ್ಯೋಗಿಕ ವಿಮೆ

ಲೇಖಕರು :
ಶ್ರೀ॥ಎಂ. ಗೋವರ್ಧನರಾಯರು
(Mr. M. Govardhana Rao)
ಜನರಲ್ ಆರ್ಗನೈಜರ್, ಯುನೈಟೆಡ್ ಕರ್ನಾಟಕ ಇನ್ಶೂರೆನ್ಸ್ ಕಂಪನಿ ಲಿ. ಧಾರವಾಡ.



ಜೀವವಿಮಾ ಕಂಪನಿಗಳಲ್ಲಿ ಪ್ರಚಲಿತವಾಗಿರುವ ಸಾಮಾನ್ಯ ವಿಮಾ ಕ್ರಮಗಳು ಸಮಾಜದ ಎಲ್ಲ ಆರ್ಥಿಕ ಅಂತಸ್ತಿನ ಜನರಿಗೂ ಅನುಕೂಲವಾಗಿರುವುದಿಲ್ಲ. ಅವುಗಳು ಕೂಲಿಯಾಳುಗಳ ಕೈಮೀರಿವೆ. ಏಕೆಂದರೆ ಅವರ ಹುಟ್ಟುವಳಿಯು ಕಡಿಮೆ. ಸಾಮಾನ್ಯವಾದ ಎಂಡೋಮೆಂಟ್ ವಿಮೆಯ ಕಂತನ್ನು ಕಟ್ಟುವುದು ಸಹ ಅವರಿಂದಾಗುವುದಿಲ್ಲ. ಆದುದರಿಂದ ಸಕಲ ಜನರಿಗೂ ವಿಮೆಯ ಪ್ರಯೋಜನವು ಆದಷ್ಟು ಹೆಚ್ಚು ಸಿಕ್ಕಬೇಕೆಂಬ ಸದುದ್ದೇಶದಿಂದ ವಿಮಾ ಶಾಸ್ತ್ರಜ್ಞರು ಹಲವು ಬಗೆಯ ವಿಮಾಶಾಖೆಗಳನ್ನು ನಿರ್ಮಿಸಿದ್ದಾರೆ. ಈ ಬಗೆಯ ಪ್ರಯತ್ನಗಳಿಂದ ವಿಮಾ ವಿಸ್ತಾರವು ಬೆಳೆಯುತ್ತ ಬಂದಿದೆ. ಜನರು ವಿಮಾಶಾಸ್ತ್ರವನ್ನು ಸಂಸ್ಕರಿಸಿ ಸುಧಾರಿಸುತ್ತ, ಅದರಿಂದ ಹೆಚ್ಚಿನ ಹಿತವನ್ನೂ ಹಿಂಡಿಕೊಂಡಿದ್ದಾರೆ. ದುರುಪಯೋಗದಿಂದ ವಿಷಫಲಗಳನ್ನೂ ಪಡೆದಿರುವರು.

ಔದ್ಯೋಗಿಕ ವಿಮೆ (Industrial Insurance) ಯು ಸ್ವಲ್ಪ ಹಣಕ್ಕಾಗಿರುವುದು. ಅತ್ಯಂತ ಹೆಚ್ಚಿನ ಪಾಲಿಸಿಯೆಂದರೆ ೫೦೦ ರೂಪಾಯಿಗಳಿಗಿರುವುದು. ಕೆಳಗಿನ ತರಗತಿಯ ಮಧ್ಯಮ ವರ್ಗದವರಿಗೂ ಕೂಲಿಯಾಳುಗಳಿಗೂ ಇದು ಬಹಳ ಅನುಕೂಲವಾಗಿದೆ. ಇದು ಪಾಲುಗಾರಿಕೆಯ ತಳಹದಿಯ ಮೇಲೆ ಕಟ್ಟಿದ ಕ್ರಮವಲ್ಲ. ಪಾಲಿಸಿಯಿಂದ ಪಡೆಯಬಹುದಾದ ಮೊತ್ತವು ನಿರ್ದಿಷ್ಟವಾಗಿದೆ. ಒಂದು ವರ್ಷದ ಅವಧಿಯ ಅಥವಾ ಕ್ಲುಪ್ತಕಾಲದ ನಂತರ ಸಂಭವಿಸುವ ಅಪಾಯಕ್ಕಾಗಿ ಇದರಲ್ಲಿ ತಕ್ಕ ರಕ್ಷಣೆಯಿದೆ. ಅದಲ್ಲದೆ ಕ್ಲುಪ್ತಕಾಲದ ಒಳಗೆ ಒದಗಬಹುದಾದ ದುರ್ಘಟನೆಗಾಗಿ ಸಹ ಇಲ್ಲಿ ಒಂದು ತರಹದ ಸಂರಕ್ಷಣೆಯಿದೆ. ಔದ್ಯೋಗಿಕ ವಿಮೆಯಲ್ಲಿ ಆ ಜೀವವಿಮೆ ಎಂಡೋಮೆಂಟ್ ವಿಮೆಗಳ ಕೋಷ್ಟಕಗಳೂ ಇವೆ. ಪ್ರಾಯ ಪ್ರಬುದ್ಧರಾದ ಮೇಲೆ ೫೦-೫೫ ವರ್ಷಗಳ ವಯಸ್ಸಿನವರಿಗೂ ಇದರಲ್ಲಿ ಸೇರಲು ಎಡೆಯಿದೆ. ಯಾವ ವಯಸ್ಸಾದರೂ ವಿಮೆಯ ದರವು ಒಂದೇ. ಪಾಲಿಸಿಯ ಹಣದ ಮೊತ್ತವು ಮಾತ್ರ ಪಾಲಿಸಿದಾರರ ವಯಸ್ಸಿಗನುಸರಿಸಿ ವ್ಯತ್ಯಾಸವಾಗುವುದು. ಕಂತುಗಳನ್ನು ಸಾಮಾನ್ಯವಾಗಿ ಸಂಬಳದ ಸಮಯದಲ್ಲಿ ತುಂಬಲು ಬರುವಂತೆ ಏರ್ಪಾಟಿರುವುದು. ಅಂದಬಳಿಕ ತಿಂಗಳ ಅಥವಾ ವಾರದ ಅವಧಿಯ ಕಂತುಗಳೇ ಹೆಚ್ಚೆಂದು ಹೇಳಬಹುದು.

ಆದುದರಿಂದ ಸಾಮಾನ್ಯ ಜೀವವಿಮೆಗೂ ಔದ್ಯೋಗಿಕ ವಿಮೆಗೂ ಹೆಚ್ಚು ಬಿಡುವುದಿಲ್ಲ. ಕಡಿಮೆ ಹುಟ್ಟುವಳಿಯ ಬಡವರಿಗೆ ಅವರ ಸ್ಥಿತಿಗತಿಗೆ ಸಲ್ಲುವಂತಹ ಸೌಕರ್ಯಗಳು ಮಾತ್ರ ಇದರಲ್ಲಿವೆ. ಪಾಲಿಸಿದಾರನ ವಯಸ್ಸಿನ ಬಗ್ಗೆ ಮಾತ್ರ ಹೆಚ್ಚು ಗಮನವನ್ನು ಕೊಡಲಾಗುವುದು. ವೈದ್ಯಕೀಯ ಪರೀಕ್ಷೆಯಿಲ್ಲದಿದ್ದರೂ ಆರೋಗ್ಯದ ಬಗ್ಗೆ ಅನುಮಾನ ಬಾರದಂತೆ ಸರಿಯಾದ ಹೇಳಿಕೆಯನ್ನು ಕೊಡಬೇಕು. ವಸ್ತುಸ್ಥಿತಿಗೆ ಬಿಡುವ ಅಥವಾ ಸುಳ್ಳು ಹೇಳಿಕೆಗಳನ್ನು ಕೊಟ್ಟರೆ ಪಾಲಿಸಿಯ ಭದ್ರತೆಗೆ ಪೆಟ್ಟು ತಗಲುವ ಸಂಭವವಿದೆ.

ದುಡಿಯುವ ಆಳುಗಳ ಪ್ರಯೋಜನಕ್ಕಾಗಿ ತೀರ ಮೊದಲು ಇಂಗ್ಲೆಂಡಿನಲ್ಲಿ ೧೮೪೮ರಲ್ಲಿ "ಇಂಡಸ್ಟ್ರಿಯಲ್ ಅಂಡ್ ಜನರಲ್ ಕಂಪನಿ" ಎಂಬ ವಿಮಾ ಸಂಘವು ಹೊರಟಿತು. ಟ್ರೇಡ್ ಯೂನಿಯನ್ (ಕೂಲಿಕಾರರ ಸಂಘ) ಗಳ ನೆರವಿನಿಂದ ದೊಡ್ಡ ದೊಡ್ಡ ಕಾರಖಾನೆಗಳ ಆಳುಗಳು ಈ ಕಂಪನಿಯಲ್ಲಿ ಪಾಲಿಸಿಗಳನ್ನು ಪಡೆದು ಇದನ್ನು ಪ್ರೋತ್ಸಾಹಿಸಿದರು. ನಾಲ್ಕೈದು ವರ್ಷಗಳ ಬಳಿಕ ಪ್ರುಡೆನ್ಸಿಯಲ್ ಅಶ್ಯೂರೆನ್ಸ್ ಕಂಪನಿಯು ಪ್ರಬಲವಾಗಿ ಈ ಕಂಪನಿಯ ಆಡಳಿತವನ್ನು ತನ್ನ ಕೈಗೆ ತೆಗೆದು

ಕೊಂಡಿತು. ಇದರ ಮುನ್ನಡೆಯಿಂದ ವಿಮಾ ನಿಪುಣರಲ್ಲಿ ಈ ವಿಮಾ ಯೋಜನೆಯ ಬಗ್ಗೆ ಸದಭಿಪ್ರಾಯಗಳುಂಟಾದುವು.

ಬರಬರುತ್ತ ಇದು ಲೋಕಾದರಕ್ಕೂ ತಕ್ಕುದಾಯಿತು. ಇಂದು ಯೂರೋಪ್ ಅಮೇರಿಕೆಗಳಲ್ಲಿ ಲಕ್ಷೋಪಲಕ್ಷ ಪಾಲಿಸಿದಾರರುಳ್ಳ ಲೆಕ್ಕವಿಲ್ಲದ ಔದ್ಯೋಗಿಕ ವಿಮಾ ಸಂಘಗಳಿವೆ. ಅಲ್ಲಿಯ ಒಂದೊಂದು ನಾಡಿನ ಈ ಸಂಬಂಧದ ಅಂಕೆಸಂಖೆಗಳನ್ನು ಕೊಟ್ಟರೂ ನಂಬಿಕೆಯು ಹುಟ್ಟುವಂತಿದೆ. ಔದ್ಯೋಗಿಕ ವಿಮಾಕ್ರಮದ ವ್ಯಾಪ್ತಿಯು ಅಲ್ಲಿ ಅಷ್ಟಾಗಿದೆ. ಇತ್ತೀಚೆಗೆ ಅಲ್ಲಿಯ ಔದ್ಯೋಗಿಕ ವಿಮಾ ಸಂಘಗಳು ಅತ್ಯಂತ ಉಪಯೋಗದ ಮತ್ತು ಸಾಮಾಜಿಕ ಹಿತದ ಕಾರ್ಯಗಳನ್ನು ವಿಪುಲವಾಗಿ ಮಾಡುತ್ತಿವೆ. ಜನತೆಯ ಆರೋಗ್ಯದ ವಿಷಯದಲ್ಲಿ ಇವುಗಳು ಪಟ್ಟ ಪರಿಶ್ರಮದ ಫಲವಾಗಿ ಪಾಲಿಸಿದಾರರ ಮರಣಪ್ರಮಾಣವು ಕಡಿಮೆಯಾಗಿದೆ. ಜನತೆಗೆ ಕಂಪನಿಗಳಲ್ಲಿ ಹೆಚ್ಚಿನ ಆದರಾಭಿಮಾನಗಳು ಉಂಟಾಗಿವೆ.

ಈ ವಿಧದ ವಿಮಾ ಸಂಘಗಳಿಗೆ ಹಿಂದುಸ್ಥಾನದಲ್ಲಿ ಯಾವ ಯಶಸ್ಸು ಸಿಕ್ಕಿದೆ? ಅವುಗಳ ಏಳಿಗೆಗೆ ಇಲ್ಲಿ ಎಷ್ಟು ಎಡೆಯಿದೆ? ಅದಕ್ಕಾಗಿ ನಾವು ಯಾವ ಉಪಾಯಗಳನ್ನು ಕೈಕೊಳ್ಳಬೇಕು? ಎಂಬ ಅಂಶಗಳನ್ನು ನಾವು ಚೆನ್ನಾಗಿ ಆಲೋಚಿಸಬೇಕು.

ಬೇರೆ ಬೇರೆ ಕೈಗಾರಿಕೆ ಉದ್ಯೋಗಗಳಲ್ಲಿ ತೊಡಗಿದ ಆಳುಗಳ ಸಂಖ್ಯಾಬಲವನ್ನು ಕಂಡುಹಿಡಿಯುವ ಇಲ್ಲಿಯ ಕ್ರಮವು ಸರಿಯಾಗಿಲ್ಲದಿರುವುದರಿಂದ ಕೂಲಿಯಾಳುಗಳ ಸಮೂಹವೆಷ್ಟಿದೆಯೆಂಬುದನ್ನು ನಿರ್ಣಯಿಸುವುದು ಕಷ್ಟ. ಇಂಡಿಯನ್ ಫ್ರಾಂಚಾಯ್ಜ್ ರಿಪೋರ್ಟಿನ ಮೇರೆಗೆ ಇಲ್ಲಿ ಕೃಷಿಯ ಹೊರತು ಇತರ ಉದ್ಯೋಗಗಳಲ್ಲಿಯ ದುಡಿತದಾಳುಗಳ ಸಂಖೆಯು ೨೫೦ ಲಕ್ಷವೆಂದು ಕಂಡುಬರುತ್ತದೆ. ಆದರೆ ಸುಸಂಘಟಿತರಾದ ಕೂಲಿಕಾರರ ಬಲವು ೫೦ ಲಕ್ಷವೆಂದು ತೋರುತ್ತದೆ. ಈ ಕೂಲಿಕಾರರು ಬಟ್ಟೆ, ಬಣ್ಣ, ತೊಗಲು, ಆಹಾರ, ರಸಾಯನದ್ರವ್ಯ, ಅಂಚೆಯ ಕೆಲಸ, ಧಾತುಗಳು, ಮರದ ಕೆಲಸ, ಕಟ್ಟಡಗಳು, ನಾರಿನ ವ್ಯವಸಾಯ, ವಾಹನ, ವಿದ್ಯುದ್ದೀಪ ಮುಂತಾದ ಹಲವು ಉದ್ಯೋಗಗಳಲ್ಲಿ ದುಡಿಯುತ್ತಿದ್ದಾರೆ.

ಒಕ್ಕಲತನ ಕೆಲಸಗಳಲ್ಲಿ ಸೇರಿದ ಆಳುಗಳನ್ನು ನಾನು ಲೆಕ್ಕದ ಹೊರಗಿಟ್ಟಿದ್ದೇನೆ. ಏಕೆಂದರೆ,

೧ ಅವರಿಗೆ ತಿಂಗಳ ಅಥವಾ ವಾರದ ವಿಮಾ ಕಂತುಗಳನ್ನು ಕಟ್ಟಲಾಗುವುದಿಲ್ಲ. ಅವರು ಸುಗ್ಗಿಯ ಕಾಲಕ್ಕೊಮ್ಮೆ ಕಟ್ಟಬಲ್ಲರು.

೨ ನಗರಗಳಲ್ಲಿಯ ಕರ್ಮಶಾಲೆ (workshop) ಕಾರಖಾನೆ (factory) ಗಳಲ್ಲಿ ದುಡಿಯುವ ಆಳುಗಳಿಗಿಂತ ಒಕ್ಕಲಿಗರು ಸಾಧಾರಣವಾಗಿ ಹೆಚ್ಚು ಅಜ್ಞಾನಿಗಳು. ವಿಮಾ ವಿಷಯಕ್ಕೆ ಹೇಸುವವರೂ ಆಗಿದ್ದಾರೆ.

೩ ಬೆಳೆ ಬಾರದೆ ಕಂತುಗಳನ್ನು ಕಟ್ಟಲಾಗದ ಸಂದರ್ಭಗಳು ಅವರಿಗೆ ಹೆಚ್ಚು ಒದಗುವುವು.

೪ ಔದ್ಯೋಗಿಕ ವಿಮಾ ಸಂಘಗಳ ದೃಷ್ಟಿಯಿಂದಲೂ, ಒಕ್ಕಲತನದ ಆಳುಗಳಿಂದ ಹಣಕೂಡಿಸಲು ಹೆಚ್ಚು ವೆಚ್ಚವು ತಗಲುವುದರಿಂದ, ಅವರನ್ನು ಈ ವಿಮಾಕ್ರಮದಲ್ಲಿ ಸೇರಿಸುವುದು ಅಷ್ಟು ಸುಖವಲ್ಲ.

ಆದರೆ ಔದ್ಯೋಗಿಕ ಕೂಲಿಕಾರರಿಗಿಂತ ಒಕ್ಕಲಿಗರ ಮರಣಪ್ರಮಾಣವು ಕಡಿಮೆಯಾಗಿರುವುದು ನಿಜ. ಆದರೂ ಔದ್ಯೋಗಿಕ ವಿಮಾ ಸಂಘಗಳ ಒಡೆಯರು ಮುಂದೆ ಔದ್ಯೋಗಿಕ ಕೂಲಿಕಾರರಲ್ಲಿ ತಮ್ಮ ಕಾರ್ಯವನ್ನು ಪ್ರಾರಂಭಿಸಬೇಕು.

ಇಡೀ ಹಿಂದುಸ್ಥಾನದಲ್ಲಿ ಬೇರೆ ಬೇರೆ ಬಗೆಯ ಸುಮಾರು ೮-೯ ಸಾವಿರ ಕಾರಖಾನೆಗಳಿವೆ. ಅವುಗಳಲ್ಲಿ ೨೦ ಲಕ್ಷಕ್ಕಿಂತ ಹೆಚ್ಚು ಆಳುಗಳು ದುಡಿಯುತ್ತಿದ್ದಾರೆ. ಇವುಗಳಲ್ಲಿ ನಿಪುಣ ಕೆಲಸಗಾರರಿಗೆ ಹೆಚ್ಚು ಸಂಬಳವು ಸಿಕ್ಕುತ್ತದೆ. ಅಂತಹರು ಸುಮಾರು ೮-೯ ಲಕ್ಷ ಇರಬಹುದು. ಈ ಕೆಲಸಗಾರರೆಲ್ಲ ಒಂದೊಂದೇ ಕಡೆಗೆ ವಾಸಿಸುತ್ತಿದ್ದಾರೆ. ಆದುದರಿಂದ ವಿಮಾ ಕಾರ್ಯಕ್ಕೆ ಹೆಚ್ಚು ಅನುಕೂಲವಿದೆ. ಅಲ್ಲದೆ ಇವರು ಕಲ್ಕತ್ತಾ, ಮುಂಬಾಯಿ, ಅಹಮ್ಮದಾಬಾದ, ಕಾನಪೂರ, ಬೆಂಗಳೂರುಗಳಂತಹ ನಗರಗಳಲ್ಲಿರುವರು. ಮಿಕ್ಕ ಕೂಲಿಕಾರರ ಸಲುವಾಗಿ ದೊಡ್ಡ ದೊಡ್ಡ ವ್ಯಾಪಾರದ ಪಟ್ಟಣಗಳಲ್ಲಿ ವಿಮಾ ಕಾರ್ಯವು ನಡೆಯಬೇಕು.

ಔದ್ಯೋಗಿಕ ವಿಮಾ ಸಂಘಗಳಿಗೆ ಈ ಕೆಳಗಿನ ಸಮಸ್ಯೆಗಳನ್ನೆದುರಿಸಬೇಕಾಗುವುದು.

೧ ಕೂಲಿಕಾರರ ತಿಳಿಗೇಡಿತನ, ಕ್ರಮಗೇಡಿಯಾದ ಬಾಳು, ವಿಮಾ ವಿಷಯದ ತಿರಸ್ಕಾರ.

೨ ಅವರು ಇಂದು ಇಲ್ಲಿದ್ದರೆ ನಾಳೆ ಅಲ್ಲಿರುವರು. ಆದುದರಿಂದ ಅವರ ಕೆಲಸವೂ ಸ್ಥಿರವಾದುದಲ್ಲ.

ವಾಸಸ್ಥಳ ಮತ್ತು ಉದ್ಯೋಗಗಳ ಅಸ್ಥಿರತೆಯನ್ನು ಗಮನಕ್ಕೆ ತರಬೇಕು.

೩ ಸಾಮಾಜಿಕ, ಆರ್ಥಿಕ, ಮತ್ತು ನೈರ್ಮಲ್ಯದ ಕಾರಣಗಳ ಮೂಲಕ ಅವರ ಮರಣ ಪ್ರಮಾಣವು ದೊಡ್ಡದಾಗಿರುವದು.

೪ ಅದಲ್ಲದೆ ಈ ಕೂಲಿಕಾರರಲ್ಲಿಯ ನಿಧನ ಪ್ರಮಾಣನಿರ್ಣಾಯಕ ಪಟ್ಟಿಯನ್ನು ಸಿದ್ಧಪಡಿಸುವ ಸಾಮಗ್ರಿಗಳ ಕೊರತೆಯಿರುವುದು.

೫ ವಿಮಾದಾರರನ್ನು ದೊರಕಿಸಿ ವಿಮಾಕಾರ್ಯವನ್ನು ಸಾಗಿಸುವ ವ್ಯಯ ಪ್ರಮಾಣವು ಹೆಚ್ಚಾಗಿರುವುದು.

೬ ಅವರ ಪಾಲಿಸಿಗಳು ರದ್ದಾಗುವ ಸಂಭವವು ಹೆಚ್ಚು.

### ಈ ಸಮಸ್ಯೆಗಳ ಪರಿಹಾರೋಪಾಯಗಳು

೧ ಕಡಿಮೆ ಸಂಬಳದಿಂದ ಬಾಳನ್ನು ನಡೆಸುವ ಬಡ ಕೂಲಿಕಾರರಲ್ಲಿ ತಿಳಿಗೇಡಿತನವೂ ವಿಮೆಯ ಬಗ್ಗೆ ತಿರಸ್ಕಾರವೂ ಇದೆ ಯೆಂಬುದನ್ನು ಎಲ್ಲರೂ ಬಲ್ಲರು. ಈ ವರೆಗೆ ಕೆಲಸ ಮಾಡಿದ ಕೆಲವು ವಿಮಾ ಕಂಪನಿಗಳ ಸತತಶ್ರಮದಿಂದ ಈ ಅಜ್ಞಾನ ತಿರಸ್ಕಾರಗಳು ಆದಷ್ಟು ಕಡಿಮೆಯಾಗಿರುವದೂ ನಿಜ. ಆದರೆ ಔದ್ಯೋಗಿಕ ವಿಮಾ ಸಂಘಗಳು ಈ ಕೆಳಗಿನ ಉಪಾಯಗಳನ್ನು ಕೈಕೊಂಡರೆ ಒಳಿತಾಗುವುದು.

(೧) ಕೂಲಿಕಾರರ ಹಿತಸಂಬಂಧಗಳನ್ನು ಅರಿತು ಅವರ ಕಷ್ಟನಷ್ಟಗಳ ಪರಿಹಾರ ಪ್ರಯತ್ನಗಳಲ್ಲಿ ಬೆರೆಯಬೇಕು. ಟ್ರೇಡ್ ಯೂನಿಯನ್‌ಗಳ ಸಹಾನುಭೂತಿಯನ್ನು ಸಂಪಾದಿಸಬೇಕು.

(೨) ತಮ್ಮ ವೆಚ್ಚವು ಹೆಚ್ಚಾಗದಂತೆ ಅವರ ಕಲ್ಯಾಣಕಾರಕ ಕಾರ್ಯಗಳನ್ನು ಕೈಕೊಳ್ಳಬೇಕು.

(೩) ಸಣ್ಣ ಕತೆಗಳು, ವಾಕ್ಪಟಗಳು, ಪ್ರಕಟಣೆಗಳು, ಆರೋಗ್ಯದ ವಿಷಯದ ಬರಿಹಗಳು ಮುಂತಾದವುಗಳ ಮೂಲಕ ಪ್ರಚಾರ ಕಾರ್ಯವನ್ನು ಸಾಗಿಸಬೇಕು.

(೪) ಅವರಿಗೆ ಔಷಧೋಪಚಾರಗಳ ಸಹಾಯ್ಯವನ್ನೊದಗಿಸಬೇಕು.

### ೨. ಕೂಲಿಕಾರರ ಕದಲುವಿಕೆ

ಕೂಲಿಕಾರರು ಒಂದು ಸ್ಥಳದಿಂದ ಇನ್ನೊಂದಕ್ಕೆ ಹೋಗುವ ಸಂಭವ ಹೆಚ್ಚೆಂದು ಹೇಳಿದ್ದೇನಷ್ಟೇ? ಆದರೆ ನಿಪುಣ ಕೆಲಸಗಾರರಿಗಿಂತ ಸಾಮಾನ್ಯ ಕೆಲಸಗಾರರು ಸ್ಥಳಾಂತರ ಮಾಡುವುದೇ ಹೆಚ್ಚು. ಆದುದರಿಂದಲೇ ವಿಮಾಕಾರಕ್ಕಾಗಿ ಈ ನಿಪುಣ ಕೆಲಸಗಾರರ (Skilled Labour) ಗುಂಪನ್ನೇ ವಿಶೇಷವಾಗಿ ಆರಿಸಿಕೊಳ್ಳಬೇಕೆಂದು ನಾನು ಸೂಚಿಸಿದುದು. ಪಾಲಿಸಿಗಳನ್ನು ಬದಲಿಸುವ ತ್ಯಾಗಮೌಲ್ಯದ ಮತ್ತು ಹಣ ತುಂಬಿದ (Paid-up) ಪಾಲಿಸಿಯ ವಿಷಯದ ನೇಮಗಳಲ್ಲಿ ಅವರಿಗೆ ವಿಶೇಷ ಅನುಕೂಲತೆಗಳನ್ನೊದಗಿಸಿಕೊಡಬೇಕು. ಅವರಿಗೆ ಯಾವ ಕಾರಣದಿಂದಲೂ ನಷ್ಟವಾಗದಂತೆ ಹೆಚ್ಚಿನ ಸೌಕರ್ಯಗಳನ್ನುಂಟುಮಾಡಬೇಕು.

### ೩. ಮರಣ ಪ್ರಮಾಣ

ಕೂಲಿಕಾರರ ಮರಣದ ಪ್ರಮಾಣವನ್ನು ಕಂಡುಹಿಡಿಯಲು ಅನುಕೂಲವಾದ ಸಾಮಗ್ರಿಯ ಕೊರತೆಯಿದೆಯೆಂಬುದು ನಿಜ. ಆದರೆ ಇತರ ಆಳುಗಳಿಗಿಂತ ಕಾರಖಾನೆಗಳಲ್ಲಿ ದುಡಿಯುವ ಕೂಲಿಕಾರರ ಮರಣ ಪ್ರಮಾಣವು ಹೆಚ್ಚಾಗಿರುವುದು. ಕಂಪನಿಯವರು ಈ ಬಗ್ಗೆ ಹೆಚ್ಚು ಜಾಗರೂಕರಾಗಿರಬೇಕು. ಅವರಿಗಾಗಿ ವಿಮೆಯ ಕೋಷ್ಟಕಗಳನ್ನು ತಕ್ಕ ನಿರ್ಬಂಧಗಳೊಡನೆ ನಿರ್ಮಿಸಬೇಕು. ಆದರೆ ಇತ್ತೀಚಿಗಿನ ಕೂಲಿಕಾರರ ಚಳವಳದ ಮೂಲಕ ಅವರ ಆರೋಗ್ಯವು ಹೆಚ್ಚು ಸುಧಾರಿಸಬಹುದು. ಅವರ ವಾಸಸ್ಥಳಗಳು ಬೆಳಕು ಗಾಳಿಗಳಿಂದ ಮತ್ತು ನಿರ್ಮಲಜಲದಿಂದ ಸುಸಜ್ಜಿತವಾಗಬಹುದು. ಇದರಿಂದ ಅವರಲ್ಲಿಯ ಮರಣ ಪ್ರಮಾಣವು ಕುಗ್ಗಬಹುದು. ಅದಲ್ಲದೆ ವಿಮಾ ಸಂಘಗಳೂ ಆರೋಗ್ಯಪ್ರಚಾರವನ್ನು ಕೈಕೊಂಡರೆ ಒಳಿತಾಗುವುದು.

### ೪. ವ್ಯಯ ಪ್ರಮಾಣ

ಔದ್ಯೋಗಿಕ ವಿಮಾ ಸಂಘದವರು ಕೂಲಿಕಾರರ ಬಾಗಿಲಿಗೆ ಹೋಗಿ ಕಂತುಗಳ ಹಣವನ್ನು ವಸೂಲು ಮಾಡಬೇಕಾಗಿರುವುದರಿಂದ ಇತರ ಜೀವವಿಮಾ ಸಂಘಗಳ ವೆಚ್ಚಕ್ಕಿಂತ ಇವರ ವೆಚ್ಚವು ಹೆಚ್ಚಾಗುವುದು. ಆದರೆ ದೊಡ್ಡ ದೊಡ್ಡ ಉದ್ಯೋಗ ಕೇಂದ್ರಗಳಾದ ಪಟ್ಟಣಗಳಲ್ಲಿ ಔದ್ಯೋಗಿಕ ವಿಮಾ ಸಂಘಗಳನ್ನು ಹೊರಡಿಸಿದರೆ ಖರ್ಚು ಕಡಿಮೆಯಾಗಬಲ್ಲುದು. ಉದ್ಯಮ ಪ್ರಭುಗಳ ಮತ್ತು ಗಿರಣಿ

ಕಾರಖಾನೆಗಳ ಒಡೆಯರ ಸ್ನೇಹ-ಸಹಾನುಭೂತಿಗಳಿಗೆ ಈ ವಿಮಾ ಸಂಘಗಳು ತಕ್ಕ ನಂಬುಗೆಯನ್ನು ಹುಟ್ಟಿಸಿ ಪಾತ್ರವಾದುವೆಂದರೆ ಕೂಲಿಕಾರರ ಕಂತುಗಳನ್ನು ಅವರಿಂದಲೇ ನೇರವಾಗಿ ಸುಲಭದಿಂದ ಪಡೆಯಬಹುದು. ಇದರಿಂದ ಪಾಲಿಸಿಗಳು ಬಿದ್ದು ಹೋಗುವ (ರದ್ದಾಗುವ) ಸಂಭವವೂ ಕಡಿಮೆಯಾಗುವುದು. ಅದಲ್ಲದೆ ಈ ಒದ್ಯೋಗಿಕ ವಿಮಾ ಪದ್ಧತಿಯು ಗೆಲವುಗಟ್ಟಿ ನಡೆಯಬೇಕಾದರೆ ಅದನ್ನು ಕೈಕೊಂಡವರು ಕೂಲಿಕಾರರ ಹಿತಬುದ್ಧಿಯುಳ್ಳವರಾಗಬೇಕು ಹಣಕ್ಕಾಗಿ ನೇಣುಹಾಕಿಕೊಳ್ಳುವವರಿಂದ ಇಂತಹ ಕಂಪನಿಗಳು ಜಯಶೀಲವಾಗಿ ನಡೆಯಲಾರವು. ಕಂಪನಿಗಳ ಆಡಳಿತದಾರರು ಹೇರಳವಾದ ಸಂಬಳಗಳನ್ನೂ ಸೆಳೆದರೆ ಸೋಲು ಕಟ್ಟಿಟ್ಟದ್ದು. ಸಾಮಾನ್ಯ ಜೀವವಿಮಾ ಸಂಘದವರು ಒಬ್ಬರ ಮೇಲೊಬ್ಬರು ಬಿದ್ದು, ಹಿಡಿತವಿಲ್ಲದೆ ಹಣವನ್ನು ಖರ್ಚು ಮಾಡಿ ವಿಮಾ ಕಾರ್ಯವನ್ನು ಮಾಡುತ್ತಿರುವದೇ ದುಷ್ಟ ಪದ್ಧತಿಯೆಂದು ನಿಪುಣರು ಅಭಿಪ್ರಾಯ ಪಡುವಾಗ ಈ ಔದ್ಯೋಗಿಕ ವಿಮಾಸಂಘಗಳ ವಿಷಯವನ್ನು ಇನ್ನೇನು ಹೇಳುವುದು? ಇವುಗಳಲ್ಲಿರುವುದು ಬಡವರು ಬೆವರು ಸುರಿಸಿ ಕಾಸು ಕಾಸು ಕೂಡಿಸಿಟ್ಟ ಹಣ. ಆದುದರಿಂದ ಆಡಳಿತದಲ್ಲಿ ಮಿತವ್ಯಯದೃಷ್ಟಿಯು ಅವಶ್ಯವಾಗಿಬೇಕು.

### ೫ ಪಾಲಿಸಿಯು ರದ್ದಾಗುವಿಕೆ

ಔದ್ಯೋಗಿಕ ಪಾಲಿಸಿಯು ಬಿದ್ದುಹೋಗುವ ಸಂಭವ ಹೆಚ್ಚು. ಸಾಮಾನ್ಯ ಪಾಲಿಸಿಯು ರದ್ದಾಗಲು ಬಹಳವಾದರೆ ಎರಡು, ನಾಲ್ಕು, ಹನ್ನೆರಡು ಸಂದರ್ಭಗಳಿದ್ದರೆ ಇದಕ್ಕೆ ವರ್ಷಕ್ಕೆ ೫೨ ಸಂದರ್ಭಗಳಿವೆ. ಗಿರಣಿ-ಕಾರಖಾನೆಗಳ ಮುಷ್ಕರ (ಸಂಪು), ಅಗ್ನಿಯ ಅನಾಹುತ, ಕೆಲಸದಿಂದ ತೆಗೆದೊಗೆಯುವಿಕೆ, ಮುಂತಾದ ಹಲವು ಕಾರ... ಳಿಂದ ಕೂಲಿಕಾರರಿಗೆ ಕಂತುಗಳನ್ನು ಕಟ್ಟಲಿಕ್ಕಾಗಲಿಕ್ಕ... ಆರ್ಥಿಕ ಮುಗ್ಗಟ್ಟಿನಿಂದಲೂ ಒಮ್ಮೊಮ್ಮೆ ಹೀಗಾಗಬಹು... ಆದುದರಿಂದ ಅವರ ಪಾಲಿಸಿಯು ಜಾರಿಯಲ್ಲಿ ಉಳಿ... ವಿಶೇಷ ಅನುಕೂಲತೆಗಳಿರಬೇಕು. ಅಮೇರಿಕೆಯ ಇಂತ... ಕಂಪನಿಗಳ ಅನುಭವದ ಮೇರೆಗೆ ಈ ಕೆಳಗಿನ ಕೆಲ... ಸೌಕರ್ಯಗಳನ್ನೊದಗಿಸುವುದು ಮಿಗಿಲು.

(೧) ಬಡ್ಡಿಯನ್ನು ಕೊಡದೆ ಪಾಲಿಸಿಯನ್ನು ಪು... ಜಾರಿಗೆ ತರುವಂತೆ, ಏರ್ಪಾಟಿರಬೇಕು.

(೨) ಹಣ ತುಂಬಿದ (Paid-up) ಪಾಲಿ... ಮತ್ತು ತ್ಯಾಗ ಮೌಲ್ಯದ (Surrender value) ... ಮಗಳನ್ನು ವಿಶೇಷವಾದ ಔದಾರ್ಯದಿಂದ ರಚಿಸಬೇಕು.

ಇವುಗಳಲ್ಲದೆ ಇನ್ನೂ ಹಲವು ಸೌಕರ್ಯಗಳನ್ನು... ಮಾಡಲು ಬರುವಂತಿದೆ.

ಹಿಂದೂಸ್ಥಾನವು ಹಿಂದಕ್ಕೆ "ಬಹುರತ್ನಾ ವ... ಧರಾ" ಆಗಿದ್ದರೂ ಈಗಿನ ಮಟ್ಟಿಗೆ ಬಡತನದ ಮ... ಲ್ಲಿರುವುದು. ಆದುದರಿಂದ ಸ್ವಲ್ಪ ಹಣದ ಕಂತುಗಳನ್ನು ಕಟ್ಟುವ ವಿಮಾಕ್ರಮುಗಳೇ ಅದಕ್ಕೆ ಹೆಚ್ಚು ಅನುಕೂ... ಔದ್ಯೋಗಿಕ ವಿಮೆಯು ಶಾಸ್ತ್ರ ಶುದ್ಧವಾದುದೆಂ... ಸಂದೇಹವಿಲ್ಲ. ಆದುದರಿಂದ ದುಷ್ಟವಾದ ವಿಭಾಗ ಪ... ತಿಯ (Dividing Plan) ವಿಮೆಗಳಿಗಿಂತ ಈ ಔದ್ಯೋ... ಗಿಕ ವಿಮೆಯನ್ನು ನಮ್ಮಲ್ಲಿ ಹೆಚ್ಚು ಬಳಕೆಗೆ ತರ... ಕೆಂದು ತಜ್ಞರಿಗೆ ತೋರುತ್ತದೆ.



## ಏ ಜ ನ್ಸಿ ಯಿಂ ದ ಆ ದಾ ಯ ವುಂ ಟೆ ?

೧ ಅದು ನಿತ್ಯಕರ್ಮವಾಗಬೇಕು. ಅರ್ಧಮನಸ್ಸು ಖಂಡಿತವಿರಬಾರದು.

೨ ಗೆಲುವೆನೆಂಬ ಛಲಬೇಕು. ಛಲವೊಂದಿದ್ದರೆ ಬೆಟ್ಟಗಳನ್ನು ಗುಡ್ಡಗಳನ್ನಾಗಿ ಮಾಡಬಹುದು. ಗುಡ್ಡಗಳನ್ನು ಬಯಲು ಮಾಡಬಹುದು.

೩ ನಿಶ್ಚಲಧ್ಯೇಯ ನಿರಂತರ ಶ್ರಮಗಳೇ ಗೆಲುವಿಗೆ ರಾಜಮಾರ್ಗ.

# ಲಕ್ಷ್ಮಣರಾಯನ ಸಂಗೀತಕಚೇರಿ !



ಬರೆದವರು :
ವೈದ್ಯಭಾನು
ಶ್ರೀ|| ಡಿ. ಕೆ. ಭಾರದ್ವಾಜ,
ಎಂ. ಡಿ. (ಆಯುರ್ವೇದ)
(Mr. D. K. Bharadwaj)

ಮದ್ರಾಸಿನ ತಿರುವಲ್ಲಿ ಕೇಣಿಯಲ್ಲಿ ಒಂದು ಚಿಕ್ಕ ಮನೆ. ಮನೆಯು ಚಿಕ್ಕದಾಗಿದ್ದರೂ ಅದಕ್ಕೆ ಸುತ್ತಲೂ ಕಾಂಪೌಂಡು. ಕಾಂಪೌಂಡಿನಲ್ಲಿ ಚಿಕ್ಕಪುಟ್ಟ ಹೂ ಗಿಡಗಳು, ತುಳಸಿಗಿಡ, ನಾಲ್ಕು ತೆಂಗಿನಮರ, ಒಂದು ದೊಡ್ಡ ಹುಣಿಸೆಮರ, ಆ ಮರದ ಕೆಳಗೆ ಒಂದು ಕಲ್ಲುಬೆಂಚು. ಆ ಬೆಂಚಿನಮೇಲೆ ನಾಲ್ಕು ವರುಷದ ಒಂದು ಗಂಡು ಮಗು, ೨ ವರುಷದ ಒಂದು ಹೆಣ್ಣು ಮಗುವನ್ನು ಆಡಿಸುತ್ತ ಲಕ್ಷ್ಮಣರಾಯನೂ ಅವನ ಹೆಂಡತಿ ಕುಸುಮಳೂ ಕೂತಿದ್ದಾರೆ. ಮಕ್ಕಳ ಆಟವನ್ನು ನೋಡಿ ಕುಸುಮಳು ತಲ್ಲೀನಳಾಗಿ ಆನಂದವನ್ನನುಭವಿಸುತ್ತಿದ್ದಾಳೆ. ಲಕ್ಷ್ಮಣರಾಯನು ಮಧ್ಯದಲ್ಲಿ,

"ಕುಸುಮಾ ನೀನು ಹುಡುಗಿಯಾಗಿದ್ದಾಗ ಹೀಗೆ ಆಟವಾಡಿ ನಿಮ್ಮ ತಂದೆ ತಾಯಿಗಳನ್ನು ಸಂತೋಷಪಡಿಸುತ್ತಿದ್ದೆಯೇನೋ? ಈಗ ನಿನ್ನ ಮಕ್ಕಳು ನಿನಗೆ ಆನಂದವನ್ನುಂಟುಮಾಡುತ್ತಿರುವರು" ಎಂದನು.

"ನಿಮ್ಮ ಮಕ್ಕಳಲ್ಲವೇನೋ? ಅವರ ಆಟದಿಂದ ನಿಮಗೆ ಸಂತೋಷವಾಗುವುದಿಲ್ಲವೇನೊ?" ಎಂದು ಕುಸುಮಳು ಸ್ವಲ್ಪ ಸಿಡುಕಿನಿಂದ ನುಡಿದಳು.

"ಯಾಕೆ ಕುಸುಮ, ಇಷ್ಟು ಸಿಡುಕಳಾದೆ. ಮಕ್ಕಳಾಟದಿಂದ ನನಗೂ ಆನಂದವಾಗುತ್ತಿದೆ."

"ಹಾಗಾದರೆ ಸರಿ. ನಿಮ್ಮ ಮಕ್ಕಳು ನಿಮ್ಮಂತೆ ಆಟವಾಡಲು ಅವರಿಗಿನ್ನೂ ವಯಸ್ಸಾಗಿಲ್ಲ. ಆಗೋ ನೋಡಿ ಮನೋಹರನು ಮುಂದೆ ನಿಮ್ಮಂತೆ ಆಟವಾಡುತ್ತೇನೆಂದೂ, ಸಂಗೀತಗಾರನಾಗುತ್ತೇನೆಂದೂ ಈಗಲೆ ಹೇಗೆ ಸೂಚನೆ ಕೊಡುತ್ತಾನೆ."

"ಅದೇನು ಕುಸುಮ, ನನ್ನ ಆಟವಾವುದು? ಮನೋಹರನು ಸಂಗೀತಗಾರನಂತೆ ಆ ಡಬ್ಬಿಯನ್ನು ಹಿಡಿದು ತಬಲಾ ಬಾರಿಸುತ್ತಿದ್ದಾನೆ. ಮಕ್ಕಳಿಗೆ ಸಂಗೀತದಲ್ಲಿ ಪ್ರೀತಿಯಿರುವುದು ಸ್ವಾಭಾವಿಕ ಅಲ್ಲವೆ?"

"ಹೌದು, ನಾಯಕಸಾನಿಯರಿಗೆ ರೂಪಾಯಿ ಕೊಟ್ಟು ಸಂತೋಷಪಡಿಸುವುದೂ ಸಂಗೀತಗಾರರಿಗೆ ಸ್ವಾಭಾವಿಕ!"

"ಓಹೋ! ನಿನ್ನ ಸಿಡುಕಿನ ಕಾರಣ ಈಗ ನನಗೆ ಗೊತ್ತಾಯಿತು. ಆದರೆ ನಾನು ಅವರ ಸಂಗೀತಕ್ಕೆ ಮೆಚ್ಚಿ ದುಡ್ಡುಕೊಟ್ಟು ಹೋಗುತ್ತೇನೆ ನಿಜ. ಆದರೆ ಅದರಿಂದ ನಿನ್ನ ಸೌಖ್ಯಕ್ಕೆ ಯಾವ ಕೊರತೆಯೂ ಉಂಟಾಗದಂತೆ ನಾನು ನೋಡಿಕೊಳ್ಳುತ್ತಿಲ್ಲವೆ, ನಿನ್ನನ್ನು ನಾನು ಪ್ರೀತಿಸುತ್ತಿಲ್ಲವೆ?"

"ಅದಕ್ಕೆ ಬಂತು ಭಾಗ್ಯ! ನಿಮ್ಮ ಆ ಪ್ರೀತಿಗೆ ಎಷ್ಟುಜನ ಪಾಲುಗಾರರು? ಆಚೆ ತಿಂಗಳು ಕಲ್ಕತ್ತೆಯ ನಾಯಕಸಾನಿಯೊಬ್ಬಳು ಬಂದಿದ್ದಳು. ಅವಳ ಸಂಗೀತ ಕೇಳಿ, ಅವಳಿಗೆ ಮೂರು ತಿಂಗಳಿಗೊಂದು ಸಲ ೫೦ ರೂಪಾಯಿ ಕಳುಹಿಸುತ್ತೇನೆ ಅಂತ ಮಾತುಕೊಟ್ಟು ಬಂದಿರಿ. ಈ ತಿಂಗಳಲ್ಲಿ ಬೊಂಬಾಯಿಯ ಪ್ರಸಿದ್ಧಳಾದ ನಾಯಕಸಾನಿ ಬಂದಿದ್ದಳು. ಅವಳ ಗಾನಕ್ಕೆ ಮುಗ್ಧರಾಗಿ ಅವಳಿಗೆ ಮೂರು ತಿಂಗಳಿಗೊಂದುಸಲ ೪೦ ರೂಪಾಯಿ ಕಳಿಸ್ತೇನೆ ಅಂತ ಮಾತು ಕೊಟ್ಟುಬಂದೆ ಅಂತೀರಿ. ಇನ್ನು ನಾಳೆ ಮೈಸೂರ ಪ್ರಸಿದ್ಧ ನಾಯಕಸಾನಿಯೊಬ್ಬಳು ಬರ್ತಾಳೆ ಅಂತ ಹೇಳಿದ್ದೀರಿ. ಇನ್ನು ಅವಳಿಗೆಷ್ಟು ಮಾತು ಕೊಟ್ಟು ಬರುತ್ತೀರೋ ಯಾರಿಗೆ ಗೊತ್ತು. ಹೀಗೆ ಒಂದೊಂದು ದೇಶದ ಪ್ರಸಿದ್ಧ ನಾಯಕಸಾನಿಯರು ಬಂದುಬಿಟ್ಟರೆ ಸರಿ, ಅವರಿಗೆ ನೀವು ಮಾತುಕೊಟ್ಟು ಬಂದುಬಿಡಿ, ಕೊನೆಗೆ ನಿಮ್ಮ ದೇಹವನ್ನೇ ಅವರಿಗೆ ಅರ್ಪಿಸಿಬಿಡಿ. ಅದರಿಂದ ಬಂತು ನನಗೆ ಭಾಗ್ಯ!"

" ಕುಸುಮಾ, ನಿಜ. ನನಗೆ ಆ ನಾಯಕಸಾನಿಯರ ಮೇಲೆ ಅಷ್ಟು ಪ್ರೀತಿಯಿಲ್ಲ. ನಿಜವಾಗಿಯೂ ನಾನು ನಿನ್ನ ಹೊರತು ಇನ್ನು ಯಾರನ್ನೂ ಪ್ರೀತಿಸುತ್ತಿಲ್ಲ. ನನ್ನ ಪ್ರೀತಿಗೆ ನೀನೊಬ್ಬಳೇ ಸರ್ವಾಧಿಕಾರಿಣಿ."

" ಅವರಮೇಲೆ ಪ್ರೀತಿಯಿಲ್ಲವಾದರೆ ಅವರಿಗೆ ಮೂರು ತಿಂಗಳಿಗೊಂದುಸಲ ದುಡ್ಡು ಕಳಿಸುತ್ತೇನೆಂದು ಮಾತು ಕೊಟ್ಟು ಬರುವುದೇಕೆ ? ಈ ಸಂಗೀತಕ್ಕೆ ಹೋಗುವವರೆಲ್ಲ ಟಿಕೀಟಿಗೆ ಎಷ್ಟು ದುಡ್ಡು ಬೇಕೋ ಅಷ್ಟೇ ಕೊಟ್ಟು ಹೋಗುತ್ತಾರೆ. ನನಗೂ ಸಂಗೀತವೆಂದರೆ ಪ್ರಾಣ. ನಿಮಗೆ ಆಗಾಗ್ಗೆ ನನ್ನ ವೀಣೆಯೂ ಸಂತೋಷವನ್ನುಂಟುಮಾಡುತ್ತಿಲ್ಲವೇ ? ಆ ಸಂಗೀತ ಕಚೇರಿಗೆ ನನ್ನನ್ನು ಕರೆದುಕೊಂಡು ಹೋಗಿ ಅಂದ್ರೆ ಯಾಕೆ ಕರೆದುಕೊಂಡು ಹೋಗೋದಿಲ್ಲ. ನೀವು ನಿಜವಾಗಿ ಸಂಗೀತಕ್ಕೆ ಹೋಗುತ್ತಿದ್ದರೆ ನನ್ನನ್ನು ಏಕೆ ಕರೆದುಕೊಂಡು ಹೋಗುತ್ತಿರಲಿಲ್ಲ. ಇದರಲ್ಲಿಯೇ ನೀವು ನನ್ನನ್ನು ಪ್ರೀತಿಸುವುದೂ, ನಾನು ನಿಮ್ಮ ಪ್ರೇಮಕ್ಕೆ ಸರ್ವಾಧಿಕಾರಿಣಿಯಾಗಿರುವುದೂ ಗೊತ್ತಾಗುತ್ತದೆ."

" ಕುಸುಮಾ, ಈಗ ನನ್ನ ಹತ್ರ ಕ್ಯಾಮರ ಇದ್ದರೆ ನಿನ್ನ ಫೋಟೋ ತೆಗೆದು ಇಲ್ಸ್‌ಟ್ರೇಟೆಡ್ ವೀಕ್ಲೀ ಫೋಟೋ ಕಾಂಪಿಟೇಷನ್ನಿಗೆ ಕಳುಹಿಸಿಬಿಡುತ್ತಿದ್ದೆ, ಆದರೆ ಈ ಸಂಗೀತಕಚೇರಿಯಿಂದ ನಿನಗೆ ಈಗ ಸಂತೋಷವಾಗೋದಿಲ್ಲ. ಈ ನಾಯಕಸಾನೀರು ಮುಂದೆ ನಾನು ಕಷ್ಟದಲ್ಲಿರುವಾಗ ಸಹಾಯ ಮಾಡ್ತೀನೆ ಅಂತ ಮಾತು ಕೊಟ್ಟಿದ್ದಾರೆ. ಮತ್ತೆ ನನಗೆ ವಯಸ್ಸಾದಮೇಲೆ ಅವರು ನಾನೂ ನೀನೂ ಸುಖವಾಗಿರುವಂತೆ ಏರ್ಪಾಟು ಮಾಡುತ್ತಾರೆ. ಸುಮ್ಮನೆ ಕೋಪಿಸಿಕೊಳ್ಳಬೇಡ. ನಾನು ಅಷ್ಟು ಸ್ತ್ರೀ ಲಂಪಟನಾದರೆ ಹೀಗಿರುತ್ತಿದ್ದೆನೆ."

" ನೀವು ಕೇವಲ ಮೂರು ತಿಂಗಳಿಗೊಂದು ದಿನ ಈ ಗಾಯಕಿಯರ ಕಚೇರಿಗೆ ಹೋಗುತ್ತಿರುವುದರಿಂದ ನಿಮಗೆ ಅಷ್ಟು ಸ್ತ್ರೀಲಾಂಪಟ್ಯವಿಲ್ಲ ಅಂತ ತಿಳಿದುಕೊಂಡಿದ್ದೇನೆ. ಆದರೆ ನಾನೂ ಸಂಗೀತ ಕಲಿತಿದ್ದೇನೆ. ಚಿಕ್ಕಂದಿನಿಂದಲೂ ನನ್ನ ತಂದೆ ಅದನ್ನು ನನಗೆ ಕಲಿಸಿದರು. ೧೪ ವರುಷ ಕಲಿಸಿದ್ದಾರೆ. ಹುಡುಗಿಯಾಗಿದ್ದಾಗ ಅಲ್ಲಲ್ಲಿ ವಿದ್ಯಾರ್ಥಿನಿಯರ ಸಂಗೀತ ಸ್ಪರ್ಧೆಯಲ್ಲಿ ನನಗೆ ಬಂಗಾರದ ಪದಕಗಳು ಬಂದಿರುವುದು ನಿಮಗೇ ಗೊತ್ತಿದೆ. ನೀವೇ ಅನೇಕ ಸಲ ನನ್ನ ವೀಣೆ ಕೇಳಿ ಮುಗ್ಧರಾಗಿದ್ದೀರಿ. ಹೀಗಿರುವಾಗ ನನ್ನ ಸಂಗೀತವನ್ನು ಮೂರು ತಿಂಗಳಿಗೊಮ್ಮೆ ಮೆಚ್ಚುವಂತೆ ಮಾಡುವ ಆ ಸಾನಿಯರ ಸಂಗೀತವು ಹೇಗೆ ಯೆಂದು ನಾನೂ ನೋಡಬೇಕು. ನಾಳೆ ವೈಷ್ಣವೀ ಸಂಗೀತಕ್ಕೆ ನನ್ನನ್ನು ಕರೆದುಕೊಂಡು ಹೋಗುವಿರಾ ?"

" ಎಂಥಾ ಹುಚ್ಚಿ ನೀನು ಕುಸುಮ, ಹೆಂಗಸರ್ಯಾರೂ ಬಾರದ ಆ ಕಚೇರಿಗೆ ನಿನ್ನನ್ನು ಕರೆದುಕೊಂಡು ಹೋಗುವುದೆ ?"

ಕುಸುಮಳಿಗೆ ಇನ್ನು ತಡೆಯಲಾಗಲಿಲ್ಲ. ಕಣ್ಣುಗಳಿಂದ ಕಂಬನಿಗಳುದುರಲಾರಂಭಿಸಿದವು. ಲಕ್ಷ್ಮಣರಾಯನು ನಿಧಾನವಾಗಿ ಅವಳ ತಲೆಯನ್ನು ತನ್ನ ಭುಜದಮೇಲಿಟ್ಟುಕೊಂಡು ತಲೆಯನ್ನು ಸವರುತ್ತ " ಕುಸುಮಾ, ಇದೊಂದುಸಲ ಕ್ಷಮಿಸಿಬಿಡು. ಈ ಒಂದು ದಿನ ಹೋಗಿಬಂದರೆ ಮುಂದೆ ಸಧ್ಯಕ್ಕೆ ಯಾವ ಕಚೇರಿಗೂ ಹೋಗುವುದಿಲ್ಲ. ಈಸಲ ಮಾತು ಕೊಟ್ಟು ಬಿಟ್ಟದ್ದೇನೆ ...." ಎಂದು ಏನೇನೋ ಹೇಳಿ ಕುಸುಮಳನ್ನು ಸಮಾಧಾನಪಡಿಸಿದನು.

(೨)

ಲಕ್ಷ್ಮಣರಾಯನಿಗೆ ರಿಚರ್ಡ್‌ಸನ್ ಎಂಡ್ ಕ್ರುಡ್ಡಾಸ್ ಕಂಪೆನಿಯಲ್ಲಿ ಸೇಲ್ಸ್ ಏಜನ್ಸಿ ಕೆಲಸವಿತ್ತು. ಮದ್ರಾಸಿನಲ್ಲಿ ಸ್ವಂತ ಮನೆ ಮಾಡಿಕೊಂಡಿದ್ದ. ಅವನಿಗೆ ರೂಪವತಿಯೂ, ಗುಣವತಿಯೂ, ಸಂಗೀತಗಾರಳೂ ಆದ ಕುಸುಮಳೆ ಹೆಂಡತಿ. ಅವಳಿಗೂ ಇಪ್ಪತ್ತು ವರ್ಷ ವಯಸ್ಸು. ಅವಳೂ ಇಂಗ್ಲೀಷು ಲೋವರ್‌ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ಚೆನ್ನಾಗಿ ಓದುಬರೆಹ ಬಲ್ಲವಳಾಗಿದ್ದಳು. ಈಗಿನ ನಾಟಕ ಸಿನಿಮಾ ಮೊದಲಾದುವುಗಳಲ್ಲಿ ಅವಳಿಗೆ ಆಸಕ್ತಿಯಿಲ್ಲ. ಆದ್ದರಿಂದ ಮೊದಲು ಸಿನೇಮಾಪ್ರಿಯನಾಗಿದ್ದ ಲಕ್ಷ್ಮಣರಾಯನನ್ನು ಅವಳು ಸಿನೇಮಾಕ್ಕೆ ಬಿಡುತ್ತಿರಲಿಲ್ಲ. ಓಂದೊಂದು ಸಲ ನೀವು ಸಿನಿಮಾಕ್ಕೆ ಹೋಗಿ ಅಲ್ಲಿ "ಕಿಸ್ಸಿಂಗ್ ಲೆಸೆನ್ಸ್" ತಾನೆ ಕಲ್ತುಕೊಂಡು ಬರೋದು, ಅದೇ ಬೇಕಾದ ಎಕ್ಸ್‌ಪೆರಿಮೆಂಟ್ಸ್ ನನ್ನ ನನ್ನಮೇಲೆ ಮಾಡಿ, ಬೇಕಾದ ಪಾಠ ಕಲಿಯಬಹುದು ಎಂದು ಬಿಡುತ್ತಿದ್ದಳು. ತಾನು, ತನ್ನ ಪತಿ, ತನ್ನ ಮಕ್ಕಳು, ತನ್ನ ವೀಣೆ, ಇವುಗಳೂ ಬೇಸರವಾದಾಗ ಕೆಲವು ಮಾಸಿಕಪತ್ರಿಕೆಗಳನ್ನು ಓದುತ್ತ ಕುಳಿತುಕೊಳ್ಳುತ್ತಿದ್ದಳು. ತನ್ನ ಮನೆಯನ್ನು ಚೊಕ್ಕಟವಾಗಿಟ್ಟುಕೊಂಡು, ಗೃಹಕೃತ್ಯನಿರ್ವಾಹವನ್ನು ಚೆನ್ನಾಗಿ ಮಾಡಿಕೊಂಡಿದ್ದಳು.

ಕುಸುಮ, ಅವಳ ಮಾವನೂ ಎರಡು ಸಲ ಮದ್ರಾಸಿಗೆ ಬಂದು ಮಗನ ಸಂಸಾರ ನೋಡಿ ಆನಂದದಿಂದ ಹಿಗ್ಗಿ, "ಮಗೂ ಕುಸುಮಾ, ನೀನು ನಮ್ಮ ಕುಲಲಕ್ಷ್ಮಿ ಕಾಣಮ್ಮಾ" ಎಂದು ಹೇಳಿದನು. ತಿಂಗಳ ಸಂಬಳ ಬಂದ ಕೂಡಲೆ ಪೆರ್ಶದಾರ, ಮಾವನಿಗೆ ತಿಂಗಳಿಗೆ ೨೦ ರೂಪಾಯಿ ಗಳನ್ನು ಮನಿಯಾರ್ಡರು ಮಾಡುತ್ತಿದ್ದಳು. ಮಾವ ಅತ್ತೆ ಇಬ್ಬರೂ ತಮ್ಮ ಹಳ್ಳಿ ವಸಂತಪುರದಲ್ಲಿ ಸುಖವಾಗಿ ವಾಸ ಮಾಡುತ್ತಿದ್ದರು.

ಲಕ್ಷ್ಮಣರಾಯನು ಇಂಟರ್‌ವರೆಗೆ ಓದಿ, ಅನಂತರ ಇಂಟರ್‌ನ್ಯಾಷನಲ್ ಕರೆಸ್ಪಾಂಡೆನ್ಸ್ ಸ್ಕೂಲಿನ ಸೆಲ್ಸ್ ಮನ್‌ಷಿಪ್ ಮತ್ತು ಬಿಜಿನೆಸ್ ಕೇಸುಗಳನ್ನು ತೆಗೆದು ಕೊಂಡು ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದನು. ಆ ಸ್ಕೂಲಿನ ಅಧಿಕಾರಿಗಳೆ ಅವನಿಗೆ ಈಗಿನ ಕೆಲಸವನ್ನು ಕೊಡಿಸಿದ್ದರು. ಸ್ವಭಾವತಃ ಇವನು ವಿನೋದ ಪ್ರಿಯನು ಆದ್ದರಿಂದ ಇವನ ವಿಪರೀತ ವಿನೋದದಿಂದ ಕುಸುಮಳಿಗೆ ಆಗಾಗ್ಗೆ ಮನಸ್ಸಿಗೆ ನೋವಾಗುತ್ತಿತ್ತು. ಈಚೆಗೆ ವಿದೇಶ ಯುದ್ಧದಿಂದ ಇವನ ಕಂಪೆನಿಯವರಿಗೆ ಲಾಭವು ಕಡಿಮೆ ಯಾಗಿತ್ತು. ಆದ್ದರಿಂದ ಯಾವ ಸಮಯದಲ್ಲಿ ಏನಾದೀತು ಎಂದು ಇವನು ಹಣವನ್ನು ಬ್ಯಾಂಕಿನಲ್ಲಿಡುವುದಕ್ಕಿಂತ ಜೀವ ವಿಮೆ ಮಾಡುವುದು ಒಳ್ಳೆಯದೆಂದು ಅವನು ಕಲ್ಕತ್ತೆಯ ಹಿಂದೂಸ್ಥಾನ್ ಲೈಫ್ ಇನ್ಶೂರೆನ್ಸ್ ಕಂಪನಿಯಲ್ಲಿ ಜೀವ ವಿಮೆ ಮಾಡಿಸಿದ್ದನು. ಅನಂತರ ಬೊಂಬೆಲಾಯಿಫ್ ಎಶ್ಯುರೆನ್ಸ್ ಕಂಪೆನಿಯಲ್ಲಿಯೂ ಜೀವವಿಮೆಮಾಡಿಸಿದ್ದನು. ನಾಳೆದಿನ ಮೈಸೂರು ಲೈಫ್ ಇನ್ಶೂರೆನ್ಸ್ ಕಂಪೆನಿಯಲ್ಲಿ ಜೀವವಿಮೆ ಮಾಡಿಸಬೇಕೆಂದಿದ್ದನು. ಈ ವಿಚಾರಗಳನ್ನೆ ಅವನು ವಿನೋದದಿಂದ ಕುಸುಮಳಿಗೆ ನಾಯಕಸಾನಿಯರ ಕಛೇರಿ ಎಂದು ರೇಗಿಸಿದ್ದು.

ಲಕ್ಷ್ಮಣರಾಯನಿಗೆ ಕುಸುಮಳೆಂದರೆ ಪ್ರಾಣ. ಅವಳ ತಮ್ಮನೊಬ್ಬನು ಬಿ.ಎ. ಕ್ಲಾಸಿನಲ್ಲಿ ಓದುತ್ತಿದ್ದನು. ಅವನು ಕ್ಷಯರೋಗಪೀಡಿತನಾದನು. ಡಾಕ್ಟರು ಹವಾ ಬದಲಾವಣೆಗಾಗಿ ಮದ್ರಾಸಿಗೆ ಕಳುಹಿಸಿದ್ದರು. ಮದ್ರಾಸಿ ನಲ್ಲಿ ಎರಡು ತಿಂಗಳಕಾಲ ಲಕ್ಷ್ಮಣರಾಯನ ಸೇವೆ ಶುಶ್ರೂ ಷೆಗಳನ್ನು ಸ್ವೀಕರಿಸಿ, ಸ್ವಲ್ಪಮಟ್ಟಿಗೆ ಗುಣ ಹೊಂದಿ, ಬೆಂಗ ಳೂರಿಗೆ ಹಿಂತಿರುಗಿದನು. ಲಕ್ಷ್ಮಣರಾಯನು ಕೆಲವು ವೇಳೆ ನಿದ್ರೆಯೂ ಇಲ್ಲದೆ ರೋಗಿಯ ಶುಶ್ರೂಷೆ ಮಾಡಿದ್ದ ರಿಂದ, ಅವನೇ ಹಾಸಿಗೆ ಹಿಡಿದುಬಿಟ್ಟನು. ವೈದ್ಯರು ಬಂದುನೋಡಿ, ರೋಗಿಯನ್ನು ಮದನಪಲ್ಲಿಗೆ ಬೇರೆ ಸ್ಯಾನಿ ಟೋರಿಯಮ್ಮಿಗೆ ಕರೆದುಕೊಂಡು ಹೋಗಬೇಕೆಂದು ಹೇಳಿ ಬಿಟ್ಟರು. ಕುಸುಮಳಿಗೆ ಎದೆ ಒಡೆದಂತಾಯಿತು. ಅವಳು ತಂತಿಕೊಟ್ಟು ಮಾವ ಅತ್ತೆಯರನ್ನೂ ತನ್ನ ತಂದೆತಾಯಿ ಗಳನ್ನೂ ಕರೆಸಿದಳು. ಏಕಮಾತ್ರ ಪುತ್ರನ ಅವಸ್ಥೆಯನ್ನು ನೋಡಿ ತಂದೆತಾಯಿಗಳು ಕಣ್ಣೀರಿನಲ್ಲಿ ಮಿಂದರು. ಏಕ ಮಾತ್ರ ಪುತ್ರಿಗುಂಟಾದ ಅವಸ್ಥೆಯನ್ನು ಕಂಡು, ಕಡುಬಡ ವರಾದ ಕುಸುಮಳ ತಂದೆತಾಯಿಗಳ ಪ್ರಾಣವೇ ಹಾರಿ ಹೋದಂತಾಯಿತು, ಲಕ್ಷ್ಮಣರಾಯನು ಇನ್ಶೂರೆನ್ಸಿ ಗಾರಂಭಿಸಿ ೯ ತಿಂಗಳಾಗಿತ್ತು. ಅವನ ಆಸೆಯು ಎಲ್ಲೆ ಯನ್ನು ಮೀರಿ, ಅವನು ಕೆಲವು ವರುಷಗಳ ಮೇಲೆ ತನಗೆ ಬರುವ ಶ್ರೀಮಂತ ಕನಸ್ಸಿನಲ್ಲಿ ಮಗ್ನನಾಗಿದ್ದನು. ಇವನು ತನ್ನ ಮೂವರು ಸ್ನೇಹಿತರಾದ ಮೂರು ಜನ ವಿಮಾ ಸಂಘದ ಏಜಂಟರ ಮೂಲಕ ವಿಮೆ ಮಾಡಿಸಿದ್ದನು. ಆ ವಿಮಾ ಸ್ನೇಹಿತರೂ ಇವನನ್ನು ಬಂದು ನೋಡಿ, ಅಕಸ್ಮಾ ತ್ತಾಗಿ ಇವನಿಗೆ ಬಂದ ಕಾಯಿಲೆಯನ್ನು ಕಂಡು ಮರು ಗಿದರು.

ಕುಸುಮಳು ಯಾವಾಗಲೂ ಲಕ್ಷ್ಮಣರಾಯನ ಸಮೀಪದಲ್ಲಿ ಕುಳಿತು ಉಪಚರಿಸುತ್ತಿರುವಳು. ಒಂದು ದಿನ ಲಕ್ಷ್ಮಣರಾಯನು ಕುಸುಮಳನ್ನು ಹತ್ತಿರಕ್ಕೆ ಕರೆದು "ಕುಸುಮಾ, ನನಗೆ ಬಂದಿರುವ ರೋಗವು ಅಪಾಯಕರ ವಾದ್ದು, ಇದರಿಂದ ನನಗೆ ಬಿಡುಗಡೆಯಾಗುವಂತೆ ತೋರು ವುದಿಲ್ಲ. ಇದುವರೆಗೆ ನಿನ್ನ ಸರಳ ಸಾದಾ ಹೃದಯ ವನ್ನು ನಿಜಸ್ಥಿತಿಯಿಂದ ನೋಯಿಸಲು ಮನಸ್ಸು ಒಪ್ಪ ಲಿಲ್ಲ. ಈದಿನ ನಿಜವಾಗಿ ಹೇಳುತ್ತೇನೆ. ಕುಸುಮ, ದೇವರು ನಿನಗೆ ಎರಡು ಮಕ್ಕಳನ್ನು ಕೊಟ್ಟಿದ್ದಾನೆ. ನಾನು ಬದುಕಿದ್ದರೆ ಅವರ ವಿದ್ಯಾಭ್ಯಾಸವನ್ನು ಸರಿಯಾಗಿ ಮಾಡಿ ಸುತ್ತೇನೆ. ಇಲ್ಲವಾದರೆ ನೀನೇ ಆ ಭಾರವನ್ನು ವಹಿಸಿಕೋ ಅದಕ್ಕಾಗಿ ಹಣಕ್ಕೆ ಚಿಂತಿಸಬೇಡ. ನಾನು ಹಿಂದೆ ಹಣ ವನ್ನು ಕೊಡುತ್ತಿದ್ದ ಬೊಂಬಾಯಿ, ಕಲ್ಕತ್ತ, ಮೈಸೂರ ಸಾನಿಯರು ನಿನಗೆ ಹೇರಳವಾಗಿ ಹಣವನ್ನು ಕೊಡುತ್ತಾರೆ. ನಾನು ಮುಂದೆ ಆ ಹಣದಿಂದ ದೊಡ್ಡ ವ್ಯಾಪಾರವನ್ನು ಮಾಡಬೇಕೆಂದಿದ್ದೆ. ಆದರೆ ಈ ದಿನದ ವೇದನೆಯನ್ನು ನೋಡಿದರೆ, ಈ ದೇಹದಲ್ಲಿ ಪ್ರಾಣವು ಹೆಚ್ಚುಕಾಲ ಇರು ವುದಿಲ್ಲ. ಬಾಯಾರುತ್ತಿದೆ ಸ್ವಲ್ಪ ನೀರು ಕುಡಿಸು."

ರೋಗಿಯಮುಂದೆ ತಾನು ಅತ್ತರೆ ಅವನ ವೇದನೆ ಎಲ್ಲಿ ಇಮ್ಮಡಿಯಾಗುವುದೋ ಎಂದು ಒಳಗೇ ಕೊರಗುತ್ತ "ನಾಥ! ನಿಮಗೆ ದೇವರು ಬೇಗ ವಾಸಿಮಾಡುತ್ತಾನೆ.

ನಾನೂ ಹರಕೆ ಮಾಡಿಕೊಂಡಿದ್ದೇನೆ. ಮಕ್ಕಳಿಗೆ ತಂದೆಯನ್ನಿಟ್ಟುಕೊಂಡಿರುವ ಭಾಗ್ಯವಿದೆಯೆಂದು ಭಾವಿಸುತ್ತೇನೆ ನಿಮಗೆ ವಾಸಿಯಾದರೆ ಇನ್ನುಮುಂದೆ ನಿಮ್ಮ ಸಂಗೀತ ಕಚೇರಿಗೆ ನಾನು ಅಡ್ಡಬರುವುದಿಲ್ಲ. ದೇವರ ದಯೆಯಿಂದ ನಿಮಗೆ ವಾಸಿಯಾಗಲಿ, ನನ್ನ ಮಾತಿನಿಂದ ನಿಮಗೆ ನೋವಾಗಿದ್ದರೆ ಕ್ಷಮಿಸಿ. ನನ್ನ ತಮ್ಮನೇ ನಿಮ್ಮ ಕಾಹಿಲೆಗೆ ಕಾರಣನಾದನೆಂದು ನನಗೆ ಗೊತ್ತಿದೆ. ನಿಮ್ಮ ಕಾಹಿಲೆಯನ್ನು ನಾನು ವಹಿಸಿಕೊಳ್ಳುವಂತಿದ್ದರೆ ಆಗತ್ಯವಾಗಿ ಹಾಗೆ ಮಾಡುತ್ತಿದ್ದೆನು."

ಲಕ್ಷ್ಮಣರಾಯನು ಕುಸುಮಳ ಕೈಹಿಡಿದು ತನ್ನ ಮುಖದಮೇಲಿಟ್ಟುಕೊಂಡನು. ಒಂದು ಬಾರಿ ಕಣ್ದೆರೆದು ಕುಸುಮಳನ್ನು ನೆಟ್ಟ ನೋಟದಿಂದ ನೋಡಿ, ಅವಳ ಮುಖದಮೇಲೆ ಕೈಯಾಡಿಸಿ, "ಕುಸು - ಮಾ ದೇವರು ನಿ-ನ್ನ-ನ್ನು ಮ-ಕ್ಕ-ಳಿ-ಗೋ-ಸ್ಕ-ರ-ವಾ-ದ-ರೂ ಸುಖವಾಗಿಡಲಿ" ಎಂದು ಕಣ್ಣು ಮುಚ್ಚಿಕೊಂಡನು. ಕುಸುಮಳು ದಿಕ್ಕುತೋರದಂತಾಗಿ 'ರಾಮಾ!' ಎಂದರಚಿದಳು. ಕುಸುಮಳ ತಂದೆ, ತಾಯಿ, ಮಾವ, ಅತ್ತೆ, ಮಕ್ಕಳು ಒಳಗೆ ಬಂದರು. ಮಾವನು ಮುಂದೆ ಬಂದು "ಲಚ್ಚಾ, ಏನಾಗುತ್ತಿದೆಯಪ್ಪಾ ನಿಮ್ಮ ಮಾವಂದಿರು, ಅತ್ತೆ ಬಂದು ನಿಂತಿದ್ದಾರೆ ನೋಡು" ಎಂದನು. ಲಕ್ಷ್ಮಣರಾಯನು ಒಂದುಬಾರಿ ಕಂಬನಿದುಂಬಿದ ಕಣ್ಣುಗಳಿಂದ ಎಲ್ಲರನ್ನೂ ನೋಡಿ, ಮಾತನಾಡಲಾಗದೆ, ಕೈಮುಗಿಯಲೆತ್ನಿಸಿದನು ಆಗಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ತನ್ನ ನಲ್ಲೆಯನ್ನು ಮಕ್ಕಳಿಗಾಗಿ ಸುಖವಾಗಿರಿಸೆಂದು ಪ್ರಾರ್ಥಿಸುತ್ತ ಲಕ್ಷ್ಮಣರಾಯನ ಪ್ರಾಣವು ಹೃದಯದಿಂದ ಹಾರಿಹೋಯಿತು.

*   *   *

(೩)

ಲಕ್ಷ್ಮಣರಾಯನು ಕುಸುಮಳ ಕೈಗೆ ತಂದುಕೊಡುತ್ತಿದ್ದ ಸಂಬಳದಲ್ಲಿ ಆಗಾಗ್ಗೆ ಮಿಗಿಸಿಟ್ಟಿದ್ದ ಹಣವು ಸುಮಾರು ನಾನೂರು ರೂಪಾಯಿವರೆಗೆ ಇತ್ತು. ಕುಸುಮಳು ತನ್ನ ಇನಿಯನ ತೃಪ್ತಿಗಾಗಿ ಆ ಹಣವನ್ನು ಮಾವನಕೈಗೆ ಕೊಟ್ಟಳು. ಕರ್ಮಾಂತರಕ್ಕೆ ಆರಂಭವಾಗಿ ೧೧ ದಿನಗಳಾದುವು. ೧೩ನೆಯ ದಿನ ವೈಕುಂಠಸಮಾರಾಧನೆಗಾಗಿ ಏರ್ಪಾಡು ನಡೆಯುತ್ತಿದೆ, ಕುಸುಮಳ ಅತ್ತೆ ಮಾವಂದಿರೂ ಅವಳನ್ನು ವಿಶೇಷ ವಿಧಿಗೆ ಗುರಿಮಾಡಲಿಲ್ಲ. ಅವತ್ತು ಅವಳು ಲಕ್ಷ್ಮಣರಾಯನ ಕೋಣೆಯಲ್ಲಿ ಅವನ ಭಾವಚಿತ್ರವನ್ನೇ ನೋಡುತ್ತ ಕಣ್ಣೀರು ಸುರಿಸುತ್ತಿದ್ದಳು ೧೦ ಗಂಟೆ ಹಗಲ ಸಮಯ. ಅಂಚೆಯವನು ಬಂದು "ಅಮ್ಮಾ ಮಿಸೆಸ್ ಕುಸುಮಾಬಾಯಿ ಯಾರಮ್ಮಾ? ಮೂರು ರಿಜಸ್ಟರುಗಳಿವೆ. ಸೈನುಹಾಕಿ ಬನ್ನೀ ಅಮ್ಮಾ" ಎಂದನು. ಅಪರೂಪವಾಗಿ ಮನೆಗೆ ಬರುವ ಅಂಚೆಯವನು ಈ ದಿವಸ ರಿಜಸ್ಟರುಗಳನ್ನು ಎಲ್ಲಿಂದ ತಂದ ಎಂದು ಕುಸುಮಳು ಕಣ್ಣೊರಸಿಕೊಂಡು ಬಂದು ಮೂರು ರಶೀದಿಗಳಿಗೆ ರುಜು ಹಾಕಿ ಕವರುಗಳನ್ನು ತೆಗೆದುಕೊಂಡಳು. ಅತ್ತೆ ಮಾವಂದಿರೂ, ತಂದೆ ತಾಯಿಗಳೂ ಬಂದು 'ಯಾರದಮ್ಮ ಕಾಗದ' ಎಂದರು. ಕುಸುಮಳು ಮೇಲ್ವಿಳಾಸ ನೋಡಿ ಎಲ್ಲಾ ಇನ್ಷ್ಯೂರೆನ್ಸ್ ಕಂಪನಿಗಳದು, ಒಂದು ಕಲ್ಕತ್ತಾ, ಒಂದು ಬೊಂಬಾಯಿ, ಮತ್ತೊಂದು ಮೈಸೂರಿನದು! ಎಂದು ಒಡೆದಳು. ಕಲ್ಕತ್ತೆಯ ಕವರಿನಿಂದ ಒಂದು ಚೆಕ್ಕು ಸಹಿತವಾದ ಕಾಗದವನ್ನು ತೆಗೆದು ಓದಲಾರಂಭಿಸಿದಳು.

"ಶ್ರೀಮತಿ ಕುಸುಮಾಬಾಯಿಯವರಿಗೆ ಮದ್ರಾಸಿನ ನಮ್ಮ ಏಜಂಟರ ಮೂಲಕ ನಿಮ್ಮ ಪ್ರಿಯ ಪತಿಯ ಮರಣ ವಿಚಾರವನ್ನು ತಂತಿಯಿಂದ ತಿಳಿದು ವಿಷಾದವಾಯಿತು. ಅವರು ವಿಮೆಮಾಡಿದ ೨೦,೦೦೦ ರೂ. ಮೊಬಲಗಿನಾ ಈ ದಿವಸ ಚೆಕ್ಕನ್ನು ಕಳುಹಿಸಿದ್ದೇವೆ. ದಯೆಯಿಟ್ಟು ಸ್ವೀಕರಿಸಿ, ತಲುಪಿದಕ್ಕೆ ಜವಾಬು ಬರೆಯಿರಿ." ಬೊಂಬಾಯಿಯಿಂದಲೂ ಅದೇ ಬಗೆಯ ಕಾಗದ, ಆದರೆ ಚೆಕ್ಕು ರೂ. ೧೫,೦೦೦ಕ್ಕೆ ಮೈಸೂರು ಇನ್ಷ್ಯೂರೆನ್ಸ್ ಕಂಪನಿಯಿಂದಲೂ ಅದೇ ಬಗೆಯ ಕಾಗದ, ಆದರೆ ಚೆಕ್ಕು ರೂ. ೧೨,೦೦೦ಕ್ಕೆ ಒಟ್ಟು ರೂ ೪೭,೦೦೦ ಕುಸುಮಳ ತಂದೆತಾಯಿಗಳು ಲಕ್ಷ್ಮಣರಾಯರ ಮರಣದಿಂದ ಮಗಳು ತಮ್ಮಂತೆಯೇ ಬಡತನಕ್ಕೆ ಗುರಿಯಾದಳೆಂದು ಭಾವಿಸಿದ್ದರು. ಆದರೆ ಇಂದು ಅವಳು ಶ್ರೀಮಂತೆ! ಕುಸುಮಳಿಗೆ ಸಂಗೀತ ಕಛೇರಿಯ ಅರ್ಥವು ತಿಳಿಯಿತು.

*   *   *

(೪)

ಇಂದು ಮಲ್ಲೇಶ್ವರದ ಮನೆಯೊಂದರಲ್ಲಿ ವಿಶೇಷ ಸಂಭ್ರಮ. ಲಕ್ಷ್ಮಣರಾಯನ ಮಗ ಮನೋಹರನು ತಂದೆಯಂತೆಯೇ ಇಂಟರ್ ಮಾಡಿಕೊಂಡು, ಐ.ಸಿ.ಎಸ್. ಬಿಜಿನೆಸ್ ಟ್ರೇನಿಂಗ್‌ನಲ್ಲಿ ಮೊದಲನೆಯವನಾಗಿ ಉತ್ತೀರ್ಣನಾದನು. ಅವನಿಗೆ ಆ ಸ್ಕೂಲಿನವರೆ ಬೆಂಗಳೂರಿನಲ್ಲಿ ಒಂದು ಮೋಟಾರು ಸ್ಟೋರ್ಸಿನ ಮ್ಯಾನೇಜರ್ ಕೆಲಸವನ್ನು

೩೦೦ ರೂ. ಸಂಬಳದಮೇಲೆ ಕೊಡಿಸಿದ್ದರು. ಇಂದು ಮನೋಹರನಿಗೆ ಮದುವೆ.

ಕರ್ಮಾಂತರಗಳನ್ನು ತೀರಿಸಿಕೊಂಡನಂತರ ಕುಸು ಮಳು ಮಾವನ ಜತೆಗೆ ಬೆಂಗಳೂರಿಗೆ ಬಂದಳು. ಅಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಪತಿದೇವನಿಗೆ ಕೊಟ್ಟಮಾತನ್ನು ನಡೆಸಲು, ಒಂದು ಮನೆಯನ್ನು ಕೊಂಡುಕೊಂಡಳು. ಅತ್ತೆ ಮಾವಂದಿರು ಅವಳೇ ತಮಗೆ ಮಗನೂ, ಮಗಳೂ ಆಗಿರುವಳೆಂದು ತಿಳಿದು ಅವಳ ಕೋರಿಕೆಯಂತೆಯೆ ತಾವೂ ಅವಳ ಮನೆಯಲ್ಲಿಯೇ ನೆಲಸಿದರು. ಮತ್ತೆ ಅವರ ಕುಸು ಮಳ ತಂದೆತಾಯಿಗಳನ್ನೂ ತಮ್ಮ ಬಳಿಯಲ್ಲಿ ನಿಲ್ಲಿಸಿಕೊಂಡರು. ಈಗ ಅವರೆಲ್ಲರೂ ಸಂತೋಷ ಸಂಭ್ರಮದಿಂದ ಮೊಮ್ಮಗನ ಮದುವೆ ಮಾಡುತ್ತಿದ್ದಾರೆ.

ಆದರೆ ಈ ದಿನ – ತನ್ನ ಮಗನ ಮದುವೆಯನ್ನು ನೋಡಿ ಆನಂದಪಡಲು ಮುಖ್ಯವಾಗಿ ಇರಬೇಕಾದವರು ಇಲ್ಲ ವೆಂದು ಕುಸುಮಳು, ಕೋಣೆಯಲ್ಲಿ ದುಃಖಿಸುತ್ತಿದ್ದಾಳೆ. ಗಂಡನ ಸಂಗೀತ ಕಛೇರಿಯ ವಿನೋದವನ್ನೂ ಕಲಕತ್ತ, ಬೊಂಬಾಯಿ, ಮೈಸೂರ ಸಾನಿಗಳು ತನಗೆ ಕಷ್ಟಕಾಲ ದಲ್ಲಿ ಸಹಾಯಮಾಡುವರೆಂದು ಹೇಳಿದುದರ ರಹಸ್ಯವನ್ನು ನೆನಸಿಕೊಂಡು ಇಂದು ದುಃಖಿಸುತ್ತಿದ್ದಾಳೆ. ಇಂದು ಮಗನನ್ನು ಈ ಸ್ಥಿತಿಗೆತಂದ ಕಲಕತ್ತ, ಬೊಂಬಾಯಿ, ಮೈಸೂರು ವಿಮಾ ಕಂಪೆನಿಗಳಿಗೆ—ಎಲ್ಲ "ಸಂಗೀತಸಾನಿ" ಯರಿಗೆ ತನ್ನ ಕಂಬನಿಗಳ ಮೂಲಕ ಕುಸುಮಳು ಕೃತಜ್ಞತೆ ಯನ್ನು ಸೂಚಿಸುತ್ತಿದ್ದಾಳೆ.



# ದುಡ್ಡು ಎಲ್ಲಿ ಹೋಯಿತು



ಲೇಖಕರು :—
ಶ್ರೀ|| ಜಿ. ಗುಂಡೂರಾಯ
ಬೆಂಗಳೂರು.
(Mr. G. Gundu Rao)

## ದುಡ್ಡಿಲ್ಲ !

ದುಡ್ಡಿಲ್ಲ ದುಡ್ಡಿಲ್ಲ ಎಲ್ಲೆಲ್ಲು ದುಡ್ಡಿಲ್ಲ
ದುಡ್ಡ ತೋರುವರಿಲ್ಲ—ಕೊಡುವರಿಲ್ಲ
ದುಡ್ಡೆಲ್ಲಿ ಅಡಗಿತೋ - ಬಡ್ಯಾಕೆ ಬೆಳೆಯಿತೋ
ದುಡ್ಡಮ್ಮ ಓಡಿದಳು ಪತ್ತೆ ಇಲ್ಲ !

ನೂಲ ನೂತರು ಇಲ್ಲ—ಶಾಲೆ ನೇದರು ಇಲ್ಲ
ಕಾಳುಕಡ್ಡಿ ಬೆಳೆದರು ದುಡ್ಡೆ ಇಲ್ಲ !
ಬೇಲಿ ಹಾಕಿದರಿಲ್ಲ—ಬೈಲ ಬಿತ್ತಿದರಿಲ್ಲ
ಏನೇನಮಾಡಿದರು ದುಡ್ಡೆ ಇಲ್ಲ !!

ಯಾರ ಬೇಡಿದರಿಲ್ಲ—ಯಾರ ಕಾಡಿದರಿಲ್ಲ
ಯಾರ ಕಿಸೆ ಹುಡುಕಿದರು ದುಡ್ಡೆ ಇಲ್ಲ !
ನೀರ ಮಾರಿದರಿಲ್ಲ—ಬೇರ ಮಾರಿದರಿಲ್ಲ
ಸೂರೆಗೊಂಡರು ಹೊನ್ನ ! ಹೋಯಿತಲ್ಲಾ !!

೧.

ಈಗ ಯಾರನ್ನು ನೋಡಿದರೂ ದುಡ್ಡಿಲ್ಲವೆಂದು ಕೈ ಆಡಿಸುವವರೇ ಆಗಿದ್ದಾರೆ. ಪಟ್ಟಣಿಗರೂ ದುಡ್ಡಿಲ್ಲವೆನ್ನುತ್ತಾರೆ. ಹಳ್ಳಿಗರೂ ದುಡ್ಡಿಲ್ಲವೆನ್ನುತ್ತಾರೆ. ವರ್ತಕರೂ ದುಡ್ಡಿಲ್ಲವೆನ್ನುತ್ತಾರೆ. ನೋಕರರೂ ದುಡ್ಡಿಲ್ಲವೆನ್ನುತ್ತಾರೆ. ರೈತರ ವಿಚಾರವಂತೂ ಹೇಳುವ ಹಾಗೆಯೇ ಇಲ್ಲ. ಮೊದಲು ಮಳೆಯಿಲ್ಲ ನಂತರ ಬೆಳೆದ ಧಾನ್ಯಕ್ಕೆ ಬೆಲೆಯಿಲ್ಲ. ಇನ್ನು ರೈತರಲ್ಲಿ ದುಡ್ಡು ಎಲ್ಲಿಂದ ಬಂದೀತು? ಹತ್ತು ಬೆಳೆದರೆ ಕಂದಾಯದ ಬಾಕಿಯೇ ಹನ್ನೆರಡು ಇರುತ್ತದೆ !

ಅವರ ಮಾತು ಹಾಗಾಯಿತು. ಇನ್ನು ವರ್ತಕರು. ಅವರಿಗೂ ಸರಿಯಾಗಿ ವ್ಯಾಪಾರ ಸಾಪಾರಗಳು ಆಗುತ್ತಿಲ್ಲ. ಆದಕ್ಕೆ ಕಾರಣ ಕೊಳ್ಳುವವರಿಗಿಂತ ಮಾರುವವರೇ ಹೆಚ್ಚು ಮಂದಿ ಇರುವುದು. ಎಲ್ಲರೂ ಮಾರುವವರೇ ಆದರೆ ಕೊಳ್ಳುವವರು ಯಾರು? ವರ್ತಕರ ಪಾಡು ಹೀಗಾಯಿತು. ಇನ್ನು ನೋಕರರು, ನೋಕರರೆಂದರೆ ಸರಕಾರೀ ನೋಕರರೆಂದೇ ಅರ್ಥ. ಖಾಸಗೀ ನೋಕರರನ್ನು ನೋಕರರೆಂದು ಹೇಳುವ ಹಾಗಿಲ್ಲ ಆದಕ್ಕೆ ಕಾರಣಗಳು ಒಂದೆರಡಲ್ಲ. ಆ ವಿಚಾರ ಈಗ ಬೇಡ.

ಈ ನೋಕರರಲ್ಲಿಯೂ ಚಿಲ್ಲರೆಯವರು ... ಒಂದು ನೂರು ರೂಪಾಯಿಯೊಳಗಿನ ವೇತನದ... ತಮ್ಮ ತಮ್ಮ ಸಂಸಾರಗಳನ್ನು ನಡೆಸುವುದೇ ಕಷ್ಟ! ... ಅವರಲ್ಲಿ ಹಣವು ಹೇಗೆತಾನೆ ಉಳಿದೀತು? ಆದುದ... ಅವರ ಸುದ್ದಿಯೂ ಬೇಡ ಅವರಲ್ಲಿಯೂ ದುಡ್ಡಿಲ್ಲ.

ಹಾಗಾದರೆ ದುಡ್ಡು ಯಾರಲ್ಲಿ ಇದೆ? ಇದ್ದ... ಮೂವರಲ್ಲಿ ಕದ್ದವರು ಯಾರು? ರೈತರಲ್ಲಿ ದುಡ್ಡಿ... ವರ್ತಕರಲ್ಲಿಯೂ ಇಲ್ಲ. ಉಳಿದವರು ನೋಕರರು. ... ರಲ್ಲಿ ಇದ್ದೇ ತೀರಬೇಕು ಇಲ್ಲವೆಂದರೆ......... ಯಾ... ಒಪ್ಪತಕ್ಕ ಮಾತು? ........ ಮಾಯವಾಯಿತೆ? ಅದು ಹೇ... ಮಾಯವಾಯಿತು ?

ಒಳಹೊಕ್ಕು ನೋಡಿದರೆ ಈ ನೋಕರರಲ್ಲಿಯೂ ದುಡ್ಡಿಲ್ಲ ! ಇದೇನು ? ಚಿದಂಬರ ರಹಸ್ಯವಾಯಿತಲ್ಲಾ ! ದುಡ್ಡು ಎಲ್ಲಿ ಹೋಯಿತು ?....

ದುಡ್ಡು ತೆರಿಗೆಗಳ ರೂಪೇಣ ಸರಕಾರಕ್ಕೆ ಹೋ... ಯಿತು. ಅಲ್ಲಿಂದ ಸಂಬಳದ ರೂಪೇಣ ನೋಕರನ ಕಿಸೆ... ಬಂದಿತ್ತು. ಅಲ್ಲಿಂದ....? ಅಲ್ಲಿಂದ ಮುಂದೆ....? ಎ... ಹೋಯಿತು ? ಏನಾಯಿತು ? ನೋಕರನ ಬ...

ನಿಂತುಬಿಟ್ಟಿತೆ? ಇಲ್ಲ ನಿಲ್ಲನಿಲ್ಲ. ಮುಂದಕ್ಕೆ ಹೋಯಿತು ಎಲ್ಲಿಗೆ........??

ಎಲ್ಲರೂ ನೋಡುತ್ತಿರುವ ಹಾಗೆಯೇ ಲಕ್ಷ್ಮಿಯು ಸರಕಾರೀ ನೋಕರನ ಮನೆಯನ್ನು ಸಡಗರದಿಂದ ಪ್ರವೇಶಿಸಿದ್ದಾಳೆ. ಆದರೆ ಒಳಗೆ ಮಾತ್ರ ಇಲ್ಲ! ಎಲ್ಲಿ ಹೋದಳು? ಏನಾದಳು? ಯಾವುದೋ ಕಿರುಬಾಗಿಲಿನಿಂದ ಪರಾರಿಯಾಗಿರಬೇಕು!

ನೂರರಿಂದ ಮೇಲ್ಪಟ್ಟ ವೇತನವನ್ನು ಪಡೆಯುವ ಸರಕಾರೀ ನೋಕರರ ಸರಾಸರಿ ಖರ್ಚಿನ ಪಟ್ಟಿಯನ್ನು ತಯಾರು ಮಾಡುವುದಾದರೆ ಅದು ಸ್ವಲ್ಪ ಹೆಚ್ಚು ಕಡಿಮೆ ಹೀಗಿರುತ್ತದೆ.

| | | |
|---|---|---|
| ಅಡುಕಾಳುಗಳಿಗೆ ಸಂಬಳ | ಶೇಕಡ | ೫ |
| ಮನೆಯ ಬಾಡಿಗೆ | ,, | ೭½ |
| ಮಕ್ಕಳ ವಿದ್ಯಾಭ್ಯಾಸಕ್ಕೆ (ನ್ಯಾಯವಾಗಿ) | ,, | ೧೦ |
| ಜೀವವಿಮೆ ವಗೈರೆ ಕೂಡಿಹಾಕುವುದು | ,, | ೭½ |
| ಮದುವೆ ಮುಂಜಿ, ಹಬ್ಬಹರಿ ದಿನಗಳಿಗೆ | ,, | ೧೦ |
| *ಸಂಸಾರದ ಖರ್ಚಿಗೆ | ,, | ೨೫ |
| ಆಟದ ಸಾಮಾನುಗಳಿಗೆ ಮತ್ತು ಆಟದ ಖರ್ಚು | ,, | ೫ |
| ಬಟ್ಟೆಬರೆಗಳಿಗೆ (ಒಂದು ಭಾಗ ನ್ಯಾಯ ಎರಡು ಅನ್ಯಾಯ) | ,, | ೧೨ |
| ಟಾಯಿಲೆಟ್, ಸ್ಟೇಷನರಿಗಳಿಗೆ | ,, | ೩ |
| ಸಿಗರೆಟ್ ಚಾಕೋಲೇಟ್ | ,, | ೩ |
| ಉಪಯೋಗವಿಲ್ಲದ ವಿದ್ಯಾಭ್ಯಾಸಕ್ಕೆ | ,, | ೫ |
| ಪರದೇಶೀ ಔಷಧಿಗಳಿಗೆ | ,, | ೫ |
| ಚಿಲ್ಲರೆ | ,, | ೨ |

ಸರಕಾರೀ ನೋಕರರ ಆದಾಯದ ಶೇಕಡ ಮೂವತ್ತೈದುಭಾಗವು ಪರದೇಶಕ್ಕೆ ಹೋಗುತ್ತದೆಯೆಂದು ಧಾರಾಳವಾಗಿ ಹೇಳಬಹುದು. ಇಷ್ಟೊಂದು ಹಣವು ಹೋಗಿ, ಅದಕ್ಕೆ ಪ್ರತಿಯಾಗಿ ರಬ್ಬರು, ಕರ್ಪೂರ, ಸೀಸ, ಕಬ್ಬಿಣ, ನೂಲು-ರೇಷ್ಮೆ, ಉಣ್ಣೆ, ಚಕ್ಕಳ, ಗಾಜು, ಗೊಬ್ಬರ, ಮಣ್ಣು, ಮಸಿ, ಹಾಳು; ಮೂಳು, ವಗೈರೆ ಬಂದು ಬೀಳುತ್ತಿರುವಾಗ ದುಡ್ಡು ಹೇಗೆತಾನೇ ನಮ್ಮಲ್ಲಿ ಉಳಿದೀತು?

ಹಾಗಾದರೆ ನಮ್ಮ ದೇಶದಲ್ಲಿ ದುಡ್ಡು ಇಲ್ಲವೇ ಇಲ್ಲವೆ? ಎಂಬ ಪ್ರಶ್ನೆಯು ಹುಟ್ಟಬಹುದು. ನಮ್ಮ ದೇಶದಲ್ಲಿ ಅಲ್ಪ ಸ್ವಲ್ಪ ದುಡ್ಡು ಇಲ್ಲದೆ ಇಲ್ಲ. ಎಲ್ಲಿಯೋ ಕೆಲವರಲ್ಲಿ ಇದೆ. ಅವರಾದರೋ ಲಕ್ಷ್ಮೀ ಲೋಲರಲ್ಲ—ಲಕ್ಷ್ಮೀ ಪ್ರಿಯರು! ತಮ್ಮನ್ನು ಒಲಿದಿರುವ ಲಕ್ಷ್ಮಿಯನ್ನು ಬೆಳ್ಳಿ ಭಂಗಾರಗಳ ರೂಪದಲ್ಲಿ ಕೂಡಿಸಿ ನಿತ್ಯವೂ ದೂರದಿಂದಲೇ ನೋಡಿ ಕೈಮುಗಿದು ತೃಪ್ತರಾಗುತ್ತಿದ್ದಾರೆ. ಇದರಿಂದ ಯಾರಿಗೂ ಉಪಯೋಗವಾಗುತ್ತಿಲ್ಲ. ಮನುಷ್ಯನೇ ಆಗಲಿ ಹಣವೇ ಆಗಲಿ ಒಂದು ಕಡೆ ಸೋಮಾರಿಯಾಗಿ ಕುಳಿತಿರಬಾರದು! ಓಡಾಡುತ್ತಿರಬೇಕು. ಹಣವು ಯೋಗ್ಯರೀತಿಯಲ್ಲಿ ಓಡಾಡುತ್ತಿದ್ದರೆ ಲಕ್ಷ್ಮಿಗೆ ಲವಲವಿಕೆಯಿರುತ್ತದೆ. ಲಕ್ಷ್ಮಿಗೆ ಲವಲವಿಕೆಯಿದ್ದರೆ ವಾಣಿಜ್ಯವು ಕಳಕಳಿಸುತ್ತಿರುತ್ತದೆ. ವಾಣಿಜ್ಯವು ಕಳಕಳಿಸುತ್ತಿದ್ದರೆ ಜನಗಳು ನಗುನಗುತ್ತಿರುತ್ತಾರೆ!

ದೇಶದ ಅಭ್ಯುದಯಕ್ಕೆ ವಿದ್ಯಾ-ವಾಣಿಜ್ಯಗಳೇ ಮೂಲ. ವಾಣಿಜ್ಯದ ಅಭಿವೃದ್ಧಿಗೆ ಸಾರ್ವಜನಿಕ ಸಂಸ್ಥೆಗಳು ಬೆಂಬಲವಾಗಿ ನಿಲ್ಲಬೇಕು. ಸಾರ್ವಜನಿಕ ಸಂಸ್ಥೆಗಳು ಹೆಚ್ಚಬೇಕಾದರೆ ವಿಪುಲ ಹಣವುಬೇಕು. ಮನುಷ್ಯನು ತನ್ನಲ್ಲಿರುವ ಹಣವನ್ನು ದುಂದು ಖರ್ಚುಮಾಡದೆ ಸಾರ್ವಜನಿಕ ಸಂಸ್ಥೆಗಳಲ್ಲಿ ಕೂಡಿಡುತ್ತ ಬಂದರೆ, ಅವನೂ ಉಳಿದುಕೊಳ್ಳುತ್ತಾನೆ. ಅವನ ರಾಷ್ಟ್ರವೂ ಉಳಿದುಕೊಳ್ಳುತ್ತದೆ.

* ಹೆಚ್ಚಿಗೆ ಆದರೆ ಅಲಾಯಿದೆ ಸಾಲ!



# ಜೀವವಿಮೆಯ ತತ್ವಪ್ರಚಾರದಲ್ಲಿ ಉಪಾಧ್ಯಾಯರ ಸಾಹಾಯ್ಯ



ಲೇಖಕರು :—
ಶ್ರೀ. ಕಡಪಾಡಿ
ಶ್ರೀನಿವಾಸ ಶೆಣೈ,
ಅಧ್ಯಾಪಕ, ಕಾರ್ಕಳ.
(Mr. K. S. Shenai.)

ಹುಟ್ಟಿದ ಮನುಷ್ಯನಿಗೆ ಸಾವು ಅನಪೇಕ್ಷಿತವಾಗಿರುವದಾದರೂ, ಅದು ಒಂದಲ್ಲ ಒಂದು ದಿನ ಪ್ರತಿಯೊಬ್ಬನಿಗೂ ತಪ್ಪದೆ ಬರತಕ್ಕದ್ದಾಗಿರುವದು. ಹಾಗೆ ಬರುವ ಸಾವು ಅನಿರೀಕ್ಷಿತವಾಗಿರುವದರಿಂದ ಜ್ಞಾನಿಗಳಾದವರು—'ಜವನ ದೂತರು ಬರುವ ಹೊತ್ತನು ನೀನರಿಯೆ' ಎಂದು ಸಾರಿ ಹೇಳಿ ಪ್ರತಿಯೊಬ್ಬ ಮನುಷ್ಯನು ಪುರುಷಾರ್ಥ ಸಂಪಾದನೆ ಮಾಡುವದರಲ್ಲಿ ಬಹು ಜಾಗರೂಕನಾಗಿರಬೇಕೆಂದು ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಪುರುಷಾರ್ಥಗಳಲ್ಲಿ ಅರ್ಥವೂ ಒಂದಾಗಿದೆ. ತನ್ನ ಮತ್ತು ತನ್ನನ್ನು ಹೊಂದಿಕೊಂಡಿರುವವರ ಸಂಸಾರ ಜೀವನವು ಸುಖದಿಂದ ಸಾಗಬೇಕಾದರೆ ಅರ್ಥ ಅಂದರೆ ಹಣವು ಮುಖ್ಯವಾಗಿ ಬೇಕು. ಆದ್ದರಿಂದ ಅರ್ಥಹೀನ ಮನುಷ್ಯನ ಬಾಳುವೆಯನ್ನು ಕುರಿತು ಸರ್ವಜ್ಞನು —

ಸಿರಿಯಣ್ಣ ಉಳ್ಳನಕ ಹಿರಿಯಣ್ಣನಂತಕ್ಕು ।
ಸಿರಿಯಣ್ಣ ಹೋದ ಬೆಳಗಾತ-ಆ ಅಣ್ಣ ।
ನರಿಯಣ್ಣ ನಕ್ಕು—

ಎಂದು ಹೇಳಿರುವನು.

ಬುದ್ಧಿಶಕ್ತಿ ಶರೀರ ಶಕ್ತಿಗಳನ್ನು ಉಪಯೋಗಿಸಿ ಮನುಷ್ಯನು ತನಗಾಗಿಯೂ ತನ್ನನ್ನು ಆಶ್ರಯಿಸಿರುವ ತಂದೆತಾಯಿ ಹೆಂಡತಿ ಮಕ್ಕಳು, ಬಂಧು ಬಳಗದವರಿಗಾಗಿಯೂ ಸಂಪತ್ತನ್ನು ಸಂಪಾದಿಸುತ್ತಾನೆ. ಆದರೆ ಸಂಪತ್ತನ್ನು ಸಂಪಾದಿಸುವದು ಎಷ್ಟು ಕಷ್ಟವೋ ಅದಕ್ಕಿಂತಲೂ ಸಂಪಾದಿಸಿದ ಸಂಪತ್ತನ್ನು ವಿನಿಯೋಗಿಸುವದು ಹೆಚ್ಚು ಕಷ್ಟವಾಗಿರುವದೆಂದು ಬಲ್ಲವರು ಹೇಳುತ್ತಾರೆ. ಅವರ ಈ ಮಾತು ಸಂಪೂರ್ಣ ಸತ್ಯವೆಂಬುದು ಅನುಭವದಿಂದಲೂ ... ದೀತು. ಸಂಪತ್ತನ್ನು ಸಂಪಾದಿಸಿದ ಪ್ರತಿಯೊಬ್ಬನೂ ... ವಿನಿಯೋಗಿಸುವಾಗ ಹಾಸಿಗೆ ನೋಡಿ ಕಾಲು ... ವಿವೇಕಿಯಂತಾಗಬೇಕು. ತನ್ನ ಆದಾಯದಲ್ಲಿ ಸ್ವಲ್ಪ ... ವನ್ನು ಆಪತ್ಕಾಲದಲ್ಲಿ ಉಪಯೋಗಕ್ಕೆ ಬರುವಂತೆ ... ಸಿಟ್ಟು ಉಳಿದುದನ್ನು ಪ್ರತಿಯೊಬ್ಬನು ಖರ್ಚುಮಾಡ ... ಈ ಕ್ರಮವನ್ನು ಮಿತವ್ಯಯವೆಂದು ಇನ್ನೊಂದು ... ನಿಂದಲೂ ಕರೆಯುತ್ತಾರೆ

ಮಿತವ್ಯಯದಿಂದ ಮಿಗಿಸಿಟ್ಟ ಹಣವನ್ನು ಹೇಗೆ ... ಯಕ್ಕಿರಿಸಬೇಕೆಂಬ ಪ್ರಶ್ನೆಯು ಏಳುತ್ತದೆ. ಪ್ರಾಚೀನ ... ಲದ ಜನರು ತಾವು ಮಿಗಿಸಿಟ್ಟ ಹಣವನ್ನು ಭದ್ರತೆಗೋ ... ನೆಲದಡಿಯಲ್ಲಿ ಹೂಳಿಡುತಿದ್ದರು. ಅಥವಾ ಚಿನ್ನಬೆಳ್ಳಿ ... ಆಭರಣಗಳನ್ನು ಮಾಡಿ ಮೈಮೇಲೆ ತೊಟ್ಟುಕೊಳ್ಳುತ್ತಿ ... ಪರಂತು ಈ ಎರಡೂ ಕ್ರಮಗಳು ಲಾಭಕಾರಿಯಾ ... ಳಲ್ಲ. ಆ ಮೇಲೆ ಜನರು ಮೆಲ್ಲ ಮೆಲ್ಲಗೆ ಲಾಭ ... ಯಾದ ಕ್ರಮಗಳನ್ನು ಹುಡುಕಿ ತೆಗೆಯಲಾರಂಭಿ ... ನಿಧಿ, ಬೇಂಕುಗಳ ಸ್ಥಾಪನೆಯಾಗಲಾರಂಭವಾದುವು. ... ಜನರು ಈ ಹೊಸ ಕ್ರಮಗಳಲ್ಲಿ ಲಾಭವನ್ನು ಕಂಡು ... ಪರಂತು ಆ ಕ್ರಮಗಳಲ್ಲಿ ಲಾಭ ಮತ್ತು ಭದ್ರತೆ ... ಎರಡು ದೃಷ್ಟಿಯಿಂದ ಉತ್ತಮವಾದ ಬೇರೆಯಾವ ... ಯೋಜನೆ ಯಿದೆಯೆ ?—ಎಂಬ ಯೋಚನೆಯಲ್ಲಿ ... ಸಮಯವು ಕಳೆದುಹೋಯಿತು. ಕಟ್ಟಕಡೆಗೆ ... ತೆಗೆದ ಜೀವವಿಮೆಯ ಕ್ರಮವು ಈ ಎರಡೂ ದೃಷ್ಟಿಗ ... ತೃಪ್ತಿಕರವೆಂದು ಗೊತ್ತು ಹಚ್ಚಿದರು.

೧೬೫೩ನೆ ಇಸವಿಯ ಸುಮಾರಿಗೆ ನೆಪೋಲಿ ... ಲೊರೆಂಜೋ ಎಂಬ ಪಾಶ್ಚಾತ್ಯ ದೇಶೀಯನೊಬ್ಬನು ... ನಿಕ ಜೀವವಿಮೆಯ ಕ್ರಮದ ಆವಿಷ್ಕಾರ ಮಾಡಿದನೆ ... ಕೆಲವರು ಹೇಳುತ್ತಾರೆ. ಸಂಕ್ಷೇಪದಲ್ಲಿ ಹೇಳುವದಾ ... ಒಬ್ಬನು ಕ್ಲುಪ್ತ ಅವಧಿಯುವರೆಗೆ ಅಥವಾ ಮರಣ ... ನಿರ್ದಿಷ್ಟವಾದ ಹಣವನ್ನು ಪ್ರತಿವರ್ಷವೂ ಕ್ಲಿಪ್ತ ... ದಲ್ಲಿ ಕೊಡುತ್ತ ಬರುವದರಿಂದ, ಕ್ಲಿಪ್ತ ಅವಧಿಯ ...

ಅಥವಾ ಆತನ ಮರಣಾಂತ್ಯದಲ್ಲಿ ಆತನಿಗೆ ಅಥವಾ ಆತನ ವಾರೀಸುದಾರರಿಗೆ ಇಂತಿಷ್ಟೇ ಹಣವು ಏಕಗಂಟನಿಂದ ಅಥವಾ ಕೆಲವು ಪಾಲುಗಳಾಗಿ ಸಿಕ್ಕಬೇಕೆಂದು ಕರಾರು ಮಾಡಿಕೊಳ್ಳುವ ಕ್ರಮಕ್ಕೆ ಜೀವವಿಮೆ, ಎನ್ನುವರು. ಜೀವವಿಮೆ ಮಾಡುವದರಿಂದ ಸಂಚಯಕ್ಕಿಟ್ಟ ದ್ರವ್ಯಕ್ಕೆ ಭದ್ರತೆಯು ಆಗುತ್ತದೆ, ಲಾಭವೂ ದೊರೆಯುತ್ತದೆ. ಜೀವವಿಮೆ ಮಾಡಿಕೊಂಡವನಿಗೆ ಅಕಾಲಮರಣವು ಪ್ರಾಪ್ತವಾದಲ್ಲಿ ಆತನನ್ನು ಆಶ್ರಯಿಸಿದ್ದವರು ನಿರ್ಗತಿಕರಾಗಿ ಊರು ಊರು ಅಲೆಯಬೇಕಾದ್ದಿರುವದಿಲ್ಲ. ಆತನ ಹೆಂಡತಿ ಮಕ್ಕಳು ಮೊದಲಾದ ವಾರೀಸುದಾರರಿಗೆ ಮೊದಲೇ ಮಾಡಿಟ್ಟ ಏರ್ಪಾಡಿನ ಪ್ರಕಾರ ಆತನು ಸಂಚಯಕ್ಕಿಟ್ಟ ಹಣಕ್ಕಿಂತಲೂ ಕೆಲವುಪಾಲು ಹೆಚ್ಚಿಗೆ ಹಣವು ದೊರೆತು, ಆತನ ಮರಣಾನಂತರವೂ ಅವರು ಯಥಾಪ್ರಕಾರ ಸುಖದಿಂದ ಬಾಳಿಕೊಂಡಿರಬಹುದಾಗುತ್ತದೆ.

ಜೀವವಿಮೆಯಿಂದ ವ್ಯಕ್ತಿಗತ ಮತ್ತು ಕೌಟುಂಬಿಕ ಪ್ರಯೋಜನಗಳು ಮಾತ್ರವಲ್ಲದೆ ದೇಶಹಿತಸಾಧನೆಯೂ ಆಗುವದು. ಆಯಾ ದೇಶದಲ್ಲಿ ಸ್ಥಾಪಿತವಾದ ಜೀವವಿಮಾ ಕಂಪನಿಗಳಲ್ಲಿ ಆಯಾ ದೇಶದವರು ಜೀವವಿಮೆ ಮಾಡಿಕೊಳ್ಳುವದರಿಂದ ಅವರು ಕಟ್ಟುವ ವಾರ್ಷಿಕ ಕಂತುಗಳ ಹಣವು ಆ ಕಂಪನಿಗಳಲ್ಲಿ ಸಂಗ್ರಹವಾಗಿ ಅದು ಆಯಾ ದೇಶದ ಕೃಷಿ ಶಿಲ್ಪ ವಾಣಿಜ್ಯ ವ್ಯವಹಾರಗಳ ಉನ್ನತಿಯ ಬಗ್ಗೆ ಉಪಯೋಗಿಸಲ್ಪಡುವದು. ಅಮೇರಿಕ, ಕೆನಡ, ಇಂಗ್ಲೆಂಡ್, ಆಸ್ಟ್ರೇಲಿಯಾ, ಜರ್ಮನಿ, ಇಟಲಿ, ಜಪಾನ್ ಮೊದಲಾದ ಪಾಶ್ಚಾತ್ಯ ಪೌರ್ವಾತ್ಯ ದೇಶಗಳ ಉನ್ನತಿಗೂ ಸುಖಾಭಿವೃದ್ಧಿಗೂ ಆಯಾ ದೇಶಗಳ ಜೀವವಿಮಾ ಕಂಪನಿಗಳು ಬಹುಮಟ್ಟಿಗೆ ಕಾರಣವಾಗಿವೆ. ಆ ಕಂಪನಿಗಳು ಆ ದೇಶದ ಜನರ ಜೀವನ ಸುಖವನ್ನು ಹೆಚ್ಚಿಸಲಿಕ್ಕೂ ಸಮರ್ಥವಾಗಿರುವದು ಮಾತ್ರವಲ್ಲ, ಅವು ಆ ಪ್ರಕಾರ ಶ್ಲಾಘನೀಯ ಕೆಲಸವನ್ನು ಮಾಡಿ ಕೀರ್ತಿಯನ್ನು ಸಂಪಾದಿಸಿರುವವು.

ಆಧುನಿಕ ಜೀವವಿಮಾ ಕ್ರಮದ ಆವಿಷ್ಕಾರವು ಈಗ್ಯೆ ಸುಮಾರು ೩೦೦-೩೫೦ ವರ್ಷಗಳ ಹಿಂದೆಯೇ ಆಗಿತ್ತಾದರೂ ಆ ಕ್ರಮದ ಪ್ರಚಾರವು ಮಾತ್ರ ಕಳೆದ ೧೯೧೪ಗಳ-೧೯೧೮ರ ಮಹಾಯುದ್ಧವು ಆಗುವವರೆಗೆ ಅಷ್ಟು ಚೆನ್ನಾಗಿ ಆಗಿರಲಿಲ್ಲ. ಮಹಾಯುದ್ಧದ ಮೂಲಕವೂ, ಅನಂತರ ಹರಡಿದ ಇನ್‌ಫ್ಲುಯೆಂಜಾ ಮೊದಲಾದ ಘೋರ ರೋಗಗಳ ಮೂಲಕವೂ ಉಂಟಾದ ಪ್ರಾಣಹಾನಿ, ಧನಹಾನಿಯಿಂದ ವಿಚಾರಿಗಳ ವಿಚಾರದೃಷ್ಟಿಯು ವಿಮಾ ಕಂಪನಿಗಳ ಕಡೆಗೆ ವಿಶೇಷವಾಗಿ ಹರಿದು ಅವುಗಳ ಉಪಯುಕ್ತತೆಯನ್ನು ಅವರು ಸಂಪೂರ್ಣ ಮನಗಂಡು ಸಂತೃಪ್ತರಾದರು. ಅಂದಿನಿಂದಲೇ ವಿಮಾ ಕಂಪನಿಗಳ ವ್ಯವಹಾರವು ಹಗಲು ಇಮ್ಮಡಿ, ರಾತ್ರಿ ನಾಲ್ಮಡಿ ಬೆಳೆಯಲಾರಂಭವಾಯಿತು.

ಮಹಾಯುದ್ಧ, ಮಹಾರೋಗಗಳಿಂದಲೂ ಭಾರತದ ದುರ್ದೈವವು ದೂರವಾಗಲಿಲ್ಲ. ವಿಮಾ ಕಂಪನಿಗಳ ಬೆಳವಣಿಗೆಯೂ ಉನ್ನತಿಯೂ ಅಮೆರಿಕ, ಇಂಗ್ಲಂಡ್, ಜಪಾನ್ ಮೊದಲಾದ ದೇಶಗಳಲ್ಲಿ ಯಾವಪ್ರಕಾರ ಆಗುತ್ತಿದೆಯೋ ಆ ಪ್ರಕಾರ ನಮ್ಮ ದೇಶದಲ್ಲಿ ಆಗುತ್ತಿಲ್ಲ. ಜೀವವಿಮಾ ಕಾರ್ಯದಲ್ಲಿ ಅಮೇರಿಕದ ಸಂಯುಕ್ತ ರಾಜ್ಯವು ಉಳಿದೆಲ್ಲ ದೇಶಗಳಿಗಿಂತಲೂ ಮುಂದಿರುತ್ತದೆ. ಅನಂತರದ ಸ್ಥಾನವು ಅನುಕ್ರಮವಾಗಿ ಕೆನಡ. ಇಂಗ್ಲೆಂಡ್, ಜಪಾನ್, ಆಸ್ಟ್ರೇಲಿಯಗಳಿಗೆ ಪ್ರಾಪ್ತವಾಗುತ್ತದೆ. ಎಲ್ಲ ನಾಗರಿಕ ದೇಶಗಳಿಗಿಂತ ಜೀವವಿಮಾ ಕಾರ್ಯದಲ್ಲಿ ಹಿಂದುಳಿದಿರುವ ದೇಶವು ನಮ್ಮ ಹಿಂದೂದೇಶವಾಗಿರುತ್ತದೆ. ಬೇರೆ ಬೇರೆ ದೇಶಗಳ ವಿಸ್ತಾರ ಜನಸಂಖ್ಯೆಯ ಮಾನದಿಂದ ಅಳೆಯುವದಾದರೆ ನಮ್ಮ ದೇಶದಲ್ಲಾಗುತ್ತಿರುವ ವಿಮಾ ಕಾರ್ಯವು ಬಹು ಸ್ವಲ್ಪವಾಗಿರುತ್ತದೆ. ಆದ್ದರಿಂದ ಈ ವಿಭಾಗದಲ್ಲಿಯೂ ನಾವು ವಿದೇಶಿಯರೆದುರಿಗೆ ಲಜ್ಜೆಯಿಂದ ತಲೆ ತಗ್ಗಿಸಿಕೊಂಡು ಇರಬೇಕಾಗಿದೆ.

ಜೀವವಿಮೆಯು ಶ್ರೀಮಂತರಿಗೆ ಬಹು ಉಪಯುಕ್ತವಾದ್ದು. ಯಾರೇ ಆಗಲಿ ; ಯಾವಾಗಲೂ ಏಕಪ್ರಕಾರ ಶ್ರೀಮಂತರಾಗಿಯೇ ಇರುವರೆಂದು ಹೇಳಲಾಗುವುದಿಲ್ಲ. ಇಂದು ಶ್ರೀಮಂತಿಕೆಯ ಪರ್ವತ ಶಿಖರದ ತುಟ್ಟತುದಿಗೆ ಏರಿ, ಅಲ್ಲಿ ವಿಜಯಧ್ವಜವನ್ನು ಹಾರಾಡಿಸಿದವನು, ತಾನೆಯೇ ಕರ್ಮ ಧರ್ಮ ಸಂಯೋಗದಿಂದ ಉರುಳಿ ಬಡತನದ ಗರ್ತೆಯಲ್ಲಿ ಬಿದ್ದು ನುಚ್ಚು ನೂರಾಗಿ ಹೋಗುವದು ಸಂಭವನೀಯವಾಗಿರುತ್ತದೆ. ಆದ್ದರಿಂದ ಜೀವವಿಮೆಯು ಶ್ರೀಮಂತರಿಗೆ ಆಪತ್ತಿಯಲ್ಲಿ ಸಂಪತ್ತಿಯಂತಿರುವ ಕಾದಿಟ್ಟ ನಿಧಿಯಾಗಿರುವದು. ಯಾವ ಸಂದರ್ಭದಲ್ಲಿಯಾದರೂ ಸರಿಯೆ, ಕೊನೆಯಪಕ್ಷ ಒಂದು ಹಿಡಿ ಅನ್ನ, ಒಂದು ಗೇಣು ಬಟ್ಟೆಗಾಗಿ ಒಬ್ಬರೊಬ್ಬರ ಮುಖ ನೋಡ ನೋಡಬೇಕಾದ ಪ್ರಸಂಗವು ಯಾರಿಗೂ ಬರಬಾರದು. ಈ ಕಾರಣದಿಂದ ಕೂಡ ಜೀವವಿಮೆಯು ಬಹು ಉಪಯುಕ್ತವಾದ ಕ್ರಮವಾಗಿರುತ್ತದೆ.

ಜೀವವಿಮೆಯು ಶ್ರೀಮಂತರಿಗೆ ಎಷ್ಟು ಉಪಯುಕ್ತವೋ ಅದಕ್ಕಿಂತಲೂ ಸಹಸ್ರಾರು ಪಾಲು ಬಡವರಿಗೆ ಪ್ರಯೋಜನಕಾರಿಯಾಗಿರುವದು. ಅತ್ಯಂತ ದರಿದ್ರರಾದವರಿಗೆ ಕೂಡ ಜೀವವಿಮೆಮಾಡಿಕೊಳ್ಳಲಿಕ್ಕನುಕೂಲವಾಗುವಂತೆ ಈಗ ಅನೇಕಾನೇಕ ಶಾಸ್ತ್ರೀಯ ಜೀವವಿಮಾ ಕ್ರಮಗಳು ಬಳಕೆಗೆ ಬಂದಿರುತ್ತವೆ. ಅವುಗಳಲ್ಲಿ ಯಾವದಾದರೊಂದೆರಡನ್ನು ಯಾರುಬೇಕಾದರೂ ಕೈಕೊಳ್ಳಬಹುದು. ನಮ್ಮ ದೇಶೀಯರಿಗಂತೂ ಜೀವವಿಮೆಯು ಅತ್ಯಂತಾವಶ್ಯಕವಾಗಿರುತ್ತದೆ. ದಿ ಇಂಡಿಯನ್ ಟೆಂಪರೆನ್ಸ್ ನ್ಯೂಸನಲ್ಲಿ ಪ್ರಕಟವಾದ ಬಿ. ಆರ್. ವಿಲ್ಸನರ ಲೇಖದ ಒಂದಂಶವನ್ನು ಹರಿಜನ ಪತ್ರಿಕೆಯು ಪ್ರಕಟಿಸಿರುತ್ತದೆ. ಆ ಲೇಖಾಂಶದಿಂದ ಗೊತ್ತಾಗುವದೇನಂದರೆ :—

ನಮ್ಮ ದೇಶದಲ್ಲಿ ಪ್ರತಿಯೊಬ್ಬನಿಗೆ ಸರಾಸರಿಯಾಗಿ ಅತ್ಯಂತ ಕಡಿಮೆ ಅಂದರೆ ದಿವಸಕ್ಕೆ ೦-೮-೯ ಖರ್ಚು ಇರುತ್ತದೆ. ಆದರೆ ಅವನ ಸರಾಸರಿ ವಾರ್ಷಿಕ ಉತ್ಪತ್ತಿಯು ನೌರೋಜಿಯವರ ಅಂದಾಜಿನ ಮೇರೆಗೆ ೧೮೭೦ ರಲ್ಲಿ ೨೦, ಚಾರ್ಬೌಸ ದೊರೆಗಳ ಅಂದಾಜಿನ ಮೇರೆಗೆ ೧೮೮೨ ರಲ್ಲಿ ೨೭, ಕರ್ಜನ ದೊರೆಗಳ ಅಂದಾಜಿನ ಮೇರೆಗೆ ೧೮೯೯ ರಲ್ಲಿ ೩೦, ಕುಕ್ ದೊರೆಗಳ ಅಂದಾಜಿನ ಮೇರೆಗೆ ೧೯೧೧ ರಲ್ಲಿ ೮೦, ಸ್ಲೇಟರ್ ದೊರೆಗಳ ಅಂದಾಜಿನ ಮೇರೆಗೆ ೧೯೨೮ ರಲ್ಲಿ ೧೦೦ ರೂಪಾಯಿ ಎಂದಿಟ್ಟುಕೊಂಡರೂ ಅದು ದಿನ ೧ಕ್ಕೆ ಬರೇ ೦-೪-೬ ಆಗುತ್ತದೆ. ಆದ್ದರಿಂದ ಎಲ್ಲರಿಗೆ ಕನಿಷ್ಟ ಮಿತಿಯ ಖರ್ಚನ್ನು ಸಾಗಿಸುವದು ಕೂಡ ಸಾಧ್ಯವಾಗಿರುವದಿಲ್ಲ. ಸೇಕಡಾ ೨೦ ಮಂದಿಯು ಉತ್ಪನ್ನವು ಕನಿಷ್ಟ ಮಿತಿಯ ಖರ್ಚಿನ ಕಾಲಂಶದಷ್ಟು ಆಗಿರುವದಿಲ್ಲ. ಸೇಕಡಾ ೪೧ ಮಂದಿಗೆ ಈ ಖರ್ಚಿನ ಅರ್ಧದಷ್ಟು ಉತ್ಪನ್ನವಿರುತ್ತದೆ. ಸೇಕಡಾ ೨೯ ಮಂದಿಗೆ ಸುಮಾರಾಗಿ ಈ ಖರ್ಚಿನಷ್ಟೇ ಉತ್ಪನ್ನವಿರುವದು. ಬರೇ ಸೇಕಡಾ ೧೦ ಮಂದಿ ಮಾತ್ರ ಈ ಕನಿಷ್ಟ ಮಿತಿಯ ಖರ್ಚಿಗಿಂತಲೂ ಹೆಚ್ಚು ಉತ್ಪನ್ನವುಳ್ಳವರಾಗಿರುವರು.

ಇದರಿಂದ ನಮ್ಮ ದೇಶದಲ್ಲಿ ದಾರಿದ್ರ್ಯವು ಎಷ್ಟು ಬಲವಾಗಿದೆ ಎಂಬುದು ವ್ಯಕ್ತವಾಗುತ್ತದೆ. ದಾರಿದ್ರ್ಯದ ಕಾರಣದಿಂದ ರೋಗರುಜೆಗಳಿಗೆ ಜನರು ಬಲಿಯಾಗುವದೂ ಹೆಚ್ಚು. ಅನಿರೀಕ್ಷಿತವಾದ ಅಕಾಲ ಮರಣಗಳೂ ಬಹಳ. ಆದ್ದರಿಂದ ಒಮ್ಮಿಂದೊಮ್ಮೆಗೆ ನಿರ್ಗತಿಕರಾಗಿ ಮನೆಬಿಟ್ಟು ಬೀದಿಯನ್ನಾಶ್ರಯಿಸುವಕುಟುಂಬಗಳೂ ಲೆಕ್ಕವಿಲ್ಲದಷ್ಟಿರುತ್ತವೆ. ಆದೇ ನಮ್ಮದೇಶದ ಬಡ ಜನರು ತಮ್ಮ ಸ್ಥಿತಿ… ಅನುಕೂಲವಾದ ರೀತಿಯಲ್ಲಿ ಜೀವವಿಮೆ ಮಾಡಿ… ದ್ದಾದರೆ ದರಿದ್ರ ಕುಟುಂಬಗಳ ದಾರಿದ್ರ್ಯವು ಬಹು… ಕಡಿಮೆಯಾಗುವದು. ಒಪ್ಪೊತ್ತು ಊಟಕ್ಕೂ … ರಿಗೆ ಜೀವವಿಮೆಯ ಕಂತುಗಳನ್ನು ಕಟ್ಟಲಿಕ್ಕೆ ಹಣ … ಬರಬೇಕು ? ಎಂಬ ಪ್ರಶ್ನೆಯು ಸಹಜವಾಗಿ ಬರು… ಆದರೆ ನಾವು ದರಿದ್ರರಾದವರ ನಿತ್ಯಜೀವನದ … ಲೋಕನ ಮಾಡಿದ್ದಾದರೆ ಅವರು ಅಷ್ಟು ದರಿದ್ರರಾಗಿ… ಪ್ರಾಯಶಃ ಶಾರೀರಿಕ ಅಥವ ಮಾನಸಿಕ ದುಃಖ… ತಾತ್ಕಾಲಿಕವಾಗಿಯಾದರೂ ಮರೆಯುವೆವೆಂಬ … ಯಿಂದ ಸೇಂದಿ ಶರಾಬು ಸೇವಿಸುವದು, ಬೀಡಿ ಸಿಗ… ಎಳೆಯುವದು, ಗಾಂಜಾ ಅಫೀಮು ಉಪಯೋಗಿಸು… ಕಾಫಿ ಚಾ ಕುಡಿಯುವದು ಮೊದಲಾದ ದುರ್ವ್ಯಸನ… ಬಲಿಯಾಗಿ ತಮ್ಮ ಕಷ್ಟಾರ್ಜಿತದ ಹಣದ ಹೆಚ್ಚಿನ … ವನ್ನು ದುರ್ವ್ಯಯ ಮಾಡುವದನ್ನು ತಿಳಿಯಬಹು… ಅವರು ಸ್ವಲ್ಪ ವಿಚಾರವಂತರಾಗಿ ತಾವು ಅನ್ನ ಬಟ್ಟೆ… ಗಾಗಿ ಮಾಡುವ ಖರ್ಚನ್ನು ಬಿಟ್ಟು ಮಿಕ್ಕ ಬಾಬು… ದುರ್ವ್ಯಯ ಮಾಡುವ ಹಣದ ಒಂದಂಶವನ್ನು ಜೀವ… ಮಾಡಲಿಕ್ಕೆ ಉಪಯೋಗಿಸಿದ್ದಾದರೆ ಮೇಲಿನ ಪ್ರಶ್ನೆ… ಉತ್ತರ ಕೊಡಬೇಕಾದ ಪ್ರಸಂಗವೇ ಬರುವದಿಲ್ಲ.

ಸ್ವೋನ್ನತಿಯೊಂದಿಗೆ ಸ್ವದೇಶೋನ್ನತಿಯೂ … ಬೇಕೆಂದಾದರೆ ಸ್ವದೇಶೀ ಜೀವವಿಮಾ ಕಂಪನಿಗ… ಮಾತ್ರ ಪ್ರೋತ್ಸಾಹಿಸುವುದು ಪ್ರತಿಯೊಬ್ಬ ದೇಶಾ… ಕರ್ತವ್ಯ ಧರ್ಮವಾಗುತ್ತದೆ. ಜೀವವಿಮೆಯ … ಯಥಾರ್ಥಜ್ಞಾನವು ನಮ್ಮ ದೇಶದಲ್ಲಿ ಸಾಮಾನ್ಯ … ಏನೂ ಆಗಿರುವದಿಲ್ಲ. ಆದ್ದರಿಂದ ಅವರು ಸರ್ವಸಾ… ಣವಾಗಿ ದೇಶೀ ಜೀವವಿಮಾ ಕಂಪನಿಗಳ ಕಡೆಗೆ ಉದಾ… ನರಾಗಿರುತ್ತಾರೆ. ನಿಜವಾಗಿ ನೋಡಹೋದರೆ ಜೀವವಿ… ಕಂಪನಿಗಳು ಆಯಾದೇಶದ ರಾಷ್ಟ್ರೀಯ ಸಂಪತ್ತಿ … ತ್ತವೆ. ಆಯಾ ದೇಶಗಳ ಕೃಷಿ ಶಿಲ್ಪ ವಾಣಿಜ್ಯಗಳ … ತಿಯೂ ಸಂಪದಭಿವೃದ್ಧಿಯೂ ಆಯಾದೇಶಗಳ ಜೀವವಿ… ಕಂಪನಿಗಳಿಗೆ ಸಾಮಾನ್ಯ ಜನತೆಯಿಂದ ದೊರೆಯು… ಪ್ರೋತ್ಸಾಹದ ಮೇಲೆ ನಿರ್ಭರವಾಗಿರುತ್ತವೆ. … ದೇಶದ ಸೇಕಡಾ ೯೨-೯೩ ರಷ್ಟು ಜನರು ನಿರಕ್ಷರ… ಳಾಗಿರುವದರಿಂದ ಅವರಿಗೆ ಜೀವವಿಮೆಯ ತತ್ವ… ತಿಳಿಸಿ ಕೊಡುವದು ಕಷ್ಟವಾಗಿದೆ. ಆದರೂ ಹಳ್ಳಿ… ಗಳಲ್ಲಿ ಹರಡಿರುವ ಅಜ್ಞಾನಾಂಧಕಾರವನ್ನು ತೊಲಗಿ…

ಬಂಧ ಜ್ಞಾನಜ್ಯೋತಿಗಳಂತಿರುವ ಗ್ರಾಮಶಾಲೆಗಳ ಉಪಾಧ್ಯಾಯರು ದೇಶೋದ್ಧಾರದ ತಮ್ಮ ಇತರ ಅನೇಕ ಚಟುವಟಿಕೆಗಳೊಂದಿಗೆ ಜೀವವಿಮೆಯ ತತ್ವಪ್ರಚಾರವನ್ನು ಮಾಡಿದ್ದಾದರೆ; ಅವರು ದೇಶೀ ಜೀವವಿಮಾ ಕಂಪನಿಗಳಲ್ಲಿ ಜೀವವಿಮೆ ಮಾಡಿ, ತಮ್ಮ ಗ್ರಾಮಸ್ಥರೂ ಜೀವವಿಮೆ ಮಾಡುವಂತೆ ಕೈಲಾದ ಪ್ರಯತ್ನಗಳನ್ನು ಮಾಡಿದ್ದಾದರೆ; ದರಿದ್ರರಾದವರಿಗೆ ಸುಖಜೀವನ ಮಾರ್ಗವನ್ನು ತೋರಿಸಲಿಕ್ಕೆ ಬಂದ ದೇವದೂತರಂತೆ ನಮ್ಮ ಗ್ರಾಮಶಾಲೆಗಳ ಉಪಾಧ್ಯಾಯರು ಆಚಂದ್ರಾರ್ಕವಾದ ಸತ್ಕೀರ್ತಿಯನ್ನು ಸಂಪಾದಿಸುವರು; ಮತ್ತು ಸ್ವಾರ್ಥದೊಂದಿಗೆ ಪರಾರ್ಥವನ್ನು ಸಾಧಿಸಿ, ಜೀವನ ಸಫಲತೆಯನ್ನು ಹೊಂದುವರು.



## ವಿಮಾ ರಕ್ಷಣೆಯಿಲ್ಲದ ನಿಮ್ಮ ಕುಟುಂಬವು

## ಮರಳ ಮೇಲೆ ಕಟ್ಟಿದ

## ಮನೆಯಂತೆ.

### ಒಂದು ಸಣ್ಣ ಪೆಟ್ಟೂ ಅದನ್ನುರುಳಿಸಿಬಿಡುವುದು.

ತದನಂತರ ನನ್ನನ್ನು ನನ್ನ ಕುಟುಂಬವನ್ನು ವೃದ್ಧಾಪ್ಯದಲ್ಲಿ ರಕ್ಷಿಸುವವರಿಲ್ಲವಲ್ಲಾ

ಎಂಬ ಚಿಂತೆಯ ಕೊರಗಿನಲ್ಲಿ ನಿಮ್ಮ ಶಾರೀರಕ ಶಕ್ತಿಯೂ ಮತ್ತು

ಮಾನಸಿಕ ಶಕ್ತಿಯೂ ಕ್ಷೀಣಿಸುವುದು.

# ವಿಚಿತ್ರ ವಿಮೆ



ಲೇಖಕರು:
ಶ್ರೀ|| ವೈ. ಅಚ್ಯುತರಾವ್, ಬಿ.
ಅವರು, ಹೈದರಾಬಾದ್.
Mr. Y. Achutha Rao, B.A.

ಅಮೆರಿಕಾಕ್ಕೆ ಹೋದ ಮೇಲೆ ಅಲ್ಲಿ ನೋಡತಕ್ಕ ಸ್ಥಳಗಳು ಅನೇಕ. ಅವೆಲ್ಲವೂ ಬಹು ರಮ್ಯವಾಗಿಯೂ, ಏನಾದರೂ ಒಂದು ಹೊಸ ವಿಷಯವನ್ನು ಸೂಚಿಸುವಂತೆಯೂ, ಒಂದನ್ನೊಂದು ಮೀರಿಸುವಂತೆಯೂ ಇದ್ದುವು. ಇವೆಲ್ಲಕ್ಕಿಂತಲೂ ಅತಿಶಯವಾದ್ದು ನನಗೆ ಬಹು ಆಶ್ಚರ್ಯಕರವಾದ್ದು ಒಂದು ವಿಷಯವುಂಟು. ಹಾಲಿವುಡ್ ನೋಡದೆ ಬಂದರೆ, ಹದಿನಾಲ್ಕು ಲೋಕಗಳ ಪೈಕಿ ಎಲ್ಲವನ್ನೂ ನೋಡಿ ಸ್ವರ್ಗವನ್ನು ನೋಡದೆ ಬಿಟ್ಟಂತೆ. ಸ್ವರ್ಗದ ವರ್ಣನೆಯನ್ನು ಬಹುಶಃ ನಾವೆಲ್ಲರೂ ಯಾವುದಾದರೊಂದು ಪುಸ್ತಕದಲ್ಲಿ ಓದಿಯೇ ಇರುತ್ತೇವೆ. ಅಲ್ಲಿಯ ಅಪ್ಸರೆಯರು, ದೇವತೆಗಳು, ಆ ಆಟ ಆ ಊಟ, ಅದೇನು ಸಂಭ್ರಮ! ಕುಣಿತ, ಸಂಗೀತ, ನಾಟಕ, ಒಂದಲ್ಲ ನಾನಾವಿಧ. ಅಲ್ಲಿ ಹೋದಮೇಲೆ ಎಂತಹ ವೇದಾಂತಿಗಾದರೂ, 'ನಮ್ಮನೆ ಇಲ್ಲೇ ಇರಬಾರದಾಗಿತ್ತೆ; ಅನ್ನಿಸುತ್ತದೆ. ನನಗನಿಸುವುದೇನು ಹೆಚ್ಚು. ಹಾಲಿವುಡ್ ನೋಡುವುದಲ್ಲದೆ, ಸಾಧ್ಯವಾದರೆ, ಅಲ್ಲೆ ನಾನು ಯಾವುದಾದರೂ ಉದ್ಯೋಗವಲ್ಲ ಸೇರಿಬಿಟ್ಟು ಇದ್ದು ಬಿಡೋಣವೆಂಬ ಆಶೆಯಿತ್ತು. ಅಲ್ಲದೆ ಆಗಾಗ್ಗ ಕೇಳಿದ್ದೆ, ಅಲ್ಲಿ ನಾನಾವಿಧ ಜನಗಳಿಗೆ ಆಶ್ರಯ ಸಿಕ್ಕುತ್ತದೆ ಎಂದು ಅತಿ ಉದ್ದವಾದ ಮನುಷ್ಯ, ಬಹು ಕುರೂಪಿಯಾದ ಆಳು, ಸರ್ವಾಂಗ ಸುಂದರ ಸ್ತ್ರೀಪುರುಷರು, ಬಹು ದೊಡ್ಡ ಹೊಟ್ಟೆಯವರು, ಬಹು ಉದ್ದ ಮೂಗಿನವರು, ಬಾರುದ್ದದ ಕಾಲಿನವರು, ಅಚ್ಚು ಕಟ್ಟನವರು ಹೀಗೆಯೇ ನಾನಾ ರೀತಿಯಾಗಿ, ನನ್ನಲ್ಲಿ ಅಂತ ಅತಿಶಯವಾದ ವಿಚಿತ್ರಗಳು ನನಗೇನೂ ಕಾಣಬರಲಿಲ್ಲ. ನನಗೆ ಸಂಗೀತ ಬಾರದು. ಕುಣಿತ ನಮ್ಮಲ್ಲಿಲ್ಲ. ಉದ್ದವೂ ಇಲ್ಲ. ಕುಳ್ಳೂ ಇಲ್ಲ, ಮಟ್ಟಸದ ಆಳು. ಮೂಗು ದೊಡ್ಡದಾದರೂ ನನಗಿಂತ ದೊಡ್ಡ ಮೂಗಿನವನು ಅಲ್ಲಿ ಒಬ್ಬ ಆಗಲೇ ಇದ್ದ. ಅಂತೂ ಇರಲಿ. ಅಲ್ಲಿಯ ಮ್ಯಾನೇಜರುಗಳು ವ್ಯಕ್ತಿಯಲ್ಲಿರುವ ವಿಚಿತ್ರವನ್ನು ಕಂಡುಹಿಡಿಯುವ ಬುದ್ಧಿ ಹೊಂದಿರುತ್ತಾರೆ. ಹಾಗೆ ನನ್ನಲ್ಲೇನಾದರೂ ಕಂಡು ಬಂದರೆ ನನ್ನನ್ನು ಅವರೇ ... ಕೊಳ್ಳುತ್ತಾರೆಂದು ಅಲ್ಲಿಗೆ ಹೋದೆ?

ಅವರಲ್ಲಿ ತಮಗೆ ಬೇಕಾದ ನಟರನ್ನು ಅಥವಾ ಹಾ... ವುಡ್‌ಗೆ ಸೇರಲು ಯೋಗ್ಯರಾದವರನ್ನು ಆರಿಸಿಕೊಳ್ಳ... ಒಬ್ಬನಲ್ಲ, ಅನೇಕ ಜನರ ಸಮ್ಮತಿ ಬೇಕು. ಇವರು ಡೈ... ಕ್ಟರುಗಳು. ಇವರು ತಮಗೆ ಬೇಕಾದ ಪರೀಕ್ಷೆಗಳನ್ನೆ... ಮಾಡಿ ಅನೇಕ ಪ್ರಶ್ನೆಗಳನ್ನು ಕೇಳುತ್ತಾರೆ. ಅದಕ್ಕೆಲ್ಲ... ನಾವು ಸಮಂಜಸವಾದ ಉತ್ತರವನ್ನು ಕೊಡಬೇಕು. ... ಸಾಧಾರಣವಾಗಿ ಎಲ್ಲರೂ ಕೇಳುವ ಪ್ರಶ್ನೆಗಳೆ; ಹೆಸ... ವಯಸ್ಸು, ನನಗೆ ಬರತಕ್ಕಂಥ ಕಲೆಗಳು ಮುಂತಾದು... ಆದರೆ ನನಗೊಂದು ಹೆದರಿಕೆಯಿತ್ತು. ನನ್ನ ಕುಲಗೋತ್ರ... ಗಳನ್ನು ಕೇಳುವಾಗ, ಬ್ರಾಹ್ಮಣ, ಬ್ರಾಹ್ಮಣೇತರ ಎ... ಪ್ರಶ್ನೆ ಬರುತ್ತದೆಯೋ ಏನೋ ಎಂದು ದೇವರದಯ... ಕೇಳಲಿಲ್ಲ. ಒಳಗುಟ್ಟು ಅವರಿಗೇನು ಗೊತ್ತು, ಜಾತಿ... ಗೋತ್ರದ ಮಾತೇ ಇಲ್ಲ. ಕೆಲಸಕ್ಕೆ ಬಾರದ ಒ... ಪ್ರಶ್ನೆಯನ್ನು ಮಾತ್ರ ಕಡೆಯಲ್ಲಿ ಕೇಳಿದರು. "ನೀ... (Insurance) ವಿಮಾ ಮಾಡಿದ್ದೀಯಾ" ಎಂದರು ... ಇಲ್ಲ ಎಂದೆ_ನಾನು ಮಾಡಿಯೂ ಇರಲಿಲ್ಲ. ಅವರ ... ತ್ಯವೂ ನನಗಿರಲಿಲ್ಲ. ತಿನ್ನುವುದಕ್ಕೆ ನನಗೆ ಬೇಕಾದ... ಆಸ್ತಿ ಇರುವಾಗ ವಿಮೆ ಏಕೆ ಮಾಡಬೇಕು. 'ವಿಮೆ ... ಮಾಡಲಿಲ್ಲ" ಎಂದು ಕೇಳಿದರು. ನನ್ನ ಹತ್ತಿರಕ್ಕೆ ಯಾ... ಏಜಂಟೂ ಬರಲಿಲ್ಲ. ನನ್ನನ್ನು ಬಲಾತ್ಕಾರ ಪಡಿಸು... ಇಲ್ಲ ಎಂದೆ. ಎಲ್ಲರೂ ಗೊಳ್ಳೆಂದು ನಕ್ಕರು.

ಮಾರನೆಯ ದಿನ ನನಗೆ ಅನೇಕ ಹೆಸರುವಾಸಿಯಾದ ನಟನಟಿಯರ ಬೇಟಿ. ಡೈರೆಕ್ಟರುಗಳ ರಿಪೋರ್ಟು ನೋಡಿ ಬಹುಶಃ ಇವರು ಯಾರಾದರೂ ನನ್ನನ್ನು ತಮ್ಮ ಸಹ... ಯಕ ನಟನನ್ನಾಗಿ ಆರಿಸಿಕೊಳ್ಳಬಹುದೆಂದು ನನ್ನ ... ಮುಟ್ಟಿಗೂ ಇವರಿಗೂ ನನ್ನ ... ಯನ್ನು ತೋರಿಸಿ ತಮ್ಮಲ್ಲೆ ಒಬ್ಬರಿಗೊಬ್ಬರು ಈ ನಟ...

ನನಗೆ ಬೇಕು ನನಗೆ ಬೇಕು ಎಂದು ಅವರಲ್ಲಿಯೇ ವಿವಾದ ಹುಟ್ಟಿಸಬೇಕು ಎಂದು ನನ್ನ ಯೋಚನೆ. ಉಡಿಗೆ ತೊಡಿಗೆಗಳಲ್ಲಿ ಅವರ ಒಪ್ಪಿಗೆಗೆ ತಕ್ಕಂತೆಯೇ ನಾನು ಈಗಿನ ಮಾಡರ್ನ ತರಹ ಇದ್ದೆ. ನಾನು ಹಣವಂತ ನನಗೇನು ? ಬಹಳ ಬೆಲೆಯಾದ ಬಟ್ಟೆಗಳನ್ನು ಹಾಕಿಕೊಂಡಿದ್ದೆ. ಅದರ ವಿಷಯವಾಗಿ ಯಾವ ಆಕ್ಷೇಪಣೆಯೂ ಬರುವಂತೆ ಇರಲಿಲ್ಲ. ಇನ್ನು ವಿದ್ಯೆಯಲ್ಲಿ ನಾನು ಕಡಮೆಯೇ ? ವಿಶ್ವವಿದ್ಯಾಲಯದಲ್ಲಿ ಓದಿದವನು. ಅನೇಕ ಪುಸ್ತಕಗಳನ್ನು ಓದಿ. ಕಲೆಯೆಂದರೇನು ? ಸೌದರ್ಯವೆಂದರೇನು ? ಅದನ್ನು ವರ್ಣಿಸುವುದು ಹೇಗೆ ಎಂಬುದನ್ನು ಕಲಿತಿರುವವನು. ಇನ್ನು ಹೆದರಿಕೆ ಏನು. ತಕ್ಕಮಟ್ಟಿಗೆ ನಾಟ್ಯಕಲೆಯೂ ತಿಳಿದಿತ್ತು. ಆದ್ದರಿಂದ ನಾನು ಧೈರ್ಯಗುಂದದೆ ಈ ಎಲ್ಲಾ ಕಲಾಭಿಮಾನಿಗಳನ್ನೂ ಸಂಧಿಸಿದೆ. ಇವರೆಲ್ಲರೂ ತರುಣಿಯರೇ ಹೊರತು ತರುಣರೊಬ್ಬರೂ ಇರಲಿಲ್ಲ. ಅದು ಒಳ್ಳೆಯದೇ ಅಲ್ಲವೆ.

ಮೊದಲು ಒಬ್ಬಾಕೆ ನನ್ನನ್ನು ಕರೆಸಿಕೊಂಡಳು. ಅವಳ ಕೊಟ್ಟಡಿಯಲ್ಲಿ ಅವಳ ಉಡುಪೇನು, ಅಲಂಕಾರವೇನು, ಅದು ನವೀನ ಬೆಡಗು (Modern fashion) ಹೇಳುವುದಕ್ಕೆ ಅಸಾಧ್ಯ. ನನಗೊಂದು ಕುರ್ಚಿಯನ್ನು ತೋರಿಸಿ ಒಂದು ಸಿಗರೇಟನ್ನು ನನಗೆ ಕೊಟ್ಟು ತಾನೊಂದನ್ನು ತೆಗೆದುಕೊಂಡಳು. ನಾನು ಬೆಂಕಿ ಕಡ್ಡಿಯನ್ನು ಗೀಚಿ ಅವಳ ಸಿಗರೇಟನ್ನು ಹಚ್ಚಿಸಿ. ನಾನೂ ಸೇದಲು ಪ್ರಾರಂಭಿಸಿದೆ. ಅನೇಕ ಮಾತುಕತೆಗಳಾದಮೇಲೆ ನನ್ನಲ್ಲಿ ನಿನಗೆ ಕಾಣಿಸುವ ಹೆಚ್ಚು ಸೌಂದರ್ಯವೇನು ಎಂದಳು. ಇದು ನನಗೆ ಬಹಳ ಕಠಿಣ ಪ್ರಶ್ನೆಯಾಯಿತು. ನೀನು ಸರ್ವಾಂಗಸುಂದರಿ ಎಂದೆ. ನಿನಗೆ ಹುಚ್ಚು ಎಂದಳು. ಹಾಗಾದರೆ ನೀನೇ ಹೇಳು ನೋಡೋಣ ಎಂದು ಕೇಳಲು ನನ್ನ ಕುತ್ತಿಗೆಯೆ ನನ್ನಲ್ಲಿ ಅತಿ ಸುಂದರವಾದ ಭಾಗ. ಇದಕ್ಕಾಗಿಯೇ ನನಗೆ ಇಷ್ಟೊಂದು ಸಂಬಳ. ಅಲ್ಲದೆ ಇದನ್ನು ನಾನು ೫ ಲಕ್ಷ ಡಾಲರುಗಳಿಗೆ ವಿಮೆ ಮಾಡಿರುವೆನು ಎಂದಳು. ನನಗೆ ಆಶ್ಚರ್ಯವಾಯಿತು. ಏನು ! ನಿನ್ನ ಕುತ್ತಿಗೆಯನ್ನು ಮಾತ್ರ ವಿಮೆಯೆ ಎಂದೆ.

ಮತ್ತೊಬ್ಬಳಲ್ಲಿಗೆ ಹೋದೆ, ಇವೇ ಪ್ರಶ್ನೆಗಳೆ. ಅವಳ ತುಟಿಗಳು ನನಗೆ ಬಹು ರಮ್ಯವಾಗಿ ಕಂಡದ್ದರಿಂದ ನಿನ್ನ ತುಟಿಗಳು ನಿನಗೆ ಬಹು ಸೌಂದರ್ಯವನ್ನು ಕೊಟ್ಟಿವೆ ಎಂದು ಹೇಳಿ ಅವಳ ಶಹಬಾಸ್‌ಗಿರಿಯನ್ನು ಪಡೆದೆ. ಅದಕ್ಕೆ ಅವಳು ಇದರಿಂದ ನನಗೆ ಬಹಳ ತೊಂದರೆ ಎಂದಳು. ಅಂಥದೇನು ಎಂದು ಕೇಳಿದೆ. ಪ್ರತಿದಿನವೂ ನಾಲ್ಕು ಜನ ಡಾಕ್ಟರುಗಳಿಗೆ ನಾನು ನನ್ನ ಒಂದು ಗಂಟೆಯ ಕಾಲವನ್ನು ಕೊಡಬೇಕು. ಅವರು ಬಂದು ಈ ತುಟಿಗಳನ್ನು ಪರೀಕ್ಷಿಸಿ ಬಹು ಮುದ್ದಾಗಿವೆ ಎಂದು ರಿಪೋರ್ಟು ಬರೆದುಕೊಂಡು ಹೋಗಬೇಕು ಎಂದಳು. ನನಗೆ ಇದು ಮತ್ತೂ ಆಶ್ಚರ್ಯವನ್ನುಂಟುಮಾಡಿತು. ಆರೋಗ್ಯ ಪರೀಕ್ಷೆಗೆ ಡಾಕ್ಟರು ಬರುವುದುಂಟು. ತುಟಿ ಪರೀಕ್ಷೆಗೆ ಡಾಕ್ಟರು ಬರಬೇಕೆ ಎಂದೆ. ನಾಲ್ಕು ವಿಮಾ ಕಂಪನಿಯವರು ನನ್ನ ತುಟಿಗ (Insure) ವಿಮಾ ಮಾಡಿರುವರು ತಮ್ಮ ಹಣದ ಜವಾಬ್ದಾರಿಗಾಗಿ ಆ ಕಂಪನಿಯ ಡಾಕ್ಟರುಗಳು ಬರುತ್ತಾರೆಂದು ಬಹು ಠೀವಿಯಿಂದ ಉತ್ತರ ಕೊಟ್ಟಳು.

ಸರಿ, ಮೂರನೆಯವಳಲ್ಲಿಗೆ ಹೋದೆ. ತನ್ನ ಕಥೆಯನ್ನೆಲ್ಲಾ ಹೇಳಿ ತನ್ನ ಕಾಲುಗಳನ್ನು ವಿಮೆ ಮಾಡಿದ್ದೇನೆಂದಳು. ಮತ್ತೊಬ್ಬಳು ತನ್ನ ಕೈಬೆರಳುಗಳನ್ನು ಮಾಡಿದ್ದೇನೆಂದಳು. ಅಂತೂ ಇದೇರೀತಿಯಾಗಿ ಒಬ್ಬೊಬ್ಬರೊಂದೊಂದು ಹೇಳಲು ಎಲ್ಲರೂ ಹುಚ್ಚರಂತೆ ಕಂಡರು. ಜೀವವಿಮೆಯನ್ನು ನಾವು ಕೇಳಿದ್ದೇವೆ. ಈ ತರಹ ವಿಮೆಯು ಎಲ್ಲಿಯಾದರೂ ಉಂಟೆ? ಇದು ನಾಗರಿಕತೆಯ ಹೆಡ್ಡತನವಲ್ಲದೆ ಬೇರೆ ಏನು ?

ಈ ಅಪ್ಸರೆಯರ ಭೇಟಿಯಾದಮೇಲೆ ನನಗೆ ಕೆಲವು ದೊಡ್ಡ ನಟರನ್ನು ನೋಡಬೇಕೆಂದೆನಿಸಿತು. ನಾನೇ ಅವರಲ್ಲಿಗೆ ಹೋದೆ. ಪಾಪ ಅವರೆಲ್ಲರೂ ಸಭ್ಯರಾಗಿದ್ದರು. ಹೆಂಗಸರಷ್ಟು ಕುಚೇಷ್ಟೆಯವರೂ ಅಹಂಕಾರಿಗಳೂ ಆಗಿ ಕಾಣಲಿಲ್ಲ. ಇತರರು ತಮ್ಮನ್ನು ಕೊಂಡಾಡಬೇಕೆಂಬ ದುರಾಶೆ ಆ ನಟಿಯರಲ್ಲಿ ಕಂಡುಬಂದಿತು. ಇವರಲ್ಲಿ ಸಾಧಾರಣವಾದ ಕುಶಲಪ್ರಶ್ನೆಗಳಾದಮೇಲೆ ಕುತೂಹಲದಿಂದ ಇವರಿಗೆ ಯಾವ ಹುಚ್ಚಿದೆಯೋ ನೋಡೋಣವೆಂದು ನಾನೇ ನೀವು ಯಾವ ವಿಮೆಯನ್ನು ಮಾಡಿದ್ದೀರೆಂದು ಕೇಳಿದೆ. ಒಬ್ಬನು ತಾನು ನೀರಿನಲ್ಲಿ ಭೀಮಕಾರ್ಯಗಳನ್ನು ಮಾಡುವುದಾದ್ದರಿಂದ ತನ್ನ ಪ್ರಾಣಾಪಾಯಕ್ಕಾಗಿ ಜೀವವಿಮೆಯನ್ನು ಮಾಡಿರುವೆನೆಂದನು. ಮತ್ತೊಬ್ಬನು ತನ್ನ ಮಹತ್ಕಾರ್ಯಗಳೆಲ್ಲವೂ ವಿಮಾನದಲ್ಲಿ ನಡೆಯುವುದರಿಂದ ತನ್ನ ಜೀವಾಪಾಯಕ್ಕಾಗಿ ಜೀವವಿಮೆಯನ್ನೇ ಮಾಡಿದ್ದೇನೆಂದನು. ಒಟ್ಟಿನಲ್ಲಿ ನಟರೆಲ್ಲರೂ ಜೀವವಿಮೆಯನ್ನು ಮಾಡಿರುವುದಾಗಿಯೇ ಹೇಳಿದರು. ಇದು ನ್ಯಾಯವಾಗಿಯೇ ಕಂಡಿತು. ನಮ್ಮ ದೇಶದಲ್ಲಿಯೂ ನಾವು ಬೇಕಾದವರು ಜೀವವಿಮೆ ಮಾಡುತ್ತೇವೆ. ಮೂಗು

ಕಿವಿ, ಬೆಟ್ಟು, ತುಟಿ ವಿಮೆಗಳೆಂದರೇನು? ಇದು ಶುದ್ಧ ಬೂಟಾಟಿಕೆ. ಮನೆ, ಮೋಟಾರುಗಳಿಗಾದರೂ ವಿಮೆಯುಂಟು ಎಂದು ಅಂದುಕೊಂಡು ಅಲ್ಲಿಂದ ಬಂದೆನು.

ಇಷ್ಟರಲ್ಲಿಯೇ ಒಬ್ಬನು ಬಂದು ನನ್ನನ್ನು ಮತ್ತೆ ಹೆಂಗಸರ ವಾಡಕ್ಕೆ ಕರೆದುಕೊಂಡುಹೋದನು. ಅಲ್ಲಿ ಮತ್ತೊಬ್ಬಳು ನನಗೆ ಹೊಸಬಳು ನನ್ನ ಭೇಟಿಗಾಗಿ ಕಾದಿದ್ದಳು. ಅವಳು ನನ್ನನ್ನು ನೋಡುವುದಕ್ಕೆ ತಡವಾದ್ದರಿಂದ ಕ್ಷಮಿಸಬೇಕೆಂದೂ ಇದುವರೆಗೂ ತಾನು ಒಬ್ಬ ಅಂಗ ಸಾಧನೆ ಉಪಾಧ್ಯಾಯ (Phisycal Instructor) ನಲ್ಲಿಗೆ ಹೋಗಿದ್ದೆನೆಂದೂ ಹೇಳಿಕೊಂಡಳು. ಇವಳ ಮಾತಿನಲ್ಲಿ ಬಹು ವಿನಯ ನಮ್ರತೆಗಳು ಕಂಡುಬಂದದ್ದರಿಂದ ಇವಳು ಒಳ್ಳೆಯವಳೆಂದೂ ಇತರ ಹೆಂಗಸರಷ್ಟು ಚದುರೆಯೂ, ಧಾಂಬಿಕಳೂ ಅಲ್ಲವೆಂದೂ ಅಂದುಕೊಂಡೆ. ಮಾತು ಮುಗಿದಮೇಲೆ ಮೆಲ್ಲಗೆ ನನ್ನನ್ನು ಮದುವೆ ಮಾಡಿಕೊಳ್ಳುವೆಯಾ ಎಂದಳು. ನಿನ್ನನ್ನು ಮದುವೆ ಮಾಡಿಕೊಳ್ಳುವವನು ನಿಜವಾಗಿಯೂ ಬಹು ಅದೃಷ್ಟವಂತನೇ ಆಗಿರಬೇಕು. ಹೌದು ಅಂಥವನು ಈ ಪ್ರಪಂಚದಲ್ಲಿ ಯಾರೂ ಇಲ್ಲವೇಇಲ್ಲವೆಂದಳು. ಕಾರಣವೇನೆಂದು ಕೇಳಿದೆ. ಅವಳು ತನ್ನ ಸೌಂದರ್ಯವನ್ನೇ ವಿಮೆ ಮಾಡಿರುವಳೆಂದು ಹೇಳಿದಳು. ಮದುವೆಯಾದರೆ ಮಕ್ಕಳಾಗುವುದೆಂಬ ಹೆದರಿಕೆ. ಮಕ್ಕಳಾದರೆ ಸೌಂದರ್ಯ ಹೋಗುತ್ತದೆಯಂತೆ. ಆದ್ದರಿಂದ ವಿಮಾ ಕಂಪೆನಿಯವರು ಇವಳ ಮದುವೆಗೆ ಒಪ್ಪುವುದಿಲ್ಲವಂತೆ. ಇದನ್ನು ಕೇಳಿ ನನಗೆ ಇವಳು ಹು... ಗಿಂತಲೂ ಹೆಚ್ಚು ಹುಚ್ಚಿ ಎನಿಸಿತು. ಸೌಂದರ್ಯ ವಿ... ಯಂತೆ! ಅದಕ್ಕಾಗಿ ಮದುವೆಯಿಲ್ಲವಂತೆ! ಈ ಕಾಲ... ಯಾರು ಹೇಗೆ ಮಾಡುತ್ತಾರೋ ಅರ್ಥವಿರಲಿ ಇಲ್ಲದಿರ... ಅದೇ (Fashion) ಆಗುವುದು. ನಾನು ಬರು... ತನ್ನ ಹೆಸರಿನ ಕಾರ್ಡನ್ನು ಒಂದು ನನ್ನ ಕೈಗೆ ಕೊಟ್ಟಳು. ಅದರಲ್ಲಿ 'ಮೇಯೋ' ಎಂದು ತನ್ನ ಉದ್ದವಾದ ಒ... ಹೆಸರಿತ್ತು.

ಇವೆಲ್ಲವೂ ಆದಮೇಲೆ ನನ್ನನ್ನೊಬ್ಬನು ನೋ... ಬೋರ್ಡು ನೋಡಿಕ್ಕೊಂಡು ಹೋಗಬಹುದು; ನಿಮ್ಮ... ಇಲ್ಲಿ ತೆಗೆದುಕೊಳ್ಳುವುದಕ್ಕೂ ಇಲ್ಲದಿರುವುದಕ್ಕೂ ಅನ್ನ... ಹಾಕುವದು ಎಂದನು. ನಾನು ಅಲ್ಲಿಗೆ ಹೋದೆ. ... ಅನೇಕ ಚೀಟಿಗಳಮೇಲೆ "ಈ ಹೊಸಬನಿಗೆ ಇಲ್ಲಿ ... ಸ್ಥಳವಿಲ್ಲ" (No Vacancy) ಎಂದು ಬರೆದು ಕೆ... ಪ್ರತಿಯೊಬ್ಬ ನಟ ಅಥವಾ ನಟಿಯರ ರುಜುವಿತ್ತು. ... ಒಂದು ಚೀಟಿಯಲ್ಲಿ ಮಾತ್ರ ನನಗೆ ಬಹು ದಿವಸಗಳ... ಇಂಥಾ ಮನುಷ್ಯಾಕಾರದ ಮೃಗ ಒಂದು ಬೇಕಾಗಿತ್ತು. Zoo ಒಳಗೆ ಇಡಲು ಇದು ಸರಿಯಾಗಿದೆ. ಏಕೆ... ಈಗಿನ ನವೀನ ನಾಗರೀಕ ಕಾಲದಲ್ಲಿ ಈ ಮೃಗಕ್ಕೆ ವಿ... ಯೆಂದರೆ ತಿಳಿಯದು. ತನ್ನ ಜೀವವನ್ನು ಇನ್ನೂ ವಿ... ಯೇ ಮಾಡಿಲ್ಲವಂತೆ ಎಂದು ಬರೆದಿತ್ತು. ಇದರ ಕೆ... 'ಮಿಶ್ಶಿವಸ್ ಮೇಯೋ' ಎಂದೂ ಇತ್ತು.

---

# ದಯವಿಟ್ಟು ಸ್ವಾರ್ಥವನ್ನು ದೂರಮಾಡಿ

**ನಿಮಗಾಗಬಹುದಾದ ಅಲ್ಪತೊಂದರೆಗೆ ಹಿಂಜರಿದು ನಿಮ್ಮ ಪತ್ನಿಸುತರನ್ನು**

**ಆಜೀವವೂ ದಾರಿದ್ರ್ಯದ ಬವಣೆಗೀಡುಮಾಡದಿರಿ.**

# ಬ್ಯಾಂಕ್ ಆಫ್ ಇಂಗ್ಲೆಂಡ್



ಲೇಖಕರು :

ಶ್ರೀ|| ಗುರುರಾವ ವಾಳವೇಕರ.

Mr. Guru Rao Valavekara.

ಪ್ರಪಂಚದ ಎಲ್ಲ ಬ್ಯಾಂಕುಗಳ ಮುಕುಟಮಣಿ ಯಾದ ಸುಮಾರು ಮೂರು ನೂರು ವರ್ಷಗಳ ವರೆಗೆ ಬ್ರಿಟಿಶ್ ಸರಕಾರದ ಬ್ಯಾಂಕಿನ ಕೆಲಸ ಮಾಡಿದ, ಬ್ರಿಟಿಷ್ ಜನರ ವಿಶ್ವಾಸಕ್ಕೂ, ಆದರಕ್ಕೂ ಪಾತ್ರವಾದ ಬ್ಯಾಂಕ್ ಆಫ್ ಇಂಗ್ಲೆಂಡದ ಪರಿಚಯವು ಎಲ್ಲ ಕನ್ನಡಿಗರಿಗೆ ಇರುವದು ಇಷ್ಟವಿದೆ. ಲಂಡನ ಪಟ್ಟಣವು ಜಗತ್ತಿನ ವ್ಯವಹಾರದ ವ್ಯಾಪಾರದ ಕೇಂದ್ರ. ಅನೇಕ ಪರದೇಶಗಳು ಲಂಡನ ಪೇಟೆಯಲ್ಲಿ ಸಾಲ ತೆಗೆಯುತ್ತವೆ. ಬ್ರಿಟಿಷರು ಅನೇಕ ದೇಶಗಳಲ್ಲಿ ಭಂಡವಾಲವನ್ನು ಬಿತ್ತಿದ್ದಾರೆ. ನಾನಾದೇಶಗಳ ಹುಂಡಿಗಳನ್ನು ಸಕಾರಿಸುವ ಬ್ಯಾಂಕುಗಳು ಹುಂಡೀ ದಲಾಲರು, ವರ್ತಕರು ಲಂಡನ ಪೇಟೆಯಲ್ಲಿದ್ದಾರೆ. ಮಹಾ ಯುದ್ಧದ ಮೊದಲು ಲಂಡನ ಪಟ್ಟಣದ ಪೇಟೆಗೆ ಸಂಗಟ್ಟುವ ಪೇಟೆಯು ಪ್ರಪಂಚದ ಯಾವ ಭಾಗದಲ್ಲಿಯೂ ಇದ್ದಿಲ್ಲ. ಇತ್ತಕಡೆಗೆ ನ್ಯೂಯಾರ್ಕಿನ ಸ್ಟಾಕ್ ಎಕ್ಸ್‌ಚೇಂಜ ಮತ್ತು ಅಲ್ಲಿಯ ಚಿನವಾಲಗಟ್ಟಿಯು ಲಂಡನ ಪೇಟೆಯನ್ನು ಹಿಂದೆ ದೂಡಿದೆಯೆಂದು ಕೆಲವರ ಮತ. ಲಂಡನದ ಪ್ರಬಲವಾದ ಪೇಟೆಯಲ್ಲಿ ಬ್ಯಾಂಕುಗಳ ಅಗ್ರಸ್ಥಾನವನ್ನು ಪಡೆದ ಸಂಸ್ಥೆ ಎಂದರೆ ಬ್ಯಾಂಕ್ ಆಫ್ ಇಂಗ್ಲೆಂಡ.

೧೬೯೪ ರಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡದ ಸ್ಥಾಪನೆಯಾಯಿತು. ಇಂಗ್ಲೆಂಡದ ಅರಸನಾದ ಮೂರನೇ ವಿಲ್ಯಮನ ಕಾಲದ ಸರಕಾರಕ್ಕೆ ಯೂರೋಪುಖಂಡದಲ್ಲಿ ನಡೆದ ಯುದ್ಧಕ್ಕಾಗಿ ಹಣ ಬೇಕಾಯಿತು. ಬ್ಯಾಂಕ್ ಆಫ್ ಇಂಗ್ಲೆಂಡ ೧೨ ಲಕ್ಷ ಪೌಂಡು ಸರಕಾರಕ್ಕೆ ಸಾಲ ಕೊಟ್ಟಿತು. ಆ ಕಾಲಕ್ಕೆ ಬ್ಯಾಂಕ್ ಆಫ್ ಇಂಗ್ಲೆಂಡದ ಭಂಡವಾಲವು ೧೨ ಲಕ್ಷ ಪೌಂಡು ಇತ್ತು. ಸರಕಾರಕೆ ಸಾಲ ಕೊಟ್ಟ ಭಂಡವಾಲದಮೇಲೆ ೧೦೦ ಕ್ಕೆ ೮ ರಂತೆ ಸರಕಾರದಿಂದ ಬ್ಯಾಂಕಿಗೆ ಬಡ್ಡಿ ದೊರೆಯುತ್ತಿತ್ತು. ಇದಲ್ಲದೆ ಬ್ಯಾಂಕಿನ ಖರ್ಚಿಗಾಗಿ ದರವರ್ಷ ಕೆಲವು ರಕಮು ಸರಕಾರದಿಂದ ದೊರೆತ ಸವಲತ್ತುಗಳು ಬೇರೆ. ಬ್ಯಾಂಕಿಗೆ ಕಾಲಕಾಲಕ್ಕೆ ದೊರೆತ ಚಾರ್ಟರದ ವೇಳೆಗೆ ಹೆಚ್ಚಿನ ಸವಲತ್ತುಗಳು ದೊರೆಯುತ್ತ ಹೋದವು. ಉದಾಹರಣಾರ್ಥ ಲಂಡನ ಪಟ್ಟಣ ಹಾಗೂ ಅದರ ಸುತ್ತಲಿನ ೬೫ ಮೈಲಿನ ಪ್ರದೇಶದಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡದ ಹೊರ್ತು ಬೇರೆ ಯಾವ ಬ್ಯಾಂಕಿಂಗೂ ನೋಟುಗಳನ್ನು ತೆಗೆಯುವ ಹಕ್ಕು ಇದ್ದಿಲ್ಲ.

ಎಲ್ಲಕ್ಕೂ ಹೆಚ್ಚಿನ ಲಾಭವು ಸರಕಾರದ ಬ್ಯಾಂಕು ಎಂಬ ಗೌರವದಲ್ಲಿದೆ. ಇದರಿಂದ ಬ್ಯಾಂಕಿನ ಪತ್ತು ಬಹಳ ಬೆಳೆಯಿತು. ಬ್ಯಾಂಕಿನಲ್ಲಿ ಜನರ ವಿಶ್ವಾಸ ಬೆಳೆಯಿತು. ಸರಕಾರದಬಗ್ಗೆ ಜನರಲ್ಲಿದ್ದಷ್ಟೇ ಅಭಿಮಾನ ಈ ಬ್ಯಾಂಕಿನ ಬಗ್ಗೆ ಜನರ ಮನಸ್ಸಿನಲ್ಲಿ ಜನಿಸಿ ಬಿದಿಗಿಯ ಚಂದ್ರನಂತೆ ವೃದ್ಧಿಂಗತವಾಗುತ್ತ ನಡೆಯಿತು. ಸರಕಾರಕ್ಕೆ ಸಾಲ ಕೊಟ್ಟು ದೇಶದ ಮಾನವನ್ನು ಕಾದ, ಬ್ರಿಟಿಷರ ಗೌರವವನ್ನು ರಕ್ಷಿಸಿದ ಸಂಸ್ಥೆಯ ಅಭಿಮಾನವು ಇಂಗ್ಲಿಷರಿಗೆ ಇರುವದು ಸಹಜ ಇದರಮೇಲಿಂದ ಈ ಬ್ಯಾಂಕಿನಮೇಲೆ ದುರ್ಧರ ಪ್ರಸಂಗಗಳು ಎಂದೂ ಬಂದಿಲ್ಲೆಂದು ತಿಳಿಯ ಕೂಡದು. ಆದರೆ ಅಂಥ ಕಠಿಣಕಾಲಕ್ಕೆ ಇಂಗ್ಲೆಂಡಲ್ಲಿ ರಾಷ್ಟ್ರೀಯ ಸರಕಾರವಿದ್ದುದರಿಂದ ಅವರು ಅನೇಕ ರೀತಿಯಿಂದ ಬ್ಯಾಂಕಿಗೆ ಸಹಾಯ ಮಾಡಿದರು. ೧೭೯೭ ರಿಂದ ೧೮೨೧ರ ವರೆಗಿನ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡಕ್ಕೆ ನೋಟುಗಳನ್ನು ತಂದವರಿಗೆ ನಾಣ್ಯಗಳನ್ನು ಕೊಡುವದಾಗಲಿಲ್ಲ. ಇಂಥ ಪ್ರಸಂಗಗಳು ಬಹಳ ಬಂದವು. ಆ ಕಾಲಕ್ಕೆ ಸರಕಾರದವರು ನೋಟುಗಳ ಒಡೆಯರಿಗೆ ಕೆಲವುಕಾಲ ಅವುಗಳ ಬದಲು ನಾಣ್ಯಗಳನ್ನಾಗಿ ಬಂಗಾರವನ್ನಾಗಿ ಬ್ಯಾಂಕಿಗೆ ಕೇಳುವ ಹಕ್ಕು ಇಲ್ಲೆಂದು ಸಾರಿದರು. ೧೯೧೪ರಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡದಿಂದ ಆದ ಮಹತ್ಕಾರ್ಯ ೧೯೩೧ ರಲ್ಲಿ ಹಾಗು ಅದಕ್ಕೂ ಪೂರ್ವ

ದಲ್ಲಿ ಬಂಗಾರದ ನಿರ್ಗತ, ಸುವರ್ಣ ಪರಿಮಾಣ ಪದ್ಧತಿಯು ಅಮಲಿನಲ್ಲಿಲ್ಲೆಂಬ ನಿರ್ಣಯ (Suspension of Gold Standard) ಮುಂತಾದ ವಿಷಯಗಳು ವಾಚಕರ ಜ್ಞಾಪಕದಲ್ಲಿರುವುದರಿಂದ ಅವುಗಳ ಬಗ್ಗೆ ಹೆಚ್ಚು ಬರೆಯುವ ಕಾರಣವಿಲ್ಲ.

ಬೇರೆಬೇರೆ ದೇಶಗಳಲ್ಲಿಯ ಮಧ್ಯವರ್ತಿ ಬ್ಯಾಂಕುಗಳಲ್ಲಿ (Central Banks) ಬ್ಯಾಂಕ್ ಆಫ್ ಇಂಗ್ಲಂಡದ ಇತಿಹಾಸವು ಬಹಳ ಬೋಧಪ್ರದವಾಗಿದೆ. ಬ್ಯಾಂಕಿನ ಉದ್ಯೋಗದಲ್ಲಿ ತೊಡಗಿದವರಂತೂ ಅದನ್ನು ಮನನ ಮಾಡೇ ಮಾಡುತ್ತಾರೆ. ಸಾಮಾನ್ಯ ಜನರು ಸಹ ಅದರ ಪರಿಚಯ ಮಾಡಿಕೊಳ್ಳುವದು ಅವಶ್ಯವಿದೆ. ಈ ಚಿಕ್ಕ ಬರಹದಲ್ಲಿ ಪ್ರಪಂಚದಲ್ಲಿಯ ಅತಿ ಬಲಾಢ್ಯ ಬ್ಯಾಂಕಿನ ೩೦೦ ವರ್ಷಗಳ ಇತಿಹಾಸವನ್ನು ಬೇರೆ ಸಂಕ್ಷೇಪವಾಗಿ ಸಹ ಕೊಡುವದು ಶಕ್ಯವಿಲ್ಲ. ಜನ್ಮದಾರಭ್ಯ ಈ ಬ್ಯಾಂಕಿಗೆ ಉಚ್ಚಗ್ರಹಗಳು ಬಿಟ್ಟಿಲ್ಲವೆಂದು ಜ್ಯೋತಿಷಿಗಳು ನಿದ್ರಾಕ್ಷಿಣ್ಯವಾಗಿ ಹೇಳಬಹುದು. ೧೭೦೦ ರಿಂದ ಬ್ರಿಟಿಷ್ ಸಾಮ್ರಾಜ್ಯದ ವಿಸ್ತಾರಗಳು ನಾಲ್ಕು ಖಂಡಗಳಲ್ಲಿ ರಭಸದಿಂದ ನಡೆಯಿತು. ಅದರ ಗುಂಟ ಬ್ಯಾಂಕಿನ ವಿಸ್ತಾರವು ಹೆಚ್ಚುತ್ತ ನಡೆಯಿತು. ಹುಟ್ಟಿದ ಹತ್ತು ದಿವಸಗಳಲ್ಲಿ ಬ್ಯಾಂಕಿನ ಭಾಂಡವಾಲವು ಎಲ್ಲಾ ಕಡೆಯಿಂದ ಹರಿದು ಬಂದು ಕೂಡಿತು. ಬ್ಯಾಂಕ್ ಆಫ್ ಇಂಗ್ಲೆಂಡಿನ ನೋಟುಗಳು ಹೊನ್ನಿನಷ್ಟು ಬೆಲೆಯುಳ್ಳವೆಂದು ಬ್ರಿಟಿಷರು ಅವುಗಳನ್ನು ಸಂಗ್ರಹಿಸುತ್ತಾರೆ. ಪರದೇಶಗಳಲ್ಲಿ ಸಹ ಈ ಬ್ಯಾಂಕಿಗೆ ಸರಿಗಟ್ಟುವ ಬ್ಯಾಂಕುಗಳು ತೀರ ಕಡಿಮೆ.

೧೬೯೪ ರಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡಿನ ಭಾಂಡವಾಲವು ೧೨ ಲಕ್ಷ ಪೌಂಡು ಇತ್ತೆಂದು ಮೇಲೆ ಹೇಳಿದ್ದೇವಷ್ಟೆ. ಅದು ಬೆಳೆಯುತ್ತ ೧೯೩೧ ರಲ್ಲಿ ೧೪ ಕೋಟಿ ೫೫ ಲಕ್ಷ ಪೌಂಡಾಗಿದೆ. ಇದಲ್ಲದೆ ಕಾದಿಟ್ಟ ನಿಧಿಯು ೩೦ ಲಕ್ಷ ಪೌಂಡಿಗೆ ಮೀರಿದೆ. ಸರಕಾರದ ಬ್ಯಾಂಕಿನ ಎಲ್ಲಾ ಕೆಲಸಗಳನ್ನು ಈ ಬ್ಯಾಂಕು ಮಾಡುತ್ತಿದೆ. ಸರಕಾರಕ್ಕೆ ಬೇಕಾದ ಸಾಲವನ್ನು ತೆಗೆಯುವದು, ತೆಗೆದ ಸಾಲದ ಬಡ್ಡೀಕೊಡುವದು, ಎಕ್ಸಚೇಕರ ಬಿಲ್ಲುಗಳ, ಹಾಗೂ ಟ್ರೆಜರಿ ಬ್ಯಾಂಕುಗಳ ಆಡಳಿತ ಮುಂತಾದ ಅನೇಕ ಕೆಲಸಗಳು ಈ ಬ್ಯಾಂಕಿನ ಕಡೆಗಿವೆ. ಬೇರೆ ಬೇರೆ ಭಾಗದಲ್ಲಿ ಕಲೆಕ್ಟರರು ಕೂಡಿಸಿದ ಕಂದಾಯವನ್ನು ಈ ಬ್ಯಾಂಕಿನ ಶಾಖೆಯುವರು ತಕ್ಕೊಂಡು ಲಂಡನದ ಮುಖ್ಯ ಕಚೇರಿಗೆ ತಿಳಿಸುತ್ತಾರೆ.

ಹೀಗಿದ್ದ ಬಳಿಕ ಇದು ಬ್ರಿಟಿಷ್ ಸರಕಾರದ ಅಂಗವೆಂದು ಯಾಕೆ ಹೇಳಬಾರದು. ಇದು ಸ... ಸಂಸ್ಥೆಯೇ ಸರಿ ಎಂಬ ತಿಳವಳಿಕೆಯಾಗುತ್ತದೆ. ... ನಿಜಸ್ಥಿತಿ ಹಾಗಿಲ್ಲ. ಬ್ಯಾಂಕ್ ಆಫ್ ಇಂಗ್ಲೆಂಡು ... ಬ್ಯಾಂಕುಗಳಂತೆ ಖಾಸಗಿ ಸಂಸ್ಥೆಯಾಗಿದೆ. ಬೇರೆ ಬ್ಯಾ... ಗಳಂತೆ ಇದು ಶೇರ ಹೋಲ್ಡರರ ಅಂದರೆ ಪಾಲುಗಾ... ಬ್ಯಾಂಕು. ಇದರ ಕಾರಭಾರವನ್ನು ಪಾಲುಗಾರರಿಂದ ... ಸಲ್ಪಟ್ಟ ಡೈರೆಕ್ಟರರು ನಡೆಸುತ್ತಾರೆ. ಪಾಲುಗಾ... ೨೪ ಡೈರೆಕ್ಟರರನ್ನು ಆರಿಸುತ್ತಾರೆ, ಇವರಲ್ಲದೆ ... ಗವ್ಹರ್ನರ್ ಮತ್ತು ಒಬ್ಬ ಡೆಪ್ಯುಟಿ ಗವ್ಹರ್ನರ್ ಇರುತ್ತಾ... ಇವರೆಲ್ಲರಿಂದ ಕೂಡಿದ ಕೋರ್ಟಿನಿಂದ ಬ್ಯಾಂಕಿನ ... ಭಾರ ನಡೆಯುತ್ತದೆ. ಪಾಲುಗಾರರು ಡೈರೆಕ್ಟರರನ್ನ... ಸುವ ಕೆಲಸವನ್ನು ಒಳ್ಳೇ ದಕ್ಷತೆಯಿಂದ ಮಾಡುತ್ತಾ... ವ್ಯವಹಾರದಲ್ಲಿ ನುರಿತ, ಪ್ರಮಾಣಿಕ ಕರ್ತವ್ಯದ... ಕೆಲಸದಲ್ಲಿ ತತ್ಪರರಾದವರನ್ನೇ ಆರಿಸುವ ಪರಿಪಾ... ಇದರ ಮೇಲಿಂದ ಈ ವೃದ್ಧ ಬಾಂಕಿನ ಡೈರೆಕ್ಟರರು ... ಹೋದ, ಸಾವಲಾದ ಮುಪ್ಪಿನವರಿರುತ್ತಾರೆಂಬ ... ಮಾನ ತೆಗೆಯಬಾರದು. ಬಹುತರವಾಗಿ ತರುಣ ... ಮಧ್ಯವಯಸ್ಕರೇ ಆರಿಸಿ ಬರುತ್ತಾರೆ. ಬೇರೆ ... ಉದ್ಯೋಗಗಳಲ್ಲಿ ತೊಡಗಿದವರು ಡೈರೆಕ್ಟರರಿರುವ... ಅವರ ಜ್ಞಾನದ ಲಾಭವು ಬ್ಯಾಂಕಿಗೆ ಸಹಜವಾಗಿ ... ತ್ತದೆ. ಬ್ಯಾಂಕಿನ ಗೌರ್ನರರ ಹಾಗೂ ಡೆಪ್ಯುಟಿ ಗೌ... ರರ ಆಯಿಕೆಯು (Election) ಎರಡು ವರ್ಷಕ್ಕೊ... ಆಗುತ್ತದೆ. ಅವರನ್ನು ಡೈರೆಕ್ಟರರ ಕೋರ್ಟಿನವರು ... ಸುತ್ತಾರೆ. ರಾಯಿಟ ಆನರೇಬಲ್ ಮಾಂಟೆಗ್ಯು ನಾ... ನರು ಹನ್ನೆರಡು ವರ್ಷಗಳವರೆಗೆ ಗೌರ್ನರರಾಗಿದ್ದ... ಬಿಕ್ಕಟ್ಟಿನ ಪ್ರಸಂಗದಲ್ಲಿ ಅವರು ಜಾಣ್ಮೆಯಿಂದ... ದೂರದೃಷ್ಟಿಯಿಂದಲೂ, ಧೈರ್ಯದಿಂದಲೂ ಬ್ಯಾ... ಕಾರಭಾರ ಮಾಡಿದ್ದರಿಂದ ಅವರಿಗೆ ಈ ಮಾನವು ... ಯಿತು. ಗೌರ್ನರರ, ಡೆಪ್ಯುಟಿ ಗೌರ್ನರರ ಹಾಗೂ ... ಡೈರೆಕ್ಟರರ ಕಾರ್ಯಕಾರಿ ಮಂಡಳವಿರುತ್ತದೆ. ... ದಿನಾಲು ಬ್ಯಾಂಕಿನಲ್ಲಿ ಕೂಡಿ ನಿತ್ಯದ ಕಾರ್ಯವ... ಸಾಗಿಸುತ್ತಾರೆ ಡೈರೆಕ್ಟರರ ಕೋರ್ಟು ಪ್ರತಿ ಗುರುವಾ... ಕೂಡುತ್ತದೆ. ಅವರು ಮುನ್ನಾದಿವಸದ ಸಂಜೆಯುವ... ಬ್ಯಾಂಕಿನ ಸ್ಥಿತಿಯ ಬಗ್ಗೆ ಒಂದು ಪತ್ರಿಕೆಯನ್ನು ... ಡಿಸುತ್ತಾರೆ. ಈ ಸಭೆಯಲ್ಲಿ ಬ್ಯಾಂಕಿಗೆ ಸಂಬಂಧಪಟ್ಟ ... ವಿಷಯಗಳ ಚರ್ಚೆಯಾಗುತ್ತದೆ. ಡಾಯರೆಕ್ಟರರ ಮ...

ಬೇಕಾದ ವಿಷಯಗಳನ್ನು ಪೂರ್ಣ ವಿಚಾರಮಾಡಿ ಅವರು ತಮ್ಮ ಅನುಮತಿಯನ್ನು ಕೊಡುತ್ತಾರೆ ಬ್ಯಾಂಕ ರೇಟನ್ನು ನಿರ್ಧರಿಸುವುದು ಈ ಸಭೆಯು ಮುಖ್ಯ ವಿಷಯವಾಗಿರು ತ್ತದೆ. ಈ ಬರಹದ ಕೊನೆಗೆ ವಾರದ ಒಂದು ಪತ್ರಿಕೆಯನ್ನು ನಮೂನೆಯಾಗಿ ಕೊಟ್ಟಿದೆ.

ಬ್ಯಾಂಕ್ ಆಫ್ ಇಂಗ್ಲೆಂಡದ ಮುಖ್ಯ ಎರಡು ಭಾಗ ಗಳವೆ. ಒಂದು ಬ್ಯಾಂಕಿಂಗ ವಿಭಾಗ. ಎರಡನೇದು (Issue Department) ನೋಟುಗಳನ್ನು ತೆಗೆಯುವ ವಿಭಾಗ. ಎರಡು ವಿಭಾಗಗಳ ಹೆಸರುಗಳ ಮೇಲಿಂದ ಅವುಗಳಲ್ಲಿ ನಡೆಯುವ ಕೆಲಸದ ಪರಿಚಯವಾಗುತ್ತದೆ ೧೮೪೪ರಲ್ಲಿ ಬ್ಯಾಂಕ ಚಾರ್ಟರ್ ಆಕ್ಟ ಎಂಬ ಕಾಯಿದೆಯು ಬ್ರಿಟಿಷ್ ಪಾರ್ಲಿಮೆಂಟನಲ್ಲಿ ಪಾಸಾಯಿತು. ಬ್ರಿಟಿಷ್ ಬ್ಯಾಂಕುಗಳ ಜೀವಿತದಲ್ಲಿ ಬ್ಯಾಂಕ್ ಚಾರ್ಟರ ಆಕ್ಟು ಬಹಳ ಮಹತ್ವದ್ದು. ಬ್ಯಾಂಕ್ ಚಾರ್ಟರ್ ಆಕ್ಟಿನ ಇಷ್ಟಾ ನಿಷ್ಟತೆಯು ಬಗ್ಗೆ ತೀವ್ರವಾದ ಚರ್ಚೆಯಾಯಿತು. ವಾದದ ಮುಖ್ಯ ಮುದ್ದೆ ಹೀಗಿತ್ತು. ಕಾಗದದ ನಾಣ್ಯಗಳನ್ನು ಅಥವಾ ನೋಟುಗಳನ್ನು ಕೊಟ್ಟಕೂಡಲೇ ಬಂಗಾರ ಬೆಳ್ಳಿ ಅಥವಾ ನಾಣ್ಯಗಳು ದೊರೆಯುತ್ತವೆಂದು ಜನರ ನಂಬಿಕೆ ಇದ್ದರೆ ಮಾತ್ರ ಕಾಗದದ ಚಲನವು ಸುಗಮವಾಗಿ ಸುಸೂತ್ರವಾಗಿ ನಡೆಯುತ್ತದೆ. ಈ ತರದ ನಂಬಿಕೆ ಚಿರವಾಗಿ ಅಚಲವಾಗಿ ಉಳಿಯಬೇಕಾದರೆ ನೋಟುಗಳ ಬೆಲೆಯಷ್ಟು ಬೆಲೆಯುಳ್ಳ ಬಂಗಾರ ಬೆಳ್ಳಿ ಇಲ್ಲವೆ ನಾಣ್ಯಗಳನ್ನು ಸಂಗ್ರಹದಲ್ಲಿಟ್ಟು ನೋಟುಗಳನ್ನು ಪ್ರಚಾರದಲ್ಲಿ ತರಬೇಕೆಂಬದು ಕೆಲವರ ಮಾತು. ಇದರ ವಿರುದ್ಧ ಕೆಲವರು ಪ್ರಚಾರದಲ್ಲಿದ್ದ ನೋಟುಗಳ ಇಂತಿಷ್ಟು ಪ್ರಮಾಣದಲ್ಲಿ ಬೆಳ್ಳಿ ಬಂಗಾರ ಅಥವಾ ನಾಣ್ಯಗಳನ್ನು ಕಾದಿಟ್ಟರೆ ಸಾಕು. ಈ ಎರಡು ಮಾತುಗಳ ಪ್ರತಿಪಾದಕರು ತಜ್ಞರು, ವ್ಯವಹಾರಸ್ಥರಿದ್ದರು. ಎಲ್ಲಾ ಮಾತುಗಳ ವಿಚಾರ ಮಾಡಿ ಪಾರ್ಲಿಮೆಂಟನವರು ೧೮೪೪ರ ಬ್ಯಾಂಕ್ ಚಾರ್ಟರ್ ಆಕ್ಟ ಪಾಸುಮಾಡಿದರು.

ಬ್ಯಾಂಕ ಚಾರ್ಟರ ಆಕ್ಟ ಪಾಸಾದನಂತರ ಬ್ಯಾಂಕಿಂಗ ಶಾಖೆಯವರು ಇಶ್ಯೂ ಶಾಖೆಯವರಿಗೆ ೧ ಕೋಟಿ ೧೦ ಲಕ್ಷ ಪೌಂಡು ಬೆಲೆಯ ಸರಕಾರಿ ಆಧಾರ ಪತ್ರಗಳನ್ನು (Government Securities) ಕೊಟ್ಟು, ಅದರ ಮುಬದಲೆಯಲ್ಲಿ ಅಷ್ಟು ರಕಮಿನ ನೋಟುಗಳನ್ನು ಅವರ ಕಡೆಯಿಂದ ತೆಗೆದುಕೊಂಡರು. ಬ್ಯಾಂಕಿಂಗ ಶಾಖೆಗೆ ನೋಟುಗಳನ್ನು ತೆಗೆಯುವ ಅಧಿಕಾರ ಉಳಿಯಲಿಲ್ಲ. ಇಶ್ಯು ಶಾಖೆಗೆ ಮೇಲೆ ಕಾಣಿಸಿದ ೧ ಕೋಟಿ ೧೦ ಲಕ್ಷ ಪೌಂಡಿಗಿಂತ ಹೆಚ್ಚಿನ ನೋಟುಗಳನ್ನು ತೆಗೆಯುವದಾದರೆ ಆ ನೋಟುಗಳಷ್ಟು ನಾಣ್ಯಗಳನ್ನು ಇಲ್ಲವೆ ಘಟ್ಟಿ ಬಂಗಾರವನ್ನು ಇಡಬೇಕೆಂಬ ನಿರ್ಬಂಧವಿತ್ತು. ಮುಂದೆ ೧ ಕೋಟಿ ೪೦ ಲಕ್ಷ ಪೌಂಡಿನ ರಕಮು ಬೆಳೆಯುತ್ತ ನಡೆದು ೧ ಕೋಟಿ ೮೪ ಲಕ್ಷ ೫೦ ಸಾವಿರ ಪೌಂಡು ಆಯಿತು. ೧೯೨೩ ರಲ್ಲಿ ಸರಕಾರದವರು ಆರ್ಡರ ಇನ್ ಕೌನ್ಸಿಲ್ ಹೊರಡಿಸಿ ಅದನ್ನು ೧ ಕೋಟಿ ೯೫ ಲಕ್ಷ ೩೫ ಸಾವಿರದವರೆಗೆ ಹೆಚ್ಚಿಸಿದರು. ಬ್ಯಾಂಕ ಚಾರ್ಟರ ಆಕ್ಟದ ಪ್ರಕಾರ ಬಂಗಾರದ ಘಟ್ಟಿಯನ್ನು ಕೊಟ್ಟು ಒಂದು ಔಂಸಿಗೆ ೩ ಪೌಂಡು ೧೭ ಶಿಲಿಂಗ್ ೯ ಪೆನ್ಸಿನಂತೆ ನೋಟುಗಳನ್ನು ಬೇಡುವ ಹಕ್ಕು ಬ್ರಿಟಿಷರಿಗೆ ದೊರೆಯಿತು.

೧೮೫೯ ರ ವರೆಗೆ ಬ್ಯಾಂಕ ಆಫ್ ಇಂಗ್ಲೆಂಡ ತೆಗೆದ ಒಂದು ಪೌಂಡಿನ ನೋಟುಗಳು ಪ್ರಚಾರದಲ್ಲಿದ್ದವು. ಒಂದು ಪೌಂಡಿನ ನೋಟುಗಳಿಗಿಂತ ಐದು ಪೌಂಡಿನ ನೋಟುಗಳ ಪ್ರಸಾರವಾಗುವದು ಇಷ್ಟವೆಂದು ತಿಳಿದು ಐದು ಪೌಂಡಿಗಿಂತ ಕಡಿಮೆ ರಕಮಿನ ನೋಟುಗಳನ್ನು ಹೊರಡಿಸಬಾರದೆಂದು ಗೊತ್ತಾಯಿತು. ೧೮೩೩ ರಲ್ಲಿ ಬ್ಯಾಂಕ ಆಫ್ ಇಂಗ್ಲೆಂಡ ಬಿಟ್ಟು ಬೇರೆ ಎಲ್ಲಾ ಕಡೆಗೆ ಬ್ಯಾಂಕ್ ಆಫ್ ಇಂಗ್ಲೆಂಡದ ನೋಟುಗಳು ಕಾಯದೇಶೀರ ಚಲನ (Legal tender) ವೆಂದು ಗೊತ್ತುಮಾಡಲ್ಪಟ್ಟಿತು. ಅಂದರೆ ಉಯಿಲಮುಮ್‌ನು ಜೋನ್ಸನಿಗೆ ಐದು ಪೌಂಡು ಕೊಡುವ ಬದಲು ಬ್ಯಾಂಕ ಆಫ್ ಇಂಗ್ಲೆಂಡ ಐದು ಪೌಂಡಿನ ನೋಟು ಕೊಟ್ಟರೆ ಅದನ್ನು ಸ್ವೀಕರಿಸುವುದಿಲ್ಲವೆಂದು. ಜೋನ್ಸನಿಗೆ ಹೇಳಲಿಕ್ಕೆ ಕಾಯಿದೆ ದಿಂದ ಬರದು. ಆದರೆ ಬ್ಯಾಂಕ್ ಆಫ್ ಇಂಗ್ಲೆಂಡ ಆಫೀಸಿನಲ್ಲಿ ಜೋನ್ಸನಿಗೆ ಐದು ಪೌಂಡಿನ ನೋಟು ತನಗೆ ಬೇಡ ನಾಣ್ಯಗಳನ್ನೇ ಕೊಡಿರಿ ಎಂದು ಬ್ಯಾಂಕಿನವರಿಗೆ ಹೇಳುವ ಅಧಿಕಾರವಿದೆ.

ಮಹಾ ಯುದ್ಧದ ಕಾಲದಲ್ಲಿ ಹೊನ್ನಿನ ಕೊರತೆಯಾದ್ದರಿಂದ ಬಂಗಾರದ ನಾಣ್ಯಗಳ ಬದಲಾಗಿ ಕಾಗದದ ನೋಟುಗಳ ಪ್ರಸಾರ ಮಾಡುವ ಪ್ರಸಂಗಬಂತು. ಬ್ರಿಟಿಷ್ ಟ್ರೆಜರಿಯವರು ಸಹ ನೋಟುಗಳನ್ನು ಹೊರಡಿಸಿದರು. ಒಂದು ಪೌಂಡಿನ ನೋಟುಗಳ ಸುರಿಮಳೆಯಾಯಿತು. ೧೯೨೮ ನೇ ಹತ್ತು ಶಿಲಿಂಗಿನ ನೋಟುಗಳ ಹೊರಟವು.

ಇಸ್ಸಿಯ ಕರನ್ಸಿ ಹಾಗೂ ಬ್ಯಾಂಕ ನೋಟ ಆಕ್ಟಿನ (Currency and Bank Note Act) ಅನ್ವಯ ಬ್ರಿಟಿಷ ಟ್ರೆಜರಿ ನೋಟುಗಳು ಬ್ಯಾಂಕ ಆಫ್ ಇಂಗ್ಲೆಂಡಿನ ನೋಟುಗಳಲ್ಲಿ ಮಿಲಿತವಾದವು. ಬ್ಯಾಂಕ್ ಆಫ್ ಇಂಗ್ಲೆಂಡಕ್ಕೆ ೫ ಪೌಂಡಿನ ನೋಟುಗಳಲ್ಲದೆ ೧ ಪೌಂಡು ಹಾಗೂ ಹತ್ತುಶಿಲಿಂಗಿನ ನೋಟುಗಳನ್ನು ತೆಗೆಯುವ ಅಧಿಕಾರ ಪ್ರಾಪ್ತವಾಯಿತು. ಈ ನೋಟುಗಳಷ್ಟೇ ಕಾಯದೇಶೀರ ಚಲನವೆಂದು ಸಾರುವದರಲ್ಲಿ ಬಂತು. ನಾಣ್ಯ ಇಲ್ಲವೆ ಘಟ್ಟಿ ಬಂಗಾರವನ್ನು ಕಾದಿಡದೆ ೨ ಕೋಟಿ ೬೦ ಲಕ್ಷ ಪೌಂಡಿನವರೆಗೆ ನೋಟುಗಳನ್ನು ತೆಗೆಯುವ ಅಧಿಕಾರ ದೊರೆಯಿತು. ಇದಲ್ಲದೆ ಬ್ರಿಟಿಶ್ ಟ್ರೆಜರಿಯ ಅನುಮತಿಯಿಂದ ೨ ಕೋಟಿ ೬೦ ಲಕ್ಷ ಪೌಂಡಿನ ಮರ್ಯಾದೆಯನ್ನು ಸಹ ಮೀರುವ ಹಕ್ಕು ಬ್ಯಾಂಕ ಆಫ್ ಇಂಗ್ಲೆಂಡಿಗೆ ದಯಪಾಲಿಸುವದರಲ್ಲಿ ಬಂತು. ಇದಕ್ಕನುಸರಿಸಿ ೧೯೩೧ರ ಆಗಸ್ಟು ತಿಂಗಳಲ್ಲಿ ಬ್ರಿಟಿಷ್ ಟ್ರೆಜರಿಯವರು ಬ್ಯಾಂಕ್ ಆಫ್ ಇಂಗ್ಲೆಂಡಕ್ಕೆ ೨ ಕೋಟಿ ೩೫ ಲಕ್ಷ ಪೌಂಡಿನವರೆಗೆ ನೋಟುಗಳನ್ನು ತೆಗೆಯುವ ಸ್ವತಂತ್ರತೆಯನ್ನು ಕೊಟ್ಟರು ೧ ಪೌಂಡಿನ, ೧೦ ಶಿಲಿಂಗಿನ ಹಾಗೂ ೫ ಪೌಂಡಿನ ನೋಟುಗಳ ಪ್ರಕಾರದಿಂದಾಗುವ ಲಾಭವು ಸರಕಾರಕ್ಕೆ ಸಲ್ಲುತ್ತದೆ.

ಬ್ಯಾಂಕ ಆಫ್ ಇಂಗ್ಲಂಡಕ್ಕೆ Bankers' Bank ಬ್ಯಾಂಕುಗಳ ಬ್ಯಾಂಕ ಎಂಬ ಅಭಿಮಾನದ ಬಿರುದಿದೆ. ಬ್ಯಾಂಕ ಆಫ್ ಇಂಗ್ಲಂಡದಲ್ಲಿ ಖಾತೆ ಇರದ ಬ್ಯಾಂಕು ಇಂಗ್ಲಂಡದಲ್ಲಿ ಇಲ್ಲೆಂದು ಹೇಳಿದರೆ ಅತಿಶಯೋಕ್ತಿಯಾಗುವದಿಲ್ಲ. ಇಂಥ ದೊಡ್ಡ ಬ್ಯಾಂಕಾದರೂ ಅದರ ಶಾಖೆಗಳು ತೀರ ಕಡಿಮೆ. ೮-೧೦ ಶಾಖೆಗಳಕಿಂತ (ಬ್ರಾಂಚಸ್) ಹೆಚ್ಚಿಲ್ಲ. ಆದರೆ ಬ್ರಾಂಚ ಬ್ಯಾಂಕಿಂಗದ ಬೆಳವಣಿಗೆ ಬ್ರಿಟನದಲ್ಲಿಲ್ಲವೆಂದು ತಿಳಿಯಬಾರದು. The Big Five ಬಿಗ್ ಫಾಯಿವ್ ಎಂದು ಹೆಸರಾದ ಐದು ಅತಿ ದೊಡ್ಡ ಬ್ರಾಂಚಿನ ಬ್ಯಾಂಕುಗಳ ಶಾಖೆಗಳು ಸಾವಿರಾರಿವೆ. ಪರದೇಶಗಳಲ್ಲಿ ಸಹ ಅವುಗಳ ಬ್ರಾಂಚಿಸ ಅವೆ. ತಮ್ಮ ವ್ಯವಹಾರಕ್ಕೆ ಬೇಕಾಗಿ ಉಳಿದ ಹಣವನ್ನು ಬಹುತರವಾಗಿ ಎಲ್ಲಾ ಬ್ರಿಟಿಷ್ ಬ್ಯಾಂಕುಗಳು ಬ್ಯಾಂಕ ಆಫ್ ಇಂಗ್ಲೆಂಡಿನಲ್ಲಿಡುತ್ತವೆ. ಬ್ಯಾಂಕುಗಳ ರಕಮು ಸರಕಾರದ ರಕಮು, ಕ್ಲಿಅರಿಂಗ ಬ್ಯಾಂಕುಗಳ ಹಣ, ಧನಾಢ್ಯವಂತರ ಹಣ ಎಲ್ಲವೂ ಬ್ಯಾಂಕ ಆಫ್ ಇಂಗ್ಲಂಡದಲ್ಲಿರುವುದರಿಂದ ಬ್ರಿಟಿಷ್ ರಾಷ್ಟ್ರದ ಹೊನ್ನಿ ಹೊಳೆಯೇ ... ಬಂದು ಸರೋವರದ ರೂಪದಿಂದ ಈ ಬ್ಯಾಂಕಿನ... ಹೇಳಬಹುದು. ಬ್ರಿಟಿಷರು ರಾಷ್ಟ್ರೀಯ ಭಾವನೆ... ಪ್ರೇರಿತರಾಗಿ ಉದ್ಯೋಗ ವ್ಯವಹಾರದಲ್ಲಿ ತೊಡಗಿ... ಕ್ಲಿಅರಿಂಗ ಬ್ಯಾಂಕ್ಸ್, ಜಾಯಿಂಟ್ ಸ್ಟಾಕ್ ಬ್ಯಾ... ಇವೆಲ್ಲವುಗಳು ಟ್ರೆಝುರಿ ಕಮೀಟಿಯಲ್ಲಿ ಸೇರಿರುತ್ತಾ... ಅಲ್ಲಿ ತಮ್ಮ ವಿಚಾರಗಳನ್ನು ಎಲ್ಲರ ಮುಂದಿಡು... ಅವರಿಗೆ ಅವಕಾಶ ದೊರೆಯುತ್ತದೆ.

ಬ್ರಿಟಿಶ್ ಉದ್ಯೋಗಗಳಿಗೆ ಸಹಾಯ ಮಾಡ... ಕ್ಕಾಗಿ ಬ್ಯಾಂಕ ಆಫ್ ಇಂಗ್ಲಂಡ ಮುಂದರಿಯಿತು. ... ಣದ ಉಕ್ಕಿನ ಹಾಗೂ ಲ್ಯಾಂಕೆಶಾಯರದ ನೂಲಿನ ... ಯ ಉದ್ಯೋಗಗಳು ಬಹಳ ಮಹತ್ವದವು. ಇ... ಉರ್ಜಿತವಸ್ಥೆಯ ಮೇಲೆ ಅನೇಕರ ಜೀವತವು ಅ... ಸಿದೆ. ಈ ಉದ್ಯೋಗಗಳಿಗೆ ಸಹಾಯ ಮಾಡುವ... ೧೯೨೯ರ ಕೊನೆಗೆ ಬ್ಯಾಂಕ ಆಫ್ ಇಂಗ್ಲಂಡಿ... Securities management Trust Ltd ... ಹೆಸರಿನ ಒಂದು ಸಬಸಿಡಿಯರಿ ಕಂಪನಿಯನ್ನು ಸ್ಥಾ... ದರು. ಇಷ್ಟರಿಂದಲೇ ಇಷ್ಟಕಾರ್ಯ ಸಿದ್ಧಿಯಾಗ... ಲ್ಲೆಂದು ೧೯೩೦ರಲ್ಲಿ Bankers' Industrial Deve... lopment Co., Ltd. ಎಂಬ ಕಂಪನಿಯನ್ನು ... ಡಿಸಿದರು. ಈ ಕಂಪನಿಗಳ ಕಾರ್ಯಗಳ ಸಂಬಂಧ... ಬರೆದು ಈಗಲೆ ಬೇಸರಗೊಳಿಸುವಷ್ಟು ಬೆಳೆದ ಬರಹ... ಹೆಚ್ಚು ವಿಸ್ತರಗೊಳಿಸುವದು ವಿಹಿತವಲ್ಲ.

ಬ್ಯಾಂಕ ಆಫ್ ಇಂಗ್ಲಂಡದ ಇನ್ನೊಂದು ವೈಶಿ... ವಿದೆ. ಬೇರೆ ಬ್ಯಾಂಕುಗಳಂತೆ ಪಾಲುಗಾರರ ಸಲು... ಅದು ವಾರ್ಷಿಕ ಬಾಲನ್ಸ ಶೀಟ ಅಥವಾ ಅಢಾವ ಪ... ಯನ್ನು ತೆಗೆಯುವುದಿಲ್ಲ. ದರ ವಾರ ಪ್ರಸಿದ್ಧಿ ... Weekly Return ಗಳಲ್ಲಿ "Rest" ... "Reserve" ಎಂಬದೊಂದು ಕಲಂ (item) ... ತ್ತದೆ. ಈ ಕಲಂನಲ್ಲಿ ೩೦ ಲಕ್ಷ ಪೌಂಡಿಗಿಂತ ಹೆಚ್ಚಿ... ರಕಮುನ್ನು ಅರ್ಧವಾರ್ಷಿಕ ಡಿವಿಡೆಂಡು ಹಂಚು... ರಲ್ಲಿ ಬರುತ್ತದೆ. ೧೯೨೮ರ ನವ್ಹಂಬರ ೨೮ನೇ ತಾರೀ... ವಾರದ ಪತ್ರಿಕೆಯನ್ನು (Weekly Report) ... ಕೊಟ್ಟಿದ್ದೇನೆ.

## ನೋಟುಗಳ ಶಾಖೆ ಇಶ್ಯು ಡಿಪಾರ್ಟ್‌ಮೆಂಟ್

| | ಪೌಂಡ್ | | |
|---|---|---|---|
| ತೆಗೆದ ನೋಟುಗಳು ಚಲದಲ್ಲಿದ್ದವು | ೩೬೭೦೦೧೧೪೮ | ಸರಕಾರಕ್ಕೆ ಕೊಟ್ಟ ಸಾಲ ಪೌಂಡು | ೧೧೦೧೫೧೦೦ |
| ಬ್ಯಾಂಕಿಂಗ್ ಶಾಖೆಯಲ್ಲಿದ್ದವು | ೫೨೦೮೭೭೯೭ | ಬೇರೆ ಸರಕಾರಿ ಆಧಾರ ಪತ್ರಗಳು Other Govt. Securities | ೨೩೩೫೬೮೫೫೦ |
| | | ಬೇರೆ ಆಧಾರ ಪತ್ರಗಳು | ೧೨೧೭೬೧೯೩ |
| | | ಬೆಳ್ಳಿಯ ನಾಣ್ಯಗಳು | ೩೨೪೦೧೫೭ |
| | | Amount of Fiduciary Issue ನಂಬುಗೆಯ ನೋಟುಗಳು | ೨೬೦೦೦೦೦೦೦ |
| | | ಭಂಗಾರದ ನಾಣ್ಯಮತ್ತು ಭಂಗಾರದ ಘಟ್ಟಿಗಳು | ೧೫೯೦೮೮೯೪೫ |
| ಪೌಂಡು | ೪೧೯೦೮೮೯೪೫ | ಪೌಂಡು | ೪೧೯೦೮೮೯೪೫ |

## ಬ್ಯಾಂಕಿಂಗ ಡಿಪಾರ್ಟ್‌ಮೆಂಟ್

| | | | |
|---|---|---|---|
| ಭಾಂಡವಲ | ಪೌಂಡು ೧೪೫೫೩೦೦೦ | ಸರಕಾರಿ ಆಧಾರ ಪತ್ರಗಳು | ೫೨೧೮೦೩೨೭ |
| ನಿಧಿ (Rest) | ೩೨೫೪೦೦೧ | ಬೇರೆ ಆಧಾರಪತ್ರಗಳು Discounts and advances £ 13586293 Securities 20214855 | ೩೩೮೦೧೧೪೮ |
| ಪಬ್ಲಿಕ್ ಡಿಪಾಜಿಟ್ ಸಾರ್ವಜನಿಕ ತೇವು | ೨೧೪೫೨೦೫೧ | ನೋಟುಗಳು | ೫೨೦೮೭೭೯೭ |
| ಬೇರೆ ತೇವುಗಳು Bankers' 62379409 Other 37185203 | ೯೯೫೬೪೬೧೨ | ಭಂಗಾರ ಬೆಳ್ಳಿಯ ನಾಣ್ಯಗಳು | ೭೫೭೦೪೧ |
| ಮುದ್ದತಿ ಬಿಲ್ಲುಗಳು | ೨೬೪೯ | | |
| | ೧೩೮೮೨೬೩೧೩ | | ೧೩೮೮೨೬೩೧೩ |

# ವಿಮಾದೇವಿ

—'ಕುಮಾರ'



ಕವನಗಾರರು :
ಶ್ರೀ॥
ಗೂಳೂರು ಗುಂಡೂರಾಯರು
(Mr. Gulur Gundu Rao)

ತಿರಿಯ ಸೃಜಿಸಿ ನರರ ಸೃಜಿಸಿ
ಬೊಮ್ಮದೇವನು
ತಿರುಗಿನೋಡಿ ಮನದಿ ಮರುಗಿ
ಮೆಲ್ಲನೆಂದನು.

"ನೆಲವ ಮಾಡಿ ಜಲವ ಮಾಡಿ
ನರನ ಮಾಡಿದೆ
ನೆಲದಮೇಲೆ ಧುಡ್ಡು ಕಾಸು
ಗಳನು ಸೃಜಿಸಿದೆ.
ಮನೆಯಮಾಡಿ ಮಠವ ಮಾಡಿ
ಹಣವ ಮಾಡಿದೆ
ಮನೆಯ ಮಠವ ಹಣವನೆಲ್ಲ
ನರಗೆ ನೀಡಿದೆ.
ಜೀವಜಂತುಗಳಲಿ ಮನುಜ
ಹಿರಿಯನಾದನು
ದೇವರನ್ನೆ ಮರೆಯುವಂಥ
ಕುರುಡನಾದನು !
ದುಡಿದ ಹಣವ ದುಂದುಮಾಡಿ
ಕೂಡಿಹಾಕದೆ
ಕಡವಮಾಡಿ ಸಾಯುತಿಹನು
ತಿಳಿವು ಸಾಲದೆ.

ಎಂದು ಮರುಗಿ ಪಿತಾಮಹನು
ಮನದಿ ಯೋಚಿಸಿ
ಸುಂದರಾಂಗಿ ವಿಮೆಯ ಕೂಗಿ
ಕರೆದನೀಪರಿ.

"ವಿಮೆಯೆ ಬಾರೆ ! ರಮೆಯ ಸಖಿಯೆ
ಉಮೆಯ ಗೆಳತಿಯೆ !
ವಿಮಾದೇವಿ, ಜನರ ತಾಯಿ !
ಬಾರೆ ಕರೆಯುವೆ"

ಬೊಮ್ಮದೇವರಿಂತು ಕರೆಯೆ
ವಿಮಾದೇವಿಯ

ಒಮ್ಮೆ ಮಿಂಚಿದಂತೆ ಆಯ್ತು
ಗಗನದಾಲಯ.

ಬಿಳಿಯ ಸೀರೆ ಹಸರು ರವಿಕೆ
ಎಳೆಯ ಹಾಸದ
ಕೆಳದಿ ವಿಮೆಯು ಬಂದಳಾಗ
ನಗುತ ನಾಚುತ.

"ಏನು ದೇವ ಕರೆದೆ ಎನ್ನ?"
ಎಂದು ಕೇಳಲು,
ಸಾನುರಾಗದಿಂದಲೆಂದ
ಪದ್ಮಪೀಠನು

"ಕೇಳು ಮಗಳೆ, ವಿಮಾದೇವಿ
ನೋಡು ಮನುಜರ
ಹಾಳುಹಾಳು ಸುರಿಯುತಿಹುದು
ಗುಡಿಯ ಗೋಪುರ.
ದುಡಿದ ಹಣವ ದುಂದುಮಾಡಿ
ಕೂಡಿಹಾಕದೆ
ಕಡವ ಮಾಡಿ ಸಾಯುತಿಹರು
ಬಡವರಾಗುತ.

"ಹೋಗು ಮಗಳೆ ! ನೆಲದಿ ಜನಿಸು
ನರರ ಬದುಕಿಸು !
ನೀಗು ಜನರ ಸಾಲಸೋಲ
ತಾಪತ್ರಯಗಳ"
ಎಂದು ಹರಸಿ ಬೊಮ್ಮದೇವ
ವಿಮಾದೇವಿಯ
ಅಂದು ಕಳುಹಿಸಿದನು ಜಗಕೆ
ರಮೆಯ ಗೆಳತಿಯ

ಸುಮಧುರತರ ಗೀತೆಯಿದನು
ಕೇಳಿ ಗೆಳೆಯರೆ
ವಿಮೆಯ ಮಾಡಿ ರಮೆಯ ಕೂಡಿ
ಸುಖಿಸಿ ಮನುಜರೆ !

# ವಿ ಮೆ



ಕವನಗಾರರು :
ಶ್ರೀ|| ಈಶ್ವರ - ಸಣಕಲ್ಲ
(Mr. Eeswara-Sanakalla.)

೧.

ದಿನದ ಶ್ರಮ - ಗಳಿಕೆಗಳು
ಸಾವಿನಾಕಳಿಕೆಗಳು !
ಎಷ್ಟು ದುಡಿದರು ಹಸಿವು ಹಿಂಗದಿಹುದು !
ಅಯ್ಯೋ ! ಉದ್ಯೋಗಗಳು
ನಿರ್ಲಾಭಯೋಗಗಳು !
ಎತ್ತ ಕೈಯಿಕ್ಕಿದರು ಬರಿದು ! ಬರಿದು !!

೨.

ಈ ವಿಷಮ - ವೇಳೆಯಲಿ
ಅಮೃತಮಯವೇಲೆಯಲಿ
ವಿಮೆಯೊಂದೆ ಚಲ್ವರಿದು ಹಬ್ಬಿರುವದು !
ದಿನದಿನದ ಉಳಿತಾಯ,
ಬಾಳ ಸುಲಭೋಪಾಯ,
ತಾನಾಗಿ ಲೋಕವನೆ ತಬ್ಬಿರುವದು !



೩.

ಒಡವೆ ಬೆಲೆಯನು ಹೀರಿ
ವಸ್ತುಚ್ಯುತಿಯನು ವೀರಿ
ಅಮರನೊಲು ಕೈಚಾಚಿ ವಿಮೆ ನಡೆದಿದೆ !
ಇಷ್ಟವಿದ್ದವರೆಲ್ಲ
ಬಾಳ ಸುಖವನು ಗೆಲ್ಲೆ,
ವಿಮೆಯ ಕೈಯಾಧಾರದಲಿ ನಡೆವುದು !





# ಹಣದ ಸೌಲಭ್ಯ


ಲೇಖಕರು :



ವಿದ್ವಾನ್ ಎಚ್. ಚನ್ನಕೇಶವ ಅಯ್ಯಂಗಾರ್,

ಎಂ. ಒ. ಎಲ್. ಅವರು.

**Mr. H. Channakeshava Iyengar, M.O.L,**


"ಬ್ಯಾಂಕ್" (ಕುಸೀದಾಗಾರವು) ಎಂಬುದು ನಮ್ಮ ದೇಶಕ್ಕೆ ಹೊಸದು, ಹೊರದೇಶದವರಿಂದ ಕಲಿತು ಕೊಂಡುದು-ಎಂಬ ತಪ್ಪು ತಿಳಿವಳಿಕೆ ಕೆಲವರಲ್ಲಿ ಮೂಡಿದೆ. ಹಣವನ್ನು ಬಡ್ಡಿಗೆ ಕೊಡುವುದೂ, ಬಡ್ಡಿಗೆ ಪಡೆಯುವುದೂ ನಮ್ಮ ದೇಶಕ್ಕೆ ಹೊಸದಲ್ಲ ; ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಂಡು ಬರುವ "ನಿಧಿ" (Bank), "ವಡ್ಡವ್ಯವಹಾರ" (Banking) ಮುಂತಾದುವುಗಳ ವಿವರವೇ ಇದಕ್ಕೆ ಸಾಕ್ಷಿ. ಹಿಂದಿನ ಕಾಲದಲ್ಲಿ ನಮ್ಮ ದೇಶಕ್ಕೆ ಎಲ್ಲೆಲ್ಲಿಂದಲೂ ಹೊನ್ನು ಹೊಳೆ ಹರಿದುಬರುತ್ತಿತ್ತು ; ಈ ವಿಷಯವನ್ನು ಹೊರದೇಶದವರೇ ಆಯಾ ಕಾಲದಲ್ಲಿ ಹೇಳಿಕೊಂಡು ಗೋಳಾಡಿದ್ದಾರೆ. ಈಗಲಾದರೋ ಕೋಟಿ ಲೆಕ್ಕದ ಹೊನ್ನು ನಮ್ಮ ದೇಶದಿಂದ ಪ್ರವಾಹವಾಗಿ ಕೊಚ್ಚಿಕೊಂಡು ಹೋಗುತ್ತಿದೆ; ಇದು ಎಲ್ಲರ ಪ್ರತ್ಯಕ್ಷ ನಿದರ್ಶನಕ್ಕೆ ಬಂದಿದೆ. "ಇಂಡಿಯಾ ದೇಶದಿಂದ ಚಿನ್ನವು ಅವಿಚ್ಛಿನ್ನವಾಗಿ ಉರುಳಿ ಹೋಗುತ್ತಿದೆ. ಇನ್ನು ಮೂರು-ನಾಲ್ಕು ವರ್ಷಗಳೊಳಗೆ ಇಲ್ಲಿ ಬಂಗಾರವೇ ಅಭಾವವಾಗಬಹುದು. ಇದಕ್ಕೆ ಪರಿಹಾರವನ್ನು ಹೇಳುವವರಿಲ್ಲ. ಅರ್ಥಶಾಸ್ತ್ರದ ಪ್ರೊಫೆಸರುಗಳು ಕಾಲೇಜುಗಳಲ್ಲಿ ಧೀರ್ಘವಾದ ಉಪನ್ಯಾಸಗಳನ್ನು ಮಾಡುವರು, ದೊಡ್ಡ ದೊಡ್ಡ ಗ್ರಂಥಗಳನ್ನು ಬರೆಯುತ್ತಿರುವರು ; ಆದರೆ ದೇಶದಲ್ಲಿ ಚಿನ್ನವು ಬರಿದಾಗುವ ಈ ಅನಾಹುತಕ್ಕೆ ಪ್ರತಿಕ್ರಿಯೆಯನ್ನು ಹೇಳುವ ಅರ್ಥಶಾಸ್ತ್ರಜ್ಞರೊಬ್ಬರನ್ನೂ ಕಾಣಲಿಲ್ಲ"—ಹೀಗೆಂದು ಬೊಂಬಾಯಿಯಲ್ಲಿ ದೊಡ್ಡ ಪದವಿಯಲ್ಲಿರುವ ನಿಷ್ಪಕ್ಷಪಾತಿಗಳಾದ ಸುಪ್ರಸಿದ್ಧ ಐರೋಪ್ಯರೊಬ್ಬರು ಸುಮಾರು ಮೂರು ವರ್ಷಗಳ ಕೆಳಗೆ ಈ ಲೇಖಕನೊಡನೆ ಹೇಳಿದರು. ಈ ಮಾತು ಈಗಲೂ ಸತ್ಯವಾಗಿ

ಈಗ ಸುಮಾರು ೫೦-೬೦ ವರ್ಷಗಳಿಂದೀಚೆಗೆ ನಮ್ಮ ದೇಶವು ಹಣಕಾಸಿನ ವಿಚಾರದಲ್ಲಿ ಬಹಳ ಹೀನಸ್ಥಿತಿಗೆ ಬಂದು ಹೆರವರ ಕೈಯನ್ನು ಕಾಯಬೇಕಾಗಿ ಬಂದಿದೆ. ಈ ಪರಿಸ್ಥಿತಿಗೆ ಪ್ರಬಲವಾದ ರಾಜಕೀಯ ಕಾರಣಗಳು ಇರಬಹುದು ; ಆದರೆ ಸ್ವಯಂಕೃತಾಪರಾಧವೇನೂ ಕಡಿಮೆಯಾಗಿಲ್ಲ. ಉದಾಹರಣೆಗಾಗಿ ಮೈಸೂರು ದೇಶವನ್ನೇ ತೆಗೆದುಕೊಳ್ಳುವ. ಸ್ವದೇಶದಲ್ಲಿ ಪುಷ್ಕರೆನಿಸಿಕೊಂಡ ಎಷ್ಟು ಜನ ನಗರ್ತರು, ಗಂಗಡಿಕಾರರು, ಸೆಟ್ಟರು, ವೈಶ್ಯ ಮುಂಡಿ ವರ್ತಕರು ತಮ್ಮ ಕುಲಕಸಬನ್ನೂ ಸಾಹುಕಾರಿಕೆಯನ್ನೂ ಹೆಚ್ಚಿಸಿಕೊಂಡಿರುವರು? ಹೆಚ್ಚಿಸಿಕೊಳ್ಳುವುದಿರಲಿ—ಎಷ್ಟು ಮಂದಿ ಇದ್ದುದನ್ನಾದರೂ ಉಳಿಸಿಕೊಂಡಿರುವರು? ಈ ಪ್ರಶ್ನೆಯನ್ನು ನಗರ ಮಹಾಜನರ ಹೈಕೋರ್ಟಿನಲ್ಲಿ ವಿಚಾರಣೆಗಿಟ್ಟು ಲಬ್ಬೆಗಳನ್ನೂ, ಮುಲ್ತಾನಿಗಳನ್ನೂ, ಮಾರವಾಡಿಗಳನ್ನೂ, ಕಾಥೇವಾಡಿಯವರನ್ನೂ, ಗುಜರಾತಿನ ಬನಿಯರನ್ನೂ ಸಾಕ್ಷಿಗೆ ಕರೆದು ಪ್ರಮಾಣಪೂರ್ವಕವಾದ ಹೇಳಿಕೆಯನ್ನು ತೆಗೆದುಕೊಂಡರೆ ಗೊತ್ತಾಗುವುದು. ಒಳನಾಡಿನ ಸಾಹುಕಾರರು ಹಾಳಾಗುವುದಕ್ಕೆ ಕಾರಣವೇನು? ಹೊರನಾಡಿನ ಸಾಮಾನ್ಯರು ಇಲ್ಲಿ ಕಾಲೂರಿ ತಲೆಯೆತ್ತುವುದಕ್ಕೆ ಕಾರಣವೇನು? ಇದನ್ನು ನಮ್ಮ ಜನರು ದೀರ್ಘಾಲೋಚನೆಯಿಂದ ಈಗಲಾದರೂ ಕಂಡುಹಿಡಿಯಬೇಕು. ಕಂಡುಹಿಡಿದು ಆಚರಣೆಗೆ ತಂದು ತಾವು ಇನ್ನು ಮುಂದಾದರೂ ಚೇತರಿಸಿಕೊಳ್ಳಲು ಯತ್ನಿಸಬೇಕು. ವ್ಯಾಪಾರ ವಿಷಯದಲ್ಲಿ ಇಷ್ಟಾಯಿತು. ಇನ್ನು ಲೇವಾದೇವಿಯ ವಿಚಾರವನ್ನು ನೋಡುವ.

ಲೇವಾದೇವಿಯೆಂದರೆ ಹಣವನ್ನು ಬಡ್ಡಿಗೋ ಬೇರೆ ವಿಧವಾಗಿಯೋ ಕೊಟ್ಟು ತೆಗೆದುಕೊಳ್ಳುವುದು. ಇದರಲ್ಲಿ ಎಲ್ಲ ವಿಧವಾದ ಬ್ಯಾಂಕುಗಳೂ, ಸಹಕಾರ ಸಂಘಗಳೂ, ವಿಮಾ ವ್ಯವಹಾರಗಳೂ (Insurance business) ಬೇರೆ ಎಲ್ಲ ತೆರದ ಸಾಹುಕಾರಿಕೆಯ ಕೆಲಸಗಳೂ ಸೇರು

ಇಲ್ಲಿಯೂ ೫೦-೬೦ ವರ್ಷಗಳ ಚರಿತ್ರೆಯನ್ನು ಪರಿಶೀಲಿಸಿದರೆ, ಮೈಸೂರು ದೇಶದವರು ಹೊರಗಿನ ಬ್ಯಾಂಕುಗಳಲ್ಲಿಯೂ ಹೊರಗಿನ ಇನ್ಷೂರೆನ್ಸ್ ಕಂಪೆನಿಗಳಲ್ಲಿಯೂ ವಿಶೇಷವಾಗಿ ಬಳಕೆಯನ್ನು ಇಟ್ಟುಕೊಳ್ಳುತ್ತ ಬಂದಿರುವರು. ಈಗ ಸುಮಾರು ೩೦ ವರ್ಷದ ಕೆಳಗೆ ದಿವಾಳಿಯೆದ್ದ ಅರ್ಬತನಾಟ್ ಕಂಪೆನಿ, ಆಲದ ಮರದ ಬಿಳಲಿನಂತೆ ಸರ್ವತ್ರ ಬೇರು ಬಿಟ್ಟುಕೊಂಡಿರುವ ಇಂಪೀರಿಯಲ್ ಬ್ಯಾಂಕು ಮುಂತಾದ ಕೆಲವು ಉದಾಹರಣೆಗಳನ್ನು ಕೊಡಬಹುದು. ಇಂಪೀರಿಯಲ್ ಬ್ಯಾಂಕು ನಮ್ಮ ದೇಶದ, ನಮ್ಮ ಜನರ, ಪುರೋಭಿವೃದ್ಧಿ ವಿಚಾರದಲ್ಲಿ ಎಷ್ಟರ ಮಟ್ಟಿಗೆ ಮಮತೆಯಿಟ್ಟಿದೆಯೆಂಬುದನ್ನು ತಿಳಿಯಬೇಕಾದರೆ, ಈಚೀಚೆಗೆ ಸ್ಥಾಪಿತವಾದ ಸ್ವದೇಶೀಯ ಬ್ಯಾಂಕ ಗಳನ್ನು ಅಂತರಂಗದಲ್ಲಿ ವಿಚಾರಿಸಬೇಕು. ಇನ್ನು ವಿಮಾ ವಿಷಯದಲ್ಲಿ ನಮ್ಮವರು ಇದುವರೆಗೂ ಹೊರದೇಶದ ಕಂಪೆನಿಗಳೊಡನೆಯೇ ವಿಶೇಷವಾಗಿ ಬಳಕೆಯಿಟ್ಟಿರುವ ಸಂಗತಿ ಜನ ಜನಿತವಾಗಿದೆ. ಇನ್ನು ಉತ್ತರ ಹಿಂದುಸ್ಥಾನದಲ್ಲಿ ಅಣಬೆಗಳಂತೆ - ನಾಯಿಕೊಡೆಗಳಂತೆ-ನೀರ್ಗುಳ್ಳೆಗಳಂತೆ ಹುಟ್ಟಿ ಹೆಸರಳಿದ ವಿಮಾ ಸಂಘಗಳಲ್ಲಿ ಕೈಸುಟ್ಟುಕೊಂಡವರು ಮೈಸೂರು ದೇಶದಲ್ಲಿ ಹಲವರಿರುವರು. ನಮ್ಮ ದೇಶದ ಹಣವು ಪೋಲಾದುದಕ್ಕೆ ಇದೂ ಒಂದು ಹರಿಗಾಲುವೆ. ನಮ್ಮ ಜನರಿಗೆ ನಮ್ಮವರಲ್ಲಿ ನಂಬಿಕೆ ಕಡಿಮೆ, ಮುಖವನ್ನೇ ಕಾಣದ ಹೊರಗಿನವರಲ್ಲಿ ನಂಬಿಕೆ ಹೆಚ್ಚು. ಇದು ನಮ್ಮಲ್ಲಿ ಹರಡಿರುವ ಒಂದು ಸೊಂಕು ರೋಗ. ಈ ರೋಗದಿಂದ ನಮ್ಮವರ ಹಣಕಾಸಿನ ವಿಚಾರದಲ್ಲಿ ಅನರ್ಥವುಂಟಾಗಿದೆ. ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯಂತೆ ಈ ಮೂವತ್ತು ವರ್ಷಗಳಿಂದ ಮೈಸೂರು ದೇಶದಲ್ಲಿ ಸಹಕಾರ ಸಂಘಗಳು ಕ್ರಮಕ್ರಮವಾಗಿ ಬೆಳೆಯುತ್ತಿವೆ. ಆದರೂ ನಮ್ಮ ಹಳ್ಳಿಗಾಡಿನ ರೈತನ ಸ್ಥಿತಿ ಇನ್ನೂ ಸೇರವಾಗಿಲ್ಲ. ಕೃಷಿ ಕಾರ್ಯಕ್ಕೆ ಅಷ್ಟೇನೂ ಪುಷ್ಟಿ ದೊರೆತಿಲ್ಲ. ನಗರವಾಸದ —ಪಟ್ಟಣವಾಸದ ಸಹಕಾರ ಸಂಘಗಳು ಹೆಸರಿಗೆ "ಸಹಕಾರ ಸಂಘ" ಗಳೇ ಹೊರತು ಅವು ನಿಜವಾಗಿಯೂ "ಜಾಯಿಂಟ್ ಸ್ಟಾಕ್ ಬ್ಯಾಂಕು" ಗಳೆಂದೇ ಹೇಳಬೇಕು. ಉದಾಹರಣೆಗಾಗಿ ಬೆಂಗಳೂರು ಸಿಟಿ ಕೊ-ಆಪರೇಟಿವ್ ಬ್ಯಾಂಕನ್ನಾಗಲಿ ಮೈಸೂರು ಸಿಟಿ ಕೊ-ಆಪರೇಟಿವ್ ಬ್ಯಾಂಕನ್ನಾಗಲಿ ತೆಗೆದುಕೊಳ್ಳಿರಿ. ಇವುಗಳಲ್ಲಿ ಸದಸ್ಯರ ಸಂಖ್ಯೆ ಹನುಮಂತನ ಬಾಲದಂತೆ—ಬಾಲದ ರೋಮಗಳಂತೆ—ರೋಮದ ಕೂಪಗಳಂತೆ—ಅಕ್ಷಯವಾಗಿಯೇ ಬೆಳೆಯುತ್ತಿರುವುದು. ಒಬ್ಬ ಮೆಂಬರಿಗೆ ಮತ್ತೊಬ್ಬ ಮೆಂಬರಿನ ಪರಿಚಯವಿಲ್ಲ. ಒಬ್ಬನಿಗೆ ಮತ್ತೊಬ್ಬನ ಪರಿಸ್ಥಿತಿಗೊತ್ತಿಲ್ಲ. ಅಷ್ಟೇಕೆ? ಆಯಾ ಸಂಘದ ಡೈರೆಕ್ಟರುಗಳಿಗೆ ಆಗಲಿ ಆಫೀಸಿನ ಕೆಲಸಗಾರರಿಗೆ ಆಗಲಿ ಈ ವಿಚಾರಗಳು ಕೂಲಂಕಷವಾಗಿ ಗೊತ್ತಿಲ್ಲ. ಗೊತ್ತಿದೆಯೆಂದು ಎದೆತಟ್ಟಿ ಹೇಳುವ ಸಮರ್ಥರಿದ್ದರೆ ಹೇಳಲಿ, ತಿದ್ದಿಕೊಳ್ಳುತ್ತೇವೆ. ಸಹಕಾರದ ಮುಖ್ಯ ಮೂಲತತ್ತ್ವವಾದ ಈ ಪರಸ್ಪರ ಪರಿಸ್ಥಿತಿ ಪರಿಚಯವು ಯಾವಾಗ ಇಲ್ಲವಾಯಿತೋ, ಆವಾಗಲೇ ಅವು ತಮ್ಮ ಸಹಕಾರತ್ವವನ್ನು ಹೆಸರಿಗೆ ಮಾತ್ರ ಉಳಿಸಿಕೊಂಡು, ಬೇಕಾದಾಗಲೆಲ್ಲ ತಮ್ಮ ಪಾಲಿನ ಷೇರು ಹಣವನ್ನು ಹಿಂದಕ್ಕೆ ಪಡೆಯುವುದಕ್ಕೂ, ಆದಿಯಲ್ಲಿಟ್ಟ ಬೆಲೆಗೇ ಹೊಸ ಷೇರನ್ನು ಕೊಂಡುಕೊಳ್ಳುವುದಕ್ಕೂ ಸೌಲಭ್ಯವನ್ನು ಮಾತ್ರ ಪಡೆದುಕೊಂಡ ಹಾಗಾಯಿತು. ಇನ್ನು ದವಸ, ಜವಳಿ ಮುಂತಾದುವನ್ನು ಮಾರುವ ಸಹಕಾರ ಸಂಘಗಳಲ್ಲಿ ಇಲಿ ಹೆಗ್ಗಣಗಳ ಕಾಟವು ಹೆಚ್ಚಿ ಹೋಗಿ ಅವುಗಳ ನಿಜವಾದ ಸಹಕಾರ ತತ್ತ್ವವನ್ನು ತಂತಮ್ಮ ಬಿಲಗಳಿಗೆ ಕೊಂಡೊಯ್ದು ಬೈತಿಟ್ಟಿವೆ. ಇವೆರಡು ಪ್ರಕಾರದ ಸಹಕಾರ ಸಂಘಗಳನ್ನೂ "ಜಾಯಿಂಟ್ ಸ್ಟಾಕ್ ಸಂಘ" ಗಳಾಗಿ ಮಾರ್ಪಡಿಸುವ ವಿಚಾರವು ವಿಮರ್ಶಾರ್ಹವಾಗಿದೆ.

ನಮ್ಮ ದೇಶದ ಹಣವು ನಮ್ಮಲ್ಲಿಯೇ ಓಡಾಡುತ್ತಿರಬೇಕು. ನಾವು ಕೊಟ್ಟ ಹಣವು ನಮ್ಮ ಕಣ್ಣೆದಿರಿಗಿರಬೇಕು.—ಇವೆರಡೀಗ ಹಣಕಾಸಿನ ಮುಖ್ಯ ತತ್ತ್ವಗಳು. ಆದಕಾರಣ ನಮ್ಮ ದೇಶದ ಹಣವು ನಮ್ಮವರ ಏಳಿಗೆಗಾಗಿಯೇ ಸದ್ವಿನಿಯೋಗವಾಗುವಂತೆ ನೋಡಿಕೊಳ್ಳಬೇಕು. ಹೊರದೇಶಕ್ಕೆ ಕಾಣದ ಕಡೆಗೆ ಹರಿಯಗೊಡಬಾರದು. ಹೊರದೇಶದವರು ನಮ್ಮ ದೇಶಕ್ಕೆ ಬಂದು 'ಮಾರವಾಡಿ' ರೂಪದಿಂದ ಅಪರಿಮಿತವಾದ ಬಡ್ಡಿಯನ್ನು ಸುಲಿಯುವುದಕ್ಕೆ ದಾರಿ ಕೊಟ್ಟಿರುವುದೂ, ಬ್ಯಾಂಕುಗಳ ರೂಪದಿಂದ ಹೆಚ್ಚು ಬಡ್ಡಿಯನ್ನು ನಮಗೆ ಕೊಟ್ಟು ನಮ್ಮಲ್ಲಿಯ ಹಣವನ್ನು ಆಕರ್ಷಿಸುತ್ತಿರುವುದೂ, ನಮ್ಮ ಜನರಲ್ಲಿರುವ ಮನೋದೌರ್ಬಲ್ಯಕ್ಕೂ, ಹೃದಯ ದೌರ್ಬಲ್ಯಕ್ಕೂ, ವ್ಯವಹಾರದಕ್ಷತೆಯಿಲ್ಲದಿರುವುದಕ್ಕೂ ಹೆಗ್ಗುರುತಾಗಿದೆ. ಹೊರದೇಶದಿಂದ ಇಲ್ಲಿಗೆ ಬಂದು ಈಚೀಚೆಗೆ ಬೇರುಬಿಡುತ್ತಿರುವ ಕೆಲವು ಬ್ಯಾಂಕುಗಳಿಗೆ ಮನಸೋತು ನಮ್ಮಲ್ಲಿಯ ಬ್ಯಾಂಕುಗಳನ್ನು ಹೀನಸ್ಥಿತಿಗೆ ತರುವುದು ಪರಿಣಾಮದಲ್ಲಿ ಅಪಾಯಕರವಾದುದು. ನಮ್ಮ ದೇಶದ ಬ್ಯಾಂಕುಗಳು ಕೂಡ ಈ ವಿಷಯ ಸ್ಥಿತಿಯನ್ನು ಪರಿಶೀಲಿಸಿ ದೇಶಾಭಿಮಾನದಿಂದಲೂ ದೂರದೃಷ್ಟಿಯಿಂದಲೂ ತಮ್ಮ ವ್ಯವಹಾರವನ್ನು ಉಚಿತ ರೀತಿಯಲ್ಲಿ ಮಾರ್ಪಡಿಸಿಕೊಳ್ಳಬೇಕು.

ನಮ್ಮ ದೇಶದಲ್ಲಿ ಪಾಶ್ಚಾತ್ಯ ದೇಶಗಳಲ್ಲಿರುವಂತೆ ಕೋಟೀಶ್ವರರಿಲ್ಲ. ಕೇವಲ ಬಡವರೆನ್ನಿಸಿಕೊಳ್ಳದೆ ಸ್ವಲ್ಪ ಮಟ್ಟಿಗೆ ಉಪಪನ್ನರಾದ ಮಧ್ಯಸ್ಥಿತಿಯವರಲ್ಲಿ ಹಣವು ಕಿಂಚಿತ್ ಕಿಂಚಿತ್ ಭಾಗದಿಂದ ಹರಡಿಕೊಂಡಿದೆ. ನಮ್ಮ ದೇಶದಲ್ಲಿ ಸರಳ ಜೀವನವು ಇನ್ನೂ ಲೋಪವಾಗಿಲ್ಲದ ಕಾರಣ ಇಂತಹ ಮಧ್ಯಸ್ಥಿತಿಯವರ ಬೆಂಬಲವನ್ನು ಪಡೆದು ನಮ್ಮಲ್ಲಿ ಪ್ರಾಮಾಣಿಕರೂ, ಉದಾರ ಹೃದಯರೂ,ದೇಶಾಭಿಮಾನಿಗಳ ಆದ ಲಕ್ಷಾಧಿಪತಿಗಳು ಅಲ್ಲಲ್ಲಿ ಸೇರಿ ಪಟ್ಟಣವಾಸಗಳಲ್ಲಿಯೂ ನಗರವಾಸಗಳಲ್ಲಿಯೂ ಜಾಯಿಂಟ್ ಸ್ಟಾಕ್ ಬ್ಯಾಂಕುಗಳನ್ನೂ, ವಿಮಾ ಕಂಪೆನಿಗಳನ್ನೂ ಸ್ಥಾಪಿಸಿದರೆ ನಮ್ಮಲ್ಲಿಯ ಕೈಗಾರಿಕೆ ವ್ಯಾಪಾರಗಳಿಗೆ ಉತ್ತೇಜನ ಕೊಟ್ಟಂತಾಗಿ ನಮ್ಮ ದೇಶದ ಮಧ್ಯಸ್ಥಿತಿಯವರೂ ಹಣವನ್ನು ಮಿತವ್ಯಯದಿಂದ ಉಳಿಸಿಕೊಳ್ಳಲು ಸಹಾಯಮಾಡಿದಂತಾಗುವುದು. ರಿಜರ್ವ್ ಬ್ಯಾಂಕು - ಇಂಪೀರಿಯಲ್ ಬ್ಯಾಂಕು ಮುಂತಾದುವುಗಳಿಂದ ನಮ್ಮ ದೇಶದ ರೈತರಿಗೂ, ಸಾಮಾನ್ಯ ಮಧ್ಯ ಸ್ಥಿತಿಯವರಿಗೂ ಪ್ರಯೋಜನಾಂಶವು ಕಡಿಮೆಯೆಂಬುದು ನಿಸ್ಸಂದೇಹವಾಗಿದೆ. ಕೃಷಿಯೇ ಪ್ರ ನವಾದ ನಮ್ಮ ರಾಜ್ಯದಲ್ಲಿ ರೈತರಿಗೆ ಉತ್ತೇಜನಪ್ರ ಏರ್ಪಾಡುಗಳನ್ನು ಕುರಿತು ಚೆನ್ನಾಗಿ ಆಲೋಚಿಸಿ ಪ್ರತ ಸಬೇಕಾಗಿದೆ. ಈಗಿರುವ ಗ್ರಾಮಾಂತರ ಸಹಕಾರ ಸ ಗಳ, ಜಮೀನು ಅಡಮಾನ ಬ್ಯಾಂಕುಗಳ ಜೊತೆ ಮತ್ತಾವ ವಿಧದಲ್ಲಿ ಧನಸಹಾಯವಾಗಬಹುದೆಂಬ ಏರ್ಪಾ ಡುಗಳನ್ನು ಕುರಿತು ವಿಮರ್ಶಿಸಬೇಕು. ರೈತರು ಬೆ ಬೆಳೆಯ ಜೊತೆಗೆ ಅದಕ್ಕನುಗುಣವಾದ ವ್ಯಾಪಾರ ಕೈಗಾರಿಕೆಗೂ ಹೆಣೆದುಕೊಂಡಿರುವಂತೆ ಬ್ಯಾಂಕಿನ ಕ್ರಮ ಳನ್ನು ಮಾಲಾಕಾರವಾಗಿ ಹೆಣೆದು, ಪ್ರಾಮಾಣಿಕತೆಯಿಂ ಲೂ, ದಕ್ಷತೆಯಿಂದಲೂ, ಸ್ವದೇಶಾಭಿಮಾನದಿಂದಲೂ ಪ್ರ ರ್ತಿಸಿ, ನಮ್ಮ ಜನರ ಹಣವು ನಮ್ಮ ದೇಶದಲ್ಲಿಯೇ ನ ಕಣ್ಣಮುಂದೆಯೇ ಇದ್ದು ಅಭಿವೃದ್ಧಿ ಹೊಂದಿ ದೇಶ ಸುಖಸಂಪದವಾಗಿ ಮೆರೆಯುವಂತೆ ಪ್ರತಿಯೊಬ್ಬ ಪ್ರಜೆ ಪ್ರಯತ್ನಿಸಬೇಕಾದ ಕಾಲವು ಈಗ ಬಂದಿದೆ.



# ದುಡ್ಡು ಮಿಂಚಿನಂತೆ ಕ್ಷಣಿಕ

### ಸಂಪಾದನೆಗೆ ಮೊದಲೆ ಖರ್ಚು ಮಾಡಿವಿರಿ

### ಸಂಪಾದನೆಗಿಂತ ಹೆಚ್ಚು ಖರ್ಚು ಮಾಡುವಿರಿ.

ಆದಾಗ್ಯೂ ನಿಮ್ಮ ಜೀವಮಾನದಲ್ಲಿ ಸಂಸಾರ ನೌಕವು ಯಾವುದಾದರೊಂದು ರೀತಿ ನಡೆಯುವುದು

### ಆದರೆ ನೀವು ಜಗತ್ತಿನಿಂದ ಮಾಯವಾದಂದು

### ನೌಕವನ್ನು ತೇಲಿಸುವ ವಜ್ಜೆಯಾವುದು

### ನಿಮ್ಮ ವಿಮೆಯೇ ಆ ವಜ್ಜೆ

# ಜಾತಿಯೋದ್ಯಮ-ವಿಮಾ ವ್ಯಾಪಾರವು



ಲೇಖಕರು :—
ಆಂಧ್ರ ಭಾಷೆಯಲ್ಲಿ ವಿಮಾಸಾಹಿತ್ಯ ನಿಪುಣರಾದ
ಶನಿವಾರದ ಸುಬ್ಬರಾಯ ಪಂತಲುಯವರು
**Mr. S. Subbaraya Panthulu.**

## ವಿಮೆಯ ಇತಿಹಾಸ

ಈ ನಮ್ಮ ಭರತಖಂಡದಲ್ಲಿ ೧೮ನೆಯ ಶತಮಾನಕ್ಕೆ ಮೊದಲು ವಿಮಾ ವ್ಯಾಪಾರವೆಂದರೆ ಒಡವೆಗಳ ರೂಪವೇ ಎಂದೂ, ೧೮ ನೆಯ ಶತಮಾನವು ಹುಟ್ಟುತ್ತಲೇ ಮುಂದೆ ಗಣಿತಶಾಸ್ತ್ರರೀತಿ ವಿಮಾ ಶಾಸ್ತ್ರವನ್ನು ಸರಿಯಾದ ವಿಧಾನ ಗಳಿಂದ ಏರ್ಪಡಿಸಿಕೊಂಡರೆಂದೂ ತಿಳಿಯಬರುವುದು. ಅಂದಿನಿಂದಲೂ ಈ ಶಾಸ್ತ್ರಕ್ಕೆ ಸಂಬಂಧಪಟ್ಟ ಕೃಷಿಯು ಪಾಶ್ಚಾತ್ಯ ದೇಶಗಳಲ್ಲಿಯೂ, ಅದರಲ್ಲಿ ಮುಖ್ಯವಾಗಿ ಇಂಗ್ಲೆಂಡು, ಅಮೇರಿಕಾ ದೇಶಗಳಲ್ಲಿ ಚೆನ್ನಾಗಿ ಬೆಳೆದಿರು ವುದು. ವಿಮಾ ವ್ಯಾಪಾರವನ್ನು ಸಾಗಿಸುವುದರಲ್ಲಿರುವ ಸಾಧಕ ಬಾಧಕಗಳಿಂದ ಇಂಗ್ಲೆಂಡಿನಲ್ಲಿ ೧೮೭೦ನೇ ಇಸ್ವಿ ಯಲ್ಲಿ ಒಂದು ಕಾನೂನು ಏರ್ಪಟ್ಟು, ೧೯೦೯ನೇ ಇಸ್ವಿ ಯಲ್ಲಿ ಅದು ಜನಾಭಿರುಚಿಗೆ ತಕ್ಕಂತೆ ಸಂಸ್ಕರಿಸಲಾಯಿತು. ೧೯೧೪-೧೯೧೮ ನೇ ಇಸ್ವಿಗಳ ಅಂತರದಲ್ಲಿ ನಡೆದ ಐರೋ ಪಾ ಮಹಾಯುದ್ಧದಲ್ಲಿ ಈ ಶಾಸ್ತ್ರದಲ್ಲಿರುವ ಕಟ್ಟು ನಿಟ್ಟು ಗಳಿಂದಲೇ ವಿಮಾ ಕಂಪನಿಗಳು ಬಹಳ ಭದ್ರತೆಯುಳ್ಳವು ಗಳಾಗಿ ಯೂರೋಪುಖಂಡವೆಲ್ಲವನ್ನೂ ಚೆನ್ನಾಗಿ ಆವರಿಸಿ ದವುಗಳಾಗಿ ಆ ಮಹಾಯುದ್ಧಕ್ಕೆ ಬಂಡವಾಳವನ್ನುಂಟು ಮಾಡಿದವು. ಭಾರತದೇಶವು ಕ್ರಮಕ್ರಮೇಣ ಆಂಗ್ಲೇ ಯರ ಅಧೀನತೆ ಸೇರುತ್ತಾ ಬಂದರೂ, ಆರ್ಥಿಕವಾಗಿಯೂ ರಾಜಕೀಯವಾಗಿಯೂ ಸ್ವಾತಂತ್ರವಿಲ್ಲದೇ ಹೋದರೂ ಆಂಗ್ಲೇಯನ ಅನುಕರಣವು ಮಾತ್ರ ತಪ್ಪಲಿಲ್ಲ. ಭಾರ ತೀಯರು ಕೂಡ ಭರತಖಂಡದಲ್ಲಿ ವಿಮಾ ವ್ಯಾಪಾರವು ಸಾಗಿಸುವುದು ಅತ್ಯಗತ್ಯವೆಂದು ಹಿಂದಿನಿಂದ ಅನುತ್ತಾ ಬಂದಿರುವರು. ೧೯ನೇ ಶತಮಾನದಲ್ಲಿ ಭಾರತೀಯ ದೊಡ್ಡಮನುಷ್ಯರು ಆಂಗ್ಲೇಯರ ಸಲಹೆ, ಸಹಾಯ ಸಂಪ ತ್ತಿನಿಂದ ಈ ವ್ಯಾಪಾರವನ್ನು ಸಾಗಿಸಲು ಕೈಹಚ್ಚಿದರು. ಇದಕ್ಕೆ ಕಾರಣವೇನೆಂದರೆ, ಬ್ರಿಟಿಷ ಪರಿಪಾಲನೆಯಲ್ಲಿ ಉದ್ಯೋಗಿಗಳಾಗಿ ಸೇರಿದವರು ತಮ್ಮ ಜೀವಮಾನವನ್ನು ಬ್ರಿಟಿಷ್ ವಿಮಾ ಕಂಪೆನಿಗಳಲ್ಲಿ ಆಂಗ್ಲೇಯರ ಜೀವಮಾ ನದಮೇಲಿರುವ ಸಾಲಿಯಾನಾ ಪ್ರೀಮಿಯಂಗಳಿಗಿಂತ ಹೆಚ್ಚು ದರಗಳಿಂದ ಈ ಕಂಪನಿಗಳಲ್ಲಿ ಸೇರಬೇಕಾಗಿ ಬಂ ದಿತು. ಇದರಿಂದಲೇ ಇಂಡಿಯಾ ದೇಶದಲ್ಲಿ ಭಾರತದ ವಿಮಾ ಕಂಪೆನಿಗಳು ಆಂಗ್ಲೇಯರ ಸಹಕಾರದಿಂದ ಏರ್ಪ ಟ್ಟವು. ಭಾರತ ದೇಶದಲ್ಲಿಯೂ ಕೂಡ ವಿಮಾ ವ್ಯಾಪಾ ರಾಭಿವೃದ್ಧಿಯುಂಟಾಗಿ ೧೯೧೨ ರಲ್ಲಿ ವಿಮಾ ಆಕ್ಟು ಹುಟ್ಟಿ ಅದು ೧೯೩೮ ರಲ್ಲು ಈ ಶಾಸನದ ಸವರಣೆಗಳನ್ನು ಪಡೆ ಯಿತು.

ಭರತಖಂಡದಲ್ಲಿಯೂ, ಇಂಗ್ಲೆಂಡಿನಲ್ಲಿಯೂ ಈ ಶಾಸನ ನಿರ್ಮಾಣಕ್ಕೂ, ಸವರಣೆಗಳಿಗೂ ಇಂಡಿಯಾ ಸರ್ಕಾರದವರು ಕಳೆದ ವರ್ಷದಲಾಗಾಯ್ತು ಒಬ್ಬ ಪ್ರತ್ಯೇಕ ಅಧಿಕಾರಿಯನ್ನು ನಿರ್ಮಿಸಿದ್ದಾರೆ.

## ವಿವಿಧತರಹೆಯ ವಿಮೆಗಳು

ಮನುಷ್ಯನ ಜೀವಮಾನವೊಂದಕ್ಕೇ ಅಲ್ಲದೆ ಪಾಶ್ಚಾ ತ್ಯರಾಷ್ಟ್ರಗಳಲ್ಲಿ ಹಡಗು ವ್ಯಾಪಾರ, ಇತರ ಯಂತ್ರ ಕರ್ಮ ಗಳ ಭದ್ರತೆಗಳಿಗಾಗಿ ಈ ವಿಮಾಪ್ರವೇಶದಿಂದ ಶ್ರದ್ಧಾಶಕ್ತಿ ಯನ್ನುಂಟುಮಾಡಿದರು. ಆದುದರಿಂದಲೇ ಪಾಶ್ಚಾತ್ಯ ದೇಶಗಳಲ್ಲಿಯೂ, ಅಮೇರಿಕಾ ದೇಶದಲ್ಲಿಯೂ ಜೀವಮಾನ ಸಮುದ್ರದ ವಿಮೆಗಳಿಗೆ ಆರನೆಯ ಶತಮಾನದಿಂದಲೂ ಗಣ್ಯತೆಯು ಇದ್ದೇ ಇರುವುದು. ಭಾರತದೇಶದಲ್ಲಿ ಈ ಇಪ್ಪತ್ತನೆಯ ಶತಮಾನದಲಾಗಾಯ್ತು ಸಮುದ್ರದ ವಿಮಾ ವ್ಯಾಪಾರ ಮಾಡಲು ಮೊದಲಾಯಿತು. ಐರೋಪ್ಯದೇಶಗ ಳಲ್ಲಿ ಬೆಂಕಿ, ಚೌರ್ಯ, ಆಕಸ್ಮಿಕ ವಿಪತ್ತುಗಳೇ ಮೊದಲಾದ ಎಷ್ಟೋ ತರಹಗಳ ವಿಮಾವ್ಯಾಪಾರವು ಈ ಇಪ್ಪತ್ತನೆಯ ಶತಮಾನದ ೧೯೨೦ ನೇ ಇಸ್ವಿಯಲಾಗಾಯ್ತು ಸಾಗುತ

ಲಿರುವುದು. ಇಂಡಿಯಾದೇಶದಲ್ಲಿಯೂ ಕೂಡ ಅವರನ್ನು ಪೂರ್ತಿಯಾಗಿ ಹಿಂಬಾಲಿಸದೆ ಹೋದರೂ ಕೊಂಚಮಟ್ಟಿಗಾದರೂ ಈವ್ಯಾಪಾರದಲ್ಲಿ ಅನುಕರಿಸುತ್ತಿರುವೆವು ; ಆದರೆ ಈ ವ್ಯಾಪಾರದಲ್ಲಿ ಅಂದರೆ ಇದುವರಿವಿಗೆ ಜೀವಮಾನ ವಿಮಾಕ್ಕೇನೆ ಪ್ರಾಧಾನ್ಯಪೀಠವು ಇರುವುದೆಂದೂ, ಸಮುದ್ರ ಅಗ್ನಿ, ವ್ಯಾಪಾರ ಮುಂತಾದ ವಿಧಾನಗಳಲ್ಲಿ ನಾವು ಹಿಂದುಳಿದಿರುವೆವೆಂದೂ ಧಾರಾಳವಾಗಿ ಹೇಳಬಹುದಾಗಿದೆ.

### ವಂದೇ ಮಾತರಂ-ಅಸಹಾಯೋದ್ಯಮವು

೧೯೦೬-೧೯೦೭ನೆ ಇಸ್ವಿಗಳಲ್ಲಿ ಹೊರಬಂದ ವಂದೇ ಮಾತರಂ (ದೇಶೀಯಭಾವ) ಉದ್ಯಮದಿಂದ ಬಂಗಾಳಾ ದೇಶದಲ್ಲಿಯೂ, ಪಂಜಾಬಿನಲ್ಲಿಯೂ, ಬೊಂಬಾಯಿ ಆಧಿಪತ್ಯದಲ್ಲಿಯೂ ಈ ವಿಮಾ ವ್ಯಾಪಾರ ಸಂಸ್ಥೆಗಳು ಹುಟ್ಟಿದವು. ಈ ಸಂಸ್ಥೆಗಳು ಪರಿವ್ಯಾಪ್ತವಾಗಿ ಬೆಳೆಯಲು ಕೀರ್ತಿವಿಶೇಷರಾದ ಸರ್. ಸುರೇಂದ್ರನಾಥ ಬೆನರ್ಜಿಯವರು ಭಾರತೀಯರ ಆರ್ಥಿಕ, ರಾಜಕೀಯ, ಸಾಂಘಿಕ, ಸ್ವಾತಂತ್ರ್ಯಗಳುಳ್ಳಉಪನ್ಯಾಸಗಳೊಂದಿಗೆ ವಿಮಾವ್ಯಾಪಾರಪ್ರಬೋಧನವನ್ನು ಚೆನ್ನಾಗಿ ಸಾಗಿಸುತ್ತಾ, ದೇಶೀಯ ವಿಮಾ ಕಂಪನಿಗಳಲ್ಲಿಯೆ ಭಾರತೀಯರು ವಿಮಾ ಮಾಡಬೇಕೆಂದು ಬಹಿರಂಗ ಸಭೆಗಳಲ್ಲಿ ತಿಳಿಸುತ್ತಾ ಬಂದರವರಲ್ಲಿ ಮೊದಲನೆಯವರೆಂದು ಹೇಳಬಹುದು.

೧೯೨೪ನೆ ಇಸ್ವಿಯಲ್ಲಿ ಕೀರ್ತಿಶೇಷ ಪಂಜಾಬಿನ ಸಿಂಹರಾದ ಲಾಲಾಲಜಪತರಾಯರವರು ಲಾಹೋರು ನಗರದಲ್ಲಿ ಸ್ಥಾಪಿಸಿದ "ಲಕ್ಷ್ಮೀಇನ್ಷೂರೆನ್ಸು ಕಂಪನಿ" ಯಿಂದ ಹಲವು ರಾಷ್ಟ್ರದ ಕಾಂಗ್ರೆಸ್‌ನಾಯಕರು ಹಲವು ಭಾರತ ವಿಮಾ ಕಂಪೆನಿಗಳನ್ನು ಸ್ಥಾಪಿಸಿದರು.

ಈ ಕಂಪನಿಗಳ ತಪ್ಸೀಲು :—

| | | |
|---|---|---|
| ೧೯೦೭ನೆ ಇಸ್ವಿಗೆ ಮೊದಲು ಇದ್ದ ಕಂಪನಿಗಳು | | ೨೧ |
| ೧೯೨೪ ನೆ ಇಸ್ವಿಗೆ ಮೊದಲು | ,, | ೪೦ |
| ೧೯೨೪ರಲಾಗಾಯ್ತು ೧೯೩೩ರವರಿವಿಗೆ | ,, | ೧೦೮ |
| | ಜುಮ್ಲಾ | ೧೬೯ |

ಈ ವರದಿಯು ೧೯೩೪ರಲ್ಲು ಇಂಡಿಯಾ ಸರ್ಕಾರದವರು ಪ್ರಕಟಿಸಿದ (The Indian Insurance year book) "ಭಾರತ ವಿಮಾ ವ್ಯಾಪಾರದ ವಾರ್ಷಿಕ ಪುಸ್ತಕ" ದಲ್ಲಿ ವಿವರಿಸಿದ ಅಂಶಗಳಿಂದ ಸಂಗ್ರಹಿಸಲಾಗಿದೆ.

೧೯೨೦ನೆ ಇಸ್ವಿಯಲಾಗಾಯ್ತು ೧೯೩೨ನೆ ಇಸ್ವಿ ವರಿವಿಗೆ ಭಾರತದ ಕಾಂಗ್ರೆಸ್ಸು ಸತ್ಯಾಗ್ರಹದಲ್ಲಿ... ೧೯೨೩ ನೇ ಇಸ್ವಿಯಲಾಗಾಯ್ತು ಶಾಸನ ಸಭಾ... ತಿರಿಗಿತು. ೧೯೩೦ ರಲ್ಲಿ ಪ್ರಖ್ಯಾತವಾದ ಉಪ್ಪಿನ ಸ... ಭಂಗವು ಪ್ರಾರಂಭವಾಗಿ ೧೯೩೩ರ ವರಿವಿಗೆ ಅದು ಸಾ... ಅದು ತಾತ್ಕಾಲಿಕವಾಗಿ ನಿಲ್ಲಿಸಲ್ಪಟ್ಟಿತು. ಸತ್ಯಾಗ್ರಹ... ೧೯೨೪ನೇ ಇಸ್ವಿಲಾಗಾಯ್ತು ೧೯೩೦ ರ ವರಿವಿಗೆ ... ಬಂದ ಕಂಪನಿಗಳ ಸಂಖ್ಯೆ ಅದಕ್ಕೆ ಮೊದಲು ಇದ್ದು... ಸ್ವಲ್ಪ ಕಡಿಮೆಯಾಗಿ ದ್ವಿಗುಣೀಕೃತವಾಯಿತು. ... ದೇಶದಲ್ಲಿ ೧೯೨೫ರಲ್ಲಿ ಡಾ|| ಭೋಗರಾಜು ಪಟ್ಟಾಭಿ ಸೀತಾ ರಾಮಯ್ಯ ಪಂತಲುಯವರು ಒಂದು ವಿಮಾ ಕಂಪನಿಯನ್ನು ಸ್ಥಾಪಿಸಿದರು.

ಭಾರತದೇಶದ ವಿಮಾ ಚಳುವಳಿಯಲ್ಲಿ ಮುಂದಾ... ಗಳಾದವರು ಶ್ರೀ|| ಡಾ|| ಎಂ. ಎ. ಅನ್ಸಾರಿಯವರು, ಲಾಲಾ ದುನೀಚಂದ್, ಸರ್. ಪಿ. ಸಿ. ರೇ ಯವರು, ಜುಮ್ನಾದಾಸ್ ಮೆಹತಾ, ಎನ್. ಸಿ. ಕೇಲ್ಕರ್, ... ಎಸ್. ಆಣಿ, ಯುಸ್. ವಿ. ಸರ್ಕಾರ್, ಡಾ|| ಸತ್ಯಪಾಲ್, ಟಿ. ಸಿ. ಗೋಸ್ವಾಮಿ, ಡಾ|| ಕಿಚ್ಲೂ, ಸರ್ದಾರ್ ಶಾರ್ದೂಲ ಸಿಂಹ ಕಾವೇಷೀರ್, ಭೋಗರಾಜು ಪಟ್ಟಾಭಿ ಸೀತಾ ರಾಮಯ್ಯ, ಕಾಶೀನಾಥದ ನಾಗೇಶ್ವರರಾಯರು ಮುಂತಾದ ಕಾಂಗ್ರೆಸ್ ಭಕ್ತರು ಎಷ್ಟೋಮಂದಿ ಇರುವರು.

ಇವರಲ್ಲಿ ಶ್ರೀ ದೇಶಬಂಧು ದಾಸರವರೂ, ಲಾಲಾ ಲಜಪತರಾಯ್‌ರವರೂ, ಮೋತೀಲಾಲ್ ನೆಹ್ರೂಯವರು ಅಖಿಲ ಭಾರತದ ಕಾಂಗ್ರೆಸ್ ಸಭಾಧ್ಯಕ್ಷರಾಗಿ ಕೀರ್ತಿಶೇಷರಾಗಿದ್ದಾರೆ.

### ವಿಮೆಯು-ಸಾಮ್ಯವಾದವು

೧೯೩೩ನೆ ಇಸ್ವಿಯಿಂದ ಕಾಂಗ್ರೆಸ್ಸಿನಲ್ಲಿ ಸಾಮ್ಯವಾದ ಸಿದ್ಧಾಂತಗಳು ಏರ್ಪಟ್ಟವು. ಇವರಲ್ಲಿ ಕೆಲವರು ... ನಡವೆ ಕಾಶೀನಗರದಲ್ಲಿ ಒಂದು ವಿಮಾ ಕಂಪೆನಿಯನ್ನು ಸ್ಥಾಪಿಸಿದ್ದಾರೆ. ೧೯೩೦ ರಲ್ಲಿ ನಡೆದ ಸತ್ಯಾಗ್ರಹ ಶಾಂತಿ ಸಮಯದಲ್ಲಿ ಕೀರ್ತಿಶೇಷ ವಿಠಲಬಾಯಿ ಪಟೇಲರವರು ಭಾರತೀಯ ವಿಮಾ ಕಂಪೆನಿಗಳ ಬ್ಯಾಂಕುಗಳ ವ್ಯಾಪಾರಾಭಿವೃದ್ಧಿಯ ವಿಷಯವಾಗಿ ಉದ್ಬೋಧಿಸುತ್ತಾ ವಿದೇಶಗಳಿಗೆ ಈ ಕಂಪೆನಿಗಳ ವ್ಯಾಪಾರದಿಂದ ಹೋಗುತ್ತಿರುವ ಕೋಟ್ಯಾಂತರ ಹಣವನ್ನು ತಡೆದು ನಿಲ್ಲಿಸಬೇಕೆಂದು ತಿಳಿಸುತ್ತಾ ಬಂದರು.

ಅಖಿಲ ಭಾರತ ಕಾಂಗ್ರೆಸ್ಸಿನ ಪರವಾಗಿ ಈ ವಿಮಾ ಪ್ರಾವಿಡೆಂಟ್ ಕಂಪನಿಗಳು (ಶಾಸ್ತ್ರರೀತ್ಯಾ ಏರ್ಪಡದ ವಿಮಾ ಕಂಪೆನಿಗಳು) ಉಂಟುಮಾಡುತ್ತಿರುವ ದೇಶಾರಿಷ್ಟ ವಿಷಯವಾಗಿಯೂ, ನಷ್ಟಗಳ ವಿಷಯವಾಗಿಯೂ ಒಂದು ಪ್ರಕಟನೆಯನ್ನು ಮಾಡಿದರು. ಆದರಮೇಲೆ ಬೊಂಬಾಯಿಯ ಕೆಲವು ಕಂಪನಿಗಳವರು ಕಾಂಗ್ರೆಸ್ಸಿನಮೇಲೆ ವ್ಯವಹಾರ ನಡೆಸಲು ಕೈಗೊಂಡದ್ದು ಪ್ರಜೆಗಳಿಗೆ ತಿಳಿದ ಸಂಗತಿಯಾಗಿದೆ.

ಕೂಲಿ ನಾಲಿ, ರೈತಾಪಿಯುವರ ಶ್ರೇಯೋಭಿಲಾಷೆಗೆ ೧೯೩೦ ರಿಂದ ಕಾಂಗ್ರೆಸ ದೃಷ್ಟಿಯು ಸ್ವಲ್ಪಮಟ್ಟಗೆ ತಿರುಗಿದರೂ ೧೯೩೧ ನೆಯ ಕರಾಚಿಯ ಕಾಂಗ್ರೆಸ್ ಸಭೆಯ ನಂತರ ಹೆಚ್ಚು ಗಮನವಹಿಸುತ್ತು ೧೯೩೩ ನೆ ಇಸ್ವಿಯಿಂದ ಈ ವಿಷಯವಾಗಿ ಮತ್ತಷ್ಟು ಅಧಿಕವಾಗಿ ಹೊರಪಡುವ ಸನ್ನಿವೇಶವಾಯಿತು. ಪ್ರತ್ಯೇಕ ಶ್ರದ್ಧೆವಹಿಸಿ ಕೆಲಸ ಮಾಡಲು ಕಾಂಗ್ರೆಸ್ ಸಾಮ್ಯವಾದಿಗಳು ಸಾಂಘಿಕವಾಗಿ ಸೇರಿದರು.

೧೯೨೨ ರಲ್ಲಿ ಇವರ ಆಶಯದಿಂದ ಫ್ಯಾಕ್ಟರಿ ಆಕ್ಟು ಏರ್ಪಟ್ಟಿತು. ೧೯೨೩ ರಲ್ಲಿ (Workmens Compensation Act ) ಕೂಲಿಯುವರ ಪರಿಹಾರ ಶಾಸನವು ಏರ್ಪಟ್ಟು, ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿರುವಾಗ್ಗೆ ಸತ್ತ ಕೂಲಿಯುವರಿಗೂ. ಅಂಗವೈಕಲ್ಯ ಪಡೆದ ಕೆಲಸಗಾರರಿಗೂ ಆ ಕಾರ್ಖಾನೆಯ ಮಾಲೀಕರು ಸ್ವಲ್ಪ ಹಣ ಕೊಡಬೇಕೆಂಬ ಶಾಸನವುಂಟಾಯಿತು; ಆದರೆ ಇದು ಜಾರಿಯಲ್ಲಿ ಬರಲು ಬಹಳ ಅಡ್ಡಿಗಳಾಗಿದ್ದವು. ಆದರಿಂದ ಕೂಲಿ ನಾಲಿಯುವರಿಗೆ ಹೆಚ್ಚು ಲಾಭವುಂಟಾಗಲಿಲ್ಲವೆಂದು ತಿಳಿಸಬೇಕಾಗಿದೆ.

೧೯೨೬ ನೆ ಇಸ್ವಿಯಲ್ಲಿ ಟ್ರೇಡ್ ಯೂನಿಯನ್ ಆಕ್ಟು ಪ್ರವೇಶವಾಯಿತು. ಇದು ೧೯೨೭ ನೆಯ ಜೂನ್ ಮಾಹೆಯಲ್ಲಿ ಜಾರಿಯಲ್ಲಿ ಬಂದಿತು. ಇದರಿಂದ ಕೂಲಿಯುವರಿಗೆ ಸ್ವಲ್ಪಮಟ್ಟಗೆ ಸದುಪಾಯುಗಳುಂಟಾದವು; ಆದರೆ ಇದರಲ್ಲಿ (Sick cases Unemployment) ಖಾಯಿಲೆ ಬಿದ್ದಾಗಲೂ, ನಿರುದ್ಯೋಗಪಟ್ಟಾಗಲು ಸದುಪಯೋಗವಾದ ವಿಮಾ ಸೌಕರ್ಯಗಳನ್ನು ಏರ್ಪಡಿಸಲಿಲ್ಲ.

೧೯೨೩-೨೬ ರಲ್ಲಿ ಏರ್ಪಡಿಸಿದ (Workers Compensation. Tarde Union Act) ಕೂಲಿಯುವರ ಪರಿಹಾರ ಶಾಸನ, ಟ್ರೇಡ್ ಯೂನಿಯನ್ ಆಕ್ಟಿನಿಂದ ಕೆಲಸಗಾರರಿಗೆ ಹೊರತು ರೈತಾಪಿಯುವರಿಗೆ (ವ್ಯವಸಾಯುದ ಕೂಲಿಯುವರಿಗೆ) ಯಾವ ಸೌಕರ್ಯಗಳೂ ಉಂಟಾದಂತೆ ಕಾಣಲ್ಪಡಲಿಲ್ಲ. ಭರತಖಂಡದಲ್ಲಿ ಶೇಕಡಾ ೭೦ ಮಂದಿ ವ್ಯವಸಾಯ ವೃತ್ತಿಯಿಂದ ಜೀವಿಸುತ್ತಾ ಜನಸಂಖ್ಯೆಯಲ್ಲಿ ಶೇಕಡಾ ೯೦ ಮಂದಿ ಗ್ರಾಮವಾಸದಲ್ಲಿರುವವರಾದುದರಿಂದ ಇವರ ಅನುಕೂಲತೆಗೆ ಗಣ್ಯತೆಯನ್ನು ಕೊಡಬೇಕಾದುದು ಮುಖ್ಯವಾದರೂ ಸರ್ಕಾರದವರು ಗಮನಿಸಲಿಲ್ಲ. ಕಾಂಗ್ರೆಸ್ಸಿನವರು ೧೯೩೧ ರಿಂದ ಈ ವಿಷಯವಾಗಿ ಶ್ರದ್ಧೆ ವಹಿಸಲಾರಂಭಿಸಿದರು.

೧೯೩೫ನೆಯ ಇಸ್ವಿಯಲ್ಲಿ ವ್ಯವಸಾಯದ ಕೂಲಿಯುವರು, ರೈತರು ಇವರಿಗೆ ಕೆಲಸಕ್ಕೆ ಬರುವ ರೀತಿ (Un-Employment Insurance Act) ನಿರುದ್ಯೋಗ ವಿಮಾ ಖಾನೂನನ್ನು ಅಸೆಂಬ್ಲಿಯ ಬಡ್ಜೆಟ್ಟಿನ ಸಮಾವೇಶದಲ್ಲಿ ಕಾಂಗ್ರೆಸ್ ಸಾಮ್ಯವಾದಿಗಳು ಪ್ರವೇಶಪಡಿಸಲು, ಅದು ಪ್ರಭುತ್ವದವರ ಅಡ್ಡಿಯಿಂದ ಬಿದ್ದುಹೋಯಿತು. ಈ ವಿಷಯದಲ್ಲಿ ತಕ್ಕ ಸೌಕರ್ಯಗಳನ್ನು ಕಲ್ಪಿಸುವ ಶಾಸನ ಸಭಿಕರನ್ನು ಆರಿಸಲು ಯೋಗ್ಯಪ್ರಚಾರವು ಆಗಬೇಕಾಗಿದೆ.

## ಕಾಂಗ್ರೆಸ್-ವಿಮಾ ಏಜಂಟರು

ಕಾಂಗ್ರೆಸ್ಸಿನಲ್ಲಿ ಬಹುಮಂದಿ ವಿಮಾ ಏಜಂಟರು ಸೇರಿದರು. ಅವರು ವಿಮಾ ವ್ಯಾಪಾರದಲ್ಲಿ ಬಂಡವಾಳಗಾರರಾಗಿಯೂ, ಏಜಂಟರಾಗಿಯೂ, ಪಾಲಿಸಿದಾರರಿಗೆ ಸಮಾನ ಪ್ರತಿಪತ್ತಿಯನ್ನು ಒಬ್ಬರ ಲಾಭಗಳಿಗೆ ಮತ್ತೊಬ್ಬರು ಅಡ್ಡಿಯಾಗಿದ್ದು, ಒಬ್ಬರನ್ನೊಬ್ಬರು ವಂಚಿಸಿ ತೊಂದರೆ ಪಡಿಸಲು ಅವಕಾಶವಿಲ್ಲದಂತೆ ಇರುವ ವಿಮಾ ಕಂಪೆನಿಗಳ ವ್ಯವಹಾರವನ್ನು ಅರಿಯುತ್ತಾ, ತಾವು ಇರುವ ಕಂಪನಿಗಳನ್ನು ದಕ್ಷತೆಯಿಂದ ನಿರ್ವಹಿಸುತ್ತಾ ಪಟ್ಟಾದಾರರಿಗೆ ಸಾಲಿಯಾನಾ ಕಂಪೆನಿಯ ಲಾಭವನ್ನು ಹಂಚುವುದರಲ್ಲಿ ತಕ್ಕ ಬದಲಾವಣೆಗಳನ್ನುಂಟುಮಾಡುವುದರಲ್ಲಿಯೂ ಪ್ರಯತ್ನ ಮಾಡುತ್ತಿದ್ದಾರೆ. ಈ ವಿಷಯದಲ್ಲಿ ಇನ್ನೂ ಹೆಚ್ಚು ಕೆಲಸವು ನಡೆಯುವುದೆಂದು ತಿಳಿಸಬೇಕಾಗಿದೆ.

೧೯೩೮ ರಲ್ಲಿ (Sens Manual) ಸೇನ್ ಎಂಬುವರು ಪ್ರಕಟಿಸಿದ ಪುಸ್ತಕದಲ್ಲಿ ತಿಳಿಸಲ್ಪಟ್ಟಿರುವ ವಿಮಾ ಕಂಪೆನಿಗಳ ಡೈರೆಕ್ಟರುಗಳು ಆಡಳಿತ, ವಿಷಯವ್ಯಾಪನೆ ಇವುಗಳನ್ನು ನೋಡಿದಲ್ಲಿ ಪಾಲಿಸಿ ಹೋಲ್ಡರುಗಳ ಪರವಾಗಿ ಒಬ್ಬೊಬ್ಬ ಡೈರೆಕ್ಟರು ಇರುವ ಕಂಪನಿಗಳು ೧೦, ಒಂದು ಕಂಪೆನಿಯಲ್ಲಿ ಇಬ್ಬರೂ, ಒಟ್ಟು ೧೧ ಕಂಪೆನಿಗಳೇ

ಇದ್ದುವು. ೧೯೦೭ ನೇ ಇಸ್ವಿಯಲ್ಲಿ ಇದ್ದ ಕಂಪನಿಗಳಿಗಿಂತ ೧೯೩೪ ಇಸ್ವಿಯ ನಂತರ ಏರ್ಪಟ್ಟ ಕಂಪನಿಗಳಲ್ಲಿಯೇ ಈ ಏರ್ಪಾಟು ಚೆನ್ನಾಗಿ ಮಾಡಲ್ಪಟ್ಟಿರುವುದು.

ಏಜಂಟರುಗಳ ಪರವಾಗಿ ಬಂಗಾಳಾದೇಶದಲ್ಲಿರುವ "ರಾಡಿಕಲ್ ಇನ್ಷ್ಯೂರೆನ್ಸ್ ಕಂಪೆನಿ"ಯಲ್ಲಿ ಒಬ್ಬ ಡೈರೆಕ್ಟರು ಇದ್ದರು.

ಈ ವಿಷಯದಲ್ಲಿ ಫ್ಯಾಕ್ಟರಿ ಬಂಡವಾಳಗಾರರಿಗೂ ಜಮೀಂದಾರರಿಗೂ ಇವರ ವ್ಯಾಪಾರ ಸಾಪಾರ ಸಂಬಂಧವು ಸಾಗಲು ಕಾರ್ಮಿಕ ಕರ್ಷಕರ ಸಂಖ್ಯೆಯು ಹೆಚ್ಚಾಗಿ ಹೇಗೆ ಇರಬೇಕೋ ಆ ರೀತಿಯಾಗಿಯೇ ಈ ಕಂಪೆನಿಗಳಿಗೂ ಕೂಡ ಹೆಚ್ಚು ಪಾಲಿಸಿ ಹೋಲ್ಡರುಗಳೂ, ಪಾಲಿಸಿ ಹೋಲ್ಡರುಗಳಿಗಿಂತ ಕಮ್ಮಿಯ ಸಂಖ್ಯೆಯಾಗಿ ಏಜಂಟರುಗಳೂ ಇರಬೇಕು. ಈ ಉಭಯತ್ರರ ಪರವಾಗಿ ಕಂಪನಿಯ ಡೈರೆಕ್ಟರುಗಳಲ್ಲಿ ⅓ ಭಾಗದ ಡೈರೆಕ್ಟರುಗಳೂ, ಪಾಲಿಸಿ ಹೋಲ್ಡರುಗಳೂ, ಏಜಂಟರೂ ಇರುವುದು ಉತ್ತಮವೆಂಬ ಪ್ರಬೋಧವು ಹೊರಬರುವುದಾಯಿತು.

ಈ ವಿಷಯದಲ್ಲಿ ಕಾಂಗ್ರೆಸ್ ನಾಯಕರಿಂದ ಸ್ಥಾಪಿಸಲ್ಪಟ್ಟ ವಿಮಾ ಕಂಪನಿಗಳಲ್ಲಿ ಮೇಲಿನ ರೀತಿ ಬದಲಾವಣೆಗಳಿಗೆ ಏಜೆಂಟರ ಸಂಘ, ಪಾಲಿಸಿ ಹೋಲ್ಡರುಗಳ ಪ್ರಾತಿನಿಧ್ಯವನ್ನುಂಟುಮಾಡುವ ತೀರ್ಮಾನಗಳು ನಡೆದವು; ಕಾಂಗ್ರೆಸ್‌ನವರಿಂದ ಸ್ಥಾಪಿತವಾಗಿ ಕಾಂಗ್ರೆಸ್ ಅಧ್ಯಕ್ಷ ಯಿಗಳ ಯಾಜಮಾನ್ಯದಿಂದ ನಡೆಸಲ್ಪಡುವ ವಿಮಾ ಕಂಪನಿಗಳಲ್ಲಿಯೂ ಕೂಡ ಈ ತೀರ್ಮಾನಗಳು ಶೀಘ್ರವಾದ ... ವಾದ ತತ್ವದಲ್ಲಿರುವುದೆಂಬ ಧೋರಣೆಯು ಹೊರ... ಆಂಧ್ರ ದೇಶದಲ್ಲಿ ಏರ್ಪಟ್ಟ ವಿಮಾ ಕಂಪನಿಗಳ... ಏಜೆಂಟರು, ಪಾಲಿಸಿ ಹೊಲ್ಡರುಗಳ ಡೈರೆಕ್ಟರುಗಳಲ್ಲಿ ... ಪ್ರಾತಿನಿಧ್ಯವಿತ್ತು. ಪ್ರಜಾ ಸಾಮಾನ್ಯಕ್ಕೆ ವಿಮಾ ಸೌ... ವನ್ನು ಹೆಚ್ಚಾಗಿ ವ್ಯಾಪಿಸುವುದರಲ್ಲಿ ನವೀನ ಮಾರ್ಗ... ತುಳಿಯುದಕ್ಕೆ ಸ್ವಲ್ಪ ಹಿಂದುಳಿದಿರುವರು. ವಿಮಾ ವ್ಯಾಪಾರದ ಇಂದಿನ ಅಭಿರುಚಿಯನ್ನೂ, ಚಲನವಲನಗಳ... ವಿಮಾಭಿರುಚಿಯುಳ್ಳವರೆಲ್ಲರೂ ತಿಳಿದು ವಿಮಾ ವ್ಯಾಪಾರವನ್ನು ಸರ್ವಜನ ಸೌಕರ್ಯದಾಯಕವಾಗುವಂತೆ ಮಾಡುವ...ರಾಗಲಿ !

ಅನುವಾದಕರು:

ಶ್ರೀ|| ಕೊಪ್ಪದ ರಾಮುಸ್ವಾಮಯ್ಯಂಗಾರ್...

ಆನೇಕಲ್ಲು ತಾಲ್ಲೂಕು



# ನಾನು ವಿಮೆ ಮಾಡುವುದು ನನ್ನ ಹೆಂಡತಿಗೆ ಬೇಕಿಲ್ಲ!

ಹೌದು. ಆಕೆಗೆ ಬೇಕಿರುವುದು ನೀವು, ನಿಮ್ಮ ಹಣವಲ್ಲ. ಆಕೆಯು ನಿಮ್ಮ ಮೇಲಣ ಪ್ರೀ... ಯಿಂದ, ನೀವು ಆಕೆಯಿಂದ ದೂರವಾದಂದು ಬರುವ ಹಣವನ್ನು ಕುರಿತು ಯೋಚಿಸಳು. ಆದರೂ ನೀವಿ... ದಾದಂದು ಆಕೆಗೆ ಹಣದ ಅವಶ್ಯಕತೆ ಮತ್ತೂ ಹೆಚ್ಚು ಇರುವುದೆಂಬುದು ನಿಮಗೆ ತಿಳಿಯದೇ?

# ಸತಿಯ ಪ್ರೇಮವೇ ಸತಿಗೆ ಅಪಕಾರವೆಸಗದಿರಲಿ

# ಕರ್ನಾಟಕವೂ ಮತ್ತು ಇನ್ಶ್ಯುರನ್ಸ್ ಕಂಪನಿಗಳು



ಲೇಖಕರು : ಶ್ರೀ|| ಎಂ. ಎಸ್. ಕೇಸರಿ, ಬಿ. ಎ., ಎಲ್‌ಎಲ್. ಬಿ.,
ಮ್ಯಾನೇಜಿಂಗ್ ಏಜನ್ಸಿ ಪಾಲುದಾರರು, ಸ್ವರಾಜ್ ಬ್ಯಾಂಕಿಂಗ್ ಅಂಡ್
ಇನ್ಶ್ಯೂರೆನ್ಸ್ ಕಂಪನಿ, ಲಿಮಿಟೆಡ್, ಧಾರವಾಡ.

**(Mr. M. S. Kesari, B. A , LL. B.,)**

ದುಡ್ಡೇ ದೊಡ್ಡಪ್ಪ ಎಂಬ ಗಾದೆಯನ್ನು ಎಲ್ಲರೂ ಕೇಳಿದ್ದಾರೆ, ದುಡ್ಡಿನಲ್ಲಿ ಅಗಾಧವಾದ ಶಕ್ತಿ ಇದೆ ಎಂಬದನ್ನು ಎಲ್ಲರೂ ತಿಳಿದಿದ್ದಾರೆ. ಪ್ರಾಣಿಗಳ ಜೀವ ಬಲಕ್ಕೆ ರಕ್ತವು ಹ್ಯಾಗೋ ಗಿಡಬಳ್ಳಿಗಳಿಗೆ ರಸವು ಹ್ಯಾಗೋ ಹಾಗೆಯೇ ಮನುಷ್ಯ ಜೀವನಕ್ಕೆ ದುಡ್ಡು. ಆರಸೊತ್ತಿಗೆಯ ಅಧಿಕಾರ ಸೌಂದರ್ಯಗಳು ಸ್ವಾಮಿಗಳ ಆನೆ ಒಂಟೆ ಕುದುರೆಗಳು ದುಡ್ಡಿನ ಬಲದ ಮೇಲೆ ಅವಲಂಬಿಸಿರುತ್ತವೆ.

ಪುರುಷಾರ್ಥವನ್ನು ಬೋಧಿಸುವ ವೇದಾಂತಿಗಳು, ದುಡ್ಡನ್ನು ತುಚ್ಛವೆಂದು ಬೋಧಿಸುವ ಪುರಾಣಿಕರು, ಶಿವಕೀರ್ತಿ ಹರಿಕೀರ್ತಿಗಳು ಹೇಳುವ ಕೀರ್ತನಕಾರರು, ಯಾವತ್ತರೂ ತಮ್ಮ ಬೋಧನೆ ಕೀರ್ತನೆಗಳು ಮುಗಿದ ಕೂಡಲೇ ಕಾಣಿಕೆಗಳಿಗಾಗಿ (ದುಡ್ಡಿಗಾಗಿ) ತಮ್ಮ ಕರ್ಪೂರದಾರತಿಗಳನ್ನು ಮುಂದೆ ಮಾಡುವರು.

ಕೂಸು ಹುಟ್ಟಿದಾಗ ದುಡ್ಡು ಬೇಕು ; ಆದರ ಬೆಳವಣಿಗೆಗೆ ದುಡ್ಡು ಬೇಕು ; ಅದರ ವಿದ್ಯಾಭ್ಯಾಸಕ್ಕೆ ದುಡ್ಡು ಬೇಕು. ಕೂಸು ಬೆಳೆದು ದೊಡ್ಡದಾದ ಮೇಲೆ ಮದುವೆ ಮುಂಜಿಗಳಿಗೆ ದುಡ್ಡು ಬೇಕು ; ಹೆಚ್ಚೇಕೆ ಮನುಷ್ಯನು ಸತ್ತಮೇಲೆ ಅವನ ಅಂತ್ಯಕರ್ಮಗಳಿಗೆ ದುಡ್ಡು ಬೇಕು.

ನಾವು ದುಡ್ಡಿನ ಮಹತ್ವವನ್ನು ತಿಳಿಯಲಿ ಅಥವಾ ತಿಳಿಯದೆ ಇರಲಿ ನಾವು ನಿತ್ಯ ಕೆಲಸದಲ್ಲಿ ತೊಡಗಿರ ಬೇಕಾಗುತ್ತದೆ, ಇಲ್ಲದೆ ಹೋದರೆ ನಮ್ಮ ಸಂಸಾರ ಯಾತ್ರೆಯು ಸರಿಯಾಗಿ ಸಾಗುವದಿಲ್ಲ. ಅಂದಮೇಲೆ ನಾವು ದಿನಾಲು ದುಡ್ಡನ್ನು ಸಂಪಾದಿಸುವ ಕಾರ್ಯದಲ್ಲಿ ತೊಡಗಿರುತ್ತೇವೆ.

ದ್ರವ್ಯಾರ್ಜನೆಯನ್ನು ತಿಳಿದಾಗಲಿ ತಿಳಿಯದಾಗಲಿ ಎಲ್ಲರೂ ಮಾಡುತ್ತಾರೆ. ಕೆಲವರು ತುಸ ದುಡಿಯುವರು ಕೆಲವರು ಜಾಸ್ತಿ ದುಡಿಯುವರು. ವೈಸರಾಯರು ಗವರ್ನರರು ಹೈಕೋರ್ಟ ಜಡ್ಜರು, ಎಕ್ಸಿಕ್ಯೂಟಿವ್ ಕೌನ್ಸಿಲರು ಮಿನಿಸ್ಟರರು ದಿವಾನರು ಮುಂತಾದ ಅಧಿಕಾರಿಗಳು, ಘಾಘಾ ಬಿರ್ಲಾ ಮುಂತಾದ ವ್ಯಾಪಾರಿಗಳು ಲಕ್ಷಗಟ್ಟಲೆ ದುಡ್ಡನ್ನು ಗಳಿಸುತ್ತಾರೆ.

ಮೊದಲಿಗೆ ದುಡ್ಡನ್ನು ಗಳಿಸುವದು ಕಷ್ಟ ; ಆ ಮೇಲೆ ಅದನ್ನು ಉಳಿಸುವದು ಅದಕ್ಕಿಂತ ಕಷ್ಟ : ಉಳಿಸಿದ್ದನ್ನು ಕಾಧಿಡುವದು ತೀರಕಷ್ಟ ; ಕಾದಿಟ್ಟರೂ ಅದನ್ನು ಇಡುವ ಯೋಗ್ಯಸ್ಥಳವನ್ನು ಕಂಡುಹಿಡಿಯುವದು ಎಲ್ಲಕ್ಕಿಂತಲೂ ಹೆಚ್ಚಿನ ಕಷ್ಟ.

ಕೆಲವರು ದುಡ್ಡನ್ನು ಹುಗಿದಿಡುವರು, ಚಿನ್ನ ಬೆಳ್ಳಿಯ ಒಡವೆಗಳನ್ನಾಗಲೀ ಅಥವಾ ವಜ್ರ ವೈಢೂರ್ಯಗಳ ಒಡವೆಗಳನ್ನಾಗಲೀ ಮಾಡಿಸಿ ಇಡುವರು. ಮತ್ತೆ ಕೆಲವರು ದ್ರವ್ಯವನ್ನು ಕಾದಿಡುವದರ ಜೊತೆಗೆ ಆ ದ್ರವ್ಯವು ಹೆಚ್ಚಿನ ದ್ರವ್ಯವನ್ನು ದುಡಿಯುವಂತೆ ಯೋಚನೆಯನ್ನು ಮಾಡುವರು.

ದ್ರವ್ಯವು ದ್ರವ್ಯವನ್ನು ದುಡಿಯುವಂತೆ ಮಾಡುವ ಯೋಚನೆಗಳು ಅನೇಕ ಉಂಟು. ಅದರಲ್ಲಿ ನಾವು ಕಾದಿಟ್ಟ ದ್ರವ್ಯವನ್ನು ಬ್ಯಾಂಕಿನಲ್ಲಿ ಇಡುವದು ಒಂದು ವಿಧವು ಇನ್ಶ್ಯೂರೆನ್ಸ್ ಕಂಪನಿಗಳಲ್ಲಿ ದುಡ್ಡನ್ನು ಇಡುವದು

ಮತ್ತೊಂದು ವಿಧವು. ದುಡ್ಡನ್ನು ಇಡುವ ವಿಧಾನಗಳಲ್ಲಿ ಇವೆರಡು ಉತ್ತಮವಾದವೆಂದು ಶಾಸ್ತ್ರಜ್ಞರ ಮತವು.

ದುಡ್ಡನ್ನು ಕಾದಿಡುವ ಇವೆರಡು ಸಂಸ್ಥೆಗಳಲ್ಲಿ ಇನ್ಸ್ಯುರೆನ್ಸ್ ಕಂಪನಿಗಳು ಬ್ಯಾಂಕಿಗಿಂತ ಒಳ್ಳೆಯವೆಂದು ಅರ್ಥಶಾಸ್ತ್ರಜ್ಞರು ತಮ್ಮ ಅಭಿಪ್ರಾಯವನ್ನು ಕೊಟ್ಟದ್ದಾರೆ. ಇನ್ಸ್ಯುರೆನ್ಸ್ ಕಂಪನಿಗಳಲ್ಲಿ ಇನ್ಸ್ಯೂರ್ ಮಾಡಿಸುವದರಿಂದ ಮಾಡಿಸುವವರಿಗೆ ದುಡ್ಡು ಉಳಿದು ಅವರಿಗೆ ಹಿತವಾಗುವದಲ್ಲದೆ ದೇಶಕ್ಕೆ ಹಿತವಾಗುವದು.

ಪಂಡಿತ ಜವಾಹರಲಾಲರು ನಮ್ಮ ದೇಶದಲ್ಲಿ ವಿಮಾ ಕಂಪನಿಗಳು ಹೆಚ್ಚಾಗಬೇಕು. ನಮ್ಮ ದೇಶೀಯರು ತಮ್ಮ ಕಂಪನಿಗಳಲ್ಲಿಯೇ ವಿಮೆಯನ್ನು ಇಳಿಸಬೇಕು. ಎಂದು ಹೇಳಿದ್ದಾರೆ-ಜವಾಹರಲಾಲರ ತಂದೆಯವರಾದ ಪಂಡಿತ ಮೋತಿಲಾಲರು ಲಾಲಾ ಲಜಪತರಾಯರು; ಡಾಕ್ಟರ ಅನಸಾರಿಯವರು; ಪಿ. ಸಿ. ರಾಯರವರು ಮುಂತಾದ ನಮ್ಮ ದೇಶಭಕ್ತರು ವಿಮೆಯ ಕಂಪನಿಗಳನ್ನು ಸ್ಥಾಪಿಸಿದ್ದಾರೆ.

ಯೋಗ್ಯರೀತಿಯಿಂದ ನಡೆಯಿಸಿದ ವಿಮೆಯ ಕಂಪನಿಗಳು ಎಂದೂ ಹಾಳಾಗುವ ಸಂಭವವಿರುವದಿಲ್ಲ. ನಮ್ಮ ದೇಶದಲ್ಲಿ ವಿಮೆಯ ಕಂಪನಿಗಳು ಮೊದಲಿಗೆ ಸ್ಥಾಪಿತವಾದ ಕಾಲದಲ್ಲಿ ನಮ್ಮ ದೇಶೀಯರಿಗೆ ಕಂಪನಿಗಳನ್ನು ನಡೆಯಿಸಲಿಕ್ಕೆ ಬರುವದಿಲ್ಲೆಂದೂ ಅವರಲ್ಲಿ ವಿಮೆಯನ್ನು ಮಾಡಿಸಿದವರೂ ದುಡ್ಡು ಹಾಕಿದವರೂ ಹಾಳಾಗುತ್ತಾರೆಂದೂ ಜನರಿಗೆ ಅಪನಂಬಿಕೆ ಇದ್ದಿತು. ಆದರೆ ಮೊದಲಿಗೆ ಸ್ಥಾಪಿತವಾದ ಬಹುತರ ಎಲ್ಲಾ ಕಂಪನಿಗಳೂ ಊರ್ಜಿತಾವಸ್ಥೆಯಲ್ಲಿ ಇರುವವು.

ಇತ್ತಿತ್ತಲಾಗಿ ನಮ್ಮ ದೇಶದಲ್ಲಿ ವಿಮೆಯ ಕಂಪನಿಗಳು ಹೆಚ್ಚಾಗ ಹತ್ತಿವೆ. ಇದೊಂದು ಸುಚಿನ್ಹವು. ಆದರೆ ಕಂಪನಿಗಳು ಬೇಕಾಗುವದಕ್ಕಿಂತ ಹೆಚ್ಚಾದವೆಂದು ಮಾತ್ರ ಯಾರೂ ತಿಳಿಯಬಾರದು. ಈಗ ಹಿಂದುಸ್ಥಾನದಲ್ಲಿ ಇರುವ ಕಂಪನಿಗಳ ನಾಲ್ಕರಷ್ಟು ಕಂಪನಿಗಳಾದರೂ ಕಂಪನಿಗಳಿಗೆ ನಮ್ಮ ದೇಶದಲ್ಲಿ ಕೆಲಸವಿದೆ ಪರದೇಶಗಳಲ್ಲಿ ವಿಮೆಯನ್ನು ಮಾಡಿಸಿರುವವರ ಸಂಖೆಗಳಿಗೂ ನಮ್ಮ ದೇಶದಲ್ಲಿ ಇಳಿಸಿದವರ ಸಂಖೆಗೂ ಸರಿಹಚ್ಚಿ ನೋಡಿದಲ್ಲಿ ಈ ಸತ್ಯತೆಯು ಕಂಡು ಬರುವದು.

ಮುಂಬಯಿ ಕಲಿಕತ್ತೆಗಳಲ್ಲಿ ವಿಮೆಯ ಕಂಪನಿಗಳು ಸ್ಥಾಪಿತವಾಗಿ ಬಹಳ ದಿವಸಗಳಾಗುತ್ತಾ ಬಂತು. ಕರ್ನಾಟಕದಲ್ಲಿ ವಿಮೆಯ ಕಂಪನಿಗಳು ಇತ್ತಲಾಗಿ ಸ್ಥಾಪಿಲ್ಪಡ ಹತ್ತಿವೆ.

ಹಿಂದುಸ್ಥಾನದೇಶದಲ್ಲಿ ಬಂಗಾಲಿಗಳು ಪಂಜಾಬಿಗಳು ಮಹರಾಷ್ಟ್ರ ದೇಶದವರೂ ಪ್ರಸಿದ್ಧಿಗೆ ಬಂದಿರುವರು. ಆದರೆ ಕರ್ನಾಟಕಸ್ಥರ ಹೆಸರನ್ನು ಮಾತ್ರ ಯಾರೂ ಕೇಳಿಲ್ಲ. ಕರ್ನಾಟಕಸ್ಥರ ಈ ಸ್ಥಿತಿಗೆ ಅನೇಕ ಕಾರಣಗಳುಂಟು. ಆದರೆ ಒಂದು ಮುಖ್ಯ ಕಾರಣವೆಂದರೆ ಕರ್ನಾಟಕಸ್ಥರು, ನಮಗೆ ಇತಿಹಾಸವಿದೆ, ನಮಗೆ ಪ್ರತ್ಯೇಕ ಭಾಷೆಯದೆ, ನಮಗೆ ಬೇರೆ ವಾಙ್ಮಯವಿದೆ, ನಮಗೆ ಬೇರೆ ಸಂಸ್ಕೃತಿ ಇದೆ. ನಮ್ಮ ಪೂರ್ವಜರು ದೊಡ್ಡ ದೊಡ್ಡ ರಾಜ್ಯಸ್ಥಾಪಕರಾಗಿದ್ದರು, ವೇದಾಂತಿಗಳಾಗಿದ್ದರು ಕವಿಗಳಾಗಿದ್ದರು; ಶಾಸ್ತ್ರಜ್ಞರಾಗಿದ್ದರು; ಶೂರರಾಗಿದ್ದರು; ಅವರ ವೀರರಕ್ತವು ನಮ್ಮ ರಕ್ತ ನಾಳಗಳಲ್ಲಿ ಹರಿಯುತ್ತಿದೆ. ನಾವು ಉಳಿದ ನಮ್ಮ ಬಾಂಧವರ ಹಿಂದೆ ರಾಷ್ಟ್ರದಲ್ಲಿ ನಮ್ಮ ಯೋಗ್ಯಸ್ಥಾನವನ್ನು ಪಡೆಯಲಿಕ್ಕೆ ಅರ್ಹರಾಗಿರುತ್ತೇವೆಂಬ ಆತ್ಮ ವಿಶ್ವಾಸವನ್ನು ಯೋಗ್ಯರೀತಿಯಿಂದ ಮನನ ಮಾಡಿಕೊಳ್ಳಬೇಕು.

ಈ ಪ್ರಕಾರದ ಆತ್ಮ ವಿಶ್ವಾಸವು ನೆಲಗೊಳ್ಳದೆ ಯಾವ ದೊಡ್ಡ ಕೆಲಸಗಳೂ ನೆರವೇರಲಾರವು. ಇತ್ತೀಚಿಲಾಗಿ ಈ ತರಹದ ಆತ್ಮವಿಶ್ವಾಸವು ನೆಲಗೊಳ್ಳ ಹತ್ತಿದೆ.

ಇನ್ಸ್ಯುರೆನ್ಸ್ ಕಂಪನಿಗಳು ಕರ್ನಾಟಕದಲ್ಲಿ ಭರದಿಂದ ಬೆಳೆಯಬೇಕಾದರೆ ನಾವೆಲ್ಲರೂ ಮೊದಲು ಕರ್ನಾಟಕದ ಸಂಸ್ಥೆಗಳನ್ನು ಯೋಗ್ಯರೀತಿಯಿಂದ ಪೋಷಿಸಬೇಕು. ನಮ್ಮ ಜನರು ಯಾವತ್ತರೂ ಕರ್ನಾಟಕದ ಇನ್ಸ್ಯುರೆನ್ಸ್ ಕಂಪನಿಗಳಲ್ಲೇ ವಿಮೆಯನ್ನು ಮಾಡಿಸಬೇಕು.



# ವಿಮಾ-ವಾಣಿಜ್ಯವೂ ಕರ್ಣಾಟಕವೂ



ಲೇಖಕರು :
ಶ್ರೀ|| ಯು. ಗಣೇಶ ಶೆಣೈ,
ಮ್ಯಾನೇಜರ್ "ಕಂಠೀರವ"
ಮಂಗಳೂರು.
(Mr. U. Ganesha Shanai)

### ಜೀವನವು ಅನಿಶ್ಚಿತವು
### ಆದರೆ
### ಜೀವವಿಮೆಯು ನಿಶ್ಚಿತವು

ನಶ್ವರವಾದ ಈ ಪ್ರಪಂಚದಲ್ಲಿ ಒಂದು ಘಟನೆಯು ಸಂಭವಿಸುವದು ನಿಶ್ಚಯವು-ಅದೇ ಮರಣವು. ಅಂತೆಯೇ ಇನ್ನೊಂದು ಸಂದರ್ಭವು ಅನಿಶ್ಚಿತವು—ಅದುವೇ ಮರಣವು ಸಂಭವಿಸುವ ಸಮಯವು. ಹುಟ್ಟಿದವನು ಎಂದಾದರೂ ಒಂದು ದಿನ ಸಾಯಲೇ ಬೇಕು ಸಾವು ಆರನ್ನೂ ಬಿಟ್ಟಿಲ್ಲ. ಆದುದರಿಂದ ತನ್ನ ಜೀವವನ್ನು ವಿಮೆಮಾಡುವದು ಪ್ರತಿಯೊಬ್ಬ ಮಾನವನ ಆದ್ಯ ಕರ್ತವ್ಯವಿರುತ್ತದೆ.

ಜೀವವಿಮೆಯು ಇಂದು ಪ್ರಪಂಚದಲ್ಲಿ ದುಂದುಗಾರಿಕೆಯೆಂದು ಎಣಿಸಲ್ಪಡದೆ, ಆವಶ್ಯಕವೆನಿಸಲ್ಪಡುತ್ತಿದೆ. ಯುಕ್ತರೀತಿಯಲ್ಲಿ ನಡೆಸಲ್ಪಡುತ್ತಿರುವ ಜೀವವಿಮೆಯು ಮಾನವ ವರ್ಗಕ್ಕೆ ಅತ್ಯಂತ ಉಪಕಾರಿಯಾಗಿರುತ್ತದೆ. ಯಾವ ರೀತಿಯಿಂದ ನೋಡಿದರೂ ಇಂದಿನ ಜೀವನ ಕ್ರಮದಲ್ಲಿ ಅದು ಅತ್ಯಾವಶ್ಯಕವಾಗಿರುತ್ತದೆ. ಜೀವವಿಮೆಯು ವಿಮಾದಾರನನ್ನು ಸಂರಕ್ಷಣೆಮಾಡುವದು ಮಾತ್ರವಲ್ಲದೆ ಅರುವಿಲ್ಲದನೇ ಧರ್ಮಕಾರ್ಯಗಳನ್ನೆ ಸಗಿಸುತ್ತದೆ. ಅಷ್ಟೇ ಅಲ್ಲ; ಸಾಮಾಜಿಕ ಸೇವೆಯನ್ನೂ, ಅಲ್ಪಾಯುಷಿಗಳ ಹಾಗೂ ಬಡಬಗ್ಗರ ಕುಟುಂಬಗಳಿಗೆ ಪರೋಪಕಾರವನ್ನೂ ಮಾಡಿಸುತ್ತದೆ.

ಜೀವವಿಮಾ ಕ್ಷೇತ್ರದಲ್ಲಿ ಇಂದು ನಾನಾ ವಿಭಾಗಗಳಿರುವದರಿಂದ ಯಾರೊಬ್ಬನೂ ಅದು ತನಗೆ ಸರಿಯಾದುದಲ್ಲವೆಂದು ಅಡ್ಡಿ ಹೇಳಲು ಸಾಧ್ಯವಿರುವದಿಲ್ಲ. ತನ್ನನ್ನು ಹೊಂದಿಕೊಂಡಿರುವವರ ರಕ್ಷಣಾರ್ಥವಾಗಿ ಮಾಡಬೇಕಾದ ಆದ್ಯ ಕರ್ತವ್ಯವನ್ನು ಹಿಂದೆ ಹಾಕಲು ಯಾವ ಉಪಾಯವೂ ಸಿಗಲಾರದು. ಧನ ಸಂಪತ್ತಿಯುಳ್ಳವನು ತನ್ನ ಹೆಂಡತಿ ಮಕ್ಕಳ ಸಲುವಾಗಿ ತಾನೇನೂ ಕೂಡಿಡಬೇಕಾದುದಿಲ್ಲವೆನ್ನಬಹುದು. ಮಕ್ಕಳಿಲ್ಲದವನು ತಾನು ಯಾರಿಗೂ ಸಂಚಯಿಸಿಡಬೇಕಾದುದಿಲ್ಲವೆಂದೂ ವಿಧವೆಯರಿಗೆ ಹಿಂದೂಸ್ಥಾನದಲ್ಲಿ ಕಷ್ಟಪಟ್ಟು ಜೀವನವನ್ನು ನಡೆಸುವದು ಅಸಾಧ್ಯವಲ್ಲವೆಂದೂ ಹೇಳಬಹುದು. ಅಂಥವರಿಗೆ ಪ್ರಶ್ನೆಯೆಂದರೆ 'ನಿಮಗಾರೂ ಬಡ ಕುಟುಂಬಿಗಳಿಲ್ಲವೇ? ನಂಬಿಗಸ್ಥರಾದ ಕೆಲಸಗಾರರಿಲ್ಲವೇ ? ನಿಮ್ಮ ನಾಡಿನಲ್ಲಿ ಆಸ್ಪತ್ರೆಗಳಾಗಲಿ, ಶಾಲೆಗಳಾಗಲಿ, ಅನಾಥಾಲಯಗಳಾಗಲಿ, ಧರ್ಮಶಾಲೆಗಳಾಗಲಿ ಇಲ್ಲವೇ? ಅಂಥವುಗಳಿಗೇಕೆ ಧನವನ್ನು ಸಂಚಯಿಸಿಡಬಾರದು? ಪ್ರತಿಯೊಂದು ದೇಶದಲ್ಲಿಯೂ ಆಯಾಯ ದೇಶದ ವಿಮಾ ಸಂಘಗಳಿದ್ದಲ್ಲಿ ಆ ದೇಶದ ಆರ್ಥಿಕಸ್ಥಿತಿಯು ಅಭಿವೃದ್ಧಿಯಾಗಲನುವಾಗುವದು. ಜೀವವಿಮೆಯು ಯಾರನ್ನೂ ಮರಣದಿಂದ ಪಾರಾಗಿಸುವದಿಲ್ಲ. ಆದರೆ ಆತನ ಕುಟುಂಬವನ್ನು ನಿರ್ಗತಿಕವಾಗಲು ಬಿಡುವದಿಲ್ಲ. ಆದುದರಿಂದ ಪ್ರತಿಯೊಬ್ಬ ದುಡಿಯುವವನು ತನ್ನ ಕುಟುಂಬಕ್ಕೆ ತನ್ನ ಮರಣದ ನಂತರದ ಜೀವನಕ್ಕೆ ತಕ್ಕ ಧನ ಸಂಗ್ರಹವನ್ನೂ, ತನ್ನ ಮುಪ್ಪಿನ ಕಾಲದ ಜೀವನಕ್ಕೆ ತಕ್ಕ ಆಪದ್ಧನವನ್ನೂ ಮಾಡಿಡಲೇಬೇಕು.

ಜೀವವಿಮಾ ಪದ್ಧತಿಯು ಪೂರ್ವದ ರೋಮನರಿಂದ ಆರಂಭಿಸಲ್ಪಟ್ಟಿತೆಂದು ಚರಿತ್ರಕಾರರು ಅಭಿಪ್ರಾಯಪಡುತ್ತಾರೆ ಆದರೆ ನಮ್ಮ ಮಾತೃ ಭೂಮಿಯಲ್ಲಿ ಇದೇನೂ ತೀರ ಹೊಸದಾದ ಪದ್ಧತಿಯಲ್ಲ. ಸತ್ಯಪಿರನ 'ಸಿನ್ನಿ' ಕ್ರಮವು ಜೀವವಿಮೆಯ ಬಹಳ ಪೂರ್ವದ ರೂಪಗಳಲ್ಲೊಂದು. ಪೂರ್ವಕಾಲದಲ್ಲಿ ವಿಧವೆಯರು ದೂರದೇಶಗಳ ಯಾತ್ರೆಗಾಗಿ ಹೊರಡುವಾಗ ತಮ್ಮ ಯಾವತ್ತು ಬದುಕನ್ನು ನೆರೆಕೆರೆಯಲ್ಲಿದ್ದ ಧನಿಕರ ವಶಕ್ಕೆ ಕೊಟ್ಟು ಯಾವಜ್ಜೀವವೂ ಮಾಸಾಶನವನ್ನು ಪಡೆಯುತ್ತಿದ್ದ ಕ್ರಮವು ಅಪರೂಪವಾದುದಲ್ಲ. ಆದರೆ ಈ ಕ್ರಮಗಳನ್ನೇ ಶಾಸ್ತ್ರೀಯ ರೀತ್ಯ ಉಪಯೋಗಿಸಿ ತಕ್ಕ ನಿಯಮ ನಿಬಂಧನೆಗಳನ್ನೇ

ರ್ಪಡಿಸಲೂ ಯಾರೂ ಆ ಕಾಲದಲ್ಲಿ ಪ್ರಯತ್ನಿಸಲಿಲ್ಲ. ಆ ಭಾಗ್ಯವು ವಿದೇಶೀಯರ ಪಾಲಿಗೇ ಹೋಗಬೇಕಾಯಿತು. ಇಂದು ಇಂಗ್ಲಾಂಡ್, ಅಮೇರಿಕಾ, ಜರ್ಮನಿ ರಾಜ್ಯಗಳ ಕೆಲವು ಕಂಪೆನಿಗಳ ಅಭಿವೃದ್ಧಿ ವಿವರಗಳನ್ನು ಪರಿಶೀಲಿಸುವಾಗ ಜೀವವಿಮಾ ಸಂಘಗಳು ಹೇಗೆ ರಾಜ್ಯದ ಬೆಳವಣಿಗೆಗೆ ಸಹಾಯ ಕಾರಿಗಳಾಗಬಹುದೆಂಬವನ್ನು ತಿಳಿಯಬಹುದು.

ಜೀವವಿಮಾ ಕಾರ್ಯದಲ್ಲಿ ಪ್ರತಿಯೊಂದು ನಾಗರೀಕ ಜನಾಂಗವು ಮುಂದುವರಿಯುತ್ತಿದ್ದರೂ ನಮ್ಮ ಮಾತೃಭೂಮಿಯು ಇನ್ನೂ ಹಿಂದುಳಿದಿರುತ್ತದೆ. ಸರಾಸರಿಯಲ್ಲಿ ನೋಡಿದರೆ ಹಿಂದೀಯನ ೭೫೦ ಪಾಲರಷ್ಟು ಜೀವವಿಮೆಯನ್ನು ಅಮೇರಿಕದವನು ಮಾಡುತ್ತಿರುವನು. ಅಮೇರಿಕದಲ್ಲಿ ಸುಮಾರು ೬೭,೫೦೦೦ ಮಂದಿ ವಿಮಾ ಏಜಂಟರುಗಳಾಗಿ ಜೀವನವನ್ನು ನಡೆಸುತ್ತಿರುವರು. ಅಲ್ಲಿ ಸುಮಾರು ೧,೧೦೦ ರಷ್ಟು ಕಂಪೆನಿಗಳಿದ್ದು ಅವುಗಳಲ್ಲಿ ಸುಮಾರು ೨೦೦,೦೦೦ ಕೆಲಸಗಾರರಿರುವರು. ಅಂದರೆ ಈ ಉದ್ಯೋಗದಿಂದಲೇ ಆ ರಾಜ್ಯದಲ್ಲಿ ಸುಮಾರು ೯೦೦,೦೦೦ ಕುಟುಂಬಗಳ ಜೀವನವು ಸಿಗುವದು. ಆದರೆ ನಮ್ಮ ದೇಶದಲ್ಲಿ ಈ ಉದ್ಯೋಗವನ್ನು ಕೈಕೊಂಡಿರುವವರು ಸುಮಾರು ೧೫೦,೦೦೦ ಮಂದಿ ಎಂದರೆ ಅತಿಶಯೋಕ್ತಿಯಾಗಬಹುದು. ವಿಮಾ ಮೊಬಲಗಿನ ಮಟ್ಟಿಗೂ ನಮ್ಮ ದೇಶದ ಲೆಕ್ಕ ಪತ್ರಗಳನ್ನು ನೋಡಿದರೆ ಹಿಂದೀ ಶ್ರೀಮಂತರರಾದರೂ ಹೆಚ್ಚಾದರೆ ಕೆಲವು ಲಕ್ಷಗಳ ಮಟ್ಟಿಗೆ ವಿಮೆಯನ್ನಿಳಿಸಿರಬಹುದು. ಆದರೆ ಒಂದೆರಡು ವರ್ಷಗಳ ಕೆಳಗೆ ಅಮೇರಿಕದ 'ಮೋಟಾರು ರಾಜ' ನೊಬ್ಬನು ಒಮ್ಮೆಗೇ ೨೦೦ ಮಿಲಿಯಡಾಲರುಗಳಿಗೆ ವಿಮೆಯನ್ನಿಳಿಸಿದುದರಿಂದ ಅಲ್ಲಿಯ ಕಂಪೆನಿಗಳಿಗೆ ಪರದೇಶದ ಕಂಪೆನಿಗಳೊಡನೆ ವ್ಯವಹಾರನ್ನು ನಡಿಸುವ ಪ್ರಸಂಗವು ಬಂದೊದಗಿತು. ನಮ್ಮ ಭಾರತ ಭೂಮಿಯಲ್ಲಿ ಪ್ರತಿ ೫೦೦ ಜನರಿಗೆ ಒಬ್ಬನಂತೆ ವಿಮೆಇಳಿಸಿದವರಿರುತ್ತಾರೋ ಇಲ್ಲವೊ! ಅಲ್ಲದೆ ವಿಮೆಯ ಸರಾಸರಿಯನ್ನು ತೆಗೆದರೆ ತಲೆಯೊಂದಕ್ಕೆ ರೂ. ೫ ಬರುವದೂ ಅಷ್ಟ. ಅದೇ ಅಮೇರಿಕದಲ್ಲಿ ಪ್ರತಿ ಮೂವರಿಗೆ ಇಬ್ಬರಂತೆ ವಿಮೆಯನ್ನು ಇಳಿಸುತ್ತಿದ್ದು ತಲೆಯೊಂದರ ಸರಾಸರಿ ೨೬೦೦ ರೂಪಾಯಿಗಳ ವಿಮೆ ಇರುತ್ತವೆ. ವಿಮೆಯು ಜೀವನವನ್ನು ಮಾತ್ರ ಆಕ್ರಮಿಸಿಕೊಂಡಿರದೆ, ಬೆಂಕಿಮನೆ ನಾರು, ಅನಾಹುತ, ಅಪಾಯ, ಊನತೆ ಮೊದಲಾದುವುಗಳನ್ನೂ ಆವರಿಸಿಕೊಂಡಿರುತ್ತದೆ.

ಸುಧಾರಿತ ರೀತಿಯ ವಿಮಾ ಕಾರ್ಯವು ನಮ್ಮ ದೇಶದಲ್ಲಿ ೧೮ನೇ ಶತಮಾನದಲ್ಲಿ ಕಾಲೂರಿತು. ಆದ್ದ... ಮಾನದ ಆದಿಯಲ್ಲಿ ಆಗಿನ ದೇಶಭಕ್ತರಲ್ಲಿ ಅಗ್ರಗಣ್ಯ... ರಾಜಾರಾಮ ಮೋಹನ ರಾಯ್, ದ್ವಾರಕಾನಾ... ಠಾಗೋರ್, ರುಸ್ತುಮ್ಜಿ ಕಾವಾಸ್ಜಿ, ಕಾಮ್ದಾನುಜ... ಮೊದಲಾದ ಪ್ರಭುಮತಿಗಳು ಈ ದೇಶೋದ್ಧಾರಕ ಕಾರ್ಯ... ಆಸಕ್ತಿಯನ್ನು ತೋರಿಸುವವರಾದರು. ಆದರೆ ವಿ... ಕಂಪೆನಿಗಳು ಮುಖ್ಯವಾಗಿ ಜನನಕ್ಕೆ ಬಂದುದು ೧೯ನೇ ಶ... ಮಾನದಲ್ಲಿ. ೧೯ನೇ ಶತಮಾನದ ಅಂತ್ಯದಲ್ಲಿ ಕೈಬೆರ... ಗಳಿಂದೆಣಿಸಬಹುದಾದಷ್ಟು ಕಂಪನಿಗಳಿದ್ದ ನಮ್ಮ ಭಾ... ಭೂಮಿಯಲ್ಲಿ ಇಂದು ೧೫೦ ರಷ್ಟು ಕಂಪೆನಿಗಳಿದ್ದು... ಹಿಂದೀ ಜನತೆಯು ಈಗೀಗ ಜೀವವಿಮೆಯ ಅಪ್ರ... ವಾದ ಗುಣಗಳನ್ನು ಮನಗಂಡಿರುವದು ಶುಭ ಸೂ... ಚಿಹ್ನೆಯಾಗಿರುತ್ತದೆ. ಮುಂದುವರಿಯುತ್ತಿರುವ ಜೀ... ವಿಮಾ ಕಾರ್ಯಕ್ಷೇತ್ರಕ್ಕೆ ದೊಡ್ಡ ತೊಡಕೆಂದರೆ ವಿಮಾ... ಕಂಪನಿಗಳ ಹೆಸರನ್ನು ಹಾಕಿಕೊಂಡು ಜನರನ್ನು ಬಾಧಿ... ತ್ತಿರುವ ಅಶಾಸ್ತ್ರೀಯ ರೀತಿಯಲ್ಲಿ ನಡೆಸಲ್ಪಡುವ ಕೆಲ... ಸಂಸ್ಥೆಗಳು.

ಸಹಕಾರವೇ ಜೀವವಿಮೆಯೊಳಗಣ ಮೂಲತತ್ವ... ಲ್ಲೊಂದಾಗಿರುತ್ತದೆ. ಆದುದರಿಂದ ಕಂಪನಿಗಳೊಳ... ಕಂಪನಿಗಳ ಕೆಲಸಗಾರರೊಳಗೂ ಪರಸ್ಪರ ಸಹಕಾರವಿ... ವಿಮೆಯನ್ನು ಇಳಿಸುವ ಜನರಿಗೆ ಹೆಚ್ಚಿನ ಭದ್ರತೆಯು ದೊ... ತಂತಾಗುತ್ತದೆ. ಹಿಂದೀ ವಿಮಾ ಕಂಪನಿಗಳಿಂದು ವರ್ಷಕ್ಕೆ ೩೦ ಕೋಟಿ ರೂಪಾಯಿಗಳಷ್ಟು ವಿಮೆಯನ್ನಿಳಿಸುತ್ತಿ... ಇವುಗಳ ವಾರ್ಷಿಕ ಪ್ರೀಮಿಯಂ ಉತ್ಪತ್ತಿಯು ಸುಮಾ... ೫ ಕೋಟಿ ರೂಪಾಯಿಗಳಾಗಬಹುದು ; ಮತ್ತು ಅವುಗಳ ವಿಮಾಫಂಡು ೨೫ಕೋಟಿ ರೂಪಾಯಿಗಳಿಗೂ ಮಿಕ್ಕಿರುತ್ತ... ಜನಾಂಗದ ಅಭಿವೃದ್ಧಿಗಾಗಿ ಜೀವವಿಮೆಯು ಬಹಳ ಸ... ಕಾರಿಯಾಗಿರುತ್ತದೆಂದು ಇದರಿಂದ ತಿಳಿಯಬಹುದು. ಆದುದರಿಂದ ವಿಮಾಸಂಘಗಳು ಹಿಂದೀ ಜನತೆಯಲ್ಲಿ ವಿಮಾ ವಿಷಯಕವಾದ ಶ್ರದ್ಧೆಯು ಇನ್ನಷ್ಟು ಹೆಚ್ಚುವಂತೆ ಬೆಳೆ... ಸಲು ಪ್ರಯತ್ನಿಸಿದಲ್ಲಿ ನಮ್ಮ ರಾಷ್ಟ್ರದ ಅರ್ಥಿಕಸ್ಥಿತಿಯು ಸುಧಾರಿತವಾಗಿ ಉಚ್ಛ್ರಾಯ ಸ್ಥಿತಿಯನ್ನು ಹೊಂದಲನು... ವಾಗುವದು. ದೇಶದ ಕಂಗಾಲತನವು ಮಾಯವಾಗಬೇಕಾ... ದರೆ ಜೀವವಿಮಾ ಕಾರ್ಯವು ಹೆಚ್ಚು ಹೆಚ್ಚಾಗಿ ನಡೆಯ... ಬೇಕು.

ಭಾರತಭೂಮಿಯೇ ಜೀವವಿಮಾ ಕಾರ್ಯಕ್ಷೇತ್ರದಲ್ಲಿ ಮುಂದುವರಿಯುತ್ತಿರುವಾಗ ಭಾರತ ಜನಾಂಗದ ಒಂದು ಭಾಗವಾದ ನಮ್ಮ ಕನ್ನಡನಾಡಾದರೂ ಹಿಂದುಳಿದಿರುವುದೆ...

ಇಂದು ಕನ್ನಡನಾಡಿನಲ್ಲಿಯೂ ಸುವ್ಯವಸ್ಥಿತವಾದ ಕಂಪನಿಗ ಳಿರುವದು ಭಾವೀ ಕರ್ಣಾಟಕದ ಸುಭದ್ರ ಸ್ಥಿತಿಯ ಶುಭ ಚಿಹ್ನೆಯಾಗಿರುತ್ತದೆ. ಕನ್ನಡನಾಡಿನ ಜೀವವಿಮಾ ಕಾರ್ಯವು ರಾಜಾಶ್ರಯದಲ್ಲಿಯೇ ಪ್ರಾರಂಭಿಸಲ್ಪಟ್ಟಿತೆಂದರೆ ಕನ್ನಡಿಗ ರಿಗೆ ಎಷ್ಟೊಂದು ಅಭಿಮಾನಾಸ್ಪದ.

ಮೈಸೂರು ಶ್ರೀಮನ್ಮಹಾರಾಜಾ ಸರಕಾರದ ಅತ್ಯು ಪಯುಕ್ತವಾದ ಮತ್ತು ಪ್ರಜೆಗಳಲ್ಲಿ ಮಿತವ್ಯಯವನ್ನುಂಟು ಮಾಡಿಸತಕ್ಕ ಕಾರ್ಯವೆಂದರೆ ಮೈಸೂರು ಸರಕಾರಿ ಜೀವವಿಮಾ ಯೋಜನೆಯ ಶಾಖೆಯೊಂದನ್ನು ಪ್ರಜೆಗಳಿಗಾಗಿ ಏರ್ಪಡಿಸಿದುದು. ಎಲ್ಲಾ ತರಗತಿಯ ಪ್ರಜೆಗಳಿಗೆ ಸಹಾ ಯಕವಾಗಿ ಅವರಲ್ಲಿ ಮಿತವ್ಯಯವನ್ನುಂಟುಮಾಡುವದ ಕ್ಕಾಗಿ ಸರಕಾರದ ನಂಬ್ರ ೨೭೦೪-೫೩-G. F. ೬೪-೧೫-೧ ನ್ಸ್ ತಾರೀಖು ೧೬-೧೨-೧೫ ರ ಅಪ್ಪಣೆಮೇರೆಗೆ ಈ ಶಾಖೆಯು ಪ್ರಜೆಗಳಿಗಾಗಿ ತೆರೆಯಲ್ಪಟ್ಟಿತು. ಇದರ ಕಾರ್ಯಭಾರವು ಯೋಗ್ಯರಾದ ಸರಕಾರಿ ಮತ್ತು ಬಿನ್ ಸರಕಾರಿ ಸದಸ್ಯರ ಸ್ವಾಧೀನತೆಯಲ್ಲಿದೆ.

ಕರ್ಣಾಟಕದ ಪ್ರಥಮ ವಿಮೆ ಸಂಸ್ಥೆಯಾದ ದಿ ಏಷ್ಯಾಟಿಕ್ ಗವರ್ನಮೆಂಟ್ ಲೈಫ್ ಎಶ್ಯೂರೆನ್ಸ್ ಕಂಪ ನಿಯು ಕೂಡ ಮೈಸೂರು ಸಂಸ್ಥಾನದ ಬೆಂಗಳೂರಲ್ಲೇ ೧೮೭೪ ರಲ್ಲಿ ಜನ್ಮತಾಳಿತು. ಇದು ಇಂದು ಕರ್ಣಾಟಕ ಕಂಪನಿಗಳಲ್ಲೆಲ್ಲಾ ಪುರಾತನವೂ, ದೊಡ್ಡದು ಆಗಿದ್ದು ಬೆಂಗಳೂರಿನಲ್ಲಿ ತನ್ನ ಸ್ವಂತ ಕಟ್ಟಡವನ್ನೇ ಭವ್ಯವಾಗಿ ನಿರ್ಮಿಸುವಷ್ಟು ಭಾಗ್ಯಶಾಲಿಯಾಗಿದೆ.

ಎರಡನೆಯ ಕಂಪನಿಯೂ ಬೆಂಗಳೂರಿನಲ್ಲಿಯೇ ಸ್ಥಾಪಿತವಾಯಿತು. ಇದುವೇ ತಿರುಪತಿ ಬಲಿಜಾ ಮತ್ತು ಕಂಪನಿಯವರ ಚಾಲಕತ್ವದಲ್ಲಿರುವ ದಿ ರಿಲಾಯಿನ್ಸ್ ಎಶ್ಯೂರೆನ್ಸ್ ಕಂಪನಿ. ಇಷ್ಟು ಮೈಸೂರು ಕರ್ಣಾಟಕ ದೊಳಗಣ ಮಾತಾಯಿತು.

ಬ್ರಿಟಿಷ್ ಕರ್ಣಾಟಕದಲ್ಲಿ ಮೊದಲನೆಯದಾದ ವಿಮಾ ಕಂಪೆನಿಯೆಂದರೆ ಮಂಗಳೂರಿನ ದಿ ಪೋಪ್ಯುಲರ್ ಇನ್ಶ್ಯೂರೆನ್ಸ್ ಕಂಪನಿ ಲಿಮಿಟೆಡ್. ಕರ್ಣಾಟಕ ಪತ್ರಿಕಾ ಪ್ರಪಂಚದಲ್ಲಿ ಅದ್ವಿತೀಯ ಸ್ಥಾನವನ್ನು ಪಡೆದಿರುವ ಕಂಠೀ ರವ ಪತ್ರಿಕೆಯ ಸಂಪಾದಕರಾದ ಶ್ರೀಮಾನ್ ಬೋಳಾರ ವಿಠಲರಾಯರೇ ಇದರ ಸಂಸ್ಥಾಪಕರು. ವಿಮಾ ಕಾರ್ಯ ದಲ್ಲಿ ಅನುಭವಶಾಲಿಗಳಾದ ಇವರ ಸಂಚಾಲಕತ್ವದಲ್ಲಿ ಈ ಸಂಸ್ಥೆಯು ಪ್ರಥಮ ಮೌಲ್ಯ ವೇತನದಲ್ಲಿಯೇ ಬೋನಸನ್ನು ಸಾರಿದ ಕರ್ಣಾಟಕದ ಮೊದಲನೇ ಕಂಪನಿಯಾಗು ವಷ್ಟು ಭಾಗ್ಯಶಾಲಿಯಾಗಿರುತ್ತದೆ.

ಮುಂಬಾಯಿ ಕರ್ಣಾಟಕವಾದರೂ ವಿಮಾ ಸಂಘ ವನ್ನು ಸ್ಥಾಪಿಸುವದರಲ್ಲಿ ಮದ್ರಾಸು ಕರ್ಣಾಟಕದ ಹಿಂದು ಳಿಯಲಿಲ್ಲ. ದಿ ಯುನೈಟೆಡ್ ಕರ್ಣಾಟಕದ ಇನ್ಶ್ಯೂ ರೆನ್ಸ್ ಕಂಪನಿ ಲಿಮಿಟೆಡ್ ಧಾರವಾಡದಲ್ಲಿ ಸ್ಥಾಪಿತವಾ ಯಿತು. ಈ ಸಂಸ್ಥೆಯ ಒಂದು ವೈಶಿಷ್ಟ್ಯವೆಂದರೆ ಇದರ ಡೈರೆಕ್ಟರ ಮಂಡಳಿಯಲ್ಲಿ ಸಮಗ್ರ ಕರ್ಣಾಟಕದ ಪ್ರಾತಿ ನಿಧ್ಯವನ್ನು ಕಲ್ಪಿಸಿರುವದು.

ಇಷ್ಟರಲ್ಲಿಯೇ ಆದರ್ಶ ಸಂಸ್ಥಾನದ ಆದರ್ಶ ಜೀವ ವಿಮಾ ಸಂಸ್ಥೆಯನ್ನಾಗಿ ಮಾಡಬೇಕೆಂಬ ಧ್ಯೇಯವನ್ನಿ ಟ್ಟುಕೊಂಡು ಬೆಂಗಳೂರಿನ ಕಂಠೀರವ ಅಂಡ್ ಕಂಪನಿ ಯವರು ದಿ ಮೈಸೂರು ಇನ್ಶ್ಯೂರೆನ್ಸ್ ಕಂಪನಿ ಲಿಮಿ ಟೆಡ್ ಸಂಸ್ಥೆಯನ್ನು ಸ್ಥಾಪಿಸುವವರಾದರು. ಎಲ್ಲಾ ಬಗೆಯಿಂದಲೂ ಮೈಸೂರಿನದೆ ಆದ ಸಂಸ್ಥೆಗಳಲ್ಲಿ ಇದೇ ಮೊಟ್ಟ ಮೊದಲನೆಯದೆಂದು ಸಂಸ್ಥೆಯವರು ಅಭಿಮಾನ ದಿಂದ ನುಡಿಯುವರು. ಭಾರತಮಾತೆಯ ಸುಪುತ್ರರ ನೇಕರ ಆದರ ಆಶೀರ್ವಾದಗಳಿಗೆ ಪಾತ್ರವಾಗಿ ಕನ್ನಡ ನಾಡಿನ ಕೀರ್ತಿಯನ್ನು ಎಲ್ಲ ಬಗೆಯಾಗಿಯೂ ವಿಶ್ವ ವ್ಯಾಪಿಯಾಗಿ ಮಾಡಿ, ಆರ್ಥಿಕ ಉನ್ನತಿಯನ್ನು ಹೊಂದಿ, ರಾಷ್ಟ್ರ ಸಂಪದಭ್ಯುದಯವನ್ನು ಬಯಸ ಬೇಕೆಂದು ಈ ಸಂಸ್ಥೆಯು ಸರ್ವಪ್ರಕಾರದಿಂದಲೂ ಕಾರ್ಯ ವನ್ನೆಸಗುತ್ತಿದೆ. ಎಲ್ಲರಿಗೂ ಅನುಕೂಲವಾದ ಷರತ್ತುಗ ಳಿಂದ ಕೂಡಿದ ಈ ಸಂಸ್ಥೆಯು ಇಷ್ಟರಲ್ಲೇ ತನ್ನ ಕೀರ್ತಿ ಪ್ರಸಾರವನ್ನು ಮೈಸೂರು ಸಂಸ್ಥಾನದಲ್ಲೆಲ್ಲಾ ಮಾಡಿದ್ದು ಸಂಸ್ಥಾನದ ಹೊರಗೂ ತನ್ನ ಸೇವಾ ಕಾರ್ಯವನ್ನು ಮಾ ಡಲು ತೊಡಗಿರುತ್ತದೆ. ಇಷ್ಟರಲ್ಲೇ ನಿಜಾಮ ಸಂಸ್ಥಾನ ದಲ್ಲಿ ತನ್ನ ಕಾರ್ಯಬಾಹುಳ್ಯವನ್ನು ವಿಸ್ತರಿಸಿಯಿದೆ. ಇದು ಪ್ರಥಮ ವರ್ಷದಲ್ಲೇ ಕರ್ಣಾಟಕದ ಇತರ ಯಾವ ಕಂಪ ನಿಯೂ ಪ್ರಥಮ ವರ್ಷದಲ್ಲಿ ಮಾಡಿರುವ ವಿಮಾ ಉದ್ಯೋ ಗದ ದಾಖಲೆಗಳನ್ನೆಲ್ಲಾ ಮೀರಿಸಿ ಮೊದಲಸ್ಥಾನವನ್ನು ಪಡೆದಿರುವದು ಇದರ ಭಾವೀ ಕಲ್ಯಾಣದ ಮುಂಬೆಳಗಿನ ಕುರುಹಾಗಿರುತ್ತದೆ.

ಧಾರವಾಡದ ಎರಡನೇ ಸಂಸ್ಥೆಯೆಂದರೆ ದಿ ಸ್ವರಾಜ್ಯ ಬ್ಯಾಂಕಿಂಗ್ ಮತ್ತು ಇನ್ಶ್ಯೂರೆನ್ಸ್ ಕಂಪನಿ ಲಿಮಿಟೆಡ್. ಇದೂ ಇಷ್ಟರಲ್ಲಿಯೇ ವಿಮಾ ಉದ್ಯೋಗವನ್ನು ಮಾಡಲಿ ರುವದು.

ದಕ್ಷಿಣ ಕನ್ನಡದ ಉಡುಪಿಯಲ್ಲಿ ದಿ ಕೆನರಾ ಮ್ಯುಚುವಲ್ ಇನ್ಸೂರೆನ್ಸ್ ಕಂಪೆನಿಯು ಸ್ಥಾಪಿತವಾಗಿದ್ದು ತನ್ನ ಆರಂಭವನ್ನು ರಭಸದಿಂದ ಮಾಡಿರುತ್ತದೆ. ಇದರ ವೈಶಿಷ್ಟ್ಯವೆಂದರೆ ಇದಕ್ಕೆ ಪಾಲುಗಾರರಿಲ್ಲದಿರುವದು. ಇದರ ಯಾವತ್ತು ಲಾಭವು ವಿಮಾದಾರರದೇ. ಪರಸ್ಪರ ಸಂಸ್ಥೆಗಳಲ್ಲಿ ಕರ್ಣಾಟಕದಲ್ಲಿ ಇದೇ ಮೊದಲನೆಯದು.

ಇವಿಷ್ಟು ಸಂಸ್ಥೆಗಳಲ್ಲದೆ ಬೆಂಗಳೂರಲ್ಲಿ ದಿ ಮಾಡರ್ನ ಇಂಡಿಯಾ ಇನ್ಸೂರೆನ್ಸ್ ಕಂಪನಿ ಮತ್ತು ಬೆಳಗಾಂವಿನಲ್ಲಿ ದಿ ಕಮರ್ಶಿಯಲ್ ಎಂಬೆರಡು ಹೊಸ ಕರ್ಣಾಟಕ ಸಂಸ್ಥೆಗಳು ಜನ್ಮತಾಳಿವೆ. ಇವೂ ಸದ್ಯದಲ್ಲಿಯೇ ವಿಮಾ ಕಾರ್ಯವನ್ನಾರಂಭಿಸಲಿವೆ.

ಇದಿಷ್ಟು ಕರ್ಣಾಟಕದಲ್ಲಿ ಕನ್ನಡಿಗರಿಂದಲೇ ಸ್ಥಾಪಿತವಾದ ಸಂಸ್ಥೆಗಳ ಮಾತಾಯಿತು. ಕೆಲವು ಕನ್ನಡಿಗರು ಕರ್ಣಾಟಕದ ಹೊರಗೂ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ಅನೇಕ ಕನ್ನಡಿಗರು ದೇಶೀಯಹಾಗೂ ವಿದೇಶೀಯ ವಿಮಾ ಕಂಪನಿಗಳಲ್ಲಿ ದೊಡ್ಡ ದೊಡ್ಡ ಹುದ್ದೆಗಳಲ್ಲಿರುತ್ತಾರೆ. ಕನ್ನಡಿಗರಲ್ಲಿ 'ಅಚ್ಚುಯರು' ಯವರೂ ಇಲ್ಲವೆಂದಿಲ್ಲ. ಪರಪ್ರಾಂತದ ಅನೇಕ ಕಂಪನಿಗಳು ಕರ್ಣಾಟಕದಲ್ಲಿ ಅಲ್ಲಲ್ಲಿ ತಮ್ಮ ಶಾಖೆಗಳನ್ನೂ, ಏಜೆನ್ಸಿಗಳನ್ನೂ ಕಟ್ಟಡಗಳನ್ನೂ ಸ್ಥಾಪಿಸಿರುತ್ತವೆ.

ಕನ್ನಡ ನಾಡಿನಲ್ಲಿ, ಕನ್ನಡಿಗರೇ ಆದ ಇಷ್ಟು ಸಂಸ್ಥೆಗಳಿರುತ್ತ, ಪ್ರತಿಯೊಬ್ಬ ಕನ್ನಡಿಗನೂ, ಕನ್ನಡನಾಡಿನ ಅಭಿಮಾನವನ್ನು ಇಟ್ಟುಕೊಂಡು ಒಂದೊಂದು ವಿಮಾ ಪತ್ರವನ್ನು ಈ ನಾಡಕಂಪನಿಗಳಿಗೆ ಕೊಡುವ ಉದಾತ್ತ ಧ್ಯೇಯವನ್ನು ಇಟ್ಟುಕೊಂಡಲ್ಲಿ ಕನ್ನಡ ರಾಷ್ಟ್ರನಿರ್ಮಾಣವೂ, ಏಕೀಕರಣವೂ ಆಗುವ ಶುಭಮುಹೂರ್ತವು ಸಮೀಪಿಸುವದು. ಎಂದಿನವರೆಗೆ 'ನಾವು, ನಮ್ಮ ನಾಡು, ನಮ್ಮ ನಾಡಿನ ಸಂಸ್ಥೆಗಳು' ಎಂಬ ಅಭಿಮಾನವನ್ನು ತೊರೆದು ದೊಡ್ಡ ದೊಡ್ಡ ಅಂಕೆ ಸಂಖೆಗಳ ಜಾಹೀರಾತುಗಳನ್ನು ಕಂಡು ಪರಪ್ರಾಂತದ ಕಂಪನಿಗಳ ಕಡೆಗೆನೇ ನಮ್ಮ ಗಮನವನ್ನೀಯುತ್ತಾ, ನಾಡಿನ ಸಂಸ್ಥೆಗಳನ್ನು ಅವರವರ ಪಾಲಿಗೇ ಬಿಡುತ್ತೇವೋ, ಅಂದಿನವರೆಗೆ ನಮ್ಮಲ್ಲಿ ನಾಡಿನ ವಾತ್ಸಲ್ಯವಾದರೂ ಹುಟ್ಟುವುದು ಹೇಗೆ. ಕನ್ನಡಿಗರು ಈ ವಿಚಾರದಲ್ಲಿ ತುಂಬ ಆಲೋಚಿಸಿ [illegible] ನಿರ್ಧಾರವನ್ನು ಬೇಗನೆ ಮಾಡಬೇಕಾಗಿದೆ.

ಇನ್ನು ಈ ಕನ್ನಡ ಸಂಸ್ಥೆಗಳ ವಿಚಾರದಲ್ಲಿ [illegible] ಮಾತು. ಇವರೆಲ್ಲರೂ ತಮ್ಮ ತಮ್ಮೊಳಗೆ [illegible] ಸೌಹಾರ್ದ್ರವನ್ನೂ, ಒಡಂಬಡಿಕೆಗಳನ್ನೂ ಬೆಳಸಿಕೊ[illegible] ದುಷ್ಪರಿಣಾಮಕಾರಿಯಾದ ಪೈಪೋಟಿಗೆ ಆಸ್ಪದ[illegible] ಕೊಡದೆ ಇದ್ದಲ್ಲಿ ರಾಷ್ಟ್ರ ಸಂಘಟನೆಯ ಕಾರ್ಯ[illegible] ಕೈಕೊಂಡಂತಾಗುವುದು. ಇಂದಿನ ಈ ಕನ್ನಡ ಸಂ[illegible]ಗಳಾದರೂ ತಮ್ಮೊಳಗೆ ಪರಸ್ಪರ ಪ್ರೇಮವನ್ನಿಟ್ಟು[illegible]ರುವುದು ಭಾವೀ ಕರ್ಣಾಟಕದ ಶುಭೋದಯದ ಸೂ[illegible]ಯಾಗಿದೆ. ಭುವನೇಶ್ವರಿಯು ಕೃಪೆಯಿಂದ ಈ ಪ್ರೇ[illegible]ಕುರವು ಬೆಳೆದು ಸದ್ಯದಲ್ಲಿಯೇ ಈ ಸಂಸ್ಥೆಗಳು ತಪ್ಪ[illegible] ಆದ ಒಂದು ಕರ್ನಾಟಕ ಸಂಘವನ್ನು ಸ್ಥಾಪಿಸುವ[illegible] ಯಶಸ್ವಿಯಾಗಲೆಂದು ಪ್ರಾರ್ಥನೆ.

ವಿಮಾ ಉದ್ಯಮಗಾರರಿಗೊಂದು ಮಾತು. [illegible]ಗಳ ಯಶಸ್ಸೂ, ವಿಮಾದಾರರ ಪ್ರಯೋಜನಗಳೂ [illegible] ಏಜಂಟರುಗಳ ಮೇಲೆಯೇ ಬಹಳವಾಗಿ ಹೊಂದಿಕೊ[illegible]ರುವುದರಿಂದ ಕೇವಲ ಸ್ವಪ್ರಯೋಜನಾರ್ಥವಾಗಿ ಮ[illegible]ದುಡಿಯದೆ, ತಾವು ಪ್ರಾತಿನಿಧ್ಯವನ್ನು ಪಡೆದ[illegible] ಸಂಸ್ಥೆಯಹಾಗೂ ತಾವು ವಿಮೆಯನ್ನು ಉತ್ತರದಾಯಿ[illegible] ವಿಮಾದಾರರ ಮೇಲ್ಮೆಗಾಗಿಯೇ ಉದ್ಯಮವನ್ನು ಕೈ[illegible]ಳ್ಳತಕ್ಕದ್ದು. ವೈಯಿಕ್ತಿಕ ದೂಷಣೆಯನ್ನೂ, ಪೈಪೋ[illegible]ಯನ್ನೂ ತಮ್ಮ ವ್ಯವಹಾರದಿಂದ ತೊಲಗಿಸಬೇಕು. [illegible] ಅನಾವಶ್ಯಕವಾಗಿ ಇತರ ಸಂಸ್ಥೆಗಳನ್ನು ಹೀಯಾಳಿಸು[illegible] ದುಶ್ಚಾಳಿಗೆ ಕೈಹಚ್ಚಬಾರದು. ಅಂತೆಯೇ ಸಂಸ್ಥೆಗ[illegible] ಹೇಗಾದರೂ ಉದ್ಯಮವಾದರೆ ಸಾಕೆಂಬ ಹವಣಿ[illegible] ಹೋಗದೆ, ಜವಾಬ್ದಾರಿ ತನವನ್ನು ಅರಿತಿರುವ ಯೋ[illegible] ಏಜಂಟರನ್ನೇ ಆರಿಸತಕ್ಕದು. ಹಾಗೆಯೇ ತಾವು ವಿಮಾ [illegible] ಪತ್ರವನ್ನು ಕೊಡಬಹುದಾದ ಅತ್ಯಧಿಕ ಮೊಬಲ[illegible] ಮಿಕ್ಕಿದ ಮೌಲ್ಯದ ವಿಮಾ ದರಖಾಸ್ತುಗಳನ್ನು ಪಡೆ[illegible]ವಾಗ ಈ ಹೆಚ್ಚಿಗಿನ ವಿಮಾ ಪತ್ರವನ್ನು ಇನ್ನೊ[illegible] ಕನ್ನಡ ಸಂಸ್ಥೆಗೇನೇ ಕೊಡುವ ನಿಯಮವನ್ನಿ[illegible] ಕೊಳ್ಳುವದಕ್ಕಾಗಿ ಸಹೋದರ ಸಂಸ್ಥೆಗಳೊಡನೆ ಏರ್ಪಾ[illegible]ಗಳನ್ನು ಮಾಡಿಕೊಂಡಿರುವದು ಉತ್ತಮವು.

ವಿಮಾ ವಾಣಿಜ್ಯವು ಕರ್ಣಾಟಕದಲ್ಲಿ ಪ್ರಗತಿಯ[illegible] ಪಡೆಯುತ್ತಿರುವಂತೆ ಅದರ ಪ್ರಸಾರವು ಜನತೆಯಲ್ಲಿ [illegible] ಬೇಕಾದರೆ ಈ ಉದ್ಯಮಕ್ಕಾಗಿಯೇ ವಿಕಾಸಲಾಗಿ[illegible] ಪತ್ರಿಕೆಗಳೂ, ಲೇಖನಗಳೂ ಪ್ರಕಟವಾಗಬೇಕು. ಸಭೆ[illegible] ಶ್ರೀಮಾನ್ ಜೆ. ವಿ. ದೊಡ್ಡವೀರಪ್ಪನವರು ತನು, ಮ[illegible]

ಭವನಗಳನ್ನು ಸವೆಯಿಸಿ ಕಳೆದ ಒಂದು ವರ್ಷದಿಂದ 'ಜನತಾ ಸೇವೆಯೇ ಜನಾರ್ಧನ ಸೇವೆಯೆಂದು ನಡೆಯಿಸಿಕೊಂಡು ಬರುತ್ತಿರುವ ಈ 'ವಿಮಾ-ವಾಣಿಜ್ಯ' ಮಾಸಪತ್ರಿಕೆಯನ್ನು ಬಿಟ್ಟರೆ, ಕನ್ನಡಭಾಷೆಯಲ್ಲಿ ಈ ವಿಚಾರವಾದ ಯಾವುದೊಂದು ಪತ್ರಿಕೆಯೂ ಇರುವದಿಲ್ಲ. ಅನೇಕ ಸಾಹಿತ್ಯಕರ್ತರೂ ಈ ಕಡೆಗೆ ಗಮನವನ್ನು ಕೊಟ್ಟಂತೆ ತೋರುವುದಿಲ್ಲ. ಉದಾತ್ತ ವಿಚಾರ ಪರಿಪ್ಲುತವಾದ ಲೇಖನಗಳು ಈ ಉದ್ಯಮದ ವಿಷಯವಾಗಿ ನುರಿತ ಸಾಹಿತಿಗಳ ಲೇಖನಿಗಳಿಂದ ಹೊರಬರಬೇಕಾಗಿದೆ. ಶ್ರೀ ದೊಡ್ಡವೀರಪ್ಪನವರು ಬಂದ ಒಡಕು ತೊಡಕುಗಳನ್ನೆಲ್ಲಾ ಸಹಿಸಿ, ಲಾಭದ ಮೇಲೆ ದೃಷ್ಟಿಯನ್ನೇ ಇಡದೆ ಒದ್ದಾಡುತ್ತಿರುವುದನ್ನು ಕಂಡು ಅವರನ್ನು ಅವರ ಪಾಲಿಗೇ ಬಿಟ್ಟು, ನಮ್ಮ ಭಾಷೆಯಲ್ಲಿಯೂ ಒಂದು ವಿಮಾ-ವಾಣಿಜ್ಯ ಪತ್ರಿಕೆ ಇದೆಯೆಂದು ಕನ್ನಡ ಸಾಹಿತಿಗಳು ಹೆಮ್ಮೆ ಪಟ್ಟಮಾತ್ರಕ್ಕೆ ಸಾಹಿತ್ಯಸೇವೆಯಾಗಲಿಲ್ಲ. ಅವರನ್ನು ಆಗಾಗ್ಗೆ ಯೋಗ್ಯ ಲೇಖನಗಳಿಂದ ಹುರಿದುಂಬಿಸುವುದು ತಮ್ಮ ಕರ್ತವ್ಯವೆಂದು ತಿಳಿದುಕೊಳ್ಳಬೇಕು, ಮೈಸೂರು ಇನ್ಷ್ಯೂರೆನ್ಸ್ ಕಂಪೆನಿಯ ಕಾರ್ಯಕಾರಿ ಮಂಡಲಿಯವರಲ್ಲೊಬ್ಬರಿಂದ ನಡೆಸಲ್ಪಡುವ ಈ ಪತ್ರಿಕೆಗೂ ಆ ಸಂಸ್ಥೆಗೂ ಯಾವದೊಂದೂ ಸಂಬಂಧವಿಲ್ಲದಿರುವುದರಿಂದ ಕರ್ಣಾಟಕದೊಳಗಣ ವಿಮಾ ಸಂಸ್ಥೆಗಳೆಲ್ಲವೂ ಇದನ್ನು ತಮ್ಮದೇ ಪತ್ರಿಕೆಯೆಂದು ಭಾವಿಸಿ ಸರ್ವ ಪ್ರಕಾರದಿಂದಲೂ ಇದನ್ನು ಪ್ರೋತ್ಸಾಹಿಸಬೇಕು. ತಮ್ಮ ಜಾಹೀರಾತುಗಳನ್ನು ಪ್ರಕಟನೆಗಾಗಿ ಕೊಡುವದೊಂದೇ ಪ್ರೋತ್ಸಾಹವಲ್ಲ. ಇದರ ಪತ್ರಿಕೆಗಳನ್ನು ಕೊಂಡುಕೊಂಡು ತಮ್ಮ ಏಜಂಟರುಗಳಿಗೆಲ್ಲಾ ಹಂಚಿಸುವ ಏರ್ಪಾಡೂ ಮಾಡಬೇಕು. ಹಾಗೆಯೇ ಈ ಪತ್ರಿಕೆಯ ಸಂಚಾಲಕರೂ ಈ ಸೇವೆಯಲ್ಲಿ ತಮ್ಮ ಭಾಗದ ಕಾರ್ಯವನ್ನೂ ಮಾಡಬೇಕು. ಸಾಮಾನ್ಯ ಜನತೆಯಲ್ಲಿಯೂ ವಿಮಾ ಉದ್ಯಮದ ಜ್ಞಾನವು ಹರಡುವಂತೆ ಮಾಡಿ ಕರ್ಣಾಟಕವೂ ವಿಮಾ ರಂಗದಲ್ಲಿ ಉಚ್ಚಸ್ಥಾನವನ್ನು ಹೊಂದಲನು ಮಾಡಬೇಕು. ಪರಸ್ಪರ ಸಹಕಾರ ಸೌಹಾರ್ದಗಳಿಂದ ಅದ್ವಿತೀಯವಾದ ಸ್ಥಾನ ಮಾನವನ್ನು ಪಡೆಯಬೇಕೀ ಪತ್ರಿಕೆ—"ವಿಮಾ-ವಾಣಿಜ್ಯ."

# ವಾಣಿಜ್ಯ ವಿದ್ಯಾಭ್ಯಾಸ
## (Commercial Education)



ಲೇಖಕರು :
ಶ್ರೀ|| ವಿ. ಬಿ. ಭಟ್, ಎಂ. ಎ., ಡಿ. ಕಾಂ.,
ಛೀಫ್ ಅಕೌಂಟೆಂಟ್, ದಿ ಮೈಸೂರು ಪ್ರಾವಿನ್ಷಿಯಲ್ ಕೋ.
ಆಪೆಕ್ಸ್ ಬ್ಯಾಂಕ್ ಲಿಮಿಟೆಡ್, ಬೆಂಗಳೂರು ಸಿಟಿ.

**Mr. V. B. Bhatt, M. A., D. Com.**

ಒಂದು ದೇಶದ ಸಂಪತ್ತು ಅಭಿವೃದ್ಧಿಯಾಗಬೇಕಾದರೆ ಆ ದೇಶದಲ್ಲಿ ಕೈಗಾರಿಕೆಗಳು ಪ್ರವರ್ಧಮಾನವಾಗಬೇಕು. ಆ ದೇಶದಲ್ಲಿರುವ ಪ್ರಕೃತಿದತ್ತವಾದ ಖನಿಜ ಸಂಪತ್ತು ಮೊದಲಾದವುಗಳನ್ನು ಸರಿಯಾಗಿ ಕೈಗಾರಿಕೆಗಳ ಉಪಯೋಗಕ್ಕೆ ಬರುವಂತೆ ಮಾಡಿಕೊಳ್ಳಬೇಕು. ಆದರೆ ಕೈಗಾರಿಕೆಗಳನ್ನು ಮಾತ್ರ ರೂಢೀಕರಿಸಿ ದೊಡ್ಡದೊಡ್ಡ ಕೈಗಾರಿಕೆಯ ಕೇಂದ್ರಗಳನ್ನು ನಿರ್ಮಿಸಿದ ಮಾತ್ರಕ್ಕೇ ದೇಶದ ಸಂಪತ್ತು ಅಭಿವೃದ್ಧಿಯಾದಂತಾಗಲಾರದು. ಕೈಗಾರಿಕೆಗಳಿಂದ ಉತ್ಪನ್ನವಾದ ವಸ್ತುಗಳು ಆ ದೇಶದಲ್ಲಿಯೇ ಅಲ್ಲದೆ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಸಹ ದೊರಕುವಂತೆ ಆಗಿ ಅವುಗಳಿಗೆ ಸರಿಯಾದ ಗಿರಾಕಿಗಳು ದೊರೆಯಬೇಕು. ಇದು ಅತ್ಯವಶ್ಯಕವು.

ಕೈಗಾರಿಕೆಗಳನ್ನು ನಡೆಯಿಸತಕ್ಕವರು ಬಹು ಸಾಮರ್ಥ್ಯದಿಂದಲೂ, ಹುರುಪಿನಿಂದಲೂ ತಮ್ಮ ತಮ್ಮ ಕೆಲಸಗಳನ್ನು ನಡೆಸಬಹುದು. ಪ್ರತಿಯೊಂದು ಕೈಗಾರಿಕೆಯಲ್ಲೂ ಪ್ರವೀಣರಾದ ಜನಗಳಿದ್ದು ಕೈಗಾರಿಕೆಗಳ ಮೇಲ್ವಿಚಾರಣೆಯನ್ನು ನೋಡಿಕೊಂಡು ಅತ್ಯುತ್ತಮವಾದ ಸಾಮಾನುಗಳನ್ನು ತಯಾರಿಸಬಹುದು ಆದರೆ ಅಷ್ಟಕ್ಕೇ ಅವರ ಪ್ರಯತ್ನಗಳು ಕೊನೆಮುಟ್ಟಿದಂತಾಗುವುದಿಲ್ಲ, ಅವರು ತಯಾರಿಸಿದ ವಸ್ತುಗಳಿಗೆ ದೇಶವಿದೇಶಗಳಲ್ಲಿ ತಕ್ಕ ಗಿರಾಕಿಗಳು ದೊರೆತರೆ ಅವರ ಪ್ರಯತ್ನವು ಫಲಿಸಿದಂತಾಗುವುದು.

ಒಂದು ದೇಶದಲ್ಲಿ ತಯಾರಾದ ವಸ್ತುಗಳನ್ನು ದೇಶವಿದೇಶಗಳಲ್ಲಿ ಹರಡಿ ಅವುಗಳನ್ನು ಒಳ್ಳೆಯ ಲಾಭ... ವಂತೆ ಗಿರಾಕಿ ಹೊಂದಿಸಿ ಮಾರಾಟ ಮಾಡಬೇಕಾ... ಸರಿಯಾದ ವಾಣಿಜ್ಯ ಸಾಧನಗಳಿರಬೇಕು. ಆಧುನಿ... ವಾಣಿಜ್ಯ ವ್ಯಾಪಾರಗಳೆಂದರೆ ಹಿಂದಿನಕಾಲದಷ್ಟು ಸುಲ... ವಲ್ಲ. ಚಿಲ್ಲರೆ ಅಂಗಡಿಯಮೇಲೆ ಕುಳಿತುಕೊಂಡು ಸ... ತದ ಲೆಕ್ಕಗಳನ್ನು ಬರೆಯುವುದು ಆಧುನಿಕ ವಾಣಿಜ್ಯವ... ಅಥವಾ ತನ್ನ ಜಮೀನಿನಲ್ಲಿ ಬೆಳೆದ ದವಸವನ್ನಾಗಲಿ ಅಥವಾ ಮನೆಯಲ್ಲಿರುವ ಮಗ್ಗದಲ್ಲಿ ತಯಾರಿಸಿದ ಬಟ್ಟೆಗಳನ್ನು ಹತ್ತಿರದಲ್ಲಿರುವ ಸಂತೆಗೋ ಅಥವಾ ಪಟ್ಟಣಕ್ಕೋ ತೆಗೆದುಕೊಂಡು ಹೋಗಿ, ತನಗೆ ಬೇಕಾದ ವಸ್ತುಗಳಿ... ಬದಲಾವಣೆ ಮಾಡಿಕೊಂಡು ಬರುವಷ್ಟಾಗಲೀ ಸಲ... ವಲ್ಲ.

ಒಂದು ಕಡೆಯಲ್ಲಿ ತಯಾರಾದ ಒಂದು ಪದಾರ್ಥವು ಹತ್ತಿರದಲ್ಲಿರುವ ಪಟ್ಟಣಕ್ಕೆ ಮಾತ್ರವೇ ಅಲ್ಲದೆ ವಿಶ್ವಪ್ರಪಂಚದ ಮೂಲೆ ಮೂಲೆಗಳಿಗೂ ಹೋಗಬೇಕಾ... ಗುತ್ತದೆ. ಈಗಿನಕಾಲದ ಕೈಗಾರಿಕೆ ವ್ಯಾಪಾರಗಳ ಒಂದು ವಿಶೇಷವೇನೆಂದರೆ ಪೈಪೋಟಿ (Competition) ಒಬ್ಬರಿಗಿಂತ ಇನ್ನೊಬ್ಬರು ತಮ್ಮ ಸಾಮಾನುಗಳಿಗೆ ಹೆಚ್ಚು ಗಿರಾಕಿ ದೊರೆಯಲೆನ್ನುವ ಆಸೆಯಿಂದ ತಮ್ಮ ತಮ್ಮ ವಸ್ತು... ಗಳ ಬೆಲೆಯನ್ನು ಸಾಧ್ಯವಾದಷ್ಟು ಕಡಮೆಯಾಗಿ... ಗಿರಾಕಿಗಳನ್ನು ಸಂಪಾದಿಸಲು ಪ್ರಯತ್ನ ಮಾಡುವು... ಈಗಿನಕಾಲದ ವಾಡಿಕೆ. ಕೆಲವು ಪದಾರ್ಥಗಳ ಬೆಲೆಯು ದಿನದಿನಕ್ಕೂ, ಘಂಟೆಗಂಟೆಗೂ ಬದಲಾವಣೆಯಾಗುತ್ತಿ... ತ್ತದೆ. ಈಗಿನ ಕಾಲದ ಪೈಪೋಟಿಯನ್ನು ಮದ್ದುಗುಂಡು...

ಗಳಲ್ಲದ ಒಂದು ದೊಡ್ಡ ಯುದ್ಧವೆಂದರೆ ಅತಿಶಯೋಕ್ತಿಯಾಗಲಾರದು.

ಪ್ರಪಂಚದ ಒಂದೆಡೆಯಲ್ಲಿ ತಯಾರಾದ ವಸ್ತುಗಳು ಎಲ್ಲಾ ಕಡೆಗಳಿಗೂ ಪ್ರಚಲಿತವಾಗುವಂತೆ ಮಾಡಲು ತಕ್ಕ ವಾಣಿಜ್ಯ ಸಾಧನಗಳಿರಬೇಕು. ಮುಖ್ಯವಾಗಿ ಸಾಮಾನುಗಳನ್ನು ಒಂದೆಡೆಯಿಂದ ಇನ್ನೊಂಡೆಗೆ ರವಾನಿಸಲು ರೈಲು ಮಾರ್ಗಗಳಿರಬೇಕು. ಸಮುದ್ರದಾಚೆ ಇರುವ ರಾಷ್ಟ್ರಗಳಿಗೆ ಹೋಗಲು ತಕ್ಕ ನೌಕಾಸೌಕರ್ಯಗಳು ಬೇಕು. ವರ್ತಮಾನಗಳನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಒಯ್ಯಲು ಅಂಚೆ, ತಂತಿ, ಟೆಲಿಫೋನ್, ವೈರ್‌ಲೆಸ್ ಮುಂತಾದ ಸಾಧನಗಳು ಬೇಕು. ಇವುಗಳನ್ನೆಲ್ಲಾ ಸೂಸೂತ್ರವಾಗಿ ನಡೆಯಿಸಿಕೊಂಡು ಹೋಗಲು ಹಣದ ಸೌಕರ್ಯಗಳೂ, ಬಂಡವಾಳವನ್ನೊದಗಿಸತಕ್ಕವರೂ ಬೇಕಾಗುವುದು. ಇವನ್ನು ಒದಗಿಸಲು ಯಾವನಾದರೊಬ್ಬನಿಂದಾಗಲೀ ಇಬ್ಬರಿಂದಾಗಲೀ ಅವರು ಎಷ್ಟೇ ಧನಿಕರಾಗಿದ್ದರೂ ಸಾಧ್ಯವಾಗಲಾರದು. ಆದುದರಿಂದ ಇದಕ್ಕೆಲಾ ಸರಿಯಾದ ಬ್ಯಾಂಕುಗಳ ಸೌಕರ್ಯಗಳು ಬಹಳ ಚೆನ್ನಾಗಿರಬೇಕು. ಇವುಗಳು ಪ್ರತಿಯೊಂದರಲ್ಲಿಯೂ ಪೈಪೋಟಿಯು ಬಹಳ ತೀಕ್ಷ್ಣತೆಯಿಂದ ನಡೆಯುತ್ತಲಿದೆ. ಆದರೆ ಇವೆಲ್ಲಕಿಂತ ಅತಿ ಪ್ರಾಧಾನ್ಯವಾದ ಇನ್ನೊಂದು ವಿಷಯವಿದೆ. ಮೇಲೆ ಹೇಳಿದ ಸಾಧನಗಳ ಸಂಪೂರ್ಣ ಉಪಯೋಗವು ಕೈಗಾರಿಕೆಗಳಿಗುಂಟಾಗಬೇಕಾದರೆ ಈ ಸಾಧನಗಳನ್ನೆಲ್ಲಾ ಸರಿಯಾದ ಸ್ಥಿತಿಯಲ್ಲಿ ನಡೆಯಿಸಿಕೊಂಡು ಹೋಗತಕ್ಕ ಮನುಷ್ಯರು ಬೇಕು. ಈ ಕೆಲಸವು ಎಲ್ಲವರಿಂದಲೂ ಆಗದ ಮಾತು. ಅದಕ್ಕೆ ಸರಿಯಾಗಿ ಶಿಕ್ಷಣ ಪಡೆದು, ದಕ್ಷತೆ, ಕುಶಲತೆ, ಧೈರ್ಯ, ವಿಚಕ್ಷಣೆ ಇವುಗಳಿಂದ ಆಡಳಿತ ನಡೆಸತಕ್ಕವರೇ ಬೇಕು.

ತಕ್ಕ ವಾಣಿಜ್ಯ ಸೌಕರ್ಯಗಳಿಲ್ಲದಿದ್ದಲ್ಲಿ ಕೈಗಾರಿಕೆಗಳು ಮುಂದಕ್ಕೆ ಬರಲಾರವು ಎನ್ನುವುದನ್ನು ಮೇಲೆ ಹೇಳಿರುವುದರಿಂದ ವ್ಯಕ್ತಮಾಡಿಕೊಳ್ಳಬಹುದು. ಅದರಂತೆಯೇ ಕೈಗಾರಿಕೆಗಳೇ ಇಲ್ಲದಿದ್ದರೆ ವಾಣಿಜ್ಯದ ಆವಶ್ಯಕತೆಯಿರುವುದಿಲ್ಲ. ಕೈಗಾರಿಕೆಯಿಂದ ವಾಣಿಜ್ಯವೂ, ವಾಣಿಜ್ಯದಿಂದ ಕೈಗಾರಿಕೆಯೂ, ಅಭಿವೃದ್ಧಿಯಾಗಬೇಕು.

ವಾಣಿಜ್ಯ ವ್ಯವಹಾರ ಜ್ಞಾನವು ಬರಿಯ ಪುಸ್ತಕಗಳ ಪಠಣದಿಂದ ಉಂಟಾಗುವುದಿಲ್ಲ. ಒಬ್ಬನು ವೈದ್ಯನಾಗಬೇಕೆಂತ ಅಪೇಕ್ಷೆಪಟ್ಟರೆ ತನ್ನ ಉದ್ಯೋಗದ ವಿವಿಧ ಭಾಗಗಳಲ್ಲಿಯೂ ಸಹ ಕಷ್ಟಪಟ್ಟು ವ್ಯಾಸಂಗಮಾಡಿ ಸ್ವತಃ ಅನುಭವ ಮಾಡಿಕೊಳ್ಳಬೇಕು. ನ್ಯಾಯ ವೃತ್ತಿಯನ್ನವಲಂಬಿಸತಕ್ಕವರು (Lawyars) ತಮ್ಮ ವೃತ್ತಿಗೆ ತಕ್ಕ ವಿದ್ಯಾಭ್ಯಾಸವನ್ನು ಮಾಡಿ ಅದೇ ವೃತ್ತಿಯಲ್ಲಿ ನುರಿತು ಅನುಭವ ಪಡೆದಿರತಕ್ಕವರಲ್ಲಿ ಸ್ವತಃ ತರಪೇತನ್ನು ಹೊಂದಬೇಕು. ವಾಣಿಜ್ಯ ವ್ಯವಹಾರದ ವಿಷಯವೂ ಇದರಂತೆಯೇ. ಅದರಲ್ಲಿ ಪ್ರವೇಶಿಸಲಪೇಕ್ಷೆಯುಳ್ಳವರು ಸರಿಯಾದ ಶಿಕ್ಷಣಶಾಲೆಗಳಲ್ಲಿ ವ್ಯಾಸಂಗಮಾಡಿ ತರಪೇತನ್ನು ಹೊಂದಬೇಕು.

ವಾಣಿಜ್ಯ ಶಿಕ್ಷಣದ ಆವಶ್ಯಕತೆಯನ್ನೂ ಮತ್ತು ಅದರ ಪ್ರಾಮುಖ್ಯತೆಯನ್ನೂ ಸಂಪೂರ್ಣ ಮನಗಾಣಬೇಕಾದರೆ ನಮ್ಮ ಗಮನವನ್ನು ಪಾಶ್ಚಾತ್ಯದೇಶಗಳ ಕಡೆಗೆ ತಿರುಗಿಸಬೇಕು. ಪಾಶ್ಚಾತ್ಯ ದೇಶಗಳಲ್ಲಿ ವಾಣಿಜ್ಯ ವ್ಯಾಪಾರಗಳೆಂದರೆ ಅಂತರ ರಾಷ್ಟ್ರೀಯ ಪ್ರಾಮುಖ್ಯತೆಯನ್ನು ಹೊಂದಿವೆ. ತನ್ನ ತನ್ನ ದೇಶದ ಕೈಗಾರಿಕೆಗಳಿಂದುತ್ಪನ್ನವಾದ ಸಾಮಾನುಗಳಿಗೆ ಪರರಾಷ್ಟ್ರಗಳಲ್ಲಿ ಗಿರಾಕಿ (Market) ಗಳನ್ನು ಒದಗಿಸಲು ಪ್ರತಿಯೊಂದು ರಾಷ್ಟ್ರವೂ ಅತಿ ತೀವ್ರವಾದ ಪೈಪೋಟಿಯಿಂದ ಕೆಲಸಮಾಡುತ್ತಿದೆ. ಅದಕ್ಕೋಸ್ಕರವೇ ಪ್ರತಿಯೊಂದು ರಾಷ್ಟ್ರದ ಸರ್ಕಾರವೂ, ಮತ್ತು ಪ್ರಜಾ ಮುಖಂಡರೂ ವಾಣಿಜ್ಯೋದ್ಯಮವನ್ನು ಕೈಕೊಳ್ಳತಕ್ಕ ತರುಣರಿಗೆ ತಕ್ಕ ಶಿಕ್ಷಣವನ್ನು ಕೊಡಿಸಲು ತಮ್ಮಿಂದಾದಷ್ಟು ಸಹಾಯ ಸಂಪತ್ತಿಗಳನ್ನು ನೀಡುತ್ತಿದ್ದಾರೆ. ಜರ್ಮನಿ, ಫ್ರಾನ್ಸ್, ಅಮೇರಿಕಾದೇಶಗಳಲ್ಲಿ ಈ ಉದ್ದೇಶ ಸಾಧನೆಗೋಸ್ಕರ ಮಾಡಿರತಕ್ಕ ಮಹತ್ಪ್ರಯತ್ನಗಳು ಬೆರಗುಮಾಡುವಂತಹುವಾಗಿವೆ. ಯೂರೋಪಿನ ಕಳೆದ ಮಹಾಯುದ್ಧದಿಂದೀಚೆಗೆ ಇಂಗ್ಲೆಂಡಿನಲ್ಲಿಯೂ ಸಹ ವಾಣಿಜ್ಯ ವಿದ್ಯಾಭ್ಯಾಸಕ್ಕೆ ಹೆಚ್ಚುಹೆಚ್ಚಾಗಿ ಸರ್ಕಾರದವರೂ ಮತ್ತು ಪ್ರಜಾ ಮುಖಂಡರೂ ಬಹಳ ಶ್ರಮ ವಹಿಸುತ್ತಿದ್ದಾರೆ ಆದರೆ ನಮ್ಮ ದೇಶದಲ್ಲಿ ಮಾತ್ರ ಇಂತಹ ಉದ್ಯಮಗಳು ವಿರಳವೆಂದರೆ ಅತಿಶಯೋಕ್ತಿಯಾಗಲಾರದು. ಇತ್ತೀಚೆಗೆ ಕೆಲವೆಡೆಗಳಲ್ಲಿ ವಾಣಿಜ್ಯ ಶಿಕ್ಷಣಕ್ಕೆ ಸರಕಾರದವರೂ ಪ್ರಜೆಗಳೂ ಸಹ ಕೆಲವು ಮಟ್ಟಿಗೆ ಪ್ರೋತ್ಸಾಹವನ್ನೀಯುತ್ತಿರುವುದು ಮುಂದಿನ ಬೆಳವಣಿಗೆಗೆ ಶುಭಚಿಹ್ನೆಯಾಗಿದೆ. ಹೆಚ್ಚೇಕೆ—ನಮ್ಮ ಮೈಸೂರು ಸರ್ಕಾರದವರೇ ಬೆಂಗಳೂರಿನಲ್ಲಿ ಇತ್ತೀಚೆಗೆ ವಾಣಿಜ್ಯ ಶಿಕ್ಷಣದ ಸ್ಕೂಲನ್ನು (Government Institute of Commerce and Accountancy) ಪುನರ್ವ್ಯವಸ್ಥೆ

ಮಾಡಿರುವುದೂ ಮತ್ತು ಕೆಲವು ಖಾಸಗೀ ಉದ್ಯಮಗಳು ಇದಕ್ಕೋಸ್ಕರವೇ ಅಹೋರಾತ್ರಿ ಶ್ರಮ ವಹಿಸುತ್ತಿರುವುದೂ ನಾವು ಹೆಮ್ಮೆ ಪಡಬೇಕಾದ ವಿಷಯವೇ ಸರಿ.

ವಾಣಿಜ್ಯ ಶಿಕ್ಷಣ ಶಾಲೆಗಳಲ್ಲಿ ಕೊಡಲ್ಪಡುವ ಶಿಕ್ಷಣವು ಬಹಳ ಉಚ್ಚತರಗತಿಯದಾಗಿರಬೇಕು. ಅಲ್ಲಿ ಶಿಕ್ಷಿತರಾದ ಯುವಕರಿಗೆ ತಮ್ಮ ತಮ್ಮ ಜೀವನವನ್ನು ನಡೆಯಿಸಿಕೊಂಡು ಹೋಗಲೂ ಮತ್ತು ತನ್ಮೂಲಕ ದೇಶಸೇವೆ ಮಾಡಲೂ ಅನುಕೂಲವಾಗಿರಬೇಕು. ಅವರಿಗೆ ಜೀವನದ ಕಷ್ಟ ಸುಖಗಳ ಅರಿವು ಮಾಡಿಕೊಡುವಂತಿರಬೇಕು. ವಾಣಿಜ್ಯ ವ್ಯಾಪಾರೋದ್ಯಮಗಳಲ್ಲಿ ಪ್ರವೇಶಿಸುವ ಆ ಯುವಕರಿಗೆ ಈಗಿನಕಾಲದ ವ್ಯಾಪಾರೋದ್ಯಮಗಳ ಕಷ್ಟ ಪರಂಪರೆಗಳನ್ನು ಧೈರ್ಯವಾಗಿ ಎದುರಿಸುವ ಗುಣಗಳು ಅವರಲ್ಲಿ ಉದಯಿಸಬೇಕು. ಪ್ರಾಮಾಣಿಕವಾದ ನಡತೆ, ವಚನ ಪರಿಪಾಲನೆ, ಕ್ಲಿಪ್ತಕಾಲಗಳಲ್ಲಿ ಚಾಚೂ ತಪ್ಪದೆ ತಮ್ಮ ತಮ್ಮ ಕೆಲಸಗಳನ್ನು ಮಾಡುವುದು, ಶಾಂತಸ್ವಭಾವ ಇವುಗಳನ್ನು ಅವರುಗಳಲ್ಲಿ ಮೂರ್ತೀಭವಿಸುವಂತೆ ಮಾಡಬೇಕು. ಇಂತಹ ಯುವಕರು ಅನೇಕ ಸಂಖ್ಯೆಯಲ್ಲಿ ನಮ್ಮ ದೇಶದ ವಾಣಿಜ್ಯ ವ್ಯಾಪಾರಗಳಲ್ಲಿ ಪ್ರವೇಶಿಸಿದರೆ ನಮ್ಮ ದೇಶವು ಅಂತರರಾಷ್ಟ್ರೀಯ ದೇಶಗಳೊಡನೆ ಸರಿಸಮಾನತೆಯಿಂದ ಇದ್ದು ವ್ಯಾಪಾರೋದ್ಯಮಗಳನ್ನು ದೇಶಹಿತದೃಷ್ಟಿಯಿಂದ ನಡೆಸಲು ಯಾವ ಸಂಶಯವೂ ಇರುವುದಿಲ್ಲ.

ವಾಣಿಜ್ಯ ಶಿಕ್ಷಣವನ್ನು ಸ್ಕೂಲುಗಳಲ್ಲಿಯೂ ಕಾಲೇಜುಗಳಲ್ಲಿಯೂ ಕೊಡಲು ಸಾಧ್ಯವೇ? ಅಲ್ಲಿ ಶಿಕ್ಷಣ ಹೊಂದಿದ ಯುವಕರನ್ನು ನಂಬಿಕೊಂಡರೆ ದೇಶದ ವಾಣಿಜ್ಯವು ಪ್ರಗತಿದಾಯಕವಾದ ಮಾರ್ಗವನ್ನು ಹಿಡಿಯಬಲ್ಲುದೇ? ಮತ್ತು ಸ್ಕೂಲುಗಳಲ್ಲಿ ಕೊಟ್ಟ ಶಿಕ್ಷಣದಿಂದ ನಿಜವಾಗಿಯೂ ಕಿಂಚಿತ್ತಾದರೂ ಉಪಯೋಗವುಂಟೇ ಎಂಬ ಅನೇಕ ತರಹದ ಪ್ರಶ್ನೆಗಳನ್ನು ಎಷ್ಟೋ ಜನರು ಕೇಳುವುದು ವಾಡಿಕೆಯಾಗಿದೆ. ಸ್ಕೂಲು ಕಾಲೇಜುಗಳಲ್ಲಿ ದೊರೆಯುವ ಶಿಕ್ಷಣದಿಂದ ಯಾವ ಪ್ರಯೋಜನವೂ ಇಲ್ಲವೆಂದು ಕೆಲವರ ಅಭಿಪ್ರಾಯ. ವಾಣಿಜ್ಯ ವ್ಯಾಪಾರ ವ್ಯವಹಾರಗಳ ಸುಖದುಃಖಗಳು ಸ್ವತಃ ಕಷ್ಟಪಟ್ಟು ಕೆಲಸಮಾಡಿದರೇನೇ ಮನುಷ್ಯನಿಗೆ ಅವುಗಳ ಅನುಭವವಾಗುವುದೆಂದೂ ಬರಿಯ ಸ್ಕೂಲುಗಳ ಶಿಕ್ಷಣವು ಪ್ರಯೋಜನಕಾರಿಯಾಗಲಾರದೆಂದೂ ಇವರುಗಳ ವಾದ. ಈ ಅಭಿಪ್ರಾಯಕ್ಕೆ ತೀರ ವ್ಯತಿರಿಕ್ತವಾಗಿ ಹೇಳುವುದು ಇನ್ನೊಂದರ ವಾಡಿಕೆ. ವಾಣಿಜ್ಯ ಶಿಕ್ಷಣವನ್ನು ಸ್ಕೂಲುಗಳಲ್ಲಿ ಅತ್ಯವಶ್ಯಕವಾಗಿ ಯುವಕ... ಕೊಡಲೇಬೇಕೆಂದೂ, ಸ್ಕೂಲಿನ ಶಿಕ್ಷಣವಿಲ್ಲದಿದ್ದರೆ ... ಗಳು ವಾಣಿಜ್ಯ ವ್ಯಾಪಾರೋದ್ಯಮಗಳಲ್ಲಿ ... ಗಿಯೂ ಜಯಶಾಲಿಗಳಾಗಲಾರರೆಂದೂ ಅವರ ... ಇವರ ವಾದಗಳು ಹೇಗೇ ಇರಲಿ, ಇವರಿಬ್ಬರಲ್ಲಿ ... ವಿರೋಧಿಗಳಾದ ಮೊದಲನೆಯ ಪಂಗಡವರಿಗೆ ... ಹೇಳುವುದಿಷ್ಟೇ: ವಾಣಿಜ್ಯದ ಸ್ಕೂಲುಗಳಲ್ಲಿದ್ದರೆ ... ಯಾದ ಜನರು ಸಿಕ್ಕುವುದೇಇಲ್ಲವೆಂದು ನಾವು ... ಕಟ್ಟುವುದಿಲ್ಲ. ಆದರೆ ವಾಣಿಜ್ಯ ಶಿಕ್ಷಣವನ್ನು ... ಸ್ಕೂಲು ಕಾಲೇಜುಗಳಲ್ಲಿ ಕೆಲವುಕಾಲವಾದರೂ ... ಪಡೆಯುವುದರಿಂದ ಯುವಕರ ಸಹಜವಾದ ಗುಣ... (Natural aptitudes) ಬೆಳವಣಿಗೆಗೆ ಉತ್ತೇ... ಕೊಟ್ಟಂತಾಗುತ್ತದೆ. ಪ್ರಪಂಚ ವ್ಯವಹಾರ... ಮುಖ್ಯ ಸಾಧನಗಳೆಂದ ಕೆಲವು ಸುಗುಣಗಳನ್ನು ... ವಿಚಾರಪರತೆ, ದೂರದರ್ಶಿತ್ವ, ಶಾಂತಮನಸ್ಸು, ... ಪಕ್ಷಪಾತ, ಸಹನೆ ಮುಂತಾದ ಗುಣಗಳನ್ನು ... ಬೇರೂರುವಂತೆ ಮಾಡಲು ಸ್ಕೂಲು, ಕಾಲೇಜುಗ... ಣವು ಬಹುಮಟ್ಟಿಗೆ ಸಹಕಾರಿಯಾಗುತ್ತದೆ.

ವಾಣಿಜ್ಯ ಶಿಕ್ಷಣವೆಂದರೆ ಕುರುಡು ಕುರು... ಸಿಕ್ಕಿದುದನ್ನೆಲ್ಲಾ ಶಾಲೆಗಳಲ್ಲಿ ಪಠ್ಯವಿಷಯಗಳನ್ನಾ... ಬೇಕೆಂತ ಖಂಡಿತ ಅರ್ಥಮಾಡಿಕೊಳ್ಳಕೂಡದು. ... ದೇಶದಲ್ಲಿ ಜಾರಿಯಲ್ಲಿರುವ ಶಿಕ್ಷಣಕ್ರಮದ ... ಬೆಲೆಯು ಆ ಶಿಕ್ಷಣದಿಂದ ಆ ದೇಶದ ವಾಣಿಜ್ಯೋ... ಎಷ್ಟರಮಟ್ಟಿಗೆ ಸಹಾಯಕರವಾಗಿದೆ ಎನ್ನುವುದರ ಮೇ... ಅವಲಂಬಿಸಿರುತ್ತದೆ. ಆದುದರಿಂದ ಆಯಾಯಾ ದೇ... ವಾಣಿಜ್ಯ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡೇ ಶಿ... ಕ್ರಮವನ್ನೂ ಪಠ್ಯ ವಿಷಯುಗಳನ್ನೂ ನಿರ್ಧರಿಸಬೇಕು.

ತನ್ನ ರಾಷ್ಟ್ರದ ಹಿತವನ್ನು ಮುಖ್ಯಧ್ಯೇಯವನ್ನಾ... ಇಟ್ಟುಕೊಂಡು, ಆ ಧ್ಯೇಯಸಾಧನೆಗೆ ಅನುಕೂಲಿಸುವ... ದೇಶದ ವಿದ್ಯಾಭ್ಯಾಸ ಪದ್ಧತಿಯನ್ನು ರೂಪುಗೊಳಿಸಿದ ಮೊ... ನೆಯ ದೇಶವೆಂದರೆ ಜರ್ಮನಿ. ನಂತರ ಫ್ರಾನ್ಸು ದೇ... ಜರ್ಮನಿಯ ನೀತಿಯನ್ನು ತನ್ನ ದೇಶದ ಹಿತಕ್ಕೆ ... ಕೂಲಿಸುವಂತೆ ಮಾರ್ಪಡಿಸಿಕೊಂಡು ಹಿಂಬಾಲಿಸಿತು. ... ರಂತೆಯೇ ಅಮೆರಿಕಾದಲ್ಲಿಯೂ, ಇಂಗ್ಲೆಂಡ್, ಬೆಲ್ಜಿಯಂ ... ಇಟಲಿ ದೇಶಗಳಲ್ಲಿಯೂ ತಮ್ಮ ತಮ್ಮ ರಾಷ್ಟ್ರ ಹಿತದೃಷ್ಟಿ... ಯಿಂದ ಶಿಕ್ಷಣಕ್ರಮವನ್ನು ರೂಪುಗೊಳಿಸಿದ್ದಾರೆ.

ಇದು ಪಾಶ್ಚಾತ್ಯ ದೇಶಗಳ ಮಾತಾಯಿತು. ಪೌರ್ವಾತ್ಯದೇಶಗಳಲ್ಲೆಲ್ಲಾ ತನ್ನ ರಾಷ್ಟ್ರ ಜೀವನಕ್ಕೆ ಹೊಂದಿಕೊಂಡಿರುವಂತೆ ಶಿಕ್ಷಣ ಪದ್ಧತಿಯನ್ನು ರೂಪುಗೊಳಿಸಿಕೊಂಡಿರುವ ರಾಷ್ಟ್ರವು ಜಪಾನು ಒಂದೇ. ಇತ್ತೀಚಿಗೆ ಜಪಾನ್ ದೇಶವು ತನ್ನ ಕೈಗಾರಿಕೆ, ವಾಣಿಜ್ಯ ವ್ಯಾಪಾರಗಳಲ್ಲಿ ಪ್ರಪಂಚದ ಪ್ರಬಲ ರಾಷ್ಟ್ರಗಳೆಲ್ಲವನ್ನೂ ಮೀರಿಸುತ್ತಿದೆ. ಇಷ್ಟು ಪ್ರಾಬಲ್ಯಕ್ಕೆ ಆ ದೇಶದ ಶಿಕ್ಷಣ ಕ್ರಮವೇ ಮುಖ್ಯಕಾರಣವು. ಪಾಶ್ಚಾತ್ಯ ರಾಷ್ಟ್ರಗಳು ಕಳೆದ ಒಂದು ಒಂದೂವರೆ ಶತಮಾನದಿಂದಲೂ ಸಾಧಿಸಿದ ಕಾರ್ಯಗಳನ್ನು ಜಪಾನು ದೇಶವು ಕಳೆದ ಅರ್ಧ ಶತಮಾನದೊಳಗೇನೆ ಸಾಧಿಸಿದೆ. ಸುಮಾರು ೫೦-೬೦ ವರ್ಷಗಳ ಹಿಂದೆ ಜಪಾನು ಇದ್ದ ಸ್ಥಿತಿಯನ್ನು ಅದರ ಈಗಿನ ಸ್ಥಿತಿಗೆ ಹೋಲಿಸಿ ನೋಡಿದರೆ ಅದು ಮಾಡಿರತಕ್ಕ ಕೆಲಸವು ಅತ್ಯಂತ ವಿಸ್ಮಯವನ್ನುಂಟು ಮಾಡುವುದಾಗಿದೆ.

ಈಗ ನಮ್ಮ ಸ್ವಂತ ದೇಶವಾದ ಇಂಡಿಯಾದೇಶದಲ್ಲಿ ಯಾವ ತರಹದ ಶಿಕ್ಷಣವನ್ನು ಯಾವರೀತಿಯಿಂದ ಕೊಡಬೇಕೆನ್ನುವುದನ್ನು ಯೋಚಿಸಬೇಕು. ಈಗಿನ ವಾಣಿಜ್ಯ ವ್ಯಾಪಾರಗಳಿಗೆ ಸಂಬಂಧ ಪಟ್ಟ ವಿಷಯಗಳನ್ನು ಸಾಮಾನ್ಯವಾಗಿ ೫ ದೊಡ್ಡ ಭಾಗಗಳಾಗಿ ವಿಂಗಡಿಸಬಹುದು.

೧ ವ್ಯಾಪಾರದ ರೂಢಿ ಮತ್ತು ಅಭಿವೃದ್ಧಿಗೆ ಸಾಧಕವಾದ ವಿಷಯಗಳ ಭಾಗ ; ಅಂದರೆ ಹೊಸ ಹೊಸ ಪ್ರದೇಶಗಳಲ್ಲಿ ವ್ಯಾಪಾರದ ಅನುಕೂಲಗಳನ್ನು ಕಲ್ಪಿಸುವುದು ; ದೇಶದ ಆಮದು ರಫ್ತು ಇವುಗಳ ವಿಚಾರ ಇತ್ಯಾದಿ ಇತ್ಯಾದಿ. (Business organisation & salesmanship.)

೨ ಬ್ಯಾಂಕುಗಳು, ಇತರ ಹಣಕಾಸಿನ ಸಂಸ್ಥೆಗಳು ನಮ್ಮ ದೇಶದ ನಾಣ್ಯ ಚಲಾವಣೆ, ಹಣಕಾಸಿನ ಆಡಳಿತ ಇವುಗಳ ವಿಷಯಕವಾದ ಭಾಗವಿನ್ನೊಂದು (Banking and Currency.)

೩ ಶಾಸ್ತ್ರರೀತಿಯಾಗಿ ಲೆಕ್ಕಗಳನ್ನು ಇಡುವುದು ಲೆಕ್ಕಗಳ ತನಿಖೆ, ಕಾನೂನುಪ್ರಕಾರ ಲೆಕ್ಕಗಳನ್ನು ತಯಾರು ಮಾಡುವುದು ಇತ್ಯಾದಿ, (Accountancy and auditing.)

೪ ಈಗಿನ ವಾಣಿಜ್ಯ ವ್ಯವಹಾರಗಳು ಅಧಿಕವಾಗಿ ಕಂಪನಿಗಳ ಮುಖಾಂತರವೇ ನಡೆಯುವುದು ವಾಡಿಕೆ ಆದುದರಿಂದ ಕಂಪನಿಗಳನ್ನು ಸ್ಥಾಪಿಸುವುದು, ಅವುಗಳ ಕಾರ್ಯನಿರ್ವಾಹ ಮಾಡುವುದು ; ಮುಖ್ಯವಾಗಿ ಅವುಗಳ ಆಡಳಿತ ವಿಚಾರದ ಭಾಗವು ಮತ್ತೊಂದು (Company management & secretarial Practice etc.,)

೫ ಆಧುನಿಕ ವಾಣಿಜ್ಯದಲ್ಲಿ ವಿಮಾ ಕಂಪನಿಗಳ ಉದ್ಯಮವು ಬಹು ಶ್ಲಾಘನೀಯವಾಗಿದೆ. ಅನಿರೀಕ್ಷಿತವಾಗಿ ಬಂದೊದಗುವ ವಿಪತ್ತುಗಳಿಂದುಂಟಾಗುವ ನಷ್ಟಪರಿಹಾರಕ್ಕೂ, ದೇಶದ ಕೈಗಾರಿಕೆ ವಾಣಿಜ್ಯಗಳಿಗೆ ಹಣವನ್ನೊದಗಿಸುವುದಕ್ಕೂ ವಿಮಾ ಕಂಪನಿಗಳು ಬಹಳ ಸಹಾಯಮಾಡುತ್ತಲಿವೆ. ಆದುದರಿಂದ ವಿಧವಿಧವಾದ ವಿಮಾ ಉದ್ಯಮಗಳಿಗೆ ಸಂಬಂಧಪಟ್ಟ ಭಾಗವೂ ಒಂದು. (Shipping and Insurance.)

ಮೇಲೆ ಹೇಳಿದ ಐದು ಭಾಗಗಳನ್ನೂ ವಾಣಿಜ್ಯದ ಅಂಗಗಳೆಂಬುದಾಗಿ ಕರೆಯಬಹುದು. ಇವುಗಳಿಗೆ ಅನ್ವಯಿಸತಕ್ಕ ಪಠ್ಯ ವಿಷಯಗಳು ಅನೇಕವಿವೆ. ಇವುಗಳೆಲ್ಲಕ್ಕೂ ಪ್ರತ್ಯೇಕ ಪ್ರತ್ಯೇಕವಾದ ಪಠ್ಯ ವಿಷಯಗಳನ್ನು ಸೂಚಿಸಲು ಸಾಧ್ಯವಾಗುವುದಿಲ್ಲ ಅನೇಕ ಪಠ್ಯ ವಿಷಯಗಳು ಎಲ್ಲವುಗಳಿಗೂ ಅನ್ವಯಿಸುತ್ತವೆ. ಮಿಕ್ಕ ಕೆಲವು ಇತರ ಭಾಗಗಳಿಗೆ ಮಾತ್ರ ಅನ್ವಯಿಸುತ್ತವೆ. ಯಾರು ಯಾರಿಗೆ ಯಾವ ಭಾಗಗಳಲ್ಲಿ ಪ್ರವೇಶ ಮಾಡಲು ಅಪೇಕ್ಷೆಯಿರುವುದೋ ಅವರು ಅದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಶಿಕ್ಷಣಪಡೆಯಬೇಕು

ಸಾಮಾನ್ಯವಾಗಿ ಈ ಕೆಳಗೆ ಹೇಳಿರುವ ಪಠ್ಯ ವಿಷಯಗಳಲ್ಲಿ ಶಿಕ್ಷಣ ಪಡೆಯುವುದು ಎಲ್ಲರಿಗೂ ಅಗತ್ಯವಿರುತ್ತದೆ. ಇವು ಯಾವುವೆಂದರೆ.

೧ ದೇಶದ ಒಳಗಿನ ಮತ್ತು ಹೊರಗಿನ ವ್ಯಾಪಾರ (Import & Export Trade.)

೨ ವ್ಯಾಪಾರ ಸುವ್ಯವಸ್ಥೆ (Business organisation & salesmanship )

೩ ಲೆಕ್ಕಗಳನ್ನು ಬರೆಯುವುದು (Accountancy.)

೪ ಲೆಕ್ಕ ತನಿಖೆಗಳು (Auditing.)

೫ ವಾಣಿಜ್ಯ ಗಣಿತ (Commercial Arithmethic)

೬ ಜಾಹೀರಾತುಗಳು (Advertising)

೭ ವಾಣಿಜ್ಯ ಭೂವಿವರಣೆ (Commercial Geograppy)

೮ ವಾಣಿಜ್ಯ ಪತ್ರವ್ಯವಹಾರ (Business Correspondence)

೯ ವಾಣಿಜ್ಯಕ್ಕೆ ಸಂಬಂಧಪಟ್ಟ ಕಾನೂನುಗಳು. (Mercantile Law)

೧೦ ಕಂಪೆನಿಗಳ ಕಾನೂನುಗಳು (Company Law)

೧೧ ಅರ್ಥಶಾಸ್ತ್ರ (Economics)

೧೨ ಬ್ಯಾಂಕುಗಳ ಆಡಳಿತ ಮುಂತಾದ್ದು (Banking)

೧೩ ವಿಮಾ ವಿಷಯಗಳು (Insurance)

೧೪ ಕಂಪೆನಿಯ ಆಡಳಿತ ವಿಚಾರಗಳು (Management and Secretarial Practice etc.,) ಇತ್ಯಾದಿ ಇತ್ಯಾದಿ.

ಮೇಲೆ ಹೇಳಿರುವ ವಿಷಯಗಳಲ್ಲಿ ಯಾರು ಯಾರಿಗೆ ಯಾವುದು ಅನ್ವಯಿಸುವುದೋ ಅದರಲ್ಲಿ ಅವರು ತಮ್ಮ ತಮ್ಮ ದರ್ಜೆಗೆ ತಕ್ಕಂತೆ ಪ್ರಾವೀಣ್ಯತೆ ಪಡೆಯಬೇಕು.

ಈಗ ನಮ್ಮ ದೇಶದ ವಾಣಿಜ್ಯೋದ್ಯಮದಲ್ಲಿ ತೊಡಗಿರುವ ಜನರನ್ನು ಸಾಮಾನ್ಯವಾಗಿ ಎರಡು ಪಂಗಡಗಳಾಗಿ ವಿಂಗಡಿಸಬಹುದು. ಸಾಮಾನ್ಯವಾಗಿ ಕಂಪೆನಿಗಳು ಮುಂತಾದುವುಗಳಲ್ಲಿ ಗುಮಾಸ್ತೆಯ ದರ್ಜೆಯಲ್ಲಿರತಕ್ಕವರ ಪಂಗಡವುಂಟು ಮತ್ತು ಅಧಿಕಾರ ಸ್ಥಾನಗಳನ್ನು ವಹಿಸಿರತಕ್ಕವರ ಪಂಗಡವಿನ್ನೊಂದು. ಮೊದಲನೆಯ ಪಂಗಡದವರಿಗೆ ಚೆನ್ನಾಗಿ ಓದುವುದು, ಬರೆಯುವುದು, ಗಣಿತ ಇವುಗಳು ಬರುತ್ತಿರಬೇಕು. ಇವುಗಳನ್ನು ಇವರು ತಮ್ಮ ಪ್ರಾಥಮಿಕ, ಮಾಧ್ಯಮಿಕ ಮತ್ತು ಹೈಸ್ಕೂಲು ತರಗತಿಗಳಲ್ಲಿಯೇ ಕಲಿಯುತ್ತಾರೆ. ಇದರ ಜೊತೆಯಲ್ಲಿ ಇವರಿಗೆ ಆಫೀಸುಗಳಲ್ಲಿ ಕೆಲಸ ಮಾಡುವ ರೀತಿ, ಲೆಕ್ಕಗಳನ್ನು ಬರೆಯುವುದು, ಪತ್ರ ವ್ಯವಹಾರ, ತಕ್ಕಮಟ್ಟಿಗೆ ವಾಣಿಜ್ಯಕ್ಕೆ ಸಂಬಂಧಪಟ್ಟ ಕಾನೂನುಗಳ ತಿಳುವಳಿಕೆ ಇವುಗಳಲ್ಲಿ ಬಹಳವಾಗಿ ಪರಿಶ್ರಮವಿರಬೇಕಾದದ್ದು ಅಗತ್ಯವು. ಇದರೊಂದಿಗೆ ಸ್ವಚ್ಛವಾದ ಕೈಬರೆವಣಿಗೆ, ಕಾಲಕಾಲಕ್ಕೆ ಸರಿಯಾಗಿ ಕೆಲಸಗಳನ್ನು ಮಾಡುವ ವಾಡಿಕೆ ಪ್ರಾಮಾಣಿಕತನ ಮುಂತಾದುವುಗಳೂ ಅತ್ಯವಶ್ಯಕ.

ಎರಡನೆಯ ಪಂಗಡದವರಿಗೆ ಮೊದಲನೆಯ ಪಂಗಡದವರು ಕಲಿಯುವ ವಿಷಯಗಳಲ್ಲಿ ಇನ್ನೂ ಉಚ್ಚತರಗತಿಯ ಶಿಕ್ಷಣವು ದೊರೆಯಬೇಕು. ಒಂದು ವಾಣಿಜ್ಯ ಸಂಸ್ಥೆಯ ಜಯಾಪಜಯಗಳು ಅವರ ಕೈಯ್ಯಲ್ಲಿರುತ್ತವೆ, ... ರಿಂದಲೇ ಅವರಿಗೆ ಆಡಳಿತ ಕ್ರಮ, ಕಾನೂನು ವಿಚಾರ... ಅಂತರ ರಾಷ್ಟ್ರೀಯ ವ್ಯವಹಾರಗಳು ಇವುಗಳಲ್ಲಿ ಅಧಿಕ ಪರಿಶ್ರಮವಿರಬೇಕಾದರೆ ಬಹಳ ಉಚ್ಚ ತರಗತಿ... ಶಿಕ್ಷಣವನ್ನೇ ಕೊಡಬೇಕು. ಆಂದರೆ ಅವರು ತಮ್ಮ ... ಗಳನ್ನು ಸಾಮರ್ಥ್ಯದಿಂದಲೂ, ಕೌಶಲತೆಯಿಂದಲೂ ... ಹಿಸಿಕೊಂಡು ಹೋಗುವಷ್ಟು ಪ್ರವೀಣರಾಗುತ್ತಾರೆ. ... ಕಾಲದಲ್ಲಿ ಇಂತಹವರನೇಕ ಮಂದಿ ನಮ್ಮ ದೇಶದ ... ಜ್ಯಕ್ಕೆ ಬೇಕು. ಇಂತಹವರಿಲ್ಲದಿದ್ದರೆ ಅಧುನಿಕ ... ಸಂಸ್ಥೆಗಳು ಅಭಿವೃದ್ಧಿ ಹೊಂದಿ ಶ್ರೇಯಸ್ಸನ್ನು ... ವುದು ದುರ್ಲಭ.

ಇನ್ನೊಂದು ವಿಷಯವನ್ನು ಪ್ರಸ್ತಾಪಿಸಿ ಈ ... ವನ್ನು ಮುಗಿಸಲಾಗುವುದು. ನಮ್ಮ ದೇಶದಲ್ಲಿ ವಾಣಿ... ವಿಷಯಕವಾದ ಶಿಕ್ಷಣವನ್ನು ಕೊಡುವ ಸ್ಕೂಲು ... ಜುಗಳು ಬಹಳ ಕಡಮೆ, ಅದರಲ್ಲಿಯೂ ಶಿಕ್ಷಣ ... ನಂತರ ತಾವು ಶಿಕ್ಷಣ ಹೊಂದಿದ ವಿಷಯಗಳಲ್ಲಿ ಸ್ವಂತ ... ಭವ ಮಾಡಿಕೊಳ್ಳಲು (Practical Training) ... ರ್ಯಗಳು ಇಲ್ಲವೇ ಇಲ್ಲ. ಆದರೆ ಇದಕ್ಕೆ ಸರ... ವರೂ ಮತ್ತು ಪ್ರಜಾಮುಖಂಡರುಗಳೂ ಮನಸ್ಸು ... ದರೆ ತಕ್ಕ ಸೌಕರ್ಯಗಳನ್ನು ಒದಗಿಸುವುದು ಕಷ್ಟ... ಸ್ಕೂಲುಗಳಲ್ಲಿ ಶಿಕ್ಷಣ ಪಡೆದ ಯುವಕರಿಗೆ ಮುಖ್ಯ ... ವಾದ ಕಂಪನಿಗಳು, ಬ್ಯಾಂಕುಗಳು, ಇತರ ವಾ... ಸಂಸ್ಥೆಗಳು ಇವುಗಳಲ್ಲಿ ಕೆಲವು ಕಾಲವಾದರೂ ಕೆಲಸ... ಡಲು ಅವಕಾಶವನ್ನೊದಗಿಸಿಕೊಟ್ಟು ಅವರುಗಳಿಗೆ ... ಅನುಭವಮಾಡಿಕೊಳ್ಳಲು ಸಹಾಯಮಾಡತಕ್ಕದ್ದು ... ವಶ್ಯಕ.

ಮೇಲೆ ಹೇಳಿದ ಅಂಶಗಳಿಗೆ ಅಧಿಕಾರವರ್ಗದವ... ಪ್ರಜಾಮುಖಂಡರೂ ಗಮನಕೊಟ್ಟು ತಮ್ಮ ದೇಶದ ಯುವ... ಕರಿಗೆ ಸಹಾಯಮಾಡಲು ದೃಢಮನಸ್ಸಿನಿಂದ ನಿಂತರೆ ... ವಾಣಿಜ್ಯ ವ್ಯಾಪಾರಗಳು ಬಹು ಉತ್ಕೃಷ್ಟಸ್ಥಿತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಮತ್ತು ಇದರೊಂ... ನಿರುದ್ಯೋಗದ ಕಠಿಣ ಸಮಸ್ಯೆಯನ್ನು ಸಹ ... ಮಟ್ಟಿಗೆ ಸುಲಭವಾಗಿ ಪರಿಹರಿಸಿದಂತಾಗುತ್ತದೆ.



# ಬ್ಯಾಂಕುಗಳ ಸಮಾಜೀಕರಣ
## (Socialisation of Banking System)



ಲೇಖಕರು :

**ಶ್ರೀ॥ ಬಿ ಕೃಷ್ಣಮೂರ್ತಿ,**

ಬೆಂಗಳೂರು.

**Mr. B. Krishna murthy.**

ತಾನು ತನದೆಂಬ ಮೋಹ
ಜನರು ಜಗಕೆಸೆದ ದ್ರೋಹ
ವಿಶ್ವಮೈತ್ರಿಯನು ಬೆಳೆಸುವಾ
ಪೊಸರಾಜ್ಯವನು ಕಟ್ಟುವಾ

ವಿಚಾರದೇವತೆಯು ಸರ್ವರ ಮನವನ್ನಾವರಿಸಿ, ಕವಿದ ಮಬ್ಬಿನ ತೆರೆಯನ್ನು ಹರಿದೊಗೆಯಲು, ಹೊಸದೊಂದು ಪ್ರಕಾಶವು ಹೊರಹೊಮ್ಮಿದೆ. ಎಲ್ಲಿ ನೋಡಿದರೂ ಹೊಸಬಗೆಯ ಉತ್ಸಾಹವೊಂದು ತೋರುತ್ತಲಿದೆ. ತಾನು ತನ್ನದು ಎಂಬ ಸ್ವಾರ್ಥವು ಅಳಿದು ಜಗತ್ತಿನದು ಎಲ್ಲರದ್ದು ಆಗಬೇಕೆಂಬ ವೀರವಾಣಿಯು ಎಲ್ಲೆಡೆಯಲ್ಲಿಯೂ ಪ್ರತಿಧ್ವನಿಸುತ್ತಲಿದೆ. ಭಾರತವೂ ವಿಶ್ವದ ಇತರ ಚೇತನಗಳೊಂದಿಗೆ ಬೆರೆತು ಮುಂದುವರಿಯಬೇಕೆಂದು ಎಚ್ಚತ್ತಿದೆ. ಭಾರತದ ಎಲ್ಲಾ ಸಮಸ್ಯೆಗಳೂ ಪರಿಹಾರವಾಗಬೇಕಾದರೆ ಸಾಮ್ಯವಾದ ತತ್ವವೊಂದೇ ಸರಿಯಾದ ಸಾಧನವೆಂಬ ನಂಬಿಕೆಯು ಬೇರಿಡತೊಡಗಿದೆ. ಅದು ನೆಲೆಗೊಳ್ಳುವುದಾದರೆ ನಮ್ಮ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಮಾರ್ಪಾಟುಗಳಾಗುವುದು. ವ್ಯಕ್ತಿಗತ ಭೂಸ್ವಾಮ್ಯದ ಮತ್ತು ಕೈಗಾರಿಕೆ ಒಡೆತದ ಪದ್ಧತಿಯು ಕೊನೆಗೊಳ್ಳುವುದು. ಒಂದೇ ಮಾತಿನಲ್ಲಿ ಹೇಳುವುದಾದರೆ ವ್ಯಕ್ತಿಗತ ಸ್ವಾಮ್ಯವು ನಾಶವಾಗಿ ಸಹಕಾರ ಮೂಲಕವಾದ ಸಾಮಾಜಿಕ ಆಡಳಿತದ ಹೊಸ ಆರ್ಥಿಕ ವ್ಯವಸ್ಥೆಯು ಪ್ರಚಾರಕ್ಕೆ ಬರುವುದು. ಈ ಮಾರ್ಪಾಟು ಕೊನೆಯಲ್ಲಿ ಯಾವ ರೂಪು ತಾಳಬಹುದೆಂಬುದನ್ನು ನಾವು ಸೋವಿಯಟ್ ರಷ್ಯದ ಘಟನೆಯಲ್ಲಿ ಕಾಣಬಹುದು. ರಷ್ಯದ ಆದರ್ಶವು ಸ್ಥಿರವಾಗುಳಿಯಲು ಬಂದಿದೆ. ಸಾಮಾಜಿಕಾಡಳಿತ ವ್ಯವಸ್ಥೆಯೇ ಭಾರತದ ಮುಕ್ತಿಮಾರ್ಗವೆಂದು ನುಡಿದ ಭಾರತದ ವೀರ ಭವಿಷ್ಯ ಧರ್ಮವು ಬ್ಯಾಂಕಿಂಗ್ ವ್ಯವಹಾರದಲ್ಲಿ ಎಂತಹ ಮಾರ್ಪಾಟುಗಳನ್ನು ತರಬಹುದೆಂಬುದನ್ನು ಸೂಚಿಸುವುದೇ ಈ ಲೇಖನದ ಉದ್ದೇಶ.

ಬ್ಯಾಂಕಿಂಗ್ ಮತ್ತು ಇತರ ಅರ್ಥಸಂಸ್ಥೆಗಳ ಆಡಳಿತವು ವ್ಯಕ್ತಿಗತವಾದುದಿರಬೇಕೇ ಅಥವಾ ಸಾಮಾಜಿಕವಾದುದಿರಬೇಕೇ ಎಂಬುದು ಒಂದು ಮಹತ್ವದ ಪ್ರಶ್ನೆಯಾಗಿ ಪರಿಣಮಿಸಿದೆ. ಕೈಗಾರಿಕೋದ್ಯಮಗಳು ಪರಸ್ಪರ ಸಹಾಯಕವಾಗಿರುವಂತೆ ಪ್ರಗತಿಹೊಂದಲು ಅನುಸರಿಸಬೇಕಾದ ಕಾರ್ಯಕ್ರಮವನ್ನು ಕಾರ್ಯರೂಪದಲ್ಲಿ ತರಲು ಬ್ಯಾಂಕುಗಳ ಸಮಾಜೀಕರಣವು ಅತ್ಯಗತ್ಯವಾದುದು. ಬ್ಯಾಂಕಿಂಗ್ ವ್ಯವಹಾರವು ಎಲ್ಲ ಕೈಗಾರಿಕೆಗಳಮೇಲೂ ಪ್ರಭಾವವುಳ್ಳ ಪ್ರಮುಖ ಉದ್ಯಮ. ಬಂಡವಾಳದ ಸಹಾಯವಿಲ್ಲದೆ ಯಾವಕೈಗಾರಿಕೆಯೂ ಬದುಕಲಾರದು. ಆಧುನಿಕ ಕಾಲದಲ್ಲಿ ಅಂತಹ ಸಹಾಯವನ್ನು ಒದಗಿಸಲು ಬ್ಯಾಂಕುಗಳಿಗೆ ಮಾತ್ರ ಸಾಧ್ಯ. ಆದುದರಿಂದ ರಾಷ್ಟ್ರೀಯ ಕೈಗಾರಿಕಾ ವ್ಯವಸ್ಥೆಯನ್ನು ತನಗೆ ತೋಚಿದರೀತಿ ಮಾರ್ಪಡಿಸುವ ಶಕ್ತಿಯು ಬ್ಯಾಂಕುಗಳಿಗಿದೆ. ಏಕೆಂದರೆ ಬಂಡವಾಳವನ್ನು ಸುಲಭದರದಲ್ಲಾಗಲೀ ಅಧಿಕ ದರದಲ್ಲಾಗಲೀ ದೊರೆಯುವಂತೆ ಮಾಡುವುದಷ್ಟೇ ಅಲ್ಲದೆ ಹಲವು ಕೈಗಾರಿಕೆಗಳಿಗೆ ಅದು ದೊರೆತು ಇನ್ನು ಹಲವು ಕೈಗಾರಿಕೆಗಳಿಗೆ ಅದು ದೊರೆಯದಂತೆ ಮಾಡುವುದು ಅದಕ್ಕೆ ಶಕ್ಯವಿದೆ. ಹೀಗಿರಲು, ರಾಷ್ಟ್ರೀಯ ಕೈಗಾರಿಕಾ ಕಾರ್ಯಕ್ರಮವನ್ನು ನಿರ್ವಹಿಸುವ ಸಂಸ್ಥೆಗೆ ಬ್ಯಾಂಕಿಂಗ್ ವ್ಯವಹಾರದಮೇಲೆ ಅಧಿಕಾರವಿರದಿದ್ದರೆ ಅದು ತನ್ನ ಅಭಿಲಾಷೆಯನ್ನು ಕಾರ್ಯದಲ್ಲಿ ತರುವುದು ಸಾಧ್ಯವಾಗದು. ಆದುದರಿಂದ ಯಾವುದೇ ಧೋರಣವನ್ನು ನಡೆಸಿಕೊಂಡು ಬರುವುದು ಅದಕ್ಕೆ ಸಾಧ್ಯವಾಗದು. ಬ್ಯಾಂಕುಗಳ ಸಮಾಜೀಕರಣವು ಜಗತ್ತನ್ನು

ಸಾಮ್ಯವಾದ ವ್ಯವಸ್ಥೆಗೆ ಮಾರ್ಪಡಿಸಲು ಬೇಕಾದ ಅವಶ್ಯಕ ಸಾಧನವಷ್ಟೇ ಅಲ್ಲದೆ, ಅದು ಆ ಮಾರ್ಪಾಟಿನಲ್ಲಿ ಅತಿ ಶೀಘ್ರವಾಗಿಯೇ ಆಗಬೇಕಾದುದೆಂದು ಸಾಮ್ಯವಾದಿಗಳು ನಿರ್ಧರಕ್ಕೆ ಬಂದಿರುವರು. ಏಕೆಂದರೆ ಸಾಮಾಜಿಕಾಡಳಿತಕ್ಕೆ ಒಳಪಟ್ಟ ಬ್ಯಾಂಕುಗಳ ಮೂಲಕ ಇತರಕಡೆ ಸಾಮಾಜಿಕಾಡಳಿತ ವ್ಯವಸ್ಥೆಯನ್ನು ತರುವುದು ಸುಲಭಸಾಧ್ಯ. ಅಲ್ಲದೆ ಇಡೀ ಕೈಗಾರಿಕೋದ್ಯಮದ ಮೇಲೆ ಸಮಾಜವಾದಿ ಸರಕಾರದ ಧೋರಣವು ನೆಲೆಸಿರುವಂತೆ ಮಾಡಬಹುದು.

ಬ್ಯಾಂಕುಗಳ ಸಮಾಜೀಕರಣ ವಿಷಯವನ್ನು ನಾಲ್ಕು ವಿಭಾಗ ಮಾಡಬಹುದು. ೧. ಸೆಂಟ್ರಲ್ ಬ್ಯಾಂಕಿನ ಸಮಾಜೀಕರಣ ೨. ಡಿಪಾಜಿಟ್ಟು ಬ್ಯಾಂಕುಗಳ ಸಮಾಜೀಕರಣ. ೩. ಬಂಡವಾಳ ಹೊರಹಾಕುವ ಸಂಸ್ಥೆಗಳ ಸಮಾಜೀಕರಣ ೪. ಮತ್ತು ಹಣಕಾಸಿನ ವ್ಯವಹಾರಕ್ಕೆ ಸಂಬಂಧಿಸಿರುವ ಇತರ ಅರ್ಥ ಸಂಸ್ಥೆಗಳ ಸಮಾಜೀಕರಣ. ಇವು ಪ್ರತಿಯೊಂದರ ಕಾರ್ಯವೂ ಪ್ರತ್ಯೇಕವಾದುದು ಮತ್ತು ಪ್ರತಿಯೊಂದರ ಸಮಾಜೀಕರಣಕ್ಕೆ ಪ್ರತ್ಯೇಕ ಮಾರ್ಗಗಳನ್ನನ್ನನುಸರಿಸಿ ನಡೆಯಬೇಕಾಗುವುದು.

## ಸೆಂಟ್ರಲ್ ಬ್ಯಾಂಕ್

ಸಾಧಾರಣವಾಗಿ ಎಲ್ಲಾ ದೇಶಗಳಲ್ಲಿಯೂ ಸೆಂಟ್ರಲ್ ಬ್ಯಾಂಕುಗಳ ಮೇಲೆ ಈಗಾಗಲೇ ಸರಕಾರಗಳ ಅಧಿಕಾರವು ವಿಶೇಷವಾಗಿದೆ. ವೈಯಕ್ತಿಕ ಆಡಳಿತವಿರುವ ಈ ಸೆಂಟ್ರಲ್ ಬ್ಯಾಂಕುಗಳನ್ನು ಸಾಮಾಜಿಕ ಒಡೆತನ ಮತ್ತು ಆಡಳಿತಕ್ಕೆ ಒಳಪಡಿಸುವುದು, ಎಷ್ಟೇ ವಿರೋಧವಿರಲಿ, ಅತಿ ಸುಲಭವಾದುದೆಂದೇ ಹೇಳಬೇಕು. ಸೆಂಟ್ರಲ್‌ಬ್ಯಾಂಕಿನ ಸಮಾಜೀಕರಣವು ಸೂಚಿಸಲ್ಪಟ್ಟಿರುವ ಕಡೆಗಳಲ್ಲೆಲ್ಲಾ ಅದು ಸರಕಾರದ ಬಂಡವಾಳದ ಸಾಮಾಜಿಕ ಸಂಸ್ಥೆಯಾಗಬೇಕೆಂದೂ ಸರಕಾರದಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಅದರ ಆಡಳಿತ ನಿರ್ವಹಿಸಬೇಕೆಂದೂ, ಜೊತೆಗೆ ಅದರ ಒಳ ಆಡಳಿತ ನಡೆಸಲು ವ್ಯವಹಾರ ಪ್ರವೀಣರ ಮಂಡಲವೊಂದಿರಬೇಕೆಂದೂ ಸಲಹೆಗಳು ಬಂದಿವೆ. ಆದುದರಿಂದ ಯಾವುದಾದರೊಂದು ದೇಶದ ಸೆಂಟ್ರಲ್‌ಬ್ಯಾಂಕನ್ನು ಸಾಮಾಜಿಕ ಒಡೆತನಕ್ಕೆ ಒಳಪಡಿಸುವಾಗ ಈ ರೀತಿ ಮುಂದುವರಿಯಬಹುದು. ಉಚಿತ ಪ್ರತಿಫಲವಿತ್ತು ಅದರ ಷೇರು ಬಂಡವಾಳವನ್ನು ಸರಕಾರವು ವಶಪಡಿಸಿಕೊಳ್ಳುವುದು. ಮತ್ತು ಇರುವ ಆಡಳಿತ ಮಂಡಲಿಗೆ ಬದಲಾಗಿ ಸರಕಾರದಿಂದ ಬೇರೊಂದು ಆಡಳಿತ ಮಂಡಲಿಯನ್ನು ನೇಮಿಸುವುದು. ಇದು ಇನ್ನೂ ಪ್ರಶ್ನೆಯ ಪ್ರಥಮ ಸೋಪಾನ. ಏಕೆಂದರೆ ಈ ಮಂಡಲಿಯಲ್ಲಿ ಸ... ರದ ಪ್ರತಿನಿಧಿಗಳಿರಬೇಕೋ ಅಥವಾ ಸಮಾಜದಲ್ಲಿ... ವಿವಿಧ ಕೈಗಾರಿಕೋದ್ಯಮಿಗಳಿಂದ ಚುನಾಯಿತರಾದ ಪ್ರ... ನಿಧಿಗಳಿರಬೇಕೋ ಎಂಬ ಪ್ರಶ್ನೆ ಬರುವುದು. ಆದರ ಆಡ... ತನಿರ್ವಾಹಕರು ಅರಿತ ನುರಿತ ಪ್ರವೀಣರಿದ್ದು ಸರ... ಮೇಲಾಧಿಕಾರಕ್ಕೊಳಪಟ್ಟಿದ್ದರೂ, ಸರಕಾರಕ್ಕೆ ಬುದ್ಧಿ... ಕೊಡುವುದಕ್ಕೆ ಶಕ್ತಿಯುಳ್ಳವರಾಗಿರಬೇಕೆಂಬುದು ಅನೇ... ಅಭಿಮತ.

ಇನ್ನು 'ಸೆಂಟ್ರಲ್ ಬ್ಯಾಂಕಿನ ಮೇಲೆ ಸರಕಾರದ ... ಕಾರವೆಷ್ಟಿರಬೇಕೆಂಬ ಪ್ರಶ್ನೆಯಿದೆ. ಅಧಿಕಾರ ಮೇರೆಯ... ನಿಬಂಧನೆಗಳ ಮೂಲಕ ನಿರ್ಭಂಧಿಸುವುದು ... ಅದನ್ನು ಅನುಭವದ ಮೇಲೆ ನಿಶ್ಚಯಿಸಬೇಕಾ... ಸಾಮಾನ್ಯವಾಗಿ ಆ ಅಧಿಕಾರ ರೀತಿಯು ಹೀಗಿರಬೇಕೆ... ಹೇಳಬಹುದು. ಮೊದಲನೆಯದಾಗಿ, ಬ್ಯಾಂಕಿನ ಮು... ಧೋರಣವು ಸರಕಾರದ ಆಡಳಿತಕ್ಕೊಳಪಡಬೇಕು. ಬ್ಯಾಂ... ಕಿನ ಒಳ ಆಡಳಿತ ನಿರ್ವಹಣಕ್ಕೆ ಸರಕಾರವು ಕೈಹಾಕ... ಕಾಗಿಲ್ಲ. ಅದನ್ನು ಬ್ಯಾಂಕಿನ ಆಡಳಿತ ನಿರ್ವಾಹಕ ಮಂ... ಲಿಗೆ ಸಂಪೂರ್ಣವಾಗಿ ಬಿಡಬೇಕು. ಎರಡನೆಯದಾ... ಆಡಳಿತ ಮಂಡಲಿಯನ್ನು ನೇಮಿಸಿದಂತೆಯೇ ಅವ... ಯಾವಾಗ ಬೇಕಾದರೂ ತೆಗೆದುಹಾಕುವ ಅಧಿಕಾರವು ... ಕಾರಕ್ಕಿರಬೇಕು. ಮೂರನೆಯದಾಗಿ, ನ್ಯಾಯವಿಧಾಯ... ಸಭೆಯಲ್ಲಿ ಬ್ಯಾಂಕಿನ ವಿಚಾರ ಪ್ರಶ್ನೆಗಳಿಗೆ ಉತ್ತರ ಕೊಡ... ಜವಾಬ್ದಾರಿ ಹೊರುವ ಸಚಿವರೊಬ್ಬರನ್ನು ನೇಮಿಸಬೇಕು ... ಈ ಸಭೆಯ ಚರ್ಚೆಯು ಬ್ಯಾಂಕಿನ ಧೋರಣವನ್ನು ಮಾ... ಕುರಿತುದಾಗಿರಬೇಕು. ನಾಲ್ಕನೆಯದಾಗಿ, ಸೆಂಟ್ರ... ಬ್ಯಾಂಕಿನ ವ್ಯವಹಾರಗಳು, ಆರ್ಥಿಕ ಕಾರ್ಯಕ್ರಮವ... ನ್ನು ಕಾರ್ಯರೂಪದಲ್ಲಿ ತರಲು ನೇಮಿಸಲ್ಪಟ್ಟಿ... ಸಂಸ್ಥೆಯ ಅಭಿಲಾಷೆಯನ್ನು ಅನುಸರಿಸಿದುದಾಗಿರಬೇ...

## ಡಿಪಾಜಿಟ್ ಬ್ಯಾಂಕು

ಡಿಪಾಜಿಟ್ ಬ್ಯಾಂಕುಗಳ ಸಮಾಜೀಕರಣವು ... ಚರ್ಚಿಸಿದ ವಿಷಯಗಳಿಗಿಂತ ಬೇರೆ ವಿಧದ ಪ್ರಶ್ನೆಗ... ಆಸ್ಪದಕೊಡುವುದು. ಏಕೆಂದರೆ ಸೆಂಟ್ರಲ್ ಬ್ಯಾಂಕಿನ ... ಕಾರವು ಸಮಾಜದಲ್ಲಿ ಒಟ್ಟು ಬಂಡವಾಳ ವಿನಿಯಮಕ್ಕೆ ... ದೊರೆಯುವ ನಿಧಿಗೆ ಸಂಬಂಧಿಸಿದುದಾಗಿ ತನ್ಮೂಲಕ ... ದಲ್ಲಿನ ಪದಾರ್ಥಗಳ ಬೆಲೆಯ ಮೇಲೆ ಪ್ರಭಾವವುಳ್ಳ... ಗಿದೆ. ಆದರೆ ಡಿಪಾಜಿಟ್ ಬ್ಯಾಂಕುಗಳ ವ್ಯವಹಾ...

ಉಪಯೋಗಕ್ಕಿರುವ ಬಂಡವಾಳದ ವಿವಿಧ ರೀತಿಯ ವಿನಿಮ ಯಕ್ಕೆ ಸಂಬಂಧಿಸಿದುದಾಗಿರುತ್ತದೆ. ಈ ಬಂಡವಾಳ ವಿನಿಮಯ ರೀತಿಯಿಂದ ಇವು ಹಲವು ಉದ್ಯಮಗಳ ಏಳ್ಗೆಗೂ ಮತ್ತೆ ಹಲವು ಉದ್ಯಮಗಳ ನಾಶಕ್ಕೂ ಕಾರಣವಾಗಬಹುದು.

ಒಂದು ದೇಶವು ತನ್ನ ಆರ್ಥಿಕ ಅಭಿವೃದ್ಧಿಗಾಗಿ ರಾಷ್ಟ್ರೀಯ ಕಾರ್ಯ ಕ್ರಮವೊಂದನ್ನು ಅನುಸರಿಸಿದೆ ಯೆಂದು ಭಾವಿಸುವ. ಈ ಕಾರ್ಯಕ್ರಮದ ಧ್ಯೇಯವು ಒಟ್ಟಿನಲ್ಲಿ ಕೈಗಾರಿಕೆಗಳ ಸಾರ್ವತ್ರಿಕ ಅಭಿವೃದ್ಧಿ ಅಷ್ಟೇ ಆಗಿ ರದೆ ವಿವಿಧ ಕೈಗಾರಿಕೆಗಳ ವ್ಯವಸ್ಥಿತ ಪ್ರಮಾಣದ ಅಭಿವೃದ್ಧಿ ಯಾಗಿರುತ್ತದೆ. ಆದುದರಿಂದ ಕಾರ್ಯಕ್ರಮದ ವಿಶಾಲ ವಿವಿಧ ಆವಶ್ಯಕತೆಗಳನ್ನನುಸರಿಸಿ ದೇಶದ ಬಂಡವಾಳವನ್ನು ವಿವಿಧ ಕೈಗಾರಿಕೆಗಳಿಗೆ ಸಮರ್ಪಕ ರೀತಿ ವಿನಿಮಯಿಸಬೇಕಾಗುತ್ತದೆ. ಆರ್ಥಿಕಾಭಿವೃದ್ಧಿಗೆ ಆವಶ್ಯಕವಾದ ರೀತಿ ಬಂಡವಾಳ ದೊರಕಿಸುವ ವ್ಯವಸ್ಥೆಯಿರಿಸದೆ, ಕಾರ್ಯಕ್ರಮ ಹಾಕುವುದಾದರೆ ಅರ್ಥವಿಲ್ಲದಾಗುವುದು. ಆದುದರಿಂದ ಯಾವುದೇ ಆರ್ಥಿಕ ಕಾರ್ಯಕ್ರಮವು ಕಾರ್ಯರೂಪದಲ್ಲಿ ಬರಬೇಕಾದರೆ ಡಿಪಾಜಿಟ್ಟು ಬ್ಯಾಂಕುಗಳ ಕೈಕಾರಿಕೆ ವ್ಯಾಪಾರೋದ್ಯಮಗಳಿಗೆ ಬಂಡವಾಳ ಒದಗಿಸುವ ವ್ಯವಹಾರವು ಕಾರ್ಯಕ್ರಮವನ್ನು ಅನುಸರಿಸಿದುದಾಗಿರಬೇಕು. ಇಲ್ಲದಿದ್ದರೆ ಕಾರ್ಯಕ್ರಮವು ಮುರಿದು ಬೀಳುವುದು.

ಜಾಯಿಂಟ್ ಸ್ಟಾಕ್ ಕಂಪೆನಿಗಳನ್ನು ಸಾಮಾಜಿಕ ಆಡಳಿತಕ್ಕೆ ಒಳಪಡಿಸಬೇಕಾದರೆ ಅನುಸರಿಸ ಬೇಕಾದ ಕ್ರಮವೇನು? ಎಲ್ಲ ಬ್ಯಾಂಕುಗಳನ್ನೂ ಒಟ್ಟು ಸೇರಿಸಿ ರಾಷ್ಟ್ರೀಯ ಸಂಸ್ಥೆಯೊಂದನ್ನಾಗಿ ಮಾರ್ಪಡಿಸುವುದು. ಅನಪೇಕ್ಷಿತವಾದುದು. ಏಕೆಂದರೆ ಒಡೆತನವು ಬದಲಾಯಿಸಿದ ಮರುದಿನ ಈ ರಥವನ್ನು ಮುಂದೆ ಎಳೆಯುವುದೇ ಕಷ್ಟವಾಗಬಹುದು. ಆದಕ್ಕೆ ಪ್ರತಿಯಾಗಿ, ಈ ಎಲ್ಲ ಬ್ಯಾಂಕುಗಳು ಕಾಲಕ್ರಮದಲ್ಲಿ ಮಾಯವಾಗಿ, ಅವುಗಳ ಸ್ಥಾನದಲ್ಲಿ ಒಂದೊಂದು ಪ್ರತ್ಯೇಕ ವ್ಯವಹಾರದಲ್ಲಿ ನುರಿತ ಒಂದಕ್ಕೊಂದು ಸಂಬಂಧಿಸಿದ ಹಲವು ಬ್ಯಾಂಕಿಂಗ್ ಸಂಸ್ಥೆಗಳು ವ್ಯವಹಾರ ನಡೆಸುವುವು. ನಿದರ್ಶನವಾಗಿ, ರಷ್ಯದಲ್ಲಿ ಈ ಮಾರ್ಪಾಟು ನಡೆಯುತ್ತಿದೆಯೆಂದು ತೋರುತ್ತದೆ. ಸಾಮಾಜಿಕ ವ್ಯವಸ್ಥೆಯು ನೆಲೆಗೊಳ್ಳುವ ಪ್ರಥಮದಲ್ಲಿ ವೈಯಕ್ತಿಕ ಆಡಳಿತವುಳ್ಳ ಡಿಪಾಜಿಟ್ಟು ಬ್ಯಾಂಕುಗಳನ್ನು ದೂಪಿನಲ್ಲಿ ಕೆಲಕಾಲ ಆದೇರೀತಿ ಉಳಿಸಿಕೊಳ್ಳುವುದು ಅನುಕೂಲವಾದುದೆಂದು ತೋರುವುದು. ಈ ರೀತಿ ಸರಕಾರವು ಅದನ್ನು ಒಂದೊಂದಾಗಿ ತನ್ನ ಆಡಳಿತಕ್ಕೆ ತೆಗೆದುಕೊಂಡು ಹೊಸ ಸಾರ್ವಜನಿಕ ಬ್ಯಾಂಕಿಂಗ್ ವ್ಯವಹಾರ ಮೇಲ್ವಿಚಾರಕ ಸಂಸ್ಥೆಯೊಂದರ ಸೂಚನೆಗಳನ್ನನುಸರಿಸುವ ಪ್ರತ್ಯೇಕ ಶಾಖೆಗಳಾಗಿಡಬಹುದು.

## ಬಂಡವಾಳ ಹೊರಹಾಕುವ ಸಂಸ್ಥೆಗಳು

ಯಾವುದೇ ಆರ್ಥಿಕಾಭಿವೃದ್ಧಿಯ ಕಾರ್ಯಕ್ರಮವು ಯಶಸ್ವಿಯಾಗಲು ಕಾರ್ಯಕ್ರಮದ ನಿರ್ವಾಹಕರಿಗೆ ಅಲ್ಪ ಮತ್ತು ದೀರ್ಘ ಅವಧಿಯ ಸಾಲವ್ಯವಸ್ಥೆಯಮೇಲೆ ಹಿಡಿತ ವಿರಿಸುವ ಅಧಿಕಾರವಿರಬೇಕು. ಕಾರ್ಯಕ್ರಮದ ರೀತಿ ಅದು ವಿಚಕ್ಷಣೆಯಿಂದ ಜರುಗಬೇಕು. ರಾಷ್ಟ್ರೀಯ ಬಂಡವಾಳ ವಿನಿಮಯ ಸಮಿತಿಯನ್ನು ಸ್ಥಾಪಿಸಿ ಬಂಡವಾಳ ವಿನಿಮಯ ವ್ಯವಹಾರವನ್ನು ವ್ಯವಸ್ಥೆಗೊಳಿಸುವ ಅಧಿಕಾರ ಆದಕ್ಕೆ ವಹಿಸಬೇಕು.

## ವಿಮಾ ಕಂಪನಿಗಳು

ಬಂಡವಾಳ ವಿನಿಮಯಗಾರರಲ್ಲಿ ಇಂದು ವಿಮಾ ಕಂಪೆನಿಗಳಿಗೆ ಪ್ರಮುಖಸ್ಥಾನವಿದೆ. ವಿಮಾ ಕಂಪನಿಗಳಿಗೆ ಜನರಿಂದ ಹೆಚ್ಚು ಹೆಚ್ಚು ದುಡ್ಡು ಬರುತ್ತಲೇ ಇರುವುದರಿಂದ ಅವರು ಅದನ್ನು ಆಡಿಗಡಿಗೆ ಬಂಡವಾಳಕ್ಕಾಗಿ ವಿನಿಯೋಗಿಸಬೇಕಾಗುವುದು. ಈ ರೀತಿ ಅನೇಕ ಜನರು ಉಳಿಸಿದ ಹಣವು ಹಲವು ಬಂಡವಾಳ ಶಾಹಿ ಸಂಸ್ಥೆಗಳ ಕೈಯಲ್ಲಿ ಬಂಡವಾಳಕ್ಕಾಗಿ ವಿನಿಮಯಿಸಲು ಇರುವುದು. ಇವುಗಳ ವ್ಯವಹಾರವು ಮಹತ್ವದ ವಿಷಯವಾಗಿದೆ. ವಿಮಾ ಕಂಪೆನಿಗಳು ತಮ್ಮ ಬಂಡವಾಳದಲ್ಲಿ ಬಹು ಭಾಗವನ್ನು ಸರಕಾರಿ ಸೆಕ್ಯೂರಿಟಿಗಳಲ್ಲೂ ಉಳಿದ ಭಾಗವನ್ನು ಕೈಗಾರಿಕೆ ವ್ಯಾಪಾರೋದ್ಯಮಗಳಲ್ಲಿಯೂ ವಿನಿಮಯಿಸುವುವು, ಆದುದರಿಂದ, ಆರ್ಥಿಕ ಕಾರ್ಯಕ್ರಮದ ಚಾಲಕರಾದ ರಾಷ್ಟ್ರೀಯ ಬಂಡವಾಳ ವಿನಿಮಯ ಸಮಿತಿಯವರು ವಿಮಾ ಕಂಪೆನಿಗಳ ಸಮಾಜೀಕರಣವನ್ನು ಸೂಚಿಸುವುದಾದರೆ ಅದು ಯುಕ್ತವಾದುದಾಗಿಯೇ ಇದೆ. ಅಂದು ಪಾಲಿಸಿದಾರರಿಗೆ ಸರಕಾರವು ಭದ್ರತೆಯ ಬಗ್ಗೆ ಭರವಸೆ ನೀಡಬೇಕಾಗುವುದು. ವಿಮಾ ಕಂಪನಿಗಳ ಸಮಾಜೀಕರಣದಿಂದ, ಸಾರ್ವ ಜನಿಕರಿಂದ ಸಾಲದಮೂಲಕ ದೊರೆಯುವ ಬಂಡವಾಳದ ಜೊತೆಗೆ, ಬೇರೆರೂಪದಿಂದ ಶೇಕೃತವಾದ ನಿಧಿಗಳನ್ನೂ ಕಾರ್ಯಕ್ರಮಕ್ಕಾಗಿ ವಿನಿಯೋಗಿಸಲು ರಾಷ್ಟ್ರೀಯ ಬಂಡವಾಳ ವಿನಿಮಯ ಸಮಿತಿಗೆ ಅನುಕೂಲವಾಗುವುದು. ವಿಮಾ ವ್ಯವಹಾರವು ಸಾಮಾಜಿಕ ಆಡಳಿತಕ್ಕೆ ಯೋಗ್ಯವೆನಿಸುವಷ್ಟು ಪ್ರಮುಖವಾದುದಾಗಿ ಪರಿಣಮಿಸಿದೆ

ಹಾಗಾಗುವುದಾದರೆ ಉದ್ಯಮದ ಆಡಳಿತ ವೆಚ್ಚವೂ ಕಡಮೆ ಯಾಗುವುದೆಂಬುದು ನಿಸ್ಸಂಶಯವು. ಇದರಷ್ಟು ಸುಲಭ ವಾಗಿ ಸಾಮಾಜಿಕ ಆಡಳಿತಕ್ಕೆ ಒಳಪಡಿಸಬಹುದಾದ ಅರ್ಥ ಸಂಸ್ಥೆಯು ಮತ್ತಿನ್ನೊಂದಿಲ್ಲ.

ಆರ್ಥಿಕ ಕಾರ್ಯಕ್ರಮವು ಅಗತ್ಯವಾದುದೆಂದು ತಿಳಿದಿರುವ ಸಮಾಜವಾದಿಗಳು ಸೆಂಟ್ರಲ್ ಬ್ಯಾಂಕುಗಳ ಮತ್ತು ಡಿಪಾಜಿಟ್ ಬ್ಯಾಂಕುಗಳ ಸಮಾಜೀಕರಣವನ್ನು ತಮ್ಮ ಪ್ರಥಮ ಕಾರ್ಯವಾಗಿಟ್ಟುಕೊಂಡಿದ್ದಾರೆ. ಎಲ್ಲ ಪ್ರಮು- ಕೈಗಾರಿಗೆಗಳನ್ನೂ ಏಕಕಾಲದಲ್ಲಿ ಸಾಮಾಜಿಕ ಅಧೀ- ಬಳ ಪಡಿಸುವುದು ಸಾಧ್ಯವಿಲ್ಲವೆಂದು ಅವರು ಅರಿತಿದ್ದಾ- ಅವರು ರಾಷ್ಟ್ರೀಯ ಕಾರ್ಯಕ್ರಮವೊಂದನ್ನು [illegible] ಸಲು, ಸಾಮಾಜಿಕ ಆಡಳಿತಕ್ಕೆ ಒಳಪಟ್ಟ ಹಲವು ಕೈಗಾ- ರಿಕೆಗಳ ಮೇಲೂ, ಒಳಪಡದಿರುವ ಹಲವು ಕೈಗಾರಿಕೆ- ಮೇಲೂ ಏಕಕಾಲದಲ್ಲಿ ಹಿಡಿತವಿರಿಸುವ ಹವಣಿಕೆ- ಇದು.



# ರದ್ದಾದ ಪಾಲಿಸಿ!

ಅದಕ್ಕೆ ಜೀವವಿಲ್ಲ, ಅದು ಯಾರನ್ನೂ ರಕ್ಷಿಸಲಾರದು.

ಯಾರ ದುಃಖವನ್ನೂ ಸಂತೈಸಲಾರದು.

ಪಾಲಿಸಿಯನ್ನು ರದ್ದಾಗಗೊಡುವುದು ಪ್ರೇಮ ಕರ್ತವ್ಯಗಳ ಕಡೆಗೆ

ಮಹಾಪರಾಧ ಮಾಡಿದಂತೆ.

ಸತೀಸುತರಿಗೆ ದ್ರೋಹ ಮಾಡಿದಂತೆ

# ವಿಮಾ-ವಿಶ್ವದೊಡತಿ



ಕವನಗಾರರು:
ಶ್ರೀ|| ಟಿ. ಎಂ. ಆರ್. ಸ್ವಾಮಿ,
ಕನ್ನಡಿಗರ ಕಣಜ, ಬೆಂಗಳೂರು.
(Mr. T. M. R. Swamy)

ಜಗದೆಲ್ಲ ಜಡತೆಯನು ಜರಿಯುತಿಹ ಜನನೀ,
ನಿನ್ನದೇನಿದು ನರರೊಲಿದ ನಾಟ್ಯ!
ಕರುಳೆಲ್ಲ ಕರಕರಗಿ ಕೊರಗುತಿಹ
ವಿಧವೆಯಾ ವಿರಹವನು ವಧಿಸಿ
ಕಾಮಿನಿಯ ಕೈವಿಡಿದೆತ್ತಿ ಕುಣಿಯುತಿಹೆ,
ತಣಿಸುತಿಹೆ, ತಿರೆಯೆಲ್ಲ ತಲೆದೂಗುವಂತೆ!

ನಲ್ಮೆಯಲಿ ನಗುನಗುತ ನಳಿದೋಳ್ಗಳಲಪ್ಪಿ
ಕಾಂತೆಯರ ಕಳವಳವ ಕಳಚಿ
ಬಾಳ್ವಿಕೆಗೆ ಬೆಳಕಿತ್ತು ಬಳುಕುತ್ತ ಬರುವೆ!
ವಿಧಿಮುನಿದು ವಿಶ್ವಬೇನೆ ವದಗಿರಲು,
ಶಾಶ್ವತದ ಸೌಖ್ಯವನು ನೀನಿತ್ತು, ಸುಳಿಯಿಂದ
ಸೆಳೆದೆತ್ತಿ ಸವಿಯೂಟ ಕೊಡುವೆ!

ಏನಿದೇನಿದು! ಎಳೆಯರನು ಎದೆಗಪ್ಪಿ
ವಿನುತ ವಿದ್ಯೆಗಳಲಿ, ವಿವಾಹ ವೈಭವಗಳಲಿ,
ಅನುವಾಗಿ ಆನಂದದಲೆಗಳಲಿ ಆಲುಗುತ್ತ
ಒಸಗೆಯಲಿ ಓಕುಳಿಯಾಡಿ ಓಲಗಿಸುತಿರುವೆ!
ಅಬಲೆಯರಿಗೆ ಆದರವಿತ್ತು ಅಜ್ಜರಿಂದಳಿಯದೆಯೆ
ಸಜ್ಜುಗೊಳಿಸುವೆ ಸೌಖ್ಯವನು ಸೋಜಿಗವತಿ!

ಜಲಜಸಖನುದಿಸಿ ಜಗವೆಲ್ಲ ಝಗ ಝಗಿಸುವಂತೆ
ನೀನೊಲಿದು ನಮ್ಮೊಳುಚಿರವು ನಲಿದಾಡಿ,
ನಗು ನಗುತ, ನರ್ತಿಸುತ, ನರರನೆಚ್ಚರಿಸು ದೇವಿ!
ವಿನುತ 'ವಿಮಾ-ವಿಶ್ವ' ದೊಡತಿಯೆ ನಿನ್ನಮಲ
ಸಂದರ್ಶನ ಸುಖಮಿಂಪು ಸಂಭವಿಸಿರಲು
ಬದುಕಬೆಳಗಿಸುತ ಬಾಳ್ವೆವು ಬಹು ಮೋದದಿಂದ!



# ವಿಮೆಯನ್ನೇಕೆ ಮಾಡಬೇಕು?



ಲೇಖಕಿ :

ಶ್ರೀಮತಿ

ಆರ್. ಕಲ್ಯಾಣಮ್ಮನವರು,

ಬೆಂಗಳೂರು.

(Mrs. R. Kalyanamma)

ಕಳೆದ ನೂರೈವತ್ತು ವರ್ಷಗಳಿಂದ ನಮ್ಮ ಭರತ ಖಂಡದಲ್ಲಿ ರಾಜಕೀಯ ಸಾಮಾಜಿಕ, ಆರ್ಥಿಕ ವಿಷಯಗಳಲ್ಲಿ ಅಜ್ಞಾನವು ನೀಗಿ ಪ್ರಜೆಗಳು ತಮ್ಮ ಹಕ್ಕು ಬಾಧ್ಯತೆಗಳನ್ನೂ, ಜವಾಬ್ದಾರಿಯನ್ನೂ ತಿಳಿದವರಾಗಿ ನೂತನ ಉತ್ಸಾಹದಿಂದಿರುವರು. ಕಾಲಮಹಿಮೆಯ ಮಹತ್ವದಿಂದ ಎಲ್ಲಾ ವಿಧವಾದ ಸುಧಾರಣೆಗಳಿಗೂ ನಾವು ಪಾಶ್ಚಾತ್ಯರನ್ನೇ ಅನುಸರಿಸಿ ಅವರಲ್ಲಿರುವ ದುರ್ಗುಣಗಳನೇಕವನ್ನೂ ಅವರಿಂದ ಬೇಡವಾಗಿ ದೂಡಲ್ಪಟ್ಟ ಅನೇಕ ಗುಣಗಳನ್ನೂ ನಾವು ನಮ್ಮ ಬಳಕೆಗೆ ತರುತ್ತಿರುವೆವು. ಅವರಲ್ಲಿರುವ ಸುಗುಣಗಳನ್ನು ಅನುಸರಿಸಬೇಕಾದರೆ ಹಿಂಜರಿಯುವೆವು. ಜನರ ಜೀವಿತವು ಎರಡು ಬಗೆಯಾಗಿದೆ. ಒಂದು ಸ್ವಂತ ಜೀವನ, ಮತ್ತೊಂದು ಸಾಂಘಿಕಜೀವನ. ಸ್ವಂತ ಜೀವನವು ಒಳ್ಳೆಯ ನಡತೆಯಿಂದಲೂ, ಮಿತವ್ಯಯದಿಂದಲೂ ಕೂಡಿದ್ದಾಗಿದ್ದರೆ ದೇಶದ ಸಮಾಜದ ಜೀವನವೂ ನಗರದ ಜೀವನವೂ ಅತ್ಯುತ್ತಮವಾದ ಸ್ಥಿತಿಯಲ್ಲಿರುವುದೆನ್ನುವುದು ಕರತಲಾಮಲಕವಾದ ವಿಷಯವು.

ಆರ್ಥಿಕ ದೃಷ್ಟಿಯಿಂದ ನೋಡಿದೆವಾದರೆ ಒಂದು ದೇಶವು ದಿನೇ ದಿನೇ ಉನ್ನತಸ್ಥಿತಿಯನ್ನು ಹೊಂದುವುದಕ್ಕೂ ಇತರ ದೇಶಗಳೊಡನೆ ಸಮವಾಗಿ ನಿಲ್ಲುವುದಕ್ಕೂ ಆ ದೇಶದ ಸಂಪತ್ತೇ ಮುಖ್ಯವಾದುದು. ನಮ್ಮ ದೇಶದ ಸಂಪತ್ತಿಗೂ ವಿಮೆಯೆಂಬ ಪವಿತ್ರವಾದ ಪದ್ಧತಿಯ ಪ್ರಚಾರಕ್ಕೂ ಏನು ಸಂಬಂಧವೆಂಬುದನ್ನೂ, ಈ ವ್ಯವಸ್ಥೆಯಿಂದ ಒಂದು ವ್ಯಕ್ತಿಗೆ ಎಷ್ಟು ಪ್ರಯೋಜನವೆಂಬುದನ್ನೂ ವಿವರಿಸುವುದೇ ಈ ಲೇಖನದ ಮುಖ್ಯ ಉದ್ದೇಶವು.

ಇಂದು ನಮ್ಮ ದೇಶದಲ್ಲಿ ದಾರಿದ್ರ್ಯದೇವತೆಯು ಭೀಷಣನೃತ್ಯವನ್ನು ಮಾಡುತ್ತಿದಾಳೆ. ನಮ್ಮ ದೇಶದ ಮನುಷ್ಯನೊಬ್ಬನ ಸರಾಸರಿ ವರಮಾನವು ಒಂದಾಣೆ ಏಳುಕಾಸೆಂದು ಆರ್ಥಿಕಧುರೀಣರು ನಿಶ್ಚೈಸಿರುವರು. ನಿರುದ್ಯೋಗಾಗ್ನಿಯು ಕಾಡುಕಿಚ್ಚಿನಂತೆ ಹಬ್ಬುತ್ತಿದೆ. ಸ್ವಲ್ಪ ಜೀವನೋಪಾಯವನ್ನು ಹೊಂದಿರುವವರೋ ಕೇಳಲು ಬಾರದ ನಾಗರಿಕತೆಯ ಮೋಹಕ್ಕೊಳಗಾಗಿ ಇತರರು ಮೆಚ್ಚುವ ಸಲುವಾಗಿ ಹೊಸಹೊಸ ಪದ್ಧತಿಗಳು ಅನಾವಶ್ಯಕವಾದ ಖರ್ಚುಗಳನ್ನು ಮಾಡತೊಡಗಿ ಬಡತನವನ್ನು ಬೆಲೆಗೆ ಕೊಳ್ಳುತ್ತಿರುವುದನ್ನು ಕಂಡು ಯಾರ ಮನಸ್ಸು ತಾನೇ ನೋಯದಿರದು! ಕಷ್ಟಪಟ್ಟು ಸಂಪಾದಿಸಿ ಆದಾಯಕ್ಕೆ ಹೆಚ್ಚಾಗಿ ಖರ್ಚುಮಾಡಿನಂತರ ಸಂಪಾದಿಸಲಶಕ್ತನಾಗಿ ಕೈಕಾಲು ಮುರಿದುಕೊಂಡು ಮನೆಯಲ್ಲಿ ಕುಳಿತಾಗ ಹೆಂಡತಿ - ಮಕ್ಕಳು - ಮಾತಾಪಿತೃಗಳು - ನೆಂಟರಿಷ್ಟರನ್ನು ಕಾಪಾಡಲಶಕ್ತರಾದ ಕುಟುಂಬಗಳೆಷ್ಟೋ ನಮ್ಮ ದೇಶದಲ್ಲಿವೆ.

ಯಾವ ದೇಶದಲ್ಲಾಗಲಿ ಯಾವ ಕಾಲದಲ್ಲೇ ಆಗಲಿ ಎಲ್ಲರೂ ಧನವಂತರಾಗಿರುವುದು ಸಾಧ್ಯವಿಲ್ಲ. ಹೆಚ್ಚು ಸಂಖ್ಯೆಯವರು ಬಡವರು. ವೃದ್ಧಾಪ್ಯದಲ್ಲಿ ಆಧಾರವಾಗಿ ರುವಂಥದ್ದೂ ತನ್ನನ್ನು ನಂಬಿದವರನ್ನು ಸಂರಕ್ಷಿಸಲು ಸಹಾಯವಾಗುವಂಥದ್ದೂ, ಗೇಣುಹೊಟ್ಟೆಯನ್ನು ತುಂಬಿಕೊಳ್ಳುವ ಸಲುವಾಗಿ ಹೀನ ಕೆಲಸಗಳನ್ನು ಮಾಡದಂತೆ ತಡೆಯುವುದೂ, ಸಹಾಯ ಮಾಡುವುದೂ ಈ ವಿಮಾ ಪದ್ಧತಿ ( Life Insurance ) ಯೇ. ನಿರ್ದಿಷ್ಟವಾದ ಹಣಕ್ಕೆ ಕಾಲನಿರ್ಣಯಮಾಡಿ ಇಷ್ಟೊಂದು ವರ್ಷಗಳು ಗಡುತಪ್ಪದೆ ಕಂತು ಸಲ್ಲಿಸುವುದಾಗಿ ಒಪ್ಪಂದಮಾಡಿಕೊಂಡು ಹಾಗೆಯೇ ಸಲ್ಲಿಸುತ್ತ ಬರುವಾಗ ದುರಾದೃಷ್ಟವಶಾತ್ ಕಾಲಗತಿಯನ್ನೈದಿದರೆ ಒಪ್ಪಂದವಾಗಿರುವ ಪೂರ್ತಿ ಮೊತ್ತ ಹಣವನ್ನು ಒಂದು ಕಾಸೂ ಕಡಮೆಯಿಲ್ಲದೆ ವಾರಸುದಾರರಿಗೆ ದೊರೆಯುವಂತೆ ಮಾಡಿರು ವ್ಯವಸ್ಥೆಯು ಈ ವಿಮಾ ಪದ್ಧತಿಯೊಂದೇ.

ಪಾಮರ ಜನರಲ್ಲಿ ಅನೇಕರು ಇಂತಹ ವಿಮಾಸಂಸ್ಥೆಗಳಲ್ಲಿ ಸದಸ್ಯರಾಗಿ (ಪಾಲಿಸಿದಾರರಾಗಿ) ಸೇರುವುದೆಂದರೆ ಕೂಡಲೇ ಮರಣ ಹೊಂದುವುದು ಸಿದ್ಧವೆಂದೂ ಆದುದರಿಂದಲೇ ಇದಕ್ಕೆ ಮರಣ ಫಂಡು ಎಂಬ ಹೆಸರಾಗಿದೆಯೆಂದೂ ಭ್ರಮಿಸಿ ಹಿಂತೆಗೆಯುವರು. ಅಕಾಲ ಮೃತ್ಯುವಿನಿಂದೊದಗಬಹುದಾದ ವಿಪತ್ತನ್ನು ತಡೆಯುವುದಕ್ಕೆಂದು ಸ್ಥಾಪಿಸಲ್ಪಟ್ಟಿರುವ ಸಂಸ್ಥೆಗಳೇ ಈ ವಿಮಾ ಸಂಸ್ಥೆಗಳೆಂಬುದನ್ನವರು ಮನಗಾಣಬೇಕು. ಅಂತಹವರಿಗೆ ಮುಂದಟ್ಟಾಗುವಂತೆ ಪ್ರಚಾರ ಕಾರ್ಯಗಳೂ ನಡೆಯಬೇಕಾದುದು ಅತ್ಯಾವಶ್ಯಕವು.

ಕಷ್ಟಕಾಲಕ್ಕಾಧಾರವಾಗಿರತಕ್ಕ ಸಂಸ್ಥೆಯು ಈ ವಿಮಾ ಸಂಸ್ಥೆಗಳು ಮಾತ್ರವೇ! ಬ್ಯಾಂಕುಗಳೂ, ಕ್ಷೇಮನಿಧಿ (Provident Fund) ಗಳೂ ಇಲ್ಲವೇ ಎಂದು ಯಾರಾದರೂ ಪ್ರಶ್ನೆಮಾಡಬಹುದು. ಮೇಲೆ ಹೇಳಿದ ಸಂಸ್ಥೆಗಳು ನಾವು ಕೊಡತಕ್ಕ ಹಣವನ್ನೆಲ್ಲಾ ಒಟ್ಟುಗೂಡಿಸಿ ಸ್ವಲ್ಪ ಬಡ್ಡಿಯೊಡನೆ ನಾವು ಕೇಳಿದಾಗ ಹಿಂತಿರುಗಿ ಕೊಡಬಲ್ಲವು. ಆದರೆ ವಿಮಾ ಸಂಸ್ಥೆಗಳು ಹಾಗಲ್ಲ, ಅಕಾಲ ಮರಣವುಂಟಾದರೆ ಕರಾರು ಮಾಡಿಕೊಂಡಿರುವಷ್ಟು ಹಣವನ್ನು (ನಾವು ಕಂತನ್ನು ಪೂರ್ತಿಯಾಗಿ ಸಲ್ಲಿಸಿದ್ದರೂ ಸರಿ. ಇಲ್ಲದಿದ್ದರೂ ಸರಿ) ಮೃತನ ವಾರಸುದಾರರಿಗೆ (ಮೃತನು ಆ ವಿಮಾ ಪತ್ರದಲ್ಲಿ ಸೂಚಿಸಿರುವವರಿಗೆ) ಸಲ್ಲಿಸುವ ಸಾರ್ವಜನಿಕ ಸಂಸ್ಥೆಯದು. ಜನಸಮೂಹವನ್ನು ಸೇರಿದವನೊಬ್ಬನು ಅಕಾಲ ಮೃತ್ಯುವಿಗೆ ತುತ್ತಾದರೆ ಜನಸಮೂಹಕ್ಕೆ ಸೇರಿದ ಕೆಲವರು ಅವನ ಸಂತತಿಯವರಿಗೆ ಸಹಾಯಮಾಡಿ ಕೊಡುವ ಪರಸ್ಪರ ಸಹಾಯ ವ್ಯವಸ್ಥೆಯೇ ಈ ವಿಮಾ ವ್ಯವಸ್ಥೆಯೆನ್ನುವುದು. ಇದರ ಪ್ರಯೋಜನವನ್ನು ಮಾಡಿಕೊಳ್ಳಬೇಕಾದುದು ಪ್ರತಿಯೊಂದು ವ್ಯಕ್ತಿಯ ಕರ್ತವ್ಯವಾಗಿದೆ.

ಕಷ್ಟಪಡುತ್ತಿರುವವನೊಬ್ಬನ ಬಳಿ ಹೋಗಿ "ಅಪ್ಪಾ ನಿನ್ನ ಕಷ್ಟವೆಲ್ಲವೂ ತೀರಿತಿನ್ನು ಈ ಔಷಧಿಯಿಂದ ನೀನು ಗುಣಹೊಂದುವೆ" ಎಂದರೆ ಅವನಿಗೆಷ್ಟು ಸಂತೋಷವಾಗುವುದು, ತಬ್ಬಲಿ ಮಗುವಿನಬಳಿ ಹೋಗಿ; "ನಿನ್ನ ತಂದೆ ತಾಯಿಗಳಲ್ಲಿರುವರು. ನೀನಿನ್ನು ಅಳಬೇಡ"ವೆಂದರೆ ಆ ಮಗುವಿಗೆಷ್ಟಾನಂದವಾಗುವದು. ಹಾಗೆಯೇ ದೊಡ್ಡ ಕುಟುಂಬಕ್ಕೆ ಹೊರೆಯಾಗಿ ಭಾವಿಸಲ್ಪಡುವ ವಿಧವೆಯೊಬ್ಬಳು ಅನ್ನ ಬಟ್ಟೆಗಳಿಗಾಗಿಯೂ, ನಿಲ್ಲುವ ನೆರಳಿಗಾಗಿಯೂ ಎಲ್ಲಿ ಹೋಗುವುದು, ಏನು ಮಾಡುವುದೆಂದು ಕಣ್ಣು ಕಣ್ಣು ಬಿಡುತ್ತಿರುವಾಗ ಒಬ್ಬರು ಬಂದು, "ಅಮ್ಮಾ! ದುಃಖಿಸಬೇಡ, ಈ ನಿಧಿಯು ನಿಮ್ಮದು, ನಿಮ್ಮ ಕುಟುಂಬ ರಕ್ಷಣೆಗಾಗಿ ನಿಮ್ಮವರಿಂದ ಶೇಖರಿಸಲ್ಪಟ್ಟದ್ದು. ಇದನ್ನು ತೆಗೆದುಕೊಂಡು ಸುಖಜೀವನ ನಡೆಸು" ಎಂದು ಹೇಳಿದರೆ ಆ ನಿರ್ಭಾಗ್ಯ ವಿಧವೆಯು ಸಂತೋಷವೆಷ್ಟಿರಬೇಕೆನ್ನುವುದನು ವಾಚಕರೇ ಊಹಿಸಿ ನೋಡಬೇಕು.

ನಾವು ಎಂತಹ ಸಾಹಸ ಕಾರ್ಯಗಳನ್ನಾದರೂ ಮಾಡಬಹುದು. ಆದರೆ ಸಾವನ್ನು ತಪ್ಪಿಸುವುದೂ, ಸತ್ತವರನ್ನು ಬದುಕಿಸುವುದೂ ನಮ್ಮಿಂದಾಗದ ಕೆಲಸ. ತಂದೆ ತಾಯಿಗಳನ್ನು ಕಳೆದುಕೊಂಡ ಮಕ್ಕಳಿಗೆ ತಂದೆ ತಾಯಿಗಳು ದೊರೆಯುವುದು ದುರ್ಲಭ. ಅನಾಥಾಲಯಗಳೋ ಅಥವಾ ಯಾರಾದರೂ ಧರ್ಮಿಷ್ಟರೋ ಆ ತಬ್ಬಲಿ ಮಕ್ಕಳನ್ನಾದರಿಸಲು ಮುಂದೆ ಬಂದರೆ ಕಾಲವಾದ ತಂದೆತಾಯಿಗಳು ಮರಳಿ ಬಂದ ಸುಖವನ್ನು ಆ ಮಕ್ಕಳು ಪಡೆಯುವುದಿಲ್ಲವೇ! ಸತ್ತವನು ಬದುಕುವುದಿಲ್ಲ. ಆದರೆ ಅವನಿದ್ದು ನಡೆಸಬೇಕಾದ ಕರ್ತವ್ಯಗಳೆಲ್ಲವೂ ಸಾಂಗವಾಗಿ ನಡೆಯುವ ವ್ಯವಸ್ಥೆ ಇದ್ದರೆ ಅವನ ಮರಣದಿಂದುಂಟಾದ ದುಃಖವು ಎಷ್ಟೋ ಕಡಮೆಯಾಗುವುದು. ನನ್ನ ಸ್ನೇಹಿತರೊಬ್ಬರು ಆಗಾಗ್ಗೆ ವಿನೋದಕ್ಕಾಗಿ ಹೇಳುತ್ತಿದ್ದ ಮಾತೊಂದು ನೆನಪಿಗೆ ಬರುತ್ತಿದೆ "ಮನುಷ್ಯರಿದ್ದಾರಲ್ಲಾ ಅವರು ತಮ್ಮ ಕುಟುಂಬವನ್ನು ಒಳ್ಳೆಯ ಸ್ಥಿತಿಯಲ್ಲಿ ಬಿಟ್ಟು ಕಣ್ಣು ಮುಚ್ಚಿಕೊಂಡರೆ ಆತನ ಮರಣಕ್ಕಾಗಿ ಆ ಕುಟುಂಬದವರು ಶಾಸ್ತ್ರಕ್ಕಾಗಿ ಸ್ವಲ್ಪ ಅತ್ತುಬಿಟ್ಟು ಕಾಲಾನಂತರ ಧೈರ್ಯ ಹೊಂದುವರು. ನಿರ್ಗತಿಯಾಗಿ ಬಿಟ್ಟು ಬಿಟ್ಟು ಸತ್ತರೆ ಆ ಕುಟುಂಬಕ್ಕೆ ಹುಟ್ಟು ಒಟ್ಟೆಗಳ ಪರಿವೆಯೇ ಹೆಚ್ಚಾಗಿ ದುಃಖವು ಇಮ್ಮಡಿಯಾಗುವುದು." ಇಂದು ಹೆಣವನ್ನು ಸಾಗಿಸಿದರೆ ತುಂಡು ಪಿಂಡಗಳಿಗಾರಮನೆಗೆ ಹೋಗಿ ನಿಲ್ಲುವುದೆಂಬುದೇ ಅವರ ಚಿಂತೆ, ಅವರ ದುಃಖ. ಇದು ನಮ್ಮ ದೇಶದಲ್ಲಿ ಪ್ರತಿ ಕ್ಷಣದಲ್ಲಿಯೂ ನಡೆಯುವ ದೃಶ್ಯ; ನಾವು ಆಗಾಗ್ಗೆ ಕಾಣುವ ದೃಶ್ಯ. ನಮ್ಮಲ್ಲಿ ಸ್ತ್ರೀಯರಿಗೆ ಆರ್ಥಿಕ ಸ್ವತಂತ್ರತೆಯಿಲ್ಲ. ಗಂಡನ ಸಾವಿಗಾಗಿ ಹೆಂಡತಿಯು ದುಃಖಿಸುವಷ್ಟು ಹೆಂಡತಿಯ ಸಾವಿಗಾಗಿ ಗಂಡನು ದುಃಖಿಸುವುದಿಲ್ಲ. ಇದರ ರಹಸ್ಯವು "ಆರ್ಥಿಕ ಸ್ವಾತಂತ್ರವೇ". ಆದರೂ ಮನುಷ್ಯನು ತಮ್ಮ ಸಾವು ಸಮೀಪದಲ್ಲಿದೆ ಎಂಬುದನ್ನು ನಂಬಲಾರನು. ಇಂತಹ ವಿಪತ್ತಿನಿಂದ ನಾವು ಪಾರಾಗುವೆವೆನ್ನುವ ದೃಢ ವಿಶ್ವಾಸವು ಪ್ರತಿಯೊಬ್ಬನಿಗೂ ಇದ್ದೇ ಇರುತ್ತದೆ. ತಾನು ಮಾತ್ರವಲ್ಲ ತನ್ನನ್ನು ಸೇರಿದವರಿಗೂ ಮರಣವಿಲ್ಲವೆಂದೂ

ಅವರ ಬದುಕು ಶಾಶ್ವತವೆಂದೂ ಭಾವಿಸುತ್ತಾನೆ. ಈ ಕಾರಣದಿಂದಲೇ ಜೀವಿಸಿರುವಾಗಲೇ ಮುಂದಿನ ಕಷ್ಟ ಸುಖ ಗಳಿಗಾಗಿ ಹಣವನ್ನು ಶೇಖರಿಸಬೇಕೆಂಬುದರ ಕಡೆ ಅವರ ಲಕ್ಷ್ಯವು ಹೋಗುವುದಿಲ್ಲ. ಪತಿಯು ಜೀವಿಸಿರುವಾಗಲೇ ತನ್ನ ಮರಣವಾಗುವುದೆಂಬ ನಂಬಿಕೆಯಿಂದ ಪತಿಯು ಮರಣಾನಂತರ ತನಗಾಧಾರವನ್ನು ಕಲ್ಪಿಸಬೇಕೆಂದು ಪತ್ನಿಯು ಕೇಳುವುದಿಲ್ಲ. ಹಿಂದೂ ಸ್ತ್ರೀಯರೆಲ್ಲರೂ ಪತಿ ಸಾನ್ನಿಧ್ಯದಲ್ಲಿ ಮರಣವನ್ನು ಕೋರುವರು. ಕೋರಬ ಹುದು—ಆದರೆ ಅದಾಗುವುದು ನಮ್ಮ ಕೈಯ್ಯಲ್ಲಿಲ್ಲವೆನ್ನು ವುದು ಅವರ ನೆನಪಿಗೆ ಬರುವುದಿಲ್ಲ. ಈ ವಿಷಯವನ್ನು ಸ್ತ್ರೀಯರೇ ಮನಸ್ಸಿಗೆ ತಂದು ಕುಟುಂಬ ರಕ್ಷಣೆಗಾಗಿ ವಿಮೆ ಮಾಡುವಂತೆ ಪತಿಯನ್ನು ಪ್ರೇರೇಪಿಸಬೇಕು. ಪತಿ ಯ ಮರಣದಿಂದ ಪತ್ನಿಯು ಪಡುವಷ್ಟು ಕಷ್ಟ ಪತ್ನಿಯ ಮರಣದಿಂದ ಪತಿಯು ಹೊಂದುವುದಿಲ್ಲ. ಇದು ಸತ್ಯ ವಾದ ವಿಷಯವೆನ್ನುವುದನ್ನು ಎಲ್ಲರೂ ಬಲ್ಲರು.

ಬೆಂಕಿಯೆಂದ ಮಾತ್ರದಲ್ಲಿಯೇ ಬಾಯಿಸುಡುವು ದಿಲ್ಲ. ಹಾಗೆಯೇ ಪತಿಯು ಜೀವಿಸಿರುವಾಗ ತಮಗೆ ಮುಂದೆ ಆಧಾರಮಾಡುವಂತೆ ಪತಿಯನ್ನು ಕೇಳುವುದ ರಿಂದ ಪತಿವ್ರತಾ ಧರ್ಮಕ್ಕೆ ಭಂಗ ಬರುವುದಿಲ್ಲ. ಒಡವೆ ಗಳಿಗಾಗಿಯೂ, ಸೀರೆ ಕುಪ್ಪಸಗಳಿಗಾಗಿಯೂ ಗಂಡನನ್ನು ಪೀಡಿಸುವಂತೆ ತಮಗೂ ತಮ್ಮ ಮಕ್ಕಳಿಗೂ ಆತನ ನಂತರ ಏನಾದರೂ ಆಧಾರ ಮಾಡುವಂತೆ ಕೇಳುವುದರಿಂದ ಪತಿ ಯ ಮರಣವಾಗುವುದಿಲ್ಲ. ಒಡವೆ ವಸ್ತುಗಳಿಗಾಗಿ ಪೀಡಿಸುವುದಕ್ಕಿಂತ ಆತನ ಮರಣಾನಂತರ ಆಧಾರ ಮಾಡುವಂತೆ ಪೀಡಿಸುವುದರಿಂದ ಪ್ರಯೋಜನವುಂಟು, ಸಾರ್ಥಕವುಂಟು. ಗಂಡಹೆಂಡರಿಬ್ಬರೂ ಒಂದೇ ಘಳಿಗೆ ಯಲ್ಲಿ ಸಾಯುವುದಿಲ್ಲ. ಯಾರಾದರೊಬ್ಬರು ಮುಂದೆ ಹೋಗಬೇಕು. ಗಂಡನೆದುರಿಗೆ ಹೆಂಡತಿ ಸತ್ತರೆ ಲಕ್ಷಣ ವೇ ಆಯಿತು. ಆದರೆ ಹೆಂಡತಿಯಿದ್ದು ಗಂಡ ಸತ್ತರೆ ಮಕ್ಕಳು ಮರಿಗಳುಳ್ಳ ಹೆಂಡತಿಯಪಾಡು ಹೇಳಲಸಾಧ್ಯ. ಇದನ್ನು ತಿಳಿದು ತಮ್ಮ ರಕ್ಷಣೆಗೆ ಏನಾದರೊಂದು ದಾರಿ ಮಾಡಬೇಕೆಂದು ಪತಿಯನ್ನು ಕೇಳಬೇಕು. ಇದಕ್ಕೆ ಸರಿ ಯಾದ ಸಂಸ್ಥೆಯು ವಿಮಾ ಸಂಸ್ಥೆಗಳು, ಉಪಾಯವು ವಿಮೆ ಮಾಡುವುದೇ. ಇಂತಹ ಸಂಸ್ಥೆಗಳು ನಮ್ಮ ದೇಶದಲ್ಲಿ ಎಷ್ಟೋ ಇವೆ. ಇದರ ಮುಖ್ಯಾಂಶವಾವುದೆಂದರೆ ಕಾಲಕ್ಕೆ ಸರಿಯಾಗಿ ಚಂದಾಹಣವನ್ನು ಸಲ್ಲಿಸುತ್ತ ಬರಬೇಕು. ಇಷ್ಟು ಹಣ ಸಲ್ಲಿಸಬೇಕೆಂದು ನಿಬಂಧನೆ ಮಾಡಿದ್ದಾರೆ. ಹಣವನ್ನು ಯಾರು ಪ್ರತಿ ತಿಂಗಳೂ ಕೊಡುತ್ತಾರೆಯೋ ಅವರೇ ಹಣವನ್ನು ಪಡೆಯಬೇಕು ಇಲ್ಲದಿದ್ದರೆ ಇವರು ಯಾರಿಗೆ ಕೊಡಬೇಕೆಂದು ಬರೆದಿರುವರೋ ಅವರೇ ಪಡೆ ಯಬೇಕು. ಇದಕ್ಕೆ " ಎಂಡೋಮೆಂಟ್ ಪಾಲಿಸಿ" ಯೆಂದು ಹೆಸರು. ನಿರ್ದಿಷ್ಟಕಾಲದಲ್ಲಿ ಪೂರ್ತಿ ಹಣ ಸಲ್ಲಿ ಸದೆ ಒಂದುವೇಳೆ ಮರಣ ಹೊಂದಿದರೆ ಎಷ್ಟು ಮೊತ್ತಕ್ಕೆ ನಿಬಂಧನೆಯಿರುವದೋ ಅಷ್ಟು ಹಣವೂ ಅವರ ವಾರ ಸದಾರರಿಗೆ ದೊರೆಯುತ್ತಿದೆ.

ಇಪ್ಪತ್ತೈದು ವಯಸ್ಸಿನವನೊಬ್ಬನು ಇಪ್ಪತ್ತೈದು ವಯಸ್ಸಿನಲ್ಲಿ ಒಂದುಸಾವಿರ ರೂಪಾಯಿ ತೆಗೆದುಕೊಳ್ಳುವ ಉದ್ದೇಶದಿಂದ ಒಂದು ಕಂಪನಿಯಲ್ಲಿ ಸೇರಿದ್ದಾನೆಂದು ಇಟ್ಟುಕೊಳ್ಳೋಣ. ವರ್ಷ ೧ಕ್ಕೆ ೫೦ ರೂಪಾಯಿಗಳ ಕಂತು ಕೊಟ್ಟರೆ ಇಪ್ಪತ್ತೈದು ವರ್ಷಗಳನಂತರ ಅವನು ಪಡೆಯುವ ಮೊತ್ತ ಹಣವು ಒಂದುಸಾವಿರ ರೂಪಾಯಿಗಳು. ವರ್ಷ ೧ಕ್ಕೆ ೨೦ ಅಥವಾ ೨೨ ರೂಪಾಯಿಗಳಂತೆ ಒಟ್ಟು ಐದುನೂರು ರೂಪಾಯಿಗಳೂ ದೊರೆಯುವುದು. ಆದರೆ ಹತ್ತುವರ್ಷ ಕಂತು ಕಟ್ಟಿ ಅವನೊಂದುವೇಳೆ ಸತ್ತುಹೋ ದರೆ ಅವನ ಕುಟುಂಬಕ್ಕೆ ಒಂದು ಸಾವಿರ ರೂಪಾಯಿ ಮತ್ತು ಹತ್ತುವರ್ಷದ ನಫೆ ಇನ್ನೂರು ರೂಪಾಯಿಗಳು. ಅವನು ಕಟ್ಟಿರುವ ಹಣ ಐದುನೂರು ರೂಪಾಯಿಗಳು, ಅವನಿಗೆ ದೊರೆಯುವ ಹಣ ಒಂದು ಸಾವಿರದಿನ್ನೂರು ರೂ ಪಾಯಿಗಳು. ವಿಮೆಮಾಡಿ ಹಣ ಕಟ್ಟಲಾರಂಭಿಸಿ ಒಂದೆ ರಡು ತಿಂಗಳಿಗೆಲ್ಲಾ ಸತ್ತುಹೋದರೂ ಪೂರ್ಣ ಮೊತ್ತದ ಹಣವೂ ಅವನಿಗೆ ದೊರೆಯುವುದು. ಇಷ್ಟೊಂದು ಲಾಭ ದಾಯಕವಾದ ಪ್ರಯೋಜನಕಾರಿಯಾದ ಉದ್ಯಮದಲ್ಲೇಕೆ ಭಾಗವಹಿಸಿ ಪ್ರಯೋಜನ ಪಡೆಯಬಾರದು? ಹೀಗೆಯೇ ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಣ್ಣುಮಕ್ಕಳ ಮದುವೆಗೆ ಇತರ ವಿಶೇಷ ಖರ್ಚುಗಳಿಗೆಲ್ಲಾ ಇಂತಹ ಸಂಸ್ಥೆಗಳಿಂದ ಪ್ರಯೋ ಜನವಾಗುವುದು. ಇಷ್ಟೊಂದಿದ್ದರೂ ಇಂತಹ ಸಂಸ್ಥೆಗಳ ಪ್ರಯೋಜನವನ್ನು ನಮ್ಮವರು ಇನ್ನೂ ಅರಿತಿಲ್ಲ. ಎಲ್ಲರೂ ತಿಳಿಯಬೇಕು. ಪ್ರಯೋಜನಪಡೆಯಬೇಕು. ಮುಖ್ಯ ವಾಗಿ ಮಹಿಳೆಯರು ಇಂತ ಸಂಸ್ಥೆಗಳಿಂದ ಇಂತಹ ಸ್ಥಸ್ಥೆ ಗಳಿಂದ ಹೆಚ್ಚು ಪ್ರಯೋಜನ ಪಡೆಯಬೇಕು.



# ವ್ಯಕ್ತಿ ಮತ್ತು ಸಮಾಜದ ವಿಮಾ ಬಾಂಧವ್ಯ

ಲೇಖಕರು :

ಶ್ರೀ ಎನ್. ಎಸ್. ಸುಬ್ಬರಾವ್,
ಎಂ.ಎ., ಬಾರ್ ಅಟ್-ಲಾ ರವರು
ವೈಸ್-ಛಾನ್ಸೆಲರ್, ಮೈಸೂರು ವಿಶ್ವವಿದ್ಯಾಲಯ.

(Mr. N. S. Subba Rao)
M.A., BAR-AT-LAW.



ಒದಗಬಹುದಾದ ಅಪಘಾತಗಳ ಮತ್ತು ಅನಿರೀಕ್ಷಿತ ತೊಂದರೆಗಳ ರಕ್ಷಣಾರ್ಥವಾಗಿ ಮಾನವನು ನಡೆಸಿರುವ ಪ್ರಯತ್ನಗಳಲ್ಲಿ ವಿಮಾ ಹವಣಿಕೆಯೂ ಒಂದು. ಪಾಶ್ಚಾತ್ಯರು ನಮ್ಮ ದೇಶದಲ್ಲಿನಂತೆ ವೃದ್ಧಾಪ್ಯ ವಿಮೆ ಮತ್ತು ಜೀವ ವಿಮೆಗಳನ್ನಷ್ಟೇ ಅಲ್ಲದೆ, ಇನ್ನೂ ಅನೇಕ ವಿಧದ ವಿಮಾ ಪದ್ಧತಿಗಳನ್ನು ಪ್ರಚುರವಲ್ಲಿ ತಂದಿರುವರು. ತೆರಿಗೆಯ ವ್ಯತ್ಯಾಸ, ಮಳೆಯ ಅತಿವೃಷ್ಟಿ ಅನಾವೃಷ್ಟಿ ಮತ್ತು ಉಚ್ಚ ಅಧಿಕಾರಸ್ಥಾನದಲ್ಲಿದ್ದವರ ಮರಣದಿಂದ ಜನರ ನವನಾಗರೀಕತೆಗಳಲ್ಲಿ (Fashion) ಉಂಟಾಗಬಹುದಾದ ವ್ಯತ್ಯಾಸ ಅಲ್ಲದೆ ರಾಜರ ಮರಣಕಾಲದಲ್ಲಿ ಉದ್ಯಮಕ್ಕೆ ಆಗುವ ನಷ್ಟ, ಇವೇ ಮೊದಲಾದುವುಗಳಿಗಾಗಿಯೂ ವಿಮೆ ಮಾಡುವುದುಂಟು.

ಭವಿಷ್ಯದಲ್ಲಿ ಸಮಾಜದ ಹಲವರಿಗೆ ಅಪಾಯ ಸಂಭವಿಸುವುದು ನಿಜ. ಆ ಅಪಾಯಗಳಿಂದ ಉಂಟಾಗುವ ನಷ್ಟದ ಹೊರೆಯನ್ನು ಸಮಾಜದವರೆಲ್ಲರಿಗೂ ಹಂಚಲಿರುವ ವ್ಯವಹಾರ ರೂಪವೇ ವಿಮೆ. ಅದು, ಸಮಾಜವು ಜವಾಬ್ದಾರಿ ಹೊರುವ ವಿಷಯಗಳಿಗೆ ದೊರೆಯುವ ಆರ್ಥಿಕ ಸಹಕಾರವಲ್ಲದೆ ಬೇರೇನಿಲ್ಲ. ದುರದೃಷ್ಟದಿಂದ ಈ ಜೀವನ ಸಂಗ್ರಾಮದಲ್ಲಿ ಎಲ್ಲರಿಗೂ ಜಯವು ಲಭಿಸದು. ಅನೇಕ ಅದೃಷ್ಟಹೀನರಿಗೆ ಸೋಲಾಗುವುದು. ಆದರೆ ಅದೃಷ್ಟವಂತರು ತಮ್ಮ ಗೆಲುವಿನಿಂದ ಪಡೆದ ಫಲದ ಅಲ್ಪಭಾಗವನ್ನು ಅದೃಷ್ಟಹೀನರಾದ ತಮ್ಮ ಸೋದರರಿಗೆ ಕೊಟ್ಟು ಅವರೂ ಈ ಸಂಸಾರ ಸಾಗರದಲ್ಲಿ ತೇಲಿ ಬರಲು ಸಹಾಯಮಾಡಿದುದಾದರೆ ಅವರು ಈ ಜೀವನ ಸಂಗ್ರಾಮದಲ್ಲಿ ಜೀವಂತ ಉಳಿಯುವುದು ಸಾಧ್ಯ. ಈ ಹೋರಾಟದಲ್ಲಿ ಯಾರಿಗೆ ಜಯವಾಗುವುದು ಯಾರಿಗೆ ಸೋಲಾಗುವುದು ಎಂಬುದನ್ನು ಮೊದಲೆ ತಿಳಿವುದು ಸಾಧ್ಯವಿಲ್ಲ. ಅದೃಷ್ಟ ದೇವಿಯು ಯಾರನ್ನು ಒಲಿಯುವವಳೋ ಯಾರನ್ನು ದೂರ ಮಾಡುವವಳೋ ಕಂಡವರಾರು? ಆದುದರಿಂದ ಭವಿಷ್ಯದಲ್ಲೊದಗಬಹುದಾದ ಅಪಾಯದ ರಕ್ಷಣಾರ್ಥವಾಗಿ ಪ್ರತಿಯೊಬ್ಬರೂ ಸಾಂಘಿಕ ನಿಧಿಯೊಂದಕ್ಕೆ ಚಂದಾ ಕೊಟ್ಟು ಪರಸ್ಪರ ರಕ್ಷಣೆ ಕಲ್ಪಿಸಿಕೊಳ್ಳಬೇಕಾಗಿದೆ. ಭವಿಷ್ಯದ ದುರದೃಷ್ಟದ ಮತ್ತು ಸೋಲಿನ ಈ ರಕ್ಷಣೆಯೇ ವಿಮೆ. ಇದು ಒಂದು ಗುಂಪಿನ ಜನರ ಸಹಕಾರವಾಗಿರುತ್ತದೆ. ಈ ರೀತಿ ಒಬ್ಬೊಬ್ಬ ವ್ಯಕ್ತಿಯು ಹೊರಬೇಕಾಗುವ ನಷ್ಟದ ಹೊರೆಯು ಇಡೀ ಸಮಾಜದ ಮೇಲೆ ಹಂಚಲ್ಪಡುವುದು. ಸಮಾಜದಲ್ಲಿರುವ ಯಾವನಿಗೇ ಆಗಲಿ ನಷ್ಟ ಸಂಭವಿಸಬಹುದಾದರೂ ಅದು ಹಲವರಿಗೆ ಮಾತ್ರ ಸಂಭವಿಸುವುದೆಂಬುದನ್ನು ನಾವು ಬಲ್ಲೆವು. ವಿಮಾದಾರನಿಗೆ ವಿಮಾ ಕರಾರಿನಿಂದ ಹಲವು ಸೌಕರ್ಯಗಳು ದೊರೆಯುವುವು. ಅದಕ್ಕಾಗಿ ಅವನು ಪ್ರೀಮಿಯಂ ಕಟ್ಟಬೇಕಾಗುವುದರಿಂದ ಅಲ್ಪ ನಷ್ಟವಾಗುವುದು. ಈ ರೀತಿ ಅನೇಕರ ಅಲ್ಪನಷ್ಟವು ಹಲವರ ಅಧಿಕ ನಷ್ಟವನ್ನು ಸರಿತೂಗುವುದು. ಸಾಮಾನ್ಯವಾಗಿ ವಿಮಾ ಕಂಪೆನಿಗಳಿಗೆ ಯಾವ ನಷ್ಟವೂ ಇಲ್ಲ. ಏಕೆಂದರೆ ಮುಂದೆ ಬರುವುದೆಂದು ಗೊತ್ತಿರುವ ಅಧಿಕ ನಷ್ಟವನ್ನು ಎದುರಿಸಲು ಮೊದಲಿನಿಂದಲೂ ಅಲ್ಪ ಮೊಬಲಗಿನ ಪ್ರೀಮಿಯಂ ಹಣವನ್ನು ವಸೂಲು ಮಾಡುತ್ತಾರೆ. ಪ್ರತಿಯೊಂದು ವಸ್ತುವಿಗೂ ದ್ರವ್ಯಬೆಲೆಯುಂಟು. ಈ ಬೆಲೆಯು ನಾಶವಾಗದಿರಲೆಂದು ಅದನ್ನು ವಿಮೆ ಮಾಡುವರು. ಅದೇ ರೀತಿ ಪ್ರತಿಯೊಬ್ಬನೂ ತನ್ನ ಜೀವಮಾನದ ಅಥವಾ ಆಸ್ತಿಯ ಬೆಲೆಯನ್ನು ನಿಶ್ಚಯಿಸಿ ಅಷ್ಟಕ್ಕೆ ವಿಮೆ ಮಾಡಬಹುದು.

ಎಲ್ಲಾ ಆರ್ಥಿಕ ಚಟುವಟಿಕೆಯೂ ಫಲಸೃಷ್ಟಿಯುಳ್ಳದ್ದು. ಅಂತೆಯೇ ವಿಮೆಯೂ ಫಲಸೃಷ್ಟಿಯುಳ್ಳದ್ದು.

ವಿಮಾ ರಕ್ಷಣೆಯಿಂದ ಮೂಡುವ ತೃಪ್ತಿಯು ಒಂದು
ಆರ್ಥಿಕ ಲಾಭವು. ವಿಮಾದಾರನಿಗೆ ಕೊಡುವ ಪಾಲಿಸಿ
ಯಿಂದ ದೊರೆವ ಸೌಖ್ಯವಷ್ಟೇ ಅಲ್ಲದೆ, ಅದು ಜೊತೆಗೆ
ತರುವ ಶಾಂತಿಯು ಮಹತ್ತಿನದು. ಎಲ್ಲ ಸುಖದ ಮೂ
ಲಾಧಾರವೇ ಇದು. ವಿಮೆಯಿಂದ ಉದ್ಯಮ ವ್ಯವಹಾ
ರಕ್ಕೆ ಸೌಕರ್ಯವುಂಟು. ಮತ್ತು ಅದು ಜೀವನದ ಅನೇಕ
ಪರಿಭವಗಳನ್ನು ನೀಗಿ ರಕ್ಷಣೆಯೀವುದು. ಇವೆರಡು
ಔದ್ಯೋಗಿಕ ಮತ್ತು ಸಾಮಾಜಿಕ ಲಾಭಗಳು.

ವ್ಯಕ್ತಿಗೆ ದೊರೆಯುವ ಸೌಲಭ್ಯಗಳಷ್ಟೇ ಅಲ್ಲದೆ
ವಿಮಾ ಪದ್ಧತಿಯಿಂದ ಇಡೀ ಸಮಾಜಕ್ಕೆ ಬಂಡವಾಳದ
ಸಹಾಯ ದೊರೆಯುವುದು. ಬಂಡವಾಳ ವಿನಿಮಯಗಾರ
ರಲ್ಲಿ ವಿಮಾ ಕಂಪೆನಿಗಳ ಪ್ರಮುಖರಾದವರೆಂಬುದು ಎಲ್ಲ
ರಿಗೂ ತಿಳಿದ ವಿಷಯ. ಈ ಬಂಡವಾಳವು ಕೈಗಾರಿಕೋ
ದ್ಯಮಗಳ ಬೆಳವಣಿಗೆಗೆ ಉಪಯುಕ್ತವಾಗಿ ದೇಶದ ಸಂಪ
ತ್ತು ಹೆಚ್ಚುವುದು.

ಈ ರೀತಿ ವಿಮೆಯು ವ್ಯಕ್ತಿ ಮತ್ತು ಸಮಾಜ...
ಡಕ್ಕೂ ಸಹಾಯ ನೀಡುವುದು. ಸಮಾಜವು ವ್ಯಕ್ತಿ...
ನೀಡಿದ ಕೃಪೆಯೇ ವಿಮೆ. ವ್ಯಕ್ತಿಯು ಸಮಾಜಕ್ಕೆ...
ಸಿದ ಸೇವೆಯೇ ವಿಮೆ. ವಿಮೆಯಿಂದ ಸಮಾಜವು ವ್ಯಕ್ತಿ...
ಹಿತವನ್ನೂ, ವ್ಯಕ್ತಿಯು ಸಮಾಜದ ಹಿತವನ್ನೂ ಸಾಧಿ...
ತಾಗುವುದು.

ವಿದ್ಯಾವಂತರೆಲ್ಲರೂ ವಿಮಾ ಉದ್ಯೋಗದಲ್ಲಿ ತೊ...
ಆ ಉದ್ಯೋಗಕ್ಕೊಂದು ಶ್ರೇಷ್ಠ ಸಾಮಾಜಿಕ ಸ್ಥಾನ...
ದೊರೆಯುವ ಕಾಲವು ಸಮೀಪಿಸಿದೆಯೆಂದರೆ ಅತಿಶಯೋ...
ಕ್ತಿಯಾಗಲಾರದು. ವಿಮಾ ಉದ್ಯಮವು ಉದ್ಯೋ...
ವಷ್ಟೇ ಅಲ್ಲ ಅದು ಸಾಮಾಜಿಕ ಸೇವೆ ಅದು ...
ಆರ್ಥಿಕ ಚಟುವಟಿಕೆಯಷ್ಟೇ ಅಲ್ಲ. ನಿತ್ಯಾಚರಣೆಯು
ಆಹುದು. ವಿಮಾ ಉದ್ಯೋಗಿಗಳೂ, ವಿಮಾ ವಿ...
ಪ್ರಸಾರಕರೂ ವಿಮೆಯ ಈ ದ್ವಿಮುಖ ಉಪಯುಕ್ತ...
ಗಮನವಿಟ್ಟು ಕಾರ್ಯವನ್ನು ಮುಂದೆ ಸಾಗಿಸಬೇಕು.



## ಹಣದಮೇಲಿನ ಪ್ರೇಮದಿಂದ ಹಣವನ್ನು ಕೂಡಿಡುವುದು ದುರಾಶೆ

## ನಾಳಿನ ರಕ್ಷಣೆಗಾಗಿ ಹಣ ಉಳಿಸುವುದು ಕರ್ತವ್ಯ

**ಆದಾಯದಲ್ಲಿ ಶೇಕಡ ೧೦ ರಷ್ಟನ್ನಾದರೂ ಉಳಿಸಬೇಕಾದುದು ಅಗತ್ಯ**

**ಹಾಗಾದರೆ ನಿಮ್ಮ ಉಳಿತಾಯವು ಯಾವ ರೂಪದಲ್ಲಿರುವುದು ?**



SIR SRI KANTEERAVA NARASIMHARAJA WADEYAR BAHADUR. G.C.I.E.
HIS HIGHNESS THE YUVARAJA OF MYSORE

ಸರ್ ಶ್ರೀ ಕಂಠೀರವ ನರಸಿಂಹರಾಜಒಡೆಯರ್ ಬಹದ್ದೂರ್, ಜಿ.ಸಿ.ಐ.ಇ.
ಮೈಸೂರಿನ ಯುವರಾಜರವರು.

MODI POWER PRINTING WORKS, BANGALORE CITY

# ಮಹಾಪುರುಷರ ದಿವ್ಯವಾಣಿ

## Great Men and Insurance

[ವಿಮಾ ಸಂದೇಶವನ್ನು ತಮ್ಮ ತಮ್ಮ ರಾಷ್ಟ್ರದ ಮೂಲೆಮೂಲೆಯಲ್ಲಿಯೂ ಹರಡಿ, ತಮ್ಮ ಜನತೆಯ [illegible] ಅಭಿವೃದ್ಧಿಗೆ ನೆರವಾದವರಲ್ಲಿ ಆಯಾ ದೇಶದ ಪ್ರಮುಖ ಮುಖಂಡರೇ ಮುಖ್ಯರಾಗಿದ್ದಾರೆ. ಪ್ರತಿ ಸಂಚಿಕೆ[illegible]ಯೂ ಆ ಮಹಾತ್ಮರ ವಾಕ್ಯ-ವಚನಗಳನ್ನು ಆರಿಸಿ "ಮಹಾಪುರುಷರ ದಿವ್ಯವಾಣಿ" ಎಂಬ ಅಭಿದಾನ[illegible] ಪ್ರಕಟಿಸಬೇಕೆಂದು ನಿಶ್ಚಯಿಸಿದ್ದೇವೆ. ಇದುವರೆಗೆ ಸಾಮಾನ್ಯವಾಗಿ ಪ್ರಮುಖ ಭಾರತೀಯರ ಸಂದೇಶಗಳನ್ನೇ [illegible]ಸಿದೆವು. ಇನ್ನುಮುಂದೆ ಅಂತರರಾಷ್ಟ್ರೀಯ ಮಹಾಪುರುಷರ ಸಂದೇಶಗಳನ್ನೂ ಪ್ರಕಟಿಸಬೇಕೆಂದು ಮನಸ್ಸು ಮಾಡಿರುವೆವು.]

### ಶ್ರೀಮದ್ಯುವರಾಜರವರ ಭಾಷಣದಿಂದ ಆಯ್ದುದು



"ಆಧುನಿಕ ಜೀವನ ರೀತಿಯು ಹೆಚ್ಚು ಹೆಚ್ಚು [illegible]ರ್ಣವಾದಂತೆಲ್ಲಾ ಜೀವವಿಮೆಯು ಮುಂದುವರಿ[illegible]ದ ಕೋಮುಗಳ ಜೀವನದಲ್ಲಿ ಒಂದು ಮುಖ್ಯವಾದ [illegible]ವಾಗಿ ರೂಪುಗೊಳ್ಳುತ್ತಿದೆ. ಜೀವವಿಮೆಯನ್ನು ಮಾಡುವ [illegible]ದೇಶಗಳು ಹೆಚ್ಚುತ್ತಿವೆ. ಮುಂದೆ ಬರುವ ತೊಂದರೆ[illegible] ಪರಿಹಾರಮಾಡಿಕೊಳ್ಳುವುದಕ್ಕೋಸ್ಕರ ಜೀವ[illegible]ಯ ಅವಶ್ಯಕತೆಗಳು ಅನೇಕವಾಗಿ ಕಂಡುಬರುತ್ತಿವೆ. [illegible]ವಂತನಾದ ಮನುಷ್ಯನು ಮುಂದೆ ಬರಬಹುದಾದ [illegible]ಕಾಲಕ್ಕೆ ಪರಿಹಾರವಾಗಿ ಈಗಲೇ ಜೀವವಿಮೆಯ [illegible]ಡುಗಳಲ್ಲಿ ತೊಡಗುವನು. ಜೀವವಿಮೆ ಮಾಡು[illegible] ತನ್ನ ಸಂತತಿಯ ಉಪಯೋಗಕ್ಕೋಸ್ಕರವೇ [illegible], ತಾನು ವಯಸ್ಸಾಗಿ ನಿವೃತ್ತನಾದಮೇಲೆ ತನಗೆ [illegible]ಗೋಸ್ಕರವೂ ಕೂಡ ಜೀವವಿಮೆ ಮಾಡುವನು. [illegible]ಂದು ಮಗುವು ಹುಟ್ಟಿದಾಗೆಲ್ಲಾ ಆದರ ವಿದ್ಯಾಭ್ಯಾ[illegible]ಗಿ ಹಣವನ್ನು ಜೀವವಿಮೆ ಮಾಡುವನು. ಮೂರನೆ[illegible]ಯಿಂದ ತನ್ನ ಮೋಟಾರುಗಾಡಿಗೆ ಬರಬಹುದಾದ [illegible]ಯದ ಕಾರಣ, ತನ್ನ ಮೋಟಾರುಗಾಡಿಯನ್ನು [illegible]ನಿನ ಪ್ರಕಾರ ವಿಮೆ ಮಾಡ[illegible] [illegible]ಸಿರುವ ಪ್ರತಿಯೊಬ್ಬನಿಗೂ ಮುಂದೆ ಒದಗಬಹುದಾದ ಅಕಸ್ಮಿಕಗಳಿಗಾಗಿ ವಿಮೆ ಮಾಡದಿದ್ದರೆ ಆ ಮನುಷ್ಯನು ವಿವೇಕಿಯೆಂದು ಹೇಳಲಾಗುವುದಿಲ್ಲ.

ಜೀವವಿಮೆಯು ಅನೇಕ ಉದ್ದೇಶಗಳಿಗಾಗಿ ಮಾಡಲ್ಪಡಬಹುದು. ಮುಂದುವರಿದ ಪಾಶ್ಚಿಮಾತ್ಯ ದೇಶಗಳಲ್ಲಿರುವ ವಿಮಾ ವೈವಿಧ್ಯವು ನಮ್ಮಲ್ಲಿ ಇನ್ನೂ ಜಾರಿಗೆ ಬಂದಿಲ್ಲ. [illegible] ಪತ್ರಿಕೆಯಲ್ಲಿ ನಾವು ಒಂದು ಜಾಹೀರಾತನ್ನು ನೋಡಿದೆವು. ಹದಿನಾಲ್ಕರಿಂದ ಐವತ್ತು ವರುಷದೊಳಗಿರತಕ್ಕ ಹೆಂಗಸರಿಗೆ ಅವರು ಯಾವ ಜಾತಿಯವರೇ ಆಗಲಿ, ಜನಾಂಗದವರೇ ಆಗಲಿ, ಜನನ-ವಿಮಾ ಪಾಲಿಸಿಗಳನ್ನು ಏರ್ಪಡಿಸುವುದಾಗಿ ಒಂದು ವಿಮಾ ಕಂಪೆನಿಯು ಪ್ರಕಟಿಸಿತ್ತು. ಈ ಬಗೆಯ ವಿಮೆಯಿಂದ ಹೆರಿಗೆ ಸಮಯದಲ್ಲಿ ತಾಯಂದಿರ ವಿಷಯವಾಗಿ ಅದಷ್ಟು ಜಾಗರೂಕತೆಯನ್ನು ತೆಗೆದುಕೊಳ್ಳಲು [illegible] ತ್ತದೆ. ಮತ್ತು ಮರಣದ ಸಂಖ್ಯೆಯು ತಗ್ಗುತ್ತದೆ. ಮಗುವು ಹುಟ್ಟಿದಮೇಲೆ ಅದರ [illegible] ವಿದ್ಯಾಭ್ಯಾಸದ [illegible] ಗಾಗಿ ಒಂದು ಪಾಲಿಸಿಯನ್ನು [illegible]ತ್ತದೆ. [illegible] [illegible] ತಪ್ಪಿಸಲು [illegible] ಮಾಡಿದರೆ ಅದರ ಪಾಲಿಸಿಗಳಿಗೆ ಬೇಕಾದಷ್ಟು [illegible]



SIR SRI KANTEERAVA NARASIMHARAJA WADEYAR BAHADUR, G.C.I.E.
HIS HIGHNESS THE YUVARAJA OF MYSORE

ಸರ್ ಶ್ರೀ ಕಂಠೀರವ ನರಸಿಂಹರಾಜಒಡೆಯರ್ ಬಹದ್ದೂರ್, ಜಿ.ಸಿ.ಐ.ಇ.
ಮೈಸೂರಿನ ಯುವರಾಜರವರು.

HIGH POWER PRINTING WORKS, BANGALORE CITY

# ಮಹಾಪುರುಷರ ದಿವ್ಯವಾಣಿ

## Great Men and Insurance

[ವಿಮಾ ಸಂದೇಶವನ್ನು ತಮ್ಮ ತಮ್ಮ ರಾಷ್ಟ್ರದ ಮೂಲೆಮೂಲೆಯಲ್ಲಿಯೂ ಹರಡಿ, ತಮ್ಮ ಜನತೆಯ ಆರ್ಥಿಕ ಅಭಿವೃದ್ಧಿಗೆ ನೆರವಾದವರಲ್ಲಿ ಆಯಾ ದೇಶದ ಪ್ರಮುಖ ಮುಖಂಡರೇ ಮುಖ್ಯರಾಗಿದ್ದಾರೆ. ಪ್ರತಿ ಸಂಚಿಕೆಯಲ್ಲಿಯೂ ಆ ಮಹಾತ್ಮರ ವಾಕ್ಯ-ವಚನಗಳನ್ನು ಆರಿಸಿ "ಮಹಾಪುರುಷರ ದಿವ್ಯವಾಣಿ" ಎಂಬ ಅಭಿದಾನದಿಂದ ಪ್ರಕಟಿಸಬೇಕೆಂದು ನಿಶ್ಚಯಿಸಿದ್ದೇವೆ. ಇದುವರೆಗೆ ಸಾಮಾನ್ಯವಾಗಿ ಪ್ರಮುಖ ಭಾರತೀಯರ ಸಂದೇಶಗಳನ್ನೇ ಪ್ರಕಟಿಸಿದೆವು. ಇನ್ನುಮುಂದೆ ಅಂತರರಾಷ್ಟ್ರೀಯ ಮಹಾಪುರುಷರ ಸಂದೇಶಗಳನ್ನೂ ಪ್ರಕಟಿಸಬೇಕೆಂದು ಮನಸ್ಸು ಮಾಡಿರುವೆವು.]

## ಶ್ರೀಮದ್ಯುವರಾಜರವರ ಭಾಷಣದಿಂದ ಆಯ್ದುದು



"ಆಧುನಿಕ ಜೀವನ ರೀತಿಯು ಹೆಚ್ಚು ಹೆಚ್ಚು ಸಂಕೀರ್ಣವಾದಂತೆಲ್ಲಾ ಜೀವವಿಮೆಯು ಮುಂದುವರಿದಿರುವ ಕೋಮುಗಳ ಜೀವನದಲ್ಲಿ ಒಂದು ಮುಖ್ಯವಾದ ಭಾಗವಾಗಿ ರೂಪುಗೊಳ್ಳುತ್ತಿದೆ. ಜೀವವಿಮೆಯನ್ನು ಮಾಡುವ ಸನ್ನಿವೇಶಗಳು ಹೆಚ್ಚುತ್ತಿವೆ. ಮುಂದೆ ಬರುವ ತೊಂದರೆಗಳನ್ನು ಪರಿಹಾರಮಾಡಿಕೊಳ್ಳುವುದಕ್ಕೋಸ್ಕರ ಜೀವವಿಮೆಯ ಅವಶ್ಯಕತೆಗಳು ಅನೇಕವಾಗಿ ಕಂಡುಬರುತ್ತಿವೆ. ಬುದ್ಧಿವಂತನಾದ ಮನುಷ್ಯನು ಮುಂದೆ ಬರಬಹುಹಾದ ಕಷ್ಟಕಾಲಕ್ಕೆ ಪರಿಹಾರವಾಗಿ ಈಗಲೇ ಜೀವವಿಮೆಯ ಏರ್ಪಾಡುಗಳಲ್ಲಿ ತೊಡಗುವನು. ಜೀವವಿಮೆ ಮಾಡುವವನು ತನ್ನ ಸಂತತಿಯ ಉಪಯೋಗಕ್ಕೋಸ್ಕರವೇ ಅಲ್ಲದೆ, ತಾನು ವಯಸ್ಸಾಗಿ ನಿವೃತ್ತನಾದಮೇಲೆ ತನಗೆ ಪೆನ್‌ಷನ್‌ಗೋಸ್ಕರವೂ ಕೂಡ ಜೀವವಿಮೆ ಮಾಡುವನು. ಒಂದೊಂದು ಮಗುವು ಹುಟ್ಟಿದಾಗೆಲ್ಲಾ ಅದರ ವಿದ್ಯಾಭ್ಯಾಸಕ್ಕಾಗಿ ಹಣವನ್ನು ಜೀವವಿಮೆ ಮಾಡುವನು. ಮೂರನೆಯವರಿಂದ ತನ್ನ ಮೋಟಾರುಗಾಡಿಗೆ ಬರಬಹುದಾದ ಅಪಾಯದ ಕಾರಣ, ತನ್ನ ಮೋಟಾರುಗಾಡಿಯನ್ನು ಕಾನೂನಿನ ಪ್ರಕಾರ ವಿಮೆ ಮಾಡಬೇಕಾಗುವುದು. ತಾನು ಪ್ರೇಮಿಸಿರುವ ಪ್ರತಿಯೊಬ್ಬರಿಗೂ ಮುಂದೆ ಒದಗಬಹುದಾದ ಆಕಸ್ಮಿಕಗಳಿಗಾಗಿ ವಿಮೆ ಮಾಡದಿದ್ದರೆ ಆ ಮನುಷ್ಯನು ವಿವೇಕಿಯೆಂದು ಹೇಳಲಾಗುವುದಿಲ್ಲ.

ಜೀವವಿಮೆಯು ಅನೇಕ ಉದ್ದೇಶಗಳಿಗಾಗಿ ಮಾಡಲ್ಪಡಬಹುದು. ಮುಂದುವರಿದ ಪಾಶ್ಚಿಮಾತ್ಯ ದೇಶಗಳಲ್ಲಿರುವ ವಿಮಾ ವೈವಿಧ್ಯವು ನಮ್ಮಲ್ಲಿ ಇನ್ನೂ ಜಾರಿಗೆ ಬಂದಿಲ್ಲ. ಒಂದುಸ್ಥಳೀಯ ಪತ್ರಿಕೆಯಲ್ಲಿ ನಾವು ಒಂದು ಜಾಹೀರಾತನ್ನು ನೋಡಿದೆವು. ಹದಿನಾಲ್ಕರಿಂದ ಐವತ್ತು ವರುಷದೊಳಗಿರಗಿರತಕ್ಕ ಹೆಂಗಸರಿಗೆ ಅವರು ಯಾವ ಜಾತಿಯವರೇ ಆಗಲಿ, ಜನಾಂಗದವರೇ ಆಗಲಿ, ಜನನ ವಿಮಾ ಪಾಲಿಸಿಗಳನ್ನು ಏರ್ಪಡಿಸುವುದಾಗಿ ಒಂದು ವಿಮಾ ಕಂಪೆನಿಯು ಪ್ರಕಟಿಸಿತ್ತು. ಈ ಬಗೆಯ ವಿಮೆಯಿಂದ ಹೆರಿಗೆ ಸಮಯದಲ್ಲಿ ತಾಯಂದಿರ ವಿಷಯವಾಗಿ ಅದಷ್ಟು ಜಾಗರೂಕತೆಯನ್ನು ತೆಗೆದುಕೊಳ್ಳಲು ಪ್ರೋತ್ಸಾಹವಾಗುತ್ತದೆ. ಮತ್ತು ಮರಣದ ಸಂಖ್ಯೆಯು ತಗ್ಗುತ್ತದೆ. ಮಗುವು ಹುಟ್ಟಿದಮೇಲೆ ಅದರ ಸ್ಕೂಲು ವಿದ್ಯಾಭ್ಯಾಸದ ಖರ್ಚುಗಳಿಗಾಗಿ ಒಂದು ಪಾಲಿಸಿಯನ್ನು ತೆಗೆದುಕೊಳ್ಳಬೇಕಾಗುತ್ತದೆ. ಯಾವುದಾದರೊಂದು ಕಂಪೆನಿಯು ವಿದ್ಯಾರ್ಥಿಗಳನ್ನು ಪರೀಕ್ಷೆಯಲ್ಲಿ ಅಪಜಯದಿಂದ ತಪ್ಪಿಸಲು ವಿಮೆಯ ಏರ್ಪಾಡನ್ನು ಮಾಡಿದರೆ ಅದರ ಪಾಲಿಸಿಗಳಿಗೆ ಬೇಕಾದಷ್ಟು ಬೇಡಿಕೆ

ಗಳು ಬರುವುವು ಎಂದು ನಾವು ಧೈರ್ಯವಾಗಿ ಹೇಳಬಲ್ಲೆವು. ವಿಮೆಯು ಇನೂ ಅನೇಕ ಉದ್ದೇಶಗಳಿಗಾಗಿ ಏರ್ಪಡಿಸಬಹುದು. ಮಗಳಿಗೆ ವರನು ದೊರೆಯುವ ಸಮಯದಲ್ಲಿ, ಅಥವಾ ಅವಳ ಮದುವೆಗೆ ಕೊಡಬೇಕಾದ ವರದಕ್ಷಿಣೆಯ ಹಣಕ್ಕಾಗಿ ವಿಮೆಗಳು ಉಪಯುಕ್ತವಾಗುವುವು. ನಂಬಿಕೆಯ ವಿಮೆಗಳು ಕೂಡ ಆಗಲೇ ಸಾಧಾರಣವಾಗಿವೆ. ಮೋಟಾರು ಗಾಡಿಗಳ ಬಗ್ಗೆ ಮೂರನೆಯವರಿಂದ ಬರುವ ಅಪಾಯಗಳ ರಕ್ಷಣೆಗಾಗಿ ಬಲಾತ್ಕಾರವಾಗಿ ಕಾನೂನಿನಿಂದ ವಿಮಾ ಏರ್ಪಾಡಾಗಬೇಕು. ಸರಕಾರದವರು ಪಾಲಿಸಿಗಳಿಂದಲೂ ಇತರ ವಿಧವಾಗಿಯೂ ಶೇಖರಿಸತಕ್ಕ ಹಣದ ಮೊತ್ತವನ್ನು ಆಜೀವ ವರಮಾನ (Life Annuity) ಅಥವಾ ನಿರ್ದಿಷ್ಟಕಾಲದ ವರಮಾನ (Term Annuity) ವನ್ನಾಗಿ ಪರಿವರ್ತಿಸಿದ್ದಾರೆ. ಇದೇ ಮಾರ್ಗವನ್ನು ಇತರ ವಿಮಾ ಕಂಪೆನಿಯವರೂ ಕೂಡ ಅನುಸರಿಸುವುದರಿಂದ ಉಪಯೋಗವುಂಟು.

ವಿಮಾ ಕಂಪೆನಿಗಳಿಗೆ ಈಗ ದೊರೆಯುತ್ತಿರುವ ಪ್ರೋತ್ಸಾಹದ ಕಾರಣ ಅವುಗಳ ಸಂಖ್ಯೆಯು ದಿನದಿನಕ್ಕೂ ಹೆಚ್ಚುತ್ತಿರುವುದು ಸಂತೋಷದ ಸಂಗತಿ. ೧೯೩೧ ರಲ್ಲಿ ಇದ್ದುದಕ್ಕಿಂತಲೂ ೧೯೩೩ ರಲ್ಲಿ ಅವುಗಳ ಸಂಖ್ಯೆಯು ಶೇಕಡಾ ೩೦೦ ರಷ್ಟು ಹೆಚ್ಚಿತು. ಇದೊಂದು ಪ್ರೋತ್ಸಾಹಕರವಾದ ಚಿಹ್ನೆ. ವಿಮೆ ಎಂದರೆ ವಿವೇಕವಾಗಿ ಉಳಿಸುವಿಕೆ. ಬಹಳ ಬಡವರಾಗಿರುವವರು ಏನನ್ನೂ ಉಳಿಸಲಾರರು. ವಿಮಾ ಪಾಲಿಸಿಗಳನ್ನು ತೆಗೆದುಕೊಳ್ಳುವವರು ಎಷ್ಟೆಷ್ಟು ಹೆಚ್ಚುತ್ತಾರೋ ಅಷ್ಟಷ್ಟೂ ಬಡತನದಿಂದ ಮೇಲಕ್ಕೆ ಬಂದವರೆಂದು ತಿಳಿಯಬಹುದು. ೭,೧೪,೦೦೦ ಪಾಲಿಸಿಗಳು ಈಗ ಜಾರಿಯಲ್ಲಿವೆ. ೧೩೮ ಕೋಟಿ ರೂಪಾಯಿಗಳು ಅವುಗಳಲ್ಲಿ ಅಡಗಿವೆ. ಇದು ಅಭಿನಂದನೀಯವಾದ ವಿಷಯ. ವಿಮಾ ಪಾಲಿಸಿಗಳನ್ನು ತೆಗೆದುಕೊಳ್ಳುವವರು ಸ್ವಂತ ಇಚ್ಛೆಯಿಂದ ತಮ್ಮ ಮೇಲೆ ತೆರಿಗೆಯನ್ನು ಹಾಕಿಕೊಳ್ಳುತ್ತಾರೆ. ಈ ತೆರಿಗೆಯು ನಾವು ಕೊಡುತ್ತಿರುವ ಉಪ್ಪಿನ ತೆರಿಗೆಯಷ್ಟಿದೆ.

ವಿಮಾ ಕಂಪೆನಿಗಳು ತಮ್ಮ ನಿಧಿಗಳನ್ನು ಸರಿಯಾದ ಕಡೆ ಬಡ್ಡಿಗೆ ಹಾಕಬೇಕು (invest.) ವಿಮಾ ಕಂಪೆನಿಗಳು ಒಂದು ಕಡೆ ಎಷ್ಟೋ ಜನರಿಗೆ ಇನ್‌ವೆಸ್ಟ್‌ಮೆಂಟು ಗಳನ್ನು ದೊರಕಿಸಿ, ಮತ್ತೊಂದು ಕಡೆ ಸುಮಾರು ೩೦ ಕೋಟಿ ರೂಪಾಯಿಗಳಷ್ಟು ಸರಕಾರದ ಸಾಲಗಳಿಗೂ, ಬೇರೆಯಾದ ವ್ಯವಹಾರ ಸಂಸ್ಥೆಗಳಿಗೂ ಒದಗಿಸುತ್ತವೆ. ಈ ಏರ್ಪಾಡುಗಳಲ್ಲಿ ಜನಗಳ ದುಡ್ಡು ನಾಶವಾಗದಂತೆ ವಿಮಾ ಕಂಪೆನಿಯವರು ಬುದ್ಧಿವಂತಿಕೆಯಿಂದಿರಬೇಕು. ಹಣವನ್ನು ಎಷ್ಟು ಬುದ್ಧಿವಂತಿಕೆಯಾಗಿ ವಿನಿಮಯ ಮಾಡಿದರೆ ಅಷ್ಟು ರಾಷ್ಟ್ರಪುನರುಜ್ಜೀವನಕ್ಕೆ ಅವಕಾಶವಾಗುತ್ತದೆ. ಈಗಾಗಲೇ ಎಷ್ಟು ನಾಯಿಕೊಡೆಯ ಸೊಸೈಟಿಗಳು ಚಿಕ್ಕಭಿನ್ನವಾಗಿ ಲಯವಾಗುತ್ತಿವೆ. ಜನಗಳ ನಂಬಿಕೆಯು ಕೆಡದಂತೆ ಕಂಪೆನಿಯವರು ನೋಡಿಕೊಳ್ಳಬೇಕು."






## ಗೆಲುವು ಪಡೆಯಲು ವಿಮೋದ್ಯೋಗಿಯು ಅನುಸರಿಸಬೇಕಾದ ಹತ್ತು ಸೂತ್ರಗಳು

ಪರಿಪೂರ್ಣತೆ ಪಡೆಯಲಿರುವ ಮಾರ್ಗವು ಒಂದೇ ಒಂದು, ಅದು ಅಭ್ಯಾಸ. ಪ್ರತಿಯೊಂದು ಪ್ರಯತ್ನಕ್ಕೂ ಅದು ವ್ಯಾಯಾಮವಿರಲಿ, ಕಲೆಯಿರಲಿ ಅಥವಾ ವಿಮಾ ಉದ್ಯಮ ಸಂಪಾದಿಸುವುದಿರಲಿ, ಇದು ಅನ್ವಯಿಸುತ್ತದೆ.

ಗೆಲುವು ಪಡೆಯಲು ಇಲ್ಲಿ ಹೇಳುವ ಹತ್ತು ಗುಣಗಳು ಅತ್ಯಗತ್ಯ. ಯಾವ ಪ್ರಮಾಣದಲ್ಲೇ ಆಗಲಿ ಆ ಹತ್ತು ಗುಣಗಳೂ ಇದ್ದೇತೀರಬೇಕು. ಅವುಗಳಲ್ಲಿ ಒಂದೆರಡು ಗುಣಗಳು ಸಂಪೂರ್ಣವಾಗಿ ಇಲ್ಲದಿರುವುದಾದರೆ ಗೆಲುವು ದೊರೆಯಲಾರದು. ಎಲ್ಲ ಗುಣಗಳೂ ಇದ್ದು ಹಲವು ಅಲ್ಪಪ್ರಮಾಣದಲ್ಲಿದ್ದರೆ ಗೆಲುವು ಮಧ್ಯಮ ದರ್ಜೆಯದಾಗುವುದು. ಆದರೆ ಜೀವವಿಮೋದ್ಯೋಗಿಯು ಪ್ರತಿಯೊಂದು ಗುಣದಲ್ಲಿಯೂ ಪರಿಪೂರ್ಣತೆಗೆ ಸಾಧ್ಯವಾದಷ್ಟು ಸಮೀಪವಾಗುವವರೆಗೆ ಅಭ್ಯಾಸಮಾಡುವುದಾದರೆ ಅವನು ಸಾಧಿಸಬಹುದಾದ ಗೆಲುವಿಗೆ ಮೇರೆಯಿಲ್ಲ.

### ನಿನ್ನ ಉದ್ಯಮವನ್ನು ತಿಳಿ

ಜೀವವಿಮೋದ್ಯೋಗಿಗೆ ಮುಖ್ಯವಾಗಿ ಇರಬೇಕಾದ ಮೊದಲ ಗುಣವಿದು. ನಮ್ಮ ಉದ್ಯಮವೇನೆಂಬುದನ್ನು ನಾವು ಅರಿತಿರಬೇಕು. ನಾವು ಮಾರಲಿರುವ ವಸ್ತುವಿನಲ್ಲಿ, ನಮ್ಮಲ್ಲಿ, ನಮಗೆ ಎಲ್ಲ ನಂಬಿಕೆಯಿಲ್ಲದಿದ್ದರೆ ನಮಗೆ ಗೆಲವು ದೊರೆಯದು. ಪೂರ್ಣ ಮತ್ತು ವಿಶಾಲಜ್ಞಾನದಿಂದ ಮಾತ್ರ ಈ ನಂಬಿಕೆ ಬರಲು ಸಾಧ್ಯ.

ಗೆಲವು ದೊರೆಯಲು, ವಿಮೋದ್ಯೋಗಿಯು ಸಂಭಾಷಣೆಯ ಮೇಲಣ ಅಧಿಕಾರವನ್ನು ತನ್ನ ಕೈಯಲ್ಲಿಟ್ಟುಕೊಂಡಿರಬೇಕು. ಅವನು ಹಾಗೆ ಮಾಡಬೇಕಾದರೆ, ಸಂಭಾಷಿಸುತ್ತಿರುವವರಿಗಿಂತಲೂ ಜೀವವಿಮೆಯ ವಿಷಯದಲ್ಲಿ ತನಗೆ ಹೆಚ್ಚು ತಿಳುವಳಿಕೆಯಿರುವುದೆಂಬ ಜ್ಞಾನದಿಂದ ಬರುವ ಆತ್ಮವಿಶ್ವಾಸವನ್ನು ಪಡೆದಿದ್ದರೆ ಮಾತ್ರ ಸಾಧ್ಯ. ತನ್ನ ಉದ್ಯಮದ ಸಾಮಾನ್ಯ ವಿಷಯ ತಿಳಿದಿದ್ದರೂ ಕಾರ್ಯ ಸಾಧಿಸಬಲ್ಲೆನೆಂದು ತಿಳಿದವನಿಗೆ ಸೋಲು ಸಿದ್ಧ. ನಿನ್ನ ಉದ್ಯಮವನ್ನು ತಿಳಿ—ಈ ಮೊದಲ ಸೂತ್ರದ ಮಹತ್ವವನ್ನು ಮತ್ತೂ ಒತ್ತಿ ಹೇಳಬೇಕಾಗಿಲ್ಲ.

### ನಿನ್ನ ಉದ್ಯಮವನ್ನು ಪ್ರೇಮಿಸು

ನಮಗೆ ನಮ್ಮ ಉದ್ಯಮದಲ್ಲಿ ಪ್ರೇಮವಿರಬೇಕು. ವಿಮೋದ್ಯೋಗಿಯೆನಿಸುವುದು ನಮಗೆ ಹೆಮ್ಮೆ ಪಡುವ ವಿಷಯವಾಗಿರಬೇಕು. ಇಲ್ಲದಿದ್ದರೆ ನಮಗೆ ಉತ್ಸಾಹವಿರದು. ಉತ್ಸಾಹವಿರದೆ ಜಯವಿಲ್ಲ ಉತ್ಸಾಹವು ಉತ್ಸಾಹಕ್ಕೆ ಎಡೆಯಾಗುವುದು. ಉದ್ಯೋಗಿಗೇ ತಾನು ಮಾರುವ ವಸ್ತುವಿನಲ್ಲಿ ಉತ್ಸಾಹವಿರದಿದ್ದರೆ ಕೊಳ್ಳುವವನಿಗೆ ಅದರಲ್ಲಿ ಉತ್ಸಾಹ ಹೇಗೆ ಬಂದೀತು? ಕೊಳ್ಳುವವನಿಗೆ ಉತ್ಸಾಹವಿಲ್ಲದಿರಲು ಅವನು ಕೊಳ್ಳನು.

### ವಿಮಾ ಮಾಡಲಿರುವವರ ಸ್ವಭಾವವನ್ನು ತಿಳಿದುಕೊ

ವಿಮಾ ಮಾಡಲಿರುವವರಿಗೆ ಎರಡು ವಿಧ ಗುಣಗಳಿರಬೇಕು. (೧) ವೃದ್ಧಾಪ್ಯದಲ್ಲಿ ತಾನು ಸ್ವತಂತ್ರನಿರಬೇ

# ನ್ಯಾಯಸ್ಥಾನ ಸಮಾಚಾರ

## Legal Intelligence

### ಲಕ್ಷ್ಮೀಶಂಕರ್ ಕಂಜೀ ರಾವಲ್
### vs
### ಗ್ರೀಷಾಂ ಲೈಫ್ ಆಷ್ಯೂರೆನ್ಸ್ ಸೊಸೈಟಿ ಲಿಮಿಟೆಡ್

ವಿಮಾ ದರಖಾಸ್ತು — ಕಂಪನಿಯ ಏಜಂಟನು ಭರ್ತಿ ಮಾಡಿದ ಉತ್ತರಗಳು — ಕಂಪನಿಯ ಜವಾಬ್ದಾರಿ--ಸುಳ್ಳು ಹೇಳಿಕೆ.

ಪ್ರತಿವಾದಿ ಕಂಪನಿಯೊಡನೆ ವಿಮೆ ಮಾಡಿದವನೊಬ್ಬನು, ದರಖಾಸ್ತು, ತನ್ನ ಪ್ರಮಾಣ ಪೂರ್ವಕ ಹೇಳಿಕೆ, ವೈದ್ಯ ಪರೀಕ್ಷಕರಿಗೆ ಕೊಟ್ಟಿರುವ ಉತ್ತರಗಳು ಇವೇ ತನಗೂ ಕಂಪನಿಗಳೂ ಇರುವ ಕರಾರಿಗೆ ಮೂಲವಾದುದೆಂದು ದರಖಾಸ್ತಿನಲ್ಲಿ ಒಪ್ಪಿಕೊಂಡಿದ್ದನು. ವಿಮಾ ದರಖಾಸ್ತಿನಲ್ಲಿ ಕೇಳಿರುವ ಎರಡು ಪ್ರಶ್ನೆಗಳಿಗೂ ವೈದರು ಕೇಳಿದ ಒಂದು ಪ್ರಶ್ನೆಗೂ ಕೊಟ್ಟ ಉತ್ತರಗಳು ಸುಳ್ಳಾಗಿದ್ದಿತು. ವಿಮಾದಾರನ ಬಾಧ್ಯಸ್ಥನು ವಿಮಾ ಮೊಬಲಗನ್ನು ಪಡೆಯಲು ಕಂಪೆನಿಯಮೇಲೆ ಹೂಡಿದ ಮೊಕದ್ದಮೆಯಲ್ಲಿ, ವಿಮಾದಾರನು ದರಖಾಸ್ತಿನ ಪ್ರಶ್ನೆಗಳಿಗೆ ಉತ್ತರವನ್ನು ಬರೆಯಲಿಲ್ಲವೆಂದೂ, ಕಂಪೆನಿಯ ಏಜಂಟನೇ ಪ್ರಶ್ನೆಗಳಿಗೆ ಉತ್ತರ ಬರೆದಿರುವುದಾಗಿಯೂ ಆದುದರಿಂದ ದರಖಾಸ್ತಿನಲ್ಲಿರುವ ಸುಳ್ಳು ಹೇಳಿಕೆಯು ವಿಮಾದಾರನ ತಿಳುವಳಿಕೆಗೆ ಬಂದುದಲ್ಲವೆಂದು ವಾದಿಸಿದನು.

ಕೋರ್ಟಿನವರು ಈ ರೀತಿ ಅಭಿಪ್ರಾಯಪಟ್ಟರು.

(೧) ದರಖಾಸ್ತನ್ನು ಭರ್ತಿಮಾಡಿದ ವಿಚಾರದಲ್ಲಿ ಏಜಂಟನು ವಿಮಾದಾರನ ಪ್ರತಿನಿಧಿಯಾಗಿ ವರ್ತಿಸುವುದರಿಂದ ವಿಮಾ ಕಂಪೆನಿಯವರು ತಮ್ಮ ಜವಾಬ್ದಾರಿಯನ್ನು ನಿರಾಕರಿಸಬಹುದಾಗಿದೆ.

(೨) ದರಖಾಸ್ತಿನಲ್ಲಿ ಕೊಟ್ಟಿರುವ ಹೇಳಿಕೆಯು ಕಂಪೆನಿಯೊಡನೆಯ ಕರಾರಿಗೆ ಮೂಲವೆಂದು ಹೇಳಿರುವ ಕಡೆ, ಹೇಳಿಕೆಯ ಸತ್ಯಾಂಶವು, ಅದರ ಪ್ರಾಮುಖ್ಯತೆ ವಿಷ್ಟಾಲಿ, ಕಂಪೆನಿಯ ಜವಾಬ್ದಾರಿಯು ಮೂಲವಾಗುತ್ತದೆ ಆದುದರಿಂದ ಪ್ರಶ್ನೆಗಳೂ ಅವುಗಳಿಗೆ ಬೇಕಾದ ಉತ್ತರಗಳು ಪ್ರಾಮುಖ್ಯವೇ ಎಂಬ ಪ್ರಶ್ನೆಯು ಉದಯಕ್ಕೆ ಅವಕಾಶವಿಲ್ಲ

(೩) ವೈದ್ಯ ಪರೀಕ್ಷಕರಿಗೆ ಕೊಟ್ಟಿರುವ ಉತ್ತರವೊಂದು ಸುಳ್ಳಿರುವುದರಿಂದ ಕಂಪೆನಿಯು ಹೊಣೆಯಾದುದಲ್ಲ.

### ಹಿರ್ರ ಕುಮಾರ್ ಚೌಧುರಿ vs ಮುಗಲ್ ಸೇ

ವಿಮಾದಾರನ ವಯಸ್ಸು—ವಯಸ್ಸಿನ ರುಜುವಾತು ಕೇಳಲು ಕಂಪೆನಿಗಿರುವ ಹಕ್ಕು-ವಯಸ್ಸಿನ ಸುಳ್ಳುಹೇಳಿಕೆ-ಮೋಸದ ಆಪಾದನೆ-ಅಪಾದನೆ ಹೂಡಲು ಸರಿಯಾದ ಕೋರ್ಟು.

ಹಿಂದೂಸ್ಥಾನ್ ಅಷ್ಯೂರೆನ್ಸ್ ಅಂಡ್ ಮ್ಯುಚುಯಲ್ ಬೆನಿಫಿಟ್ ಸೊಸೈಟಿ ಲಿಮಿಟೆಡ್‌ನ ಮುಖ್ಯ ಕಛೇರಿಯು ಪಂಜಾಬಿನಲ್ಲಿರುವ ಗುರ್ಜನ್‌ವಾಲಾದಲ್ಲಿದ್ದಿತು. ಮತ್ತು ಚಿಟಿಗಾಂಗ್‌ನಲ್ಲಿ ಅದರ ಶಾಖೆಯಿದ್ದಿತು. ಚಿಟಿಗಾಂಗ್‌ನ ಬರೋಡ ಸುಂದರಿಯೆಂಬುವಳು ತನ್ನ ವಯಸ್ಸು ೫೦ ಎಂದು ತಿಳಿಸಿ ತನ್ನ ಜೀವವಿಮೆ ಮಾಡಿದಳು. ಎರಡು ವರ್ಷದ ನಂತರ ಆವಳು ಸತ್ತಳು. ಅವಳ ಮಗನು ವಿಮಾಹಕ್ಕನ್ನು ಸಲ್ಲಿಸಬೇಕೆಂದು ಕೇಳಿದನು ವಿಮಾದಾರಳು ತಪ್ಪುವಯಸ್ಸನ್ನು ಕೊಟ್ಟಿದ್ದಳೆಂಬುದನ್ನು ಗ್ರಹಿಸಿ ಕಂಪೆನಿಯು ವಯಸ್ಸಿನ ರುಜುವಾತು ಕೊಟ್ಟಹೊರತು ವಿಮಾ ಹಣವನ್ನು ಕೊಡಲು ನಿರಾಕರಿಸಿತು. ಇಂಡಿಯನ್ ಪಿನಲ್ ಕೋಡಿನ ೪೨೦ ನೇ ಸೆಕ್ಷನ್ ಪ್ರಕಾರ ಕಂಪೆನಿಯ ಅಧಿಕಾರಿಗಳಮೇಲೆ ಮೋಸದ ಆಪಾದನೆ ಹೊರಿಸಿ ಫಿರ್ಯಾದಾಯಿತು. ಮತ್ತು ಕಂಪನಿಯು ಆ ಪಾಲಿಸಿಯ ಬಗ್ಗೆ ಮೋಸ ನಡೆದಿದೆಯೆಂದು ಅವಳ ಮಗನಮೇಲೆ ಗುರ್ಜನವಾಲಾ ಕೋರ್ಟಿನಲ್ಲಿ ಮೊಕದ್ದಮೆ ಹೂಡಿದರು.

### ಕೋರ್ಟಿನ ಅಭಿಮತ

(೧) ಕಂಪೆನಿಯು ವಯಸ್ಸಿನ ರುಜುವಾತನ್ನು ಕೇಳುವುದು ನ್ಯಾಯವಿರುವುದರಿಂದ ಕಂಪೆನಿಯಮೇಲೆ ಹೂಡಿರುವ ಮೊಕದ್ದಮೆಯು ನಿಲ್ಲುವುದಿಲ್ಲ.

(೨) ವಿಮಾದಾರಳ ಮಗನಮೇಲೆ ಹೂಡಿರುವ ಮೊಕದ್ದಮೆಯ ವಿಚಾರಣೆ ನಡೆಸಲು ಚಿಟಗಾಂಗಿನಲ್ಲಿ ಹೆಚ್ಚು ಸೌಕರ್ಯಗಳಿರುವುದರಿಂದ ಅದರ ವಿಚಾರಣೆಯು ಗುಜರನವಾಲಾದಲ್ಲಿ ನಡೆಯದೆ ಅಲ್ಲೇ ನಡೆಯಬೇಕು.

### ಮಹಮದ್ ಸುಲ್ತಾನ್
### vs
### ಕ್ಲೈವ್ ಇನ್‌ಷ್ಯೂರೆನ್ಸ್ ಕಂಪೆನಿ ಲಿಮಿಟೆಡ್.

ವಿಮಾಕರಾರು ದರಖಾಸ್ತಿನ ಅಂಗೀಕಾರ-ಸಮ್ಮತಿ ಪತ್ರ-ಪಾಲಿಸಿಕೊಡುವುದಕ್ಕೆ ಮುಂಚೆ ಕಳ್ಳತನ-ಕಂಪೆನಿಯ ಜವಾಬ್ದಾರಿ-ಕರಾರಿನ ಪೂರ್ಣತೆ.

೧೯೩೮ ನೇ ನವಂಬರ್ ೭ ನೇತಾರೀಖು, ವಾದಿಯು ತನ್ನ ಸಾಮಾನುಗಳನ್ನು ಪ್ರತಿವಾದಿ ಕಂಪೆನಿಯಲ್ಲಿ ಕಳುವಿನ ರಕ್ಷಣಾರ್ಥವಾಗಿ ವಿಮೆಮಾಡಿದನು. ಮತ್ತು ಮೊದಲ ವರ್ಷದ ಪ್ರೀಮಿಯಂ ೯೫ ರೂಗಳನ್ನು ಪೂರ್ಣವಾಗಿ ಕಟ್ಟಿಬಿಟ್ಟನು. ೧೯೩೮ ನೇ ನವಂಬರ್ ೨೨ ನೇತಾರೀಖು ಪ್ರತಿವಾದಿ ಕಂಪೆನಿಯಿಂದ ಸಮ್ಮತಿ ಪತ್ರವೊಂದು ಬಂತು. ಅದರಲ್ಲಿ ಕಳುವಿನ ರಕ್ಷಣಾರ್ಥವಾಗಿ ವಿಮಾದರಖಾಸ್ತನ್ನು ಕೊಟ್ಟು ಪ್ರೀಮಿಯಂ ಬಗ್ಗೆ ೯೫ ರೂಗಳನ್ನು ಕೊಟ್ಟಿರುವುದರಿಂದ ನಿಮ್ಮ ಸಾಮಾನುಗಳ ವಿಮಾಜವಾಬ್ದಾರಿಯನ್ನು ಹೊರುತ್ತೇವೆ. ಈ ಜವಾಬ್ದಾರಿ ಸಾಮಾನ್ಯವಾಗಿ ಎಲ್ಲಪಾಲಿಸಿಗಳಿಗಿರುವ ೩೦ ದಿನದೊಳಗಿನ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ, ಮತ್ತು ಆ ಹೊತ್ತಿಗೆ ಪಾಲಿಸಿಯನ್ನು ಕೊಡಲಾಗುತ್ತದೆ ಎಂದು ಅದರಲ್ಲಿ ತಿಳಿಸಿತ್ತು. ವಾಸ್ತವದಲ್ಲಿ ಪಾಲಿಸಿಯನ್ನು ಕೊಡಲೇ ಇಲ್ಲ. ಜನವರಿ ೧೫ ನೇ ತಾರೀಖು ಕಳುವು ನಡೆಯಿತು. ವಾದಿಯು ಪಾಲಿಸಿಯ ಹಣ ದೊರೆಯಬೇಕೆಂದು ಮೊಕದ್ದಮೆ ಹೂಡಿದನು.

### ಕೋರ್ಟಿನ ಅಭಿಪ್ರಾಯ

ವಿಮಾದರಖಾಸ್ತನ್ನು ಅಂಗೀಕರಿಸಿದ್ದಾರೆ. ಕಳುವಾಗುವುದಕ್ಕೆ ಮುಂಚೆ ಪಾಲಿಸಿ ಪತ್ರ ಕೊಟ್ಟಿರಲಿಲ್ಲವೆನ್ನುವುದು ಹಕ್ಕನ್ನು ನಿರಾಕರಿಸುವುದಕ್ಕೆ ಸರಿಯಾದ ಕಾರಣವಲ್ಲ. ಆದುದರಿಂದ ಕಂಪೆನಿಯು ಹಣವನ್ನು ಕೊಡಲೇಬೇಕು.

### ಗಾರ್ಡಿಯನ್ ಅಷ್ಯೂರೆನ್ಸ್ ಕಂಪೆನಿ ಲಿಮಿಟೆಡ್
### vs ರುಸ್ತುಂಜಿ ಮತ್ತು ಇನ್ನೊಬ್ಬ

ಅಗ್ನಿವಿಮಾ — ಹಕ್ಕುಪಡೆವುದರಲ್ಲಿ ಮೋಸ-ಹಕ್ಕಿನ ರದ್ದು-ಜೋಡಿವಿಮಾ-ವಿಮಾದಾರರ ಉದ್ದೇಶ ಬೇರೆ-ಒಬ್ಬನ ಮೋಸಕೃತ್ಯ-ಮತ್ತೊಬ್ಬನಿಗೂ ಹೊಂದುವುದೇ

೧ ನೇವಾದಿಯು ಒಂದು ಹಿಟ್ಟಿನ ಕಾರಖಾನೆ ಮಾಲಿಕನಾಗಿದ್ದನು. ೨ ನೇವಾದಿಯು ಕಾರಖಾನೆಯ, ಗಂಡಗನ್ನು ಆಧಾರಪಡೆದಿದ್ದನು ಇವರಿಬ್ಬರೂ ಸೇರಿ ವಸ್ತುಗಳ ಅಗ್ನಿವಿಮಾಮಾಡಿದರು. ಕಂಪೆನಿಗೂ ಇವರಿಗು ಇದ್ದ ಕರಾರಿದು. ಅನಾಹಾತವು ಸಂಭವಿಸಿದಕೂಡಲೇ ಕಂಪೆನಿಗೆ ತಿಳುಹಿಸಬೇಕು. ಮತ್ತು ಅದು ಸಂಭವಿಸಿದ ೧೫ ದಿವಸಗಳಲ್ಲಿ ಸಾಮಾನುಗಳ ಅಂದಿನ ಬೆಲೆಯನ್ನು ಗಮನಿಸಿ ಒಟ್ಟಿನಲ್ಲಿ ಆದ ನಷ್ಟವೇನೆಂಬುದನ್ನು ತಿಳಿಸಬೇಕು. ಅಲ್ಲದೆ ಈ ವಿಚಾರದಲ್ಲಿ ಕಂಪೆನಿಯವರು ಕೇಳಿದ ವಿಚಾರಗಳನ್ನು ಪ್ರಮಾಣಪೂರ್ವಕ ಅಥವಾ ಇನ್ನಾವುದೇ ಕಾನೂನುರೀತ್ಯ ಕೊಡಲು ಸಿದ್ಧರಿರಬೇಕು. ವಿಮಾ ಹಕ್ಕನ್ನು ಪಡೆಯುವುದರಲ್ಲಾಗಲೀ ಕೇಳುವುದರಲ್ಲಾಗಲೀ ಮೋಸಕೃತ್ಯವಿದ್ದುದಾದರೆ ಪಾಲಿಸಿ ಪ್ರಕಾರ ಕೊಡಬೇಕಾಗುವ ಯಾವತ್ತೂ ಹಕ್ಕೂ ರದ್ದಾಗಿ ಹೋಗುವುದು.

ಬೆಂಕಿಯ ಅನಾಹುತ ಸಂಭವಿಸಿತು. ೪,೦೦,೯೪೬ ರೂಗಿಂತ ಹೆಚ್ಚುಬೆಲೆಯ ವಸ್ತುಗಳು ನಾಶವಾದುವೆಂದು ವಾದಿಗಳು ತಿಳಿಸಿದರು. ಸುಮಾರು ೪೫,೦೦೦ ರೂಗಳ ಬೆಲೆಯ ವಸ್ತುಗಳು ನಷ್ಟವಾಗಿರಬಹುದೆಂದು ಗ್ರಹಿಸಿ, ವಾದಿಗಳು ಸುಳ್ಳು ಹೇಳಿಕೆಗಳನ್ನು ಕೊಟ್ಟು ಮೋಸಪಡಿಸಲೆತ್ನಿಸಿರುವರೆಂದು ಕಂಪೆನಿಯವರು ಹಕ್ಕನ್ನೇ ಕೊಡುವುದನ್ನು ನಿರಾಕರಿಸಿದರು. ವಿಚಾರಣೆಯಲ್ಲಿ ಮೊದಲನೆಯ ವಾದಿಯ ಸಾಕ್ಷ್ಯದಿಂದ ವಸ್ತುಗಳ ಬೆಲೆಯು ಸುಮಾರು ೪೫,೦೦೦ ರೂಗಳಿಗೆ ಹೆಚ್ಚಿರಲಾರದೆಂದು ವ್ಯಕ್ತವಾಯಿತು. ಕೋರ್ಟಿನವರು ಈರೀತಿ ಅಭಿಪ್ರಾಯಪಟ್ಟರು.

(೧) ಪ್ರತಿವಾದಿಗಳ ಊಹೆಯು ನಿಜವೆಂದು ತೋರುವುದು. ವಾದಿಗಳು ಆದನಷ್ಟವನ್ನು ಉತ್ಪ್ರೇಕ್ಷಿಸಿ ಸುಳ್ಳು ಹೇಳಿಕೆ ಕೊಟ್ಟಿದ್ದಾರೆ. ಆದುದರಿಂದ ಮೊಕದ್ದಮೆ ರದ್ದುಮಾಡಿದೆ. ವಾದಿಗಳು ಪ್ರತಿವಾದಿಗಳಿಗೆ ಆದ ಖರ್ಚು ಕಟ್ಟಿಕೊಡಬೇಕು.

(೨) ವಿಮೆಯು ಜೋಡಿವಿಮಾ ಪದ್ಧತಿಯದಾದ್ದರಿಂದ, ವಿಮಾದಾರರ ವಿಮಾಉದ್ದೇಶವು ಬೇರೆ ಬೇರೆ ಇದ್ದಾಗ್ಯೂ, ಒಬ್ಬರವರ್ತನೆಯ ಪರಿಣಾಮವು ಮತ್ತೊಬ್ಬರಿಗೂ ಅನ್ವಯಿಸುತ್ತದೆ.




**ಎಲ್ಲರಿಗೂ ಶಾಂತಿಬೇಕು ಆದರೂ ಎಲ್ಲರಿಗೂ ಶಸ್ತ್ರ ಬೇಕು**

ಚಿಕಾಗೊ "ಯುನಿಟಿ" ಪತ್ರಿಕೆಯಲ್ಲಿ ಜೋಸಫ್ ಸಟ್‌ಹಾಲ್‌ರವರು "ಮಾತಿ ನಾಡಂಬರವಿಲ್ಲದ ಕಾಲ್ಪನಿಕ ನೌಕಾ ಸಮ್ಮೇಳನ" ಎಂಬ ವ್ಯಂಗ್ಯ ಸನ್ನಿವೇಶವನ್ನು ಚಿತ್ರಿಸಿದ್ದಾರೆ.

ಇಂಗ್ಲೆಂಡ್:—ಐದು ಪ್ರಬಲ ರಾಷ್ಟ್ರಗಳ ಪ್ರತಿನಿಧಿಗಳಾದ, ನಾವು, ಶಾಂತಿಯನ್ನೂ ಶಸ್ತ್ರ ಸಂನ್ಯಾಸವನ್ನು ಸಾಧಿಸಲೋಸುಗ ಇಲ್ಲಿ ಸೇರಿದ್ದೇವೆ. ನಮ್ಮೀ ಶ್ರಮಕ್ಕೆ ಗೆಲುವು ದೊರೆಯುವುದು ನಿಶ್ಚಿತವು. ತನ್ಮಧ್ಯೆ, ಶಾಂತಿಪಾಲನೆಗಾಗಿ ಗ್ರೇಟ್‌ಬ್ರಿಟನ್ನು ತನ್ನ ಶಸ್ತ್ರಾಸ್ತ್ರಗಳನ್ನು ಬಹುವಾಗಿ ಹೆಚ್ಚಿಸಬೇಕಾದುದು ಅತ್ಯವಶ್ಯಕ.

ಫ್ರಾನ್ಸ್:—ನಾವು ಗ್ರೇಟ್‌ಬ್ರಿಟನ್ನಿನ ಅಭಿಪ್ರಾಯವನ್ನು ಅನುಮೋದಿಸುತ್ತೇವೆ. ಸದಾ ಶಸ್ತ್ರ ಸಂನ್ಯಾಸಕ್ಕಾಗಿಯೇ ಪ್ರಯತ್ನಿಸುತ್ತಿದ್ದೇವೆ. ಆದರೆ ನಮ್ಮ ನೆರೆ ನಾಡಿನಂತೆ ನಮ್ಮ ಶಸ್ತ್ರಾಸ್ತ್ರಗಳ ಪ್ರಮಾಣವು ಬಹು ಕಡಮೆಯಿದೆ. ಶಾಂತಿಪಾಲನೆಗೆ ಫ್ರೆಂಚ್ ಭೂಸೇನೆ ಮತ್ತು ನೌಕಾಸೇನೆಗಳನ್ನು ಹೆಚ್ಚಿಸುವುದೊಂದೇ ಮಾರ್ಗ.

ಇಟಲಿ:—ಫ್ರಾನ್ಸ್ ಬ್ರಿಟನ್‌ಗಳ ಆಶಯವು ನಮ್ಮದೂ ಅಹುದು. ಅದಕ್ಕಾಗಿ ಶ್ರಮಿಸುತ್ತಿದ್ದೇವೆ. ಆದರೂ ನಮ್ಮ ಸೇನೆಯನ್ನು ಬಲಪಡಿಸಲೇ ಬೇಕಾಗಿದೆ. ಸ್ವರಕ್ಷಣೆಗಿರುವ ಮಾರ್ಗವದೊಂದೇ.

ಜಪಾನ್:—ಶಾಂತಿಯನ್ನೂ ಶಸ್ತ್ರಸಂನ್ಯಾಸವನ್ನು ಸಾಧಿಸಬೇಕೆಂಬ ನಮ್ಮ ಅಭಿಲಾಷೆಯು ಯಾರಿಗೇನು ಕಡಮೆಯಿಲ್ಲ. ಆದರೆ ಫೆಸಿಫಿಕ್ ಸಾಗರದಲ್ಲಿ ನಮಗಿರುವ ವಿಶೇಷಸ್ಥಾನವು ಶಾಂತಿಪಾಲನೆಗಾಗಿ ನಮ್ಮ ನೌಕಾಸೇನೆಯನ್ನು ಹೆಚ್ಚಿಸುವಂತೆ ಮಾಡಿದೆ.

ಅಮೆರಿಕಾ:—ಇತರ ರಾಷ್ಟ್ರಗಳಂತೆಯೇ ನಮ್ಮ ರಕ್ಷಣಾಬಲವೂ ಬಹಳ ಕಡಮೆಯಿದೆ. ಶಾಂತಿಯೂ ಶಸ್ತ್ರ ಸಂನ್ಯಾಸವೂ ನಮ್ಮ ಮುಖ್ಯ ಉದ್ದೇಶವಾಗಿದ್ದರೂ, ನಮ್ಮ ಇಚ್ಛೆಗೆ ವಿರೋಧವಾಗಿ ಸಮರ ನೌಕೆಗಳನ್ನೂ ಫಿರಂಗಿಗಳನ್ನೂ ಹೆಚ್ಚಿಸಬೇಕಾಗಿದೆ.

**ಮುಕ್ತಾಯ**

ಅಧ್ಯಕ್ಷ:—ಮಹನೀಯರೇ, ನಾವೀಗ ನಮ್ಮ ನಿರಂತರ ಶ್ರಮದ ಮುಕ್ತಾಯಕ್ಕೆ ಬಂದಿದ್ದೇವೆ. ನಾವೆಲ್ಲರೂ ಕೂಡಿ ಕುಡಿದು ತಿಂದು ತೇಗಿದೆವು, ಎಲ್ಲ ವಿಷಯಗಳನ್ನೂ ಆಮೂಲಾಗ್ರವಾಗಿ ಪರಿಶೋಧಿಸಿದೆವು. ಸಮಸ್ತವೂ ಒಳ್ಳೆಯ ರೀತಿಯಲ್ಲಿಯೇ ನಡೆದಿದೆ. ನಾವು ನಿರೀಕ್ಷಿಸದಿದ್ದಷ್ಟು ಜಯವು ನಮಗೆ ದೊರೆಕಿದೆ. ಏಕೆಂದರೆ ಎರಡು ವಿಚಾರಗಳಲ್ಲಿ ನಮಗೆ ಸರ್ವಾನುಮತವಿದೆ.

(೧) ನಮ್ಮಲ್ಲಿ ಯಾರಿಗೂ ಇನ್ನೊಬ್ಬರ ಮೇಲೆ ಬೀಳಬೇಕೆಂಬ ಅಭಿಲಾಷೆಯಿಲ್ಲ.

(೨) ನಾವೆಲ್ಲರೂ ನಮ್ಮ ನಮ್ಮ ರಕ್ಷಣಾ ಬಲವನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಏಕೆಂದರೆ ನಾವು

ಉಪಯೋಗವನ್ನು ಬಲ್ಲೆವು. ಈ ರೀತಿ ನಾವು ಶಸ್ತ್ರಾಸ್ತ್ರಗಳ ಸ್ಪರ್ಧೆಯನ್ನು ತಡೆಗಟ್ಟಲೆತ್ನಿಸೋಣ!

ಸಭಾ ಮುಕ್ತಾಯಕ್ಕೆ ಮುಂಚೆ ನಾವೆಲ್ಲರೂ ಮತ್ತೊಂದು ಶ್ರೇಯಃ ಪ್ರಾರ್ಥನೆಯನ್ನು ಮಾಡುವ. (ಎಲ್ಲರೂ ಎದ್ದು ನಿಲ್ಲುವರು) "ಶಸ್ತ್ರಾಗಾರಗಳಿಗೆ ಜಯವಾಗಲಿ."

---

## ಅಟ್ಟಾವ ಒಪ್ಪಂದ

ಮೂರೂವರೆ ವರ್ಷಗಳ ಹಿಂದೆ ಅಟ್ಟಾವಾ ಒಪ್ಪಂದವಾಯಿತು. 1932ರ ಆಗಸ್ಟ್ ತಿಂಗಳಿನಲ್ಲಿ ಇಂಡಿಯಾ ಸರಕಾರದವರು ಅಟ್ಟಾವಾಕ್ಕೆ ಪ್ರತಿನಿಧಿಗಳನ್ನು ಕಳುಹಿಸಿದರು. ದುರದೃಷ್ಟದಿಂದ ಭಾರತದ ವ್ಯಾಪಾರೀ ಸಮಾಜದ ಬೆಂಬಲವು ಇದಕ್ಕೆ ಇರಲಿಲ್ಲ. ಅದರಿಂದಾದ ಪರಿಣಾಮವೇನೆಂಬುದನ್ನು ಸುಲಭದಲ್ಲಿ ಊಹಿಸಬಹುದಾಗಿದೆ. ಒಪ್ಪಂದವಾಗಿ, ಅದರ ಷರತ್ತುಗಳು ಪ್ರಕಟವಾದ ಮರುದಿನವೇ ಭಾರತದ ಮೂಲೆ ಮೂಲೆಗಳಲ್ಲಿಯೂ ಅದಕ್ಕೆ ತಿರಸ್ಕಾರದ ನುಡಿಗಳ ಸುರಿಮಳೆಯಾಯಿತು. ಭಾರತದ ಕೊರಳಿಗೆ ಬಿಗಿದ ನೇಣುಗಲ್ಲೆಂದು ಅದಕ್ಕೆ ನಾಮಕರಣವಾಯಿತು. ಮಾತಿನ ಲಹರಿಯಲ್ಲಿ ಎಷ್ಟೇ ಮೃದುತ್ವಕಂಡರೂ ಭಾರತದ ವರ್ತಕರೂ, ಕೈಗಾರಿಕೋದ್ಯಮಿಗಳೂ ಅದನ್ನು ತಳ್ಳಿಬಿಟ್ಟುದು ವಿದಿತವಾಯಿತು. ಅದರ ಪುನರುಜ್ಜೀವನದ ಕಾಲ ಬರಲು ಹಲವು ಸ್ವತಂತ್ರ ವ್ಯಕ್ತಿಗಳನ್ನುಳಿದು ಅದನ್ನು ಪುರಸ್ಕರಿಸುವವರೇ ಇಲ್ಲವಾಯಿತು.

ವಿಚಾರ ವಿವೇಚಕರಿಗೆ ಅಟ್ಟಾವ ಒಪ್ಪಂದವು ಮುರಿದುರುಳಿದ ಕಥೆಯು ಆಹ್ಲಾದಕರವಾದುದೆನಿಸಬಹುದು. ಮಾರ್ಚಿ 30ನೇ ತಾರೀಖು ಚರ್ಚೆಯು ಆರಂಭವಾಯಿತು. ಬಹುಕಾಲದಿಂದ ಉತ್ಸಾಹದಿಂದ ನಿರೀಕ್ಷಿಸಲ್ಪಟ್ಟಿದ್ದ ಈ ಚರ್ಚೆಗೆ ಪ್ರತ್ಯೇಕ ಮೂರು ದಿನಗಳನ್ನ ಕಾದಿಡಲಾಯಿತು.

ಈ ಪ್ರಶ್ನೆಯ ವಿಷಯದಲ್ಲಿ ಸಭೆಯ ತೀರ್ಮಾನವನ್ನು ಸರಕಾರದವರು ತಪ್ಪದೆ ಪಾಲಿಸುವರೆಂಬುದು ಪ್ರಕಟವಾಗಿದ್ದಿತು. ಸರಕಾರಕ್ಕೆ ತನ್ನ ಕೆಲಸವು ಅಗಾಧವಾದುದೆನಿಸಿತು. ಸರಕಾರದ ಪರವಾಗಿ ವಾದಿಸಲು ಡಾ. ಮಾಥೆ (Dr. Mathai) ಮತ್ತು ಸರ್. ಬ್ರೈಸ್ ಬರ್ಟ್ (Sir Bryce Burt) ಇವರಿಬ್ಬರ ಪ್ರವೀಣರ ಸಹಾಯ ಬಗೆದು ಅವರಿಗೆ ಅಸೆಂಬ್ಲಿಯಲ್ಲಿ ಸ್ಥಾನ ಕೊಡಲಾಯಿತು. ಇದರ ವಿಚಾರವನ್ನು ಪರಿಶೀಲಿಸುವುದಕ್ಕಾಗಿ ಸಮಿತಿಯೊಂದನ್ನು ನೇಮಿಸಬೇಕೆಂಬ ಗೊತ್ತುವಳಿಯನ್ನು ಸಭೆಯಮುಂದೆ ತರುವ ಕೆಲಸವು ಸರ್ ಜಾಫರುಲ್ಲಾಖಾನರಿಗೆ ಬಿತ್ತು. ಉದ್ದೇಶವು ಫಲಿಸಲಿಲ್ಲ. ಸರಕಾರವು ಸರಿಯಾಗಿ ವಾದಿಸದಿದ್ದುದರಿಂದ ಸೋಲಾಯಿತೆಂದಲ್ಲ. ಆದರೆ ಅವರ ಉದ್ದೇಶವೇ ಹುರುಳಿಲ್ಲದ್ದಾಗಿತ್ತು. ಆರು ತಿಂಗಳೊಳಗಾಗಿ ಒಪ್ಪಂದವನ್ನು ರದ್ದು ಪಡಿಸಲು ಸಿದ್ಧರಾಗಿರಬೇಕೆಂಬ ಭಾರತದ ಅಭಿಮತವನ್ನು ಕೂಡಲೇ ಯುನೈಟೆಡ್ ಕಿಂಗ್‌ಡಂಗೆ ತಿಳಿಸಬೇಕೆಂಬ ಗೊತ್ತುವಳಿಯನ್ನು ಶ್ರೀಯುತ ಜಿನ್ನಾರವರು ಸಭೆಯ ಮುಂದೆ ತಂದರು. 5 ಹೆಚ್ಚು ಓಟುಗಳಿಂದ ಇದು ಪಾಸಾಯಿತು. ನೇಮಕ ಸದಸ್ಯರುಗಳಾದ ಶ್ರೀ ಎನ್. ಎಮ್. ಜೋಷಿ ಮತ್ತು ಮೈಸೂರಿನ ಕಾಫಿ ಪ್ಲಾಂಟರರಾದ ಡಾ. ಡಿಸೌಜಾ ಇವರಿಬ್ಬರ ಓಟುಗಳಿಂದ ಈ ಜಯವು ಸುಲಭವಾಯಿತೆಂದು ಹೇಳಬಹುದು. ಸಾಮ್ರಾಜ್ಯದ ಹೊರಗಣ ವ್ಯಾಪಾರವು ಮುರಿದು ಬಿದ್ದುದು ಒಂದು ಕಾರಣವಾಯಿತು. ಅದಕ್ಕೂ ಪ್ರಬಲ ಕಾರಣವೆಂದರೆ ಈ ಒಪ್ಪಂದ ಮಾಡಿಕೊಂಡ ರೀತಿಯಲ್ಲಿ ಭಾರತದ ವ್ಯಾಪಾರೀ ಸಮಾಜಕ್ಕೆ ತೋರಿಸಿದ ಅನಾದರದಿಂದ ಅದಕ್ಕೆ ಮನನೊಂದಿತ್ತು. ಪ್ರತಿ ಕ್ರಿಯೆ! ಎನಿತು ಮಧುರಳೌ ನೀನು. ಇದೊಂದು ಮಹತ್ವದ ಸಾಧನೆಯೇ ಸರಿ. ಅಸುತೊರೆವೀ ಅಸೆಂಬ್ಲಿಯು ಕಳೆದ ಹಲವು ವರ್ಷಗಳಲ್ಲಿ ಪಡೆದ ವಿಜಯಗಳಲ್ಲಿ ಅದ್ವಿತೀಯವಾದುದಿದು.

ಒಪ್ಪಂದವಂತೂ ಮುರಿದು ಬಿತ್ತು. ಮುಂದೇನು? ಅಸೆಂಬ್ಲಿಯ ಅಭಿಮತವನ್ನು ತಿಳಿದಮೇಲೆ ಬೇರೆ ಒಪ್ಪಂದ ಮಾಡಿಕೊಳ್ಳಲು ಬ್ರಿಟನ್ನು ಇಷ್ಟಪಡಲಾರದೆಂಬುದು ಚರ್ಚೆಯಲ್ಲಿ ಹೊರ ಬಿತ್ತು. ಇದಕ್ಕೆ ಅರ್ಥವಿಲ್ಲ. ಬ್ರಿಟಿಷರು ಚತುರರಿದ್ದಾರೆ. ಇಂಡಿಯಕ್ಕೆ

ಇಂಗ್ಲೆಂಡಿಗೂ ಇರುವ ಸಂಬಂಧವು ಆಟ್ಟಾವಾ ಮಾತ್ರ ವಲ್ಲ. ಇವೆರಡನ್ನು ಒಟ್ಟಗಿರಿಸಲು ಇನ್ನೂ ಬಲವಾದ ಸಂಬಂಧಗಳಿವೆ. ಹೊರಗಣ ವ್ಯಾಪಾರಕ್ಕೆ ಅಡ್ಡಿಬಾರದ ಒಪ್ಪಂದವು ಇಂಡಿಯಕ್ಕೆಬೇಕು. ಇಂಗ್ಲೆಂಡನ್ನು ಸೇರಿಸಿಕೊಂಡು ಎಲ್ಲರೊಡನೆ ಕರಾರು ಮಾಡಿಕೊಳ್ಳುವುದು ಸಾಧ್ಯವಿದೆ. ಮನವಿದ್ದರೆ ಮಾರ್ಗವಿದೆ. ಪರಸ್ಪರ ಸಮಾನ ಸೌಲಭ್ಯಗಳಿಂದ ಎರಡು ರಾಷ್ಟ್ರಗಳ ಹಿತವೂ ಇರುವದು. ಹೆಚ್ಚಾಗುಳಿದ ಪದಾರ್ಥಗಳ ಸಮರ್ಪಕ ವಿನಿಮಯಕ್ಕಾಗಿ ಸೌಹಾರ್ದದಿಂದ ಪರಸ್ಪರ ಮಾಡಿಕೊಂಡ ಕರಾರುಗಳೇ ಅವು. ವ್ಯಾಪಾರ ವ್ಯವಹಾರದ ಸಮಾನಸ್ಕಂಧತೆಯು ರಾಜಕೀಯ ಸಮಾನ ಸ್ಕಂಧತೆಗೆ ದಾರಿಯಾಗುವುದು. ಆರ್ಥಿಕ ವ್ಯವಹಾರವು ರಾಜಕೀಯ ವ್ಯವಹಾರದ ಬೆನ್ನು ಮೂಳೆ, ಎಷ್ಟು ಬೇಗ ಈ ಸತ್ಯವನ್ನು ಮನಗಾಣುವರೋ ಅಷ್ಟು ಬೇಗ ಇಂಡಿಯಾ ಮತ್ತು ಇಂಗ್ಲೆಂಡಿನ ಹಿತ ಸಾಧನೆಯಾಗುವುದು. "ಮೈಸೂರು ಎಕನಾಮಿಕ್ ಜರ್ನಲ್"

## ಇಂಡಿಯಾ ವಿಮಾ ಕಾನೂನು

ಆರ್ಯಸ್ಥಾನ ಇನ್ಷ್ಯೂರೆನ್ಸ್ ಕಂಪೆನಿಯ ಶ್ರೀ ಎಸ್. ಸಿ. ರೇ, (Mr. S C. Ray), ಯವರು ಇಂಡಿಯ ಇನ್ಷ್ಯೂರೆನ್ಸ್ ಇನ್‌ಸ್ಟಿಟ್ಯೂಟಿನಲ್ಲಿ ಇಂಡಿಯದ ವಿಮಾ ಕಾನೂನಿನ ತಿದ್ದುಪಡಿಯ ವಿಷಯವನ್ನು ಕುರಿತು ಮಾತನಾಡುತ್ತ ಈ ರೀತಿ ಹೇಳಿದರು.

ವಿಮಾಕಾನೂನಿನ ತಿದ್ದುಪಡಿಯ ಅವಶ್ಯಕತೆಯಿಂದ ಪ್ರಾರಂಭಿಸಿ ಅದು ದ್ವಿಮುಖವಾದುದು, ಒಂದು ಪಾಲಿಸಿದಾರರ ಹಿತ ಸಾಧಿಸಬೇಕೆಂಬುದು ; ಮತ್ತೊಂದು ದೇಶಿಯ ಕಂಪೆನಿಗಳಿಗೆ ಪರದೇಶದ ಕಂಪೆನಿಗಳ ಅನ್ಯಾಯ ಸ್ಪರ್ಧೆಯನ್ನು ತಪ್ಪಿಸುವುದು ಎಂದು ಹೇಳಿದರು. ಈ ಎರಡು ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಮುಂದುವರಿಯ ಬೇಕೆಂದರು. ಪ್ರಥಮ ಠೇವಣಾತಿಯನ್ನು 3 ಲಕ್ಷ ರೂಪಾಯಿಗಳಿಗೆ ಹೆಚ್ಚಿಸಬೇಕೆಂದು ಅನಪೇಕ್ಷಿತವಾದುದೆಂದರು. ಸಣ್ಣ ಕಂಪೆನಿಗಳ ಅವಶ್ಯಕತೆ ನಮಗಿದೆ. ಆದರೆ ಅವು ನ್ಯಾಯ ರೀತಿ ನಡೆಯುವಂತೆ ನೋಡಿಕೊಳ್ಳಬೇಕಾದದು ನಮ್ಮ ಕೆಲಸ. ಬುಡ ಭದ್ರವಿಲ್ಲದ ಕಂಪೆನಿಗಳುದಯಿಸದಂತೆ ಪ್ರಥಮದಲ್ಲಿ 25,000 ರೂಗಳ ಠೇವಣಾತಿಯನ್ನು ಯಾವುದಾದರೊಂದು ಸೂಚಿತ ಬ್ಯಾಂಕಿನಲ್ಲಿ ಇಡಬೇಕೆಂಬುದು ಉಚಿತವಾಗಿದೆಯೆಂದರು.

ಸರಕಾರದ ಮೇಲ್ವಿಚಾರಣೆಯನ್ನು ಕುರಿತು ಹೇಳುತ್ತಾ ಕೆನೆಡಾ ಕಾನೂನಿನ ನಿದರ್ಶನಕೊಟ್ಟು ಅಂತಹ ಕಠಿಣ ನಿಭಂದನೆಯು ಇಂಡಿಯಕ್ಕೆ ಸರಿಹೊಂದಲಾರವೆಂದರು. ಬ್ರಿಟನ್ನಿನ ಕಾನೂನನ್ನು ಚರ್ಚಿಸುತ್ತಾ, ಇಂಡಿಯದ ಕಾನೂನಿನಲ್ಲಿಯೂ ಇಂಗ್ಲೆಂಡಿನಲ್ಲಿ ಕ್ಲಾರ್ಸ ಕಮಿಟಿಯವರು ಕೊಟ್ಟಿರುವ ಸಲಹೆಯನ್ನು ಅನುಸರಿಸಬಹುದೆಂದು ಸೂಚಿಸಿದರು. ಲೆಕ್ಕ ಸಂಖ್ಯೆಕೊಡುವುದರಲ್ಲಿ ಒಂದು ಸಾರ್ವತ್ರಿಕವಿಧಾನವನ್ನು ಸೂಚಿಸಿದರು. ಬಂಡವಾಳ ವಿನಿಮಯ ವಿಷಯವನ್ನು ಚರ್ಚಿಸುತ್ತಾ ಇದಕ್ಕೊಂದು ಸಾರ್ವತ್ರಿಕ ನಿಯಮ ವಿಧಿಸುವುದು ಯುಕ್ತವಾದುದಲ್ಲವೆಂದರು. ಆದಾಗ್ಯೂ ವಿಮಾನಿಧಿಯು ಶೇಕಡ ೩ ರಷ್ಟನ್ನು ಟ್ರಸ್ಟ ಸೆಕ್ಯೂರಿಟಿಗಳಲ್ಲಿರುವಂತೆಯೂ ಮತ್ತು ಬಂಡವಾಳ ವಿನಿಯಮದ ವಿವರಣೆಯನ್ನು ಸರಕಾರದ ಆಕ್ಚ್ಯುರಿಯರಿಗಳಿಗೆ ಕಳುಹಿಸುವಂತೆಯೂ ಮಾಡಬಹುದೆಂದರು.






## ವಿದೇಶ

**ಫಿಲಿಪ್ಪೈನ್ ದ್ವೀಪಗಳು :—**

ವಿದೇಶದ ವಿಮಾ ಕಂಪೆನಿಗಳಮೇಲೆ ಇರುವ ಸರ್ಕಾರದ ಅಧಿಕಾರವನ್ನು ಹೆಚ್ಚುಗೊಳಿಸಬೇಕೆಂಬ ದೃಷ್ಟಿಯಿಂದ ವಿಮಾ ಕಾನೂನಿನಲ್ಲಿ ತಿದ್ದುಪಡಿಗಳನ್ನು ಸೂಚಿಸುವ ಮಸೂದೆಯು ನ್ಯಾಯವಿಧಾಯಕ ಸಭೆಯ ಮುಂದೆ ಬಂದಿರುತ್ತದೆ. ಸೂಚಿಸಲ್ಪಟ್ಟಿರುವ ಸಲಹೆಗಳಲ್ಲಿ ಇದೂ ಒಂದು. ಪರದೇಶದ ಕಂಪೆನಿಗಳ ಪ್ರಧಾನ ಕಚೇರಿಗಳ ಮತ್ತು ಸ್ಥಳೀಯ ಶಾಖೆಗಳ ಭದ್ರತೆಯ ತನಿಖೆ ನಡೆಯಿಸಲಾಗುವ ಖರ್ಚನ್ನು ಆ ಕಂಪೆನಿಗಳೇ ಹೊರಬೇಕೆಂಬುದು. ಅವರು ಉದ್ಯಮಕ್ಕೆ ತಕ್ಕ ಡಿಪಾಜಿಟ್ಟನ್ನು ಇಡಬೇಕೆಂಬುದು ಮತ್ತೊಂದು ಸಲಹೆ.

**ಕೆನಡಾ :—**

### ಕೆನಡಾದಲ್ಲಿ ಜೀವವಿಮೆ.

ಕೆನಡಾದ ಕಂಪೆನಿಗಳಲ್ಲಿ ಇಂದು ಪ್ರಚಾರದಲ್ಲಿರುವ ಉದ್ಯಮದ ಮೊತ್ತವು 7,000,000,000 ಡಾಲರುಗಳಾಗುವುದು.

ಇವುಗಳಲ್ಲಿ ಶೇಕಡ 60 ಭಾಗವು ಕೆನಡಾ ನಿವಾಸಿಗಳದು. ಉಳಿದ ಶೇಕಡ 40ರಷ್ಟು ಭಾಗವು ಹೊರಗಣ ದೇಶಗಳವರದು.

ಕೆನಡಾದಲ್ಲಿ 1847 ರಲ್ಲಿ ಮೊಟ್ಟಮೊದಲಿಗೆ ಕೆನಡಿಯನ್ ಅಷ್ಯೂರೆನ್ಸ್ ಕಂಪೆನಿ ಯೆಂಬ ಸಂಸ್ಥೆ ಸ್ಥಾಪಿತವಾಯಿತು. 1871ರಲ್ಲಿ ಸನ್‌ಲೈಫ್ ಮತ್ತು ಕಾನ್‌ಫೆಡರೇಷನ್ ಲೈಫ್‌ಕಂಪೆನಿಗಳು ಉದಯಿಸಿದವು. ಈಗ 31 ಕೆನಡಾ ಕಂಪೆನಿಗಳಿವೆ. ಅದರಲ್ಲಿ 14 ಕಂಪೆನಿಗಳು ಕೆನಡಾದಿಂದ ಆಚೆಗೂ ತಮ್ಮ ಉದ್ಯಮವನ್ನು ಬೆಳೆಸಿವೆ.

**ಯುನೈಟೆಡ್ ಕಿಂಗ್‌ಡಂ :—**

### ವಿಮಾ ಕಂಪೆನಿಗಳ ಆರ್ಥಿಕ ಭದ್ರತೆ.

1936ನೇ ಮಾರ್ಚಿ 19ನೇ ತಾರೀಖು ವಾಣಿಜ್ಯ ಸಮಿತಿಯ ಅಧ್ಯಕ್ಷರಾದ ಶ್ರೀ ವಾಲ್ಟರ್ ರನ್ಸಿಮ್ಯಾನರು ಆಕ್ಚ್ಯುಯರಿಗಳ ಭವನದಲ್ಲಿ ನಡೆದ ಸಂತೋಷ ಕೂಟವೊಂದರಲ್ಲಿ ಗ್ರೇಟ್ ಬ್ರಿಟನ್ನಿನಲ್ಲಿರುವ ವಿಮಾ ಕಂಪೆನಿಗಳ ಆರ್ಥಿಕ ಭದ್ರತೆ ಬಗ್ಗೆ ಈ ಅಂಶಗಳನ್ನು ತಿಳಿಸಿದರು.

ಒಟ್ಟು ನಿಧಿ 1,280,000,000 ಪೌಂಡು ಮೀರಿದೆ.

ಒಟ್ಟು ರಿಜರ್ವ್ 143,000,000 ಪೌಂಡು

ಒಟ್ಟು ಆಸ್ತಿ 1,500,000,000 ಪೌಂಡು

1926ರಲ್ಲಿ 65,000,000, ಪೌಂಡುಗಳಿದ್ದ ಈ ಕಂಪೆನಿಗಳ ಪ್ರೀಮಿಯಂ ಆದಾಯವು 1934ರಲ್ಲಿ 92,000,000 ಪೌಂಡುಗಳಿಗೆ ಹೆಚ್ಚಿದೆ.

### ಅಗ್ನಿ ವಿಮಾ ಕಾನೂನು

ಕಳೆದ ಮಾರ್ಚಿ 17ನೇ ತಾರೀಖು ಶ್ರೀ ಡಿಂಗಲ್ ಪುಟ್ ಎಂ. ಪಿ. ರವರು ಕಾಮನ್ಸ್ ಸಭೆಯ ಮುಂದೆ ಅಗ್ನಿ ವಿಮಾ ವಿಷಯಕ ಬಿಲ್ಲು ಒಂದನ್ನು ತಂದರು.

ಈ ಮಸೂದೆಯಲ್ಲಿ 37 ಷರತ್ತುಗಳಿದ್ದು ಆಗ ಪ್ರಚುರದಲ್ಲಿರುವ ಮಸೂದೆಯ ಮುಖ್ಯ ಅಂಶಗಳನ್ನೆಲ್ಲ ಒಟ್ಟುಗೂಡಿಸುತ್ತದೆ. ಇದರಲ್ಲಿ ಹೊಸ ತಿದ್ದುಪಡಿ ಯಾವುದೂ ಇಲ್ಲ. ಈ ಬಿಲ್ಲು ನೌಕಾ ವಿಮಾಆಕ್ಟಿನ ಮಾದರಿಯನ್ನು ಅನುಸರಿಸಿದುದಾಗಿರುತ್ತದೆ. ಈ ಬಿಲ್ಲು ಆಕ್ಟ್ ಆಗಿ ಅಂಗೀಕೃತವಾಗುವುದಾದರೆ. 1937ನೇ ಜನವರಿ 1ನೇ ತಾರೀಖಿನಿಂದ ಪ್ರಚುರಕ್ಕೆ ಬರುವುದು.

### ವಿಮಾ ಕಂಪೆನಿಗಳ ಮೇಲಣ ತೆರಿಗೆಯ ಆದಾಯ,

1934ರಲ್ಲಿ ವಿಮಾ ಕಂಪೆನಿಗಳಿಂದ ವಸೂಲು ಮಾಡಿದ ತೆರಿಗೆಯು ಒಟ್ಟು 81,381,674 ಡಾಲರುಗಳಾಗುತ್ತದೆ. ಇದರಲ್ಲಿ 4,381,687 ಡಾಲರುಗನ್ನು ಅಂದರೆ ಶೇಕಡ 5·93 ಭಾಗವನ್ನು ಸರಕಾರದ ವಿಮಾಶಾಖೆಯ ಆಡಳಿತ ಖರ್ಚಿಗಾಗಿ ವಿನಿಯೋಗಿಸಿರುವರು. ಉಳಿದ ಶೇಕಡ 94·61 ಭಾಗವನ್ನು ಸರಕಾರದ ಇತರಬಾಬುಗಳಿಗೆ ವಿನಿಯೋಗಿಸಿರುವರು.

## ಸ್ವದೇಶ

### ಪ್ರಾವಿಡೆಂಟ್ ಇನ್ಷ್ಯೂರೆನ್ಸ್ ಕಂಪೆನಿಗಳ ಸಂಘ

ಪ್ರಾವಿಡೆಂಟ್ ಇನ್ಷ್ಯೂರೆನ್ಸ್ ಕಂಪೆನಿಗಳ ಸಂಘದ ವಾರ್ಷಿಕ ಸಭೆಯು 1936 ಮಾರ್ಚಿ 28ನೇ ತಾರೀಖು ಕಲ್ಕತ್ತಾ, 10, ಕ್ಲೈವ್ ರೋಡಿನಲ್ಲಿ ಸೇರಿತು. ಸಂಘದ ಸದಸ್ಯರುಗಳೆಲ್ಲರೂ ಹಾಜರಿದ್ದರು 1936ನೇ ಸಾಲಿಗೆ ಈ ಮಹನೀಯರುಗಳು ಅಧಿಕಾರವರ್ಗಕ್ಕೆ ಆರಿಸಲ್ಪಟ್ಟರು.

ಅಧ್ಯಕ್ಷರು :— ಶ್ರೀ ಐ. ಬಿ. ಸೆನ್,
(Mr. I. B. Sen).

ಉಪಾಧ್ಯಕ್ಷರು :— ಶ್ರೀ ಎ. ಟಿ. ಬಾನರ್ಜಿ,
(Mr. A. T. Banerjee).

ಕಾರ್ಯದರ್ಶಿ :— ಶ್ರೀ ಜೆ. ಸಿ. ಗಂಗುಳಿ,
(Mr. J. C. Ganguli.)

ಉಪಕಾರ್ಯದರ್ಶಿ :— ಶ್ರೀ ಎಸ್. ಕೆ. ಕಾರ್,
(Mr. S. K. Karr).

ಸಂಘದ ಕಾರ್ಯಾಲಯವನ್ನು 2, ರಾಯಲ್ ಎಕ್ಸ್ಚೇಂಜ್ ಪ್ಲೇಸಿನಿಂದ 137, ಕ್ಯಾನಿಂಗ್ ಸ್ಟ್ರೀಟ್, ಕಲ್ಕತ್ತಾಕ್ಕೆ ಬದಲಾಯಿಸಿರುವರು.

### "ನಾರ್ದರ್ನ ಇಂಡಿಯಾ" ಸಬ್ ಆಫೀಸು

ನಾರ್ದರ್ನ ಇಂಡಿಯಾ ಇನ್ಷೂರೆನ್ಸ್ ಕಂಪೆನಿ (Northern India Insurance Co., Ltd.) ಲಿಮಿಟೆಡ್‌ನ ಉಪಶಾಖೆಯೊಂದನ್ನು ತಿರುವಾಂಕೂರಿನಲ್ಲಿ 1936ನೇ ಮಾರ್ಚಿ 5ನೇ ತಾರೀಖು ತೆರೆದರು. ಮದ್ರಾಸಿನ ಶಾಖೆಯ ಸೆಕ್ರೆಟರಿಗಳಾದ ಶ್ರೀ ಟಿ. ಹೆಚ್. ರಾಘವೇಂದ್ರ ರಾವ್, (Mr. T. H. Raghavendra Rao), ರವರು ಈ ಆರಂಭ ಮಹೋತ್ಸವವನ್ನೇರ್ಪಡಿಸಿದ್ದರು. ಆರ್. ಪದ್ಮನಾಭರಾವ್, ಬಿ.ಎ. (Mr. R. Padmanabha Rao, B.A.,) ಯವರನ್ನು ಛೀಫ್ ಏಜಂಟರಾಗಿ ನೇಮಿಸಿರುವರು.

### ಮೈಸೂರು ಸರಕಾರದ ಕೈಬಿಟ್ಟ ಹಣ

ಮೈಸೂರು ಸರಕಾರವು ಇಂಡಿಯಾ ಸರಕಾರಕ್ಕೆ ತೆತ್ತಿರದ ಹಣ 1799 ರಿಂದ 1934ರ ವರೆಗೆ ಸ್ಥೂಗದಿ ರೂಪವಾಗಿ 33.25 ಕೋಟಿಗಳನ್ನು ತೆತ್ತಿದೆ. ಸಂಸ್ಥಾನವು ಪ್ರತಿ ವರ್ಷ 24½ ಲಕ್ಷ ರೂ. ಗಳ ಸ್ಥೂಗದಿ ತೆರ ಬೇಕಾಗಿದೆ. ತೆರಿಗೆ ರೂಪದಲ್ಲಿ ಭಾರತೀಯ ಸಂಸ್ಥಾನಗಳು ತೆತ್ತಿರುವ ಒಟ್ಟು 599 ಲಕ್ಷ ರೂ.ಗಳಲ್ಲಿ ಮೈಸೂರಿನ ಭಾಗವು 97 ಲಕ್ಷ ರೂ. ಗಳಿರುವುದು. ಉಪ್ಪಿಗೆ ಹಾಕಿರುವ ಈಗಿನ ಮಣಕ್ಕೆ 1-4-0 ರೂ. ಗಳ ತೆರಿಗೆ ಯಂತೆ ಮೈಸೂರು ಇಂಡಿಯಾ ಸರಕಾರಕ್ಕೆ 18.5 ಲಕ್ಷ ರೂ. ತೆರುತ್ತಿದೆ. ಪೆಟ್ರೋಲ್, ಸೀಮೆ ಎಣ್ಣೆ, ಬೆಳ್ಳಿ ಇವುಗಳ ಮೇಲಣ ತೆರಿಗೆಯಿಂದ ಸಂಸ್ಥಾನವು 8.71 ಲಕ್ಷ ರೂ. ತೆರುತ್ತಿದೆ. ಇದರಲ್ಲಿ 2 ಲಕ್ಷ ರೂ. ಗಳು ರಸ್ತೆ ರಿಪೇರಿಗಾಗಿ ವಾಪಸು ಬರುತ್ತದೆ. ಇಂಡಿಯಾ ಸರಕಾರಕ್ಕೆ ನಾಣ್ಯ ಚಲಾವಣೆಯಿಂದ ಬರುವ ಭಾಗವು ಸುಮಾರು 7 ಲಕ್ಷ ರೂ. ಗಳಿರಬೇಕು.

# ಸಂಸ್ಥೆಗಳು

## ವಿಚಾರ—ವಿಮರ್ಶೆ

ಜಗತ್ತಿನಲ್ಲಿ ಸರ್ವತ್ರ ವ್ಯಾಪಿಸಿದ್ದ ಆರ್ಥಿಕ ಮುಗ್ಗಟ್ಟು ಮಾಯವಾಗತೊಡಗಿದೆ. ಶುಭ ದಿನಗಳ ಮುಂಬೆಳಗು ಕಾಣತೊಡಗಿದೆ. ಈ ಆರ್ಥಿಕ ಮುಗ್ಗಟ್ಟನಲ್ಲಿ ನಂದದೆ ಕುಂದದೆ ನಿರಂತರ ಬೆಳಗಿ ದುದು ವಿಮಾಜ್ಯೋತಿ. ಭಾರತದಲ್ಲಿಯೂ ವಿಮಾ ಉದ್ಯೋಗವು ಎಂತಹ ತೊಂದರೆಗೂ ಧೈರ್ಯಗುಂದದೆ ಬಂದ ತೊಡರುಗಳನ್ನೆಲ್ಲ ಗೆಲಿದು ತನ್ನ ವಿಜಯ ಪತಾಕೆಯನ್ನು ಮೆರೆಯಿಸಿದೆ. ಭಾರತದಲ್ಲಿ ವಿಮಾ ಪ್ರಚಾರವು ಹೇಗೆ ನಡೆಯುತ್ತಿದೆಯೆಂಬುದನ್ನು ಸಾರ್ವಜನಿಕರಿಗೆ ತಿಳಿಸಿಕೊಡುವುದೇ ನಮ್ಮ ಉದ್ದೇಶವಾಗಿದೆ. ಈ ಉದ್ದೇಶದಿಂದ ವಿಮಾ ಕಂಪೆನಿಗಳ ವಿಚಾರ-ವಿಮರ್ಶೆಗಳನ್ನು ಉಲ್ಲೇಖಿಸುವ ಕಾರ್ಯವನ್ನು ಕೈಗೊಂಡಿರುವೆವು. ಈ ವಿಮರ್ಶೆಗಳಲ್ಲಿ ವಿಮಾಶಾಸ್ತ್ರಕ್ಕೆ, ಭಾರತೀಯ ವಿಮಾ ವಾಣಿಜ್ಯ ವೃತ್ತಿಗೆ, ನಮ್ಮ ನಾಡಿನ ಆರ್ಥಿಕ ಮುಕ್ತಿಗೆ ನೆರವಾಗಬಲ್ಲ ಮಾತುಗಳನ್ನೇ ಆಡಬೇಕೆಂಬುದು ನಮ್ಮ ಮುಖ್ಯ ಗುರಿಯಾಗಿದೆ. ಅನೇಕ ಭಾರತದ ಸುಪ್ರಸಿದ್ಧ ಕಂಪೆನಿಗಳ ಪರಿಚಯವನ್ನು ಓದುಗರಿಗೆ ಮಾಡಿಕೊಡುವ ಸುಯೋಗವು ನಮಗೆ ದೊರೆತುದಕ್ಕಾಗಿ ಆನಂದಿಸುತ್ತೇವೆ. ಅಂತೆಯೇ ಕನ್ನಡ ನಾಡಿನ ಎಲ್ಲ ಸುಪ್ರಸಿದ್ಧ ಸಂಸ್ಥೆಗಳ ಪರಿಚಯವನ್ನೂ ಓದುಗರಿಗೆ ಮಾಡಿಕೊಡುವ ಅವಕಾಶವು ದೊರೆತದು ನಮ್ಮ ಸುಯೋಗವು. ಇಲ್ಲಿ ಕೊಟ್ಟಿರುವ ವಿಮರ್ಶೆಗಳಿಂದ ಭಾರತದಲ್ಲಿ ವಿಮಾ ಉದ್ಯಮವು ಎಷ್ಟು ತೀವ್ರಪ್ರಗತಿ ಪಡೆಯುತ್ತಲಿದೆಯೆಂಬುದು ವ್ಯಕ್ತವಾಗುವುದು.

ಭಾರತದಲ್ಲಿರುವ ಎಲ್ಲ ಕಂಪೆನಿಗಳ ಪರಿಚಯವನ್ನು ಕನ್ನಡನಾಡಿನ ಜನತೆಗೆ ಮಾಡಿಕೊಡಬೇಕೆಂಬುದು ನಮ್ಮ ಹಿರಿಯ ಆಶೆಯಾಗಿತ್ತು. ಇಲ್ಲಿ ಕೊಟ್ಟಿರುವ ಸಂಸ್ಥೆಗಳಷ್ಟೇ ಅಲ್ಲದೆ ಭಾರತದಲ್ಲಿ ಇನ್ನೂ ಹಲವು ಸಂಸ್ಥೆಗಳಿವೆ. ಆದರೆ ಯಾವ ಸಂಸ್ಥೆಗಳು ನಮ್ಮ ಆಹ್ವಾನಕ್ಕೆ ಮನ್ನಣೆಯಿತ್ತು ಈ ವಿಭಾಗದ ಕೆಳಗೆ ಬರಲು ಸಮ್ಮತಿಯಿತ್ತವೋ ಅವುಗಳ ವಿಮರ್ಶೆಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

# ವಿಮರ್ಶಿತ ಸಂಸ್ಥೆಗಳ ಪಟ್ಟಿ

ಪುಟ

# ಓರಿಯಂಟಲ್ ಗವರ್ನಮೆಂಟ್ ಸೆಕ್ಯೂರಿಟಿ ಲೈಫ್ ಅಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್.

## The Oriental Government Security Life Assurance Co. Ltd.

ಓರಿಯಂಟಲ್ ಸಂಸ್ಥೆಯು ಭಾರತೀಯ ವಿಮಾ ಉದ್ಯಮದ ಯಶೋ ಕಿರೀಟವು. ನಾವು ಅದನ್ನು ಸಾರ್ವಜನಿಕರಿಗೆ ಪರಿಚಯ ಮಾಡಿಕೊಡಬೇಕಾದ ಅವಶ್ಯಕತೆ ಇರುವುದಿಲ್ಲ. ಸಾಮುದಾಯಿಕ ಖಾಸಗೀ ಆಡಳಿತದ ಭಾರತೀಯ ವಿಮಾ ಕಂಪೆನಿಗಳಲ್ಲಿ ಅದೇ ಮೊಟ್ಟಮೊದಲಿನದು. 1933ರಲ್ಲಿ ನಡೆಸಿದ ವಿಮರ್ಶೆಯಂತೆ ಆ ವರ್ಷದಲ್ಲಿ ಅದು ಸಾಧಿಸಿರುವ ಹೊಸ ಉದ್ಯಮವು ಎಲ್ಲ ಭಾರತೀಯ ಕಂಪೆನಿಗಳಿಗೂ ಜಗತ್ತಿನ ಐವತ್ತೈದು ಪ್ರಮುಖ ವಿಮಾ ಕಂಪೆನಿಗಳಿಗೂ ಮಿಗಿಲಾದುದೆನಿಸಿರುತ್ತದೆ.

ಕಳೆದ 65 ವರ್ಷಗಳಲ್ಲಿ ಓರಿಯಂಟಲ್ ಕಂಪೆನಿಯು ಪಡೆದಿರುವ ಪ್ರಗತಿಯನ್ನು ಕೆಳಗೆ ಕೊಟ್ಟಿರುವ ಪಟ್ಟಿಯಿಂದ ತಿಳಿಯಬಹುದಾಗಿದೆ.

| ವರ್ಷ | ಕೊಟ್ಟ ವಿಮಾಹಕ್ಕು | ನಿಧಿ |
|---|---|---|
| 1884 | ರೂ. 3,07,448 | ರೂ. 14,41,420 |
| 1894 | 42,10,150 | 91,61,014 |
| 1904 | 1,77,46,386 | 2,37,58,377 |
| 1914 | 4,33,16,851 | 4,72,18,840 |
| 1924 | 15,27,38,860 | 14,30,04,536 |

1934ನೇ ಡಿಸೆಂಬರ್ 31ನೇ ತಾರೀಖಿಗೆ ಮುಕ್ತಾಯವಾಗುವ ವರದಿಯನ್ನು ಅವಲೋಕಿಸಲು ಅತ್ಯಾನಂದವಾಗುವುದು. ವರ್ಷದ ಕೊನೆಯಲ್ಲಿ ಪ್ರಚುರದಲ್ಲಿದ್ದ ಪಾಲಿಸಿಗಳು 2,59,380. ಇವು ಬೋನಸ್ಸು ಸಮೇತ ಇರುವ ಪಾಲಿಸಿಗಳು. ಮೂರ್ಮಡಿ ಆದಾಯದ ವಿಮಾ ಪದ್ಧತಿಯ ಕೆಳಗೆ 54,120,38,518 ರೂ. ಗಳಷ್ಟು ಉದ್ಯಮವು ಹೆಚ್ಚಿರುತ್ತದೆ. ಅದರ ಪೈಕಿ 22,34,620 ರೂ. ಗಳನ್ನು ಪುನರ್ವಿಮೆಮಾಡಿದ್ದಾರೆ.

ಬೋನಸ್ಸು ಸಮೇತ ವರ್ಷದಲ್ಲಿ ಕೊಡಬೇಕಾದ ವಿಮಾ ಹಕ್ಕುಗಳ ಮೊತ್ತವು 1,02,49,954 ರೂ.ಗಳು. ಅದರ ಪೈಕಿ ಸಂದಾಯವಾದ ಪುನರ್ವಿಮಾ ಮೊಬಲಗು 1,47,500 ರೂ. ಗಳು. ಎಂಡೋಮೆಂಟ್ ವಿಮಾ ಪದ್ಧತಿಗಳ ಕೆಳಗೆ ಬಂದ ದರಖಾಸ್ತುಗಳ ವಿಮಾ ಮೊತ್ತವು 42,17,818-13-4 ರೂ. ಗಳು. ಇದರಲ್ಲಿ 28 ಲಕ್ಷ ಹಿಂದೂಗಳ ಜೀವಮಾನದ ಮೇಲಿನ ವಿಮೆಯಿರುವುದು. ಯೂರೋಪಿಯನ್ ಮತ್ತು ಆಂಗ್ಲೋ ಇಂಡಿಯನ್ನರ ಜೀವಮಾನದ ಮೇಲಿನ ವಿಮೆಯು 5 ಲಕ್ಷದಷ್ಟಿರುವುದು. ಪಾರ್ಸಿಗಳ ಜೀವ ಮಾನದ ಮೇಲಿನ ವಿಮೆಯು 5 ಲಕ್ಷದಷ್ಟಿರುವುದು. ಮಹಮದೀಯರ ಜೀವಮಾನದ ಮೇಲಿನ ವಿಮೆಯು 2 ಲಕ್ಷ ಮಾತ್ರವಿರುವುದು.

ಕಂಪೆನಿಯ ಜೀವವಿಮಾನಿಧಿಯು 15,14,65,254 ರೂ. ಗಳಷ್ಟಿರುವುದು. 6 ಲಕ್ಷ ರೂ ಗಳು ಕಂಪೆನಿಯ ತೆತ್ತ ಬಂಡವಾಳವು.

ವರ್ಷದಲ್ಲಿ ಕಂಪೆನಿಯು ಸಾಧಿಸಿದ ಹೊಸ ಉದ್ಯಮವು 762 ಲಕ್ಷ ರೂ.ಗಳ ಮೊತ್ತದ 42,378 ಪಾಲಿಸಿಗಳು. ಇದು ಕಳೆದ ವರ್ಷಕ್ಕಿಂತ 58 ಲಕ್ಷ ರೂ. ಗಳ ಮೊತ್ತದ 4,187 ಪಾಲಿಸಿಗಳು ಹೆಚ್ಚಾಗಿವೆ. ಕಂಪೆನಿಯ ಇತಿಹಾಸದಲ್ಲಿಯೇ ಇದು ಅತ್ಯಧಿಕವಾದುದು. ಕಂಪೆನಿಯ ಘನತೆಯನ್ನು ಯಾವುದೇ ರೀತಿ ನುಡಿದರೂ ಅದು ಇನ್ನೂ ಸಾಲದೆನಿಸುವುದು.

ಕಂಪೆನಿಯು ಕಳೆದವರ್ಷ ತನ್ನ ರನ್ನ ಮಹೋತ್ಸವವನ್ನು (Diamond Jubilee) ನೆರವೇರಿಸಿತು. ಕಂಪೆನಿಯ ಆಡಳಿತವು ಎಷ್ಟು ಉತ್ತಮ ರೀತಿ ನಡೆದಿದೆಯೆಂಬುದು ಸರ್ವರಿಗೂ ವ್ಯಕ್ತವಾಗಿದೆ. ಆರ್ಥಿಕ ಪ್ರಪಂಚದಲ್ಲಿ ಸುಪ್ರಸಿದ್ಧರಾದವರನೇಕರು ಈಸಂಸ್ಥೆಯ

ಡೈರೆಕ್ಟರ ಮಂಡಲಿಯಲ್ಲಿದ್ದಾರೆ. ಸರ್. ಪುರುಷೋತ್ತಮ ದಾಸ್ ಥಾಕೂರ್ ದಾಸ್‌ರವರು ಕಂಪೆನಿಯ ಅಧ್ಯಕ್ಷರು. ಸರ್ ಕವಾಸ್ಜಿ ಜಹಾಂಗೀರ್, ಶ್ರೀ ವಾಲ್ ಚಂದ್ ಹಿರಾ ಚಂದ್ ಇವರುಗಳು ಕಂಪೆನಿಯ ಡೈರೆಕ್ಟರುಗಳು.

ಓರಿಯಂಟಲ್ ಸಂಸ್ಥೆಯ 1935 ನೇ ಸಾಲಿನ ಪ್ರಗತಿಯಲ್ಲಿ ನಮಗೆಹಲವು ಅಂಶಗಳು ಮಾತ್ರ ತಿಳಿದು ಬಂದಿದೆ. ಅದನ್ನಿಲ್ಲಿ ಕೊಡಲಾಗಿದೆ.

| | | |
|---|---|---|
| ಹೊಸದಾಗಿ ಕೊಟ್ಟ ಪಾಲಿಸಿಗಳು | ರೂ. | 8,89,89,149 |
| ವರ್ಷದ ಆದಾಯ | ,, | 3,49,16,412 |
| ಪ್ರಚುರದಲ್ಲಿರುವ ಪಾಲಿಸಿಗಳು | ರೂ. | 59,25,32,038 |
| ಕೊಟ್ಟಿರುವ ವಿಮಾ ಹಕ್ಕುಗಳು | ,, | 17,43,21,855 |
| ಹೆಚ್ಚಾದ ನಿಧಿ | ,, | 17,101,62,491 |

ಇವುಗಳಿಂದ 1935 ರ ಸಾಲಿನಲ್ಲಿಯೂ ಸಂಸ್ಥೆಯು ಎಷ್ಟು ಅದ್ಭುತವಾದ ಪ್ರಗತಿ ಪಡೆದಿದೆ ಎನ್ನುವುದು ವ್ಯಕ್ತವಾಗುವುದು.

ಓರಿಯಂಟಲ್ ಕಂಪೆನಿಗೆ ವರ್ಷೇ ವರ್ಷೇ ಮತ್ತೂ ಹೆಚ್ಚಿನ ವಿಜಯವಾಗಲೆಂದೂ ತನ್ಮೂಲಕ ದೇಶಕ್ಕೆ ಹೆಚ್ಚು ಹೆಚ್ಚು ಸೇವೆಸಲ್ಲಿಸಲೆಂದೂ ಹಾರೈಸುವೆವು.



# ಮೈಸೂರು ಜೀವವಿಮಾ ಸಂಸ್ಥೆ

## (ಸಾರ್ವಜನಿಕ ಶಾಖೆ)

## Mysore State Life Insurance Scheme (Public Branch)

---

ಮೈಸೂರು ಸರಕಾರದ ವಿಮಾಶಾಖೆಯು ಸಮಗ್ರ ಕರ್ಣಾಟಕದಲ್ಲಿ ಮೊಟ್ಟಮೊದಲಿನ ವಿಮಾ ಸಂಸ್ಥೆ. ಮೈಸೂರಿನ ಶ್ರೀಮನ್ಮಹಾರಾಜರವರ ಸರಕಾರದ ಕೃಪಾಛತ್ರದಡಿಯಲ್ಲಿ ೧೯೧೧ ರಲ್ಲಿ ನೆಟ್ಟ ಸಸಿಯಿದು. ಸರಕಾರಿ ಉದ್ಯೋಗಸ್ಥರು ತಮ್ಮ ಸಂಬಳದಲ್ಲಿ ಶೇಕಡ ೧೦ ರ ವರೆಗೂ ಉಳಿ ರಕ್ಷಣೆ-ಪೋಷಣೆಗಳನ್ನೂ ಒದಗಿಸಿಕೊಟ್ಟ ಮಹಾಪುಣ್ಯವು ನಮ್ಮ ದಯಾಳು ಸರಕಾರಕ್ಕೆ ಸೇರಿದುದು.

ಈಗ್ಗೆ ಸುಮಾರು ಇಪ್ಪತ್ತು ವರ್ಷಗಳ ಹಿಂದೆ, ಸಂಸ್ಥಾನದಲ್ಲಿ ಮತ್ತಾವ ಸ್ಥಳೀಯ ವಿಮಾ ಕಂಪೆನಿಯೂ ಇರಲಿಲ್ಲ. ಆಗ ಇಲ್ಲಿ ಉದ್ಯಮ ನಡೆಸುತ್ತಿದ್ದ ಕೆಲವು



STATE LIFE INSURANCE BUILDINGS

ಸರಕಾರದ ಜೀವವಿಮಾ ಭವನ

[ಈ ಭವನ ನಿರ್ಮಾಣಕ್ಕೆ ಈಗಾಗಲೆ ರೂ. ೧,೫೭,೮೫೦ ಗಳನ್ನು ಖರ್ಚುಮಾಡಿರುವರು. ಈ ಕಟ್ಟಡಕ್ಕೆ ಮೂರನೆಯ ಅಂತಸ್ತು ಸಹ ಕಟ್ಟಿದ್ದಾರೆ.]

ತಾಯ ಮಾಡಬೇಕೆಂಬ ನಿಯಮವು ಆಗ ಜಾರಿಗೆ ಬಂದಿತು. ಈ ನಿರ್ಬಂಧವಿಲ್ಲದಿದ್ದರೆ ಸರಕಾರಿ ಉದ್ಯೋಗಸ್ಥರು ತಮ್ಮ ವಾರ್ಧಿಕ್ಯದಲ್ಲಿ ವಿಶ್ರಾಂತಿಯೇ ಇಲ್ಲದೆ ನರಳಬೇಕಾಗಿತ್ತು. ಅವರನ್ನಾಶ್ರಯಿಸಿದ ಹೆಂಡತಿ ಮಕ್ಕಳು ಬೀದಿಯ ಭಿಕಾರಿಗಳಾಗಬೇಕಾಗಿದ್ದಿತು. ಆದರೆ ಅವರಿಗೆ ವಾರ್ಧಿಕ್ಯದಲ್ಲಿ ನೆಮ್ಮದಿ ತೃಪ್ತಿಗಳನ್ನೂ ಅವರ ಆಶ್ರಿತರಿಗೆ ಹೊರಗಿನ ಕಂಪೆನಿಗಳು ಸಂಸ್ಥಾನದ ಆಧಾರ ಸ್ತಂಭಗಳೆನಿಸಿದ ಅಲ್ಪ ಉಪಪತ್ತಿಯುಳ್ಳ ರೈತರಿಗೂ, ಕೂಲಿಕಾರರಿಗೂ ಸಹಾಯವಾಗುವಂತೆ ಅಲ್ಪ ಮೊತ್ತದ ಪಾಲಿಸಿಗಳನ್ನು ಪ್ರಚಾರದಲ್ಲಿ ತಂದಿರಲಿಲ್ಲ. ಇಂತಹ ಸಮಯದಲ್ಲಿ, ಮೈಸೂರಿನ ಸಮಸ್ತ ಪ್ರಜೆಗಳಿಗೂ ಜೀವವಿಮೆಯ ಸೌಲಭ್ಯಗಳು ಸುಲಭರೀತಿಯಲ್ಲಿ ದೊರೆವಂತೆ ಅನುಕೂಲ



N. MADHAVA RAO Esq., B.A.,B.L.,
President, State Life Insurance Committee.
ಶ್ರೀ|| ಎನ್. ಮಾಧವರಾವ್ ಬಿ.ಎ., ಬಿ.ಎಲ್., ಅವರು
ಅಧ್ಯಕ್ಷರು, ಮೈಸೂರು ಸರ್ಕಾರದ ಜೀವವಿಮಾ ಸಮಿತಿ.

ಮಾಡಿಕೊಡಬೇಕೆಂಬ ಉದಾತ್ತ ಧ್ಯೇಯದಿಂದ ಘನ ಹೊಂದಿದ ಶ್ರೀಮನ್ಮಹಿಸೂರು ಮಹಾರಾಜರವರ ಸರಕಾರವು ಸರಕಾರದ ಜೀವವಿಮಾ ಉದ್ಯಮದ ಪ್ರಜೆಗಳ ಶಾಖೆಯುನ್ನು ಸ್ಥಾಪಿಸಿತು. ಈ ಸಂಸ್ಥೆಯ ಮೊದಲನೆಯ ಪಾಲಿಸಿಯನ್ನು ೧೯೧೭ನೇ ಇಸವಿ ಸೆಪ್ಟೆಂಬರ್ ತಿಂಗಳಿನಲ್ಲಿ ಕೊಡಲಾಯಿತು. ಉದಯವಾದಂದಿನಿಂದಲೂ. ಸಂಸ್ಥೆಯು ಶೀಘ್ರ ಪ್ರಗತಿ ಪಡೆಯುತ್ತಲಿದೆ ಮತ್ತು ತನ್ನ ಉಪಕೃತಿಯ ಕ್ಷೇತ್ರವನ್ನು ಸಂಸ್ಥಾನದ ಮೂಲೆಮೂಲೆಗೂ ಪಸರಿಸುತ್ತಲಿದೆ.

ಸರಕಾರದ ವಿಮಾಶಾಖೆಗೆ ಸಾರ್ವಜನಿಕ ರೂಪವು ಬಂದುದರಿಂದ ಇದರ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಖಾಸಗೀ ಸದಸ್ಯರ ಪ್ರಾತಿನಿಧ್ಯಕ್ಕೂ ಅವಕಾಶವಾಯಿತು. ಸಂಸ್ಥಾನದ ಪ್ರಮುಖ ಅಧಿಕಾರಿಗಳು ಮತ್ತು ಖಾಸಗೀ ಸದಸ್ಯರುಗಳಿಂದ ಕೂಡಿದ ಸಮಿತಿಯು ಈ ಉದ್ಯಮದ ಆಡಳಿತವನ್ನು ನಿರ್ವಹಿಸುತ್ತಿದೆ. ಖಾಸಗೀ ಸದಸ್ಯರುಗಳು ಪಾಲಿಸಿದಾರರಿಂದಲೇ ಚುನಾಯಿತರಾದವರು. ಈ ಪ್ರಜೆಗಳ ಶಾಖೆಯಲ್ಲಿ ಮೈಸೂರಿನ ಪ್ರಜೆಗಳೆಲ್ಲರೂ (ಹುಟ್ಟಿದವರಾಗಲೀ ಅಥವಾ ನೆಲೆಸಿದವರಾಗಲೀ) ವಿಮೆ ಮಾಡಬಹುದು. ಪಾಲಿಸಿಗಳ ವಿಮಾ ಮೊತ್ತವನ್ನು ಸರಕಾರದ

ಹುಟ್ಟುವಳಿಯಿಂದಲೇ ಕೊಡುವುದರಿಂದ ಪಾಲಿಸಿ... ಸಂಪೂರ್ಣ ರಕ್ಷಣೆಯಿದೆ. ಯಾವುದೇ ಪಂಗಡದ ... ಯಾವುದೇ ವೃತ್ತಿಯನ್ನವಲಂಬಿಸಿದ ಸ್ತ್ರೀಯರೂ ... ಮಾಡಬಹುದು. ಸಾಮಾನ್ಯವಾಗಿ ವಿಮೆ ಮಾಡಿದ ... ಜೀವಮಾನದ ಮೇಲೂ ಕಡಮೆಯೆಂದರೆ ೧೦೦ ... ಗಳಿಂದ ಹೆಚ್ಚೆಂದರೆ ೧೫,೦೦೦ ರೂ. ಗಳ ವರೆಗೆ ... ಗಳನ್ನು ಕೊಡುವುದರಿಂದ ಈ ಸಂಸ್ಥೆಯಲ್ಲಿ ಬಡವ... ಭಾಗ್ಯವಂತರಿಗೂ ಕೂಡ ವಿಮೆ ಮಾಡಲು ಅವಕಾಶ... ವುದು. ಪಾಲಿಸಿದಾರರಿಗೆ ನಗದಾಗಿಯೂ ಮತ್ತು ... ಯಿರುವ ಪ್ರೀಮಿಯಂ ಸಂದಾಯದ ಸಲುವಾಗಿ... ಉದಾರ ಷರತ್ತುಗಳ ಮೇಲೆ ಸಾಲ ಕೊಡುವರು. ... ಪ್ರಜೆಗಳ ಶಾಖೆಯು ಸರಕಾರದ ಸಂಸ್ಥೆಯಾಗಿರುವುದ... ಅದಕ್ಕೆ ಹಲವು ವಿಶೇಷ ಅನುಕೂಲಗಳಿರುವುವು. ... ಕಾರಣ ಆಡಳಿತ ಖರ್ಚನ್ನು ಪ್ರೀಮಿಯಂ ಆದಾ... ಅತ್ಯಲ್ಪ ಭಾಗವಾಗಿರಿಸುವುದಕ್ಕೆ ಸಾಧ್ಯವಾಗಿದೆ. ... ಈ ಸಾರ್ವಜನಿಕ ಶಾಖೆಯು ವಿಮಾ ಉದ್ಯಮದಿಂದ ... ಹೊಂದಿದ ಶ್ರೀಮನ್ಮಹಾರಾಜರವರ ಸರಕಾರದವರು ... ಲಾಭವನ್ನೂ ಅಪೇಕ್ಷಿಸದಿರುವುದರಿಂದಲೂ, ಬಂದ ... ದಲ್ಲಿ ಭಾಗ ನಿರೀಕ್ಷಿಸುವುದಕ್ಕೆ ಷೇರುದಾರರು ...

...ಸ್ಥಿರಿರುವುದರಿಂದಲೂ ಐದು ವರ್ಷಕ್ಕೊಮ್ಮೆ ನಡೆಯುವ ...ತ್ತುಯರಿಗಳ ಲೆಕ್ಕಾಚಾರದ ವಿಮರ್ಶೆಯಾದ ಬಳಿಕ ...ಗಿರುವ ಉಳಿತಾಯವನ್ನು ಬೋನಸ್ಸು ರೂಪದಲ್ಲಿ ...ದಾರರಿಗೆ ಹಂಚಿಬಿಡುವರು, ಅಥವಾ ಸಂಸ್ಥೆಯ ...ನಿಧಿ"ಯ ಭದ್ರತೆಯನ್ನೂ ಸ್ಥಿರತೆಯನ್ನೂ ವೃದ್ಧಿಗೊಳಿ ...ದು ಉಪಯೋಗಿಸುವರು. ೧೯೩೩ನೇ ಜೂನ್ ತಿಂಗಳಿಗೆ ಮುಕ್ತಾಯವಾದ ೫ ವರ್ಷಗಳ ಅವಧಿಯ ಲೆಕ್ಕವಿಮ ...ಯ ನಂತರ ಒಂದು ಸಾವಿರಕ್ಕೆ ಒಂದು ವರ್ಷಕ್ಕೆ ಇಪ್ಪತ್ತು ರೂಪಾಯಿಗಳಂತೆ ಬೋನಸ್ಸು ಹಂಚಿದ್ದಾರೆ.

A. N. RAGHAVACHAR Esq., M.A.,
Secretary S. L. I. Committee.
ಶ್ರೀ॥ ಎ. ಎನ್. ರಾಘವಾಚಾರ್, ಎಂ.ಎ., ಅವರು
ಕಾರ್ಯದರ್ಶಿಗಳು—ಮೈ. ಸ. ಜೀ. ವಿ. ಸಮಿತಿ.

ಹಳ್ಳಿಗಾಡಿನ ಜನರಿಗೆ ವಿಮೆಯ ಪವಿತ್ರ ಸಂದೇಶವನ್ನು ಸಾರಿ, ಜೀವವಿಮೆ ಮಾಡಲಿರುವವರಿಗೆ ಎಲ್ಲ ವಿಧವ ಸಹಾಯವನ್ನೂ ಒದಗಿಸುವ ಸಲುವಾಗಿ ಸಂಸ್ಥಾನದ ಎಲ್ಲೆಡೆಗಳಲ್ಲಿಯೂ "ಸಹಾಯಕ"ರನ್ನು ನೇಮಿಸಿದ್ದಾರೆ. ಪ್ರೀಮಿಯಂಗಳನ್ನು ಸರಕಾರದ ಖಜಾನೆಗಳಿಗೆ ಅಥವಾ ಮೈಸೂರು ಬ್ಯಾಂಕು ಮತ್ತು ಅದರ ಶಾಖೆಗಳಿಗೆ ಪಾವತಿ ಮಾಡಬಹುದು. ಅಲ್ಲದೆ ಮನಿಯಾರ್ಡರು ಮೂಲಕ ಕಳುಹಿಸುವಾಗ ಕೆಲವು ಸಂದರ್ಭಗಳಲ್ಲಿ ಅದಕ್ಕೆ ತಗಲುವ ವೆಚ್ಚವನ್ನು ಸಂಸ್ಥೆಯವರೇ ವಹಿಸುವರು. ವಿಮೆಯ ಹಕ್ಕಿನ ಮೊಬಲಗನ್ನು ಸಂಸ್ಥಾನದಲ್ಲಿರುವ ಯಾವುದೇ ಸರಕಾರಿ ಖಜಾನೆಯಿಂದ ಸಂದಾಯಮಾಡುವ ಏರ್ಪಾಡಿದೆ. ಈ ರೀತಿ, ಪ್ರಜಾಹಿತೈಷಿ ಸರಕಾರದ ಕೈಯಲ್ಲಿರುವ ಈ ಸಂಸ್ಥೆಯು ಕಾಲಾನುಕ್ರಮವಾಗಿ ಹೆಚ್ಚು ಹೆಚ್ಚು ಉಪಯುಕ್ತ ನಿಯಮಗಳನ್ನನುಸರಿಸುತ್ತ ಏಕಪ್ರಕಾರವಾಗಿ ಅಭಿವೃದ್ಧಿಹೊಂದುತ್ತಿದೆ. ಹೀಗಿರಲು, ಮೈಸೂರಿನ ಪ್ರಜೆಗಳೆಲ್ಲರೂ ತಾವು ಸಂಪಾದಿಸಿದ ಹಣವನ್ನು ಉಳಿಸಿ, ಬೆಳಸಿ ಅದರಿಂದ ಶಾಂತಿ, ತೃಪ್ತಿ, ಸಮಾಧಾನಗಳನ್ನು ಪಡೆಯಬೇಕೆಂಬ ಮತ್ತು ಅವರು ಹಾಗೆ ವೈಯಕ್ತಿಕವಾಗಿ ಶೇಖರಿಸಿದ ಹಣವು ಒಟ್ಟುಗೂಡಿ ಸಂಸ್ಥಾನದ ಬಂಡವಾಳದ ಬೆಳವಣಿಗೆಗೆ ನೆರವಾಗಬೇಕೆಂಬ ಈ ಸಂಸ್ಥೆಯ ಆಕಾಂಕ್ಷೆಯು ಈಡೇರುವುದೆಂಬುದು ನಿಸ್ಸಂಶಯವು.

ಕಾರ್ಯಕ್ಷೇತ್ರವು ನಿಯಮಿತವಾದಾಗ್ಯೂ, ಸಾರ್ವತ್ರಿಕವಾಗಿ ಆರ್ಥಿಕ ದುಃಸ್ಥಿತಿಯು ನೆಲೆಸಿದ್ದಾಗ್ಯೂ, ಪ್ರಜಾ ಶಾಖೆಯು ಇತ್ತೀಚೆಗೆ ಪಡೆದಿರುವ ಪ್ರಶಂಸನೀಯವಾದ ಅಭಿವೃದ್ಧಿಯು ಮೈಸೂರಿನವರೆಲ್ಲರಿಗೂ ಸಂತಸದ ವಿಚಾರ ೧೯೩೫ನೇ ಜೂನ್ ೩೦ ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದಲ್ಲಿ ಸಾರ್ವಜನಿಕ ಶಾಖೆಯು ಸಾಧಿಸಿರುವ ಉದ್ಯಮವು ಕಳೆದ ವರ್ಷಕ್ಕಿಂತಲೂ ಅಧಿಕವಾಗಿರುವುದು. ಕಳೆದ ವರ್ಷ ೩೯,೯೨,೮೦೦ ರೂ. ಗಳ ಮೊತ್ತದ ೪,೫೪೬ ವಿಮಾದ ಖಾಸ್ತುಗಳು ಬಂದಿದ್ದವು ಈ ವರ್ಷ ೫೩,೫೧,೪೦೦ ರೂ. ಗಳ ಮೊತ್ತದ ೫,೮೪೪ ವಿಮಾ ದರಖಾಸ್ತುಗಳು ಬಂದಿವೆ. ಅವುಗಳಲ್ಲಿ ೪೯,೯೨,೬೦೦ ರೂ. ಗಳ ಮೊತ್ತದ ೫,೪೪೮ ದರಖಾಸ್ತುಗಳನ್ನು ಅಂಗೀಕರಿಸಿದ್ದಾರೆ. ಮತ್ತು ೪೪,೫೧,೮೦೦ ರೂ.ಗಳ ೪,೯೪೩ ಪಾಲಿಸಿ ಪತ್ರಗಳನ್ನು ಕೊಟ್ಟಿದ್ದಾರೆ. ಇವುಗಳ ವಾರ್ಷಿಕ ಪ್ರೀಮಿಯಂ ಹುಟ್ಟುವಳಿ ೨,೪೪,೮೦೩ ರೂ.ಗಳು, ಹೋದ ವರ್ಷ ೧,೭೬,೩೭೯ ರೂ.ಗಳ ಪ್ರೀಮಿಯಂ ಹುಟ್ಟುವಳಿಯ ೩೨,೯೨,೧೦೦ ರೂ.ಗಳ ಮೊತ್ತದ ೩,೭೫೮ ಪಾಲಿಸಿಗಳನ್ನು ಮಾತ್ರ ಕೊಟ್ಟಿದ್ದರು. ಈ ಶಾಖೆಯು ಪ್ರಾರಂಭವಾದಂದಿನಿಂದ ೧೯೩೫ ನೇ ಜೂನ್ ೩೦ ನೇ ತಾರೀಖಿನವರೆಗೆ ೧೪,೮೯,೨೩೮ ರೂ.ಗಳ ವಾರ್ಷಿಕ ಪ್ರೀಮಿಯಂ ಹುಟ್ಟುವಳಿಯುಳ್ಳ ೨,೭೫,೮೪,೧೦೦ ರೂ. ಗಳ ಮೊತ್ತದ ೨೮,೨೧೬ ಪಾಲಿಸಿ ಪತ್ರಗಳನ್ನು ಕೊಟ್ಟಿದ್ದಾರೆ. ಈ ಶಾಖೆಯು ಆರಂಭವಾದಂದಿನಿಂದ ೮೩೨ ವಿಮಾ ಹಕ್ಕುಗಳನ್ನು ಕೊಟ್ಟಿದ್ದಾರೆ. ೧೯೩೫ ನೇ ಜೂನ್ ೩೦ ನೇ ತಾರೀಖು ೧೧,೭೮,[illegible] ರೂ.ಗಳ ವಾರ್ಷಿಕ ಪ್ರೀಮಿಯಂ



‌ G. MADHAVA RAO Esq. B A, B.L.,
Deputy Secretary, S. L. I. Committee.
ಶ್ರೀ॥ ಜಿ. ಮಾಧವರಾವ್, ಬಿ ಎ., ಬಿ ಎಲ್., ರವರು
ಉಪ ಕಾರ್ಯದರ್ಶಿಗಳು— ಮೈ. ಸ ಜಿ. ಸಮಿತಿ.

ಆದಾಯವುಳ್ಳ ೨,೧೮,೪೭,೩೦೦ ರೂ. ಗಳ ಮೊತ್ತದ ೨೨,೪೬೧ ಪಾಲಿಸಿಗಳು ಜಾರಿಯಲ್ಲಿದ್ದುವು.

ಈ ವರ್ಷದಲ್ಲಿ ವಸೂಲಾದ ಮೊಬಲಗು ೧೨,೭೨,೯೯೮ ರೂ.ಗಳು ಇದರಲ್ಲಿ ಬಡ್ಡಿ ಮುಖೇನ ಬಂದ ೧,೯೩,೧೪೦ ರೂ ಗಳ ಆದಾಯವು ಸೇರಿದೆ. ವಿಮಾ ಹಕ್ಕು ಮೊದಲಾದವುಗಳಿಗಾಗಿ ವರ್ಷದಲ್ಲಾದ ವೆಚ್ಚ ೬,೧೯,೩೦೪ ರೂ.ಗಳು ಉಳಿತಾಯವನ್ನು "ನಿಧಿ" ಗೆ ಸೇರಿಸಲಾಯಿತು. ಸಂಸ್ಥೆಯ "ನಿಧಿ" ಯು ೪೧,೪೭,೭೭೪ ರೂ.ಗಳಿಂದ ೪೮,೦೧,೪೬೯ ರೂ.ಗಳಿಗೆ ಹೆಚ್ಚಿತು. ಈ ಅಂಕೆಗಳು ಸಂಸ್ಥೆಯ ಆರ್ಥಿಕ ಭದ್ರತೆಯನ್ನೂ ಅಭೂತ ಪೂರ್ವ ಪ್ರಗತಿಯನ್ನೂ ಸೂಚಿಸುತ್ತವೆ. ಮೈಸೂರು ದೇಶೀಯನೆನಿಸಿಕೊಳ್ಳುವ ಪ್ರತಿಯೊಬ್ಬನಿಗೂ ಜೀವವಿಮೆ ಮಾಡಲು ಈ ಸರಕಾರದ ವಿಮಾ ಸಂಸ್ಥೆಯು ಸುರಕ್ಷಿತವಾದುದು, ಸುಭದ್ರವಾದುದು ಮತ್ತು ಸುಲಭ ಖರ್ಚಿನದು. ಸಂಸ್ಥಾನದಲ್ಲಿಂತಹ ಸಂಸ್ಥೆಯೊಂದಿರುವುದು ಮೈಸೂರಿನವರ ಭಾಗ್ಯ. ಮೈಸೂರು ದೇಶೀಯರೆಲ್ಲರೂ ಈ ಸರಕಾರದ ವಿಮಾ ಸಂಸ್ಥೆಯಲ್ಲಿಯೇ ಜೀವವಿಮೆಮಾಡಿ, ಸ್ವರಕ್ಷಣೆಯನ್ನೂ ದೇಶದ ಸಂಪದಭಿವೃದ್ಧಿಯನ್ನೂ ಸಾಧಿಸಲೆಂಬುದು ನಮ್ಮ ಸದಾಶಯವು.



# ಹಿಂದೂಸ್ಥಾನ್ ಕೋ-ಆಪರೇಟಿವ್ ಇನ್ಶೂರೆನ್ಸ್ ಸೊಸೈಟಿ, ಲಿಮಿಟೆಡ್.

## Hindusthan Co-operative Insurance Society, Ltd.

---

೧೯೦೭ನೇ ಇಸವಿ. ಎಲ್ಲೆಲ್ಲೂ ಸ್ವದೇಶೀ ಚಳುವಳಿಯ ಸಂಭ್ರಮ. ಸ್ವದೇಶೀ ವಸ್ತುಗಳನ್ನು ಕೊಳ್ಳಬೇಕೆಂಬ ಉತ್ಸಾಹವು ಎಲ್ಲರಲ್ಲೂ ತುಂಬಿದೆ. ಆದರೆ ಸ್ವದೇಶಿ ವಸ್ತುಗಳು ಸಿಗುವುದೆಲ್ಲಿ? ಕೊಳ್ಳುವವರಿಗೆ ಮಾರಲು ವ್ಯಾಪಾರಿಗಳು ಬೇಕಾಗಿದ್ದಿತು. ವ್ಯಾಪಾರಿಗಳಿರಲು ಮನೆ ಕೈಗಾರಿಕೆಗಳು ಅವಶ್ಯಕವಾಗಿದ್ದುವು. ಮನೆ ಕೈಗಾರಿಕೆಗಳನ್ನು ನಡೆ-



HINDUSTAN BUILDINGS. HEAD OFFICE
ಹಿಂದೂಸ್ಥಾ ಬಿಲ್ಡಿಂಗ್ಸ್ ಹೆಡ್ ಆಫೀಸು.

ಸಲು ಜನ ಬೇಕಿದ್ದಿತು. ಧನಬೇಕಿದ್ದಿತು. ನಮ್ಮ ದೇಶದಲ್ಲಿ ಹಣವಿದ್ದಿರಲಿಲ್ಲವೆಂದಲ್ಲ; ಅದು ಚದುರಿಹೋಗಿ ಉಪಯೋಗಕ್ಕೆ ಬಾರದಾಗಿತ್ತು. ಈ ಪರಿಸ್ಥಿತಿಯು, ಅಂಬಿಕಾ ಚರಣ ಯುಕಿಲ್ (Ambica Charan Ukil) (ಹಿಂದೂಸ್ಥಾನ್ ಕೋ-ಆಪರೇಟಿವ್ ಇನ್ಶೂರೆನ್ಸ್ ಸೊಸೈಟಿಯ ಜೀವದಾತರು) ರವರು ರಾಷ್ಟ್ರೀಯವಾದ ವಿಮಾ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂದು ಯೋಚಿಸಲು ಕಾರಣವಾಯಿತು. ಅಂಬಿಕಾ ಬಾಬುರವರ ಕಾರ್ಯನಿರ್ವಾಹಕ ಶಕ್ತಿಯು ಹಲವರನ್ನು ಒಟ್ಟುಗೂಡಿಸಿತು ಜೋರಸಾಂಕೋದಲ್ಲಿರುವ ಶಾಂತಿನಿಕೇತನದ ಯತಿಗಳ ಗೃಹದಲ್ಲಿ, ಅವರ ಆಶೀರ್ವಾದ ಪಡೆದು, ಶ್ರೀ ಸುರೇಂದ್ರನಾಥ್ ಟಾಗೋರ್ ಮತ್ತು ಅವರ ಸ್ನೇಹಿತರ ನೇತೃತ್ವದಲ್ಲಿ ಹಿಂದೂಸ್ಥಾನ್ ಕೋ-ಆಪರೇಟಿವ್ ಇನ್ಶ್ಯೂರೆನ್ಸ್ ಸೊಸೈಟಿಯು (Hindusthan Co-operative Insurance Society) ಸ್ಥಾಪಿತವಾಯಿತು.

ಹಿಂದೂಸ್ಥಾನ್ ಕೋ-ಆಪರೇಟಿವ್ ಇನ್ಶ್ಯೂರೆನ್ಸ್ ಸೊಸೈಟಿಯು ಪ್ರಥಮದಲ್ಲಿ ಅನೇಕ ತೊಂದರೆಗಳನ್ನು ಅನುಭವಿಸಬೇಕಾಯಿತು. ಆದಾಗ್ಯೂ ಅದರ ಮೂಲಪುರುಷರು ನೆಟ್ಟ ಬೀಜವು ಜೀವನ ಸಾರದಿಂದ ತುಂಬಿದ್ದುದರಿಂದ, ಮೇಲಾಯ್ದು ಬಂದ ಚಂಡಮಾರುತಗಳೆಲ್ಲವನ್ನೂ ಎದುರಿಸಿ ತಲೆಯೆತ್ತಿ ನಿಂತಿತು. ಸಂಸ್ಥೆಯನ್ನು ರಿಜಿಸ್ಟರ್ ಮಾಡಿಸುವ ಮೊದಲೇ ವಸೂಲಾದ ಶೇರು ಬಂಡವಾಳವೆಲ್ಲಾ ಖರ್ಚಾಗಿ ಹೋಗಿದ್ದಿತು. ಪ್ರೀಮಿಯಂನಿಂದ ಬರುವ ಆದಾಯವಂತೂ ಅಲ್ಪವಿದ್ದುದರಿಂದ ಖರ್ಚು ಕಳೆದು ವಿಮಾ ಹಕ್ಕುಗಳನ್ನು ಪಾವತಿಮಾಡುವ ಸಂಭವವಂತೂ ಇರಲಿಲ್ಲ. ಆದರೆ ಕಾರ್ಯನಿರ್ವಾಹಕರ ನಿರಂತರ ಶ್ರಮವು ನಿಷ್ಫಲವಾಗಲಿಲ್ಲ. ಉದ್ಯಮವು ದಿನೇ ದಿನೇ ಹೆಚ್ಚುತ್ತ ನಡೆಯಿತು. ಅಂತೆಯೇ ಅವರ ಆಶಯಗಳೂ ಉನ್ನತವಾಗುತ್ತ ನಡೆದವು. ಸಂಸ್ಥೆಗೊಂದು ಭವ್ಯ ಕಟ್ಟಡವನ್ನು ಕಟ್ಟಿಸುವ ಹವಣಿಕೆಯಾಯಿತು. ಶುಭ ದಿನಗಳ ಬರುವು ಕಾಣತೊಡಗಿತು. ಆದರೆ ಕೆಲಕಾಲದಲ್ಲಿಯೇ ಕಾರ್ಮೋಡಗಳು ಎದ್ದುವು. ಕಲ್ಕತ್ತಾದಲ್ಲೇ ಅತಿ ದೊಡ್ಡದಾದ ಪತ್ರಿಕೆಗಳಲ್ಲಿ ಪ್ರಕಟವಾದ ಭವನದ ಚಿತ್ರವನ್ನು ಕಂಡು ಪರದೇಶದ ಪ್ರತಿಸ್ಪರ್ಧಿಗಳು ಭೀತಿಗೊಂಡು ಕಿರುಕುಳ ಕೊಡಲಾರಂಭಿಸಿದರು. ಈ ಸಂಸ್ಥೆಯನ್ನು ಹಳಿಯಲು ಅವರು ನಾನಾ ಮಾರ್ಗಗಳನ್ನು ಅನುಸರಿಸಿದರು. ಪತ್ರಿಕೆಗಳಲ್ಲಿ ಉಗ್ರವಾಗಿ ಟೀಕಿಸಿದರು. ಸಂಸ್ಥೆಯಲ್ಲಿಯೇ ಒಡಕು ಹುಟ್ಟಿಸಲು ಪ್ರಯತ್ನಿಸಿದರು. ಆದರೆ ಅವರಿಗೆ ಈ ಸಂಸ್ಥೆಯ ಕೆಚ್ಚೆದೆಯ ಅನುಭವವಾಯಿತು.

ನಾವು ಉದ್ದೇಶಪೂರ್ವಕವಾಗಿ ಈ ಸಂಸ್ಥೆಯ ಬಾಲ್ಯ ಚರಿತ್ರೆಯನ್ನು ವಿವರಿಸಿದ್ದೇವೆ. ಭಾರತದಲ್ಲಿ ಯಾವುದೇ ಇನ್ಶ್ಯೂರೆನ್ಸ್ ಕಂಪೆನಿಯ ಬಾಲ್ಯವು ವಿಶೇಷ ಉತ್ಸಾಹಜನಕವಾಗಿರದು. ಅಷ್ಟೇ ಅಲ್ಲ—ಅದಕ್ಕೆ ಬರುವ ತೊಂದರೆಗಳಿಗಿಂತಲೂ ಹೆಚ್ಚಿನ ತೊಂದರೆಯು ಕಲ್ಪನೆಗೆ ಅಸಾಧ್ಯ. ಸ್ವದೇಶೀ ಇನ್ಶ್ಯೂರೆನ್ಸ್ ಕಂಪೆನಿಗಳು, ಸರಕಾರದಿಂದ ಯಾವ ವಿಶೇಷ ರಿಯಾಯತಿಯನ್ನೂ ಪಡೆಯದೆ, ಯಾವ ಉತ್ತೇಜನವೂ ಇಲ್ಲದೆ ಹುಟ್ಟುತ್ತಲೇ ಸ್ಪರ್ಧಾರಂಗಕ್ಕೆ ಧುಮ್ಮಿಕ್ಕಬೇಕಾಗಿದೆ. ಬಲಯುತವಾದ, ಬೇರೂರಿನಿಂತ ಸ್ವದೇಶೀ ವಿದೇಶೀ ಸಂಸ್ಥೆಗಳೊಂದಿಗೆ ಹೋರಾಡಿ ನಿಲ್ಲಲು ಪ್ರಯತ್ನಿಸುತ್ತಿರುವಷ್ಟರಲ್ಲಿಯೇ ಎಲ್ಲ ಕಡೆಗಳಿಂದಲೂ ಈರ್ಷ್ಯಾಸೂಯೆಗಳ ವಿರೋಧ ಕೂಗು ಕೇಳಬರುವುದು. ಅಷ್ಟೇ ಅಲ್ಲದೆ, ಯಾವ ಸಹಾಯ ಸಹಾನುಭೂತಿಗಳು ನಮ್ಮೊಡನಿರಬೇಕಾದುವು ಧರ್ಮನಿಷ್ಠ ಅಂಥಹವರೇ ಹಿಂದಿನಿಂದ ಇರಿಯುವ ಪ್ರಯತ್ನ ಮಾಡುವರು. ಕೆಟ್ಟದೆಂದು ಸಿದ್ಧವಾಗುವವರೆಗೆ ಒಳ್ಳೆಯದೆಂದು ಭಾವಿಸುವುದು ಕೆಲವು ದೇಶಗಳ ದೃಷ್ಟಿ. ಮತ್ತೆ ಕೆಲವಲ್ಲಿ ಕೆಟ್ಟದೆಂದು ಭಾವಿಸಿ, ಒಳ್ಳೆಯದೆಂದು ಸಿದ್ಧಪಡಿಸಿಕೊಳ್ಳಲು ಅವಕಾಶ ಕೊಡುವರು. ಭಾರತದ ವಿಮಾ ಪ್ರಪಂಚದಲ್ಲಾದರೋ ಹುಟ್ಟುತ್ತಲೇ ಕೆಟ್ಟದೆಂದು ಗಣಿಸುವುದಷ್ಟೇ ಅಲ್ಲದೆ, ಒಳ್ಳೆಯದೆಂದು ತೋರಿಸಿಕೊಳ್ಳಲೂ ಅವಕಾಶ ಕೊಡರು. ಭಾರತೀಯ ವಿಮಾ ಸಂಸ್ಥೆಗಳ ವಿಷಯದಲ್ಲಿ ಜನತೆಯ ಚಿತ್ರವೃತ್ತಿಯು ವ್ಯತ್ಯಾಸವಾಗಬೇಕಾದುದು ಅವಶ್ಯಕವಾಗಿದೆ. ಸ್ವಾರ್ಥಾಭಿಲಾಷೆಯಿಂದ ಸುಳ್ಳುಸುದ್ದಿ ಹರಡುವವರು ವಿಮಾ ಪ್ರಪಂಚದಲ್ಲಿಯೇ ಏಕೆ, ಎಲ್ಲೆಡೆಗಳಲ್ಲಿಯೂ ಇದ್ದಾರೆ. ಜನರು ಇಂಥವರ ಕೃತ್ರಿಮ ಸುದ್ದಿಗಳಿಗೆ ಮರುಳಾಗದೆ ಸ್ವತಃ ವಿವೇಚಿಸಿ ನಿರ್ಧರಿಸಬೇಕು. ಭಾರತಮಾತೆಯ ಕೀರ್ತಿಯು ಬೆಳೆಯಬೇಕಾದರೆ ಸಾರ್ವಜನಿಕರ ಚಿತ್ತವೃತ್ತಿಯು ಹೆಚ್ಚು ವಿಶಾಲವೂ ಉದಾರವೂ ಆಗಬೇಕು ಮತ್ತು ಅವಳ ಪುತ್ರರ ಆಶಾಪಾಶಗಳನ್ನು ಮೊಳಕೆಯಲ್ಲಿಯೇ ಚಿವುಟದಿರಬೇಕು.

ಹಿಂದೂಸ್ಥಾನ್ ಕೋ-ಆಪರೇಟಿವ್ ಸೊಸೈಟಿಯ ಅಪ್ರತಿಮ ಪ್ರಗತಿಯು ಮಾತೃಭೂಮಿಯ ಹಿತಚಿಂತನೆಯಲ್ಲಿಯೇ ತಲ್ಲೀನರಾದ ಭಾರತೀಯರೆಲ್ಲರಿಗೂ ಹೆಮ್ಮೆಯ ವಿಚಾರವಾಗಿದೆ. ಹಿಂದೂಸ್ಥಾನದ ಈ ಮಹಾವಿಜಯದಿಂದ, ಭಾರತೀಯರು ಜವಾಬ್ದಾರಿಗೆ ಅನರ್ಹರೆಂದೆನ್ನುವ ಮೋರೆ ತಗ್ಗಿಸುವಂತಾಗಿದೆ. ಸ್ವದೇಶಿ ಚಳುವಳಿಯ ಪ್ರಾರಂಭಕಾಲದಲ್ಲಿ ಜನ್ಮತಳೆದ ಈ ಸಂಸ್ಥೆಯು ಸ್ವದೇಶೀ ಉದ್ಯಮಗಳ ಏಳ್ಗೆಗಾಗಿ ವಿಶೇಷ ಶ್ರಮವಹಿಸಿದೆ. ವಿದೇಶೀ ಇನ್ಶ್ಯೂರೆನ್ಸ್ ಕಂಪೆನಿಗಳು ಪ್ರೀಮಿಯಂ ಮುಖೇನ ಪಡೆದ ಲಾಭವನ್ನು ವಿದೇಶೀ ವ್ಯಾಪಾರ ಉದ್ಯಮಗಳ ಕೈಗಾರಿಕೆಗಳ ಅಭಿವೃದ್ಧಿಗಾಗಿ ಉಪಯೋಗಿಸಿ ಇಂಡಿಯದ ಆರ್ಥಿಕ ಜೀವನದ ರಕ್ತವನ್ನು ಹೀರಿಬಿಡುತ್ತಿದ್ದುವು. ಭಾರತೀಯರು ತಮ್ಮ ಬಂಡವಾಳವನ್ನು ಭಾರತೀಯ ಸಂಸ್ಥೆಗಳಲ್ಲಿ ಹಾಕುವಂತಾಗುವುದಕ್ಕೆ ಬಹುಮಟ್ಟಿಗೆ ಹಿಂದೂಸ್ಥಾನ್ ಸೊಸೈಟಿಯು ಕಾರಣವಾಗಿದೆ.

ಈ ಸಂಸ್ಥೆಯಲ್ಲಿ ಕೆಲಸಗಾರರಾಗಿದ್ದು ಶಿಕ್ಷಣಪಡೆದವರನೇಕರು ಹಲವು ವಿಮಾ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ತಮ್ಮ ಕೆಲಸಗಾರರಿಗೆ ಉತ್ತಮ ಶಿಕ್ಷಣ ಕೊಡುವುದು ಈ ಸಂಸ್ಥೆಯ ಉದ್ದೇಶವಾಗಿರುವುದು ಶ್ಲಾಘನೀಯ.

ವಾದುದು. ಭಾರತೀಯರ ಆಡಳಿತದಲ್ಲಿರುವ ಕಂಪೆನಿಗಳಲ್ಲಿ ಮಾತ್ರ ಇಂತಹ ಶಿಕ್ಷಣ ದೊರೆಯುವುದು ಸಾಧ್ಯವೇ ಹೊರತು ಬೇರೆ ಕಂಪೆನಿಗಳಲ್ಲಿ ದೊರೆಯಲಾರದು.

ಹಿಂದೂಸ್ಥಾನ್ ಕೋ-ಆಪರೇಟಿವ್ ಇನ್ಷ್ಯೂರೆನ್ಸ್ ಸೊಸೈಟಿಯ ಕೇಂದ್ರ ಸ್ಥಳವು ಬಂಗಾಳ ಆಗಿದ್ದಾಗ್ಯೂ, ಇತರ ಪ್ರಾಂತ್ಯಗಳು ತಮ್ಮ ಸಹಾನುಭೂತಿ ಸಹಾಯ ಒದಗಿಸುವುದರಲ್ಲಿ ಹಿಂದುಳಿದಿಲ್ಲ. ಪರಿಣಾಮವಾಗಿ ಇಂದು ಬೊಂಬಾಯಿ ಮದ್ರಾಸ್, ದೆಹಲಿ, ಪಾಟ್ನಾ, ಲಾಹೋರುಗಳಲ್ಲಿ ಇದರ ಶಾಖೆಗಳಿವೆ. ಇಂಡಿಯದ ಎಲ್ಲ ಪ್ರದೇಶಗಳಲ್ಲಿಯೂ ಅಲ್ಲದೆ ಬ್ರಿಟಿಷ್ ಈಸ್ಟ್ ಆಫ್ರಿಕಾ ಈರಾಕ್, ಬರ್ಮ ಮತ್ತು ಸಿಲೋನ್‌ಗಳಲ್ಲಿ ಈ ಸಂಸ್ಥೆಯ ಪ್ರತಿನಿಧಿಗಳಿದ್ದಾರೆ. ಮೊದಲಿನಿಂದಲೂ ರಾಜಕೀಯ ವಾಣಿಜ್ಯ, ಶಾಸನ ಭೂಮಿಕೆಯಲ್ಲಿ ಪ್ರವೀಣರೆನಿಸಿದ ಮುಖಂಡರುಗಳೇ ಈ ಸಂಸ್ಥೆಯ ಡೈರೆಕ್ಟರುಗಳಾಗಿದ್ದಾರೆ, ದಿವಂಗತ ದೇಶಬಂಧು ಚಿತ್ತರಂಜನದಾಸ್, ಡಾ|| ಬಿದನ ಚಂದ್ರ ರಾಯ್, ಡಾ|| ಪ್ರಾಣಕ್ರಿಸ್ತೆ ಆಚಾರ್ಯ ಮತ್ತು ಇತರ ಇತರ ಪ್ರಮುಖರು ಈ ಸಂಸ್ಥೆಯ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದ್ದರು.

ಅತ್ಯುತ್ತಮವಾದ ಭಾರತೀಯ ವಿಮಾ ಕಂಪೆನಿಗಳಲ್ಲಿ ಹಿಂದೂಸ್ಥಾನ್ ಕೋ-ಆಪರೇಟಿವ್ ಇನ್ಷ್ಯೂರೆನ್ಸ್ ಸೊಸೈಟಿಯು ಒಂದು. ಅದು ಕೊಡುತ್ತಿರುವ ಉತ್ತಮ ದರದ ಲಾಭ, ವರ್ಷೆ ವರ್ಷೇ ಮಾಡುತ್ತಿರುವ ಉಳಿತಾಯ, ಶೇಖರಿಸಿದ ಅಧಿಕನಿಧಿ ಇವು ಅದಕ್ಕೊಂದು ಶ್ರೇಷ್ಠ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಅದರ ಆರ್ಥಿಕ ಸ್ಥಿತಿಯು ಅತ್ಯುತ್ತಮವಾಗಿದೆ.

ಸುಪ್ರಸಿದ್ಧ ಆಂಗ್ಲೇಯ ಆಕ್ಚುಯರಿಗಳಾದ ಮಿ|| ಲೂಯಿಸ್ ಕ್ಲೆರ್ಟರವರು ೧೯೩೨ನೇ ಏಪ್ರಿಲ್ ತಿಂಗಳಲ್ಲಿ ನಡಿಸಿದ ಲೆಕ್ಕದ ವಿಮರ್ಶೆಯಿಂದ ೧೮,೯೭,೦೪೦ ರೂ. ಗಳು ಉಳಿತಾಯವಾಗಿರುವುದಾಗಿ ತಿಳಿದಿದೆ. ಈ ಸಂಸ್ಥೆಯು ಉಂಬಳಿ ವಿಮೆಯ ೧೦೦೦ ರೂ. ಗಳ ಪಾಲಿಸಿಗೆ ೨೩ ರೂ. ಬೋನಸ್ಸು ಹಂಚಿತು. ಮತ್ತು ಜೀವಾವಧಿ ವಿಮೆಯ ಸಾವಿರ ರೂಪಾಯಿಗಳ ಪಾಲಿಸಿಗೆ ೨೦ ರೂಪಾಯಿ ಬೋನಸ್ಸು ಹಂಚಿತು.

೧೯೩೫ನೇ ಏಪ್ರಿಲ್ ೩೦ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದ ವರದಿಯಲ್ಲಿ ಸೂಚಿಸಿರುವಂತೆ ವರ್ಷದಲ್ಲಿ ಕಂಪೆನಿಗೆ ೧೯,೮೬೧ ವಿಮಾ ದರಖಾಸ್ತುಗಳು ಬಂದಿವೆ, ೨,೫೨,೩೨,೫೦೦ ರೂ. ಗಳ ಬೆಲೆಯ ವಿಮಾಪತ್ರಗಳನ್ನು ಕೊಟ್ಟಿದ್ದಾರೆ, ಅದರಲ್ಲಿ ಪುನರ್ವಿಮಾ ಮೊಬಲಗು ೬೦ ಸಾವಿರ ರೂ ಗಳು. ಪುನರ್ವಿಮೆಯ ಮೊಬಲಗನ್ನುಳಿದು ಈ ವರ್ಷ ಹೊಸದಾಗಿ ಅಂಗೀಕರಿಸಿದ ಪಾಲಿಸಿಗಳಿಂದ ಬಂದ ಪ್ರೀಮಿಯಂ ಮೊಬಲಗು ೧೦,೨೬,೩೨೦ ರೂ. ಗಳು. ವರ್ಷದ ಕೊನೆಯಲ್ಲಿ ಜಾರಿಯಲ್ಲಿದ್ದ ಪಾಲಿಸಿಗಳ ಸಂಖ್ಯೆ ೬೪,೬೮೩, ಅವುಗಳ ಒಟ್ಟು ವಾಗ್ದಾನ ಮೊಬಲಗು ೧೦, ೬೩.೪೯, ೪೭೫ ರೂಗಳು. ಕಳೆದ ವರ್ಷದ ಕೊನೆಯಲ್ಲಿ ೧,೫೯,೩೭,೮೯ ರೂ ಗಳಷ್ಟು ಇದ್ದ ವಿಮಾನಿಧಿಯು ಈ ವರ್ಷ ೧,೭೪,೦೫,೮೮೦ ರೂ. ಗಳಿಗೆ ಹೆಚ್ಚಿದೆ.



NALINIRJAN SARAKAR Esq.,
General Manager,
Hindusthan Co-operative Insurance Society, Ltd.

ಶ್ರೀ|| ನಳಿನಿರಂಜನ ಸರ್ಕಾರ್, ಅವರು
ಜನರಲ್ ಮ್ಯಾನೇಜರ್, "ಹಿಂದೂಸ್ಥಾನ್ ಕೋ-ಆಪರೇಟಿವ್ ಇನ್ಷ್ಯೂರೆನ್ಸ್ ಸೊಸೈಟಿ ಲಿಮಿಟೆಡ್"

ವರ್ಷದ ಕೊನೆಯಲ್ಲಿ ವಿಮಾ ನಿಧಿಯು ೧,೭೪,೦೫,೮೮೫-೧೧-೭ ರೂ. ಗಳಿತ್ತು. ಅಂದರೆ ಈ ವರ್ಷದಲ್ಲಿ ಮೊದಲಿಗಿಂತಲೂ ಅದು ೨೩,೬೫,೦೫೧ ರೂ. ಗಳು ಹೆಚ್ಚಿದ್ದಿತು. ಲೆಕ್ಕದಲ್ಲಿ ತೃಪ್ತಿಕರವಾದ ವಿಷಯಗಳಲ್ಲಿ ಇದೊಂದು. ಅಭಿನಂದನಾರ್ಹವಾದ ಮತ್ತೊಂದು ವಿಚಾರ

ವೆಂದರೆ ಸೊಸೈಟಿಯ ಖರ್ಚಿನ ದಾಮಾಷಾ ಸಂಖ್ಯೆಯು ಕಡಮೆಯಾಗಿರುವುದು. ೧೯೩೩-೩೪ರಲ್ಲಿ ಒಟ್ಟು ಖರ್ಚು ಪ್ರೀಮಿಯಂ ಆದಾಯದ ಶೇಕಡ ೩೭.೪ ರಷ್ಟು ಇತ್ತು. ಅದು ೧೯೩೪-೩೫ ರಲ್ಲಿ ಶೇಕಡ ೩೬.೯ ರಷ್ಟಕ್ಕೆ ಇಳಿದಿದೆ. ಸೊಸೈಟಿಯು ಆದಷ್ಟುಮಟ್ಟಿಗೆ ಆಡಳಿತ ವೆಚ್ಚವನ್ನು ಕಡಮೆ ಮಾಡಲು ಬರುವ ವರ್ಷಗಳಲ್ಲಿಯೂ ಪ್ರಯತ್ನಿಸುವುದೆಂದು ನಂಬಿದ್ದೇವೆ.

ಲೆಕ್ಕದ ಪಟ್ಟಿಯಿಂದ ಕಂಪೆನಿಯ ಆಸ್ತಿಯು ೧,೯೮,೬೧,೩೬೯ ರೂ. ಗಳಷ್ಟಿರುವುದೆಂದು ತಿಳಿಯಬರುವುದು. ಕಳೆದವರ್ಷ ಇದು ೧,೭೩,೪೪,೯೧೦ ರೂ. ಗಳಿದ್ದಿತು.

### ಕಂಪೆನಿಯ ಆಸ್ತಿಯನ್ನು ಈ ರೀತಿಯಾಗಿ ವಿಭಾಗಿಸಿದೆ.

| | |
|---|---|
| ಆಧಾರದಮೇಲೆ ಸಾಲ ಕೊಟ್ಟಿರುವುದು | ೬೭,೮೬,೮೩೨-೧೪-೧ |
| ಸೊಸೈಟಿ ಪಾಲಿಸಿಗಳಮೇಲೆ ಸಾಲ. ಕೊಟ್ಟಿರುವುದು | ೧೮,೮೧,೮೦೫-೦-೦ |
| ಸ್ವಂತ ಜವಾಬ್ದಾರಿಗಳಮೇಲೆ ಸಾಲ ಕೊಟ್ಟಿರುವುದು | ೨೮,೬೩೨-೬-೯ |
| ಗವರ್ನಮೆಂಟ್ ಸೆಕ್ಯೂರಿಟಿ, ರೈಲ್ವೆ ಷೇರು ಮೊದಲಾದುವು | ೧೯,೫೫,೪೬೭-೧೦-೨ |
| ಇಂಡಿಯಾದಲ್ಲಿರುವ ಮನೆ ಮತ್ತು ಜಮೀನು ಆಸ್ತಿ | ೪೭,೪೭,೬೭೧-೬-೪ |
| ಬ್ಯಾಂಕುಗಳಿಗೂ, ಸಾಲ ಸಂಸ್ಥೆಗಳಿಗೂ | ೬,೨೪,೨೫೦-೦-೦ |
| ವಸೂಲಾಗಬೇಕಾದ ಪ್ರೀಮಿಯಂ, ಬಡ್ಡಿ ಮತ್ತು ಬಾಡಿಗೆ | ೧೪,೮೫,೩೯೭-೧೪-೬ |
| ನಗದು | ೧೬,೮೭,೧೮೭-೧-೪ |
| ಸಾಮಾನುಗಳು | ೧,೧೭,೮೯೮-೪-೫ |

| | |
|---|---|
| ಸಾಂಘಿಕ ನಿಧಿಗೆ ತೆಗೆದಿಟ್ಟಿರುವುದು | |
| ಏಜಂಟರುಗಳಿಗೆ ಕೊಟ್ಟಿರುವ ಮುಂಗಡ ಹಣ | ೩,೫೧,೦೦೦-೦-೦ |
| ಮತ್ತು ಚಿಲ್ಲರೆ ಸಾಲಗಾರರಿಗೆ ಕೊಟ್ಟಿರುವುದು | ೧,೯೨,೪೪೭-೬-೬ |
| ಒಟ್ಟು | ೧,೯೮,೬೧,೩೬೯-೦-೦ |

ಕಂಪೆನಿಯ ಹೊಣಗಾರಿಕೆಯು ಎಷ್ಟು ಹಿರಿದೆಂಬುದಕ್ಕೆ ಕೆಲವು ಅಂಕೆಗಳನಿಲ್ಲಿ ಕೊಡಲಾಗಿದೆ

| | |
|---|---|
| ಮರಣದಿಂದ ಒದಗಿದ ವಿಮಾ ಹಕ್ಕು ಹಣ | ೮,೩೦,೫೫೯-೧೬-೩ |
| ಅವಧಿ ಪೂರ್ಣವಾಗಿ ಒದಗಿದ ವಿಮಾ ಹಕ್ಕು ಹಣ | ೫,೩೧,೪೭೦-೧೩-೩ |

ಮೇಲ್ಕಂಡ ಅಂಕೆಗಳಿಂದ ಕಂಪೆನಿಯ ಆರ್ಥಿಕ ಸ್ಥಿತಿಯು ಎಷ್ಟು ಭದ್ರವಾದುದೆಂಬುದು ವ್ಯಕ್ತವಾದೀತು. ಇವರು ಕೈಯಲ್ಲಿ ನಗದಾಗಿ ಉಳಿಸಿಕೊಂಡಿರುವ ಕ್ಷಿ... ಹಣವನ್ನು ವರದಿಯ ಕಾಲದಿಂದೀಚೆಗೆ ಉಚಿತ ಮಾ... ಗಳಲ್ಲಿ ವಿನಿಯೋಗಿಸಿದ್ದಾರೆಂದು ಕೇಳುತ್ತೇವೆ.

ಹಿಂದೂಸ್ಥಾನಿನ ಈ ಮಹಾ ವಿಜಯವು ಇ... ಯದ ಎಲ್ಲ ವಿಮಾ ಕಂಪೆನಿಗಳಿಗೂ ಆದರ್ಶನೀಯ... ಗಿದೆ ಹಿರಿಯ ಕಂಪೆನಿಗಳು ಇದು ಅನುಸರಿಸಿ... ಮಾರ್ಗಗಳನ್ನನುಸರಿಸಿ ನಡೆಯಬಹುದು. ಕಿರಿಯ ಕಂ... ನಿಗಳು ಇದನ್ನು ತಮ್ಮ ಆದರ್ಶವಾಗಿಟ್ಟುಕೊಂಡು ... ರಂತೆ ಉನ್ನತಿ ಹೊಂದಲು ಪ್ರಯತ್ನಿಸಬಹುದು. ... ಸಂಸ್ಥೆಯ ಆಶ್ಚರ್ಯದ ಪ್ರಗತಿಯು ಜನತೆಗೆ ಸ್ವದೇಶಿ ಸಂಸ್ಥೆಗಳಲ್ಲಿರುವ ವಾತ್ಸಲ್ಯವನ್ನು ವ್ಯಕ್ತಗೊಳಿಸುವುದು. ಅವರ ಈ ವಾತ್ಸಲ್ಯವು ಚಿರಕಾಲ ಉಳಿದು ಈ ... ಸ್ವದೇಶೀ ಸಂಸ್ಥೆಯು ಇತೋಪ್ಯತಿಶಯವಾಗಿ ಬೆಳೆದು ... ಗಲೆಂದು ಹಾರೈಸುವೆವು.



# ಸರ್ ಲೈಫ್ ಅಷ್ಯೂರೆನ್ಸ್ ಕಂಪೆನಿ, ಕೆನಡ

## Sun Life Assurance Company of Canada

---

ಕೆನೆಡಾದ ಸರ್ ಲೈಫ್ ಅಷ್ಯೂರೆನ್ಸ್ ಕಂಪೆನಿಯು ಜಗತ್ತಿನ ಅತಿ ಪುರಾತನ ಕಂಪೆನಿಗಳಲ್ಲಿ ಒಂದು. ಅದು ಜಗತ್ತಿನ ಅತಿ ದೊಡ್ಡ ಕಂಪೆನಿಗಳಲ್ಲಿ ಒಂದು. ಸ್ಥಾಪಿತವಾಗಿ ೬೫ ವರ್ಷಗಳಾಯಿತು. ಇಂದು ಅದು ಸಂಯುಕ್ತ ಸಂಸ್ಥಾನ, ಗ್ರೇಟ್ ಬ್ರಿಟನ್ ಮತ್ತು ಕೆನಡಾ ಈ ಮೂರು ರಾಷ್ಟ್ರಗಳಲ್ಲಿ ಪ್ರಮುಖವಾಗಿ ಉದ್ಯಮ ನಡೆಸುತ್ತಿದೆ. ಭಾರತದಲ್ಲಿಯೂ ಈ ಮಹಾ ವೃಕ್ಷವು ಬಿಳಲು ಬಿಟ್ಟಿದೆ. ವಿಮಾ ಮಾತೆಯ ಸುಪುತ್ರರಲ್ಲಿ ಸರ್ ಲೈಫ್ ಅಷ್ಯೂರೆನ್ಸ್ ಕಂಪೆನಿಗೆ ಒಂದು ಶ್ರೇಷ್ಠ ಸ್ಥಾನವಿದೆಯೆಂದು ನಿರ್ಭೀತಿಯಿಂದ ಹೇಳಬಹುದು.

ಕೆನಡಾ ಸರ್ ಲೈಫ್ ಅಷ್ಯೂರೆನ್ಸ್ ಕಂಪೆನಿಯ ೬೫ನೇ ವಾರ್ಷಿಕ ವರದಿಯನ್ನು ಕಂಪೆನಿಯ ಅಧ್ಯಕ್ಷರೂ ಮ್ಯಾನೇಜಿಂಗ್ ಡೈರೆಕ್ಟರೂ ಆದ ಶ್ರೀ ಆರ್ಥರ್ ಬಿ. ವುಡ್ (Mr. Arthur B Wood) ರವರು ಪ್ರಕಟಿಸಿರುವರು. ಅದರಿಂದ ಉದ್ಯಮ ವ್ಯವಹಾರ ಪರಿಸ್ಥಿತಿಗಳಲ್ಲಿ ಸಾರ್ವತ್ರಿಕ ಅಭಿವೃದ್ಧಿಯ ಕುರುಹು ಕಾಣಬರುತ್ತಲಿದೆ.

ಜೀವವಿಮಾ ಕಂಪೆನಿಗಳ ವಾರ್ಷಿಕ ವರದಿಗಳು, ಅವುಗಳು ಉದ್ಯಮ ನಡೆಸುತ್ತಿರುವ ಪ್ರದೇಶಗಳ ಉದ್ಯಮ ಪರಿಸ್ಥಿತಿಯ ಗುಣಮಾಪಕ ಯಂತ್ರಗಳಿದ್ದಂತೆ. ಉದ್ಯಮ ಪರಿಸ್ಥಿತಿಯು ಉತ್ತಮವಿಲ್ಲದ ಕಾಲವನ್ನು ಇವು ನಿರ್ದೇಶಿಸುವವು. ಇವುಗಳಿಂದಲೇ ೧೯೩೩ರ ಲಾಗಾಯ್ತು ಸಾರ್ವತ್ರಿಕ ಅಭಿವೃದ್ಧಿಯ ಕುರುಹು ಸೂಚಕವಾಗುತ್ತಲಿದೆ.

೧೯೩೪ರ ಸಂಖ್ಯೆಗಳು ೧೯೩೩ ಸಂಖ್ಯೆಗಳಿಗಿಂತ ಅಭಿವೃದ್ಧಿಯನ್ನು ಸೂಚಿಸಿದಂತೆ, ೧೯೩೫ರ ಸರ್ ಲೈಫಿನ ಲೆಕ್ಕದ ಪಟ್ಟಿಯು ಕಳೆದ ವರ್ಷಕ್ಕೆ ಮೀರಿದ ಅಭಿವೃದ್ಧಿಯನ್ನು ಸೂಚಿಸುತ್ತಲಿದೆ.

ಕೆನಡಾದ ಸರ್ ಲೈಫ್ ಅಷ್ಯೂರೆನ್ಸ್ ಕಂಪೆನಿಯ ಆಸ್ತಿಯು ಅತ್ಯಧಿಕವಾದುದು. ೧೯೩೫ ರಲ್ಲಿ ಅದು ೪೧ ಮಿಲಿಯರ್ ಡಾಲರುಗಳಷ್ಟು ಹೆಚ್ಚಿದೆ. ಒಟ್ಟು ಇಂದಿನ ಅದರ ಆಸ್ತಿಯು ೭೦೭ ಮಿಲಿಯರ್ ಡಾಲರುಗಳಷ್ಟಿರುತ್ತದೆ.

ಬಾಂಡುಗಳ ಬೆಲೆಯು ೧೬೭ ಮಿಲಿಯರ್ ಡಾಲರುಗಳಿದ್ದುದು ೨೧೮ ಮಿಲಿಯರ್ ಡಾಲರುಗಳಿಗೆ ಹೆಚ್ಚಿದೆ. ಈಗದು ಆಸ್ತಿಯ ಶೇಕಡ ೩೦ ರಷ್ಟು ಭಾಗಕ್ಕೂ ಮೀರಿದೆ. ವರ್ಷದಲ್ಲಿ ಸೆಕ್ಯೂರಿಟಿಗಳ ಮಾರಾಟದಿಂದ ಬಂದ ಲಾಭವು ೫ ಮಿಲಿಯರ್ ಡಾಲರುಗಳಿಗೆ ಮೀರಿದೆ. ಬ್ಯಾಂಕುಗಳಲ್ಲಿದ್ದ ನಗದು ಹಣವು ಸುಮಾರು ಇಪ್ಪತ್ತೊಂದು ಮಿಲಿಯರ್ ಡಾಲರುಗಳಿತ್ತು. ೧೯೩೫ ರಲ್ಲಿ ಪಾಲಿಸಿಗಳಮೇಲೆ ಕೊಟ್ಟ ಸಾಲವು ಹೆಚ್ಚು ಪ್ರಮಾಣದಲ್ಲಿ ವಾಪಸು ಬಂದಿರುವುದು ಶುಭದಿನಗಳ ಸೂಚನೆಯಾಗಿದೆ. ಈ ರೀತಿ ವಾಪಸು ಬಂದ ಹಣವು ಕಂಪೆನಿಯ ಇತಿಹಾಸದಲ್ಲಿಯೇ ಅಧಿಕವಾದುದು. ಅದು ೧೯೩೪ರಲ್ಲಿ ಗಿಂತ ಶೇಕಡ ೨೪ ರಷ್ಟು ಹೆಚ್ಚು ಇತ್ತು. ಕಂಪೆನಿಯ ಬಂಡವಾಳ ವಿನಿಮಯದಿಂದ ಬಂದ ಆದಾಯವು ೧೯೩೪ ರಲ್ಲಿಗಿಂತ ಹೆಚ್ಚಿದೆ. ಅಲ್ಲದೆ ಆಡಳಿತ ಖರ್ಚು ಕಡಮೆಯಾಗಿದೆ. ಈ ರೀತಿ ಎಲ್ಲ ಬಗೆಯಲ್ಲಿಯೂ ೧೯೩೫ ರ ಫಲವು ಅತ್ಯುತ್ತಮವಾದುದಾಗಿಯೂ, ಭವಿಷ್ಯದಲ್ಲಿ ಹೆಚ್ಚು ಆಶಾಜನಕವಾಗಿಯೂ ಇದೆ.

ಮತ್ತೊಂದು ಪ್ರಗತಿಪರ ವಿಷಯವೆಂದರೆ ಸಾಂಘಿಕ ವಿಮಾ ಪದ್ಧತಿಯಲ್ಲಿ ಉದ್ಯಮ ಹೆಚ್ಚಿರುವುದು. ವಾಣಿಜ್ಯ ಮತ್ತು ಕೈಗಾರಿಕೋದ್ಯಮಗಳಲ್ಲಿ ತೊಡಗಿರುವವರ ಅನುಕೂಲಕ್ಕಾಗಿ ಈ ಪದ್ಧತಿಗಳನ್ನು ಏರ್ಪಡಿಸಿದೆ. ಸರ್ ಲೈಫ್ನ ಈ ಉದ್ಯಮವು ಈ ವರ್ಷ ಶೇಕಡ ೨೩ರಷ್ಟು ಹೆಚ್ಚಿದೆ.

ಕಂಪೆನಿಯು ಉದಯಿಸಿಇಂದಿಗೆ ೬೫ವರ್ಷಗಳು ಕಳೆದವು. ಅಂದಿನಿಂದಲೂ ಪಾಲಿಸಿದಾರರಿಗೂ ಅವರ ಬಾಧ್ಯಸ್ಥರಿಗೂ ಕಂಪೆನಿಯು ಕೊಟ್ಟಿರುವ ವಿಮಾ ಹಕ್ಕುಗಳು ೯೬೮ ಮಿಲಿಯರ್ ಡಾಲರುಗಳಿಗೆ ಮೀರುವುದು. ೧೯೩೫ ರಲ್ಲಿ ಕೊಟ್ಟ ವಿಮಾ ಹಕ್ಕುಗಳು ೮೦ ಮಿಲಿಯರ್ ಡಾಲರುಗಳಿಗೆ ಮೀರಿದೆ.

ಈ ವರ್ಷದಲ್ಲಿ ೨೯ಮಿಲಿಯರ್ನ ಡಾಲರುಗಳಿಗೆ ಮಾರಿ ದಷ್ಟು ಹೊಸ ಉದ್ಯಮವನ್ನು ಪಡೆದಿದ್ದಾರೆ. ಇಂದು ಪ್ರಚುರದಲ್ಲಿರುವ ವಿಮಾ ಪಾಲಿಸಿಗಳ ಒಟ್ಟು ಮೊತ್ತವು ೨ ಬಿಲಿಯನ್ ೭೦೦ ಮಿಲಿಯನ್ ಡಾಲರುಗಳಿಗೆ ಮಾರಿದೆ. ವರ್ಷದ ಒಟ್ಟು ಆದಾಯವು ೧೫೩ ಮಿಲಿಯರ್ನ ಡಾಲರು ಗಳಿಗೆ ಮಾರಿದುದಾಗಿದೆ. ಇದು ಕಳೆದ ವರ್ಷಕ್ಕಿಂತ ಕಡಮೆಯಿದೆ. ಆದರೂ ಕಂಪೆನಿಯು ಕೊಡಬೇಕಾಗಿ ಬಂದ ಹಣವು ಕಡಮೆ ಬಿದ್ದುದರಿಂದ ೧೯೩೫ರಲ್ಲಿ ೪೭ ಮಿಲಿಯರ್ನ ಡಾಲರುಗಳ ನಿವ್ವಳ ಉಳಿತಾಯವಾಯಿತು ಇದು ೧೯೩೪ರಲ್ಲಿ ೪೪ ಮಿಲಿಯರ್ನ ಡಾಲರ ಗಳು ಮಾತ್ರ ವಿತ್ತು. ೧೯೩೪ರ ಫಲವು ತೃಪ್ತಿಕರವಾಗಿಯೇ ಇತ್ತು. ೧೯೩೫ರಲ್ಲಿ ಅದು ಇನ್ನೂ ಉತ್ತಮಗೊಂಡಿದೆ ಕಂಪೆನಿಯು ಈ ಉಳಿತಾಯವನ್ನು ಸೆಕ್ಯೂರಿಟಿಗಳ ಖರ್ಚು ವೆಚ್ಚವನ್ನು ಕಡಮೆ ಹಿಡಿದು ಬೆಲೆ ಕಟ್ಟುವುದಕ್ಕಾಗಿ ಉಪಯೋಗಿಸ್ಸಿ ತಮ್ಮೀ ಧೋರಣದಿಂದ ವಿನಿಯುವು ಬಂಡವಾಳದ ಮತ್ತು ರಿಸರ್ವ್‌ಗಳ ಭದ್ರತೆಯನ್ನು ಕಾಯುತ್ತಿದ್ದಾರೆ. ಈಗಿನ ಕಾಲದಲ್ಲಿ ಅಧಿಕ ಬಡ್ಡಿ ಬರುವಂತೆ ಬಂಡವಾಳವನ್ನು ಸುರ ಕ್ಷಿತ ಮಾರ್ಗದಲ್ಲಿ ವಿನಿಮಯಿಸುವುದು ಕಠಿಣವಿದೆ. ಇಂದಿನ ತಗ್ಗಿದ ಬಡ್ಡಿ ದರವು ಇನ್ನೂ ಕೆಲ ಕಾಲವಿದ್ದು ಉದ್ಯಮ ವ್ಯವಹಾರವು ಹೆಚ್ಚು ಹೆಚ್ಚು ಚೇತನ ಪಡೆದಂತೆ ಇದೂ ಕಾಲಕ್ರಮೇಣ ಹೆಚ್ಚುತ್ತ ನಡೆವುದೆಂದು ಶ್ರೀ ವುಡ್ವರ ವರು ನಿರೀಕ್ಷಿಸುತ್ತಾರೆ. ಇಷ್ಟೆಲ್ಲಾ ತೊಂದರೆಗಳಿದ್ದಾಗ್ಯೂ ಸರ್‌ಲೈಫ್ ತನ್ನ ಬಡ್ಡಿ ದರವು ಕಡಮೆಯಾಗದಂತೆ ನೋಡಿ ಕೊಂಡಿರುವುದಷ್ಟೇ ಅಲ್ಲದೆ ೧೯೩೪ರಲ್ಲಿಗಿಂತ ಸ್ವಲ್ಪ ಹೆಚ್ಚು ವಂತೆ ಕಾರ್ಯ ನಡೆಸಿದೆ.

ಮೇಲೆ ವಿವರಿಸಿದುದನ್ನು ಈ ಕೆಳಗೆ ಸಂಕ್ಷಿಪ್ತವಾ[illegible] ರೂ. ಗಳಲ್ಲಿ ಕಾಣಿಸಿದೆ

| | | |
|---|---|---|
| ಪ್ರಚುರದಲ್ಲಿರುವ ಉದ್ಯಮ ೧೯೩೫ನೇ ಡಿಸೆಂಬರ್ ೩೧ನೇ ತಾ\|\| | ರೂ. | ೭,೪೯,೮೫,೩೦,[illegible] |
| ಹೊಸ ಉದ್ಯಮ | ರೂ. | ೬೦,೦೩,೦೫,[illegible] |
| ಉತ್ಪತ್ತಿ (ರೆವಿನ್ಯೂ) | ರೂ. | ೪೨,೨೧,೮೬,[illegible] |
| ಖರ್ಚು (ಆಡಳಿತ) | ರೂ. | ೩೧,೮೨,೪೫,[illegible] |
| ಉಳಿತಾಯು | ರೂ. | ೧೦,೩೯,೩೭,[illegible] |
| ಪಾಲಿಸಿದಾರರಿಗೂ ಬಾಧ್ಯಸ್ಥರಿಗೂ ಕೊಟ್ಟುದು:೧೯೩೫ರಲ್ಲಿ | ರೂ. | ೨೨,೧೯,೩೩,[illegible] |
| ಆರಂಭಿಸಿದಂದಿನಿಂದ | ರೂ. | ೨,೬೭,೩೭,೮೫,[illegible] |
| ಆಸ್ತಿ | ರೂ. | ೧,೯೩,೭೧,[illegible] |

ಸರ್‌ಲೈಫ್‌ನ ಆರ್ಥಿಕ ಪ್ರಗತಿಯು ಸರ್ವ [illegible] ದಿಂದಲೂ ತೃಪ್ತಿಕರವಾದುದು. ಆದರ ಅಂಕೆ ಅಂಶಗ[illegible] ಜೀವವಿಮೆಯು ಜಗತ್ತಿನಲ್ಲಿಂದು ಎಷ್ಟು ಅಗಾಧ ಸ್ಥ[illegible] ವನ್ನು ತಳೆದಿದೆಯೆಂಬುದು ವ್ಯಕ್ತವಾಗುವುದು. [illegible] ತರ ಜನರು, ಮಾನವನ ಸಾಹಸದ ಇತಿಹಾಸದಲ್ಲಿ [illegible] ಶ್ರೇಷ್ಠವಾದೀ ಸಹಕಾರ ಚಳುವಳಿಯಲ್ಲಿ ಭಾಗವಹಿ[illegible] ಹೆಪಡೆಯಲು ಆಶ್ರಯವಾಗಿರುವುದು ಈ ಸಂಸ್ಥೆಯ [illegible] ವವು. ಮಾನವ ವರ್ಗದ ಹಿತಸಾಧನೆಗಾಗಿ [illegible] ಸಂಸ್ಥೆಗಳು ಅನೇಕವು ಬೇಕು. ಅದು ಚಿರಕಾಲ [illegible] ಮಾನವರ ಶ್ರೇಯಸ್ಸಿಗಾಗಿ ದುಡಿಯಲೆಂಬುದು [illegible] ಆಶಯುವು.



# ಜನರಲ್ ಅಷ್ಯೂರೆನ್ಸ್ ಸೊಸೈಟಿ, ಲಿಮಿಟೆಡ್, ಅಜ್ಮೀರ್.

## General Assurance Society, Limited, Ajmer.

---

ಭಾರತೀಯ ವಿಮಾ ಇತಿಹಾಸದಲ್ಲಿ ಅಜ್ಮೀರಿನ ಜನರಲ್ ಅಷ್ಯೂರೆನ್ಸ್ ಸೊಸೈಟಿ ಲಿಮಿಟೆಡ್‌ನ ಪ್ರಗತಿಯು ಪ್ರಶಂಶನೀಯವಾದವುಗಳಲ್ಲೊಂದು. ೧೯೦೭ ನೇ ಇಸವಿಯಲ್ಲಿ ಶ್ರೀ. ಪಿ. ಡಿ. ಭಾರ್ಗೋವಾರವರು (Mr. P. D. Bhargova) ರವರು, ಅಂದು ತಮಗೆ ದೊರೆತ ಅಲ್ಪ ಸೌಲಭ್ಯಗಳಿಂದಲೇ ಜನರಲ್ ಅಷ್ಯೂರೆನ್ಸ್ ಸೊಸೈಟಿಯನ್ನು ಸ್ಥಾಪಿಸುವ ಸಾಹಸ ಮಾಡಿದರು. ಸಂಸ್ಥೆಯು ಅಂದಿನಿಂದಲೂ ಏಕಪ್ರಕಾರವಾಗಿ ಪ್ರಗತಿಹೊಂದುತ್ತಾ ಇಂದು ಭಾರತ ಪ್ರಮುಖ ಕಂಪೆನಿಗಳ ಪ್ರಥಮದರ್ಜೆಯಲ್ಲಿ ಸೇರಿದೆ. ಅಲ್ಪವಾಗಿ ಆರಂಭಿಸಿ ಹಿರಿದಾಗಿ ಬೆಳೆದ ಈ ಕಂಪೆನಿಯ ಪ್ರಗತಿಯು ಆದರ್ಶನೀಯವಾದುದು. ಪ್ರಥಮ ವರ್ಷದ ಅಂತ್ಯದಲ್ಲಿ ಇದು ಸಾಧಿಸಿದ್ದ ಉದ್ಯಮ ೨೪,೦೦೦ ರೂ.ಗಳು. ಗಳಿಸಿದ್ದ ವಿಮಾನಿಧಿ ೨೦೦ ರೂ.ಗಳು. ಆದರೆ ಇಂದು ಪ್ರಕುರದಲ್ಲಿರುವ ಈಸಂಸ್ಥೆಯ ಉದ್ಯಮವು ೩,೦೦೦,೦೦,೦೦೦ ರೂ. ಗಳನ್ನು ಮೀರಿದೆ. ಗಳಿಸಿರುವ ವಿಮಾನಿಧಿಯು ೭೦,೦೦,೦೦೦ ರೂ. ಗಳನ್ನು ಮೀರಿದೆ.



ಜನರಲ್ ಅಷ್ಯೂರೆನ್ಸ್ ಬಿಲ್ಡಿಂಗ್ಸ್, ಅಜ್ಮೀರ್.

GENERAL ASSURANCE BUILDINGS AJMER

ವರ್ಷೇ ವರ್ಷೇ ಸಂಸ್ಥೆಯ ವಿಮಾದಾರರ ಸಂಖ್ಯೆಯು ಹೆಚ್ಚುತ್ತಿದ್ದುದು, ಸಂಸ್ಥೆ ಆಡಳಿತನಿರ್ವಾಹಕರಲ್ಲಿ ಸಾರ್ವಜನಿಕರಿಗಿದ್ದ ನಂಬಿಕೆಯನ್ನು ವ್ಯಕ್ತಗೊಳಿಸುತ್ತದೆ. ಇವರು ಮಿತವ್ಯಯ ಕಾರ್ಯದಕ್ಷತೆಯನ್ನು ಏಕಕಾಲದಲ್ಲಿ ಪ್ರದರ್ಶಿಸಿ ಜನತೆಯು ಆದರಕ್ಕೆ ಪಾತ್ರರಾದರು ಆಗಾಗ್ಗೆ ನಡೆದಿರುವ ಲೆಕ್ಕಾಚಾರದ ವಿಮರ್ಶೆಯಿಂದ ಸೊಸೈಟಿಯ ಆರ್ಥಿಕ ಸ್ಥಿತಿಯು ಎಷ್ಟು ಭದ್ರವಾದುದೆಂಬುದು ವಿದಿತವಾಗಿದೆ. ಸೊಸೈಟಿಯು ಎಂಡೊಮೆಂಟ್ ಪಾಲಿಸಿಗಳ ಮೇಲೆ ಸಾವಿರ ರೂ.ಗಳಿಗೆ ಒಂದು ವರ್ಷಕ್ಕೆ ೨೦ ರೂ.ಗಳ ಬೋನಸ್ಸನ್ನು ಜೀವಾವಧಿ ಪಾಲಿಸಿಗಳಮೇಲೆ ಸಾವಿರ ರೂ.ಗಳಿಗೆ ಒಂದು ವರ್ಷಕ್ಕೆ ೨೫ ರೂ.ಗಳ ಬೋನಸ್ಸನ್ನೂ ಹಂಚಿದೆ. ಭಾರತೀಯ ವಿಮಾ ಕಂಪೆನಿಗಳು ಹಂಚಿರುವ ಬೋನಸ್ಸುಗಳಲ್ಲಿ ಇದೇ ಅತ್ಯಧಿಕವಾದುದು. ಸೊಸೈಟಿಯ ನಿಧಿಯು ಸುಮಾರು ೭೦ ಲಕ್ಷ ರೂ ಗಳಿದೆ. ಆದರ ಆರ್ಥಿಕಭದ್ರತೆಯನ್ನು ಯಾವ ಒರೆಗಲ್ಲಿನಮೇಲಿಟ್ಟು ವಿಮರ್ಶಿಸಿದರೂ ಕುಂದುತೋರದು.

ಕಳೆದ ನಾಲ್ಕುವರ್ಷಗಳಲ್ಲಿ ಸೊಸೈಟಿಯು ಪಡೆದಿರುವ ತೀವ್ರಪ್ರಗತಿಯು ಈ ಕೆಳಗೆ ಕೊಟ್ಟಿರುವ ಹೋಲಿಕೆಪಟ್ಟಿಯಿಂದ ವ್ಯಕ್ತವಾಗುವುದು.

| ವರ್ಷ | ಹೊಸ ಉದ್ಯಮ ರೂ. | ವಿಮಾನಿಧಿ ರೂ. | ವಿನಿಮಯಿಸಿದ ಬಂಡವಾಳ ನಿಧಿ |
|---|---|---|---|
| ೧೯೩೧ | ೩೧,೬೬,೫೦೦ | ೩೪,೩೬,೫೭೬ | ೪೭,೦೭,೯೭೮ |
| ೧೯೩೨ | ೩೫,೩೨,೨೫೦ | ೪೦,೨೨,೯೯೬ | ೪೮,೭೩,೬೨೮ |
| ೧೯೩೩ | ೪೭,೭೬,೦೦೦ | ೫೧,೪೧,೯೧೭ | ೫೮,೨೮,೮೪೨ |
| ೧೯೩೪ | ೫೨,೧೨,೭೫೦ | ೫೫,೯೨,೨೩೩ | ೬೪,೦೦,೮೭೯ |

ಪ್ರಚುರದಲ್ಲಿರುವ ಸಾಮಾನ್ಯ ಪದ್ಧತಿಗಳಲ್ಲದೆ ಸೊಸೈಟಿಯು ವೈಯಕ್ತಿಕ ಆವಶ್ಯಕತೆಗಳನ್ನು ತೃಪ್ತಿಗೊಳಿಸುವ, ಜೋಡಿವಿಮೆ, ಎಲ್ಲಾ ವೈವಿಧ್ಯತೆಯ ಕುಟುಂಬ ವಿಮೆ, ಈಕ್ವಿಟಬಲ್ ಜೀವಾವಧಿವಿಮೆ ಮೊಧಲಾದ ನವೀನ ಪದ್ಧತಿಗಳನ್ನು ಅನುಸರಿಸಿರುವರು.



**Mr. P. D. Bhargova,**
Genaral Manager.
**ಶ್ರೀ|| ಪಿ. ಡಿ. ಭಾರ್ಗವಾ,**
ಜನರಲ್ ಮ್ಯಾನೇಜರು.

೧೯೩೪ ನೇ ಡಿಸೆಂಬರ್ ೩೧ ನೇ ತಾರೀಖಿಗೆ ಅಂತ್ಯವಾಗುವ ವರ್ಷದ ಸೊಸೈಟಿಯ ವಾರ್ಷಿಕವರದಿಯಿಂದ ಸಂಸ್ಥೆಯ ಆರ್ಥಿಕ ಭದ್ರತೆಯೂ, ಆಡಳಿತನಿರ್ವಾಹಕರ ಕಾರ್ಯದಕ್ಷತೆಯೂ ಎದ್ದು ಕಾಣುವುದು. ಈ ವರದಿಯ ಕಾಲದಲ್ಲಿ ಸೊಸೈಟಿಯು ೫೨,೧೨,೭೫೦ ರೂ.ಗಳ ಮೊತ್ತದ ೩೩೫೪ ಪಾಲಿಸಿಗಳ ಹೊಸ ಉದ್ಯಮವನ್ನು ಪಡೆಯಿತು. ಕಳೆದ ವರ್ಷಕ್ಕಿಂತ ಈ ವರ್ಷ ಹೊಸ ಉದ್ಯಮವು ೪,೩೬,೭೫೦ ರೂ.ಗಳಷ್ಟು ಹೆಚ್ಚಿತು. ಈ ಹೊಸ ಪಾಲಿಸಿಗಳ ಮೇಲಣ ವಾರ್ಷಿಕ ಪ್ರೀಮಿಯಂ ಹಣವು ೨,೬... ರೂ.ಗಳಾಗುವುದು ಮತ್ತು ಸೊಸೈಟಿಯ ಒಟ್ಟು ಪ್ರೀಮಿಯಂ ಆದಾಯವು ೧೩,೧೨,೯೦೦ ರೂ.ಗಳಾಗುವುದು.

೧೯೩೩ ನೇ ಡಿಸೆಂಬರ್ ೩೧ ನೇ ತಾರೀಖಿಗೆ ಮುಕ್ತಾಯವಾಗುವ ಮೂರುವರ್ಷ ಲೆಕ್ಕಾಚಾರದ ವಿಮರ್ಶೆಯನ್ನು ಸುಪ್ರಸಿದ್ಧ ಆಕ್ಚುಯರಿಗಳಾದ ಶ್ರೀ. ಜಿ. ಎಸ್. ಮರಾಠೆ (Mr G. ·S Marathey, M.A., A.I.A.) ಯವರು ನಡೆಸಿದರು. ಆ ಲೆಕ್ಕಾಚಾರದ ವಿಮರ್ಶೆಯಿಂದ ಸೊಸೈಟಿಗೆ ೬,೨೨,೮೬೩ ರೂ. ಉಳಿತಾಯವಾಗಿರುವುದು ವ್ಯಕ್ತವಾಯಿತು. ಈ ವಿಮರ್ಶಾಕಾಲಕ್ಕೆ ಮುಂಚಿತವಾಗಿ ಉಳಿತಾಯವಾಗುವುದೆಂಬ ಭರವಸೆಮೇಲೆ ಷೇರುದಾರರಿಗೆ ಕೊಟ್ಟ ಡಿವಿಡೆಂಡು ಮೊತ್ತವು ೪೭,೫೫೯ ರೂ. ಗಳಾಗುವುದು ಮತ್ತು ಪಾಲಿಸಿದಾರರಿಗೆ ಅದೇ ಕಾಲದಲ್ಲಿ ಕೊಟ್ಟ ಬೋನಸ್ಸು ಮೊತ್ತವು ೬,೭೩೮ ರೂ ಗಳಾಗುವುದು. ಇವೆರಡನ್ನು ಮೇಲ್ಕಂಡ ಉಳಿತಾಯಕ್ಕೆ ಸೇರಿಸಿದರೆ ಸೊಸೈಟಿಯ ಒಟ್ಟು ಉಳಿತಾಯವು ೬,೭೭,೧೬೦ ರೂ. ಗಳಾಗುವುವು. ಆಕ್ಚುಯರಿಗಳು ಜೀವವಿಮಾ ಮತ್ತು ಎಂಡೋಮೆಂಟ್ ಪಾಲಿಸಿಗಳ ಮೇಲೆ ಸಾವಿರ ರೂಪಾಯಿಗಳಿಗೆ ವರ್ಷಕ್ಕೆ ೨೫ ರೂ ಮತ್ತು ೨೦ ರೂ. ಅನುಕ್ರಮವಾಗಿ ಹಂಚಬಹುದೆಂದು ಸಲಹೆಕೊಟ್ಟರು.

ಸೊಸೈಟಿಯ ರಿನ್ಯೂವಲ್ ಖರ್ಚಿನ ದಾಮಾಷಾ ಸಂಖ್ಯೆಯು ಉತ್ತೇಜನಕರವಾಗಿದೆ. ಪ್ರಥಮ ವರ್ಷದಲ್ಲಿ ಪ್ರಥಮ ವರ್ಷದ ಪ್ರೀಮಿಯಂನಲ್ಲಿ ಶೇಕಡ ೧೦೦ ರಷ್ಟು ಖರ್ಚು ಬಿಟ್ಟು ಲೆಕ್ಕಮಾಡಿದರೆ ಸೊಸೈಟಿಯ ಖರ್ಚಿನ ದರವು ೧೯೩೧, ೧೯೩೨, ಮತ್ತು ೧೯೩೩ ರಲ್ಲಿ ಅನುಕ್ರಮವಾಗಿ ಶೇಕಡ ೧೫.೭ ೧೪.೭ ಮತ್ತು ೧೭.೦ ಬೀಳುವುದು. ಅಂದರೆ ಖರ್ಚಿನ ದಾಮಾಷಾ ಸಂಖ್ಯೆ ಶೇಕಡ ೧೫.೮ ಬೀಳುವುದು, ಅದರ ಹಿಂದಿನ ನಾಲ್ಕು ವರ್ಷಗಳ ದಾಮಾಷಾ ಸಂಖ್ಯೆಗೆ ಅಂದರೆ ಶೇಕಡ ೨೦.೨ಕ್ಕೆ ಹೋಲಿಸಿದರೆ ಸೊಸೈಟಿಯು ಆಡಳಿತ ಖರ್ಚನ್ನು ತಕ್ಕ ಮಟ್ಟಿಗೆ ತಗ್ಗಿಸಿ ಮಿತವ್ಯಯದಿಂದಲೇ ಮುಂದೆ ಸಾಗುತ್ತಿರುವುದು.

ಇಂದು, ಆಗ್ರಾ, ಬೆಂಗಳೂರು, ಬೊಂಬಾಯಿ, ಕಲ್ಕತ್ತಾ, ದೆಹಲಿ, ಹೈದರಾಬಾದ್, ಸಿಂಧ್ ಮತ್ತು



Mr. A. N. S. Iyengar,
Manager, Bangalore Branch.
ಶ್ರೀ|| ಎ. ಎನ್. ಎಸ್. ಅಯ್ಯಂಗಾರ್,
ಮ್ಯಾನೇಜರು, ಬೆಂಗಳೂರು ಶಾಖೆ.

ಮದ್ರಾಸ್‌ಗಳಲ್ಲಿ ಸೊಸೈಟಿಯ ಶಾಖೆಗಳಿವೆ. ಅಂಕೊಲಾ, ಡಕ್ಕಾ, ಹೈದರಾಬಾದ್ ಡಕ್ಕನ್, ಲಕ್ನೋ, ಪಾಟ್ನಾ ಮತ್ತು ಪೂನಾಗಳಲ್ಲಿ ಆರ್ಗನೈಜಿಂಗ್ ಕಾರ್ಯಾಲಯಗಳಿವೆ. ಅಲಹಾಬಾದ್, ಅಹಮದಾಬಾದ್, ಬಳ್ಳಾರಿ, ಕಲ್ಲಿಕೋಟೆ, ಹುಬ್ಲಿ, ಇಂಡೋರ್, ಜಬ್ಬಲ್‌ಪೂರ್, ಜೈಪೂರ್, ಕಾಸೂರ್, ಮಧುರಾ, ರಂಗೂನ್, ಶಿಕೊಹಾಬಾದ್ (ಮಧ್ಯ ಪ್ರಾಂತ್ಯ) ತಿರುಚನಾಪಲ್ಲಿ ಮತ್ತು ವೆಲ್ಲೂರುಗಳಲ್ಲಿ ಚೀಫ್ ಏಜನ್ಸಿ ಕಾರ್ಯಾಲಯಗಳಿವೆ

ಸಂಸ್ಥೆಯ ಸಂಸ್ಥಾಪಕರೂ, ಜನರಲ್ ಮ್ಯಾನೇಜರರೂ ಆದ ಶ್ರೀ ಪಿ ಡಿ. ಭಾರ್ಗವಾರವರ (Mr. P. D. Bhargova) ಸಮರ್ಥ ನೇತೃತ್ವದಲ್ಲಿ ಸಂಸ್ಥೆಯು ಮುಂದೆಯೂ ಏಕರೀತಿ ಪ್ರಗತಿ ಹೊಂದುವುದೆಂಬುದು ನಿಸ್ಸಂಶಯವು.

ಶ್ರೀ|| ಎ. ಎನ್. ಎಸ್. ಅಯ್ಯಂಗಾರ್ಯರವರು ಈ ಸಂಸ್ಥೆಯ ಬೆಂಗಳೂರಿನ ಶಾಖೆಯ ಮ್ಯಾನೇಜರರಾಗಿರುತ್ತಾರೆ. ಸಂಸ್ಥೆಯ ಏಳ್ಗೆಗಾಗಿ ಶ್ರಮವಹಿಸಿ ಕೆಲಸ ಮಾಡುತ್ತಿರುವರು. ಇಂತಹ ಶ್ರದ್ಧಾಯುತ ಸೇವಕರು ಸಂಸ್ಥೆಗೆ ದೊರೆತುದು ಸುಯೋಗವು. ಇವರ ನೇತೃತ್ವದಲ್ಲಿ ಕನ್ನಡ ನಾಡಿನಲ್ಲಿ ಸಂಸ್ಥೆಯಕೀರ್ತಿಯು ಬೆಳೆಯುವುದು—ಬೆಳೆದಿದೆ ಎಂಬುದು ನಿಸ್ಸಂಶಯವು.

# ಯುನೈಟೆಡ್ ಇಂಡಿಯಾ ಲೈಫ್ ಅಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್

## The United India Life Assurance Company Limited

---

ಮದರಾಸು ಆಧಿಪತ್ಯದಲ್ಲಿ ಹುಟ್ಟಿದ ಕಂಪನಿಗಳ ಲ್ಲಿ ಮೊದಲನೆಯದೆನಿಸಿಕೊಂಡು, ದಿನೇದಿನೇ ಅಭಿವೃದ್ಧಿ ಗಾಮಿಯಾಗಿರುವ "ಯುನೈಟೆಡ್ ಇಂಡಿಯಾ ಲೈಫ್ ಅಷ್ಯೂರೆನ್ಸ್ ಕಂಪೆನಿ" ಯ ಚರಿತ್ರೆಯು ಭಾರತೀಯ ವಿಮಾ ಇತಿಹಾಸದಲ್ಲಿ ಜ್ವಾಜ್ವಲ್ಯಮಾನವಾದ ಒಂದು ಪ್ರಕರಣವಾಗಿದೆ. ಈ ಪ್ರಕರಣವು ಭಾರತೀಯ ವಿಮಾ ಉದ್ಯೋಗದಲ್ಲಿ ಈಗಾಗಲೇ ತೊಡಗಿರುವವರಿಗೆ ತೊಡ ಗುತ್ತಿರುವವರಿಗೆ ಒಂದು ಬಗೆಯ ಆಸೆ, ಹೆಮ್ಮೆ, ಉತ್ಸಾಹ ಗಳನ್ನು ಹುಟ್ಟಿಸುವಂತಹುದಾಗಿದೆ ಎಂದರೆ ಅತಿಶಯೋಕ್ತಿ ಯಲ್ಲ. ಇಂದು ಅತ್ಯಂತ ಅಭಿವೃದ್ಧಿಯನ್ನು ಪಡೆದಿರುವ "ದೊಡ್ಡ ಕಂಪನಿ"ಗಳೆನಿಸಿಕೊಳ್ಳುವ ಕಂಪನಿಗಳ ಗುಂಪಿ ನಲ್ಲಿ ಒಂದು ಮುಖ್ಯಸ್ಥಾನವನ್ನು ಪಡೆದಿರುವ ಈ ಕಂಪ ನಿಯ ಪ್ರಾರಂಭವನ್ನೂ ಅದರ ಇಂದಿನ ಅಭಿವೃದ್ಧಿಯನ್ನೂ ತುಲನಾತ್ಮಕವಾಗಿ ನೋಡಿದರೆ ಯಾರಿಗಾದರೂ ಆಶ್ಚರ್ಯ ವಾಗದಿರದು.

೧೯೦೬ ನೆಯ ಸಂವತ್ಸರದಲ್ಲಿ ಈ ಕಂಪೆನಿಯನ್ನು ದಿವಂಗತ ವಿಜಯೇಂದ್ರರಾವ್ ಎಂಬುವರು ಸ್ಥಾಪಿಸಿದರು. ಕಂಪೆನಿಯು ಪ್ರಾರಂಭವಾದುದು ಕೇವಲ ೫ ಸಾವಿರ ರೂಪಾಯಿಗಳಿಗಿಂತಲೂ ಕಡಿಮೆಯಾದ ತೆತ್ತ ಬಂಡವಾಳ (Paid-up Capital) ದಿಂದ; ಆ ವರ್ಷ ನಡೆದ ಉದ್ಯೋಗವು ಬರಿಯ ೬,೭೫೦ ರೂಪಾಯಿಗಳದು ಮಾತ್ರ. ಆಮೇಲೆ ಕಂಪೆನಿಯು ತನ್ನ ಉದ್ಯೋಗವನ್ನು ಹೇಗೆ ವಿಸ್ತ ರಿಸಿಕೊಂಡು ಬಂದಿತೆಂದು ಮುಂದೆ ಕೊಡಲ್ಪಟ್ಟ ಅಂಕಿಗ ಳಿಂದ ವಿಶದವಾಗುತ್ತದೆ.



The Proposed Branch Office Buildings of United India Life Assurance Company, Ltd., at Bangalore.

ಯುನೈಟೆಡ್ ಇಂಡಿಯಾ ಲೈಫ್ ಅಷ್ಯೂರೆನ್ಸ್ ಕಂಪೆನಿಯವರು ಬೆಂಗಳೂರಿನಲ್ಲಿ ಕಟ್ಟಲಿರುವ ಭವನ

ಕಂಪೆನಿಯು ನಡೆಸಿದ ವಿಮಾ ಉದ್ಯೋಗ—

೧೯೦೭ರಲ್ಲಿ ಬರೀ ೭೭೫೦ ರೂ.

೧೯೧೧ರಲ್ಲಿ ಸುಮಾರು ೫ ಲಕ್ಷ ರೂ.

೧೯೧೭ರಲ್ಲಿ ಸುಮಾಗು ೨೦ ಲಕ್ಷ ೭೫ ಸಾವಿರ ರೂ.

೧೯[illegible]ರಲ್ಲಿ ಸುಮಾರು ೬೦ ಲಕ್ಷ ೩೦ ಸಾವಿರ ರೂ.

೧೯೨೮ರಲ್ಲಿ ಸುಮಾರು ೧ ಕೋಟಿ ೨೪ಲಕ್ಷ ೬೦ ಸಾವಿರ ರೂ. ೧೯೩೪ರ ಕೊನೆಯಲ್ಲಿ ಜಾರಿಯಲ್ಲಿದ್ದ ವಿಮಾ ಉದ್ಯೋಗದ ಮೊತ್ತವು ೨ ಕೋಟಿ ೯೬ ಲಕ್ಷದಷ್ಟು ಎಂದು ಹೇಳಿದರೆ ವಿಮಾ ಉದ್ಯೋಗದ ಗರ್ಭದಲ್ಲಡಗಿರುವ ಅತ್ಯದ್ಭುತವಾದ ಶಕ್ತಿಯೇನೆಂಬುದು ವ್ಯಕ್ತವಾಗುತ್ತದೆ.



M. K. SRINIVASAN Esq.
Managing Director.
ಶ್ರೀ|| ಎಂ. ಕೆ. ಶ್ರೀನಿವಾಸನ್,
ಮ್ಯಾನೇಜಿಂಗ್ ಡೈರೆಕ್ಟರು.

ಈ ಕಂಪನಿಯ ವ್ಯವಹಾರವು ೧೯೨೬ನೆಯ ಸಂವತ್ಸರದವರೆಗೂ ಬರಿಯ ಮದರಾಸು ಅಧಿಪತ್ಯಕ್ಕೇ ಸಂಬಂಧಿಸಿದ್ದು, ಅಲ್ಲಿಂದೀಚಿನ ಅಲ್ಪಾವಧಿಯಲ್ಲಿ ಕಂಪನಿಯು ತನ್ನ ಕಾರ್ಯವಿಸ್ತರಣವನ್ನು ಶೀಘ್ರವಾಗಿ ಮಾಡಿಕೊಂಡು ಬಂದು ಈ ಸಾಮಾನ್ಯವಾಗಿ ಭರತಖಂಡದಲ್ಲೆಲ್ಲಾ ವ್ಯಾಪಿಸಿ, ಅಖಿಲ ಭಾರತ ಸಂಸ್ಥೆಯಾಗಿ ಪರಿಣಮಿಸಿ, ಸಂಪೂರ್ಣ ಸ್ವದೇಶೀ ಸಂಸ್ಥೆಗಳೆನಿಸಿಕೊಳ್ಳುವ ಭಾರತೀಯ ವಿಮಾಕಂಪನಿಗಳಲ್ಲಿ ಅತ್ಯುತ್ತಮವಾದ ಒಂದು ಸ್ಥಾನವನ್ನು ಕಲ್ಪಿಸಿಕೊಂಡಿದೆ.

ಕಳೆದ ವರ್ಷದಲ್ಲಿ ಈ ಕಂಪೆನಿಯು ಮಾಡಿದ ವ್ಯಾಪಾರವನ್ನು ನಾವು ತಕ್ಕಮಟ್ಟಿಗೆ ಪರಿಶೀಲಿಸಲು ಈ ಕೆಳಗೆ ಕೊಟ್ಟ ಕೆಲವು ಅಂಕಿ-ಸಂಖ್ಯೆಗಳು ಬಹಳಮಟ್ಟಿಗೆ ಸಹಕಾರಿಯಾಗಬಲ್ಲುವು.

ಈ ವರುಷದಲ್ಲಿ ಕಂಪನಿಯಲ್ಲಿ ವಿಮೆಯಾದ ಹಣದ ಮೊತ್ತವು ಕಳೆದ ವರುಷದ ಉದ್ಯೋಗಕ್ಕಿಂತಲೂ ಸುಮಾರು ೧೩,೩೫,೦೦೦ ರೂ. ಗಳಿಗೆ ಮೇಲ್ಪಟ್ಟು ಕಂಪನಿಯ ಮೊತ್ತದ ಉದ್ಯೋಗದ ಚರಿತ್ರೆಯಲ್ಲಿ ಅತ್ಯುನ್ನತಸ್ಥಾನವನ್ನು ಪಡೆದಿರುತ್ತದೆ. ಕಳೆದ ವರುಷದ ವಾರ್ಷಿಕ ಪ್ರೀಮಿಯಮ್ಮಿನ ಉತ್ಪನ್ನವು ೩,೩೩,೦೦೦ ರೂ. ಗಳಷ್ಟು ಇದ್ದು ಈ ಸಾಲಿನಲ್ಲಿ ೪,೪೦,೪೦೦೦ ರೂ. ಗಳಷ್ಟಕ್ಕೆ ಏರಿದೆ. ಈಗ ಕಂಪನಿಯ ಚಾಲ್ತಿಯಲ್ಲಿರುವ ವಿಮಾ ಉದ್ಯೋಗದ ಒಟ್ಟು ಮೊತ್ತವು ೨,೯೬,೦೦೦ ರೂ. ಗಳಷ್ಟು. ಈ ಸಾಲಿನ ಆದಾಯ ವ್ಯಯದ ಪಟ್ಟಿಯನ್ನು (Balance Sheet) ಕೂಲಂಕುಷವಾಗಿ ವಿಮರ್ಶೆಮಾಡಿ ನೋಡಿದಲ್ಲಿ ಕಂಪನಿಯು ದಿನೇ ದಿನೇ ಹೇಗೆ ಜನತೆಯ ನಂಬುಗೆ-ವಿಶ್ವಾಸಗಳಿಗೆ ಪಾತ್ರವಾಗುತ್ತಿದೆಯೆಂಬುದೂ, ಮತ್ತು ಭಾರತೀಯರು ಕಾಲಕ್ರಮೇಣ ಹೇಗೆ ವಿಮಾ ಉದ್ಯೋಗದಲ್ಲಿ ಆಸಕ್ತಿಯುಳ್ಳವರಾಗುತ್ತಿರುವರೆಂಬುದೂ ತಿಳಿದುಬರುತ್ತದೆ. ಇನ್ನೊಂದು ಗಮನೀಯವಾದ ವಿಷಯವೇನೆಂದರೆ, ಕಂಪನಿಯವರು ಬಡ್ಡಿಗೆ ಹಣ ಹಾಕಿರುವ ಸರಕಾರದ ಸಾಲದ ಪತ್ರಗಳೆಲ್ಲವೂ ಬೆಲೆಯಲ್ಲಿ ಏರಿದವುಗಳಾಗಿ, ಕಂಪನಿಯ ವಿಮಾ ಕ್ಷೇಮನಿಧಿಯಿಂದ (Life Assurance Fund) ವರಮಾನದ ತೆರಿಗೆಯನ್ನುಳಿದು ಸರಾಸರಿಯಾಗಿ ಶೇಕಡಾ ೫|| ಯಷ್ಟು ಬಡ್ಡಿಗಿಟ್ಟುವಂತಾಯಿತು.

ಕಂಪನಿಯವರು ಹಕ್ಕುಬಾಧ್ಯತೆಗಳ ತೀರ್ಮಾನವನ್ನು (Settlement of Claims) ಬಹಳ ಪ್ರಶಂಸ



V. S. RAJAGOPALAN Esq.
Manager, Bangalore Branch.
ಶ್ರೀ|| ವಿ. ಎಸ್. ರಾಜಗೋಪಾಲನ್,
ಮ್ಯಾನೇಜರು, ಬೆಂಗಳೂರು ಬ್ರಾಂಚ್.

ಸಮಯವಾದ ರೀತಿಯಲ್ಲಿ ನಡೆಸುತ್ತಿದ್ದಾರೆ. ಒಟ್ಟು ಈ ಕಂಪೆನಿಯು ಪಾವತಿ ಮಾಡಿರುತ್ತದೆ. ಅಂತೂ ಪಾವತಿ ವರ್ಷದಲ್ಲಿ ೨೧೨ ಹಕ್ಕುಗಳು (Claims) ಹುಟ್ಟಿಕೊಂ ಯಾದ ಹಕ್ಕುಬಾಧ್ಯತೆಯ ಹಣವು ಒಟ್ಟು ೩,೭೭,೦೦೦ ತು. ಈ ಒಂದೇ ವರ್ಷದಲ್ಲಿ ಸುಮಾರು ೨,೭೬,೦೦೦ ರೂ ಗಳಷ್ಟು ಕಂಪೆನಿಯು ಹುಟ್ಟಿದಂದಿನಿಂದ ಹೀಗೆ



Mr. M. ct. M. CHIDMABARM CHETTIAR
Chairman United India Life Assurance Company, Ltd.,
ಶ್ರೀ|| ಎಂ. ಸಿಟಿ. ಎಂ. ಚಿದಂಬರಂಚೆಟ್ಟಿಯಾರ್ ರವರು,
ಚೇರ್ಮನ್ ‘‘ ಯುನೈಟೆಡ್ ಇಂಡಿಯಾ ಲೈಫ್ ಆಷ್ಯೂರೆನ್ಸ್ ಕಂಪನಿ, ಲಿಮಿಟೆಡ್.

ರೂ. ಗಳ ಹಕ್ಕು ಹಣದ ಪಾವತಿಯನ್ನು ಕಂಪನಿಯು ಪಾವತಿ ಮಾಡಿರುವ ಹಕ್ಕುಬಾಧ್ಯತೆಯ ಮೊತ್ತವು ೨೭ ಲಕ್ಷ ಮಾಡಿರುತ್ತದೆ. ಇದರ ಜೊತೆಯಲ್ಲಿ ಕಳೆದ ವರುಷದ ರೂ. ಗಳನ್ನು ಮೀರಿದೆ, ಜೀವಾವಧಿಯಮೇಲೆ ಸಾವಿರಕ್ಕೆ ಸುಮಾರು ೧ ಲಕ್ಷ ರೂಪಾಯಿಗಳ ಹಕ್ಕಿನ ಹಣವನ್ನು ೨೨|| ರೂ. ಗಳನ್ನೂ ಎಂಡೋಮೆಂಟ್ ವಿಮೆಯಮೇಲೆ ಸಾವಿ

ರಕ್ಕೆ ೧೮ ರೂ.ಗಳನ್ನೂ ಬೋನಸ್ಸು ಕೊಡಲಾಯಿತು. ದಾ ಮಾಷಾಪ್ರಕಾರ, ಶೇಕಡಾ ೮ರಷ್ಟು ಡಿವಿಡೆಂಡು ಹಣವನ್ನು, ತೆತ್ತ ಷೇರು ಬಂಡವಾಳದಮೇಲೆ ಕೊಡಲು ಡೈರೆಕ್ಟರುಗಳು ಈ ವರದಿಯಲ್ಲಿ ಶಿಫಾರಸು ಮಾಡಿರುವರು.

ಇದು ಕಂಪನಿಯ ೧೯೩೪ ನೆಯ ಸಂವತ್ಸರದ ಸ್ಥಿತಿಯನ್ನು ಸೂಚಿಸುವ ವಿಚಾರ. ನಾವು ಇನ್ನೊಮ್ಮೆ ಒತ್ತಿ ಹೇಳಬೇಕಾದ ವಿಷಯವೇನೆಂದರೆ, ದೀನವಾದ ಆರಂಭದಿಂದ ಹೆಜ್ಜೆಯಿಡಲು ಮೊದಲು ಮಾಡಿದರೂ, ಕಂಪನಿಯು ಪ್ರಗತಿ ಮಾರ್ಗದಲ್ಲಿ ಬಹಳ ತೀವ್ರಗಾಮಿಯಾಗಿ ಮುಂದುವರಿದಿದೆ; ಮತ್ತು ದಾರಿಯಲ್ಲಿ ಒಳಗಿನ ಮತ್ತು ಹೊರಗಿನ ಅನೇಕ ಬಗೆಯ ವ್ಯತ್ಯಾಸಾಂತರಗಳ ಮೂಲಕ ಪುಟವಿಡಿಸಲ್ಪಟ್ಟು ಜಯಶಾಲಿಯಾಗಿ ಹೊರಬಂದಿದೆ. ಕಳೆದ ಎರಡು ವರ್ಷಗಳ ವರದಿಯಲ್ಲಿ ಕಂಪೆನಿಯ ಅಧ್ಯಕ್ಷರು ತಮ್ಮ ಕಂಪೆನಿಯು ವಹಿಸಬೇಕಾಗಿಬಿದ್ದ ವೆಚ್ಚದ ವಿಚಾರಗಳಲ್ಲಿ ಎಷ್ಟು ಜಾಗರೂಕರಾಗಿದ್ದೇವೆಂಬುದನ್ನು ಸೂಚಿಸಿದ್ದಾರೆ.

ಕಂಪೆನಿಯವರು ಭದ್ರತೆಯಿಂದಲೂ, ಲಾಭದಾಯಕವಾಗಿಯೂ ತಮ್ಮ ನಿಧಿಯನ್ನು ಬಡ್ಡಿಗೆ ಹಾಕಿ, ಬೇರೆಯ ಕಡೆಯ ಸೆಕ್ಯೂರಿಟಿಗಳಮೇಲೆ ದೊರೆಯುವ ಆದಾಯಕ್ಕಿಂತಲೂ ಹೆಚ್ಚು ಆದಾಯವನ್ನು ಪಡೆಯುತ್ತಿದ್ದಾರೆಂಬುದನ್ನು ತಿಳಿಯಲು ಸಂತೋಷಿಸುತ್ತೇವೆ.

ಈಸಂಸ್ಥೆಗೇ ಇರುವ ಒಂದು ವಿಶೇಷವೆಂದರೆ ಕೆಲವು ಬಂಡವಾಳ ವಿನಿಮಯವಿಚಾರಗಳಲ್ಲಿ ಪಾಲಿಸಿದಾರರ ಡೈರೆಕ್ಟರುಗಳ ಸಮ್ಮತಿಯಿಲ್ಲದೆ ಆ ಕಾರ್ಯವನ್ನು ಮಾಡುವಂತಿಲ್ಲ.

ಈ ಕಂಪನಿಯ ಇಂದಿನ ಈ ಬಗೆಯ ಸರ್ವತೋಮುಖವಾದ ಬೆಳೆವಣಿಗೆಗೆ ಅದರ ಅಧ್ಯಕ್ಷರಾದ ಶ್ರೀ|| ಎಂ. ಸಿಟಿ. ಎಂ. ಚಿದಂಬರಂ ಚೆಟ್ಟಿಯಾರ್ (Mr. M. ct. M. Chidambaram Chettiar) ರವರ ಅವ್ಯಾಹತವಾದ ಉತ್ಸಾಹ, ಶ್ರದ್ಧೆ, ವಿಚಕ್ಷಣೆ ಇವುಗಳು ಬಹುಮಟ್ಟಿಗೆ ಕಾರಣವೆಂದು ಹೇಳಿದರೆ ತಪ್ಪಾಗದು. ಶ್ರೀ|| ಚಿದಂಬರಂ ಚೆಟ್ಟಿಯಾರ್ ರವರು ಕಂಪೆನಿಯ ಅಧ್ಯಕ್ಷರಾಗಿ ಕಂಪೆನಿಯ ಹಿತಕ್ಕಾಗಿ ವಹಿಸುತ್ತಿರುವ ಶ್ರದ್ಧಾಸಕ್ತಿಗಳು ಇಂತಹ ಉಳಿದ ಸಂಸ್ಥೆಗಳಲ್ಲಿ ಜವಾಬ್ದಾರಿಯು ಸ್ಥಾನಗಳನ್ನು ವಹಿಸಿರುವವರಿಗೆಲ್ಲರಿಗೂ ಆದರ್ಶಪಾತ್ರಯವಾದುದು, ಅನುಕರಣೀಯವಾದುದು. ಇವರು ವಯಸ್ಸಿನಲ್ಲಿ ಬಹಳ ಕಿರಿಯವರಾದರೂ ತಮ್ಮ ವಯಸ್ಸಿಗನುಗುಣವಾದ ಉತ್ಸಾಹವನ್ನೂ, ವಯಸ್ಸನ್ನು ಮೀರಿದ ದಕ್ಷತೆಯನ್ನೂ ಪ್ರದರ್ಶಿಸಿ, ಕ[illegible] ಕಾರ್ಯವನ್ನು ನಿರ್ವಹಿಸುತ್ತಿರುವರು.

ಕಂಪೆನಿಯ ದೈನಂದಿನ ಆಡಳಿತದ ಸೂತ್ರವನ್ನು ವಹಿಸಿ, ಕಂಪೆನಿಯು ವಿವಿಧ ವ್ಯವಹಾರಗಳೆಲ್ಲವನ್ನೂ ತ[illegible] ಸಾಮರ್ಥ್ಯದಿಂದ ನಿರ್ವಹಿಸಿಕೊಂಡು ಬಂದು, ತಮ್ಮ ಅ[illegible] ಶ್ರಾಂತ ಪರಿಶ್ರಮದಿಂದ ಅದಕ್ಕೆ ಈಗ ದೊರಕಿರುವ ಶ್ರೇಷ್ಠ ಸ್ಥಾನವನ್ನು ಕಲ್ಪಿಸಿಕೊಡಲು ನೆರವಾದವರೆಂದರೆ ಕಂಪೆನಿಯ ಮ್ಯಾನೇಜಿಂಗ್ ಡೈರೆಕ್ಟರಾದ ಶ್ರೀ|| ಎಂ. ಕೆ. ಶ್ರೀನಿವಾಸನ್ (Mr. M. K. Srinivasan) ರವರು ಯಾವುದೇ ಸಂಸ್ಥೆಯಾಗಲಿ, ಹೀಗೆ ವಿವೇಚನೆಯಿಂದ, ವಿಚಾರಯುಕ್ತವಾಗಿ, ಸಮಯಸ್ಫೂರ್ತಿಯಿಂದ ಪರಿಶ್ರಮ ಮಾಡುತ್ತಿರುವ ಇಂತಹವರಿಂದಲೇ ಪ್ರಗತಿಪರವಾಗಿ ಮುಂದುವರಿಯುವಂತಾಗಿದೆ.

ಕರ್ಣಾಟಕದ ಪ್ರಾಂತ್ಯದಲ್ಲಿಯೂ ಈ ಕಂಪನಿಯ ಉದ್ಯೋಗವು ಭರದಿಂದಲೇ ಸಾಗಿದೆ. ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಿಗಾಗಿ ಉಡುಪಿಯಲ್ಲಿ ಇತ್ತೀಚೆ ಈ ಕಂಪೆನಿಯ ಶಾಖೆಯೊಂದು ಸ್ಥಾಪಿತವಾಯಿತು. ಇದಕ್ಕೆ ಶ್ರೀ|| ಕೆ. ಶಿವರಾಯರೆಂಬುವರು (Mr. K. Shiva Rao) ಮ್ಯಾನೇಜರಾಗಿ ಬಹಳ ಮುತುವರ್ಜಿಯಿಂದ ಕೆಲಸ ಮಾಡುತ್ತಿರುವರೆಂದು ಕೇಳುತ್ತೇವೆ.

ಈ ಹಿಂದೆ ಸೇಲಂನಲ್ಲಿ ಕಂಪೆನಿಯ ಛೀಫ್ ಏಜೆಂಟ್‌ರಾಗಿದ್ದ ಶ್ರೀಯುತ ವಿ. ಎಸ್. ರಾಜಗೋಪಾಲ್‌ರವರು ಕಳೆದ ನಾಲ್ಕೈದು ತಿಂಗಳಿಂದ ಕಂಪೆನಿಯ ಬೆಂಗಳೂರು ಶಾಖೆಯ ಮ್ಯಾನೇಜರಾಗಿರುವರು. ಕಂಪೆನಿಯವರು ಅವರ ಕಾರ್ಯದಕ್ಷತೆಯನ್ನು ಅರಿತೇ ಅವರಿಗೆ ಜವಾಬ್ದಾರಿ ವಹಿಸಿದ್ದಾರೆ. ಅನುಭವಶಾಲಿಗಳಾದ ಇವರ ನೇತೃತ್ವದಲ್ಲಿ ಕಂಪೆನಿಯ ಉದ್ಯಮವು ಹೆಚ್ಚು ಹೆಚ್ಚಾಗಿ ಬೆಳೆಯುವುದೆಂಬ ನಂಬಿಕೆಯು ನಮಗಿದೆ.

ಸಂಪೂರ್ಣ ಸ್ವದೇಶೀಸಂಸ್ಥೆಯಾದ ಈ ಕಂಪೆನಿಯ ಇದುವರೆಗಿನ ಅಭಿವೃದ್ಧಿಯು ಎಷ್ಟು ತೀವ್ರಗಾಮಿಯಾದುದೆಂಬುದನ್ನು ನಾವು ಮೇಲೆ ಸೂಚಿಸಿದ್ದೇವೆ; ಅದು ಹೊಂದಿರುವ ರಾಷ್ಟ್ರದ ಮಹಾ ಸೇವೆಯಲ್ಲಿ ಅದಕ್ಕೆ ಇತೋಪ್ಯಧಿಕವಾದ ವಿಜಯವುಂಟಾಗಲೆಂದು ನಾವು ಹಾರೈಸುತ್ತೇವೆ.

# ಏಷ್ಯಾಟಿಕ್ ಗವರ್ನಮೆಂಟ್ ಸೆಕ್ಯೂರಿಟಿ ಲೈಫ್ ಅಷ್ಯೂರನ್ಸ್ ಕಂಪನಿ ಲಿಮಿಟೆಡ್

## Asiatic Government Security Life Assurance Co. Ltd.

---

ಮೈಸೂರು ಸಂಸ್ಥಾನದಲ್ಲಿ ಸ್ಥಾಪಿತವಾದ ಸಾರ್ವಜನಿಕ ವಿಮಾ ಸಂಸ್ಥೆಗಳಲ್ಲಿ ಏಷ್ಯಾಟಿಕ್ ಗವರ್ನಮೆಂಟ್ ಸೆಕ್ಯೂರಿಟಿ ಲೈಫ್ ಅಷ್ಯೂರೆನ್ಸ್ ಕಂಪೆನಿಯು ಮೊಟ್ಟಮೊದಲನೆಯದು. ಅದು ೧೯೧೩ ರಲ್ಲಿ ಸ್ಥಾಪಿತವಾಯಿತು. ನಿಧಿಯೆಲ್ಲವೂ ಭಾರತದಲ್ಲಿಯೇ ವಿನಿಮಯವಾಗುವುದು. ಸಂಸ್ಥೆಯು ಇಂಡಿಯಾ ಸರಕಾರದಲ್ಲಿ ೨ ಲಕ್ಷ ರೂ.ಗಳ ಠೇವಣಾತಿ ಇಟ್ಟಿದೆ. ಮತ್ತು ಮೈಸೂರು ಸರಕಾರದ ಟ್ರೆಜರಿ ಡಿಪಾಜಿಟ್ಟಿನಲ್ಲಿ ೩ ಲಕ್ಷ ರೂ. ಗಳನ್ನಿಟ್ಟಿದೆ.



"ASIATIC BUILDING" HEAD OFFICE, BANGALORE.
"ಏಷ್ಯಾಟಿಕ್ ಭವನ" ಹೆಡ್ ಆಫೀಸು, ಬೆಂಗಳೂರು.

ಅಂದಿನಿಂದಲೂ ಸಾರ್ವಜನಿಕರಿಗೆ ವಿಮಾ ರಕ್ಷಣೆಯನ್ನು ನೀಡುತ್ತಾ ಏಕಪ್ರಕಾರವಾದ ಅಭಿವೃದ್ಧಿ ಪಡೆಯುತ್ತಲಿದೆ. ಇಂದು ಮದ್ರಾಸ್ ಬೊಂಬಾಯಿ ಕಲ್ಕತ್ತಾಗಳಲ್ಲಿ ಕಂಪೆನಿಯ ಶಾಖೆಗಳಿವೆ. ಈ ಕಂಪೆನಿಯ ಒಡೆಯರೂ ಆಡಳಿತ ನಿರ್ವಾಹಕರೂ ಭಾರತೀಯರು. ಕಂಪೆನಿಯ ಬಂಡವಾಳ ಹೆಂಗಸರು ಗಂಡಸರೆಲ್ಲರಿಗೂ ಅತಿ ಸುಲಭದ ಪ್ರೀಮಿಯಂ ದರದ ಮೇಲೆ ಸುಭದ್ರವಾದ ವಿಮಾ ರಕ್ಷಣೆಯನ್ನು ದೊರಕಿಸಿಕೊಡಬೇಕೆಂಬುದೇ ಸಂಸ್ಥೆಯ ಗುರಿ. ಸಂಸ್ಥೆಯು ವಿಮಾ ಉದ್ಯಮವನ್ನು ಆರಂಭಿಸಿ ಹತ್ತು ವರ್ಷಕಳೆಯಿತು. ಅಂದಿನಿಂದಲೂ ಆಡಳಿತ ನಿರ್ವಾಹಕರ ನಿರಂತರ ಶ್ರಮದ ಮತ್ತು

ಆಡಳಿತದ ಪ್ರತಿಫಲವಾಗಿ ದಿನವಾಗಿ ಆರಂಭಿಸಿದ ಈ ಸಂಸ್ಥೆಯು ಇಂದಿನ ಶ್ರೇಷ್ಠಸ್ಥಾನವನ್ನು ಗಳಿಸಿದೆ.

ಪಾಲಸಿಗಳ ಪುನರುಜ್ಜೀವನ, ಸಾಲಕೊಡುವುದು, ಇವೇ ಮೊದಲಾದುವುಗಳಲ್ಲಿ ಪಾಲಿಸಿದಾರರಿಗೆ ಉದಾರ ಷರತ್ತುಗಳಿವೆ. ಕಂಪೆನಿಯ, ಮೂಲ ನಿಬಂಧನೆಗಳ ಪ್ರಕಾರ ಪಾಲಿಸಿದಾರರು ಕಂಪೆನಿಯ ಒಬ್ಬ ಡೈರೆಕ್ಟರನ್ನೂ, ಒಬ್ಬ ಆಡಿಟರನ್ನೂ, ಚುನಾಯಿಸಬಹುದು. ಈ ರೀತಿ ಪಾಲಿಸಿದಾರರು ತಮ್ಮ ಹಿತವನ್ನು ಕಾಯ್ದುಕೊಳ್ಳಲು ಅನು ವಾಗುವುದು. ಕಂಪೆನಿಯ ಡೈರೆಕ್ಟರುಗಳ ಮಂಡಲಿಯಲ್ಲಿ ಎಲ್ಲ ಪಂಗಡಗಳವರಿಗೂ ಪ್ರಾತಿನಿಧ್ಯವಿದೆ. ಡೈರೆಕ್ಟರುಗಳಲ್ಲಿ ಒಬ್ಬ ಸ್ತ್ರೀಯರೂ ಇರುವರು. ವಿಮಾಹಕ್ಕುಗಳನ್ನು ಉಳಿತಾಯ ತೋರಿಸಿದ ಹಲವು ಕಂಪೆನಿಗಳಲ್ಲಿ ಇದು ಒಂದು. ಪಾಲಿಸಿದಾರರಿಗೆ ಉತ್ತಮ ಬೋನಸ್ಸು ಹಂಚು... ಬರೋಡಾ ಸರಕಾರದವರು ತಾವು ವಿದ್ಯಾಪ್ರಸಾರ ... ಕ್ಕಾಗಿ ಕೊಟ್ಟಿರುವ ಸಾಲದ ರಕ್ಷಣಾರ್ಥವಾಗಿ ಪಾಲಿಸಿ... ದನ್ನು ಈ ಸಂಸ್ಥೆಯಲ್ಲಿ ತೆಗೆದುಕೊಂಡಿರುವವರೆಂದರೆ ... ಆರ್ಥಿಕ ಭದ್ರತೆಯ ಕೀರ್ತಿಯು ಎಷ್ಟೆಂಬುದನ್ನು ಗ್ರ... ಬಹುದಾಗಿದೆ. ಹಲವು ಬ್ರಿಟಿಷ್ ಇಂಡಿಯದ ... ಬೋರ್ಡುಗಳು ಕಂಪೆನಿಯ ಪಾಲಿಸಿಯನ್ನು ತೆಗೆದುಕೊ... ಅವುಗಳ ಪ್ರೀಮಿಯಂ ಹಣವು ಪ್ರಾವಿಡೆಂಡ್ ಫಂಡ್ ... ದಿಂದ ಸಲ್ಲುವಂತೆ ಮಾಡಿವೆ. ದೂರದೇಶಗಳಲ್ಲಿ ... ಕಂಪೆನಿಯ ಆರ್ಥಿಕ ಭದ್ರತೆಗೆ ವಿಶೇಷ ಮನ್ನಣೆ ದೊರೆ... ವುದು ಕಂಪೆನಿಗೊಂದು ಹೆಮ್ಮೆಯ ವಿಷಯವೇ ಸರಿ.



Dr. F. H. NORONA, M.B., Ch.B. (Edin.) D.P.H. (Camb.) president of the Company reading the address presented to His Hinghness the Yuvaraja of Mysore.

ಕಂಪೆನಿಯ ಅಧ್ಯಕ್ಷರಾದ ಡಾ|| ಎಫ್.ಎಚ್. ನರೋನಾ, ಎಂ.ಬಿ., ಸಿ.ಎಚ್.ಬಿ., (ಎಡಿನ್.) ಡಿ.ಪಿ.ಎಚ್. (ಕೇಂಬ್.) ರವರು ಘನಹೊಂದಿದ ಶ್ರೀಮದ್ಯುವರಾಜರವರಿಗೆ ಅರ್ಪಿಸಿದ ಬಿನ್ನವತ್ತಳೆಯನ್ನು ಓದುತ್ತಿರುವುದು.

ಸಕಾಲದಲ್ಲಿ ಸಲ್ಲಿಸುವುದೆಂಬ ಕೀರ್ತಿಯನ್ನು ಕಂಪೆನಿಯು ಗಳಿಸಿದೆ.

ಕಂಪೆನಿಯು ವಿಮಾ ಉದ್ಯಮ ಆರಂಭಿಸಿದುದು ೧೯೩೩ರಲ್ಲಿ. ಈಗಾಗಲೇ ವಿಶೇಷ ನಿಧಿಯನ್ನು ಶೇಕರಿಸಿಡಲು ಅದಕ್ಕೆ ಸಾಧ್ಯವಾಗಿದೆ. ಆ ಹಣವನ್ನು ಮೈಸೂರು ದೇಶದ ಒಳಗೂ ಹೊರಗೂ ಸುರಕ್ಷಿತ ಮಾರ್ಗಗಳಲ್ಲಿ ವಿನಿಮಯಿಸಿದೆ. ಪ್ರಥಮ ಲೆಕ್ಕಾಚಾರದ ವಿಮರ್ಶೆಯ ಕಾಲಕ್ಕೆ

೧೯೩೪ನೇ ವರ್ಷದಲ್ಲಿ ಕಂಪೆನಿಯು ೧೫,೫೫,೦... ರೂಗಳ ಮೊತ್ತದ ೧,೪೨೩ ಪಾಲಿಸಿಗಳನ್ನು ಕೊಟ್ಟಿತು. ಆ ವರ್ಷದ ಆದಾಯವು .೨,೮೦,೧೦೭ ರೂ. ಗಳು. ... ರಲ್ಲಿ ೨,೪೫,೫೮೧ ರೂ. ಗಳು ಪ್ರೀಮಿಯಂ ಆದಾಯ. ಆಡಳಿತದ ಖರ್ಚು ಪ್ರೀಮಿಯಂ ಆದಾಯದ ಶೇಕಡ ೨೧.೭ ರಷ್ಟು ಇದೆ. ಇದು ಕಡಮೆಯೆಂದೇ ಹೇಳಬೇಕು. ಈ ವರ್ಷದಲ್ಲಿ ಮೃತರ ಭಾಧ್ಯಸ್ಥರಿಗೆ ೨೬,೭೦೯ ರೂ. ಗಳು...



Mr. V. RANGASAMI, B.A B.L,
General Secretary and Manger (Since 1925)
ಶ್ರೀ|| ವಿ ರಂಗಸ್ವಾಮಿ,
ಜನರಲ್ ಸೆಕ್ರೆಟರಿ ಮತ್ತು ಮ್ಯಾನೇಜರ್.

ಎರಡು ಲಕ್ಷ ರೂಗಳು ಖರ್ಚುಮಾಡಿ ಕಟ್ಟಿದ ಕಂಪೆನಿಯ ಪ್ರಧಾನ ಕಛೇರಿ ಕಟ್ಟಡವು ಈಗ್ಗೆ ಕೆಲವು ತಿಂಗಳ ಹಿಂದೆ ಪೂರೈಯಿಸಿತು. ಮೈಸೂರಿನ ಯುವರಾಜರಾದ ಘನಹೊಂದಿದ ಶ್ರೀಮತ್ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ. ಸಿ. ಐ ಇ. ಯವರು ಈ ಕಟ್ಟಡದ ಆರಂಭ ಮಹೋತ್ಸವವನ್ನು ನೆರವೇರಿಸಿದರು. ಕಟ್ಟಡವು ಬೆಂಗಳೂರು ನಗರದ ಪ್ರಮುಖ ಪ್ರದೇಶದಲ್ಲಿದ್ದು ನಗರದ ಸೌಂದರ್ಯವನ್ನು ಹೆಚ್ಚಿಸುತ್ತಲಿದೆ. ಅದ್ಕು ಕಂಪೆನಿಯ ಸುರಕ್ಷತೆಯು ಆರ್ಥಿಕ ಭದ್ರತೆಯು ನಿದರ್ಶನವಾಗಿ ನಿಂತಿದೆ. ಮೈಸೂರಿನವರ ಸಾಹಸದ ಕೀರ್ತಿಚಿಹ್ನೆಯಾಗಿ ಶೋಭಿಸುತ್ತಿದೆ.

ಕಂಪೆನಿಯು ಮಹನೀಯರನೇಕರ ಕೃಪಾಛತ್ರದಡಿ ಬೆಳೆಯುತ್ತಲಿದೆ. ಡಾ|| ಎಫ್. ಎಚ್. ನರೋನಾ (Dr. F. H. Norona) ರವರು ಕಂಪೆನಿಯ ಅಧ್ಯಕ್ಷರು. ಶ್ರೀ|| ವಿ. ರಂಗಸ್ವಾಮಿ, ಬಿ ಎ, ಬಿ. ಎಲ್., (Mr. V. Rangasami, B.A., B.L.,) ರವರು ಕಂಪೆನಿಯ ಜನರಲ್ ಮ್ಯಾನೇಜರು. ಅಧ್ಯಕ್ಷರ ವಿಶಾಲ ಅನುಭವದ ನೇತೃತ್ವದಲ್ಲೂ, ಜನರಲ್ ಮ್ಯಾನೇಜರ ದಕ್ಷ ಆಡಳಿತದಲ್ಲೂ ಕಂಪೆನಿಯು ಭವಿಷ್ಯದಲ್ಲೂ ತನ್ನ ಕೀರ್ತಿಯನ್ನು ಬೆಳೆಸುತ್ತ ಹೋಗುವುದೆನ್ನುವುದರಲ್ಲಿ ಸಂಶಯವಿಲ್ಲ.

ನಾವು ಕಂಪೆನಿಗೆ ಸರ್ವ ವಿಜಯವನ್ನು ಕೋರುವೆವು.

ಹಕ್ಕುಗಳನ್ನು ಕೊಟ್ಟದೆ ಈ ವರ್ಷದಲ್ಲಿ ಜೀವವಿಮಾ ನಿಧಿಯು ೩,೧೧,೬೩೦ ರೂ. ಗಳಿಂದ ೬,೩೩,೭೫೩ ರೂ. ಗಳು ಹೆಚ್ಚಿತು. ವರ್ಷದಂತ್ಯದಲ್ಲಿ ಕಂಪೆನಿಯ ಒಟ್ಟು ಆಸ್ತಿಯು ೯,೩೬,೬೩೮ ರೂ. ಗಳಿತ್ತು.

# ಮ್ಯೂಚುಯಲ್ ಲೈಫ್ ಅಷ್ಯೂರೆನ್ಸ್ ಕಾರ್ಪೊರೇಷನ್ ಲಿಮಿಟೆಡ್

## The Mutual Life Assurance Corporation Limited

---

ಬರೋಡಾದ ಮ್ಯುಚುಯಲ್ ಲೈಫ್ ಅಷ್ಯೂರೆನ್ಸ್ ಕಾರ್ಪೋರೇಷನ್ ಲಿಮಿಟೆಡ್, ಸಂಸ್ಥೆಯು ಭಾರತೀಯರ ಜೀವನ ಜವಾಬ್ದಾರಿ ಗನ್ವಯಿಸಿ ಇತ್ತೀಚಿನ ಸ್ಥಿತಿ ಅಂಕೆಗಳ ಮೇಲೆ ಪ್ರೀಮಿಯಂ ದರವನ್ನು ಗೊತ್ತುಮಾಡಬೇಕೆಂದು ಶ್ರದ್ಧೆಯಿಂದ ಪ್ರಯತ್ನಿಸಿದ ಹಲವು ಕಂಪೆನಿಗಳಲ್ಲಿ ಒಂದು. ಸುಪ್ರಸಿದ್ಧ ಆಕ್ಚುಯರಿಗಳಾದ ಶ್ರೀ ಜಿ. ಎಸ್. ಮರಾಠೆ ಎಂ. ಎ. ಐ ಪಿ, ಎ. (Mr. G. S. Marathey M.A., A. I. A.) ಯವರು ಕಂಪೆನಿಯ ಪ್ರೀಮಿಯಂ ದರಗಳ ಪಟ್ಟಿಯನ್ನು ತಯಾರಿಸಿ ಕೊಟ್ಟಿದ್ದಾರೆ ಆದನ್ನು ವಿಮಾ ಮಾಡಲಿರುವ ಜನತೆಯ ಹಿತದ ದೃಷ್ಟಿಯಿಂದಲೂ, ಕಾರ್ಪೋರೇಷನ್ನಿಗೆ ದಕ್ಕೆ ತಗಲದಿರುವಂತೆಯೂ ನಿಶ್ಚಯಿಸಲಾಗಿದೆ. ಇತರ ಕಂಪೆನಿಗಳಿಗಿಂತ ಈ ಕಂಪೆನಿಯ ಪ್ರೀಮಿಯಂ ದರಗಳು ಜವಾಬ್ದಾರಿಗೆ ಆಗುವ ಸೈಜ ಖರ್ಚಿಗೆ ಅತಿ ಸವಿಾಪಿಸಿಸುವುದೆನ್ನಬಹುದು. ಇತ್ತೀಚಿನ ಮರಣ ಸಂಖ್ಯೆಯೇ ಮೊದಲಾದುವನ್ನ ಅವಲೋಕಿಸುವುದಾದರೆ ಅನೇಕ ಕಂಪೆನಿಗಳು ತೆಗೆದುಕೊಳ್ಳುತ್ತಿರುವ ಪ್ರೀಮಿಯಂ ದರವು ಅಧಿಕವಾದುವೆಂಬುದು ವ್ಯಕ್ತವಾಗದಿರದು. ಈ ಕಂಪೆನಿಯಲ್ಲಿ ೧೨೦೦ ರೂ. ಗಳ ಪಾಲಿಸಿಗೆ ಕೊಡಬೇಕಾಗುವ ಪ್ರೀಮಿಯಂ ಹಣವು ಇತರ ಕಂಪೆನಿಗಳ ಸಾವಿರ ರೂಪಾಯಿ ಪಾಲಿಸಿಯ ಪ್ರೀಮಿಯಂ ಹಣಕ್ಕೆ ಸಮನಾಗುವುದು.

ಕಂಪೆನಿಯ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ನಿನ ಪ್ರಕಾರ, ಹಂಚಲಿರುವ ಆದಾಯದಲ್ಲಿ ಶೇಕಡ ೯೦ ರಷ್ಟನ್ನು ಪಾಲಿಸಿದಾರರಿಗೂ ಶೇಕಡ ೧೦ ರಷ್ಟನ್ನು ಮಾತ್ರ ಷೇರುದಾರರಿಗೂ ಹಂಚಬೇಕೆಂಬ ನಿಬಂಧನೆಯಿದೆ. ಅಲ್ಲದೆ ಪಾಲಿಸಿದಾರರಿಗೆ ಡೈರೆಕ್ಟರುಗಳ ಮಂಡಲಿಗೆ ಒಬ್ಬರನ್ನು ಚುನಾಯಿಸುವ ಅಧಿಕಾರವಿದೆ. ಈ ರೀತಿ ಆಡಳಿತ ವ್ಯವಹಾರದಲ್ಲಿ ಪಾಲಿಸಿದಾರರ ಕೈವಾಡವೂ ಇದೆ. ಕಂಪೆನಿಯ ನಿಯಮಗಳ ಪ್ರಕಾರ ಪಾಲಿಸಿದಾರರಿಗೆ ಶೇಕಡ ೭॥ ಯಂತೆ ಅಥವಾ ಡೈರೆಕ್ಟರು ಆಗಾಗ್ಗೆ ನಿಶ್ಚಯಿಸುವ ಮತ್ತಾವುದೇ ದರದ ಮೇಲೆ ಸರೆಂಡರ್ ಬೆಲೆಯ ಶೇಕಡ ೯೫ ರ ವರೆಗೆ ಸಾಲ ಕೊಡಲಾಗುವುದು.

ಪಾಲಿಸಿದಾರರಿಗೆ ತೋರಿಸಿರುವ ... ಅತಿ ಸೌಕರ್ಯವನ್ನು ಕೊಡುವುದಾಗಿದೆ. ಇದರಲ್ಲಿ ಒಂದು ವಿಶೇಷ ವಿಚಾರವೆಂದರೆ ಆರೋಗ್ಯಕರವಾದ ವಸತಿಯಲ್ಲಿರುವವರಿಗೆ ಪ್ರೀಮಿಯಂ ನಲ್ಲಿ ಸ್ವಲ್ಪ ಸೋಡಿ ಬಿಡುವರು. ಈ ರೀತಿ, ಯೂರೋಪ್ ಕೆನಡಾ ಅಥವಾ ಅಮೆರಿಕಾ ಸಂಯುಕ್ತ ರಾಷ್ಟ್ರದ ಉತ್ತರ ಪ್ರಾಂತ್ಯಗಳು ಇವುಗಳಿಗೆ ಪ್ರವಾಸ ಬೆಳಸುವವರಿಗೆ ಅವರು ಅಲ್ಲಿರುವ ಪರ್ಯಂತ ಸ್ವಲ್ಪ ಕಡಮೆ ಪ್ರೀಮಿಯಂ ತೆಗೆದುಕೊಳ್ಳುವರು. ಈ ಸೌಲಭ್ಯ ಪಡೆಯಲು ಪ್ರವಾಸಿಗರು ಕಡೆಯ ಪಕ್ಷ ೬ ತಿಂಗಳಾದರೂ ಅಲ್ಲಿರಬೇಕಾಗುವುದು.

ಕಂಪೆನಿಯವು ಪಾಲಿಸಿದಾರರು ಮನೆಗಳನ್ನು ಕಟ್ಟಿಕೊಳ್ಳಲು ಅನುಕೂಲವಾಗುವಂತೆ ಏರ್ಪಡಿಸಿರುವ ಪದ್ಧತಿಗಳು ಗಮನಾರ್ಹವು. ಈ ಪದ್ಧತಿಗನುಸಾರವಾಗಿ, ಆರು ವರ್ಷಕ್ಕೆ ಮೇಲ್ಪಟ್ಟು ಪ್ರಚುರದಲ್ಲಿರುವ ಪಾಲಿಸಿಗಳ ಮೇಲೆ ಪಾಲಿಸಿದಾರನು ಮನೆಕೊಳ್ಳುವ ಅಥವಾ ಕಟ್ಟುವ ಸಲುವಾಗಿ, ಪಾಲಿಸಿ ಮೊಬಲಗಿನಷ್ಟೇ ಹಣವನ್ನು ಸಾಲವಾಗಿ ಕೊಡುವರು. ಆವನು ಸಾಲದ ಮೊಬಲಗಿಗೆ ಎರಡರಷ್ಟಕ್ಕೆ ಮನೆಕಟ್ಟಬೇಕು. ಮತ್ತು ಅವನ್ನು ಕಂಪೆನಿಗೆ ಆಧಾರ ಮಾಡಿ ತನ್ನ ಪಾಲಿಸಿಯನ್ನು ಕಂಪೆನಿಯಲ್ಲಿ ಸೆಕ್ಯೂರಿಟಿಯಾಗಿ ಇಡಬೇಕು. ಕಂಪೆನಿಯವರು ಈ ಹಣವನ್ನು ಒಟ್ಟಿಗಾಗಲೀ ಕಂತುಗಳ ಮೇಲಾಗಲಿ ಡೈರೆಕ್ಟರುಗಳು ಆಗಾಗ್ಗೆ ನಿಶ್ಚಯಿಸಿದಂತೆ ವಸೂಲು ಮಾಡಲು ಅಧಿಕಾರವಿದೆ.

೧೯೩೪ನೇ ವರ್ಷದ ಅಂತ್ಯದ ವರದಿಯಿಂದ ಸಂಸ್ಥೆಯು ಸಮಸ್ತ ರೀತಿಯಲ್ಲೂ ಪ್ರಗತಿಹೊಂದಿರುವುದು ತೋರಿಬರುತ್ತದೆ. ಈ ವರ್ಷದಲ್ಲಿ ೧,೪೦,೩೫೦ ರೂ. ಗಳ ಹೊಸ ಉದ್ಯಮವನ್ನು ಸಾಧಿಸಿದ್ದಾರೆ. ಆದರ ಪೈಕಿ ೧,೧೭,೦೦೦ ರೂ. ಗಳ ಮೊತ್ತಕ್ಕೆ ಪಾಲಿಸಿ ಪತ್ರಗಳನ್ನು ಕೊಡಲಾಗಿದೆ. ಇವುಗಳ ವಾರ್ಷಿಕ ಪ್ರೀಮಿಯಂ ೬,೬೮೩ ರೂ. ಗಳು. ರೆವಿನ್ಯೂ ಲೆಕ್ಕದಲ್ಲಿ ೩೩೬ ರೂ. ಗಳ ಪುನರ್ವಿಮಾ ಪ್ರೀಮಿಯಂ ಕಳೆದು ೧೪,೫೮೯ ರೂ. ಗಳ ಪ್ರೀಮಿಯಂ ಆದಾಯ ಬಂದಿದೆ. ವರ್ಷದಂತ್ಯದಲ್ಲಿ ವಿಮಾ ನಿಧಿಯು ೧೧,೫೫೦ ರೂ. ಗಳಿತ್ತು.

ಮ್ಯುಚ್ಯುಯಲ್ ಇನ್ಶ್ಯೂರೆನ್ಸ್ ಶಾಖೆಯಲ್ಲಿ ... ಕಾರ್ಪೋರೇಷನ್ನಿಗೆ ... ಆದಾಯ ಒಟ್ಟು ೧,೫೭೦ ರೂ. ಗಳ ಆದಾಯ ಬಂತು.

ನಿಯಮಾನುಸಾರ ಹಳೆಯ ರೋಲ್ ರಿಸರ್ವ್‌ಫಂಡಿಗೆ ೭೫೫ ರೂ. ಗಳನ್ನು ಸಹಾಯನಿಧಿಗೆ ೨೬೨ ರೂ. ಗಳನ್ನೂ ಸೇರಿಸಿದೆ. ಈ ರೀತಿ ವರ್ಷದ ಕೊನೆಯಲ್ಲಿ ಹಳೆಯ ರೋಲ್ ರಿಸರ್ವ್ ಫಂಡು ೬,೨೭೯ ರೂ. ಗಳಿತ್ತು ಮತ್ತು ಸಹಾಯ ನಿಧಿಯು ೨,೦೦೬ ರೂ. ಗಳಿತ್ತು.

ಕೈಗಾರಿಕಾ ವಿಮಾ ಶಾಖೆಯಲ್ಲಿಯೂ ಪ್ರಗತಿ ಕಾಣುತ್ತದೆ. ಈ ಶಾಖೆಯ ಪ್ರೀಮಿಯಂ ಆದಾಯವು ೬೨೩ ರೂ. ಗಳು. ಕಂಪೆನಿಯ ನಿಯಮದ ಪ್ರಕಾರ ಅದರಲ್ಲಿ ೩೫೯ ರೂ. ಗಳು ರಿಜರ್ವ್ ನಿಧಿಗೆ ಸೇರಿತು. ವರ್ಷದ ಕೊನೆಯಲ್ಲಿ ಈ ರಿಸರ್ವ್‌ನಿಧಿಯು ೮೩೭ ರೂ. ಗಳಿತ್ತು.

ವರದಿಯ ಕಾಲದಲ್ಲಿ ವಿಮಾ ಹಕ್ಕುಗಳನ್ನು ಕೊಡಬೇಕಾದ ಪ್ರಸಂಗಗಳು ಹೆಚ್ಚು ಒದಗಿಬರಲಿಲ್ಲ. ಜೀವ ವಿಮಾ ಶಾಖೆಯಲ್ಲಿ ವಿಮಾ ಹಕ್ಕು ಕೊಡಬೇಕಾದ ಪ್ರಸಂಗವು ಒಂದೂ ಒದಗಿ ಬರಲಿಲ್ಲವೆನ್ನುವುದು ಅಭಿನಂದನೀಯವು. ಇದರಿಂದ ಉದ್ಯಮವನ್ನು ಆರಿಸುವುದರಲ್ಲಿ ಎಷ್ಟು ವಿವೇಚನೆ ಇರಿಸಿದ್ದಾರೆಂಬುದು ವ್ಯಕ್ತವಾಗುವುದು. ಮ್ಯುಚುಯಲ್ ಇನ್ಷ್ಯೂರೆನ್ಸ್ ಶಾಖೆಯಲ್ಲಿ ೨,೩೭೦ ರೂ. ಗಳ ಪರಿಹಾರ ಹಕ್ಕುಗಳನ್ನು ಕೊಟ್ಟಿದ್ದಾರೆ. ಜೀವ ವಿಮಾ ಮತ್ತು ಮ್ಯುಚುಯಲ್ ಇನ್ಷ್ಯೂರೆನ್ಸ್ ಈ ಎರಡು ಶಾಖೆಗಳಿಂದ ೧೯೩೩ನೇ ಡಿಸೆಂಬರ್ ೩೧ರವರೆಗೆ ಒಟ್ಟು ೧೭,೪೦೭ ರೂ. ಗಳ ವಿಮಾ ಹಕ್ಕನ್ನು ಕೊಟ್ಟಿದ್ದಾರೆ.

ಷೇರುದಾರರ ಡಿವಿಡೆಂಡು ನಿಧಿಯು ವರ್ಷದ ಕೊನೆಯಲ್ಲಿ ೧,೧೯೫ ರೂ. ಗಳಿದ್ದಿತು. ಅದರಲ್ಲಿ ೧೯೩೪ರ ಸಾಲಿಗೆ ವರ್ಷಕ್ಕೆ ಶೇಕಡ ೧೦ ರಂತೆ ಡಿವಿಡೆಂಡು ಹಂಚಿದರು.

ಕಾರ್ಪೋರೇಷನ್ನಿನ ವ್ಯವಹಾರವನ್ನು ವಿಚಕ್ಷಣೆಯಿಂದ ನಡೆಸುತ್ತಿರುವ ಸಂಸ್ಥೆಯ ಆಡಳಿತ ನಿರ್ವಾಹಕರಾದ ಮೆಸರ್ಸ್ ಷಾ ಅಂಡ್ ಕಂಪೆನಿಯವರನ್ನು (Messrs Shah and Co) ಅಭಿವಂದಿಸ ಬಯಸುತ್ತೇವೆ. "ಮ್ಯೂಚುಯಲ್ ಲೈಫ್" ಸಂಸ್ಥೆಯು ವರ್ಷೇ ವರ್ಷೇ ತನ್ನ ವ್ಯವಹಾರಗಳನ್ನು ಹೆಚ್ಚಿಸಿಕೊಳ್ಳುತ್ತಾ, ಸಾರ್ವಜನಿಕರಿಗೆ ಹೆಚ್ಚು ಹೆಚ್ಚು ಉಪಯುಕ್ತವಾದುದಾಗುತ್ತಿದೆ. ವಿಮಾ ಉದ್ಯಮ ಪ್ರಪಂಚದಲ್ಲಿ ಅತ್ಯಲ್ಪ ಕಾಲದಲ್ಲಿಯೇ ಒಂದು ಮಹತ್ವದ ಸ್ಥಾನ ಗಳಿಸಿ ಹೆಚ್ಚು ಕೀರ್ತಿಯುತವಾದುದಾಗವುದೆಂದು ನಮಗೆ ಪೂರ್ಣ ಭರವಸೆ ಇದೆ.

# ಕೆನರಾ ಇಂಡಸ್ಟ್ರಿಯಲ್ ಅಂಡ್ ಬ್ಯಾಂಕಿಂಗ್ ಸಿಂಡಿಕೇಟ್ ಲಿಮಿಟೆಡ್

## The Canara Industrial and Banking Syndicate Ltd,

---



Dr. T. MADHAVA PAI MBBS.
Chairman,
Canara Industrial and Banking Syndicate Ltd.

ಡಾ|| ಟಿ. ಮಾಧವ ಪೈ, ಎಂ.ಬಿ.ಬಿ.ಎಸ್.
ಪ್ರೆಸಿಡೆಂಟರು,
ಕೆನರಾ ಇಂಡಸ್ಟ್ರಿಯಲ್ ಅಂಡ್ ಬ್ಯಾಂಕಿಂಗ್ ಸಿಂಡಿಕೇಟ್
ಲಿಮಿಟೆಡ್.

ಉಡುಪಿಯ ಕೆನರಾ ಇಂಡಸ್ಟ್ರಿಯಲ್ ಅಂಡ್ ಬ್ಯಾಂಕಿಂಗ್ ಸಿಂಡಿಕೇಟ್ ಲಿಮಿಟೆಡ್‌ನ ಪ್ರಗತಿಯು ಆಶ್ಚರ್ಯದು. ೧೯೩೫ ರಲ್ಲಿ ದೀನವಾದ ಆರಂಭದಿಂದ ಹೆಜ್ಜೆಯಿಟ್ಟು ಇಂದು ೧೯ ಶಾಖೆಗಳಿಂದೊಡಗೂಡಿ ೭ ಜಿಲ್ಲೆಗಳಲ್ಲಿ ಕಾರ್ಯನಡೆಸುತ್ತಿದೆ. ಈ ಸಂಸ್ಥೆಯ ಡಿಪಾಜಿಟುದಾರರು ಅನೇಕರಿದ್ದಾರೆ ಮತ್ತು ಹಲವು ಬಗೆಯವರಿದ್ದಾರೆ. ಅದರ ಹಲವು ವಿಧದ ಬಂಡವಾಳ ಸಹಾಯ ನೀಡುವ ಪದ್ಧತಿಗಳು ಅದರ ಶಾಖೆಗಳ ಮುಖೇನ ಎಲ್ಲೆಡೆಗಳಲ್ಲಿಯೂ ಸರ್ವಜನಾದರಣೀಯವಾಗತೊಡಗಿವೆ. ಸಂಸ್ಥೆಯ ಇಂದಿನ ಬಂಡವಾಳವು ಸುಮಾರು ೫೫ ಲಕ್ಷ ರೂ. ಗಳಿರುವುದು. ಮತ್ತು ಅದರ ಮುಖಾಂತರ ನಡೆವ ವ್ಯವಹಾರ ಮೊತ್ತವು ೨ ಕೋಟಿ ರೂಪಾಯಿಗಳಾಗುವುದು. ಸಿಂಡಿಕೇಟಿನ ಆಡಳಿತ ಮಂಡಳಿಯು ಬಲಯುತವಾದುದಾಗಿದೆ. ಉತ್ತರ ಮತ್ತು ದಕ್ಷಿಣ ಕೆನರಾದ ಮತ್ತು ಬೆಳಗಾವಿನ ಹಲವು ಅರಿತ ನುರಿತ ಗೌರವಸ್ಥರು ಮಂಡಲಿಯಲ್ಲಿದ್ದಾರೆ. ಅವರ ಉದ್ಯಮಶೀಲತೆ ಮತ್ತು ಕಾರ್ಯದಕ್ಷತೆಯನ್ನು ಈಗಾಗಲೇ ಪ್ರದರ್ಶಿಸಿದ್ದಾರೆ. ಡಾ|| ಟಿ. ಮಾಧವ ಪೈ (Dr. T. Madhava Pai) ರವರ ಸಮರ್ಥ ನೇತೃತ್ವದಲ್ಲಿ ಅಮೋಘ ಬ್ಯಾಂಕಿನ ಕಾರ್ಯಕಲಾಪಗಳು ನಡೆಯುತ್ತಲಿವೆ. ಅವರ ಸೇವೆಯೇ ಬ್ಯಾಂಕಿನ ವ್ಯವಹಾರಗಳು ಸುಗಮವಾಗಿ ನೆರವೇರಿ, ದಿನೇದಿನೇ ಹೆಚ್ಚು ಯಶಸ್ಸಿನಿಂದ ಮೆರೆಯುತ್ತಿರುವುದಕ್ಕೆ ಸಹಕಾರಿಯಾಗಿದೆ. ಈ ಸಂಸ್ಥೆಯವರು ಬಹುವಿಧ ಕಾರ್ಯಸಾಧನೆಯನ್ನು ಕೈಗೊಳ್ಳುವರೆಂದು ಕೇಳಿದ್ದೇವೆ ಡೈರೆಕ್ಟರುಗಳ ಕಾಲೋಚಿತವಾದ ಈ ಸಾಹಸಕ್ಕಾಗಿ ನಾವವರನ್ನು ಅಭಿನಂದಿಸುತ್ತೇವೆ. "ಏಜನ್ಸಿ ಮತ್ತು ಟ್ರಸ್ಟ ಶಾಖೆಯು" ಪ್ರವಾಸಬೆಳೆಸಿದ (ಸ್ಥಳದಲ್ಲಿಲ್ಲದ) ಜಮೀನುದಾರರಿಗೆ ಒದಗಿಸುವ ಸಹಾಯವು ವಿಶೇಷವಾದುದು. ಅಪ್ರತಿಮವಾದುದು. ಆಸ್ತಿಯು ಸುರಕ್ಷಿತವಾಗಿರುವುದಷ್ಟೇ ಅಲ್ಲದೆ, ವ್ಯವಹಾರಕುಶಲರಾದ ಅನುಭವಶಾಲಿಗಳ ಕೈಯಲ್ಲಿ ದೊರೆತು ವಿಶೇಷ ಅಭಿವೃದ್ಧಿ ಹೊಂದುವುದು. ಅಲ್ಲದೆ ಆಡಳಿತ ಖರ್ಚು ಕಡಮೆ. ಹೆಚ್ಚು ಫಲದಾಯಕವೂ ಆಹುದು. ಷೇರುದಾರರಿಗೆ ಉತ್ತಮ ಡಿವಿಡೆಂಡು ಬರುತ್ತಿದೆ. ಡಿಪಾಜಿಟ್ಟುದಾರರಿಗೆ ಅಧಿಕದರದ ಬಡ್ಡಿಬರುತ್ತಿದೆ ಸಾ... ತೆಗೆದುಕೊಳ್ಳುವ ಗಿರಾಕಿಗಳಿಗೆ ಅವರೆಲ್ಲ ಅವಶ್ಯಕತೆಗಳ... ತೃಪ್ತಿಗೊಳಿಸುವ ಸೌಕರ್ಯಗಳಿರುತ್ತವೆ. ಇಂದಿನ ದರ... ಯನ್ನೀಕ್ಷಿಸಿದರೆ, ಅದು ಉದ್ಯಮ ಪ್ರಮಾಣದಲ್ಲೂ ಮ... ಸಾಮಾಜಿಕ ಉಪಯುಕ್ತತೆಯಲ್ಲೂ ನಮ್ಮ ... ಉತ್ತಮ ಬ್ಯಾಂಕುಗಳಲ್ಲೊಂದೆನಿಸಿ ಶ್ರೇಷ್ಠಸ್ಥಾನ... ಪಡೆವುದು ಬಹುಕಾಲವಿಲ್ಲವೆಂದು ನಮಗೆ ಸಂಪೂ... ಭರವಸೆಯಿದೆ.

## ಕೆನರಾ ಲ್ಯಾಂಡ್ ಇನ್ವೆಸ್ಟ್‌ಮೆಂಟ್ಸ್, ಲಿಮಿಟೆಡ್
## The Canara Land Investments Ltd.,

ಇದೊಂದು ಖಾಸಗಿ ಪಾಲುದಾರೀ ಸಂಸ್ಥೆ ಉದಯಿಸಿ ಮೂವತ್ತು ಕಳೆಯಿತು. ಅದರ ವಸೂಲಾದ ಬಂಡವಾಳ ೧,೩೨,೭೦೦ರೂ.ಗಳು, ಇದೆಲ್ಲವೂ ೧೦೦ರೂ.ಗಳ ಷೇರು ಗಳ ವಸೂಲಾದುದು. ಈ ಬಂಡವಾಳವನ್ನು ಹೊಲ, ಮನೆ ಮೊದಲಾದ ಆಸ್ತಿಗಳನ್ನು ಕೊಂಡು ಅವುಗಳ ಅಭಿವೃದ್ಧಿ ಗಾಗಿ ವಿನಿಯೋಗಿಸಿದೆ. ಈ ಕಾರ್ಯನಿರ್ವಹಣೆಯಿಂದ ಬಂದ ಆದಾಯವನ್ನು ಷೇರುದಾರರೆಲ್ಲರೂ ಹಂಚಿಕೊಳ್ಳು ಕಂಪೆನಿಯು ಕೊಂಡಿರುವ ಮಣಿಪಾಲ್ ಆಸ್ತಿಯಲ್ಲಿ ಜೇಡಿ ಮಣ್ಣು ಅಧಿಕವಾಗಿ ದೊರೆಯುವುದರಿಂದ ಕಂಪೆನಿಯವರು ಒಂದು ಹೆಂಚಿನ ಕಾರ್ಖಾನೆಯನ್ನು ಸ್ಥಾಪಿಸಿ, ಅದನ್ನು ಉಪಯೋಗಪಡಿಸಿಕೊಳ್ಳುತ್ತಿದ್ದಾರೆ. ಆಸ್ತಿಯು ಅರಬ್ಬೀ ಸಮುದ್ರಾಭಿಮುಖವಾಗಿ ಒಂದು ಎತ್ತರವಾದ ದಿನ್ನೆಯಾಗಿದ್ದು ಹವಾಗುಣವು ಅತ್ಯಾರೋಗ್ಯಕರವಾಗಿದೆ. ಅದನ್ನು ಒಂದು ಆರೋಗ್ಯ ವಸತಿಯನ್ನಾಗಿ ಏರ್ಪಡಿಸಲು ಅತ್ಯುತ್ತಮವಾಗಿದೆ. ಹತ್ತಿರದಲ್ಲೇ ಒಂದು ಪಟ್ಟಣವಿದ್ದು ಸುತ್ತಮುತ್ತಣ ಪ್ರದೇಶದಲ್ಲಿ ಮನೆಗಳಾಗುತ್ತಿವೆ. ರೋಗಿಗಳಿಗೆ



'MANIPAL SANITORIUM BUILDINGS" Gifted by Dr. T. Madhava Pai.
ಡಾ|| ಟಿ. ಮಾಧವ ಪೈರವರು ದಾನವಾಗಿ ಕೊಟ್ಟ "ಮಣಿಪಾಲ್ ಸ್ಯಾನಿಟೋರಿಯಂ ಕಟ್ಟಡ"

ವರು. ಕಳೆದ ಮೂರು ವರ್ಷಗಳಿಂದಲೂ ತೆರಿಗೆ ಬಿಟ್ಟು, ಷೇರುಗಳಮೇಲೆ ಶೇಕಡ ಆರರಂತೆ ಡಿವಿಡೆಂಡು ಹಂಚಲಾಗಿದೆ. ಇದೊಂದು ಮಹತ್ವದ ಸಾಧನೆಯೆಂದೇ ಹೇಳಬೇಕು. ಏಕೆಂದರೆ ಬಂಡವಾಳ ಹಾಕಿರುವುದು ಜಮೀನುಗಳಮೇಲೆ ಹಣದ ಭದ್ರತೆಗೆ ಭೀತಿಯಿಲ್ಲ, ಭವಿಷ್ಯವು ಆಶಾಜನಕವಾಗಿದೆ. ಏಕೆಂದರೆ ಆರಂಭದಲ್ಲಿ ಜಮೀನುಗಳ ಬೆಲೆಯು ಇಳಿದುಹೋದಾಗ ಅವುಗಳನ್ನು ಕೊಳ್ಳಲಾಗಿದೆ. ಕಾಲಕ್ರಮದಲ್ಲಿ ಇದರಿಂದ ಷೇರುದಾರರಿಗೆ ಲಾಭ ಬರುವುದು ನಿಶ್ಚಯ. ಕಂಪೆನಿಯು ನಿರ್ವಹಿಸ ಬಹುದಾದ ಕಾರ್ಯಗಳೆಲ್ಲದರಲ್ಲಿಯೂ ಉದ್ಯುಕ್ತರಾಗತೊಡಗಿದ್ದಾರೆ.

ಉತ್ತಮ ಆರೋಗ್ಯವಸತಿಯಿದು. ಡಾ|| ಟಿ. ಮಾಧವ ಪೈರವರೇ ಕಂಪೆನಿಯ ಅಧ್ಯಕ್ಷರು. ಈ ಆರೋಗ್ಯ ವಸತಿಗೆ ಅವರು ಒಂದು ಕಟ್ಟಡವನ್ನೂ ೧೪ ಎಕರೆ ಜಮೀನನ್ನೂ ೫೫,೦೦೦ ರೂ. ಗಳ ಜೀವಾವಧಿ ವಿಮೆಯನ್ನೂ ದಾನವಾಗಿ ಕೊಟ್ಟಿದ್ದಾರೆ. ಇದು ಈಗಾಗಲೇ ಉತ್ತಮ ಸಹಾಯ್ಯ ನೀಡುತ್ತಿದೆಯೆಂದು ಕೇಳುತ್ತೇವೆ. ಕ್ಷಯರೋಗದಲ್ಲಿ ಕುರುಹು ತೋರಿದವರೆಲ್ಲರೂ ಇಲ್ಲಿಗೆ ಬರತೊಡಗಿದ್ದಾರೆ. ಆದುದರಿಂದ ದಿನೇ ದಿನೇ ಆರೋಗ್ಯ ವಸತಿಯ ಸೌಕರ್ಯಗಳು ಹೆಚ್ಚು ಹೆಚ್ಚು ಜನರಿಗೆ ತಿಳಿಯತೊಡಗಿದೆ. ಇಂದದು ಅನೇಕ ರೋಗಿಗಳಿಗೆ ಆಶ್ರಯವಾಗಿದೆ. ಡಾ|| ಪೈರವರು



SAMUEL AARON Esqr., Chairman,
The Canara Mutual Assurance Co., Ltd.
ಶ್ರೀ|| ಶ್ಯಾಮುಯಲ್ ಆರೋನ್,
ಚೇರ್ಮನ್, ಕೆನರಾ ಮ್ಯೂಚುಯಲ್ ಅಷ್ಯೂರೆನ್ಸ್ ಕಂಪೆನಿ,ಲಿ.



V. R. NAYANAR Esqr. BAR-AT-LAW,
Director, Canara Mutual Assurance Co, Ltd.
ಶ್ರೀ|| ವಿ. ಆರ್. ನಾಯನರ್, ಬಾರ್-ಎಟ್-ಲಾ,
ಡೈರೆಕ್ಟರು, ಕೆನರಾ ಮ್ಯೂಚುಯಲ್ ಅಷ್ಯೂರೆನ್ಸ್ ಕಂಪೆನಿ,

ವೈದ್ಯಕೀಯ ಸಹಾಯದ ಕಾರ್ಯನಿರ್ವಹಣೆಯ ಆಡಳಿತವನ್ನು ಆ ಜಿಲ್ಲೆಯ ವೈದ್ಯರಿಗೆ ವಹಿಸಿಕೊಟ್ಟಿದ್ದಾರೆ. ಡಾ|| ಪೈರವರ ಆಚರಣೆಯು ಇತರ ದಾನಕರ್ತೃಗಳಿಗೆ ಆದರ್ಶನೀಯವಾಗಿದೆ. ಒಂದು "X ರೇ" ಸಲಕರಣೆಯೂ ಹಲವು ಸಣ್ಣ ಪಡ್ಡುಗಳೂ ಈ ಆರೋಗ್ಯ ವಸತಿಗೆ ಅವಶ್ಯಕವಿರುವಂತೆ ತೋರುವುದು. ಈ ವಿಚಾರವನ್ನು ಟ್ರಸ್ಟಿಗಳು ಇಷ್ಟರಲ್ಲೇ ಗಮನಿಸುವುದಾಗಿ ಕೇಳುವೆವು ಅವರಿಗೆ ನಾವು ಶ್ರೇಯಸ್ಸನ್ನು ಕೋರುವೆವು. ಕಂಪೆನಿಯು ಮಾಡಿರುವ ಎಲ್ಲ ಕೆಲಸಗಳಿಗಾಗಿ ಸಾರ್ವಜನಿಕರ ಅಭಿನಂದನೆಗೆ ಅರ್ಹವಾದುದಾಗಿದೆ

## ಕೆನರಾ ಮ್ಯೂಚುಯಲ್ ಅಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್.

ಕನ್ನಡಿಗರು ನವಚೇತನಯುತರಾಗಿ ನಮ್ಮ ನೆರೆನಾಡಿನವರೊಂದಿಗೆ ಸರಿಸಮನಾಗಿ ನಿಲ್ಲಲು ಪ್ರಯತ್ನಿಸುತ್ತಿರುವುದು ಕರ್ಣಾಟಕ ಮಾತೆಯ ಭಾವೀ ಮಂಗಳೋದಯ ಸೂಚಕವು. ಪಕ್ಕದ ಕೇರಳೀಯರೂ ತಮಿಳರೂ ಒಂದುಗೂಡಿ ಟ್ರಾವಂಕೂರು ನ್ಯಾಷನಲ್ ಬ್ಯಾಂಕು,ಕ್ವಿಲಾನ್ ಬ್ಯಾಂಕುಗಳ ಯಜಮಾನ್ಯದಿಂದ ಗಾರ್ಡಿಯನ್ ಆಫ್ ಇಂಡಿಯ ಇನ್ಷ್ಯೂರೆನ್ಸ್ ಕಂಪೆನಿಯನ್ನು ಸ್ಥಾಪಿಸಿ ಅದ್ಭುತವಾದ ಉದ್ಯೋಗ ನಡೆಸಿದಂತೆ ತಾವೂ ನಡೆಯಿಸಬೇಕೆಂಬ ಸದು



Mr. T. R. A PAI
Manager,
"Canara Mutual Assurance Co., Ltd."
ಶ್ರೀ|| ಟಿ. ಆರ್. ಎ. ಪೈ
ಮ್ಯಾನೇಜರ್,
ಕೆನರಾ ಮ್ಯೂಚುಯಲ್ ಅಷ್ಯೂರೆನ್ಸ್ ಕಂಪೆನಿ, ಲಿ.

ತ್ತೀಕದಿಂದ ಕೆನರಾ ಮ್ಯೂಚುಯಲ್ ಅಷ್ಯೂರೆನ್ಸ್ ಕಂಪೆನಿ ಯನ್ನು ಸ್ಥಾಪಿಸಿದ ಕೆನರಾ ಇಂಡಸ್ಟ್ರಿಯಲ್ ಅಂಡ್ ಬ್ಯಾಂಕಿಂಗ್ ಸಿಂಡಿಕೇಟ್‌ರವರನ್ನು ಕನ್ನಡಿಗರೆಲ್ಲರೂ ಅಭಿನಂದಿಸ ಬೇಕಾಗಿದೆ.

ಗೆಲವು ಗೆಲುವಿಗೆ ದಾರಿಯೆಂಬಂತೆ, ಮೇಲೆ ಹೇಳಿದ ಕೆನರಾ ಬ್ಯಾಂಕಿಂಗ್ ಸಿಂಡಿಕೇಟ್, ಲ್ಯಾಂಡ್ ಇನ್‌ವೆಸ್ಟ್

ಹೀಗೆ, ಈಗಾಗಲೇ ತನ್ನ ವಹಿವಾಟವನ್ನು ಅನೇಕ ಶಾಖೋಪಶಾಖೆಗಳ ಮೂಲಕ ದೇಶದಲ್ಲೆಲ್ಲಾ ನಡೆಯಿಸುತ್ತಿರುವ ಬ್ಯಾಂಕಿಂಗ್ ಸಂಸ್ಥೆಯೊಂದು ಒಂದು ನೂತನ ವಿಮಾ ಕಂಪೆನಿಯ ಕಾರ್ಯನಿರ್ವಹಣೆ ಮಾಡುವುದರಿಂದ ವಿಶೇಷ ಅನುಕೂಲವುಂಟು. ಅಂತಹ ಬ್ಯಾಂಕಿಂಗ್ ಸಂಸ್ಥೆಯ ಶಾಖೋಪಶಾಖೆಗಳೇ, ವಿಮಾ ಸಂಸ್ಥೆಯ ಶಾಖೋಪ



The Canara Mutual Assurance Co., Ltd. The Chairman with the Directors, Manager and staff of the Company

ಕೆನರಾ ಮ್ಯೂಚುಯಲ್ ಅಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್. ಕಂಪೆನಿಯ ಚೆರ್ಮನ್ನರೂ, ಡೈರೆಕ್ಟರುಗಳೂ, ಮ್ಯಾನೇಜರರೂ ಮತ್ತು ಕಂಪೆನಿಯ ಕೆಲಸಗಾರರು.

ಮೆಂಟ್ ಸಂಘವೇ ಮೊದಲಾದ ಹಲವು ಆದರ್ಶ ವಾಣಿಜ್ಯ-ಕಸಿದ ಸಂಸ್ಥೆಗಳನ್ನು ಸ್ಥಾಪಿಸಿ, ಬೆಳೆಯಿಸಿ, ಅವುಗಳ ಶಾಖೋಪಶಾಖೆಗಳನ್ನು ಕರ್ಣಾಟಕದಲ್ಲೆಲ್ಲಾ ಪಸರಿಸಿದ ಕೀರ್ತಿಯು ಯಾವ ಡಾ|| ಟಿ. ಮಾದವಪೈ ಎಂ.ಬಿ. ಬಿ.ಎಸ್. ರವರದೋ, ಆ ಕರ್ಣಾಟಕ ಮಾತೆಯ ಸುಪುತ್ರರ ಸಾಹಸದ, ಅನುಭವದ ಫಲವೇ ಈ ಕೆನರಾ ಮ್ಯೂಚುಯಲ್ ವಿಮಾ ಸಂಸ್ಥೆಯೂ ಸಹ.

ಶಾಖೆಗಳಾಗಿಯೂ ಉಳಿವುವು. ಅದಕ್ಕೆ ಅನೇಕ ಗಿರಾಕಿಗಳೂ ದೊರೆಯುವರು. ಕಡಮೆ ಕಮಿಷನ್ ಯಿಂದ ಸಂಸ್ಥೆಯ ಸಿಬ್ಬಂದಿಯವರು ಕೆಲಸ ಮಾಡಲು ಅವಕಾಶವಿರುವುದರಿಂದ ಸಂಸ್ಥೆಯ ಆಡಳಿತಖರ್ಚು, ಕಮಿಷನ್ ವೆಚ್ಚವು ಉಳಿದು ನೂತನ ವಿಮಾ ಸಂಸ್ಥೆಯು ಬೆಳೆಯಲು ವಿಶೇಷ ಅನುಕೂಲವಿರುವುದು ಅಲ್ಲದೆ ಸಂಸ್ಥೆಗೆ ಸಾಕಾದಷ್ಟು ಆರ್ಥಿಕ ಬೆಂಬಲವೂ ಇರುವುದು. ಈ ಬೆಂಬಲ

ದಿಂದ ವಿಮಾ ಕಂಪೆನಿಯ ಭದ್ರತೆಯು ಸೂಚಿತವಾಗಿ ಜನರು ಹೆಚ್ಚು ನಂಬಿಕೆಯಿಂದ ವಿಮೆಮಾಡಲು ಮುಂದೆ ಬರಲು ಅವಕಾಶವಿರುವುದು. ಇಂತು ತಮ್ಮ ಬ್ಯಾಂಕಿನ ಸಹಕಾರವನ್ನು ಈ ನೂತನ ವಿಮಾ ಸಂಸ್ಥೆಗೆ ಕೊಟ್ಟ ಕೆನರಾ ಇಂಡಸ್ಟ್ರಿಯಲ್ ಅಂಡ್ ಬ್ಯಾಂಕಿಂಗ್ ಸಿಂಡಿಕೇಟಿನವರು ಸ್ತೋತ್ರಾರ್ಹರು. ಅವರು ಕರ್ಣಾಟಕದ ವಾಣಿಜ್ಯ ಕುಸೀದ ವಿಮಾ ಪ್ರಚಾರದಲ್ಲಿ ಎಸಗಿದ, ಎಸಗಲಿರುವ ಕಾರ್ಯಗಳು ಕರ್ಣಾಟಕದ ಆರ್ಥಿಕ ಚರಿತ್ರೆಯಲ್ಲಿ ಸ್ವರ್ಣಾಕ್ಷರ ಲಿಖಿತವಾಗತಕ್ಕುವು.

ಈ ಸಂಸ್ಥೆಯ ಮೊದಲನೆಯ ವಿಶಿಷ್ಟತ್ವವೆಂದರೆ ಇದು ಸಂಪೂರ್ಣವಾಗಿ ಪಾಲಿಸಿದಾರರ ಸಂಸ್ಥೆಯಾಗಿರುವುದು. ಅಂದರೆ ಈ ಸಂಸ್ಥೆಗೆ ಷೇರುದಾರರಿಲ್ಲ. ಎಲ್ಲಾ ಲಾಭವೂ ಪಾಲಿಸಿದಾರರಿಗೇ ಹೋಗುವುದು. ಈ ಬಗೆಯ ಮ್ಯುಚುಯಲ್ ವಿಮಾ ಸಂಸ್ಥೆಯು ಕರ್ಣಾಟಕದಲ್ಲಿ ಸ್ಥಾಪಿತವಾದುದು ಇದೇ ಮೊದಲು.

ಕಂಪೆನಿಯು ಆರಂಭವಾದ ಎರಡು ವಾರಗಳಲ್ಲಿಯೇ ಸುಮಾರು ೧೧ ಲಕ್ಷರೂಪಾಯಿಗಳ ಮೌಲ್ಯವನ್ನು ವಿಮಾರಿದ ಉದ್ಯಮವನ್ನು ನಡೆಯಿಸಿತೆಂದರೆ ಹಿರಿ ಬೆಳೆಯ ಸುಗ್ಗಿಯು ಬರುವನ್ನು ಇಂದಿನ ಈ ಸಿರಿಹೊಳೆಯು ತೋರಿತೆಂದೇ ಹೇಳಬೇಕು. ಈ ಉದ್ಯಮವು ನಿಜವಾಗಿಯೂ ಕರ್ಣಾಟಕ ವಿಮಾ ಪ್ರಪಂಚದಲ್ಲಿ ಅಭೂತ ಪೂರ್ವವಾದುದು. ಕಂಪೆನಿಯು ಇದುವರೆಗೆ ಒಂದು ವಿಮಾ ಹಕ್ಕನ್ನೂ ಕೊಡಬೇಕಾಗಲಿಲ್ಲವೆನ್ನುವುದು ಅಭಿವಂದನಾರ್ಹವು. ಇದು ವಿಮಾದಾರರ ಆಯಿಕೆಯಲ್ಲಿ ಎಷ್ಟು ಎಚ್ಚರಿಕೆಯಿಂದಿದ್ದ ರೆಂಬುದನ್ನ ಸೂಚಿಸುವುದು.

ದೇಶಕಾಲಕ್ಕನುಗುಣವಾಗಿ ಇಂಥ ಸಂಸ್ಥೆಯನ್ನು ಸ್ಥಾಪಿಸಿದ ಡಾ|| ಟಿ. ಮಾಧವಪೈರವರನ್ನು ಇನ್ನೊಮ್ಮೆ ಅಭಿವಂದಿಸದಿರಲಾರೆವು. ಇಂತಹ ವಿಮಾ ಸಂಸ್ಥೆಗಳು ನಮ್ಮ ನಾಡಿಗೆ ಅತ್ಯವಶ್ಯಕವಾಗಿವೆ. ಅಂತಹ ಸಂಸ್ಥೆಗಳೊಂದಿಗೆ ನಾಡಿಗರು ಸಹಕರಿಸಿ ಪ್ರೋತ್ಸಾಹಿಸಬೇಕಾದುದು ಪರಮ ಅತ್ಯಗತ್ಯವಾದ ಕರ್ತವ್ಯವು. ಈ ಸಂಸ್ಥೆಯು ಪ್ರಸಿದ್ಧ ಕ್ಷೇತ್ರ ಕ್ಷೇತ್ರವಾದ ಉಡುಪಿಯಲ್ಲಿ ಬೆಳಕು ಕಂಡಿದೆ. ಈ ಕ್ಷೇತ್ರ ಕ್ಷೇತ್ರವು ಅನೇಕ ವಾಣಿಜ್ಯ ಕುಸಿದ ಸಂಸ್ಥೆಗಳ ಆಗರವಾಗಿ ಶೋಭಿಸುತ್ತಿರುವುದು ಹರ್ಷದಾಯಕವು. ಈ ಕೆನರಾ ಮ್ಯೂಚುಯಲ್ ಅಸ್ಯೂರೆನ್ಸ್ ಸಂಸ್ಥೆಯು ಚಿರಕಾಲ ಬಾಳಿ ಕರ್ಣಾಟಕ ದೇವಿಯ ಸೌಭಾಗ್ಯ ಮಂಗಳ ಸೂತ್ರದಲ್ಲಿ ಮಂಗಳ ಮಣಿಯಾಗಿ ಬೆಳಗಲೆಂಬುದು ಉಡುಪಿ ಕೃಷ್ಣನಲ್ಲಿ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.



# ಗಾರ್ಡಿಯನ್ ಆಫ್ ಇಂಡಿಯಾ ಇನ್ಷ್ಯೂರೆನ್ಸ್ ಕಂಪೆನಿ ಲಿಮಿಟೆಡ್

## Guardian of India Insurance Company Limited

" ಗಾರ್ಡಿಯನ್ ಆಫ್ ಇಂಡಿಯಾ " ಎಂಬ ಹೆಸರು ಇಂದು ಮನೆ ಮಾತಾಗಿದೆ. ಈ ನಿನ್ನೆಯ ಕಂಪೆನಿಯು ಬಹು ಪುರಾತನ ಕಂಪನಿಗಳನ್ನೂ ತೆಗಳುವಂತಹ ಪ್ರಗತಿಯನ್ನು ಸಾಧಿಸಿ ಪ್ರಕಾಶಕ್ಕೆ ಬಂದಿದೆ.

ಈ ಕಂಪೆನಿಯು ೧೯೩೪ನೇ ಇಸವಿ ಅಕ್ಟೋಬರ್ ತಿಂಗಳಿನಲ್ಲಿ ಮದ್ರಾಸ್ ನಗರದಲ್ಲಿ ಸ್ಥಾಪಿತವಾಯಿತು. ಆಗ ವಿಶ್ವವ್ಯಾಪಿಯಾದ ಆರ್ಥಿಕ ಮುಗ್ಗಟ್ಟಿನ ಪ್ರಚಂಡ ಮಾರುತದಲ್ಲಿ ಈ ಕಂಪನಿಯು ಸದೃಢವಾಗಿ ತಲೆಯೆತ್ತಿ ನಿಂತು ತನ್ನ ವಿಜಯಧ್ವಜವನ್ನು ಹಾರಿಸಿರುವುದು. ಇಂದು ಅದರ ಮೂಲಧನದ ದೃಷ್ಟಿಯಿಂದಲಾಗಲೀ ಅಥವಾ ಇದು ಈವರೆಗೆ ನಡೆಸಿರುವ ವಿಮಾ ಉದ್ಯಮದ ದೃಷ್ಟಿಯಿಂದಲಾಗಲೀ ಈ ಕಂಪನಿಯು ದಕ್ಷಿಣ ಭಾರತದ ಎಲ್ಲ ಕಂಪನಿಗಳನ್ನೂ ಮೀರಿಸಿದೆ.

ಈ ಕಂಪೆನಿಯು ಮೊಟ್ಟಮೊದಲಿಗೆ ನಮ್ಮ ಗಮನಕ್ಕೆ ಬರುವುದು ಅದರ ಸಾಹಿತ್ಯ ವಿಶೇಷದಿಂದ. ಅದು ಎಂಥವರ ಮನವನ್ನಾದರೂ ಆಕರ್ಷಿಸುವಂತಿರುವುದು. ಮುದ್ದಾದ ಮುದ್ರಣ, ಮನಸ್ಸನ್ನು ಸೆರೆಹಿಡಿದು ನಿಲ್ಲಿಸುವ ಭಾಷೆ ಇಂತಹವುಗಳಿಂದ ಈ ಕಂಪೆನಿಯ ಸಾಹಿತ್ಯ ವಿಶೇಷವು ಶೋಭಿಸುತ್ತಿರುವುದು. ಕಂಪೆನಿಯ ಸಾಹಿತ್ಯ ವಿಶೇಷ ವಷ್ಟೇ ಅಲ್ಲದೆ ಕಂಪೆನಿಯು ಅನುಸರಿಸಿರುವ ವಿಮಾ ಪದ್ಧತಿ ಹಾಗೆಯೇ ಚಿತ್ತಾಕರ್ಷಕವಾಗಿದೆ. ಪ್ರೀಮಿಯಂ ದರಗಳು ಜಾಸ್ತಿಯಾಗಿಲ್ಲ. ಡಿಪಾಜಿಟರ್ಸ್ ಇನ್ಷ್ಯೂರೆನ್ಸ್ ಸ್ಕೀಂ, ಗೋಲ್ಡನ್ ಸ್ಕೀಂ, ಕುಟುಂಬ ರಕ್ಷಣ ವಿಮಾ ಪದ್ಧತಿ, ಜೋಡಿ ಜೀವವಿಮಾ, ಶಿಶುವಿದ್ಯಾ ವಿಮಾ ಮೊದಲಾದ ಪದ್ಧತಿಗಳನ್ನು ಈ ಕಂಪೆನಿಯು ಅನುಸರಿಸಿರುವುದು ಯಾರೇ ಇಗಲಿ ನನಗೆ ಈ ಕಂಪೆನಿಯಲ್ಲಿ ಇಂತಹ ಅನುಕೂಲಕ್ಕಾಗಿ ವಿಮೆ ಮಾಡಲು ಅವಕಾಶವಿಲ್ಲವೆಂದು ನುಡಿಯುವಂತಿಲ್ಲ. ವಿಮಾ ಷರತ್ತುಗಳು ಕೂಡ ಹೆಚ್ಚು ನಿರ್ಬಂಧವಾದವುಗಳಲ್ಲ. ಪಾಲಿಸಿದಾರರ ಹಿತವನ್ನು ಬಯಸಿಯೇ ರಚಿತವಾಗಿವೆ. ಸ್ತ್ರೀಯರ ಜೀವವಿಮೆಯನ್ನೂ ಸಹ ಈ ಕಂಪೆನಿಯು ಅಂಗೀಕರಿಸುವುದು.

ಇವರ ಹಲವು ನವೀನ ಪದ್ಧತಿಗಳನ್ನು ಇಲ್ಲಿ ವಿವರಿಸುವುದು ಯುಕ್ತವೆನಿಸುವುದು. ಇವರ ಡಿಪಾಜಿಟ್ಟರುಗಳ ವಿಮಾ ಪದ್ಧತಿಯು (Depositor's Insurance Scheme) ನವೀನವಾದವುಗಳಲ್ಲೊಂದು ಮತ್ತು ಅದರ ಹಿಂದೆ ಹೊಸ ಭಾವನೆಯೊಂದಿದೆ. ಕಂಪೆನಿಯು ಯಾವ ಯಾವ ಬ್ಯಾಂಕುಗಳೊಡನೆ ಪ್ರೀಮಿಯಂ ವಸೂಲಿಯ ಕರಾರನ್ನು ಮಾಡಿಕೊಂಡಿದೆಯೋ ಆ ಬ್ಯಾಂಕಿನ ಡಿಪಾಜಿಟ್ಟರುಗಳಿಗೆ ಕಡಮೆಮಾಡಿದ ವಿಶೇಷ ಪ್ರೀಮಿಯಂ ದರಗಳ ಪಾಲಿಸಿಗಳನ್ನು ಕೊಡಲು ಏರ್ಪಾಡು ಮಾಡಿದೆ. ಇಂದು ಕ್ವಿಲಾನ್‌ಬ್ಯಾಂಕು ಲಿಮಿಟೆಡ್‌ನ ಮತ್ತು ತಿರುವಾಂಕೂರು ನ್ಯಾಷನಲ್ ಬ್ಯಾಂಕು ಲಿಮಿಟೆಡ್‌ನ ಪ್ರಧಾನ ಕಚೇರಿ ಮತ್ತು ಶಾಖೆಗಳಿಗೆ ಈ ಪದ್ಧತಿಯು ಕೆಳಗೆ ವಿಮಾ ದರಖಾಸ್ತುಗಳನ್ನು ಪಡೆದು ಕಂಪೆನಿಗೆ ಕೊಡುವ ಅಧಿಕಾರವಿದೆ. ಈ ಪದ್ಧತಿಯ ಕೆಳಗೆ ೨೦ ರಿಂದ ೪೦ ವಯಸ್ಸಿನೊಳಗಣವರಿಗೆ ೧೦, ೧೫, ೨೦ ಅಥವಾ ೨೫ ವರ್ಷದ ಅವಧಿಯ ಪಾಲಿಸಿಗಳನ್ನು ಕೊಡುವರು. ಈ ಪದ್ಧತಿಯ ಕೆಳಗೆ ಹೆಚ್ಚೆಂದರೆ ೩೦೦೦ ರೂ. ಗಳಿಗೆ ಪಾಲಿಸಿ ಪಡೆಯಬಹುದು. ಸಾಮಾನ್ಯವಾಗಿ ಇತರ ಪಾಲಿಸಿದಾರರಿಗೆ ಇರುವ ಎಲ್ಲ ಸೌಕರ್ಯಗಳೂ, ಹಕ್ಕುಗಳೂ ಇವರಿಗಿದೆ.

ಈ ಕಂಪೆನಿಯು ಮತ್ತೊಂದು ನವೀನ ಪದ್ಧತಿಯೆಂದರೆ ಅದು ಅನುಸರಿಸಿರುವ " ಗೋಲ್ಡನ್ ಸ್ಕೀಮ್ " ಪದ್ಧತಿ. (Golden Scheme) ಈ ಪದ್ಧತಿಯು ಯುವಕರಿಗೂ ಉದ್ಯಮಗಳನ್ನಾರಂಭಿಸುವವರಿಗೂ ವಿಶೇಷ ಸಹಕಾರಿಯಾದುದು. ಎಂಡೋಮೆಂಟ್ ಪಾಲಿಸಿಯ ಕಾಲಾವಧಿಗಳೇ ಇದಕ್ಕೂ ಅನ್ವಯಿಸುತ್ತದೆ. ಈ ಪದ್ಧತಿಯ ಕೆಳಗೆ, ಪಾಲಿಸಿದಾರನು ವಿಮಾ ಮಾಡಿದ ಪ್ರಥಮ ೫. ವರ್ಷಗಳಲ್ಲಿ ಮೃತಪಟ್ಟರೆ ಅವನ ಬಾಧ್ಯಸ್ಥರಿಗೆ ವಿಮಾ ಮೊಬಲಗಿನ ಮೂರ

ರಷ್ಟು ಹಣವು ದೊರೆಯುವುದು. ಅವನು ಹತ್ತು ವರ್ಷಗಳೊಳಗೆ ಮೃತಪಟ್ಟರೆ ಪಾಲಿಸಿ ಮೊತ್ತದ ಎರಡರಷ್ಟು ಹಣವು ಬರುವುದು. ಪ್ರಥಮ ವರ್ಷಗಳು ಕಳೆದ ನಂತರ ಪ್ರೀಮಿಯಂ ದರ ಕಡಮೆಯಾಗುವುದು. ಈ ಪಾಲಿಸಿ ದಾರರಿಗೆ ಇತರ ಪಾಲಿಸಿದಾರರಿಗಿರುವ ಸೌಲಭ್ಯಗಳೆಲ್ಲವೂ ಉಂಟು. ಪ್ರಥಮ ವರ್ಷದಲ್ಲಿ ಆತ್ಮಹತ್ಯದಿಂದ ಮರಣ ಉಂಟಾದರೆ ಪಾಲಿಸಿಗೆ ಯಾವ ಹಕ್ಕೂ ಇರುವುದಿಲ್ಲ. ಪ್ರಥಮ ವರ್ಷವಾದ ಮೇಲೆ ಆತ್ಮಹತ್ಯದಿಂದ ಮರಣವಾದರೆ ಪಾಲಿಸಿಯ ಮೊತ್ತವು ಮಾತ್ರ ಬರುವುದು. ಈ ಪದ್ಧತಿಯ ಕೆಳಗೆ ೧೦೦೦ ರೂ.ಗಳ ಅಥವಾ ೨೦೦೦ ರೂ. ಗಳ ಮೊತ್ತದ ಪಾಲಿಸಿಗಳನ್ನು ಮಾತ್ರ ಅಂಗೀಕರಿಸುವರು.

ಇನ್ನೊಂದು ಪದ್ಧತಿಯೆಂದರೆ ಕುಟುಂಬ ರಕ್ಷಣಾ ಪದ್ಧತಿ. (Splendid Family Protection Scheme) ಈ ಪದ್ಧತಿಯ ಕೆಳಗೆ ೨೫ ವರ್ಷಗಳೊಳಗೆ ಮೃತಪಟ್ಟರೆ ಆ ಸಮಾಚಾರವು ತಿಳಿದೊಡನೆ ೨೫೦ ರೂ.ಗಳನ್ನು ಕೊಡಲಾಗುವುದು. ಅಲ್ಲಿಂದಾಚೆಗೆ ಅವಧಿಯು ಪೂರ್ಣವಾಗುವ ವರೆಗೆ, ವರ್ಷಕ್ಕೆ ೧೦೦ ರೂ.ಗಳನ್ನು ಹಕ್ಕುದಾರನ ಇಚ್ಛೆಯಂತೆ ವರ್ಷಕ್ಕೊನ್ಮೆಯೋ, ಆರು ತಿಂಗಳಿಗೊಮ್ಮೆಯೋ ಅಥವಾ ಮೂರು ತಿಂಗಳಿಗೊಮ್ಮೆಯೋ ಕೊಡುವರು. ಕೊನೆಯದಾಗಿ ಅವಧಿಪೂರ್ಣವಾದ ಮೇಲೆ ೧೦೦೦ ರೂಪಾಯಿಗಳನ್ನು ಕೊಡುವರು. ಮೇಲಿನ ಅಂಕೆಗಳು ೧೨೦೦ ರೂ. ಗಳ ಪಾಲಿಸಿಗೆ ಅನ್ವಯಿಸುವುವು. ಪಾಲಿಸಿಯ ಮೊಬಲಗು ಹೆಚ್ಚು ಇದ್ದರೆ ಇವೂ ಅದಕ್ಕನುಗುಣವಾಗಿ ಹೆಚ್ಚುವುವು. ವಿಮಾದಾರನು ೨೫ ವರ್ಷ ಜೀವಂತವಿದ್ದರೆ ಪಾಲಿಸಿ ಮೊಬಲಗು ದೊರೆವುದು.

ಇವರ "ಗಿಲ್ಟ್-ಎಡ್ಜ್ ಇನ್ವೆಸ್ಟ್‌ಮೆಂಟ್ ಪಾಲಿಸಿ" (Gilt-edge Investment Policy)ಗಳು ನವೀನವಾದುದಿದ್ದು ಈ ಸೆಕ್ಯೂರಿಟಿಗಳಲ್ಲಿ ಬಂಡವಾಳ ವಿನಿಮಯಿಸಿರುವರಿಗೆ ಒದಗಬಹುದಾದ ನಷ್ಟಕ್ಕೆ ರಕ್ಷಣೆ ನೀಡುವುದು.

**ಹೊಸ ಉದ್ಯಮು.**

೧೯೩೫ನೇ ಡಿಸೆಂಬರ್ ೩೧ ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದಲ್ಲಿ ಕಂಪೆನಿಗೆ ೪೫,೮೩,೯೫೦ ರೂ.ಗಳ ಮೊತ್ತದ ೩೨೨೧ ದರಖಾಸ್ತುಗಳು ಬಂದಿವೆ. ಅದರ ಪೈಕಿ ೩೩,೫೨,೫೦೦ ರೂ.ಗಳ ಮೊತ್ತದ ೨೩೪೦ ದರಖಾಸ್ತುಗಳಿಗೆ ಪಾಲಿಸಿ ಪತ್ರಗಳನ್ನು ಕೊಟ್ಟಿದ್ದಾರೆ. ಇವುಗಳ ಪ್ರೀಮಿ-ಯಂ ಆದಾಯವು ೧,೯೧,೫೦೫—೧೪—೦ ರೂ. ಗಳು. ೧,೦೩,೦೦೦—೦—೦ ರೂ.ಗಳ ಮೊತ್ತದ ಪಾಲಿಸಿಗಳನ್ನು ಪುನರ್ವಿಮೆ ಮಾಡಿದ್ದಾರೆ. ಕಂಪೆನಿಯ ಲೆಕ್ಕದಲ್ಲಿ ಉಳಿದ ದರಖಾಸ್ತುಗಳ ಮೊತ್ತವು ೩೨,೪೯,೫೦೦ ರೂ.ಗಳು.

ವರದಿಯ ಕಾಲದಲ್ಲಿ ೩೨೦೦ ರೂ. ಗಳ ಮೊತ್ತದ ಳ ವಿಮಾ ಹಕ್ಕುಗಳನ್ನು ಮಾತ್ರ ಕಂಪೆನಿಯು ಕೊಡಬೇಕಾಯಿತು.

**ವಿಮಾ ನಿಧಿ.**

ಕಂಪೆನಿಯು ಈಗಾಗಲೇ ೧೫,೬೭೫—೧೧—೦ ರೂ.ಗಳ ವಿಮಾ ನಿಧಿಯನ್ನು ಏರ್ಪಡಿಸಿರುವುದು ಅಭಿನಂದನೀಯವು.

**ಕಾರ್ಯಕ್ಷೇತ್ರ.**

ಕಂಪೆನಿಯು ಈಗಾಗಲೆ ದಕ್ಷಿಣ ಇಂಡಿಯದ ಪ್ರದೇಶಗಳು, ಬೊಂಬಾಯಿ ಆಧಿಪತ್ಯ ಮತ್ತು ಸಿಲೋನ್‌ಗಳಲ್ಲಿ ಕಾರ್ಯವನ್ನು ಆರಂಭಿಸಿದೆ. ಕಂಪೆನಿಯು ಇಷ್ಟು ಕಡಿಮೆ ಕಾಲದಲ್ಲಿ ಅಗಾಧ ಕ್ಷೇತ್ರವನ್ನು ಸಿದ್ಧಗೊಳಿಸಿದುದು ಸಾಹಸವೇ ಸರಿ.

ಈ ಕಂಪೆನಿಯು ಸಾಧಿಸಿರುವ ಉದ್ಯಮವು ಇಡೀ ದಕ್ಷಿಣ ಭಾರತದ ವಿಮಾ ಇತಿಹಾಸದಲ್ಲಿ ಅಪ್ರತಿಮವಾದುದು. ಇಂತಹ ಅನುಪಮ ಅಭಿವೃದ್ಧಿಯನ್ನು ಪಡೆಯಲು ದಕ್ಷಿಣ ಹಿಂದೂಸ್ಥಾನದಲ್ಲಿ ಸುಪ್ರಸಿದ್ಧವಾದ ಟ್ರಾವಂಕೂರ್ ನ್ಯಾಷನಲ್ ಬ್ಯಾಂಕು (Travancore National Bank) ಮತ್ತು ಕ್ವಿಲಾನ್ ಬ್ಯಾಂಕು (Quilon Bank) ಇವೆರಡರ ಸಂಪೂರ್ಣ ಸಹಕಾರವು ಈ ಕಂಪೆನಿಗಿರುವುದೂ, ವ್ಯವಹಾರ ಕುಶಲರೆನಿಸಿದ ಈ ಬ್ಯಾಂಕುಗಳ ಯಜಮಾನರು ಮೇಲ್ಕಂಡ ಕಂಪೆನಿಯ ಡೈರೆಕ್ಟರುಗಳಾಗಿರುವುದೂ ಮುಖ್ಯ ಕಾರಣವು.

ಇವರ ಉಚಿತಜ್ಞತೆಯನ್ನು ನಾವು ಎಷ್ಟು ವಿಸ್ತರಿಸಿ ಹೇಳಿದರೂ ಸಾಲದು. ಹೀಗೆ ಆವೆರಡು ಬ್ಯಾಂಕುಗಳಿಗೆ ಒಂದು ಶ್ರೇಷ್ಠಸ್ಥಾನ ಕಲ್ಪಿಸಿದ ಅವುಗಳ ಯಜಮಾನರು

...ಕಂಪೆನಿಗೂ ಸಂಬಂಧಿಸಿರುವುದರಿಂದ ಇದನ್ನು ಇತ್ತೋಃಪ್ಯತಿ ...ಯವಾಗಿ ಅಭಿವೃದ್ಧಿ ಪಡಿಸುವರೆಂದು ಧಾರಾಳವಾಗಿ ಹೇಳ ...ಬಹುದು.

ಕಂಪೆನಿಯು ಇಂದು ಮೊದಲಿಟ್ಟ ಹೆಜ್ಜೆಯನ್ನೇ ಅನು...ಸರಿಸುವದಾದರೆ ಇನ್ನು ಅತ್ಯಲ್ಪಕಾಲದೊಳಗಾಗಿಯೇ ಈ ...ಕಂಪೆನಿಯು ಅತ್ಯುನ್ನತ ಸ್ಥಿತಿಗೆ ಬರುವುದೆನ್ನುವುದರಲ್ಲಿ ...ಯಾವ ಸಂದೇಹವೂ ಇಲ್ಲ. ಅಂತು ಮುಖ್ಯವಾಗಿ ಮೇಲೆ ...ಹೇಳಿದ ಎರಡು ಸುಪ್ರಸಿದ್ಧ ಬ್ಯಾಂಕುಗಳಿಗೆ ಸಂಬಂಧಿಸಿದ ...ವು ಇಂತಹ ವಿಮಾ ಸಂಸ್ಥೆಯನ್ನು ಸ್ಥಾಪಿಸುವ ಯೋಚನೆ...ಯನ್ನು ಕೈಗೊಂಡುದು ಕಾಲೋಚಿತವಾದುದು.

ಯುನೈಟೆಡ್ ಇಂಡಿಯಾ ಲೈಫ್ ಅಷ್ಯೂರೆನ್ ಕಂಪೆನಿ ಮತ್ತು ಇತರ ಕಂಪೆನಿಗಳಲ್ಲಿದ್ದು ವಿಮಾ ಉದ್ಯೋಗದಲ್ಲಿ ದೀರ್ಘಕಾಲ ನುರಿತವರಾದ ಎನ್. ನಾರಾಯಣನ್‌ರವರು (Mr. N Narayanan) ಈ ಕಂಪೆನಿಯ ಮುಖ್ಯ ಕಛೇರಿಯ ಮ್ಯಾನೇಜರವರಾಗಿದ್ದಾರೆ. ಇಂತಹವರ ನೇತೃತ್ವದಲ್ಲಿ ಕಂಪೆನಿಗೆ ಭವ್ಯ ಭವಿಷ್ಯವಿರುವುದೆಂದು ಹೇಳಿ ಈ ಕಂಪೆನಿಗೆ ಸರ್ವತೋಮುಖವಾದ ವಿಜಯವಾಗಲೆಂದು ಹಾರೈಸುವೆವು.



# ನ್ಯಾಷನಲ್ ಇಂಡಿಯನ್ ಲೈಫ್ ಇನ್ಷೂರೆನ್ಸ್ ಕಂಪನಿ ಲಿಮಿಟೆಡ್

## National Indian Life Insurance Co. Ltd.,

---

ಮಲಗಿದ್ದ ಭಾರತದ ಸಿಂಗ ಮರಿಸಿಂಗಗಳು ವೈಮು ರಿದೆದ್ದು ಸ್ವದೇಶೀ ಘರ್ಜನೆ ಮಾಡಲಾಗಿ, ಭಾರತದ ಎಲ್ಲ ಮೂಲೆಗಳಲ್ಲೂ ಸ್ತ್ರೀಪುರುಷರೆನ್ನದೆ, ಬ್ರಾಹ್ಮಣ ಬ್ರಾಹ್ಮಣೇತರರೆನ್ನದೆ, ಎಲ್ಲರೂ ಬಾಬು ಬಂಕಿಮರ "ವಂದೇ ಮಾತರಂ" ಮಹಾ ಮಂತ್ರದ ದೀಕ್ಷಿತರಾದಂದು, ಸ್ವದೇಶಿ ವಿಮಾ ಉದ್ಯಮವನ್ನು ಬೆಳೆಯಿಸಲು "ನ್ಯಾಷನಲ್ ಇಂಡಿಯನ್ ಲೈಫ್ ಇನ್ಷ್ಯೂರೆನ್ಸ್ ಕಂಪೆನಿಯು (National Indian Life Insurance Co. Ltd.,) ೧೯೦೬ ರಲ್ಲಿ ಕಲ್ಕತ್ತೆಯಲ್ಲಿ ಸ್ಥಾಪಿತವಾಯಿತು.

ಸಂಪೂರ್ಣ ಸ್ವದೇಶಿ ವಿಮಾ ಸಂಸ್ಥೆಯೆನಿಸಿಕೊಂಡಿರುವ ಕೇವಲ ಹಲವು ಕಂಪೆನಿಗಳಲ್ಲಿ ನ್ಯಾಷನಲ್ ಇಂಡಿಯನ್ ಲೈಫ್ ಇನ್ಷ್ಯೂರೆನ್ಸ್ ಕಂಪೆನಿಯೂ ಒಂದು. ಈ ಕಂಪೆನಿಯು ಇಂದು ಆಸೇತು ಹಿಮಾಚಲ ಪರ್ಯಂತ ವ್ಯಾಪಿಸಿ, ಸುಭದ್ರವೂ, ಸುರಕ್ಷಿತವೂ ಆದ ಕಂಪೆನಿಯೆಂದು ಕೀರ್ತಿಗೊಳ್ಳಲು ಮೆಸರ್ಸ್ ಮಾರ್ಟಿನ್ ಅಂಡ್ ಕಂಪೆನಿ (Messrs. Martin and Company) ಯವರ ಆಡಳಿತಕ್ಕೊಳಪಟ್ಟುದೇ ಮುಖ್ಯ ಕಾರಣ. ಮೆಸರ್ಸ್ ಮಾರ್ಟಿನ್ ಅಂಡ್ ಕಂಪೆನಿಯವರ ಹೆಸರು ಇಂಡಿಯದಲ್ಲಿ ಮನೆಮಾತಾಗಿದೆ. ಉದಯವಾದಂದಿನಿಂದಲೂ ಇವರೇ ಈ ಕಂಪೆನಿಯ ಮ್ಯಾನೇಜಿಂಗ್ ಏಜಂಟರು. ಇವರ ಕಾರ್ಯದಕ್ಷತೆ, ವ್ಯವಹಾರ ಕುಶಲತೆ, ವ್ಯಾಪಾರ, ನೀತಿ ನಿಪುಣತೆಗಳು ಇಂತಹ ಕಾರ್ಯದಲ್ಲಿ ಪ್ರವೇಶಿಸಿರುವವರಿಗೆ, ಇನ್ನೂ ಪ್ರವೇಶಿಸುವವರಿಗೆ ಆದರ್ಶಪ್ರಾಯವಾದುವು. ಸುಮಾರು ೫೦ ಕಂಪೆನಿಗಳ ಮ್ಯಾನೇಜಿಂಗ್ ಏಜಂಟರಾಗಿ ಇವರು ದಕ್ಷತೆಯಿಂದ ಕಾರ್ಯ ನಿರ್ವಹಿಸುತ್ತಿರುವರೆಂದರೆ ವ್ಯಾಪಾರಲೋಕದಲ್ಲಿ ಗಳಿಸಿರುವ ಕೀರ್ತಿಗೆ ಬೇರೆ ಸಾಕ್ಷಿ ಬೇಕಿಲ್ಲ.

ಮಾರ್ಟಿನ್ ಅಂಡ್ ಕಂಪೆನಿಯು ಒಂದು ಪಾಲುದಾರಿ ಸಂಸ್ಥೆ. ಇದುವರೆಗೆ ನ್ಯಾಷನಲ್ ಇಂಡಿಯಾದ ಅಧ್ಯಕ್ಷರಾಗಿದ್ದ ಸುಪ್ರಸಿದ್ಧರಾದ ದಿವಂಗತ ಸರ್. ರಾಜೇಂದ್ರನಾಥ ಮುಖರ್ಜಿಯವರು (Late Sir Rajendra Nath Mookerjee K. C. I. E., K. C. V. O.) ಇದರ ಪ್ರಧಾನ ಪಾಲುದಾರರಾಗಿದ್ದರು. ಭಾರತೀಯ ಪಾಲುದಾರಿ ಸಂಸ್ಥೆಗಳು ನಡೆಯುವುದಿಲ್ಲವೆಂದು ಬಂದಿರುವ ಅಪವಾದವನ್ನು ದೂರಮಾಡಿದವರಿವರು. ರಾಜಕೀಯ ರಂಗದಲ್ಲಿ ಇವರ ಹೆಸರನ್ನು ಕೇಳದವರಿಲ್ಲ. ಸರಕಾರದ ಎಲ್ಲ ವಾಣಿಜ್ಯ ವ್ಯಾಪಾರ ಸಮಿತಿಗಳಲ್ಲಿಯೂ ಇವರೇ. ಮಾರ್ಟಿನ್ ಅಂಡ್ ಕಂಪೆನಿಯವರಿಗೆ ಕಳೆಗೊಟ್ಟು, ನ್ಯಾಷನಲ್ ಇಂಡಿಯನ್ ಲೈಫ್ ಇನ್ಷ್ಯೂರೆನ್ಸ್ ಕಂಪೆನಿಯನ್ನು ಬೆಳೆಯಿಸಿ, ಭಾರತದ ವಿಮಾವ್ಯಾಪಾರಕ್ಕೆ ಕೀರ್ತಿ ತಂದವರಿವರು. ವಾಣಿಜ್ಯ ಪ್ರಪಂಚದಲ್ಲಿ ಮುಂದುವರಿಯಬೇಕೆಂದಿರುವವರೆಲ್ಲರಿಗೂ ಇವರ ಆದರ್ಶ ಜೀವನವು ಸ್ಫೂರ್ತಿದಾಯಕ. ಇವರನ್ನು ಹೆತ್ತ ವಂಗಮಾತೆಯು ಧನ್ಯಳು.

ಇತರ ಕಂಪೆನಿಗಳು ಅನುಸರಿಸಿರುವ ಪದ್ಧತಿಗಳನ್ನೇ ಅನುಸರಿಸುತ್ತ ನಡೆವ ಕಂಪೆನಿಗಳೇ ಹೆಚ್ಚು. ಇವುಗಳ ವಿನಾ ಹೊಸ ಹೊಸ ಪದ್ಧತಿಗಳನ್ನು ಗ್ರಹಿಸಿ ಅವನ್ನು ಪ್ರಚುರದಲ್ಲಿ ತರುವಷ್ಟು ಧೈರ್ಯವುಳ್ಳ ಕಂಪೆನಿಗಳು ಹಲವು ಮಾತ್ರ. ಆ ಹಲವು ಕಂಪೆನಿಗಳಲ್ಲಿ ನ್ಯಾಷನಲ್ ಇಂಡಿಯನ್ ಕಂಪೆನಿಯೂ ಒಂದು. ಈ ಕಂಪೆನಿಯು ಎರಡುವಿಧ ಹೊಸ ಪದ್ಧತಿಗಳನ್ನು ಪ್ರಚಾರಕ್ಕೆ ತಂದು ಇಂಡಿಯದ ವಿಮಾ ಕಂಪೆನಿಗಳಿಗೆ ಹೊಸ ಮಾರ್ಗದರ್ಶಕವಾಗಿದೆ. ಸಾಮಾನ್ಯ ಬೋನಸ್ಸಿನ ಎರಡರಷ್ಟು ಬೋನಸ್ಸನ್ನು ವಾಗ್ದಾನ ಮಾಡುವ ಪದ್ಧತಿಯು, ಶೇಕಡ ೪೦ ರಷ್ಟು ವಾಗ್ದಾನ ಮಾಡುವ ಪದ್ಧತಿ, ಈ ಎರಡು ಸೌಕರ್ಯವನ್ನು ಯಾವ ಕಂಪೆನಿಯೂ ಸಾರ್ವಜನಿಕರಿಗೆ ಒದಗಿಸಿರಲಿಲ್ಲ.

ಅಖಿಲ ಭಾರತ ಪ್ರಮುಖರಾದ ಶ್ರೀಯುತರುಗಳಾದ ಟಿ. ಎಲ್ ಮಾರ್ಟಿನ್, ಶ್ಯಾಮಪ್ರಸಾದ್ ಮುಖರ್ಜಿ ಕಲ್ಕತ್ತ ವಿಶ್ವ ವಿದ್ಯಾನಿಲಯದ ವೈಸ್ ಛಾನ್ಸೆಲರ್, ಮಹಾರಾಜ ಬಹದ್ದೂರ್ ಸರ್ ಪಿ. ಸಿ. ಟಾಗೋರ್ (Messrs T. L. Martin, Syama Prasad Mukherjee Vice Chancellor of the Calcutta University, Maharaja Bahadur Sir. P. C. Tagore) ಮುಂತಾದವರು ಡೈರೆಕ್ಟರುಗಳ ಮಂಡಲಿಯಲ್ಲಿ ದ್ದಾರೆ. ಈ ಹೆಸರುಗಳ ಅವಲೋಕನದಿಂದ ಕಂಪೆನಿಯಲ್ಲಿ ನಂಬಿಕೆ ಹುಟ್ಟದಿರದು.

...ಷ ವರ್ಷಗಳ " ನ್ಯಾಷನಲ್ ಇಂಡಿಯಾ "ನ ಪ್ರಗ...ಯು ಏಕಪ್ರಕಾರವಾಗಿದೆ. ಇದುವರೆಗೆ (೧೯೩೪ನೇ ...ಸೆಂಬರ್ ೩೧ನೇ ತಾರೀಖು) ಕಂಪೆನಿಯು ಐವತ್ತೆರಡು ...ಲಕ್ಷಗಳಿಗೆ ಮಿಾರಿದ ಜೀವವಿಮಾನಿಧಿಯನ್ನು ಗಳಿಸಿದೆ ...ದ ಒಟ್ಟು ಉದ್ಯಮವು ವರ್ಷೇ ವರ್ಷೇ ಹೆಚ್ಚುತ್ತ ನಡೆ...ಸ್ತು ೧೯೩೪ನೇ ಡಿಸೆಂಬರ್ ೩೧ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದ ಕೊನೆಯಲ್ಲಿ ೧,೭೩.೨೪,೫೦೦ ರೂ ಗಳ ಮೊತ್ತದ ೧೧,೯೧೯ ಪಾಲಿಸಿಗಳು ಪ್ರಚಾರದಲ್ಲಿದ್ದವು. ೧೯೩೪ನೇ ವರ್ಷದ ಒಟ್ಟು ಪ್ರೀಮಿಯಂ ಆದಾಯವು ೮,೪೩,೨೩೪ ರೂ ಗಳಿದ್ದಿತು.

೧೯೩೪ನೇ ಡಿಸೆಂಬರ್ ೩೧ನೇ ತಾರಿಖಿಗೆ ಮುಕ್ತಾಯವಾಗುವ ವರ್ಷದಲ್ಲಿ " ನ್ಯಾಷನಲ್ ಇಂಡಿಯಾ " ಕಂಪೆ



S. P. BOSE Esq., B. Com., (Lond.) Manager of the Head Office.

ಶ್ರೀ|| ಎಸ್. ಪಿ. ಬೋಸ್, ಬಿ. ಕಾಂ. (ಲಂಡನ್) ಪ್ರಧಾನ ಕಚೇರಿಯ ಮ್ಯಾನೇಜರು.

ನಿಯು ಸಾಧಿಸಿರುವ ಹೊಸ ಉದ್ಯಮವು ಬಹು ಆಶಾ ಜನಕವಾಗಿದೆ, ಅದು ಪ್ರಗತಿ ಪರ ಮಾರ್ಗದಲ್ಲಿದೆಯೆಂಬು ದಕ್ಕೆ ನಿದರ್ಶನವಾಗಿದೆ. ಈ ವರ್ಷದಲ್ಲಿ ೫೭,೧೯,೮೦೦ ರೂ. ಗಳ ಮೊತ್ತದ ೩.೬೩೭ ದರಖಾಸ್ತುಗಳು ಬಂದಿವೆ ಅದರ ಪೈಕಿ ೩೬,೯೨,೭೫೦ ರೂ. ಗಳ ಮೊತ್ತಕ್ಕೆ ಪಾಲಿಸಿ ಪತ್ರಗಳನ್ನು ಕೊಡಲಾಯಿತು. ಅವುಗಳ ಪೈಕಿ ೧,೭೪,೦೦೦ ರೂ. ಗಳ ಮೊತ್ತದ ೧೯ ಪಾಲಿಸಿಗಳನ್ನು ಪುನರ್ಜೀವ ಮಾಡಲಾಯಿತು. ಇದು ಕಳೆದ ವರ್ಷದಲ್ಲಾದ ಉದ್ಯಮಕ್ಕಿಂತ ೧೨,೮೭೯೦೦ ರೂ. ಗಳು ಅಂದರೆ ಶೇಕಡ ೫೩ ರಷ್ಟು ಹೆಚ್ಚು

ಆಡಳಿತ ಖರ್ಚು ಶೇಕಡ ೩೬ ೧೬ರಷ್ಟು ಇದ್ದುದು ಶೇಕಡ ೩೮.೬ ರಷ್ಟಕ್ಕೆ ಏರಿತು. ಕಂಪೆನಿಯ ಉದ್ಯಮವು ಶೇಕಡ ೫೩ ರಷ್ಟು ಹೆಚ್ಚಿದೆಯೆಂಬುದನ್ನು ಗಮನಿಸಿದರೆ ಇದೊಂದು ಮಹತ್ವದ ವಿಚಾರವಲ್ಲ. ಅಲ್ಲದೆ ತೆರಿಗೆ ಮೂಲಕವೇ ಕಂಪೆನಿಯು ೮೦೦೦ ರೂ. ಗಳನ್ನು ಕೊಟ್ಟಿ ತೆಂಬುದನ್ನು ಗಮನಿಸಬೇಕಾಗಿದೆ.

ಕಂಪೆನಿಯು ೧೯೩೫ನೇ ವರ್ಷದ ಸಾಲಿನಲ್ಲಿ ... ಲಕ್ಷ ರೂ. ಗಳಿಗೆ ಮೀರಿದ ಹೊಸ ಉದ್ಯಮವನ್ನು ಸಾಧಿ... ರುವುದಾಗಿ ತಿಳಿದು ಬರುತ್ತದೆ.



T. V. RAGHAVIAH Esq., Secretary for Mad ras and other Native States.
ಶ್ರೀ|| ಟಿ. ವಿ. ರಾಘವಯ್ಯ, ಮದರಾಸ್ ಅಧಿಪತ್ಯ ಮತ್ತು ಇತರ ದೇಶೀಯ ಸಂಸ್ಥಾನಗಳ ಕಾರ್ಯದರ್ಶಿ.

ಇದೆ. ಮತ್ತು ಕಂಪೆನಿಯ ಈ ವರೆಗಿನ ಉದ್ಯಮಗಳಲ್ಲಿ ಅತ್ಯಧಿಕವಾದುದಾಗಿದೆ.

ಎಲ್ಲ ಬಾಬುಗಳಿಂದ ಬಂದ ಒಟ್ಟು ಆದಾಯವು ೧೧,೦೬,೯೦೭ ರೂ. ಗಳು. ಇದು ಕಳೆದ ವರ್ಷಕ್ಕಿಂತ ೯೬,೪೬೩ ರೂ. ಗಳು ಹೆಚ್ಚು ಇದೆ. ಮತ್ತು ಅದರಲ್ಲಿ ೭೭.೮೮೫ ರೂ. ಗಳು ಪ್ರೀಮಿಯಂ ಬಾಬಿನಿಂದ ಮಾತ್ರ ದಿಂದಲೇ ಬಂದುದು.

ಭಾರತದಲ್ಲಿ ಕೇವಲ ಕೆಲವು ಕಂಪೆನಿಗಳು ವಿಮಾ ಶಾಸ್ತ್ರವೇತ್ತರನ್ನು (Actuary) ತಮ್ಮ ಕಂಪೆನಿಗಳಲ್ಲಿ ಉದ್ಯೋಗಕ್ಕಿಟ್ಟುಕೊಂಡಿವೆ. ಈ ಕಂಪೆನಿಯವರು ಎ. ಟಿ. ಪಾಲ್ (Mr. A. T. Pual) ರವರನ್ನು ವಿಮಾ ಶಾಸ್ತ್ರ ವೇತ್ತರನ್ನಾಗಿ ತಮ್ಮಲ್ಲಿ ಇಟ್ಟುಕೊಂಡಿದ್ದಾರೆ. ಯಾವ ಕಂಪೆನಿಯಾದರೂ ದಾರಿ ತಪ್ಪುವುದು ಸಹಜವಾದುದರಿಂದ ಪ್ರತಿಯೊಂದೂ ಹೀಗೆ ಆಕ್ಚುಯರಿಗಳೊಬ್ಬರನ್ನು ನೇಮಿ...

...ಕೊಳ್ಳಬೇಕಾದುದು ಅವಶ್ಯಕ. ಈ ಮಾರ್ಗವನ್ನು ಇವರು ಅನುಸರಿಸಿರುವುದು ಸ್ತುತ್ಯಾರ್ಹವಾದುದು.

ಅಲ್ಲದೆ ಕಂಪೆನಿಯು ಹಣವನ್ನು ಬಹು ವಿಚಕ್ಷಣೆಯಿಂದ ವಿನಿಯೋಗಿಸಿದ್ದಾರೆ. ಕಂಪೆನಿಯವರು ಸಾಧಿಸುವ ಅಭಿವೃದ್ಧಿಯ ಉದ್ಯಮಕ್ಕಾಗಿ ನಾವು ಅವರನ್ನು ಅಭಿನಂದಿಸುತ್ತೇವೆ. ಭವಿಷ್ಯದಲ್ಲಿ ಉತ್ತಮ ಫಲವನ್ನೇ ಸಾಧಿಸಲೆಂದು ಹಾರೈಸುತ್ತೇವೆ.

ಕಂಪೆನಿಯ ಆಡಳಿತವು ಸಮರ್ಥರಾದ ಶ್ರೀ. ಎಸ್. ಪಿ. ಬೋಸ್ ಬಿ. ಕಾಂ (ಲಂಡನ್) (S. P. Bose Esq. B. Com. (Lond)) ರವರ ಕೈಯಲ್ಲಿದೆ. ಇವರ ನೇತೃತ್ವದಲ್ಲಿ ಕಂಪೆನಿಯು ಇನ್ನೂ ಹೆಚ್ಚಿನ ಪ್ರಗತಿಪಡೆಯುವುದೆಂಬುದು ನಿಸ್ಸಂಶಯವು.

ಶ್ರೀ ಟಿ. ವಿ. ರಾಘವಯ್ಯ (Mr. T. V. Raghavaiah) ನವರು ಮದ್ರಾಸ್ ಆಧಿಪತ್ಯದ ಮತ್ತು ಇತರ ದೇಶೀಯ ಸಂಸ್ಥಾನಗಳ ಈ ಕಂಪೆನಿಯ ಕಾರ್ಯದರ್ಶಿಗಳಾಗಿದ್ದಾರೆ. ಸಾಮಾನ್ಯ ಪ್ರತಿನಿಧಿಯಾಗಿ ಕೆಲಸಮಾಡಿ ಇಂದು ಆಸ್ಥಾನವನ್ನು ಪಡೆದಿರುವರು. "ನ್ಯಾಷನಲ್ ಇಂಡಿಯ". ವನ್ನು ಆಂಧ್ರದೇಶಕ್ಕೆ ದಕ್ಷಿಣಭಾರತಕ್ಕೆ ತಂದವರೇ ಇವರು. ಇವರ ನೇತೃತ್ವದಲ್ಲಿ ದಕ್ಷಿಣ ಭಾರತದಲ್ಲಿ ಕಂಪೆನಿಗೆ ವಿಶೇಷ ಯಶಸ್ಸು ಲಭಿಸುವುದೆಂದು ನಮಗೆ ಪೂರ್ಣ ನಂಬಿಕೆಯಿದೆ.

ಶ್ರೀಯುತ ಕೆ. ವಿ. ದೇಶಿಕರ್‌ರವರು ಈ ಕಂಪೆನಿಯ ಮೈಸೂರು ದೇಶದ ಪ್ರಧಾನ ಏಜಂಟರು. ನಮ್ಮಲ್ಲಿ ಬಹು ದಿನಗಳು ಒಂದೆಡೆ ನಿಂತು ಕೆಲಸ ಮಾಡುವವರು ಇರುವುದು ವಿರಳ. ಆದರೆ ಇವರು ಬಹುಕಾಲದಿಂದಲೂ ಈ ಕಂಪೆನಿಗೆ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಿರುವುದು ಅಭಿನಂದನೀಯವು.





| Date. | No. of Policies in force. | Business in force. | Total Life Assurance Fund. | Total net liability. |
|---|---|---|---|---|
| | | Rs. | Rs. | Rs. |
| 30–6–1910 | 5,595 | 67,91,462 | 10,29,050 | 10,11,787 |
| 31–12–1913 | 6,642 | 81,46,382 | 17,68,702 | 16,72,902 |
| 31–12–1918 | 6,696 | 88,40,886 | 24,81,142 | 24,14,824 |
| 31–12–1923 | 10,666 | 1,87,11,528 | 43,42,077 | 37,45,125 |
| 31–12–1928 | 24,800 | 5,13,81,493 | 87,37,650 | 75,06,957 |
| 31–12–1933 | 28,627 | 5,20,07,632 | 1,60,37,350 | 1,38,31,358 |

# ಭಾರತ್ ಇನ್ಷ್ಯೂರೆನ್ಸ ಕಂಪನಿ ಲಿಮಿಟೆಡ್ (ಲಾಹೋರು)

## The Bharat Insurance Company Ltd., (Lahore)

---

ಯಾವ ಕಾಲದಲ್ಲಿ "ವಿಮಾ" ಪದ್ಧತಿಯೂ ಒಂದು ಶಾಸ್ತ್ರೀಯ ಪದ್ಧತಿಯೆಂಬ ಅರಿವು ಅನೇಕ ವಿಶ್ವ ವಿದ್ಯಾ ನಿಲಯ ಪದವೀಧರರಿಗೂ ತಿಳಿದಿರಲಿಲ್ಲವೊ, ಇಂದು ವ್ಯವಹಾರದಲ್ಲಿ ಅನೇಕರು ಬಳಸುತ್ತಿರುವ "ಪ್ರೀಮಿಯಂ" ಅಂತ್ಯಭಾಗದಲ್ಲಿ "ಭಾರತ್ ಇನ್ಷ್ಯೂರೆನ್ಸು ಕಂಪನಿ" ಯು ಲಾಹೋರಿನಲ್ಲಿ ಸ್ಥಾಪಿತವಾಯಿತು.

ಪಂಜಾಬಿನಲ್ಲಿ ಸ್ಥಾಪಿತವಾದ ವಿಮಾ ಕಂಪನಿಗಳಲ್ಲಿ ಇದು ಮೊಟ್ಟ ಮೊದಲನೆಯದು ; ಭಾರತೀಯ ಹಣ...




"BHARAT BUILDINGS" Head Office Lahore.
"ಭಾರತ ಬಿಲ್ಡಿಂಗ್ಸ್" ಹೆಡ್ ಆಫೀಸು ಲಾಹೋರು.

"ಸರೆಂಡರ್ ವ್ಯಾಲ್ಯು" ಪೆಯಿಡಪ್ ಪಾಲಿಸಿ" ಎಂಬ ಕಂಪನಿಗಳಲ್ಲಿ ಇದೂ ಒಂದು ; ಸ್ವದೇಶಿ ಜೀವವಿಮಾ ಶಬ್ದಾರ್ಥಗಳು ಅನೇಕ ವಿದ್ಯಾವಂತರಿಗೂ ಸಹ ಯಾವ ಪ್ರಚಾರದಲ್ಲಿ ಇದು ಸಲ್ಲಿಸಿರುವ ಸೇವೆಯು ಅತ್ಯುತ್ಕೃಷ್ಟವಾ... ಕಾಲದಲ್ಲಿ ತಿಳಿದಿರಲಿಲ್ಲವೋ, ಅಂತಹ ... ಶತಮಾನ ... ದುದು. ಈ ಕಂಪೆನಿಯು ಸ್ಥಾಪನೆಯಾಗುವ ಮೊದ...

...ರತೀಯ ಜೀವಮಾನವನ್ನು ಉಳಿದ ಐರೋಪ್ಯರ ಜೀವ ...ನದ ದರದ ಮೇಲೆ ಆಗಿನ ಕಾಲದ ಕಂಪನಿಗಳು ಒಪ್ಪಿ ...ಕೊಳ್ಳುತ್ತಿರಲಿಲ್ಲ. ಅಂದರೆ ಭಾರತೀಯರು ಜೀವವಿಮೆ ...ಮಾಡಬೇಕಾದರೆ ಐರೋಪ್ಯರು ತೆರುವದಕ್ಕಿಂತಲೂ ಹೆಚ್ಚಿನ ...ಪ್ರೀಮಿಯಮ್ಮನ್ನು ಕೊಡಬೇಕಾಗಿತ್ತು. ಇಂತಹ ಭೇಧ ...ವನ್ನು ದೂರಮಾಡಿ ಭಾರತೀಯ ಜನಾಂಗಕ್ಕೆ ವಿಮಾ ...ಪ್ರಯೋಜನಗಳನ್ನು ಧಾರಾಳವಾಗಿ ದಾನಮಾಡಿದ ...ಕೀರ್ತಿಯು ಈ ಕಂಪನಿಯದು. ಕಂಪನಿಯು ಅನುಸರಿ ...ಸುವ ವಿಮಾ ಪದ್ಧತಿಗಳು ಅತಿ ಉದಾರವಾದುವು ಮತ್ತು ...ಆಧುನಿಕ ವಿಮಾ ಶಾಸ್ತ್ರರೀತ್ಯಾ ಎಲ್ಲ ಅನುಕೂಲಗ ...ಳನ್ನು ಕಲ್ಪಿಸಿಕೊಡುವಂತಹುವು.

ಕಂಪನಿಯು ಆರಂಭವಾದಂದು ತೀರಾ ಸಾಮಾನ್ಯ ...ಸ್ಥಿತಿಯಲ್ಲಿತ್ತು. ಹುಟ್ಟಿದಂದಿನಿಂದ ಒಂಭತ್ತು ತಿಂಗಳ ...ಪರ್ಯಂತರ ಅದರ ಪ್ರೀಮಿಯಂ ಆದಾಯವು ಸುಮಾರು ...ಒಂದು ಸಾವಿರ ರೂಪಾಯಿಗಳು ಮಾತ್ರ, ಅದು ನಡೆಸಿದ ...ಉದ್ಯೋಗವು ರೂ. ೧,೬೫,೫೦೦ ಮಾತ್ರ. ಇಂದು ಕಂಪ ...ನಿಯ ವಾರ್ಷಿಕ ಪ್ರೀಮಿಯಂ ಹುಟ್ಟುವಳಿಯು ರೂ. ೨೮ ...ಲಕ್ಷಗಳಿಗೂ ಮೀರಿದೆ, ಸರಾಸರಿ ಪ್ರತಿ ದಿನವೂ ರೂ. ೨೦೦ ...ನ ಹಕ್ಕಿನ ಹಣವನ್ನು ಸಲ್ಲಿಸುತ್ತಿದೆ ಬಂಡವಾಳ, ಆಡ ...ಳಿತ ನಿರ್ವಾಹ, ಕೆಲಸಗಾರರು, ಇವೆಲ್ಲವೂ ಸಂಪೂರ್ಣ ...ವಾಗಿ ಭಾರತೀಯರದೇ ಆಗಿರುವ ಕಂಪನಿಗಳು ಭರತಖಂಡ ...ದಲ್ಲಿ ಕತಿವಿರಳ. ಎಲ್ಲ ಬಗೆಯಿಂದಲೂ ಅಡಿಯಿಂದ ...ಹಿಡಿದು ಮುಡಿಯವರೆವಿಗೆ, ಸಂಪೂರ್ಣ ಭಾರತೀಯ ಸಂಸ್ಥೆ ...ಎಂಬುವದು ಈ "ಭಾರತ್" ಕಂಪನಿಗೆ ಸಲ್ಲುವದು. ...ಪ್ರಾರಂಭವಾದ ಬಹುಕಾಲ ಕಂಪನಿಯ ಕಾರ್ಯ ಕ್ಷೇತ್ರವು ಬರಿ ಪಂಜಾಬಿನಲ್ಲಿ ಮಾತ್ರ ಹರಡಿತು. ಇಂದು ಅದು ಅಖಿಲ ಭಾರತ ಸಂಸ್ಥೆಯಾಗಿದೆ.

ಹಕ್ಕುಗಳ ತೀರ್ಮಾನವನ್ನು ಆದಷ್ಟು ತ್ವರೆಯಾಗಿಯೂ ಉದಾರವಾಗಿಯೂ ಮಾಡುವದರಲ್ಲಿ ಕಂಪನಿಯು ಹೆಸರುಗೊಂಡಿದೆ. ಅದರ ಪ್ರೀಮಿಯಂ ಆದಾಯ, ಖರ್ಚು, ಮರಣ ಸಂಖ್ಯೆ ಇವೆಲ್ಲವೂ ಕಂಪನಿಯ ಭದ್ರತೆಯನ್ನು ಸೂಚಿಸುವಂತಿವೆ. ವಿಮಾ ಪ್ರಚಾರ ಕಾರ್ಯದ ಸೇವೆಯನ್ನು ಅಡ್ಡಿ ತಡೆಗಳಿಲ್ಲದೆ ಸಲ್ಲಿಸಲು ಕಂಪನಿಯು ತನ್ನ ಶಾಖೆಗಳಿರುವೆಡೆಗಳಲ್ಲೆಲ್ಲಾ ಸ್ಥಳೀಯ ಆಡಳಿತ ಮಂಡಳಿಗಳನ್ನು ಈ ಕಂಪೆನಿಯು ಸ್ಥಾಪಿಸಿದೆ. ಈ ಆಡಳಿತ ಮಂಡಳಿಗಳೇ ವಿಮಾ ದರಖಾಸ್ತು ಸ್ವೀಕಾರ, ಹಕ್ಕುಗಳ ತೀರ್ಮಾನ, ಏಜಂಟರನ್ನು ನಿಯಮಿಸುವದು ಇವೇ ಮೊದಲಾದವುಗಳ ಅಧಿಕಾರಗಳನ್ನು ಉಳ್ಳುವಾಗಿವೆ

ಖರ್ಚು ೧೯೨೮ರಲ್ಲಿ ೩೫.೬೫, ೧೯೩೩ರಲ್ಲಿ ೨೦.೫೬, ೧೯೩೪ರಲ್ಲಿ ೨೦.೫೬, ೧೯೩೪ರಲ್ಲಿ ೨೦.೧೦ ಹೀಗೆ ಇಳಿಯುತ್ತಾ ಬಂದಿದೆ. ಕಂಪೆನಿಯು ಹಾಕಿದ ಬಂಡವಾಳದ ಮೇಲೆ ಶೇಕಡ ೪|| ಗಿಂತಲೂ ಹೆಚ್ಚಿಗೆ ಬಡ್ಡಿ ಗಿಟ್ಟಿಸುತ್ತಿದೆ. ೩೧ನೇ ಡಿಶಂಬರು ೩೪ಕ್ಕೆ ಕಂಪೆನಿಯ ಆಸ್ತಿಯು ಹಿಂದಿನ ವರ್ಷಕ್ಕಿಂತಲೂ ೩೦ ಲಕ್ಷ ಹೆಚ್ಚಿ ರೂ. ೨,೩೪,೧೫, ೫೩೪-೮-೪ ಆಗಿತ್ತು. ಆಗಿಂದಾಗ್ಗೆ ನಡೆದ ವಾಲ್ಯುಯೇಷನಿಂದ ಕಂಪೆನಿಯ ಭದ್ರತೆಯು ಸೂಚಿತವಾಗುತ್ತಿದೆ; ೩೧-೧೨-೩೩ ಕ್ಕೆ ಕೊನೆಯಾಗುವ ವಾಲ್ಯುಯೇಷನಂತೆ ಕಂಪನಿಗೆ ರೂ. ೨೨,೦೫,೯೬೨ ಗಳು ಮಿಕ್ಕಿತು. ಈ ಪೂರ್ಣ ಸ್ವದೇಶಿ ವಿಮಾ ಸಂಸ್ಥೆಯು ಇತೋಪ್ಯತಿಶಯವಾಗಿ ಬೆಳೆದು ನಾಡಿನ ಆರ್ಥಿಕ ಮುಕ್ತಿಗೆ ಹಾದಿ ತೋರಲೆಂಬುದೇ ನಮ್ಮ ಮನದ ಬಯಕೆ.

# ಬಾಂಬೆ ಲೈಫ್ ಅಷ್ಯೂರೆನ್ಸ್ ಕಂಪನಿ ಲಿಮಿಟೆಡ್

## The Bombay Life Assurance Company, Limited.

---

ಬಾಂಬೆ ಲೈಫ್ ಅಷ್ಯೂರೆನ್ಸ್ ಕಂಪೆನಿ ಲಿಮಿಟೆಡ್ ಸಂಸ್ಥೆಯು ಅತ್ಯಾಧುನಿಕ ಪದ್ಧತಿಗಳನ್ನನುಸರಿಸಿದ ಮತ್ತು ಅತ್ಯುತ್ತಮ ಪ್ರಗತಿ ಪಡೆದ ಭಾರತೀಯ ಜೀವವಿಮಾ ಕಂಪೆನಿಗಳಲ್ಲಿ ಒಂದು. ಈ ಸಂಸ್ಥೆಯು ೧೯೦೮ ರಲ್ಲಿ ಬೊಂಬಾಯಿನಲ್ಲಿ ಉದಯಿಸಿತು. ಉದಯಿಸಿದಾರಭ್ಯ

ಚುನಾಯಿಸುವರು. ಈ ರೀತಿ ಪಾಲಿಸಿದಾರರಿಗೂ ಕಂಪೆ ನಿಯ ಆಡಳಿತ ಜವಾಬ್ದಾರಿ ಇರುವುದು. ಕಂಪೆನಿ ಲಾಭದಲ್ಲಿ ಶೇಕಡ ೯೦ ರಷ್ಟನ್ನು (ಸಾಮಾನ್ಯವಾಗಿ ಕಾ ರಿಸುವ ನಿಧಿಗಳನ್ನು ತೆಗೆದಿಟ್ಟು) ಪಾಲಿಸಿದಾರರಲ್ಲಿ ಹಂಚ ಬೇಕೆಂದು ಮಾಡಿಕೊಂಡಿದ್ದಾರೆ. ಕಂಪೆನಿಯು ಹೊ



Company's Branch Office Buildings nearing completion at Udpi.
ಉಡಪಿ ಬ್ರಾಂಚ್ ಆಫೀಸಿನ ಕಟ್ಟಡ. ಪೂರ್ಣವಾಗುವುದರಲ್ಲಿದೆ.

ಸಮರ್ಥರ ನೇತೃತ್ವದಲ್ಲಿ ಕ್ರಮಿಸಿ, ವರ್ಷಗಳು ಕಳೆದಂತೆ ತನ್ನ ಉದ್ಯಮವನ್ನು ಹೆಚ್ಚಿಸಿಕೊಂಡು ಆರ್ಥಿಕ ಸ್ಥಿತಿಯನ್ನು ಬಲಪಡಿಸಿಕೊಂಡಿದೆ. ಇಂದು ಅದು ಈ ದೇಶದಲ್ಲಿನ ಸುಪ್ರಸಿದ್ಧ, ಸುಭದ್ರ ಮತ್ತು ಸುಲಭ ಖರ್ಚಿನ ಜೀವವಿಮಾ ಕಂಪೆನಿಗಳಲ್ಲಿ ಶ್ರೇಷ್ಠಸ್ಥಾನವನ್ನು ಪಡೆದಿದೆ.

ಕಂಪೆನಿಯ ನಿಯಮ ನಿಬಂಧನೆಗಳು ಅತ್ಯಾಧುನಿಕವಾದವು ಮತ್ತು ಶಾಸ್ತ್ರೀಯವಾದವು. ಕಂಪೆನಿಯ ಒಬ್ಬ ಡೈರೆಕ್ಟರರನ್ನೂ ಒಬ್ಬ ಆಡೀಟರನ್ನೂ ಪಾಲಿಸಿದಾರರು

ರುವ ಜವಾಬ್ದಾರಿ ಬಹುವಿಧ. ಸ್ವಂತ ಆದಾಯದಿಂ ಇತರರನ್ನು ಸಲಹುತ್ತಿರುವ ಸ್ತ್ರೀಯರ ಜೀವವಿಮೆಯನ್ನು ಕಂಪೆನಿಯು ಅಂಗೀಕರಿಸುತ್ತದೆ.

ಆದರೆ ಅವರ ವಿಮಾ ಮೊಬಲಗು ೧೦೦೦ ರೂ. ಗ ಕಡಮೆಯಿರಕೂಡದು. ವಯಸ್ಸು ೨೩ಕ್ಕೆ ಕಡಮೆ ಕೂಡದು. ೪೫ಕ್ಕೆ ಮೀರಿರಕೂಡದು. ಪಾಲಸಿಯ ಧಿಯು ಪಾಲಿಸಿದಾರನ ೬೦ ವರ್ಷ ವಯಸ್ಸಿಗೆ ಮು

ಕೊಡದು. ನೌಕಾ, ಸೇನೆ ಮತ್ತು ವೈಮಾನಿಕ ...ಮಾ ಪದ್ಧತಿಗಳನ್ನೂ ಕಂಪೆನಿಯು ಅನುಸರಿಸಿದೆ

ಪಾಲಿಸಿ ಷರತ್ತುಗಳು ತೃಪ್ತಿಕರವಾಗಿವೆ ಸರೆಂಡರ್ ...ಪಾಲಿಸಿಗಳ ಮೇಲೆ ಸಾಲ ಕೊಡುವುದು, ಪಾಲಿಸಿ ...ಗಳ ಪುನರುಜ್ಜೀವನ, ಪಾಲಿಸಿಗಳನ್ನು ಆಸ್ವಾದಿ ಮಾಡುವುದು ಇವೇ ಮೊದಲಾದುವುಗಳಿಗೆ ಅನ್ವಯಿಸಿದ ನಿಯಮಗಳು ಪಾಲಿಸಿದಾರರ ಹಿತದದೃಷ್ಟಿಯಿಂದ ಸೂಚಿಸಲ್ಪಟ್ಟವೆ.

ಕಂಪೆನಿಯು ಪಡೆಯುತ್ತಿರುವ ಏಕಪ್ರಕಾರವಾದ ಪ್ರಗತಿಯು ಈ ಕೆಳಗೆ ಕೊಟ್ಟಿರುವ ಸಂಖ್ಯೆಗಳಿಂದ ವ್ಯಕ್ತವಾಗುವುದು.

| ವರ್ಷ | ಹೊಸ ಉದ್ಯಮ | ಪ್ರೀಮಿಯಂ ಆದಾಯ | ಬಡ್ಡಿ | ವಿಮಾ ನಿಧಿ |
|---|---|---|---|---|
| ೧೯೩೧ | ೫,೬೬,೩೦೦ | ೧೧,೦೬,೬೭೩ | ೧,೭೩,೯೯೫ | ೩೩,೨೪,೮೦೮ |
| ೧೯೩೨ | ೬೩,೪೪೫,೦೦ | ೧೨,೫೦,೬೯೭ | ೨ ೧೭,೮೮೮ | ೩೮,೪೦,೪೧೩ |
| ೧೯೩೩ | ೯೪,೧೬,೫೨೦ | ೧೫,೧೨,೬೯೧ | ೨,೪೧,೯೪೨ | ೫೦.೦೪,೮೭೦ |
| ೧೯೩೪ | ೧,೦೪,೩೩,೭೫೦ | ೧೮,೫೫,೯೭೦ | ೨,೦೬,೪೦೭ | ೫೮,೦೨,೯೮೩ |



Messrs Kochikar Bros. and Staff with Head Office Manager.
ಮೆಸರ್ಸ್ ಕೊಚಿಕಾರ್ ಸಹೋದರರೂ ಮತ್ತು ಕೆಲಸಗಾರರು ಹೆಡ್ ಆಫೀಸ್ ಮ್ಯಾನೇಜರೊಡನಿರುವುದು.

೧೯೩೪ನೇ ಡಿಸೆಂಬರ್ ೩೧ನೇ ತಾರೀಖು ಪ್ರಚುರದಲ್ಲಿದ್ದ ಕಂಪೆನಿಯ ಒಟ್ಟು ಉದ್ಯಮವು ೩,೭೧,೪೧,೫೭೧ ರೂ. ಗಳ ಮೊತ್ತದ ೨೦.೩೩೩ ರೂ. ಗಳು.

೧೯೩೪ನೇ ಡಿಸೆಂಬರ್ ೩೧ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದಲ್ಲಿ ೧೫೭ ಜನ ಪಾಲಿಸಿದಾರರಿಗೆ ಮರಣದಿಂದ ಉದಯಿಸಿದ ೩,೩೧,೯೩೭ ರೂ. ಗಳ ವಿಮಾ ಹಕ್ಕನ್ನು ಕೊಟ್ಟರು. ಮತ್ತು ೧೦೫ ಎಂಡೋಮೆಂಟ್ ಪಾಲಿಸಿಗಳ ಅವಧಿಯು ಪೂರ್ಣವಾದುದರಿಂದ (ಬೋನಸ್ಸೂ ಸೇರಿ) ೧,೭೪,೧೬೨ ರೂ. ಗಳ ವಿಮಾ ಹಕ್ಕುಗಳನ್ನು ಕೊಡಬೇಕಾಯಿತು. ೧೯೩೪ನೇ ವರ್ಷಕ್ಕೆ ಹಳೆಯ ಷೇರುದಾರರಿಗೆ ವರ್ಷಕ್ಕೆ ಶೇಕಡ ೪ರಂತೆ ಡಿವಿಡೆಂಡನ್ನೂ, ಶೇಕಡ ...

೧೯೩೩ನೇ ಜೂಲೈ ತಿಂಗಳಿನಲ್ಲಿ ಅಂಗೀಕರಿಸಿದ ೧,೮೧೮ ಜನ ಹೊಸ ಷೇರುದಾರರಿಗೂ ತೆತ್ತ ಬಂಡವಾಳದ ಮೇಲೆ ವರ್ಷಕ್ಕೆ ಶೇಕಡ ೪ ರಂತೆ ಬಡ್ಡಿ ಕೊಡಬೇಕೆಂದು ಡೈರೆಕ್ಟರು ನಿಶ್ಚಯಿಸಿದರು.

೧೯೩೩ನೇ ಡಿಸೆಂಬರ್ ೩೧ನೇ ತಾರೀಖಿನ ವರೆಗಿನ ಆರನೆಯ ವಾರ್ಷಿಕ ವಿಮರ್ಶೆಯಲ್ಲಿ ಕಂಪೆನಿಯ ಆಸ್ತಿ ಮತ್ತು ಹೊಣೆಗಾರಿಕೆಯು ತೃಪ್ತಿಕರವಾದುದಾಗಿ ಕಂಡು ಬರುತ್ತದೆ. ವಿಮರ್ಶೆಯಿಂದ ೫,೩೭,೪೫೯ ರೂ. ಗಳ ಉಳಿತಾಯವಾಗಿರುವುದಾಗಿ ತೋರಿಬಂದಿತು. ಇದರ ಪೈಕಿ ೧,೭೪,೪೫೭ ರೂ. ಗಳನ್ನು ಕಂಪೆನಿಯ ರಿಸರ್ವ್ ನಿಧಿಗೆ ಸೇರಿಸಲಾಯಿತು. ಪಾಲಿಸಿದಾರರಿಗೆ ಬಂದ ಲಾಭ ಭಾಗವು ೩,೧೪,೦೩೨ ರೂ. ಗಳು. ಜೀವಾವಧಿ ಪಾಲಿಸಿಗಳಮೇಲೆ ೧೦೦೦ ರೂ. ಗಳಿಗೆ ವರ್ಷಕ್ಕೆ ೨೩ ರೂ ಗಳಷ್ಟು ಎಂಡೋವ್‌ಮೆಂಟ್ ಪಾಲಿಸಿಗಳಮೇಲೆ ೧೦೦೦ ರೂ. ಗಳಿಗೆ ವರ್ಷಕ್ಕೆ ೧೮ ರೂ. ಗಳಷ್ಟು ಬೋನಸ್ಸು ಹಂಚಲು ಸಾಧ್ಯವಾಯಿತು. ಇದು ಕಳೆವಸಾರಿ ಹಂಚಿದುದಕ್ಕಿಂತಲೂ ೩ ರೂ. ಜಾಸ್ತಿಯಿದೆ.

ಷೇರುದಾರರ ಪಾಲಿಗೆ ಬಂದ ೧/೧೦ ಭಾಗದ ಲಾಭದಲ್ಲಿ ಶೇಕಡ ೪ರ ವಾಗ್ದಾನ ಬಡ್ಡಿಯನ್ನು ಕೊಟ್ಟಮೇಲೆ ಉಳಿಪುದು. ೩೫,೪೯೧ ರೂ. ಗಳು. ಇದರಲ್ಲಿ ೨೮,೭೭೮ ರೂ. ಗಳನ್ನು ಪ್ರತಿಷೇರುದಾರನಿಗೆ ೩ ವರ್ಷಕ್ಕೆ ೨ ರೂ. ಪ್ರಕಾರ ಬೋನಸ್ಸು ಹಂಚಲು ಉಪಯೋಗಿಸಲು ಡೈರೆಕ್ಟರುಗಳು ನಿಶ್ಚಯಿಸಿದರು. ಶೇಕಡ ೪ರ ವಾಗ್ದಾನ ಡಿವಿಡೆಂಡಿಗೆ ಇದು ಸೇರಿದರೆ ಪ್ರತಿ ಷೇರಿಗೆ ೩ ರೂ ಗಳಾಗುತ್ತದೆ, ಅಂದರೆ ತೆತ್ತ ಬಂಡವಾಳದ ಮೇಲೆ ಶೇಕಡ ೧೨ರಷ್ಟಾಗುತ್ತದೆ. ಇದರ ಜೊತೆಗೆ ಪ್ರತಿ ಷೇರಿಗೂ ೧-೪-೦ ರೂ. ಜ್ಯೂಬಿಲಿ ಬೋನಸ್ಸು ಹಂಚಲು ತೀರ್ಮಾನಿಸಿದರು.

ಮೇಲ್ಕಂಡ ಅಂಕೆಗಳಿಂದ ಕಂಪೆನಿಯ ಆರ್ಥಿಕ ಸ್ಥಿತಿಯು ಉತ್ತಮವಾಗಿದೆಯೆಂದೂ, ವರ್ಷೇ ವರ್ಷೇ ಹೆಚ್ಚು ಹೆಚ್ಚು ಅಭಿವೃದ್ಧಿ ಪಡೆಯುತ್ತಿದೆಯೆಂದೂ ವ್ಯಕ್ತವಾಗುವುದು. ಕಂಪೆನಿಯ ಆಡಳಿತವು ದಕ್ಷರಾದ ಅನುಭವಶಾಲಿಗಳಾದ ಮಹನೀಯರ ಕೈಯಲ್ಲಿದೆ. ಸರ್. ಲಲುಭಾಯ್ ಸಾಮಲ್‌ದಾಸ್ ಕೆ.ಟಿ., ಸಿ.ಐ.ಇ., ಜೆ. ಪಿ., (Sir Lalubhai Samaldas K. T., C.I.E., J. P.) ಯವರು ಡೈರೆಕ್ಟರು ಮಂಡಲಿಯ ಅಧ್ಯಕ್ಷರು. ಶ್ರೀ. ಟಿ ಎಲ್. ಮೊಹತಾ ಬಿ. ಎಸ್ ಸಿ. (Mr. T. L. Mehta B.Sc) ಯವರು ಕಂಪೆನಿಯ ಮ್ಯಾನೇಜರ್… ಬಹು ವಿಚಕ್ಷಣೆಯಿಂದ ಕಾರ್ಯನಿರ್ವಹಿಸುತ್ತಿದ್ದಾರೆ… ಅವರ ಸಮರ್ಥ ಆಡಳಿತದಲ್ಲಿ ಭವಿಷ್ಯದಲ್ಲಿ ಕಂಪೆನಿಯು ಇನ್ನೂ ಹೆಚ್ಚು ಬೆಳೆಯುವುದೆಂದು ನಮಗೆ ಪೂರ್ಣ ಭ… ವಸೆ ಇದೆ.

## ಮೆಸರ್ಸ್ ಕೊಚಿಕಾರ್ ಬ್ರದರ್ಸ್
## Messrs. Kochikar Brothers

ಕೊಚಿಕಾರ್ ಸಹೋದರರು ಬಾಂಬೆಲೈಫ್ ಇನ್ಷ್ಯೂ… ರೆನ್ಸ್ ಕಂಪೆನಿ ಲಿಮಿಟೆಡ್‌ನ ಮದ್ರಾಸ್ ಶಾಖೆಯ ಸ… ಟರಿಗಳಾಗಿಯೂ, ಬೊಂಬಾಯಿ ನಗರ ಮತ್ತು ಸುತ್ತ… ಪ್ರದೇಶದ ಚೀಫ್ ಏಜಂಟರಾಗಿಯೂ ಕೆಲಸಮಾಡಿ ಭಾ… ವಿಮಾ ಪ್ರಪಂಚದಲ್ಲಿ ಒಂದು ಶ್ರೇಷ್ಠಸ್ಥಾನವನ್ನು ಗಳಿ… ದ್ದಾರೆ. ಈ ಸಂಸ್ಥೆಯು ೧೯೧೧ ರಲ್ಲಿ ಉದಯಿಸಿ… ಅಂದಿನಿಂದಲೂ ಅದು ಬಾಂಬೆ ಲೈಫ್ ಇನ್ಷ್ಯೂರೆ… ಕಂಪೆನಿಗೆ ಸಾಧಿಸಿಕೊಡುತ್ತಿರುವ ಉದ್ಯಮವು ವ… ವರ್ಷೇ ಹೆಚ್ಚುತ್ತ ನಡೆದಿದೆ. ೧೯೧೫ ರಲ್ಲಿ ಕೊಚಿಕಾ… ಸಹೋದರರು ಕಂಪನಿಗೆ ಸಾಧಿಸಿಕೊಟ್ಟ ಉದ್ಯಮ… ಪ್ರೀಮಿಯಂ ಆದಾಯವು ೧೫,೦೦೦ ರೂ. ಗಳಿದ್ದಿತು… ಅದೇ ೧೯೩೪ ರಲ್ಲಿ ೬,೦೦,೦೦೦ ರೂ. ಗಳಷ್ಟಿದ್ದಿತು… ೧೯೩೪ ರ ಅಂತ್ಯದಲ್ಲಿ ಒಟ್ಟು ಅವರ ಹೆಸರಿನಲ್ಲಿದ್ದ ಉ… ಮದ ಮೊತ್ತವು ಸುಮಾರು ೧ ಕೋಟಿಯಿದ್ದಿತು ಈ… "ಬಾಂಬೆ ಲೈಫ್"ನ ಒಟ್ಟು ಉದ್ಯಮದ ಸುಮಾ… ಮೂರನೇ ಒಂದು ಭಾಗವು ಇವರು ಸಾಧಿಸಿಕೊಟ್ಟು… ಯಾವುದೇ ಉಪಶಾಖೆಗೆ ಇಂತಹ ಕಾರ್ಯಸಾಧನೆ… ಹೆಮ್ಮೆಯ ವಿಷಯವೇ ಸರಿ. ಕಂಪೆನಿಗೆ ಶ್ರದ್ಧಾಯು… ಸೇವೆ ಸಲ್ಲಿಸುತ್ತಿರುವ ಈ ಸಂಸ್ಥೆಯ ಮೇಲೆ "ಬಾಂ… ಲೈಫ್" ಗೆ ಅಭಿಮಾನವಿರುವುದು ಸ್ವಾಭಾವಿಕವಾಗಿ… ಇದೆ.

ಮೆಸ್ಸರ್ ಕೊಚಿಕಾರ್ ಬ್ರದರ್ಸ್ ಸಂಸ್ಥೆಯು ೫ ಜನ… ಪಾಲುದಾರಿ ಸಂಸ್ಥೆ. ಇವರೆಲ್ಲರೂ ಸಹೋದರರು. ಈ… ಐದುಜನ ಸಹೋದರರೂ ಬಾಂಬೆ ಲೈಫ್ ಅಶ್ಯೂರೆ… ಕಂಪೆನಿಯ ಶ್ರೇಯಸ್ಸಿಗಾಗಿ ದುಡಿಯುತ್ತಿದ್ದಾರೆ. ಇವ… ಈ ಶ್ರಮಕ್ಕೆ ದೊರೆತಿರುವ ಫಲವೇನೆಂಬುದನ್ನು ಸಾ… ಗಮನಿಸಿ ಆಗಿದೆ.

ಶ್ರೀ|| ಕೆ. ಪದ್ಮನಾಭ ಪೈ, ಬಿ. ಎ., (Mr. K. Padmanabha Pai, B. A.,) ಯವರು ಅದರ… ಪ್ರಮುಖ ಪಾಲುದಾರರು. ವಿಮಾ…

...ಷದ ವಿಶೇಷ ಜ್ಞಾನಪಡೆದವರಿವರು. ವಿಮಾ ಉದ್ಯಮವನ್ನು ಸಂಪಾದಿಸುವುದರಲ್ಲಿ ಚತುರರು. ಬಾಂಬೆ ಲೈಫ್ ಅಶ್ಯೂರೆನ್ಸ್ ಕಂಪೆನಿಯ ಏಜನ್ಸಿಯನ್ನು ಪಡೆದ ಕೆಲಕಾಲದಲ್ಲೇ ಇವರು ಒಂದು ಲಕ್ಷ ರೂಪಾಯಿನ ಉದ್ಯಮವನ್ನು



TO
MESSRS. KOCHIKAR BROTHERS,
THE BOMBAY LIFE ASSURANCE COMPANY LIMITED,
DEAR SIRS,

An Inscribed address presented to the Kochikar Bros. by the staff and representatives of the firm.

ಸಂಸ್ಥೆಯ ಕೆಲಸಗಾರರೂ, ಪ್ರತಿನಿಧಿಗಳೂ ಕೊಚಿಕಾರ್ ಸಹೋದರರಿಗೆ ಅರ್ಪಿಸಿದ ಬಿನ್ನವತ್ತಳೆ.

ಅಡಕ್ಕೆ ಸಾಧಿಸಿಕೊಟ್ಟರು. ೧೯೧೭ ರಲ್ಲಿ ಮದ್ರಾಸ್ ಆಧಿಪತ್ಯದ ಉದ್ಯಮ ವ್ಯವಹಾರವನ್ನೆಲ್ಲ ಇವರಿಗೇ ವಹಿಸಿದರು.

ಶ್ರೀ|| ಕೆ. ನರಸಿಂಹ ಪೈ (Mr. K. Narasimha Pai) ರವರು ಎರಡನೆಯ ಪಾಲುದಾರರು. ಇವರು ಸಂಸ್ಥೆಯ ಆರ್ಗನೈಜಿಂಗ್ ಸೆಕ್ರಿಟರಿಯಾಗಿದ್ದಾರೆ. ಅವರು ವಿಮಾ ವಿಷಯವನ್ನು ಚೆನ್ನಾಗಿ ಗ್ರಹಿಸಿದ್ದಾರೆ. ಇವರು ಬರೆದ ಲೇಖನಗಳು ಆಗಾಗ್ಗೆ ವಿಮಾ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುತ್ತವೆ. ಇವರು ಜನರ ಸ್ವಭಾವವನ್ನರಿತು ಅವರಲ್ಲಿ ಕಲೆತು ವ್ಯವಹರಿಸ ಬಲ್ಲ ಚತುರರು. ಅವರ ಪ್ರಮುಖದಿಂದ ಸಂಸ್ಥೆಗೆ ಬಲಯುತವಾದ ಕಾರ್ಯಕ್ಷೇತ್ರವನ್ನು ವ್ಯವಸ್ಥೆಗೊಳಿಸುವುದು ಸಾಧ್ಯವಾಗಿದೆ.



Silver Casket presented to the Kochikar Brothers by Sir Lalubhai Samaldas.
ಕಂಪೆನಿಯ ಅಧ್ಯಕ್ಷರಾದ ಸರ್ ಲಲುಭಾಯ್ ಸಾಮಲ್‌ದಾಸ್‌ರವರು ಕೊಚಿಕಾರ್ ಸಹೋದರರಿಗೆ ಸನ್ಮಾನವಾಗಿತ್ತ ರಜತ ಪೆಟ್ಟಿಗೆ.

ಇತರ ಸಹೋದರರೂ ಸಂಸ್ಥೆಯ ಪಾಲುಗಾರರು. ಸಂಸ್ಥೆಯ ಏಳ್ಗೆಗಾಗಿ ಎಲ್ಲರೂ ದುಡಿಯುತ್ತಿದ್ದಾರೆ. ಇವರೆಲ್ಲರ ಏಕಮುಖವಾದ ಪ್ರಯತ್ನವೇ ಅವರ ಆಚ್ಚರಿಯ ಗೆಲುವಿನಕಾರಣ.

ಇವರು ಕಳೆದ ೨೫ ವರ್ಷಗಳಿಂದ ಸಲ್ಲಿಸಿರುವ ಅಮೋಘಸೇವೆಗಾಗಿ ಬಾಂಬೆ ಲೈಫ್ ಅಷ್ಯೂರೆನ್ಸ್ ಕಂಪೆನಿಯವರು ಇವರನ್ನು ಬಹುವಿಧವಾಗಿ ಸನ್ಮಾನಿಸಿರುವರು. ಅವರವರ ಬಾಂಧವ್ಯವು ದಿನೇ ದಿನೇ ಹೆಚ್ಚು ನಿಕಟವಾಗುತ್ತ ನಡೆದಿದೆ.

ಕೊಚ್ಚಿಕಾರ್ ಸಹೋದರರು ೧೯೩೫ನೇ ಡಿಸೆಂ ೧೨ ತಾರೀಖು ತಮ್ಮ ಸಂಸ್ಥೆಗೆ ೨೫ ವರ್ಷಗಳು ಪೂ ವಾದ ಪ್ರಯುಕ್ತ ರಜತಮಹೋತ್ಸವವನ್ನು ನೆರವೇರಿ

ಭವಿಷ್ಯದಲ್ಲಿ ಈ ಸಂಸ್ಥೆಗೆ ಇನ್ನೂ ಹೆಚ್ಚಿನ ಕೋರಿ ಚಿರಕಾಲ ಬಾಳಲೆಂದು ಹಾರೈಸುವೆವು.

ಮೆಸರ್ಸ್ ಕೊಚಿಕಾರ್ ಬ್ರದರ್ಸ್‌ರವರು ರೆಂಬುದನ್ನು ನಾವು ಇಲ್ಲಿ ಅಭಿಮಾನದಿಂದ ನೆನೆವೆವು.

# ದಿ ಯುನೈಟೆಡ್ ಕರ್ಣಾಟಕ ಇನ್ಶ್ಯೂರೆನ್ಸ್ ಕಂಪನಿ, ಲಿಮಿಟೆಡ್.

## ಪ್ರಧಾನ ಕಾರ್ಯಾಲಯ: ಧಾರವಾಡ

## The United Karnatak Insurance Company Ltd., Head Office :—Dharwar.

---

ಇದು ಉತ್ತರ ಕರ್ಣಾಟಕದ ಮೊದಲನೆಯ ವಿಮಾ ... ಹಿಂದೂಸ್ಥಾನದಲ್ಲಿಯೇ ವಿಮೆಯೆಂದರೆ ಹೇಸಿ ...ಯುವ ಜನರೇ ಹೆಚ್ಚು. ಉತ್ತರ ಕರ್ಣಾಟಕವಲ್ಲಿ ... ವಿಶೇಷ. ಆದರೂ ಕರ್ಣಾಟಕವಲ್ಲಿ ಇಂತಹ ಆರ್ಥಿಕ ...ಗಳು ವಿರಳವಾಗಿದ್ದುದರಿಂದ ಹಲವು ಹುರುಪಿನ ತರು... ಮುಂದೆ ಬಂದು ಈ ಕಂಪೆನಿಯನ್ನು ೧೯೨೯ ರಲ್ಲಿ ...ಪಿಸಿದರು.

ವಿಮೆಯ ಕೂಗಿಗೆ ಓಗುಡುವವರೇ ಕಡಿಮೆ. ಸಾಲ ... ನಾಡಿಗೆ ನಾಡೇ ರಾಜಕೀಯ ರಣರಂಗದಲ್ಲಿ ...ವಾಗ ಕಂಪನಿಯ ಕಾರ್ಯಕ್ಕೆ ಅಡ್ಡಿ ತಡೆಯಾದುದರಲ್ಲಿ ...ವೇನು? ಕಂಪನಿಯು ಮೊದಲ ವರ್ಷದಲ್ಲಿ ...ರು ೨ ಲಕ್ಷದ ವಿಮಾ ಕಾರ್ಯವನ್ನು ಮಾಡಿದರೂ ... ೨-೩ ವರ್ಷ ಆಗಬೇಕಾದಷ್ಟು ಕೆಲಸವಾಗಲಿಲ್ಲ. ...ನೆಯ ವರ್ಷದಲ್ಲಿ ಹಿಂದಿನದರ ಇಮ್ಮಡಿಗಿಂತಲೂ ...ನ ಕೆಲಸವನ್ನು ಮಾಡಿಕೊಂಡುದು ಹೆಮ್ಮೆಯ ಮಾತು.

ಕೇವಲ ಸ್ವದೇಶಿ ಕಂಪನಿ, ನಮ್ಮ ನಾಡಿನ ಸಂಸ್ಥೆ, ...ಅಭಿಮಾನದಿಂದ ನಮ್ಮ ವಿಮಾ ಸಂಘಗಳು ಬೆಳೆ... ಕಾಲವೊಂದಿತ್ತು. ಆಗ ಹಲವು ಹೊರಗಿನ ...ಂತಗಳ ಕಂಪನಿಗಳು ಕನ್ನಡ ನಾಡಿನಲ್ಲಿ ಹುಲುಸಾಗಿ ...ವು. ಭದ್ರವಾಗಿ ನೆಲೆಗೊಂಡವು. ಕನ್ನಡಿಗರು ... ತಿಳಿದಿದ್ದಾಗ ಆರ್ಥಿಕ ಮುಗ್ಗಟ್ಟು ವ್ಯೆವೆತ್ತು ... ಆದರಲ್ಲಿಯೂ ಚಳವಳದ ತಾಪ, ಕಂಪ... ಆಡಳಿತದ ಕೈಗಳ ಬದಲು, ಈ ತಾಪತ್ರಯಗಳಿಂದ ...ದಲ ನಾಲ್ಕು ವರ್ಷಗಳಲ್ಲಿ ಕಂಪನಿಯು ಉಳಿಯಿತಾ... ಬಲಗೊಂಡು ಬೆಳೆಯಲಿಲ್ಲ.

ನಂತರದ ಮಾತು ಬೇರೆ. ೧೯೩೪-೩೫ರ ಕಂಪ... ಸಂಘಟನೆಯನ್ನೂ ವಿಮಾ ಕಾರ್ಯವನ್ನೂ ಪರಿಶೀಲಿ... ಇದರ ಭದ್ರವಾದ ಭವಿತವ್ಯತೆಯ ಬಗ್ಗೆ ಎಂತಹರ ... ನಂಬುಗೆಯು ನೆಲೆಗೊಳ್ಳುವುದು. ಏಕೆಂದರೆ ಇದರ ಆಡಳಿತ ಮಂಡಲದಲ್ಲಿ ಕರ್ಣಾಟಕದ ಬಹುಶಃ ಎಲ್ಲ ಭಾಗಗಳ ಮನ್ನಣೆವೆತ್ತ ಮುಂದಾಳುಗಳೂ ವರ್ತಕರೂ ಸೇರಿದ್ದಾರೆ. ಇದಕ್ಕೆ ರಾಷ್ಟ್ರೀಯ ಮುಖಂಡರ ಪ್ರೋತ್ಸಾಹವೂ ಬೆಂಬಲವೂ ಇವೆ. ಕಂಪನಿಯ ಸಂಘಟನೆಯು ಈಗಾಗಲೇ ಬಂಗಾಲ, ಬಿಹಾರ, ಆಸಾಮ್, ಒರಿಸ್ಸಾ, ಮುಂಬಯಿ, ಮಹಾರಾಷ್ಟ್ರ, ಹೈದರಾಬಾದ್, ಗೋಮಾಂತಕ ಮುಂತಾದ ಪ್ರಾಂತಗಳವರೆಗೂ ಹಬ್ಬಿದೆ

ಇಷ್ಟರಲ್ಲಿಯೇ ಮುಬಯಿಯಲ್ಲಿ ಕಂಪನಿಯ ಶಾಖೆಯೊಂದನ್ನು ತೆರೆಯುವ ತಯಾರಿಯು ನಡೆದಿದೆ. ಪಂಚವಾರ್ಷಿಕ ಮೌಲ್ಯವು (Quinquennial Valuation) ಈಗತಾನೇ ಆಗಹತ್ತಿದೆ. ಕಂಪನಿಯ ಆಸ್ತಿಯ ಬೆಲೆಯು ಲಾಭದಾಯಕವಾಗಿ (Surplus Valuation) ಆಗುವುದೆಂದು ನಂಬಲಾಗಿದೆ. ಕಂಪನಿಯು ಪ್ರಾರಂಭದ ಖರ್ಚಿನ (Preliminary Expenses) ಮೊಬಲಗನ್ನು ಮುಗಿಸುವುದೂ ಖಂಡಿತವೇ.

ಈ ೫ ವರ್ಷಗಳಲ್ಲಿ ಕಂಪನಿಯ ಪಾಲಿಸಿದಾರರಲ್ಲಿ ಮೃತಪಟ್ಟವರು ಒಬ್ಬರೇ ಎಂದ ಬಳಿಕ ಉದ್ಯೋಗವನ್ನು ಕಂಪೆನಿಯವರು ಎಷ್ಟು ಜಾಗರೂಕತೆಯಿಂದ ನಿರ್ವಹಿಸುತ್ತಿದ್ದಾರೆಂಬುದು ತಿಳಿಯುವುದು ಮೃತಪಟ್ಟವರ ಹಕ್ಕಿನ ಹಣವನ್ನು (claim) ಕೂಡಲೆ ಕೊಡಲಾಗಿದೆ. ಕಂಪನಿಯ ವಿಮಾ ಧನವು (Life Fund) ವಿಮಾ ಗಣಿತಿಗಳ (Actuary) ಅಭಿಪ್ರಾಯದ ಮೇರೆಗೆ ಆಗತ್ಯಕ್ಕಿಂತಲೂ ಅಧಿಕವಾಗಿದೆ

ಒಟ್ಟನಮೇಲೆ ಯುನೈಟೆಡ್ ಕರ್ಣಾಟಕ ಇನ್ಶ್ಯೂರೆನ್ಸ್ ಕಂಪನಿಯು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುತ್ತ ನಡೆದಿದೆಯೆಂಬುದರಲ್ಲಿ ಅನುಮಾನವಿಲ್ಲ. ಕನ್ನಡನಾಡಿನ ನೆಮ್ಮದಿಗಾಗಿಯೂ, ಆರ್ಥಿಕೋನ್ನತಿಗಾಗಿಯೂ ಎಡಬಿಡದೆ ದುಡಿಯುತ್ತಿರುವ ಈ ಕಂಪನಿಗೆ ಕನ್ನಡಿಗರು ಇತೋಪ್ಯಧಿಕವಾಗಿ ನೆರವಾಗಿ ಆಡಳಿತ ಮಂಡಲದವರ ಸವಿಗನಸುಗಳು ನೆರವೇರುವಂತೆ ಮಾಡಲೆಂಬುದು ನಮ್ಮ ಬಯಕೆ.

# ಪಾಪ್ಯುಲರ್ ಇನ್ಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್, ಮಂಗಳೂರು

## The Popular Insurance Co., Ltd , Mangalore.

---

ಕರ್ಣಾಟಕದಲ್ಲಿ ಸಂಪೂರ್ಣವಾಗಿ ಕನ್ನಡಿಗರದೇ ಆದ ಒಂದು ವಿಮಾ ಸಂಸ್ಥೆಯು ಜನ್ಮವೆತ್ತಲು ಬಹಳ ದಿನಗಳು ಬೇಕಾದುವು. ಹಾಗೆ ದೀರ್ಘಕಾಲಾನಂತರ, ಹುಟ್ಟಿದ ಕೆಲವೇ ಕೆಲವು ಕಂಪೆನಿಗಳಲ್ಲಿ ಹಲವು ಏನೇನೋ ಅಡ್ಡಿ-ಅಡಚಣೆಗಳಿಗೆ, ವಿಘ್ನ - ವಿಡ್ಡೂರಗಳಿಗೆ, ಸಿಲುಕಿ ಬಿದ್ದು, ಸಂಶಯಾಸ್ಪದವಾದ ಬಾಲ್ಯವನ್ನೇ ಕಳೆದುವು. ಆದರೆ ಹುಟ್ಟುತ್ತಲೇ ದಿಟ್ಟತನದಿಂದ ಹೆಜ್ಜೆಯಿಟ್ಟು ನಿಂತು ಬೆಳೆಯುತ್ತಿರುವ, ಸಂಪೂರ್ಣವಾಗಿ ಕನ್ನಡಿಗರದೇ ಆದ, ಸಂಸ್ಥೆಯೇ ಮಂಗಳೂರಿನ ಪಾಪ್ಯುಲರ್ ಇನ್ಷ್ಯೂರೆನ್ಸ್ ಕಂಪನಿ.

೧೯೨೯ನೆಯ ಸಂವತ್ಸರದ ಸೆಪ್ಟಂಬರ್ ತಿಂಗಳಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೇಂದ್ರ ಸ್ಥಾನವಾದ ಮಂಗಳೂರಿನಲ್ಲಿ ಈ ಕಂಪೆನಿಯು ಪ್ರಾರಂಭವಾಯಿತು. ಈ ಕಂಪೆನಿಯ ಸ್ಥಾಪನಾಪುರುಷರು ಕರ್ಣಾಟಕದ ವೃತ್ತಪತ್ರಿಕಾ ಪ್ರಪಂಚದಲ್ಲಿ ನುರಿತವರಾದ, ಕನ್ನಡನಾಡು - ನುಡಿಗಳ ಅಭಿಮಾನಿಗಳಲ್ಲೊಬ್ಬರಾದ ಶ್ರೀ ಬೋಳಾರ ವಿಠ್ಠಲರಾವ್‌ಯರು ಅಂದ ಬಳಿಕ, ಸಂಸ್ಥೆಗೆ ಹೇಗೆ ಪರಿಪೂರ್ಣವಾದ ಕರ್ಣಾಟಕತ್ವವು ಸಿದ್ಧಿಸಿದೆಯೆಂಬುದನ್ನು ನಾವು ಹೇಳಬೇಕಾಗಿಲ್ಲ. 'ಏನೋ, ಕನ್ನಡಿಗರು, ವಿಮಾ-ವಾಣಿಜ್ಯ ಪ್ರಪಂಚದಲ್ಲಿಯೂ, ಮುಂದೆ ಬರುತ್ತಿರುವರು' ಎನ್ನುವುದಕ್ಕೆ ದೊಡ್ಡ ಸಾಕ್ಷಿಯಾಗಿ ಈ ಸಂಸ್ಥೆಯನ್ನು ಪ್ರಸ್ಥಾಪಿಸಿದುದಕ್ಕಾಗಿ ಕನ್ನಡಿಗರೆಲ್ಲರೂ ಇವರಿಗೆ ಚಿರಋಣಿಗಳಾಗಿರಬೇಕಾಗಿದೆ. ಹಾಗೆ, ದಿಟ್ಟತನದಿಂದ ತನ್ನ ಪುಟ್ಟ ಪುಟ್ಟ ಹೆಜ್ಜೆಗಳನ್ನು ಇಡಲು ಆರಂಭಿಸಿದ ಶಿಶುವು ಇದುವರೆಗೆ ಹೇಗೆ ನಡೆಯುತ್ತಾ ಬಂದಿದೆಯೆಂಬುದು ಈ ಕೆಳಗೆ ಕೊಟ್ಟಿರುವ ಅಂಕಿ-ಸಂಖ್ಯೆಗಳ ಪಟ್ಟಿಯಿಂದ ವ್ಯಕ್ತವಾಗುತ್ತದೆ :—

| ವರ್ಷ | ಪೂರ್ಣವಾದ ಉದ್ಯೋಗ | ಪ್ರೀಮಿಯಂ ಆದಾಯ | ವಿಮಾ ನಿಧಿ |
|---|---|---|---|
| ೧೯೩೦ | ೩,೧೦,೫೦೦ | ೧೨,೭೮೮ ೭ ೦ | ೩,೭೦೯ ೩ ೭ |
| ೧೯೩೧ | ೩,೦೩,೫೦೦ | ೧೫,೨೯೪ ೭ ೦ | ೧೦,೪೯೩ ೮ ೯ |
| ೧೯೩೨ | ೩,೩೫,೦೦೦ | ೨೬,೧೭೩ ೩ ೩ | ೧೫,೪೦೭ ೧೧ ೧೧ |
| ೧೯೩೩ | ೩,೪೫,೦೦೦ | ೨೮,೧೨೯ ೧೨ ೦ | ೨೫,೦೭೬ ೭ ೯ |
| ೧೯೩೪ | ೫,೪೦,೦೦೦ | ೫೨,೫೯೮ ೦ ೦ | ೫೦,೧೧೦ ೧೨ ೮ |
| ೧೯೩೫ | ೬,೧೦,೦೦೦ | ೫೭,೧೧೩ ೯ ೧೦ | ೬೪,೮೯೧ ೫ ೧೧ |

ಪಾಪ್ಯುಲರ್ ಇನ್ಷ್ಯೂರೆನ್ಸ್ ಕಂಪೆನಿಯ ಪಾಲಿಸಿ ಷರತ್ತು ಪಾಲಿಸಿದಾರರಿಗೆ ವಿಶೇಷ ಸೌಲಭ್ಯಗಳನ್ನು ಕೊಡುತ್ತದೆ. ಪಾಲಿಸಿಗಳ ಸರೆಂಡರ್ ಬೆಲೆ, ಪಾಲಿಸಿಗಳ ಪುನರುಜ್ಜೀವನ ಇವುಗಳ ಷರತ್ತುಗಳು ಉದಾರವಾದುವು. ಕಂಪೆನಿಯು ಅಲ್ಪ ಉಪಪತ್ತಿಯುಳ್ಳವರ ಸೌಕರ್ಯಕ್ಕಾಗಿ ೫೦೦ ರೂ. ಗಳ ಪಾಲಿಸಿಗಳನ್ನೂ ಅಂಗೀಕರಿಸುತ್ತದೆ. ಪಾಲಿಸಿದಾರರು ಭಾರತದಿಂದ ಹೊರಗಣ ಆರೋಗ್ಯ ವಸತಿಗಳಿಗೆ ಪ್ರವಾಸ ಬೆಳೆಸುವುದಾದರೆ ಆ ಕಾಲದಲ್ಲಿ ಹೆಚ್ಚಿನ ಪ್ರೀಮಿಯಂ ತೆಗೆದುಕೊಳ್ಳುವರು. ಈ ಸೌಲಭ್ಯವು ಹಲವರನ್ನು ಆಕರ್ಷಿಸಬಹುದೆಂದು ತೋರುವುದು. ಪಾಲಿಸಿಗಳ ಮೇಲೆ ಸರೆಂಡರ್ ಬೆಲೆಯ ಶೇಕಡ ೯೦ ರಷ್ಟನ್ನು ಶೇಕಡ ೭ರ ಬಡ್ಡಿಯಮೇಲೆ ಸಾಲಕೊಡುವರು. ಕಂಪೆನಿಯು ಸ್ತ್ರೀಯರ ಜೀವಮಾನದ ವಿಮೆಯನ್ನೂ ಅಂಗೀಕರಿಸುವುದು.

ಎಲ್ಲ ದರ್ಜೆಯ ಪಾಲಿಸಿದಾರರಿಗೂ ಅನುಕೂಲವಾಗುವ ಸಲವಾಗಿ ಕಂಪೆನಿಯು ವಿವಿಧ ಪದ್ಧತಿಗಳನ್ನು ಏರ್ಪಡಿಸಿದೆ. ಅವುಗಳಲ್ಲಿ ಮಕ್ಕಳ ಮದುವೆ ಎಂಡೋಮೆಂಟ್, ಪೂರ್ಣ ಲಾಭದ ಪಾಲಿಸಿ, ರೂಪಾಯಿನ ಪಾಲಿಸಿ ಇವು ಗಮನಾರ್ಹವು.

೧೯೩೫ನೇ ಡಿಸೆಂಬರ್ ೩೧ ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದಲ್ಲಿ ೭,೭೯,೭೫೦ ರೂ. ಗಳ ಪತ್ರದ ೬೫೫ ದರಖಾಸ್ತುಗಳು ಬಂದುವು. ಅವುಗಳ ಪೈಕಿ ೬,೧೧,೫೦೦ ರೂ. ಗಳ ಮೊತ್ತಕ್ಕೆ ಪಾಲಿಸಿ ಪತ್ರಗಳನ್ನು ಕೊಟ್ಟಿದ್ದಾರೆ. ಕಳೆದವರ್ಷ ಇದು ೫,೪೦,೦೦೦ ರೂ. ಗಳಿತ್ತು. ರೂ. ಗಳಷ್ಟು ಹೆಚ್ಚಿದೆ. ಇಂದಿನ ಜೀವವಿಮಾ ನಿಧಿಯು ಒಟ್ಟು ಮೊಬಲಗು ೬೪,೮೯೧-೫-೧೧ ರೂ. ಗಳಿರುತ್ತದೆ. ಈ ವರ್ಷದಲ್ಲಿ ಇದು ಶೇಕಡ ೩೭೫ ರಷ್ಟು ಹೆಚ್ಚಿದೆ.

ಸಂಸ್ಥೆಯು ತನ್ನ ಬಂಡವಾಳವನ್ನು ಸುರಕ್ಷಿತ ಮಾರ್ಗಗಳಲ್ಲಿ ವಿನಿಯೋಗಿಸಿ ಲಾಭ ಪಡೆಯುತ್ತಿದೆ. ಆದರ



Mr. BOLAR VITTAL RAO,
General Manager Popular Insurance Company. Limited, Mangalore.
ಶ್ರೀ|| ಬೋಳಾರ್ ವಿಠಲರಾವ್ ಅವರು
ಜನರಲ್ ಮ್ಯಾನೇಜರ್ 'ಪಾಪ್ಯುಲರ್ ಇನ್ಷ್ಯೂರೆನ್ಸ್ ಕಂಪನಿ, ಲಿಮಿಟೆಡ್' ಮಂಗಳೂರು.

ವರ್ಷದಲ್ಲಿ ಆದ ಒಟ್ಟು ಆದಾಯವು ೫೭,೧೧೩-೯-೧೦ ರೂ. ಗಳು, ಆದಾಯವು ಕಳೆದ ವರ್ಷಕ್ಕಿಂತಲೂ ಹೆಚ್ಚಿದೆ. ವಸೂಲಾಗದುಳಿದ ಪ್ರೀಮಿಯ ಹಣದ ವಸೂಲಿಗಾಗಿ ಈ ಸಾಲಿನಲ್ಲಿ ವಿಶೇಷ ಪ್ರಯತ್ನ ನಡೆದುದರಿಂದ ಈ ವರ್ಷದ ಖರ್ಚು ಸ್ವಲ್ಪ ಹೆಚ್ಚು ತೋರಿದೆ.

ಈ ವರ್ಷ ಜೀವವಿಮಾ ನಿಧಿಯು ೧೭,೬೯೯-೯-೩ ಸರಕಾರಿ ಸೆಕ್ಯೂರಿಟಿಗಳ ಬೆಲೆಯು ಶೇಕಡ ೨೫ ರಷ್ಟು ಹೆಚ್ಚಿದೆ.

ಈ ವರ್ಷದಲ್ಲಿ ಕಂಪೆನಿಯು ತನ್ನ ಉದ್ಯಮವನ್ನು ಮದ್ರಾಸ್ ಆಧಿಪತ್ಯ, ಹೈದರಾಬಾದ್ ಸಂಸ್ಥಾನ ಮತ್ತು ಮೈಸೂರು ಸಂಸ್ಥಾನಗಳಿಗೆ ಬೆಳೆಸಿತು. ಬೊಂಬಾಯಿ, ಬಂಗಾಳ, ಗುಜರಾತ್, ಕಾಥೇವಾಡ್, ಬೀಹಾರ್,

ಕೊಡಗು, ಕೆನರಾಗಳಲ್ಲಿರುವ ಈ ಕಂಪೆನಿಯ ಏಜನ್ಸಿಗಳು ಉತ್ತಮ ಉದ್ಯಮವನ್ನು ನಡೆಸುತ್ತಿವೆ.

ಈ ವರ್ಷದಲ್ಲಿ ೨೦೦೦ ರೂ. ಗಳ ಮೊತ್ತದ ಎರಡು ವಿಮಾ ಹಕ್ಕುಗಳು ಮಾತ್ರ ಉದಯಿಸಿದವು. ಇದು ಉದ್ಯಮ ಆರಿಸುವುದರಲ್ಲಿ ಕಂಪೆನಿಯ ಜಾಗರೂಕತೆಗೆ ನಿದರ್ಶನವಾಗಿದೆ.

ಈ ಅವಿಚ್ಛಿನ್ನವಾದ ಜೀವವಣಿಕೆಯು ಕಂಪೆನಿಯು ಸಕ್ರಮವಾಗಿ ನಡೆಯಿಸಲ್ಪಡುತ್ತಿದೆಯೆಂಬುದಕ್ಕೂ ಅದರ ಹೆಸರಿಗೆ ತಕ್ಕಂತೆ ಪ್ರಜಾನುರಾಗವನ್ನು ದಿನೇದಿನೇ ಸಂಪಾದಿಸುತ್ತಿದೆಯೆಂಬುದಕ್ಕೂ ನಿದರ್ಶನವಾಗಿದೆ. ೧೦೦೦ ರೂ. ಗಳ ಪಾಲಿಸಿಗೆ ೧೦ ರೂಪಾಯಿನಂತೆ ರಿವರ್ಷನರಿ ಬೋನಸ್ಸನ್ನು (Reversionary Bonus) ಕೊಡುವಂತೆ ಆಗಿದೆಯೆಂದು ಪ್ರಥಮ ಮೌಲ್ಯವೇತನದ ವರದಿಯಿಂದ ತಿಳಿದುಬರುತ್ತದೆ. ಹಳೆಯ ಕಂಪೆನಿಗಳಲ್ಲಿಯೂ ಇದು ಅಪರೂಪ. ಇಷ್ಟು ಅಲ್ಪ ಅವಧಿಯಲ್ಲಿಯೇ ಇಷ್ಟು ಬೋನಸ್ಸನ್ನು ಕೊಡಲು ಕರ್ಣಾಟಕದ ಕಂಪೆನಿಗಳಲ್ಲಿ ಇದೇ ಮೊದಲನೆಯದು.

ಕರ್ಣಾಟಕ ಸೌಭಾಗ್ಯವನ್ನು ವೃದ್ಧಿಪಡಿಸಲು ಸಂಪೂರ್ಣ ಕನ್ನಡಿಗರದೇ ಆದ ವಿಮಾ ಸಂಸ್ಥೆಯ ಬೆಳವಣಿಗೆಯು ಅತ್ಯವಶ್ಯಕವೆಂಬುದನ್ನು ಒತ್ತಿ ಹೇಳಿ, ಈಗಾಗಲೇ ಗೆಲುವಿನ ಹಾದಿಯಲ್ಲಿ ಮುಂದಡಿಯಿಟ್ಟಿರುವ ಈ ಕನ್ನಡ ಸಂಸ್ಥೆಯು ಇತ್ಯೋಪತಿಶಯವಾಗಿ ಪ್ರಜಾನುರಾಗಿಯಾಗಿ ಬೆಳೆದು, ಕನ್ನಡ ನಾಡಿಗೆ ಕೀರ್ತಿ ಸಂಪದಗಳನ್ನು ತರಲೆಂದು ಕನ್ನಡ ಮಾತೆಯಲ್ಲಿ ಪ್ರಾರ್ಥಿಸುತ್ತೇವೆ.



ಆರ್ಥಿಕ ಸ್ವರಾಜ್ಯವು ರಾಜಕೀಯ ಸ್ವರಾಜ್ಯದ ತಳಹದಿಯುಲ್ಲವೆ?

# ದಿ ಸ್ವರಾಜ್ಯ

## ಬ್ಯಾಂಕಿಂಗ್ ಅಂಡ್ ಇನ್ಷ್ಯೂರೆನ್ಸ್ ಕಂಪನಿ ಲಿಮಿಟೆಡ್

ಹೆಡ್ ಆಫೀಸು : ಧಾರವಾಡ.

ಡೈರೆಕ್ಟರ ಬೋರ್ಡಿನ ಚೇರ್ಮನ್ನರು :

ಶ್ರೀ|| ಎಸ್. ಕೆ. ಹೊಸಮನಿ, ಬಿ. ಎ., ಎಲ್ಎಲ್. ಬಿ., ಎಂ. ಎಲ್. ಎ.

ಪ್ರೆಸಿಡೆಂಟ್ ಕರ್ನಾಟಕ ಪ್ರಾವಿನ್ಷಿಯಲ್ ಕಾಂಗ್ರೆಸ್ ಕಮಿಟಿ.

ಆಕ್ಚ್ಯುಯರಿ :

ಪ್ರೊಫೆಸರ್ ಕೆ. ಬಿ. ಮಾಧವ ಎಂ. ಎ. ಎ. ಆಯ್ ಎ. (ಲಂಡನ್) ಮೈಸೂರು.

ಆಡಿಟರ್ :

ಶ್ರೀ|| ಎಸ್. ಆರ್. ಮಾಂಡ್ರೈ, ಬಿ. ಕಾಮ್. ಎಂ ಎ. (ಲಂಡನ್) ಇನ್ಕಾರ್ಪೊರೇಟೆಡ್ ಅಕೌಂಟೆಂಟ್ಸ್ ಬಾಂಬೆ,
ಧಾರವಾಡ ಅಂಡ್ ಬೆಂಗಳೂರು.

ಮ್ಯಾನೇಜರ್ :

ಶ್ರೀ|| ಡಿ. ವಿ. ಎಲ್. ನರಸಿಂಹರಾವ್, ಬಿ. ಎ. ಎ. ಎಸ್. ಎ. ಎ. (ಲಂಡನ್)

ಮ್ಯಾನೇಜಿಂಗ್ ಏಜಂಟ್ಸ್ :

ಶ್ರೀ|| ಎಂ. ಎಸ್. ಕೇಸರಿ, ಬಿ ಎ. ಎಲ್ಎಲ್. ಬಿ. ಮತ್ತು ವ್ಹಿ. ಡಿ. ತಲಕೋಟಿ.

ಕರ್ಣಾಟಕ ಮಾತೆಯ ಆರ್ಥಿಕೋನ್ನತಿಗಾಗಿ ಅಖಿಲ ಕರ್ಣಾಟಕದಲ್ಲಿ ಸಣ್ಣ ಸಣ್ಣ ಹಳ್ಳಿಗಳಿಗೂ ಸಹ ವಿಮೆಯ ಸೌಕರ್ಯಗಳನ್ನು ಒದಗಿಸಿಕೊಟ್ಟ ವಿಮೆ ಕಂಪೆನಿ. ಕರ್ಣಾಟಕದ ವ್ಯಾಪಾರ ಉದ್ಯೋಗಗಳನ್ನು ಬೆಳೆಯಿಸಲು ಹೆಣಗಾಡುವ ಮತ್ತು ಕನ್ನಡಿಗರು ಬಟ್ಟುಮಾಡಿ ತೋರಿಸಿ ಅಭಿಮಾನಪಡಬಹುದಾದ ಆದರ್ಶ ವಿಮೆ ಸಂಸ್ಥೆ. ಬಡವರಿಗೂ ಬಲ್ಲಿದರಿಗೂ ಉಪಯೋಗವಾಗುವಂಥ ವೈದ್ಯಕೀ ಪರೀಕ್ಷೆಯುಳ್ಳ ಮತ್ತೂ ಪರೀಕ್ಷೆ ಇಲ್ಲದ ಹೊಸ ಹೊಸ ವಿಮೆ ಪದ್ಧತಿಗಳು.

ಅಭಿಮಾನದಿಂದ ಕಾರ್ಯ ನಿರ್ವಹಿಸಲು ಕುಶಲರಾದ ಏಜಂಟರು ಅಲ್ಲಲ್ಲಿ ಬೇಕಾಗಿದ್ದಾರೆ. ಸವಿಸ್ತಾರ ಮಾಹಿತಿಗಾಗಿ ಕಂಪೆನಿಯ ವಿಳಾಸಕ್ಕೆ ಇಂದೇ ಬರೆಯಿರಿ.

*The Manager,*

**Swaraj Banking and Insurance Co., Ltd.,**

DHARWAR.

# ದಿ ಸ್ವರಾಜ್ಯ ಬ್ಯಾಂಕಿಂಗ್ ಮತ್ತು ಇನ್ಶ್ಯೂರೆನ್ಸ್ ಕಂಪೆನಿ, ಲಿಮಿಟೆಡ್

## The Swaraj Banking and Insurance Company, Limited.

---

ಇಡೀ ವಿಶ್ವವೇ ವಿಮಾ ಲೋಕದತ್ತ ಚಲಿಸುತ್ತಿರಲು, ಭರತಖಂಡದ ನಾನಾ ಭಾಗಗಳವರು ವಿಮಾ ಪ್ರಚಾರವನ್ನು ಭರದಿಂದ ಸಾಗಿಸುತ್ತಿರಲು, ಕರ್ನಾಟಕವೂ ಈ ಮಹಾ ಕಾರ್ಯ ಸಾಧನೆಯಲ್ಲಿ ಹಿಂದುಳಿಯಲಿಲ್ಲವೆಂಬುದಕ್ಕೆ ನಿದರ್ಶನವಿತ್ತ ಸಂಸ್ಥೆಗಳಲ್ಲಿ ಈ ಸಂಸ್ಥೆಯೂ ಒಂದು. ಉಜ್ವಲ ದೇಶಭಕ್ತರಾದ ಕರ್ನಾಟಕಾಂಬೆಯ ಮುದ್ದು ಮಕ್ಕಳಲ್ಲೊಬ್ಬರಾದ ಶ್ರೀಯುತ ಎಸ್. ಕೆ. ಹೊಸಮನಿ (Mr. S. K. Hosmani) ಅವರೇ ಈ ಕಂಪೆನಿಯ ಸ್ಥಾಪನೆಗೆ ಮೂಲ ಕಾರಣರೆಂದ ಬಳಿಕ ಕಂಪೆನಿಗೆ ಕರ್ನಾಟಕತ್ವವು ಹೇಗೆ ಸಿದ್ಧಿಸಿತು ಎಂಬುದನ್ನು ನಾವು ಬೇರೆ ಹೇಳಬೇಕಾಗಿಲ್ಲ. ನಾಡಿನ ಆರ್ಥಿಕ ರಾಜಕೀಯ ಉದ್ಧಾರಕ್ಕಾಗಿ ಶ್ರೀ|| ಹೊಸಮನಿಯವರು ಕಳೆದ ಕಾಲು ಶತಮಾನದಿಂದ ಸಲ್ಲಿಸುತ್ತಿರುವ ಸೇವೆಯು ಮಹತ್ತರವಾದುದು. ಮುಂಬೈ ಕರ್ನಾಟಕದಲ್ಲಿ ಉತ್ತಮ ಬ್ಯಾಂಕೆಂದು ಹೆಸರು ಪಡೆದ ದಿ ಕರ್ನಾಟಕ ಕೋ-ಆಪರೇಟಿವ್ ಸೆಂಟ್ರಲ್ ಬ್ಯಾಂಕಿನ (The Karnataka Co-operative Central Bank) ಬೆಳವಣಿಗೆಗೆ ಇವರೇ ಕಾರಣರು. ಇಂದು ಇವರು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಗೆ ಅಧ್ಯಕ್ಷರಾಗಿಯೂ, ಆಲ್ ಇಂಡಿಯಾ ಪಾರ್ಲಿಮೆಂಟರಿ ಬೋರ್ಡಿನ (All India Parlimentary Board) ಸದಸ್ಯರಾಗಿಯೂ, ಲೆಜಿಸ್ಲೇಟಿವ್ ಕೌನ್ಸಿಲ್ ಮೆಂಬರಾಗಿಯೂ ಇದ್ದಾರೆ. ಶ್ರೀಯುತ ಹೊಸಮನಿಯವರು ಸತ್ಯಾಗ್ರಹ ಚಳವಳಿಯಲ್ಲಿ ಜೈಲಿನಲ್ಲಿದ್ದಾಗ ಕರ್ನಾಟಕ ಆರ್ಥಿಕ ಉನ್ನತಿಯನ್ನು ಹೇಗೆ ಸಾಧಿಸಬೇಕೆಂದು ಚಿಂತಿಸಿ, ಕರ್ನಾಟಕದಲ್ಲಿ ವಿಮಾ ಪ್ರಚಾರವು ಅತ್ಯವಶ್ಯಕವಾದುದೆಂದು ಭಾವಿಸಿ, ಮುಂಬೈ ಕರ್ನಾಟಕದ ಕೆಲವು ಮುಂದಾಳುಗಳೊಂದಿಗೆ ಪತ್ರ ವ್ಯವಹಾರ ನಡೆಸಿ, ಈ ಕಂಪೆನಿಯನ್ನು ಧಾರವಾಡದಲ್ಲಿ ತಾರೀಖು ೬-೬-೩೩ರಲ್ಲಿ ಸ್ಥಾಪಿಸಿದರು. ಕಂಪೆನಿಗೆ ಅಧ್ಯಕ್ಷರು ಇವರೇ.

ಸ್ವರಾಜ್ಯ ಬ್ಯಾಂಕಿಂಗ್ ಮತ್ತು ಇನ್ಶ್ಯೂರೆನ್ಸ್ ಕಂಪೆನಿಯ ಷೇರುದಾರರನ್ನು ಕೂಡಿಸುವುದರಲ್ಲಿ ಒಂದು ವಿಶೇಷವಿದೆ. ಸಾಧಾರಣವಾಗಿ ಯಾವತ್ತೂ ಕಂಪೆನಿಗಳು ತಮ್ಮ ಷೇರುಗಳನ್ನು ಬೇಕಾದವರಿಗೆ ಮಾರುತ್ತಾರೆ ಆದರೆ ಸ್ವರಾಜ್ಯ ಕಂಪೆನಿಯವರು ಷೇರುಗಳನ್ನು ಕೂಡಾ ಆಯ್ದ ಜನರಿಗೆ ಮಾತ್ರ ಮಾರುತ್ತಾರೆ.



S. K. HOSAMANI Esq. B.A., L.L.B;
President, The Swaraj Banking and Insurance Co., Ltd.

ಶ್ರೀ|| ಎಸ್. ಕೆ. ಹೊಸಮನಿ, ಬಿ.ಎ.,ಎಲ್‌ಎಲ್.ಬಿ.,
ಅಧ್ಯಕ್ಷರು,
ದಿ ಸ್ವರಾಜ್ಯ ಬ್ಯಾಂಕಿಂಗ್ ಅಂಡ್ ಇನ್ಶ್ಯೂರೆನ್ಸ್ ಕಂ., ಲಿ.

ಡೈರೆಕ್ಟರ ಬೋರ್ಡಿನ ಮೆಂಬರರು ಕರ್ನಾಟಕದ ಪ್ರಮುಖ ಮುಂದಾಳುಗಳಾಗಿರುತ್ತಾರೆ. ಕಂಪೆನಿಯ ವೈಸ್ ಪ್ರೆಸಿಡೆಂಟರು ಪಸ್ರಿದ್ಧರಾದ ವ್ಹಿ. ಬಿ. ಹಾಲಭಾವಿ ಬಿ. ಎ., ಎಲ್‌ಎಲ್.ಬಿ. ಯವರು.

ಇನ್ನೊಂದು ವಿಶೇಷವೇನೆಂದರೆ, ಸ್ವರಾಜ್ಯ ಬ್ಯಾಂಕಿಂಗ್ ಮತ್ತು ಇನ್ಶ್ಯೂರೆನ್ಸ್ ಕಂಪೆನಿಯಲ್ಲಿ ಕರ್ನಾಟಕದ

ಗಳಿಂದ ಅವಶ್ಯಕವಾದುದು. ಅಚ್ಚ ಮೈಸೂರು ವಿಮಾ ಕಂಪೆನಿಗಳು, ದೇಶದ ಅಧಿಕ ಸಂಖ್ಯಾತರ ಪ್ರಯೋಜನಕ್ಕಾಗಿ ಅತ್ಯಗತ್ಯವಾಗಿ ನಮ್ಮ ಸಂಸ್ಥಾನಕ್ಕೆ ಬೇಕಾಗಿದೆ. ಇದನ್ನ ರಿತು ಇಂತಹ ಸರ್ವಜನ ಕ್ಷೇಮದಾಯಕವಾದ ಉದ್ಯೋಗ



V. VENKATAPPA Esq, M.L.C.
Chairman, Mysore Insurance Co. Ltd.
ಶ್ರೀ|| ವಿ. ವೆಂಕಟಪ್ಪ, ಎಂ. ಎಲ್. ಸಿ.,
ಅಧ್ಯಕ್ಷರು, ಮೈಸೂರು ಇನ್ಷ್ಯೂರೆನ್ಸ್ ಕಂಪನಿ, ಲಿ.

ವನ್ನು ಶಾಸ್ತ್ರೀಯವಾದ ಸುರಕ್ಷಿತ ರೀತಿಯಿಂದ ನಡೆಯಿಸಿ ನಾಡಿನ ಆರ್ಥಿಕ ಬಲವನ್ನು ಬೆಳೆಯಿಸುವುದಕ್ಕಾಗಿಯೇ, "ಮೈಸೂರು ಇನ್ಷ್ಯೂರೆನ್ಸ್ ಕಂಪನಿಯು" ಸ್ಥಾಪಿತವಾಯಿತು. ಇಂದು ಭರತಖಂಡದ ನಾನಾ ಮೂಲೆಗಳಲ್ಲಿ ಭಾರತದ ಆರ್ಥಿಕ ಉನ್ನತಿಗಾಗಿ ವಿಶ್ವಪ್ರಯತ್ನಗಳು ನಡೆಯುತ್ತಿವೆ. ಈ ಪ್ರಯತ್ನದಲ್ಲಿ ತಾನೂ ಭಾಗಿಯಾಗಬೇಕೆಂಬುದು ಮೈಸೂರು ಇನ್ಷ್ಯೂರೆನ್ಸ್ ಕಂಪೆನಿಯ ಪವಿತ್ರ ಆಶೆ. ಹೀಗೆ ಮೈಸೂರಿನ ಮಂಗಳವನ್ನು ಬಯಸಿ, ಮೈಸೂರಿನ ಕೀರ್ತಿಯನ್ನು ಜ್ವಲಗೊಳಿಸಿ ಭರತಖಂಡದ ಸೇವೆಮಾಡುವುದಕ್ಕಾಗಿ ಮೈಸೂರು ಇನ್ಷ್ಯೂರೆನ್ಸ್ ಕಂಪನಿಯು ಮುಂದೆ ಬಂದಿದೆ.

ಮೈಸೂರು ಇನ್ಷ್ಯೂರೆನ್ಸ್ ಕಂಪೆನಿಯು ಮೈಸೂರಿನವರ ಮತ್ತು ಮೈಸೂರಿನ ಅಭ್ಯುದಯಕ್ಕಾಗಿ ಮೈಸೂರು ಬಂಡವಾಳದಿಂದ ಮೈಸೂರಿನವರ ನೇತೃತ್ವದಲ್ಲಿ ಮೈಸೂರಿನ ಕೆಲಸಗಾರರಿಂದ ನಡೆಸಲ್ಪಡುತ್ತಿರುವ ಅಚ್ಚ ಮೈಸೂರು ಸಂಸ್ಥೆ. ಎಲ್ಲಾ ಬಗೆಯಿಂದಲೂ ಮೈಸೂರಿನದೇ ಆದ ಸಾರ್ವಜನಿಕ ಜೀವವಿಮಾ ಸಂಸ್ಥೆಗಳಲ್ಲಿ ಇದೇ ಮೊಟ್ಟ ಮೊದಲನೆಯದು. ಮೈಸೂರು ವಿಮಾ ಇತಿಹಾಸದಲ್ಲಿ ಅಪೂರ್ವವಾದ ಇಂತಹ ವಿಮಾ ಕಂಪೆನಿಯನ್ನು ಸ್ಥಾಪಿಸಿ ದುದಕ್ಕಾಗಿ ಈ ಕಂಪೆನಿಯ ತರುಣ ಮುಂದಾಳುಗಳು ಅಭಿ ವಂದನೀಯರು. ವಿಮಾ ಜ್ಯೋತಿಯನ್ನು ಗುಡಿಸಲೆನ್ನದೆ ಮಹಾವರ್ಯವೆನ್ನದೆ ದೇಶದ ಎಲ್ಲಾ ಮನೆಗಳಲ್ಲಿಯೂ ಬೆಳ ಗುವಂತೆ ಮಾಡುವುದೂ, ವಿಮಾ ಉದ್ಯೋಗವೆಷ್ಟು ಗೌರವಯುತವಾದುದೆಂಬುದನ್ನೂ ಮತ್ತೆ ವ್ಯಕ್ತಿಯ ಮತ್ತು ದೇಶದ ಏಳಿಗೆಗೆ ಅತ್ಯವಶ್ಯಕವಾದ ವಿಪುಲ ಶಕ್ತಿಯು ಇದ ರಲ್ಲಿ ಅಡಗಿದೆ ಎಂಬುದನ್ನೂ ಜನಗಳಲ್ಲಿ ಪ್ರಚಾರ ಮಾಡು ವುದೂ, ರಾಷ್ಟ್ರದ ಸರ್ವತೋಮುಖವಾದ ಆರ್ಥಿಕ ಉನ್ನ ತಿಗೆ ನೆರವಾಗುವುದೂ ಇವೇ ಮೊದಲಾದ ವಿಶ್ವಕಲ್ಯಾಣ ಕಾರಕಗಳಾದ ಆದರ್ಶಗಳೇ ಈ ಕಂಪೆನಿಯ ಧ್ಯೇಯ ಗಳಾಗಿವೆ. ಇಂತಹ ಹಿರಿಯ ಗುರಿಯನ್ನಿಟ್ಟುಕೊಂಡಿರುವ ಈ ಕಂಪೆನಿಯೊಂದಿಗೆ ಮೈಸೂರಿನ ಪ್ರತಿಯೊಬ್ಬರೂ—ಅಲ್ಲ ಪ್ರತಿಯೊಬ್ಬ ಭಾರತೀಯನೂ ಸಹಕರಿಸಬೇಕಾದುದು ಧರ್ಮವಾಗಿದೆ. ಅಂತಹ ಸಹಕಾರವು ದೊರೆತು ಮಹಾ



J. MOHAMED IMAM Esq. B.A., B.L., M.R.A., M.L.C.,
Director, Mysore Insurance Co., Ltd.
ಶ್ರೀ|| ಜೆ. ಮುಹಮದ್ ಇಮಾಮ್, ಬಿ.ಎ. ಬಿ.ಎಲ್., ಎಂ.ಆರ್.ಎ., ಎಂ.ಎಲ್.ಸಿ.,
ಡೈರೆಕ್ಟರು, ಮೈಸೂರು ಇನ್ಷ್ಯೂರೆನ್ಸ್ ಕಂಪನಿ, ಲಿ.

ಜನರ ಆಶ್ರಯದಲ್ಲಿ ಕಂಪೆನಿಯು ಚಿರಕಾಲ ಬದುಕಿ, ಮೈಸೂರಿನ ಆರ್ಥಿಕ ಮುಕ್ತಿಯನ್ನೂ ಭಾರತದ ಹಿತವನ್ನೂ ಸಾಧಿಸಲಿ.

ಈ ಕಂಪೆನಿಯು ಪ್ರಕಟಿಸಿರುವ ವರದಿಗಳನ್ನು ನೋಡಿ ದರೆ ಯಾವ ಮೈಸೂರಿನ ಪ್ರಜೆಗೂ ಆನಂದವಾಗದಿರದು.

ಕಂಪೆನಿಯು ಪ್ರಾರಂಭವಾಗಿ ಇನ್ನೂ ಎರಡೇ ವರ್ಷ. ಈ ಅಲ್ಪ ಕಾಲದಲ್ಲಿಯೇ ಇದು ಆಶ್ಚರ್ಯದ ಅಭಿವೃದ್ಧಿಯನ್ನು ಪಡೆದು ತನ್ನ ಕಾರ್ಯಕ್ಷೇತ್ರವನ್ನು ಬಹುಮಟ್ಟಿಗೆ ವಿಸ್ತರಿಸಿ ಪ್ರಥಮ ವರ್ಷದಲ್ಲಿಯೇ ಕರ್ಣಾಟಕದಲ್ಲಿ ಸ್ಥಾಪಿತವಾದ ಕಂಪೆನಿಗಳಲ್ಲಿ ಪ್ರಥಮ ವರ್ಷದಲ್ಲಿ ಯಾವುದೂ ಸಾಧಿಸದಿದ್ದಷ್ಟು ಉದ್ಯಮವನ್ನು ಸಾಧಿಸಿದೆ. ದ್ವಿತೀಯ ವರ್ಷದಲ್ಲಿಯೂ ಏಕಪ್ರಕಾರವಾದ ಪ್ರಗತಿ ಪಡೆದಿದೆ. ಈ ಎರಡು ವರ್ಷದಲ್ಲಿಯೇ ಕಂಪೆನಿಯ ಷೇರುಗಳನ್ನು ಪಡೆಯ ಬಯಸುವವರ ಸಂಖ್ಯೆಯು ಹೆಚ್ಚಿದ ಪ್ರಯುಕ್ತ ಕಂಪೆ ಗೆಡಹಿರುವುದು ೨ ಲಕ್ಷ ರೂ. ಗಳು. ಚಂದಾ ಆಗಿರುವುದು ಸುಮಾರು ೧,೨೨,೦೦೦ ರೂ. ಗಳು. ತೆತ್ತ ಬಂಡವಾಳವು ಸುಮಾರು ೫೦ ಸಾವಿರ ರೂ. ಗಳು. ಉಳಿದ ೭೦,೦೦೦ರೂ. ಗಳಿಗೆ ಮೀರಿದ ಮೊಬಲಗು ಷೇರುದಾರರ ಮೇಲೆ ರಕ್ಷಣಾ ನಿಧಿಯಾಗುಳಿದಿದೆ.

ಕಂಪೆನಿಯು ಇದುವರೆಗೆ ಸುಮಾರು ೧೦ ಲಕ್ಷ ರೂ, ಗಳ ವಿಮಾ ಉದ್ಯಮವನ್ನು ಪಡೆದಿದೆ. ವಿಮಾ ಕಂಪೆನಿಗಳ ಸ್ಪರ್ಧೆಯು ಸಂಸ್ಥಾನದಲ್ಲಿ ಎಷ್ಟೊಂದು ಹಬ್ಬಿದೆಯೆಂಬುದು



P. SIVASHANKAR Esq., B A., L.L.B., Director, Mysore Insurance Co., Ltd.
ಶ್ರೀ|| ಪಿ. ಶಿವಶಂಕರ್, ಬಿ. ಎ., ಎಲ್. ಎಲ್. ಬಿ., ಡೈರೆಕ್ಟರು, ಮೈಸೂರು ಇನ್ಷ್ಯೂರೆನ್ಸ್ ಕಂಪನಿ, ಲಿ.

ನಿಯು ಬಂಡವಾಳವನ್ನು ಒಂದು ಲಕ್ಷದಿಂದ ೩ ಲಕ್ಷಕ್ಕೆ ಹೆಚ್ಚಿಸಿದ್ದಾರೆ. ಬ್ರಿಟಿಷ್ ಇಂಡಿಯದ ಹಲವು ಭಾಗಗಳಿಂದಲೂ ಷೇರು ದರಖಾಸ್ತುಗಳು ಬಂದಿರುವುದಾಗಿ ವರದಿಯು ತಿಳಿಸುತ್ತದೆ. ಮೈಸೂರು ವಿಮಾ ಕಂಪೆನಿಯೊಂದು ಯಶಸ್ವಿಯಾಗಿ ಸ್ಥಾಪಿತವಾಗಿ ಬ್ರಿಟಿಷ್ ಇಂಡಿಯಾದಲ್ಲೂ ಖ್ಯಾತಿಯನ್ನು ಪಡೆದುದು ಅಭಿನಂದನೀಯವಾಗಿದೆ.

ಕಂಪೆನಿಯ ಇಂದಿನ ಅಧಿಕೃತ ಬಂಡವಾಳವು ೩ ಲಕ್ಷ ರೂ, ಗಳು. ಅದರಲ್ಲಿ ಚಂದಾ ಸಲುವಾಗಿ ಹೊರ ಎಲ್ಲರಿಗೂ ತಿಳಿದ ವಿಷಯ. ಈ ವಿರುದ್ಧ ಪರಿಸ್ಥಿತಿಯಲ್ಲಿಯೂ ಮೈಸೂರು ಇನ್ಷ್ಯೂರೆನ್ಸ್ ಕಂಪೆನಿಯು ತನಗೊದಗಿದ ತೊಡರುಗಳನ್ನೆಲ್ಲಾ ದಾಟಿ ವಿಜಯಶಾಲಿಯಾಗಿ ಮುಂದಡಿಯಿಟ್ಟಿರುವುದು ಅದರ ಆಡಳಿತನಿರ್ವಾಹಕರ ಕಾರ್ಯನೈಪುಣ್ಯತೆಗೆ ನಿದರ್ಶನವಾಗಿದೆ.

ಕಳೆದ ಎರಡು ವರ್ಷಗಳಲ್ಲಿ ೩ ಜನ ಪಾಲಿಸಿದಾರರು ಮೃತರಾದರು. ಈ ಮೂರು ಕ್ಲೈಂಗಳೂ ವೈದ್ಯ ಪರೀಕ್ಷೆಯಿಲ್ಲದ ಪದ್ಧತಿಗೆ ಸೇರಿದುವಿದ್ದು ಕಂಪೆನಿಯು ೧೩೦ ರೂ.

ಶಾಸ್ತ್ರ ಪರಿಣತರಾದ ಶ್ರೀಯುತರುಗಳಾದ ಎಂ. ಪಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ಶ್ರೀ ಎಸ್. ಆ.
ಸೋಮಶೇಖರರಾವ್ ಬಿ.ಎ. ಎಲ್.ಎಲ್. ಬಿ., ಮತ್ತು ಮಾಂಡ್ರೆ, ಎಂ. ಎ., ಬಿ. ಕಾಂ., ಎಫ್. ಎಸ್. ಎ.
ಹೆಚ್. ವಿ. ನಾರಾಯಣರಾವ್ ಬಿ.ಎ. ಎಲ್.ಎಲ್. ಬಿ., (ಲಂಡನ್) ಇವರೇ ಕಂಪನಿಯ ಲೆಖ್ಖ ಶೋಧಕರು ಮತ್ತು
ಇವರುಗಳೂ; ಸುಪ್ರಸಿದ್ಧ ವೈದ್ಯಶಾಸ್ತ್ರ ಪ್ರವೀಣರಾದ ಬೋಧಕರು. ರಾಜಕೀಯ ಪ್ರಪಂಚದಲ್ಲಿ ಪರಿಶ್ರಮ
ಡಾ|| ಬಿ. ಮಹಮದ್ ಉಸ್ಮಾನ್ ರವರು, ಡಾ|| ಕೆ. ದವರೂ, ಸುಪ್ರಸಿದ್ಧ ನ್ಯಾಯವಾದಿಗಳೂ, ವ್ಯವಹಾರಜ್ಞ



H. V. NARAYANA RAO Esq, B.A, L.L.B, Legal Advisor, Mysore Insurance Co., Ltd.

ಶ್ರೀ|| ಹೆಚ್. ವಿ. ನಾರಾಯಣರಾವ್, ಬಿ.ಎ., ಎಲ್.ಎಲ್.ಬಿ.,

ನ್ಯಾಯವಾದಿಗಳು, ಮೈಸೂರು ಇನ್ಷ್ಯೂರೆನ್ಸ್ ಕಂಪೆನಿ. ಲಿ.

ಸುಬ್ಬರಾವ್ ಬಿ.ಎಸ್.ಸಿ, ಎಂ.ಬಿ.ಬಿ.ಎಸ್., ರವರು ಗಳೂ, ಸಾಹಿತ್ಯ ಪ್ರೇಮಿಗಳೂ, ವೈದ್ಯಶಾಸ್ತ್ರವೇತ್ತರು
ಮತ್ತು ಜೆ. ಡಿ. ಪಟೇಲ್, ಎಂ.ಬಿ.ಬಿ.ಎಸ್. ರವರು ಲೋಕಾನುಭವಿಗಳೂ ಈ ಕಂಪೆನಿಗೆ ಹಾದಿತೋರಿ ನಡೆ
ಇವರುಗಳೂ ಕಂಪೆನಿಗೆ ಹಾದಿತೋರುತ್ತಿದ್ದಾರೆ. ನಿಖಿಲ ತ್ತಿರುವರು. ಇವರೆಲ್ಲರ ವಿಶಾಲ ಅನುಭವದ ನೇತೃತ್ವದಲ್ಲಿ
ಕರ್ನಾಟಕದಲ್ಲಿ, ಉಚ್ಚತರಗತಿಯ ಲೆಖ್ಖ ಪರಿಶೋಧನೆಯ ಕಂಪೆನಿಯು ಪ್ರಗತಿಹೊಂದುವುದೆಂಬುದು ನಿಸ್ಸಂಶಯವು

## ನಾಳಿನ ಮಹಾ ಮೈಸೂರಿನ ಮುಂಬೆಳಗು ಯಾವುದು?

# ಮೈಸೂರು ವಿಮಾ ಕಂಪೆನಿ, ಲಿಮಿಟೆಡ್.,

### ಬೆಂಗಳೂರು.

ಭರತಮಾತೆಯ ಆರ್ಥಿಕೋನ್ನತಿಗಾಗಿ ದೇಶದ ನಾನಾ ಭಾಗಗಳಲ್ಲಿ ನಡೆಯುತ್ತಿರುವ ಪ್ರಯತ್ನಗಳಿಗೆ ತನ್ನ ಶಕ್ತ್ಯನುಸಾರ ಮೈಸೂರೂ ನೆರವಾಗಬೇಕೆಂಬ ಆಶೆಯಿಂದ ಈ ಸಂಸ್ಥೆಯು ಬೆಳಕು ಕಂಡಿತು

ವಿಮಾ ಉದ್ಯಮದಲ್ಲಿ ಇಡೀ ಸಂಸ್ಥಾನಕ್ಕೆ ಏಕಮಾತ್ರ ಆದರ್ಶ ಸಾರ್ವಜನಿಕ ಸಂಸ್ಥೆಯಿದು.
ಇಂತಹ ಕಂಪೆನಿಯಲ್ಲಿ ಮೈಸೂರಿನವರೆಲ್ಲರ ಪ್ರಾತಿನಿಧ್ಯವಿದ್ದೇ ತೀರಬೇಕು.




ಮೊದಲಿನ ೧ ಲಕ್ಷ ರೂ. ಗಳ ಷೇರುಗಳೂ ಅತ್ಯಲ್ಪಕಾಲದಲ್ಲಿಯೇ
ಚಂದಾ ಆಗಿ ಹೋದುವು.

ಬೇಡಿಕೆ ಅವಶ್ಯಕತೆಗಳನ್ನನುಸರಿಸಿ ಷೇರು ಬಂಡವಾಳವನ್ನು
ಇನ್ನೂ ೨ ಲಕ್ಷ ಹೆಚ್ಚಿಸಲಾಗಿದೆ.

ಈ ಎರಡು ಲಕ್ಷದಲ್ಲಿ ೧೦೦ ರೂ.ಗಳ ೧೦೦೦ ಷೇರುಗಳನ್ನು
ಮಾತ್ರ ಡೈರೆಕ್ಟರುಗಳು ಮಾರಾಟಕ್ಕಿಟ್ಟಿರುವರು.

ಬಂದ ದರಖಾಸ್ತುಗಳನ್ನೆಲ್ಲಾ ಅಂಗೀಕರಿಸಿದ್ದರೆ ಇದೂ ಚಂದಾ ಆಗಿ ಹೋಗುತ್ತಿತ್ತು.

ಆದರೆ ಕೊನೆಯ ಪಕ್ಷ ಸಾವಿರ ರೂಪಾಯಿಗಳ ವಿಮೆಮಾಡಿದಲ್ಲದೆ ಷೇರುಗಳನ್ನು ಕೊಡಲಾಗದೆಂಬ ನಿಯಮವನ್ನು ಅನುಸರಿಸಿದುದರಿಂದ ಇನ್ನೂ ಕೆಲವು ಷೇರುಗಳು ಮಾತ್ರ ಉಳಿದಿವೆ.

ಸರ್ವರ ಅನುಕೂಲ ಅವಶ್ಯಕತೆಗಳಿಗೆ ಸರಿಹೊಂದುವ
ವೈದ್ಯ ಪರೀಕ್ಷೆಯಿರುವ ಮತ್ತು ಇಲ್ಲದಿರುವ ನವೀನ ವಿಮಾ ಪದ್ಧತಿಗಳು.

ಸ್ತ್ರೀಯರೂ ವಿಮೆಮಾಡಬಹುದು
ಏಜಂಟರುಗಳಿಲ್ಲದ ಸ್ಥಳಗಳಲ್ಲೆಲ್ಲಾ ಏಜಂಟರು ಬೇಕು.

ವೇತನದ ಮೇಲೂ ಕೆಲಸಮಾಡಲು ಅವಕಾಶವಿದೆ

ಹೆಚ್ಚು ವಿವರಗಳಿಗೆ:—

**ಕಂಠೀರವ ಅಂಡ್ ಕಂಪೆನಿ,**
ಮ್ಯಾನೇಜಿಂಗ್ ಏಜಂಟ್ಸ್
ಮೈಸೂರು ವಿಮಾ ಕಂಪೆನಿ, ಲಿಮಿಟೆಡ್.
ಶ್ರೀ ನರಸಿಂಹರಾಜರೋಡ್, ಬೆಂಗಳೂರು ಸಿಟಿ.

**Kanteerava & Co,**
*Managing Agents*
**MYSORE INSURANCE Co., Ltd.**
Narasimharaja Road, BANGALORE CITY.

# THE WARDEN INSURANCE Co., Ltd.

*Head Office:*—AHAMADABAD.

**DESERVEDLY PRAISEWORTHY.**

That is what the company's Consulting Actuary Prof. K. B. Madhava, M A, F·R A S, A·I·A., (London) says about the record of our Firt Year's Transactions in his letter No. 4521 dated 20th May 1935.

*Here is an extract from his letter:—*

"The record of your transactions for the period ended 31st December 1934 is DESERVEDLY PRAISEWORTHY. Through the volume of the fresh business completed the COMPANY SECURES A FAIRLY HIGH RANK already. This is all the more COMMENDABLE, first, because the EXPENSE INCURRED IN OBTAING IT WAS RELATIVELY LOW, and secondly because it DOES NOT MERELY REPRESENT THE BUSINESS BOOKED BUT ALSO BUSINESS RETAINED. You say you believe in motto, I told you at the beginning, namely " No business is better than bad business." With such ideals the COMPANY OUGHT TO MAKE SPECIAL APPEAL TO THE PUBLIC".

We, therefore, take pride, and pleasure in announcing our

**FIRST YEAR BUSINESS FIGURES**

| | | |
|---|---|---|
| Business secured in the VERY FIRST YEAR | Rs. | 35,36,000 |
| Business completed in the VERY FIRST YEAR | Rs. | 25,15,000 |
| New premiums realised. | Rs. | 1,00,000 |
| Life Assurance fund at the end of the year | Rs. | 17,000 |
| Expense Ratio (on the first year's premia) | Rs. | 86. 4% |
| Lapse Ratio | Rs. | 9. 3% |

The business procuration cost is kept very low, far below what is actuarially fixed and is on a par with the oldest and best Life Offices in India.

The mortality is almost nil.

The reasons of our success:—Efficient management, liberal and highly saleable policy contracts and unique privileges.

New opportunities are constantly present in most of the unpresented Districts and Towns of India for more good men who would like to grow with us. Apply for further Particulars to Head Office or

BRANCH OFFICES:—

235, Hornby Road, Fort .... .... *Bombay.*
21, Old Court House Street.... .... *Calcutta.*
12, Thumbu Chetty Street .... .... *Madras.*

SUB-BRANCH OFFICE:

180 Budhwar Peth.... .... .... *Poona.*



M. P. SOMASEKHARA RAO, Esq,
B.A. L.L.B,
Legal Advisor, Mysore Insurance Co., Ltd.

ಶ್ರೀ॥ ಎಂ. ಪಿ. ಸೋಮಶೇಖರರಾವ್,
ಬಿ.ಎ., ಎಲ್.ಎಲ್.ಬಿ,
ನ್ಯಾಯವಾದಿಗಳು, ಮೈಸೂರು ಇನ್ಷ್ಯೂರೆನ್ಸ್ ಕಂಪೆನಿ, ಲಿ.



S. R. MANDRE Esq. M.A., B. Com., F.S.A.A. (London.)
Incorporated Accountant.
Auditor, Mysore Insurance Co., Ltd.

ಶ್ರೀ॥ ಎಸ್. ಆರ್. ಮಾಂಡ್ರೆ, ಎಂ.ಎ., ಬಿ.ಕಾಂ.,
ಎಫ್.ಎಸ್.ಎ.ಎ. (ಲಂಡನ್.)
ಇನ್‌ಕಾರ್ಪೋರೇಟೆಡ್ ಅಕೌಂಟೆಂಟ್.
ಆಡಿಟರ್, ಮೈಸೂರು ಇನ್ಷ್ಯೂರೆನ್ಸ್ ಕಂಪೆನಿ, ಲಿ.

ಈ ಸಂಸ್ಥೆಯು ಉದಯಿಸಿದಂದು ಕಂಡ, ದೇಶದ ಆರ್ಥಿಕ ಮುಕ್ತಿಯನ್ನ ಸಾಧಿಸಬಲ್ಲ ಮಹಾಸಂಸ್ಥೆಯ ರೇಖೆಗಳು ಇಂದು ರೂಪುಗೊಳ್ಳುತ್ತಲಿವೆ. ಕಂಪೆನಿಯು ಪುಟ್ಟಪುಟ್ಟ ಹೆಜ್ಜೆಯಿಡುತ್ತ ದಿಟ್ಟತನದಿಂದ ಮುಂದುವರಿಯುತ್ತಿದೆ. ಕಂಪೆನಿಗಿನ್ನೂ ಬಾಲ್ಯ. ಆದಕ್ಕೆ ಆಶ್ರಯವು ಬೇಕು, ಪ್ರೋತ್ಸಾಹವು ಬೇಕು. ಇವನ್ನು ನೀಡಲು ಮೈಸೂರಿನವರೆಲ್ಲರೂ—ಕನ್ನಡಿಗರೆಲ್ಲರೂ ಉದಾರ ಮನಸ್ಸುಮಾಡಲಿ, ಅಂತೆಯೇ ಕಂಪೆನಿಯು ಎಲ್ಲರ ಆದರಕ್ಕೆ ಪಾತ್ರವಾಗಿ, ಆದರ್ಶ ಸಂಸ್ಥೆಯೆನಿಸಬೇಕೆಂಬ ಆಶೆಯನ್ನು ಸಾಧಿಸಿ ಚಿರಕಾಲ ಬಾಳಲೆಂದು ಹಾರೈಸುತ್ತೇವೆ.



# ವಾರ್ಡನ್ ಇನ್‌ಷ್ಯೂರನ್ಸ ಕಂಪೆನಿ, ಲಿಮಿಟೆಡ್.

## The Warden Insurance Company, Ltd.

---

ವಿಮಾ ಕ್ಷೇತ್ರದಲ್ಲಿ ಉದ್ಯೋಗವನ್ನು ಮಾಡಲು ಒಂದು ಕಂಪನಿಯು ದೊಡ್ಡದಾಗಿಯೇ ಮತ್ತು ಹಳೆಯದಾಗಿಯೇ ಇರಬೇಕೆಂಬ ಸಾಮಾನ್ಯ ಜನಾಭಿಪ್ರಾಯವನ್ನು ತಪ್ಪಾಗಿಸಿ, ಜನ್ಮವೆತ್ತಿದಾಗಿನಿಂದಲೇ ಬಹಳ ಪ್ರಶಂಸನೀಯವಾದ ಉದ್ಯಮ ನಡೆಸುತ್ತಿರುವ ಅಹಮದಾಬಾದಿನ ವಾರ್ಡನ್ ಇನ್ಶೂರೆನ್ಸ್ ಕಂಪನಿಯನ್ನು ನಮ್ಮ ಕನ್ನಡಿಗರಿಗೆ ಪರಿಚಯಮಾಡಿಕೊಡಲು ನಮಗೆ ಸಂತೋಷವಾಗುತ್ತದೆ. ಕಂಪನಿಯವರು, ನಮಗೆ ಕಳುಹಿಸಿರುವ, ಇದಕ್ಕೆ ಸಂಬಂಧಪಟ್ಟ ಲೆಖ್ಖಪತ್ರಗಳು, ಡೈರೆಕ್ಟರುಗಳ ವರದಿ ಮೊದಲಾದ ಸಾಹಿತ್ಯವನ್ನು ಪರಿಶೀಲಿಸಿದಲ್ಲಿ, ಕಂಪನಿಯವರು ಉತ್ಕೃಷ್ಟವಾದ ಪದ್ಧತಿಗಳನ್ನೂ ಅನುಸರಿಸುವುದೂ (Unique Scheme), ಅದರ ಆಡಳಿತಗಾರರ ಶಕ್ತಿಯೂ, ಅತ್ಯಲ್ಪಕಾಲದಲ್ಲಿಯೇ ಕಂಪನಿಯು ಕಲ್ಪಿಸಿಕೊಂಡಿರುವ ವಿಶಾಲವಾದ ಕಾರ್ಯಕ್ಷೇತ್ರವೂ ವ್ಯಕ್ತವಾಗುತ್ತವೆ.

ಬೊಂಬಾಯಿ ಸರಕಾರದ ಮತ್ತು ಕೊಲ್ಹಾಪುರದ ಮಾಜೀ ಮಂತ್ರಿಗಳಾದ ಶ್ರೀ. ಬಿ. ವಿ. ಜಾಧವ್ (Mr. B. V. Jadhav) ರವರ ಅಧ್ಯಕ್ಷತೆಯಲ್ಲಿ ಈ ಕಂಪನಿಯು ೧೯೩೩ನೆಯ ಇಸವಿ ಅಕ್ಟೋಬರ್ ತಿಂಗಳಿನಲ್ಲಿ ಬಹು ಬಗೆಯ ಆಕರ್ಷಕವಾದ ವಿಮಾ ಪದ್ಧತಿಗಳಿಂದ ತನ್ನ ಕಾರ್ಯವನ್ನು ಆರಂಭಿಸಿತು. ಆ ಕಂಪನಿಯ ಸ್ಟ್ಯಾಚ್ಯುಟರಿ ವರದಿಯ ಕಾಲಕ್ಕೆ, ಅಂದರೆ ೧೯೩೪ನೆಯ ಏಪ್ರಿಲ್ ತಿಂಗಳಿಗೆ, ಕಂಪನಿಯು ೧೦ ಲಕ್ಷ ರೂಪಾಯಿಗಳ ವಿಮಾ ಉದ್ಯಮವನ್ನು ಪಡೆದಿತ್ತು. "ಬರುವ ದಿನವನ್ನು ಮುಂಬೆಳಗೇ ಸೂಚಿಸುವಂತೆ," ಈ ಅಭಿವೃದ್ಧಿಯು ಕಂಪನಿಯ ಮುಂದಿನ ಏಳ್ಗೆಯನ್ನು ತೋರಿತು.

ವಿಮಾ ಉದ್ಯಮದಲ್ಲಿ ಭಾರತೀಯ ಕಂಪನಿಗಳು ಇತ್ತೀಚೆಗೆ ಅತ್ಯಂತ ಅಭಿವೃದ್ಧಿಯನ್ನೈದುತ್ತಿರುವುವು. ಇಂತಹ ಅಭಿವೃದ್ಧಿಗೆ ವಾರ್ಡನ್ ಕಂಪನಿಯೂ ಒಂದು ನಿದರ್ಶನವಾಗಿದೆ. ಕಂಪನಿಯ ಈ ಅಭಿವೃದ್ಧಿಗೆ ಕಾರಣವು, ಕಂಪನಿಯು ವಿಮಾ ಉದ್ಯೋಗವು ಅನುಭವಿಗಳಾದವರ ಕೈಯಲ್ಲಿರುವುದೂ, ಮತ್ತು ಅತ್ಯಂತ ನವೀನವಾದ ವಿಮಾ ಪದ್ಧತಿಗಳನ್ನು ಅನುಸರಿಸುವುದೂ ಆಗಿದೆ. ಈ ಕಂಪನಿಯ ವಿಮಾಪದ್ಧತಿಗಳು ಹೆಂಗಸರು, ಗಂಡಸರು, ಮಕ್ಕಳು, ಪಾಲುದಾರರು, ಮೊದಲಾದ ಸರ್ವರ ವಿಮಾ-ಅವಶ್ಯಕತೆಗಳನ್ನೂ ಒದಗಿಸಿಕೊಡಬಲ್ಲವಾಗಿವೆ. ಇನ್ನೂ ಕೆಲವು ಪದ್ಧತಿಗಳಂತೂ ಅತ್ಯಾಧುನಿಕ ಪಾಶ್ಚಿಮಾತ್ಯ ರಾಷ್ಟ್ರಗಳ ಕಂಪನಿಗಳ ವಿಮಾ ಪದ್ಧತಿಗಳಂತೆಯೇ ಇವೆ. ನಿರುದ್ಯೋಗ ಕಷ್ಟ ಹಣದ ಅಭಾವದ ಸಮಯದಲ್ಲಿ ಧನ ಸಹಾಯ, ಸಂಪಾದನೆ ಮಾಡಲು ಶಕ್ತಿಕುಂದಿದ ವಿಮಾದಾರರಿಗೆ ಸಹಾಯ, ವಿಮಾದಾರರಲ್ಲಿ ಕಾಯಿಲೆಯಾದವರಿಗೆ ಔಷಧ ಉಪಚಾರ ವಸತಿ ಅನುಕೂಲಗಳು, ೨,೦೦೦ ರೂ. ಗಳ ಮೊತ್ತ ಹಣದ ಲಾಭಸಹಿತವಾದ ಪಾಲಿಸಿಗಳನ್ನು ಕೊಂಡವರಿಗೆ ಕಾಯಿಲೆ ಸಮಯದಲ್ಲಿ ವೈದ್ಯ ಸಹಾಯ, ೧೨,೦೦೦ ರೂ. ಗಳ ಪಾಲಿಸಿಯುಳ್ಳವರಿಗೆ ಶಸ್ತ್ರಚಿಕಿತ್ಸೆ ಮತ್ತು ಆರೈಕೆಯ ಅನುಕೂಲತೆಗಳು, ಇವೇ ಮೊದಲಾದ ನಮ್ಮ ದೇಶದಲ್ಲಿ ಪ್ರಚಾರದಲ್ಲಿಲ್ಲದಂತಹ ವಿಮಾ ಸೌಕರ್ಯಗಳನ್ನು ಆತಿಥ್ಯದಿಂದ ಈ ಕಂಪನಿಯವರು ಪ್ರಾರಂಭಮಾಡಿ ಬಿಟ್ಟಿರುವರು. ಪಾಲಿಸಿದಾರರ ಆರೋಗ್ಯ ಮೇಲ್ವಿಚಾರಣೆಯ ಸೌಕರ್ಯವನ್ನು ಒದಗಿಸಬೇಕೆಂಬ ಆಶೆಯೂ ಅವರಿಗೆ ಇದೆ. ಈ ಬಗೆಯ ಇನ್ನೆಲ್ಲೂ ಇಲ್ಲದ, ನೂತನ ಅನುಕೂಲತೆಗಳನ್ನು ಒದಗಿಸಿರುವುದೂ, ಕಂಪನಿಯು ಪ್ರವೀಣರಾದ ವ್ಯವಸ್ಥಾಪಕರ ಆಡಳಿತಕ್ಕೆ ಒಳಗಾಗಿರುವುದೂ, ಕಂಪನಿಯ ಪ್ರಶಂಸನೀಯವಾದ ಈ ಅಭಿವೃದ್ಧಿಗೆ ಕಾರಣವೆಂದು ನಾವು ಮತ್ತೊಮ್ಮೆ ಹೇಳಬಹುದಾಗಿದೆ.

ಈ ಗಾಗಲೇ ಕಂಪನಿಯ ಕಾರ್ಯಕ್ಷೇತ್ರವು ಬೊಂಬಾಯಿ ಅಧಿಪತ್ಯವನ್ನು ದಾಟಿ, ಕಲ್ಕತ್ತಾ, ಮದರಾಸು, ಪೂನಾ ಮೊದಲಾದ ಪಟ್ಟಣಗಳನ್ನು ಮುಟ್ಟಿ, ಅಲ್ಲೆಲ್ಲಾ ಕಂಪನಿಯ ಬ್ರಾಂಚುಗಳು ಸ್ಥಾಪಿತವಾಗಿವೆ.

೧೯೩೪ನೆಯ ವರುಷದ ಕೊನೆಯವರೆಗೆ ಕಂಪನಿಯು ೩೫ ಲಕ್ಷ ೩೭ ಸಾವಿರ ರೂಪಾಯಿಗಳ ಉದ್ಯಮ ಮಾಡಿ, ೨೫ ಲಕ್ಷ ೧೬ ಸಾವಿರ ರೂಪಾಯಿಗಳ ಮೊತ್ತದ, ೧೯೩... ಪಾಲಿಸಿಗಳನ್ನು ಮಾರಿತು. ಆದುವರೆಗೆ ಕಂಪನಿಗೆ ಪ್ರೀಮಿಯಂ ರೂಪವಾಗಿ ಬಂದ ಹಣ ಸುಮಾರು ೧ ಲಕ್ಷ ರೂ. ಗಳು

ಇವರಲ್ಲಿ ಸುಮಾರು ೮೨,೪೮೮ ರೂ. ಗಳು ಖರ್ಚುಮಾಡಲ್ಪ ಟ್ಟಿವೆ. ಕಂಪನಿಯ ವ್ಯಯದ ಪ್ರಮಾಣವು (Expense Ratio) ೮೬.೪ ಆಗಿಯೂ, ರದ್ದಾಗುವಿಕೆಯ ಪ್ರಮಾ ಣವು (Lapse Ratio) ೯.೨ ಆಗಿಯೂ ಇರುವುದು ಕಂಪನಿಯು ಆರೋಗ್ಯವಾಗಿ ಬೆಳೆಯುತ್ತಿದೆಯೆನ್ನಲು, ಬಹಳ ಉತ್ತಮವಾದ ಉದಾಹರಣೆಯಾಗಿದೆ. ಮೊದಲು ಮೊ ದಲು ಸಾಧಾರಣವಾಗಿ ವಿಮಾ ಕಂಪನಿಗಳಲ್ಲಿ ಈ ಪ್ರಮಾಣ ಗಳು ಬಹಳ ಹೆಚ್ಚಾಗಿರುವುದುಂಟು. ಎಷ್ಟೋ ದೊಡ್ಡದಾದ ಹಳೆಯ ಕಂಪನಿಗಳಲ್ಲಿಯೂ ಕೂಡ ವ್ಯಯದ ಪ್ರಮಾಣವು ಇದಕ್ಕಿಂತಲೂ ಹೆಚ್ಚಾಗಿರುವುದನ್ನು ನಾವು ನೋಡಿದ್ದೇವೆ. ಹೀಗಿರುವುದರಲ್ಲಿ, ಈ ಕಂಪನಿಯ ವ್ಯಯದ ಪ್ರಮಾಣದಷ್ಟು ಕಡಿಮೆಯಾಗಿ ಬೇರೆ ಯಾವ ಕಂಪನಿಯಲ್ಲಿಯೂ ಇರಲಿಲ್ಲ ವೆಂದು ಹೇಳಬಹುದು. ಇದು ಬಹಳ ಪ್ರಶಂಸನೀಯವಾದ ಅಂಶವಾಗಿದೆ.

ಇಷ್ಟು ವಿಸ್ತಾರವಾದ ವ್ಯಾಪಾರ ಮಾಡಿದ್ದರೂ, ವಿಮೆ ಮಾಡಲು ಆರಿಸಿರುವುದು ಅತ್ಯುತ್ತಮವಾದ ಜೀವಗಳನ್ನು ಮಾತ್ರ, ಎಂಬುದನ್ನು ವ್ಯಕ್ತಪಡಿಸಲು, ಈ ಅವಧಿಯಲ್ಲಿ ೫೦೦೦ ರೂ. ಗಳ ಒಂದೇ ಒಂದು ಕ್ಲೈಮು (ಹಕ್ಕು) ಮಾ ತ್ರ ಹುಟ್ಟಿತು. ಈಗಾಗಲೇ ಇದರ ವಿಮಾನಿಧಿಯು ೧೫,೦೦೦ ರೂ. ಗಳು. ಚಂದಾ ಆದ, ಮತ್ತು ತೆತ್ತ ಬಂಡವಾಳವು ೭೭,೬೭೫ ರೂ. ಗಳು. ಆಸ್ತಿಯು ೧,೦೬,೨೦೩ ರೂ. ಗಳಷ್ಟಿದೆ. ೨೬,೧೭೧ ರೂ. ಗಳನ್ನು ಸರಕಾರದ ಪತ್ರಗಳ ಮೇಲೆ ಹಾಕಿ, ಈಗ ಅದರ ಬೆಲೆಯು ೩೨,೨೩೬ ರೂ. ಗಳಾಗಿದೆ, ಒಟ್ಟಿನಲ್ಲಿ, ಕಂಪನಿಯ ಆಯುವ್ಯಯದ ಪಟ್ಟಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಬಹಳ ಸಮ ರ್ಪಕವಾಗಿ ಕಾಣಬರುತ್ತದೆ.

ಕಂಪನಿಯು ೨೬,೧೭೧ ರೂ. ಗಳು ಬೆಲೆ ಕಟ್ಟಿರುವ ಸರಕಾರಿ ಸೆಕ್ಯೂರಿಟಿಗಳು ೧೯೩೪ನೇ ಡಿಸೆಂಬರ್ ೩೧ ನೇ ತಾರೀಖು ೩೨,೨೩೭ ರೂ.ಗಳಿಗೆ ಏರಿತ್ತು. ಡೈರೆಕ್ಟರುಗಳು ಇದನ್ನು ಲೆಕ್ಕದಲ್ಲಿ ಹಿಡಿಯದಿರುವುದರಿಂದ ಇದು ಕಂಪೆ ನಿಯ ಗುಪ್ತರಕ್ಷಣಾನಿಧಿಯಾಗಿದೆ. ಕಂಪೆನಿಯು ಆರಂಭಿ ಸಿದ ಪ್ರಥಮ ವರ್ಷದಲ್ಲಿಯೇ ೧೭,೭೩೪ ರೂಗಳ ವಿಮಾನಿಧಿ ಯನ್ನು ಏರ್ಪಡಿಸಿರುವುದು ಅಭಿನಂದನೀಯವು.

ಈ ಕಂಪೆನಿಯ ಇತ್ತೀಚಿನ ವರ್ಷದ ವರದಿಯು ನಮ್ಮ ಕೈಸೇರಿಲ್ಲ. ಇದು ಆ ಸಾಲಿನಲ್ಲೂ ವಿಶೇಷ ಉದ್ಯ ಮವನ್ನು ನಡೆಸಿರುವುದಾಗಿ ಕೇಳುತ್ತೇವೆ. ಇದರ ವಿವರ ಗಳನ್ನು ನಮ್ಮ ಮುಂದಿನ ಸಂಚಿಕೆಗಳಲ್ಲಿ ಕೊಡಲಾಗುವುದು.

ಈ ಕಂಪೆನಿಯ ಆರಂಭವು ಭಾರತೀಯ ವಿಮಾ ಪ್ರಪಂಚದಲ್ಲಿ ಇನ್ನೂ ಬರಲಿರುವ—ಬರಬೇಕಾಗಿರುವ— ಹೊಸ ಕಂಪೆನಿಗಳಿಗೆ ಮಾರ್ಗದರ್ಶಕವಾಗಿದೆ. ಹೀಗೆ ಮೊ ದಲನೆಯ ವರದಿಯ ಅವಧಿಯಲ್ಲಿಯೇ ಇಂತಹ ಅತ್ಯು ತ್ಕೃಷ್ಟವಾದ ಉದ್ಯೋಗವನ್ನು ನಡೆಸಿ, ಭಾರತೀಯವಿಮಾ ಲೋಕಕ್ಕೆ ಕೀರ್ತಿತಂದ ವಾರ್ಡನ್ ಇನ್ಶ್ಯೂರೆನ್ಸ್ ಕಂಪೆನಿ ಯನ್ನು ನಾವು ಹೃದಯಪೂರ್ವಕವಾಗಿ ಅಭಿನಂದಿಸು ತ್ತೇವೆ. ವಿಮಾ ವಿಚಾರದಲ್ಲಿ ಅತ್ಯಂತ ಅನುಭವಿಗಳೂ, ಕಂಪೆನಿಯ ಜನರಲ್ ಮ್ಯಾನೇಜರ್‌ರವರೂ, ಆದ ಶ್ರೀ|| ಎಸ್. ಹೆಚ್. ಥಾಕರ್ (Mr. S. H. Thaker) ಅವರ ಸಾಹಸ ಮತ್ತು ದಕ್ಷತೆಯೇ ಕಂಪನಿಯ ಅಭ್ಯುದಯದ ಮುಖ್ಯ ಕಾರಣಗಳಲ್ಲಿ ಒಂದು. ಶ್ರೀ. ಥಾಕರ್‌ರವರು ಕಂಪ ನಿಯಲ್ಲಿ ಚಿರಕಾಲ ಕಾರ್ಯವೆಸಗಿ ಮೊದಲಿನಲ್ಲಿಯೇ ತೋರಿಸಿದ ಈ ಅಭಿವೃದ್ಧಿಯನ್ನು ಕಾಪಾಡಿಕೊಂಡು ಬರ ಬೇಕೆಂದು ನಾವು ಆಶಿಸುತ್ತೇವೆ. ಕಂಪನಿಯು ಇಂದಿನ ತನ್ನ ಅಭಿವೃದ್ಧಿಯಂತೆಯೇ ಮುಂದೆಯೂ ಬೆಳೆಯುತ್ತಾ ಬಂದರೆ ಬೇಗನೆ ನಮ್ಮ ದೇಶದ ಅತ್ಯಂತ ಮುಖ್ಯ ಕಂಪನಿಗಳಲ್ಲಿ ಇದು ಒಂದಾಗುವುದರಲ್ಲಿ ಸಂಶಯವಿಲ್ಲ.

ಆ ದಿನವು ಬೇಗಬರಲೆಂದು ನಮ್ಮ ಹಾರೈಕೆ.



# ನಾರ್ದರ್ನ್ ಇಂಡಿಯಾ ಇನ್ಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್

## Northern India Insurance Company Ltd.,

---

ನಾರ್ದರ್ನ್ ಇಂಡಿಯಾ ಇನ್ಷ್ಯೂರೆನ್ಸ್ ಕಂಪೆನಿಯು ಲಾಹೋರಿನಲ್ಲಿ ಸ್ಥಾಪಿತವಾಗಿ ಈಗ್ಗೆ ೫ ವರ್ಷಗಳಾಯಿತು. ಅದು ದಿನೇ ದಿನೇ ಹೆಚ್ಚು ಅಭಿವೃದ್ಧಿಗೊಳ್ಳುತ್ತಾ ತಾನು ಅನುಸರಿಸಿರುವ ನವೀನ ಪದ್ಧತಿಗಳಿಂದ ಜನರನ್ನಾಕರ್ಷಿಸುತ್ತಾ ಬೆಳೆಯುತ್ತಿದೆ. ಇವರ "ಆಲ್-ಇನ್-ಒನ್ ಪಾಲಿಸಿ" (All in - One - Policy) ಯು ಈ ಕಂಪೆನಿಯು ಮಾತ್ರವೇ ಅನುಸರಿಸಿರುವ ಪದ್ಧತಿಯು. ಈ ಪದ್ಧತಿಯು ಪ್ರೀಮಿಯಂ ದರಗಳು ಬಹು ಕಡಿಮೆ ಇವೆ. ಪಾಲಿಸಿ

ಯನ್ನು ಕೊಟ್ಟ ಮೂರು ತಿಂಗಳೊಳಗೆ ಆಕಸ್ಮಿಕದಿಂದ ಮರಣವುಂಟಾದರೆ ವಿಮೆಮಾಡಿದ ಮೊಬಲಗಿಗೆ ಎರಡರಷ್ಟು ಹಣಕೊಡುವರು. ರೈಲು, ಟ್ರಾಮ್, ಲಿಫ್ಟ್ ಮೊದಲಾದುವುಗಳಿಗೆ ಆದ ಅಪಾಯದಿಂದ ಮರಣ ಸಂಭವಿಸಿದುದಾದರೆ ವಿಮಾ ಮೊಬಲಗಿಗೆ ಮೂರರಷ್ಟು ಹಣವನ್ನು ಕೊಡುವರು. ಆತ್ಮಹತ್ಯ, ಬುದ್ಧಿವಿಕಲ್ಪ, ಕೋಪ, ದೊಂಬಿ, ಡ್ಯಾಲಿ, ಬೆಟ್ಟ್, ರೇಸ್ ಇವುಗಳಿಂದುಟಾಗಬಹುದಾದ ಆಕ ಸ್ಮಿಕಗಳಿಗೆ ಇದು ಅನ್ವಯಿಸುವುದಿಲ್ಲ.



Colonel C. R. BAKHALE I. M. S. (Retd)
President Northern India Insurance Company Ltd.
ಕರ್ನಲ್ ಸಿ.ಆರ್. ಬಖಲೆ, ಐ. ಎಮ್.ಎಸ್. (ನಿವೃತ್ತರು) ಅಧ್ಯಕ್ಷರು, ನಾರ್ದರ್ನ್ ಇಂಡಿಯಾ ಇನ್ಷ್ಯೂರೆನ್ಸ್ ಕಂಪೆನಿ ಲಿ

ಇವರ "ಕಾಲೇಜ್ ಇನ್ಷ್ಯೂರೆನ್ಸ್ ಪಾಲಿಸಿ" (College Insurance Policy) ಯು ವಿದ್ಯಾರ್ಥಿ ಗಳಿಗೆ ವಿಶೇಷ ಸೌಕರ್ಯ ಕೊಡುವುದಾಗಿದೆ. ಈ ಪದ್ಧತಿ ಯಲ್ಲಿ ಅವಧಿಯನಂತರ ನಿಶ್ಚಿತ ಕಾಲಕ್ಕೊಮ್ಮೆ ಅಲ್ಪ ಹಣವು ದೊರೆಯುವಂತೆ ಏರ್ಪಾಡಿರುವುದು. ಈ ಪದ್ಧತಿಯ ಒಂದು ವಿಶೇಷವೆಂದರೆ ಪಾಲಿಸಿದಾರನು ಜೀವಾವಧಿ ಅಂಗಹೀನನಾಗುವ ಅಪಾಯಕೊಳ್ಳಗಾದರೆ ಅವನು ಮುಂದೆ ಪ್ರಿಮಿಯಂ ಕೊಡಬೇಕಾದುದನ್ನು ರದ್ದುಮಾಡುವರು. ಮೇಲೆ ಹೇಳಿದಂತೆ ಆಕಸ್ಮಿಕಗಳಿಂದ ಮರಣವುಂಟಾದಲ್ಲಿ ಪಾಲಿಸಿ ಮೊಬಲಗಿಗೆ ಎರಡರಷ್ಟು ಮತ್ತು ಮೂರರಷ್ಟು ಹಣ ಕೊಡುವ ಏರ್ಪಾಡಿರುವುದು.



T. H RAGHAVENDRA RAO, Esq.
Branch Secretary Madras
ಶ್ರೀ|| ಟಿ. ಹೆಚ್. ರಾಘವೇಂದ್ರರಾವ್,
ಸೆಕ್ರೆಟರಿ, ಮದ್ರಾಸ್ ಶಾಖೆ.

ಪಾಲಿಸಿ ಹೋಲ್ಡರ್ಸ್ ಸೇವಿಂಗ್ಸ್ ಬೀರು (Policy holders Savings Bureau) ಎಂಬುದು ನಾರ್ದರ್ನ್ ಇಂಡಿಯಾದವರೇ ಅನುಸರಿಸಿರುವ ಒಂದು ನವೀನ ಪದ್ಧತಿಯು.

ಇವರ "ಶೇಕಡ ೫೦ ರಷ್ಟು ಬೋನಸ್ಸು ವಾಗ್ದಾನ ಮಾಡುವ ಕುಟುಂಬ ಪ್ರೊಟೆಕ್ಷನ್ ಪಾಲಿಸಿ"ಗಳ ಪ್ರಕಾರ ವಿಮಾದಾರನು ಸತ್ತಮೇಲೆ ಪಾಲಿಸಿಯು ೨೦ ವರ್ಷಗಳ ಅವಧಿಯು ಮುಗಿಯುವವರೆಗೆ ಹಕ್ಕುದಾರರಿಗೆ ೧೦೦೦ರೂ. ಗಳ ಪಾಲಿಸಿಗೆ ತಿಂಗಳಿಗೆ ಹತ್ತು ರೂಪಾಯಿ ಬರುವುದು. ಅವಧಿ ಪೂರ್ಣವಾದಮೇಲೆ ಹಕ್ಕುದಾರರಿಗೆ ೧೦೦೦ ರೂ. ಕೊಡುವರು.

ಕಂಪೆನಿಯವರು ಸ್ತ್ರೀಯರ ಜೀವಮಾನದ ಮೇಲಿನ ವಿಮೆಯನ್ನೂ ಅಂಗೀಕರಿಸುವರು.

೧೯೩೭ ನೇ ಮಾರ್ಚಿ ೩೧ ನೇ ತಾರೀಖಿಗೆ ಮುಕ್ತಾಯವಾಗುವ ಅವಧಿಯಲ್ಲಿ ೯,೦೨,೦೦೦ ರೂ.ಗಳ ಮೊತ್ತದ ೬೨೦ ಪಾಲಿಸಿಗಳನ್ನು ಕೊಟ್ಟಿದ್ದಾರೆ. ಕಳೆದ ವರ್ಷ ಇವರು ೮,೦೩,೦೦೦ ರೂ.ಗಳ ಮೊತ್ತದ ೫೦೫ ಪಾಲಿಸಿಗಳನ್ನು ಕೊಟ್ಟಿದ್ದರು. ಅವರು ವರ್ಷೇ ವರ್ಷೇ ಉದ್ಯಮದಲ್ಲಿ ಪಡೆಯುತ್ತಿರುವ ಪ್ರಗತಿಯು ಏಕಪ್ರಕಾರವಾಗಿ ಉಳಿದುಕೊಂಡು ಬಂದಿದೆ.

ವರ್ಷದಲ್ಲಿನ ಪ್ರೀಮಿಯಂ ಆದಾಯವು ೫೦,೫೭೦ ರೂ. ಗಳು ಎಲ್ಲಾ ಬಾಬುಗಳ ಒಟ್ಟು ಆದಾಯವು ೮೨,೩೩೦ ರೂ ಗಳು.

ಆಡಳಿತ ಖರ್ಚು ೬೫,೯೯೯ ರೂ ಗಳಿದ್ದು ಪ್ರೀಮಿಯಂ ಆದಾಯದ ಶೇಕಡ ೮೦.೨ ರಷ್ಟಿದೆ ಈ ವರ್ಷದಲ್ಲಿ ವಿಮಾನಿಧಿಯು ೫೨,೫೭೦ ರೂ.ಗಳಿಗೆ ಏರಿತು ಇದು. ಕಳೆದ ವರ್ಷದಲ್ಲಿ ४೦,೨೮೭ ರೂ ಗಳಿತ್ತು ಅಂದರೆ ಇದು ಕಳೆದ ವರ್ಷದ ಮೊತ್ತದಮೇಲೆ ಶೇಕಡ ೨೫ರಷ್ಟು ಹೆಚ್ಚಿದೆ.

ವರ್ಷದಲ್ಲಿ ೧೦ ೨೫೦ ರೂ.ಗಳ ಮೊತ್ತದ ೬ ವಿಮಾಹಕ್ಕುಗಳನ್ನು ಕೊಡಬೇಕಾಗಿ ಬಂತು. ಅವುಗಳ ಪೈಕಿ ೪ ಹಕ್ಕುಗಳನ್ನು ಸಂದಾಯ ಮಾಡಿದ್ದಾರೆ. ವಿಮಾಹಕ್ಕುಗಳನ್ನು ತಡೆಯಿಲ್ಲದೆ ಸಲ್ಲಿಸುವುದು "ನಾರ್ದರ್ನ್ ಇಂಡಿಯಾ"ದ ಒಂದು ವಿಶೇಷವಿರುತ್ತದೆ.

ಕಂಪೆನಿಯ ಆಡಳಿತವು ದಕ್ಷರಾದ ಶ್ರೀ|| ಹೆಚ್. ಡಿ. ಮೆಹತಾ (Mr. H. D. Mehta) ರವರ ಕೈಲಿದೆ. ಪಂಜಾಬಿನ ಪ್ರಸಿದ್ಧ ವಿಮಾಜ್ಞಾನಿಗಳವರು. ಅವರ ಸೇವೆ ಮತ್ತು ಶ್ರದ್ಧೆಗಳು ಕಂಪೆನಿಯ ಗೆಲುವಿಗೆ ಕಾರಣವಾಗಿದೆ.

ನಾರ್ದರ್ನ್ ಇಂಡಿಯಾಕ್ಕೆ ಕರ್ನಲ್ ಸಿ ಆರ್. ಬಖಲೇ (Col. C. R. Bakhale, I. M. S.) ಯವರು ಚೇರ್ಮನ್ನರಾಗಿ ದೊರೆತುದು ಸುಯೋಗವು. ಅವರು ವೃದ್ಧರಾಗಿದ್ದರೂ ತರುಣರಿಗಿರುವ ಉತ್ಸಾಹದಿಂದ ಶ್ರದ್ಧೆವಹಿಸಿ ಕಂಪೆನಿಯ ಕಾರ್ಯವನ್ನು ನಿರ್ವಹಿಸುತ್ತಿರುವರು.

ಶ್ರೀ|| ಟಿ.ಹೆಚ್. ರಾಘವೇಂದ್ರರಾವ್ (Mr. T. H Raghavendra Rao) ರವರು ಈ ಕಂಪೆನಿಯ ಮದ್ರಾಸ್ ಶಾಖೆಯ ಸೆಕ್ರೆಟರಿಗಳಾಗಿರುವರು. ದಕ್ಷರಾದ ಇವರ ಆಡಳಿತದಲ್ಲಿ ಶಾಖೆಯು ಕೀರ್ತಿಗಳಿಸುವುದೆಂಬುವುದು ನಿಸ್ಸಂದೇಹವು.

ವಿವಿಧ ಅವಶ್ಯಕತೆಗಳನ್ನು ತೃಪ್ತಿಗೊಳಿಸುವ ಪದ್ಧತಿಗಳು ಸಾರ್ವಜನಿಕರ ಗಮನಕ್ಕೆ ಬಂದು, ಕಂಪೆನಿಯು ಬರುವ ವರ್ಷಗಳಲ್ಲಿ ಇನ್ನೂ ಹೆಚ್ಚಿನ ಪ್ರಗತಿಪಡೆಯಲೆಂದು ಆಶಿಸುತ್ತೇವೆ.

# ಜಯವಿಜಯ ಇನ್ಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್

## The Jaya Vijaya Insurance Company, Limited.

---

ನಾಡಿನ ಬಡವರಿಗೂ, ಸಾಮಾನ್ಯಜನತೆಗೂ ಸಹಾಯ ಮಾಡಬೇಕೆಂಬ ಉದಾತ್ತಧ್ಯೇಯದಿಂದ ಜಯವಿಜಯ ಇನ್ಷ್ಯೂರೆನ್ಸ್ ಕಂಪೆನಿಯು ಮುಂದೆ ಬಂದಿದೆ. ೧೯೩೭ ರಲ್ಲಿ ಇದು ಮದ್ರಾಸ್‌ನಲ್ಲಿ ಸ್ಥಾಪಿತವಾಯಿತು. ೨೫೦ ರೂ.ಗಳಷ್ಟು ಅಲ್ಪ ಮೊಬಲಗಿಗೆ ಪಾಲಿಸಿಗಳನ್ನು ಕೊಡುವ ವಿಮಾಕಂಪೆನಿಗಳು ಅತಿವಿರಳ. ಜಯವಿಜಯ ಕಂಪೆನಿಯು ಈ ಪದ್ಧತಿಯನ್ನು ಶಾಸ್ತ್ರೀಯವಾದ ರೀತಿಯಲ್ಲಿ ಆರಂಭಿಸಿ ಇದ್ದ ಕೊರತೆಯನ್ನು ನೀಗಲೆತ್ನಿಸಿದೆ.

ಇದು ಇಂದೇ ಹೊರಬಿದ್ದಿರುವ ಹೊಸ ಕಂಪೆನಿಯಲ್ಲ. ೧೯೩೧ರಿಂದ ೩೦,೦೦೦ ಪಾಲಿಸಿ ಪತ್ರಗಳನ್ನು ಕೊಟ್ಟಿದೆ. ೩,೦೦,೦೦೦ ರೂ.ಗಳಿಗಿಂತ ಹೆಚ್ಚಿಗೆ ವಿಮಾ ಹಕ್ಕುಗಳನ್ನು ಕೊಟ್ಟಿದೆ. ಮತ್ತು ೧,೦೦,೦೦೦ ರೂ ಗಳ ಆಸ್ತಿಯನ್ನು ಗಳಿಸಿದೆ. ಭಾರತೀಯ ವಿಮಾಕಂಪೆನಿ ಕಾನೂನಿನ ಪ್ರಕಾರ ಅವಶ್ಯಕವಾದ ಸೆಕ್ಯೂರಿಟಿಯನ್ನು ಸರಕಾರದಲ್ಲಿಟ್ಟಿದೆ. ದೇಶದ ಎಲ್ಲೆಡೆಗಳಲ್ಲಿಯೂ ಪ್ರತಿನಿಧಿಗಳ ಮೂಲಕ ತನ್ನ ಕೆಲಸವ ನ್ನಾರಂಭಿಸಿದೆ. ಒಂದು ಉತ್ತಮ ವಿಮಾ ಕಂಪೆನಿಗಳಿಗೆ ಅವಶ್ಯಕವೆನಿಸಿದ ಗುಣಗಳಿಂದೊಡಗೂಡಿ ಬೆಳಕಿಗೆ ಬರ ತೊಡಗಿದೆ.

ಕಂಪೆನಿಯು ೧೯೩೪ ನೇ ಜೂನ್ ತಿಂಗಳಿನಲ್ಲಿ ಶಾಸ್ತ್ರೀಯವಾದ ವಿಮಾ ಪದ್ಧತಿಗಳನ್ನನುಸರಿಸಿತು. ೧೯೩೪ ನೇ ಡಿಸೆಂಬರ್ ೩೧ ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದ ಕಾಲವಲ್ಲಿ . ಕಂಪೆನಿಗೆ ೧,೩೮,೦೦೦ ರೂ.ಗಳ ಮೊತ್ತದ ೨೯ ದರಖಾಸ್ತುಗಳು ಅದರ ಪೈಕಿ ೬೧,೨೫೦ ರೂ.ಗಳ ಮೊತ್ತದ ೧೩೩ ದರಖಾಸ್ತುಗಳನ್ನು ಅಂಗೀಕರಿಸಿದ್ದಾರೆ. ಅವುಗಳ ವಾರ್ಷಿಕ ಪ್ರೀಮಿಯಂ ಆದಾಯ ೪,೧೧೭-೧೦-೦ ರೂ ಗಳು. ಕಂಪೆನಿಯವರು ೨೫೦ ರೂ.ಗಳಿಗಷ್ಟೇ ಅಲ್ಲದೆ ಹೆಚ್ಚಿನ ಮೊಬಲಗಿಗೂ ಪಾಲಿಸಿಗಳನ್ನು ಕೊಡಲು ಮೊದಲು ಮಾಡಿರುವರು.

ವರದಿಯಕಾಲದಲ್ಲಿ ವಿಮಾ ಹಕ್ಕುಗಳನ್ನು ಕೊಡಬೇಕಾದ ಯಾವ ಪ್ರಸಂಗ ಒದಗಿಬರದಿದ್ದುದು ಅಭಿವಂದನೀಯವು.

### ಮ್ಯೂಚುಯಲ್ ಬೆನಿಫಿಟ್ ಸ್ಕೀಂ

ಈ ಶಾಖೆಯು ಹೊಸ ಪಾಲಿಸಿಗಳನ್ನು ಕೊಡುವುದನ್ನು ಬಹುಕಾಲದ ಹಿಂದೆಯೇ ನಿಲ್ಲಿಸಿತು. ವರ್ಷದಲ್ಲಿ ಬಂದ ಆದಾಯ ೧,೧೪,೩೦೯-೧೪-೮ ರೂ. ಗಳು. ಆದಾಯವು ಮೊದಲಿಗಿಂತ ಕಡಿಮೆಯಿತ್ತು. ಹಾಗೆಯೇ ಆಡಳಿತ ಖರ್ಚು ೩೨,೩೧೦-೫-೬ ರೂ.ಗಳಿಗೆ ಇಳಿಯಿತು. ವರ್ಷದಲ್ಲಿ ೯೯,೬೨೯-೪-೫ ರೂ.ಗಳ ವಿಮಾ ಹಕ್ಕುಗಳನ್ನು ಕೊಡಬೇಕಾಗಿಬಂತು. ಕಂಪನಿಯು ಉದಯಿಸಿದಂದಿನಿಂದ ಕೊಟ್ಟ ವಿಮಾಹಕ್ಕುಗಳ ಮೊತ್ತವು ೩,೬೯,೨೫೦-೩-೧೧ ರೂ.ಗಳಾಗುವುದು.

### ರಿಜರ್ವ್ ನಿಧಿ

ಮ್ಯೂಚುಯಲ್ ಬೆನಿಫಿಟ್ ಸ್ಕೀಂನ ರಿಜರ್ವ್‌ನಿಧಿಯು ವರ್ಷದಲ್ಲಿ ೮,೫೫೫-೧೨-೦ ರೂ.ಗಳು ಹೆಚ್ಚಿತು. ವರ್ಷದಂತ್ಯದಲ್ಲಿ ನಿಧಿಯು ೫೨,೨೮೮-೬-೯ ರೂ.ಗಳಿತ್ತು.

### ಬಂಡವಾಳ ವಿನಿಮಯ

೨೫,೦೦೦ ರೂ.ಗಳ ಬೆಲೆಯ ಶೇಕಡ ೩|| ಬಡ್ಡಿಯ ಸರಕಾರಿ ಬಾಂಡುಗಳನ್ನು ಪಡೆದಿದ್ದಾರೆ. ವಿಜಯಲಕ್ಷ್ಮಿ ಜನರಲ್ ಅಷ್ಯೂರೆನ್ಸ್ ಕಂಪೆನಿ ಲಿಮಿಟೆಡ್‌ನಲ್ಲಿ ೪೭,೬೬೦ ರೂ.ಗಳ ಬೆಲೆಯ ಪ್ರಿಫರೆನ್ಸ್ ಷೇರುಗಳನ್ನು ಪಡೆದಿದ್ದಾರೆ.

ಸರಕಾರದ ಸೆಕ್ಯೂರಿಟಿಗಳ ಬೆಲೆಯು ಹೆಚ್ಚಿ ಕಂಪೆನಿಗೆ ಆದಾಯವಾಗಿದೆ. ೧೯೩೪ ೩೧ರ ಲೆಕ್ಕದ ಪಟ್ಟಿಯಲ್ಲಿ ತೋರಿಬರುವಂತೆ ೧೫,೭೯೩-೧೨ ರೂ.ಗಳ ಮೂಲ ಬೆಲೆಯ ಸೆಕ್ಯೂರಿಟಿಗಳಿಗೆ ಮಾರ್ಕೆಟ್ಟಿನಲ್ಲಿ ೨೪,೫೩೬-೧೪-೦ ರೂ.ಗಳ ಬೆಲೆಯಿದೆ. ಅಂದರೆ ಕಂಪೆನಿಗೆ ೮,೭೩೨-೨-೦ ರೂ.ಗಳು ಲಾಭವಾಗಿದೆ.

ಹಿಂದಿನ ಇದರ ಪ್ರಗತಿಯನ್ನು ತೃಪ್ತಿಕರವಾಗಿ ಉದ್ಯಮವನ್ನು ನಡೆಸಿಕೊಂಡು ಬಂದಿರುವುದನ್ನು ಗಮನಿಸಿದರೆ ಕಂಪೆನಿಗೆ ಭವ್ಯಭವಿಷ್ಯವಿದೆಯೆಂದು ಧೈರ್ಯದಿಂದ ಹೇಳಬಹುದು. ನಾವು ಕಂಪೆನಿಗೆ ಶ್ರೇಯಸ್ಸನ್ನು ಕೋರುವೆವು.

# ದಿ ರಿಲೈಯನ್ಸ್ ಅಿಷ್ಯೂರೆನ್ಸ್ ಕಂಪನಿ ಲಿಮಿಟೆಡ್

## The Reliance Assurance Company, Limited

---

ಪ್ರಸಿದ್ಧರೂ, ಮಾತುಭಾರಿಗಳೂ ಆದ ಹಲವು ಭೂಷಣ, ಕರ್ಪೂರ್ ಶ್ರೀನಿವಾಸರಾವ್, ಬಿ.ಎಸ್ಸಿ.
ಪ್ರಮುಖರ ಆಶ್ರಯದಲ್ಲಿ ರಿಲೈಯನ್ಸ್ ಅಷ್ಯೂರೆನ್ಸ್ ಎಲ್. ಸಿ. ಇ., ಎಂ. ಆರ್. ಎ. ಎಸ್. ಅವರೇ ಈ ಕಂ
ಕಂಪೆನಿಯು, ಮೈಸೂರಿನ ೧೯೧೭ನೇ ಇಸವಿಯ ೬ನೇ ನಿಯ ಮೊದಲನೆಯ ಅಧ್ಯಕ್ಷರು. ಮೆ.ಸರ್ಸ್ ಕಿ



Late Raja Sabhabhushana Vidyabhushana KARPUR SRINIVASA RAO, B.SC., L.C.E., M.R.A.S.
The First President of the Reliance Assurance Co., Ltd.

ದಿವಂಗತ ರಾಜಸಭಾ ಭೂಷಣ, ವಿದ್ಯಾಭೂಷಣ,
ಕರ್ಪೂರ ಶ್ರೀನಿವಾಸರಾವ್, ಬಿ.ಎಸ್.ಸಿ., ಎಲ್.ಸಿ.ಇ.,ಎಂ.ಆರ್.ಎ.ಎಸ್.
ರಿಲೈಯನ್ಸ್ ಅಷ್ಯೂರೆನ್ಸ್ ಕಂ. ಲಿ. ನ ಮೊದಲನೆಯ ಅಧ್ಯಕ್ಷರು.

ರೆಗ್ಯುಲೇಷನ್ನಿನ ಪ್ರಕಾರ ಬೆಂಗಳೂರಿನಲ್ಲಿ ೧೯೨೩ನೇ ಬಲಿಜ ಅಂಡ್ ಕಂಪೆನಿಯುವರೇ ಈ ಕಂಪೆನಿಯ ಮ್ಯಾನೇ
ಜೂನ್ ತಿಂಗಳಲ್ಲಿ ಸ್ಥಾಪಿತವಾಯಿತು. ಮೈಸೂರು ಜಿಂಗ್ ಏಜಂಟರು. ಈ ಸಂಸ್ಥೆಯ ಭಾಗಸ್ಥರಲ್ಲಿ ಒಬ್ಬರಾದ
ಮತ್ತು ಬೊಂಬಾಯಿ ಸರಕಾರಗಳಲ್ಲಿ ರಿಟೈರ್ಡ್ ಚೀಫ್ ಮಿ|| ಜಿ. ಕೆ. ಬಲಿಜ ಅವರು ಬೆಂಗಳೂರಿನ ಹೆಸ
ಎಂಜಿನಿಯರಾದ ದಿವಂಗತ ರಾಜಸಭಾಭೂಷಣ, ವಿದ್ಯಾ ಪಡೆದ ಲಾಯರು. ಇನ್ನೊಬ್ಬ ಭಾಗಸ್ಥರೇ ಸ್ವವಡ

...ಕಲರೆಂದು ಹೆಸರು ಪಡೆದ ಮಿ|| ಕೆ. ಎಸ್. ತಿರುಪತಿಯ ...ವು. ಇವರು ಅಜಮೀರಿನ ಜನರಲ್ ಅಷ್ಯೂರೆನ್ಸು ...ಪೆನಿಯ ಬೊಂಬಾಯಿ ಮತ್ತು ಮೈಸೂರು ಬ್ರಾಂಚು ...ಸೆಕ್ರೆಟರಿಗಳಾಗಿ ಅನುಭವ ಪಡೆದವರು. ವಿಮಾ ...ವ್ಯವಹಾರದಲ್ಲಿ, ಕಾಲು ಶತಮಾನಕ್ಕಿಂತಲೂ ಹೆಚ್ಚಿನ ...ಕಾಲದ ವಿಶಾಲ ಅನುಭವ ಪಡೆದವರು.



Mr. K. S. THIRUPATHI,
Managing Agency Partner, Tbe Reliance Assurance Company, Ltd.

ಶ್ರೀ|| ಕೆ. ಎಸ್. ತಿರುಪತಿಯವರು,
ಮ್ಯಾನೇಜಿಂಗ್, ಏಜನ್ಸಿ ಪಾಲುದಾರರು, ರಿಲೈಯನ್ಸ್
ಅಷ್ಯೂರೆನ್ಸ್ ಕಂಪನಿ, ಲಿ.

ಅನೇಕ ಬೇರೂರಿನಿಂತ ಸ್ವದೇಶೀ ವಿದೇಶೀ ವಿಮಾ ಕಂಪೆನಿಗಳ ಕ್ಷೇತ್ರವಾಗಿದ್ದ ಮೈಸೂರಿನಲ್ಲಿ ಮಟ್ಟಿಗೆ ಜೀವ ವಿಮಾ ಉದ್ಯೋಗವನ್ನು ಈ ಕಂಪೆನಿಯು ಮೊದಲು ಪ್ರಾರಂಭಮಾಡಿತು. ಆ ಮೇಲೆ ಕಂಪೆನಿಯು ಪ್ರಾವಿ ...ಡೆಂಟು ಪದ್ಧತಿಯ ಧನವಿಭಾಗ ನಿಯಮದ ವಿಮಾ ಪದ್ಧತಿಯನ್ನು ಪ್ರಾರಂಭ ಮಾಡಿ ಆ ವ್ಯವಹಾರವನ್ನು ಇಡೀ ಭರತ ಖಂಡದಲ್ಲೆಲ್ಲಾ ನಡೆಯಿಸಿತು. ಅನಂತರ ಸಲಹೆ ಸೂಚನೆಗಳಂತೆ ಈ ಉದ್ಯೋಗವನ್ನು ನಿಲ್ಲಿಸಿತು. ಈ ಶಾಖೆಯಲ್ಲಿ ಸುಮಾರು ೬೬೦೦ ಮಂದಿ ಸದಸ್ಯರೂ ೧೩,೪೦೦ ರೂಪಾಯಿಗಳ ರಿಜರ್ವ್ ನಿಧಿಯೂ ಸೇರಲಾಯಿತು. ಆ ಮೇಲೆ ಕಂಪೆನಿಯು ಇಂಡಿಯಾ ಸರ್ಕಾರದಲ್ಲಿ ಸಾಕಾದಷ್ಟು ಠೇವಣಾತಿಯನ್ನಿಟ್ಟ ೧೯೧೨ ನೇ ಸಂವತ್ಸರದ ಇಂಡಿಯನ್ ಲೈಫ್ ಅಷ್ಯೂರೆನ್ಸ್ ಕಂಪೆನಿಯ ಆಕ್ಟಿನ ಪ್ರಕಾರ ಬ್ರಿಟಿಷ್ ಇಂಡಿಯಾದಲ್ಲೆಲ್ಲಾ ಜೀವ ವಿಮಾ ಉದ್ಯೋಗವನ್ನು ಪ್ರಾರಂಭಮಾಡಿತು.

೧೯೩೪ ನೇ ಸಂವತ್ಸರದ ಡಿಶಂಬರ್ ೩೧ ನೇ ತಾರೀಖಿಗೆ ಅಂತ್ಯವಾಗುವ ಕಂಪೆನಿಯ ಲೆಖ್ಖವರದಿಯುಮೇರೆಗೆ ಈ ಕಂಪೆನಿಗೆ ೧,೧೨,೦೦೦ ರೂಪಾಯಿಗಳ ಮೌಲ್ಯದ ೧೪೬ ದರಖಾಸ್ತುಗಳು ಬಂದು ೭೩,೦೦೦ ರೂಪಾಯಿಗಳ ೯೦ ಪಾಲಿಸಿಗಳು ಕೊಟ್ಟಿರುವಂತೆ ತಿಳಿದುಬರುವುದು. ಈ ಅವಧಿಯಲ್ಲಿ ಬಂದುದು ೧೦೦೦ ರೂಪಾಯಿನ ಒಂದು ಕ್ಲೈಂ ಮಾತ್ರ. ಆದ ಖರ್ಚು ೨೯೮೭ ರೂಪಾಯಿಗಳು. ಈ ವರ್ಷದ ಜೀವವಿಮಾ ಉದ್ಯೋಗದಲ್ಲಿ ೧೭,೯೮೧ರೂಪಾಯಿಗಳಾಗಿದ್ದ ಜೀವವಿಮಾ ನಿಧಿಯು ೧೮,೨೧೭ ರೂಪಾಯಿಗಳಿಗೆ ಏರಿದೆ. ಜೀವವಿಮಾ ಉದ್ಯೋಗಶಾಖೆಯು ಒಟ್ಟು ಆಸ್ತಿಯು ೪೭,೬೨೮ ರೂಪಾಯಿಗಳು.

ಮ್ಯೂಚುಯಲ್ ಬೆನಿಫಿಟ್ ಸ್ಕೀಮಿನ ಪ್ರೀಮಿಯಂ ಆದಾಯವು ೯೧,೮೧೩ ರೂಪಾಯಿಗಳು. ತೆತ್ತ ಮತ್ತು ತೆರಬೇಕಾಗಿರುವ ಕ್ಲೈಂಗಳ ಮೊತ್ತವು೫೯,೪೩೧ ರೂಪಾಯಿಗಳು. ಆದ ಖರ್ಚು ೨೮,೯೩೫ ರೂಪಾಯಿಗಳು. ರಿಜರ್ವ್ ನಿಧಿಯು ೨೨,೬೭೬ ರೂ. ಗಳಿಂದ ಹೆಚ್ಚಿ ಈಗ ೧,೩೪,೩೧೫ ರೂ. ಗಳಾಗಿದೆ. ಒಟ್ಟು ಆಸ್ತಿಯು ೨,೧೦,೩೬೮ ರೂಪಾಯಿಗಳು.

ಜೀವವಿಮಾ ಶಾಖೆಯ ಹೊಣೆಗಾರಿಕೆಯ ವ್ಯಾಲ್ಯುಯೇಷನ್ನು ೧೯೩೩ನೇ ಇಸ್ವಿ ಡಿಸೆಂಬರ್ ೩೧ನೇ ತಾರೀಖಿನ ಅಂತ್ಯದ ವರೆವಿಗೆ ಮಾಡಲಾಯಿತು. ಈ ವ್ಯಾಲ್ಯುಯೇಷನ್ ೧೯೭೯ ರೂ. ಗಳ ಉಳಿತಾಯವನ್ನು ತೋರಿದೆ.

ಈ ಕಂಪೆನಿಯ ಪ್ರೀಮಿಯಂ ದರವು ಕಡಿಮೆ ಇದ್ದು ಬೋನಸ್ಸಿನ ಭರವಸೆಯು ಆಶಾಜನಕವಾಗಿದೆ. ಕಂಪೆನಿಯ ಆರ್ಥಿಕ ಸ್ಥಿತಿಯು ಭದ್ರವಾಗಿದೆ.

ಬ್ರಿಟಿಷ್ ಇಂಡಿಯಾದಲ್ಲೆಲ್ಲಾ ತನ್ನ ವ್ಯವಹಾರವನ್ನು ಸಾಗಿಸುವ ಏರ್ಪಾಡು ಮಾಡುತ್ತಿದೆ. ಈಗಾಗಲೇ ಈ



Mr. G. K. BALIJA B. A., B. L.
Managing Agency Partner,
The Reliance Assurance Co., Ltd.

ಶ್ರೀ|| ಜಿ. ಕೆ. ಬಲಿಜಾ, ಬಿ.ಎ., ಬಿ.ಎಲ್.
ಮ್ಯಾನೇಜಿಂಗ್ ಏಜನ್ಸಿ ಪಾಲುದಾರರು,
ರಿಲೈಯನ್ಸ್ ಅಷ್ಯೂರೆನ್ಸ್ ಕಂಪೆನಿ, ಲಿ.

ಕಂಪೆನಿಗೆ ದೊರಕಿರುವ ಉತ್ತೇಜನವು ಕಂಪೆನಿಗೆ ಬ ರುವ ವರ್ಷಗಳಲ್ಲಿ ಇನ್ನೂ ಉತ್ತಮ ಉದ್ಯಮವನ್ನು ಪ ಬಲ್ಲುದೆಂಬುದನ್ನು ಸೂಚಿಸುತ್ತಿದೆ.

ಭರತಖಂಡದ ಪ್ರಸಿದ್ಧ ಆಕ್ಚ್ಯುಯರಿಗಳಾದ ಜಿ. ಎಸ್. ಮರಾಥೆ, ಎಮ್. ಎ., ಎ. ಐ. ಎ., ರವರು ತಮ್ಮ ತಾ|| ೨೯-೫-೧೯೩೩ರ ಲೇಖನದಲ್ಲಿ ಕಂಪೆನಿಯ ವಿಚಾರದಲ್ಲಿ ಹೀಗೆ ಉಲ್ಲೇಖಿಸಿರುವರು:–

"ನಾನು ಪೂನಾಕ್ಕೆ ಹಿಂತಿರುಗುವಾಗ ನಾನು ನಿಂತ ಕೊಂಚ ಕಾಲದಲ್ಲಿ ನಿಮ್ಮ ಕಂಪೆನಿಯ ಮ್ಯಾನೇಜಿಂಗ್ ಏಜಂಟ್ಸರವರಾದ ಮೆಸರ್ಸ್ ಕೆ. ಎಸ್. ತಿರು ಮತ್ತು ಜಿ. ಕೆ. ಬಲಿಜ ಅವರು ರಿಲೈಯನ್ಸಿನ ಕಛೇರಿಯನ್ನು ನೋಡಲು ಆಹ್ವಾನವಿತ್ತರು. ನಾನು ಕಂಪೆನಿಯ ಕೆಲವು ಲೆಕ್ಕ ಪುಸ್ತಕಗಳನ್ನೂ, ಅವರು ಅನುಸರಿಸುವ ಕ್ರಮುಗಳನ್ನೂ ನೋಡಲು ಅವಕಾಶವು ನನಗೆ ದೊರೆಯಿತು. ಸುಮಾರು ೩೬ ಮಂದಿ ಕಾರಕೂನರು ಎತ್ತ ಕಟ್ಟಡಗಳಲ್ಲಿ ಒಪ್ಪವಾಗಿಯೂ, ಕ್ರಮವರಿತು ಕೆಲಸಮಾಡುವುದನ್ನು ನೋಡಲು ನನಗೆ ಸಂತೋಷವಾಯಿತು. ಕಂಪೆನಿಯು ಉತ್ತಮ ಅಭಿವೃದ್ಧಿಯನ್ನು ಹೊಂದುತ್ತಿದೆಯೆಂಬುದನ್ನು ಕೇಳಿ ನನಗೆ ಆನಂದವಾಯಿತು. ನಾಗರೀಕತೆ, ಮೇಧಾಶಕ್ತಿ, ದಕ್ಷತೆ ಇವುಗಳಿಗೆ ಹೆಸರಾದ ಪಟ್ಟಣಗಳ ಕೂಡಿ ಭರತಖಂಡದಲ್ಲಿ ಪ್ರಸಿದ್ಧವಾಗಿರುವ ನಗರವು ಬೆಂಗಳೂರು. ಇಂತಹ ಪಟ್ಟಣವನ್ನು ನೋಡಿದಾಗ ನನಗೆ ಉಂಟಾದ ಭಾವನೆಯೇ ಈ ರಿಲೈಯನ್ಸ್ ಕಂಪೆನಿಯ ಕಛೇರಿಯನ್ನು ನೋಡಿದಾಗಲೂ ಆಯಿತು. ಕಂಪೆನಿಯು ತನ್ನ ಉದ್ಯೋಗವನ್ನು ಮೈಸೂರು ಸಂಸ್ಥಾನದ ಹೊರ ಸಾಗಿಸಬೇಕೆಂದು ಪ್ರಯತ್ನಿಸುತ್ತಲಿದೆ. ಈ ಪ್ರಯತ್ನವು ಶಯ ವಿಜಯವನ್ನು ಪಡೆಯುವುದೆಂದು ನಾನು ನಂಬು ತ್ತೇನೆ." ಆ ಸುಪ್ರಸಿದ್ಧ ವಿಮಾಶಾಸ್ತ್ರವೇತ್ತರ ನಂಬುಗೆಯು ಫಲಿಸಲೆಂಬುದೇ ನಮ್ಮ ಹೃತ್ಪೂರ್ವಕವಾದ ಸದಾಶಯವು.

# ಪ್ರೀಮಿಯರ್ ಇರ್ಷ್ಯೂರೆನ್ಸ್ ಅಂಡ್ ಬಿಲ್ಡಿಂಗ್ ಸೊಸೈಟಿ ಲಿಮಿಟೆಡ್

## The Premier Insurance & Building Society, Ltd.,

---

ಮೇಲ್ಕಂಡ ಸೊಸೈಟಿಯು ಮದರಾಸ್ ಪ್ರೆಸಿಡೆನ್ಸಿಯಲ್ಲಿ ಸ್ಥಾಪಿತವಾಗಿ ವಿಶೇಷವಾಗಿ ಅಭಿವೃದ್ಧಿಯನ್ನು ಹೊಂದುತ್ತಲಿರುವ ಜೀವಿಮೆಕಂಪನಿಗಳ ಪೈಕಿ ಒಂದಾಗಿದೆ. ಇದು ಇತರ ಕಂಪನಿಗಳ ಹಾಗಲ್ಲದೆ ತನ್ನ ಪಾಲಿಸಿದಾರರಿಗೆ ಮನೆಗಳನ್ನು ಕೊಂಡುಕೊಳ್ಳುವುದಕ್ಕಾಗಲಿ ಅಥವಾ ಅವರುಗಳಿಗೆ ಮೊದಲೇ ಮನೆಗಳಿದ್ದು ಅವುಗಳಮೇಲೆ ಸಾಲಗಳನ್ನು ಮಾಡಿದ್ದರೆ ಅಂಥಾ ಸಾಲಗಳನ್ನು ತೀರಿಸುವುದಕ್ಕಾಗಲಿ ೧೦೦ಕ್ಕೆ ತಿಂಗಳು ಒಂದಕ್ಕೆ ೮ ಆಣೆ ಬಡ್ಡಿಯ ಪ್ರಕಾರ ಸುಲಭ ಕಂತಿನ ವಾಯಿದೆ ಮೇಲೆ ಸಾಲಗಳನ್ನು ಕೊಡುವ ಒಂದು ನೂತನವಾದ ಏರ್ಪಾಡನ್ನು ಮಾಡಿರುತ್ತದೆ. ಹೆಚ್ಚಾದ ದರದ ಬಡ್ಡಿಯನ್ನು ತೆಗೆದುಕೊಂಡು ಅಸಲು ಮೊಬಲಗನ್ನು ಕಂತಾಗಿ ತೆಗೆದುಕ್ಕೊಳ್ಳುವುದಕ್ಕೆ ಒಪ್ಪದೆ ಇರತಕ್ಕ ಸಾಹುಕಾರರಲ್ಲಿ ಸಾಲಗಳನ್ನು ಮಾಡಿರತಕ್ಕವರಿಗೆ ಈ ಸೊಸೈಟಿಯ ಮೇಲ್ಕಂಡ ಸಾಲಗಳನ್ನು ಕೊಡುವ ಪದ್ಧತಿಯು ಮಹತ್ತಾದ ಉಪಕಾರವಾಗಿರುತ್ತದೆ. ಇದರಲ್ಲಿ ಒಂದು ವಿಶೇಷ ಲಕ್ಷಣವೇನೆಂದರೆ ಸಾಲಗಳನ್ನು ತೆಗೆದುಕೊಂಡವರು ಅತ್ಯಂತ ಕಡಿಮೆಯಾದ ಬಡ್ಡಿಯನ್ನು ಕೊಟ್ಟು ಸುಲಭವಾದ ಕಂತಿನಮೇಲೆ ಸಾಲಗಳನ್ನು ತೀರಿಸಬಹುದಲ್ಲದೆ ಒಂದುವೇಳೆ ಅವರು ಸಾಲಗಳನ್ನು ತೀರಿಸುದದರ ಒಳಗಾಗಿ ಗತಿಸಿಹೋದರೆ ಅವರು ಕೊಡಬೇಕಾದ ಸಾಲದ ಮೊಬಲಗುಗಳು ಅವರ ಜೀವವಿಮೆ ಮೊಬಲಗುಗಳಿಂದ ವಜಾಮಾಡಿಕೊಳ್ಳಲ್ಪಟ್ಟು ಅವರು ಆಧಾರ ಮಾಡಿರತಕ್ಕ ಸ್ವತ್ತುಗಳು ಅವರ ವಾರಸ್ಸದಾರರಿಗೆ ಯಾವ ಭಾರವೂ ಇಲ್ಲದೆ ಸೇರಿ ಹೋಗುತ್ತದೆ. ಇದುವರೆಗೆ ಮೈಸೂರು ದೇಶದಲ್ಲಿಯೂ ಮತ್ತು ಮದ್ರಾಸು ಪ್ರೆಸಿಡೆನ್ಸಿಯಲ್ಲಿಯೂ ಪಾಲಿಸಿದಾರರಿಗೆ ಮೇಲ್ಕಂಡ ಸೊಸೈಟಿಯು ೧,೭೫,೦೦೦ರೂ. ಗಳಿಗಿಂತ ಜಾಸ್ತಿಯಾಗಿ ಸಾಲಗಳನ್ನು ಮಂಜೂರು ಮಾಡಿರುತ್ತದೆ. ಸಾಲಗಾರರಾಗಿ ಕಷ್ಟಪಡುವವರು ಮೇಲ್ಕಂಡ ಸೊಸೈಟಿಯ ಪಾಲಿಸಿದಾರರಾಗಿ ಮೇಲ್ಕಂಡ ಏರ್ಪಾಡಿನಿಂದ ತಮ್ಮ ಕಷ್ಟಗಳನ್ನು ನಿವಾರಣೆ ಮಾಡಿಕೊಳ್ಳಬಹುದು.

ಮೇಲ್ಕಂಡ ಸೊಸೈಟಿಯು ಇನ್ನೊಂದು ನವೀನವಾದ ಡಿಬೆಂಚರ್ ಏರ್ಪಾಡನ್ನು ಹೊರಡಿಸಿರುತ್ತವೆ. ಇದರಲ್ಲಿ ತಕ್ಕ ವಿಶೇಷವೇನಂದರೆ, ಒಬ್ಬನು ೧೦ ರೂ. ನ ಒಂದು ಜೀವಿತ ಡಿಬೆಂಚರನ್ನು ತೆಗೆದುಕೊಂಡರೆ ಅವನು ಜೀವಿಸುವವರೆಗೆ ಸೊಸೈಟಿಯ ಲಾಭದ ಹಂಚಿಕೆಗೆ ಅರ್ಹನಾಗುತ್ತಾನಲ್ಲದೆ ಅವನು ಗತಿಸಿದನಂತರ ಅವನ ವಾರಸ್ಸುದಾರರು ಡಿಬೆಂಚರ್ ಮೊಬಲಗು ೧೦ ರೂ. ಜೊತೆಗೆ ೧೦,೦೦೦ ರೂ. ಗಳ ವರೆಗೂ ಬೊನಸ್ಸನ್ನು ಹೊಂದಬಹುದು. ಈ ಏರ್ಪಾಡು ತಮಗೆ ಹೆಚ್ಚು ವಯಸ್ಸಾದ್ದರಿಂದಲೋ ಅಥವಾ ವರ್ಷ ಚಂದಾವನ್ನು ಕೊಡಲು ಶಕ್ತಿ ಇಲ್ಲದೆಯೋ ಇರುವಂಥವರಿಗೆ ಸ್ವಲ್ಪಮೊಬಲಗನ್ನು ಕೊಟ್ಟು ಹೆಚ್ಚಾದ ಲಾಭವನ್ನು ಪಡೆಯಲು ಅನುಕೂಲ ಮಾಡುತ್ತದೆ. ಒಬ್ಬನು ಸೊಸೈಟಿಯ ಒಂದು ವಿವಾಹದ ಡಿಬೆಂಚರನ್ನು ತೆಗೆದುಕೊಂಡರೆ ಅವನ ಅಥವಾ ಅವನ ಮಕ್ಕಳ ವಿವಾಹಕ್ಕಾಗಿ ಡಿಬೆಂಚರ್ ಮೊಬಲಗಿನ ಜೊತೆಗೆ ವಿಶೇಷವಾದ ಬೋನಸ್ಸು ಸಿಗುತ್ತದೆ. ಮೇಲ್ಕಂಡ ಡಿಬೆಂಚರ್ ಏರ್ಪಾಡು ಸರಿಯಾಗಿ ನಡೆಯತಕ್ಕದ್ದೆಂದು ಮತ್ತು ಪ್ರಾವಿಡೆಂಟ್ ಜೀವವಿಮೆ ಮತ್ತು ವಿವಾಹ ಪದ್ಧತಿಗಳ ಹಾಗಲ್ಲವೆಂದು ಪ್ರೊಫೆಸರ್ ಕೆ. ಬಿ. ಮಾಧವ ಎಂ.ಎ., ಎಫ್. ಆರ್. ಎ. ಎಸ್., ಎಂ. ಐ. ಎ., ಲಂಡನ್‌ರವರು ಹೇಳಿರುತ್ತಾರೆ. ಈ ಕಾರಣಗಳಿಂದ ಸಮಾರು ೩೫,೦೦೦ ಡಿಬೆಂಚರುಗಳು ಮಹಾಜನಗಳಿಂದ ಇದುವರೆಗೂ ತೆಗೆದುಕ್ಕೊಳ್ಳಲ್ಪಟ್ಟವೆ. ಸೊಸೈಟಿಯು ಇರ್ಷ್ಯೂರೆನ್ಸ್ ಆಕ್ಟ್ ಪ್ರಕಾರ ಸರ್ಕಾರಕ್ಕೆ ಅವಶ್ಯಕವಾದ ಸೆಕ್ಯೂರಿಟಿ ಡಿಪಾಜಿಟ್ಟನ್ನು ಮಾಡಿರುವುದಲ್ಲದೆ ಗೌರವಸ್ಥರಾಗಿಯೂ ಮತ್ತು ಅನುಭವಶಾಲಿಗಳಾಗಿಯೂ ಇರುವ ಡೈರೆಕ್ಟರುಗಳ ಮೇಲ್ವಿಚಾರಣೆಗೆ ಒಳಪಟ್ಟು ಸೊಸೈಟಿಯ ಕಾರ್ಯಗಳು ನಡೆಯುತ್ತಲಿವೆ. ಸೊಸೈಟಿಯು ಸ್ವಲ್ಪ ಕಾಲದಲ್ಲೇ ೩,೫೦,೦೦೦ ರೂ. ಗಳ ವರೆಗೂ ಸರ್ಕಾರದ ಪತ್ರಗಳಲ್ಲಿಯು ಮತ್ತು ಸ್ಥಿರ ಸ್ವತ್ತುಗಳ ಆಧಾರದ ಮೇಲೆ ಇಟ್ಟಿರುವದಲ್ಲದೆ ಸೊಸೈಟಿಯ ಹೆಡ್ ಆಫೀಸಿಗೋಸ್ಕರ ೪೦,೦೦೦ ರೂ. ಬಾಳುವ

ಯಂದು ಕಟ್ಟಡವನ್ನು ಕ್ರಯಕ್ಕೆ ತೆಗೆದುಕೊಂಡಿರುವುದು ಸ್ತೋತ್ರಾರ್ಹವಾಗಿದೆ.

೧೯೩೫ನೇ ಡಿಸೆಂಬರ್ ೩೧ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದಲ್ಲಿ ೧೬.೨೦,೨೫೦ ರೂ. ಗಳ ಮೊತ್ತದ ೧೨೭ ದರಖಾಸ್ತುಗಳು ಬಂದಿವೆ. ಅದರಪೈಕಿ ೧೦,೬೩,೫೦೦ ರೂ. ಗಳ ಮೊತ್ತದ ೭೭೦ ದರಖಾಸ್ತುಗಳಿಗೆ ಪಾಲಿಸಿ ಪತ್ರಗಳನ್ನು ಕೊಟ್ಟಿದ್ದಾರೆ. ಅವುಗಳ ವಾರ್ಷಿಕ ಪ್ರೀಮಿಯಂ ಮೊಬಲಗು ೬೧,೦೮೦-೧-೦ ರೂ. ಗಳು. ಕಳೆದ ವರ್ಷ ೬,೦೯,೩೦೦ ರೂ. ಗಳ ೮೨೨ ದರಖಾಸ್ತುಗಳಿಗೆ ಪಾಲಿಸಿ ಪತ್ರಗಳನ್ನು ಕೊಟ್ಟಿದ್ದರು. ಈ ವರದಿಯ ವರ್ಷದ ಒಟ್ಟು ಪ್ರೀಮಿಯಂ ಆದಾಯವು ೭೬,೭೧೩-೬-೩ ರೂ ಗಳು. ಕಳೆದ ವರ್ಷ ಇದು ೩೫,೯೪೬-೩-೦ ರೂ. ಗಳಿತ್ತು. ಕಳೆದ ವರ್ಷ ೧೭,೮೨೪-೬ ೮ ರೂ. ಗಳಿದ್ದ ವಿಮಾ ನಿಧಿಯು ವರ್ಷದಲ್ಲಿ ೫೦,೯೦೦-೧೧-೬ ರೂ. ಗಳಿಗೆ ಹೆಚ್ಚಿರುವುದು ಪ್ರಶಂಸನೀಯವಾದ ವಿಚಾರ. ಕಂಪೆನಿಯ ಆಡಳಿತ ಖರ್ಚು ಕಡಮೆಯಾದುದೆಂದೇ ಹೇಳಬೇಕು.

ಈ ವರ್ಷಕಾಲದಲ್ಲಿ ಸೊಸೈಟಿಯು ೫,೨೫೦ ರೂ. ಗಳ ೪ ವಿಮಾ ಹಕ್ಕುಗಳನ್ನು ಕೊಡಬೇಕಾಯಿತು. ಮತ್ತು ವರದಿಯಕಾಲದಲ್ಲಿ ೧೯ ಡಿಬೆಂಚರುದಾರರು ಸತ್ತಪ್ರಯುಕ್ತ ಅವರ ಹಣದ ಜೊತೆಗೆ ಹಕ್ಕುದಾರರಿಗೆ ೪,೧೯೫-೭-೦ ರೂ. ಗಳ ಬೋನಸ್ಸನ್ನು ಹಂಚಿದ್ದಾರೆ.

ಅಂಗಹೀನರ ಮತ್ತು ಅನಾಥರ ರಕ್ಷಣಾರ್ಥವಾಗಿ ೧೭,೦೦೦ ರೂ ಗಳ ದಾನ ನಿಧಿಯನ್ನು ಏರ್ಪಡಿಸಿರುವುದು ಸ್ತುತ್ಯಾರ್ಹವು.

ಇದೇ ರೀತಿಯಾಗಿ ದಿನೇ ದಿನೇ ಸೊಸೈಟಿಯು ವಿಶೇಷವಾದ ಅಭಿವೃದ್ಧಿಯನ್ನು ಹೊಂದಿ ತನ್ನ ಪಾಲಸಿದಾರರಿಗೂ ಮತ್ತು ಡಿಬೆಂಚರ್ ದಾರರಿಗೂ ಪ್ರಯೋಜನವನ್ನು ಉಂಟುಮಾಡುತ್ತದೆಂದು ಸಂಪೂರ್ಣವಾಗಿ ನಂಬಿದ್ದೇವೆ.

ಸೊಸೈಟಿಗೆ ನಾವು ಎಲ್ಲ ಬಗೆಯ ವಿಜಯವನ್ನು ಕೋರುವೆವು.

ಅಂಗಹೀನ ರಕ್ಷಣೆ

# ಮೈಸೂರು ಬ್ಯಾಂಕ್ ಲಿಮಿಟೆಡ್

## THE BANK OF MYSORE Ltd.

ಮೈಸೂರಿನ ಜಾಯಿಂಟ್ ಸ್ಟಾಕು ಕಂಪೆನಿಗಳಲ್ಲಿ ಅತ್ಯುನ್ನತ ಸ್ಥಿತಿಯನ್ನು ಪಡೆದು, ಭರತಖಂಡದ ಬ್ಯಾಂಕುಗಳೊಳಗೆ ಶ್ರೇಷ್ಠಸ್ಥಾನವನ್ನು ಪಡೆದು, ಮೈಸೂರಿನ ಕುಸೀದ ವೃತ್ತಿಗೆ ವಿಪುಲಸಹಾಯಮಾಡಿ, ಮೈಸೂರಿಗೆ ಕೀರ್ತಿ ತಂದಿರುವ ಮಹಾ ಸಂಸ್ಥೆಯೆಂದರೆ ಮೈಸೂರು ಬ್ಯಾಂಕು. ಈ ಮಹಾ ಸಂಸ್ಥೆಯ ಜನಕರೂ ಅದಕ್ಕೆ ಗಿಯೇ ತಮ್ಮ ಎಲ್ಲವನ್ನೂ ಅರ್ಪಿಸಿದ ಸರ್ ಶೆಟ್ಟಿಯವರ ಹೆಸರು ಮೈಸೂರಿನ ಆಧುನಿಕ ಇತಿಹಾಸದಲ್ಲಿ ಚಿರಸ್ಥಾಯಿಯಾದುದು. ಮೈಸೂರಿನ ಆರ್ಥಿಕ ಪುನರುಜ್ಜೀವನಕ್ಕಾಗಿ ಇವರು ಮಾಡಿರುವ, ಮಾಡುತ್ತಿರುವ ಸ್ತುತ್ಯ ಸಾಹಸಗಳು ಆದರ್ಶನೀಯವಾದವುಗಳಾಗಿ ಮೈಸೂರಿನ ಆರ್ಥಿಕ ಚರಿತ್ರೆಯಲ್ಲಿ ಸ್ವರ್ಣಾಕ್ಷರ ಲಿಖಿತವಾಗತಕ್ಕವು.



Raja Sabhabhushana Diwan Bahadur
DR. SIR K. P. PUTTANNA CHETTY, KT., C.I.E., L.L.D.,
Chairman, Bank of Mysore Ltd.
ರಾಜಸಭಾ ಭೂಷಣ ದಿವಾನ್ ಬಹದ್ದೂರ್
ಡಾ|| ಸರ್ ಕೆ. ಪಿ. ಪುಟ್ಟಣ್ಣಚೆಟ್ಟಿ, ಕೆ.ಟಿ., ಸಿ. ಐ. ಇ. ಎಲ್‌ಎಲ್.ಡಿ.,
ಅಧ್ಯಕ್ಷರು, ಮೈಸೂರು ಬ್ಯಾಂಕ್ ಲಿಮಿಟೆಡ್.

ಇಂದಿನ ಶ್ರೇಷ್ಠಸ್ಥಾನವನ್ನು ನಿರ್ಮಿಸಿದವರೂ ಯಾರೆಂದು ಕೇಳಿದರೆ ಮಾದರಿ ಮೈಸೂರಿನ ಸ್ಥಾಪನಾಚಾರ್ಯರಲ್ಲಿ ಒಬ್ಬರಾದ ವೃದ್ಧಪಿತಾಮಹ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರು (Sir K.P. Puttanna Chetty) ಎಂದು ಹೇಳಿದರೆ ತಪ್ಪಾಗದು. ಮೈಸೂರಿಗಾಗಿ ದುಡಿದು, ಮೈಸೂರಿಗಾ ಅಂತಹ ಮೈಸೂರಿನ ಆರ್ಥಿಕ ಚರಿತ್ರೆಯಲ್ಲಿ ಮೈಸೂರು ಬ್ಯಾಂಕಿಗೊಂದು ಮುಖ್ಯಸ್ಥಾನವಿದೆ. ಅಂತಹ ಮೈಸೂರು ಬ್ಯಾಂಕಿನ ಇತಿಹಾಸ ಪ್ರಕರಣದಲ್ಲಿ ಸರ್ ಶೆಟ್ಟರವರಿಗೆ ಪ್ರಥಮ ಸ್ಥಾನವಿದೆ.

ಮೈಸೂರು ಬ್ಯಾಂಕು ೧೯೧೩ ರಲ್ಲಿ ಉದಯಿಸಿತು. ೧೯೩೮ ರಲ್ಲಿ ಅದು ತನ್ನ ರಜತ ಮಹೋತ್ಸವವನ್ನು ನೆರವೇರಿಸುವುದು. ಈಗ್ಗೆ ೨೨ ವರ್ಷಗಳ ಹಿಂದೆ ಮೈಸೂರು ಸರಕಾರವೂ ಆಗ ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರೂ ಮತ್ತು ಮೇಲೆ ಹೇಳಿದಂತೆ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟಿಯವರೂ ಬಹು ಶ್ರದ್ಧೆಯಿಂದಲೂ ಕೃಪಾದೃಷ್ಟಿಯಿಂದಲೂ ಜನರಲ್ಲಿ ಬ್ಯಾಂಕಿಂಗ್ ಪ್ರವೃತ್ತಿಯನ್ನು ಬೆಳೆಯಿಸಲು ವಿಶೇಷ ಸಹಾಯಮಾಡಿದರು. ಬ್ಯಾಂಕು ದಿನೇ ದಿನೇ ಅಭಿವೃದ್ಧಿಗೆ ಬಂದು ಮೈಸೂರು ಸಂಸ್ಥಾನದ ಪ್ರಜೆಗಳಲ್ಲೂ ಸುತ್ತುಮುತ್ತಿನ ಬ್ರಿಟಿಷ್ ಇಂಡಿಯ ಜಿಲ್ಲೆಗಳಲ್ಲಿಯೂ ಪ್ರಿಯವಾಯಿತು. ಇಂದು ಸಂಸ್ಥಾನದ ಎಲ್ಲೆಡೆ



Mr. M. H. DASTUR,
Manager, Bank of Mysore. Ltd.
ಶ್ರೀ|| ಎಂ. ಹೆಚ್. ದಸ್ತೂರ್‌ರವರು
ಮ್ಯಾನೇಜರ್, ಮೈಸೂರು ಬ್ಯಾಂಕ್ ಲಿಮಿಟೆಡ್,

ಗಳಲ್ಲಿ ಬ್ಯಾಂಕಿನ ಶಾಖೆಗಳಿವೆ. ಕಳೆದ ಇಪ್ಪತ್ತು ವರ್ಷಗಳಿಂದಲೂ ಬ್ಯಾಂಕು ಸಂಸ್ಥಾನದ ಕೈಗಾರಿಕೆ ವಾಣಿಜ್ಯ ಪ್ರಗತಿಗೆ ಸಹಕರಿಸಿದೆ ಮತ್ತು ವ್ಯಾಪಾರಗಾರರು, ಬೇಸಾಯಗಾರರು, ಕುಸೀದ ಮತ್ತು ಕೈಗಾರಿಕೆಗಳಲ್ಲಿ ತೊಡಗಿದವರು ಎಲ್ಲರೂ ಬ್ಯಾಂಕಿನಿಂದ ಉಪಕೃತರಾಗಿದ್ದಾರೆಂದರೆ ಸತ್ಯನಿರೂಪಣೆಯೇ ಹೊರತು ಉತ್ಪ್ರೇಕ್ಷೆಯಲ್ಲ. ಇಂದು ಮೈಸೂರು ಬ್ಯಾಂಕು ಭಾರತದ ಆದರ್ಶ ಬ್ಯಾಂಕು ಗಳಲ್ಲಿ ಒಂದಾಗಿದೆ.

ಬ್ಯಾಂಕು ಇನ್ನೂ ಎಳೆಯದಾಗಿರುವಾಗಲೇ ಎರಡು ವಿಷಮ ಪರಿಸ್ಥಿತಿಗಳನ್ನು ಎದುರಿಸಬೇಕಾಯಿತು. ಅದು ತೀರ ಎಳೆ ಕೂಸಾಗಿದ್ದಾಗ ಯೂರೋಪ್ ಮಹಾಯುದ್ಧ ಪ್ರಾಪ್ತವಾಯಿತು. ಆಗ ಶ್ರೀಮನ್ಮಹಾರಾಜಾ ಸರಕಾರದ ಜಾಣ್ಮೆಯಿಂದ ಮತ್ತು ಆಶ್ರಯದಿಂದ ಅಗ್ನಿ ಕುಂಡದಲ್ಲಿ ದಗ್ಧವಾಗದೆ ಪರಿಶುದ್ಧವಾಗಿ ಕಳೆಯೇರಿತು. ೧೯೨೯ರಲ್ಲಿ ಅಮೆರಿಕಾ ಆರ್ಥಿಕ ವಿಷಯಾವಸ್ಥೆಯ ತೀಕ್ಷ್ಣ ಪರಿಣಾಮಗಳು ಪ್ರಪಂಚದ ಮೇಲೆಲ್ಲಾ ಉಂಟಾಗಿ ಇಡೀ ವಿಶ್ವವನ್ನೇ ತನ್ನ ಸುಳಿಯ ಸೆಳತಕ್ಕೆ ಸಿಕ್ಕಿಸಿಕೊಂಡಿತು. ಮಹಾಯುದ್ಧದ ಪೂರ್ವದಲ್ಲಿದ್ದ ಸ್ಥಿತಿಗಿಂತ ಬಿಕ್ಕಟ್ಟಾಗಿ ಧಾರಣೆವಾಸಿಗಳೆಲ್ಲ ಇಳಿದು ಹೋದವು. ೧೯೩೦, ೩೧ ಮತ್ತು ೩೨ನೇ ಇಸವಿಗಳಲ್ಲಿ ಸರಕಾರದ ಸೆಕ್ಯೂರಿಟಿಗಳ ಬೆಲೆಯು ಇಳಿದುಹೋದುದರಿಂದ ಬ್ಯಾಂಕು ತನ್ನ ಲಾಭದಲ್ಲಿ ಪ್ರತಿವರ್ಷವೂ ಕಮ್ಮಿ ಮಾಡಿಕೊಳ್ಳಬೇಕಾಯಿತು. ಈ ವರ್ಷಗಳಲ್ಲಿ ಆರ್ಥಿಕ ವಿಷಮಾವಸ್ಥೆಯಿಂದ ಅನುಭವವನ್ನು ಪಡೆದ ಬ್ಯಾಂಕು ಮುಂದಿನ ಏಳಿಗೆಯನ್ನು ಬಹಳ ಸಂಯಮದಿಂದ ಸಾಧಿಸಬಹದಾಗಿದೆ

೧೯೩೫ರ ಅಂತ್ಯದವರೆಗೆ ಬ್ಯಾಂಕು ಡೆವಿಡೆಂಡು ರೂಪದಲ್ಲಿ ಕೊಟ್ಟುದೂ (ಇದೇ ಬಂಡವಾಳದ ಎರಡರಷ್ಟಾಗುವುದು) ರಿಜರ್ವ್ ಫಂಡಿಗೆ ತೆಗೆದಿಟ್ಟುದೂ ಸೇರಿ ೭೭,೩೨,೩೩೬ ರೂ. ಗಳಾಗುವುದು. ಇಂದಿನ ಬ್ಯಾಂಕಿನ ರಿಜರ್ವ್ ನಿಧಿಯು ೨೪,೭೫,೦೭೭ ರೂ. ಗಳಿರುವುದು. ಬ್ಯಾಂಕಿನ ಮೊದಲ ಷೇರುದಾರರು ಪುಣ್ಯವಂತರು. ಅವರ ಮೂಲ ಧನಕ್ಕೆರಡರಷ್ಟು ಡಿವಿಡೆಂಡು ಪಡೆದುದಲ್ಲದೆ ಅವರೀಗ ೧೦೦ ರೂ. ಗಳ ಷೇರನ್ನು ಮಾರಿ ಶೇಕಡ ೧೭೫ ರಂತೆ ಲಾಭ ಪಡೆಯಬಹುದಾಗಿದೆ.

೧೯೨೫ ರಿಂದ ೧೯೩೫ರ ಕೊನೆಯ ಲೆಕ್ಕದ ಪಟ್ಟಿಯನ್ನು ಅವಲೋಕಿಸಿದರೆ ಡಿಪಾಜಿಟ್ಟುಗಳು ೧,೩೦,೯೨,೪೦೮ ರೂ. ಗಳಿಂದ ೨,೧೩,೮೩,೮೦೬ ರೂ. ಗಳಿಗೆ ಏರಿದೆ. ಹೀಗೆ ಇತರ ಬಾಬುಗಳಲ್ಲಿಯೂ ಉದ್ಯಮವು ದ್ವಿಗುಣವಾಗಿದೆ.

೧೯೩೫ ಡಿಸೆಂಬರಿಗೆ ಅಂತ್ಯವಾಗುವ ವರ್ಷದಲ್ಲಿ ಬ್ಯಾಂಕಿಗೆ ೫,೧೦,೭೨೬-೮-೧೦ ರೂ. ಗಳು ಲಾಭ ಬಂದಿದೆ. ಇದು ೧೯೩೪ರ ಡಿಸೆಂಬರ್ ಅಂತ್ಯದಲ್ಲಿ ಮುಂದೆ ತಂದ ೩,೨೮,೫-೧೨-೮ ರೂ. ಗಳ ಲಾಭಕ್ಕೆ ಸೇರಿದುದಾದರೆ ಒಟ್ಟು ೫,೮೩,೬೦೩-೫-೬ ರೂ. ಗಳಾಗುವುದು.

೧೯೩೮ರ ಡಿಸೆಂಬರ್ ೩೧ನೇ ತಾರೀಖಿಗೆ ಮುಕ್ತಾಯವಾಗುವ ಅರ್ಧ ವರ್ಷಕ್ಕೆ, ವರ್ಷಕ್ಕೆ ಶೇಕಡ ೧೨ ರಂತೆ ಡಿವಿಡೆಂಡನ್ನೂ, ವರ್ಷಕ್ಕೆ ಶೇಕಡ ೨ ರಂತೆ ಬೋನಸ್ಸನ್ನೂ ಹಂಚಬೇಕೆಂದು ಡೈರೆಕ್ಟರುಗಳ ನಿಶ್ಚಯಿಸಿರುತ್ತಾರೆ.

ಬ್ಯಾಂಕಿನ ಆಸ್ತಿಯು ಬೆಲೆಯು ೨,೬೪,೨೬,೯೬೦-೧೨-೪ ರೂ. ಗಳಿರುತ್ತದೆ. ಅದರ ವಿವರಗಳಿದು.

| | | | |
|---|---|---|---|
| ನಗದು ಮತ್ತು ಮುಂಗಡವಾಗಿ ಕೊಟ್ಟಿರುವ ಹಣ | ೫೨,೪೯,೫೩೬ | ೪ | ೭ |
| ಸಾಲ ಕೊಟ್ಟಿರುವುದು | ೯೧,೧೪,೭೨೬ | ೧೧ | ೮ |
| ಡಿಸ್ಕೌಂಟು ಮಾಡಿರುವ ಬಿಲ್ಲುಗಳು | ೬,೦೩,೫೯೩ | ೧ | ೬ |
| ಕೊಂಡ ಬಿಲ್ಲುಗಳು ಮತ್ತು ವ್ಯವಹಾರದಲ್ಲಿರುವುವು | ೪,೫೮,೪೩೪ | ೨ | ೨ |
| ಸಾಮಾನುಗಳು | ೪೨,೩೮೦ | ೨ | ೭ |
| ಭೂಮಿ ಮತ್ತು ಕಟ್ಟಡ | ೩,೧೬,೭೮೯ | ೦ | ೦ |
| ಪುಸ್ತಕಗಳು ಮತ್ತು ವಸ್ತುಗಳು | ೧೯,೧೯೯ | ೮ | ೯ |
| ನಗದಿರುವ ಮತ್ತು ಬಂಡವಾಳಕ್ಕೆ ವಿನಿಮಯಿಸಿರುವ ಹಣ | | | |
| ಮುಖ್ಯ ಕಚೇರಿಯಲ್ಲಿ ಮತ್ತು ಬ್ರಾಂಚುಗಳಲ್ಲಿರುವುದು | ೮,೩೨,೯೨೧ | ೧೫ | ೫ |
| ಇತರ ಬ್ಯಾಂಕುಗಳಲ್ಲಿರುವುದು | ೩೪,೩೮,೬೭೩ | ೧೦ | ೧೧ |
| ಮೈಸೂರು ಸಹಕಾರದ ಟ್ರೆಜರಿಯಲ್ಲಿರುವುದು | ೧,೮೦,೩೭೮ | ೫ | ೬ |
| ಬಂಡವಾಳಕ್ಕೆ ವಿನಿಮಯಿಸಿರುವುದು | ೬೧,೭೦,೩೯೫ | ೧೩ | ೩ |
| | ೧,೦೬,೨೨,೩೦೧ | ೧೩ | ೧ |
| | ೨,೬೪,೨೬,೯೬೦ | ೧೨ | ೪ |

ಮೈಸೂರು ಬ್ಯಾಂಕು ಮೈಸೂರು ಜಿಲ್ಲೆಯ ನೆಲ್ಲು ಮತ್ತು ಎಣ್ಣೆಬೀಜಗಳ ಬೆಳೆಗಾಗಿ ಹಣವೊದಗಿಸಿದೆ. ಹಾಸನದ ಕಾಫಿ ಮತ್ತು ಏಲಕ್ಕಿಗಳಿಗೂ, ಕಡೂರಿನ ಕಾಫಿಗೂ ಶಿವಮೊಗ್ಗ ಸಾಗರಗಳ ಅಡಿಕೆ ಮತ್ತು ನೆಲ್ಲಿಗೂ, ದಾವಣಗೆರೆ ಚಿತ್ರದುರ್ಗಗಳ ಕಡಲೆಕಾಯಿ, ಎಣ್ಣೆಬೀಜ ಮತ್ತು ಹತ್ತಿಗೂ ಚಿಂತಾಮಣಿ, ಚಿಕ್ಕಬಳ್ಳಾಪುರ ಗ್ರಾಮ ಕೈ... ಗಳಿಗೂ ಹಣವೊದಗಿಸಿದೆ. ಈ ರೀತಿ ಬ್ಯಾಂಕು ವ್ಯ... ದೇಶದ ರೈತರೆಲ್ಲರಿಗೂ ಸಹಾಯನೀಡಿ ಸಾರ್ವತ್ರಿಕ ... ದಭಿವೃದ್ಧಿಗೆ ನೆರವಾಗುತ್ತಿದೆ.

ಮ|| ರೋಸ್‌ರವರು (Mr. Ross) ಬ್ಯಾಂ... ತಳಹದಿಯಿಟ್ಟರು. ಮ|| ಪಿ. ಡಬ್ಲ್ಯು. ಓಬ್ರಿಯ... (Mr. P. W. O'Brien) ಅದರ ಮೇಲೆ ಭವನ... ನಿರ್ಮಿಸಿ ಸುಂದರವಾದ ಶಿಲ್ಪವನ್ನು ರಚಿಸಿದರು. ... ಮೈಸೂರಿನ ಕನಸು ಸಫಲವಾಗುವಂತೆ ಶ್ರಮಿಸಿದ... ಮೈಸೂರಿನ ಕೀರ್ತಿಯು ಇಡೀ ಭರತಖಂಡಕ್ಕೆ ... ವಾಗಿ ಮೆರೆವಂತೆ ಮಾಡಿದರು. ಅವರು ಸಾ... ಸೌಕರ್ಯ ಸೌಲಭ್ಯ, ಅಧಿಕ ರಿಜರ್ವ್ ನಿಧಿ ಇವನ್ನು ... ನಿವೃತ್ತರಾಗಿದ್ದಾರೆ. ಬ್ಯಾಂಕು ಇಂದು ಬೇರಿಟ್ಟು ನಿಲ್ಲ... ಅವರ ಕೆಲಸವನ್ನು ವಹಿಸಿಕೊಂಡಿರುವ ಮ|| ಎಂ. ಹೆ... ದಸ್ತೂರ್‌ರವರು (Mr. M. H. Dastur) ಹಿಂದಿನ... ಕೆಲಸವನ್ನು ಮುಂದುವರಿಸಬೇಕಾಗಿದೆ. ಹಾಗೆ ಮಾಡ... ಅವರು ಸಮರ್ಥರೆಂದೂ ಮೈಸೂರಿನ ಆರ್ಥಿಕ ಚರಿತ್ರೆಯ... ಮೈಸೂರು ಬ್ಯಾಂಕಿನ ಇತಿಹಾಸದಲ್ಲಿ ತಮ್ಮ ಹೆ... ಶಾಶ್ವತವಾಗುವಂತೆ ಮಾಡಲು ಶಕ್ತರೆಂದೂ ನಮಗೆ ಪೂರ್ಣ ಭರವಸೆ ಇದೆ.

ಡೈರೆಕ್ಟರುಗಳ ಮಂಡಲಿಯುಲ್ಲಿರುವವರ ಹೆಸರನ್ನು ಅವಲೋಕಿಸಿದುದಾದರೆ ಅಂತಹ ಅನುಭವಶಾಲಿ ವ್ಯವಹಾರ ನಿಪುಣರ ನೇತೃತ್ವದಲ್ಲಿ ಬ್ಯಾಂಕು ಜನತೆಯ ಆರ್ಥಿಕ ಅ... ಶ್ಯಕತೆಗಳಿಗೆ ಸಹಾಯನೀಡಿ ದೇಶದ ಹಿತವನ್ನು ಸಾಧಿಸುವು... ದೆಂದು ನಿಸ್ಸಂಶಯವಾಗಿ ಹೇಳಬಹುದು. ಇಂತಹ ಸಂಸ್ಥೆ... ಯೊಂದನ್ನು ಪಡೆದಿರುವ ಭಾಗ್ಯವು ನಮ್ಮ ನಾಡಿಗೆ ಚಿರ... ಕಾಲವಿರಲೆಂದು ಬಯಸುವೆವು.



# ದೇವಾಂಗ ಬ್ಯಾಂಕ್, ಲಿಮಿಟೆಡ್

## Devanga Bank, Limited.

---

ಒಂದು ದೇಶದ ವ್ಯಾಪಾರವೂ, ಕೈಗಾರಿಕೆಗಳೂ, ಕೃಷಿಯೂ ಅಭಿವೃದ್ಧಿ ಹೊಂದಬೇಕಾದರೆ ಅವುಗಳಿಗೆ ಬಂಡವಾಳ ಒದಗಿಸುವ ವ್ಯವಹಾರವು ವ್ಯವಸ್ಥಿತವಾದುದಿರಬೇಕು. ದೇಶದ ಕೃಷಿ ಕೈಗಾರಿಕೆ ವ್ಯಾಪಾರೋದ್ಯಮಗಳಿಗೆ ಬಂಡವಾಳ ಒದಗಿಸಿ ಸಹಾಯ ಮಾಡಬಲ್ಲ ಸಂಸ್ಥೆಗಳೆಂದರೆ ಬ್ಯಾಂಕಿಂಗ್ ಸಂಸ್ಥೆಗಳು. ಮೈಸೂರು ದೇಶಕ್ಕೆ ಹೀಗೆ ಬಂಡವಾಳ ಒದಗಿಸುವ ಸಂಸ್ಥೆಗಳು ನೂರಾರು ಬೇಕು. ಅದುಕಾರಣ ದೇವಾಂಗ ಬ್ಯಾಂಕ್ ಲಿಮಿಟೆಡ್ ಸಂಸ್ಥೆಯನ್ನು ಸ್ಥಾಪಿಸಿದ ಮಹನೀಯರನ್ನು ನಾವು ಅಭಿನಂದಿಸುತ್ತೇವೆ.

ಈ ಸಂಸ್ಥೆಯು ಸ್ಥಾಪಿತವಾಗಿ ಹತ್ತು ವರ್ಷಗಳಾಯಿತು. ಅಂದಿನಿಂದಲೂ ಸಂಸ್ಥೆಯು ವರ್ಷೇವರ್ಷೇ ಹೆಚ್ಚು ಅಭಿವೃದ್ಧಿ ಹೊಂದುತ್ತಾ ಸಂಸ್ಥಾನದ ಒಂದು ಪ್ರಮುಖ ಬ್ಯಾಂಕಿಂಗ್ ಸಂಸ್ಥೆಯಾಗಿ ಪರಿಗಣಿತವಾಗಿದೆ. ಇದರ ಬಂಡವಾಳವು ವರ್ಷವರ್ಷಕ್ಕೂ ಹೆಚ್ಚುತ್ತಾ ಸಂಸ್ಥೆಯ ಆರ್ಥಿಕ ಭದ್ರುತೆಯು ಬಲಯುತವಾಗುತ್ತಿರುವುದು ಈ ಕೆಳಗೆ ಕೊಟ್ಟಿರುವ ಅಂಕಿಗಳಿಂದ ವ್ಯಕ್ತವಾಗುತ್ತದೆ.

ಷೇರುಧನ

| ೧೯೩೧ | ೧೯೩೨ | ೧೯೩೩ | ೧೯೩೪ |
|---|---|---|---|
| ೯೭,೫೯೯ | ೧,೦೦,೬೩೬ | ೧,೦೬,೩೧೫ | ೧,೦೬,೭೩೮ |

೧೯೩೫ ರಲ್ಲಿ ಫರ್‌ಫೀಟ್ ಆದುದೂ ಸೇರಿ ೧,೦೭,೯೦೮ ರೂ. ಯಾವ ಕಂಪೆನಿಗೇ ಆಗಲಿ ಬಾಲ್ಯದಲ್ಲಿ ತೊಡರುಗಳು ಬರುವುದು ಸಹಜವಾಗಿಯೇ ಇದೆ. ಅದೇ ರೀತಿ ಈ ಸಂಸ್ಥೆಯು ತೊಡರುಗಳಿಗೆ ಈಡಾಗಬೇಕಾಯಿತು. ಅಂದು ಸಾರ್ವಜನಿಕರ ಅಭಿಪ್ರಾಯವು ಬೇರೆಯಾಯಿತು. ಆದರೆ ಬಂದ ತೊಡರುಗಳನ್ನೆಲ್ಲಾ ಗೆಲಿದು ಇಂದು ಸಾರ್ವಜನಿಕರೆಲ್ಲರ ಆದರ ಪ್ರೇಮಗಳಿಗೆ ಪಾತ್ರವಾಗಿ ಬೆಳೆಯುತ್ತಿರುವುದು ಸಂಸ್ಥೆಯ ಭದ್ರುತೆಯ ನಿದರ್ಶನವಾಗಿದೆ. ಈ ಸಂಸ್ಥೆಯ ಡಿಪಾಜಿಟ್ಟುಗಳ ಮೊತ್ತವು ಸುಮಾರು ೪ ಲಕ್ಷದ ವರೆಗೂ ಇರುವುದು. ಮತ್ತು ಸಂಸ್ಥೆಯು ನಡೆಸುತ್ತಿರುವ ಸಾಲ ವ್ಯವಹಾರವು ೫ ಲಕ್ಷಗಳಷ್ಟಿರುವುದು. ಈ ಸಂಸ್ಥೆಯು ಪ್ರತಿವರ್ಷವೂ ಸುಮಾರು ೪೦ ಸಾವಿರ ರೂ. ಗಳ ಆದಾಯ ಪಡೆಯುತ್ತಿದೆ.

ಸಂಸ್ಥೆಯು ಸುರಕ್ಷಿತ ಮಾರ್ಗಗಳಲ್ಲಿ ತನ್ನ ಬಂ- ವಾಳವನ್ನು ವಿನಿಮಯಿಸಿರುವುದು. ಹೀಗೆವಿನಿಮಯಿ- ಮೊತ್ತವು ೧೯೩೫ ರ ಡಿಸೆಂಬರ್ ೩೧ ನೇ ತಾರೀ- ಮುಕ್ತಾಯವಾಗುವ ವರ್ಷದಲ್ಲಿ ಹಿಂದಿನ ವ- ೩೦,೨೬೨-೮-೦ ರೂ. ಗಳಿದ್ದುದು ಈ ವರ್ಷ ೩೩,೮೦೦ - ಹೆಚ್ಚಿರುತ್ತದೆ.

ಸಂಸ್ಥೆಯು ಹೊರಗಡೆ ಕೊಟ್ಟಿರುವ ಸಾಲಗಳ ಪ್ರ- ಗಳು ಈ ರೀತಿ ಇದೆ.

ಸಂಪೂರ್ಣ ಭದ್ರತೆಯ ಸಾಲಗಳು.

| | ೧೯೩೧ | ೧೯೩೨ | ೧೯೩೩ | ೧೯೩೪ | ೧೯೩- |
|---|---|---|---|---|---|
| ಶೇಕಡ | ೫೧ | ೪೬ | ೫೪ | ೫೯ | [illegible] |

ಖುದ್ದು ಜವಾಬ್ದಾರಿ ಸಾಲಗಳು

| | ೧೯೩೧ | ೧೯೩೨ | ೧೯೩೩ | ೧೯೩೪ | ೧೯೩- |
|---|---|---|---|---|---|
| ಶೇಕಡ | ೪೯ | ೫೪ | ೪೬ | ೪೧ | [illegible] |

ಬ್ಯಾಂಕಿನ ಖುದ್ದು ಜವಾಬ್ದಾರಿ 'ಸಾಲ ವ್ಯವಹಾ- ವರ್ಷೇ ವರ್ಷೇ ಕಡಮೆಯಾಗುತ್ತಾ ಬಂದಿರುವು- ಮೇಲ್ಕಂಡ ಅಂಕಿಗಳಿಂದ ವ್ಯಕ್ತವಾಗುತ್ತದೆ. ನೂರಕ್ಕೆ - ರಂತೆ ಇದ್ದುದು ೩೭ಕ್ಕೆ ಇಳಿದಿದೆ. ಇದು ಅಭಿವೃದ್ಧಿ- ಸೂಚನೆ. ಭದ್ರುತೆಯ ವಿಚಾರದಲ್ಲಿ ಬ್ಯಾಂಕಿನ ಆ- ನಿರ್ವಾಹಕರು ತೆಗೆದುಕೊಳ್ಳುತ್ತಿರುವ ಶ್ರದ್ಧೆಯನ್ನು ವಿ- ಪಡಿಸುವುದು.

ಇಂದಿನ ಆರ್ಥಿಕ ದುಃಸ್ಥಿತಿಯಲ್ಲಿಯೂ, ಲೇವಾದೇ- ವಿಯ ಪೈಪೋಟಿಯಲ್ಲೂ ಕಂಪೆನಿಯ ಆದಾಯವು ಮೊ- ಲಿಗಿಂತ ಸ್ವಲ್ಪ ಕಡಮೆಯಾದರೂ ಆ ಮೊತ್ತವು ಹೆಚ್ಚು- ಪ್ರಮಾಣದ್ದೇ ಇರುವುದು ಪ್ರಸಂಶನೀಯವಾದುದು.

೧೯೩೫ನೇ ಡಿಸೆಂಬರ್ ೩೧ನೇ ತಾರೀಖಿಗೆ ಮುಕ್ತ- ಯವಾಗುವ ವರ್ಷದಲ್ಲಿ ಕಂಪೆನಿಗೆ ೫,೪೧೮-೩-೧೧ ರೂ.ಗಳ ನಿವ್ವಳ ಆದಾಯ ಬಂದಿರುತ್ತದೆ. ಇದಕ್ಕೆ ಕಳೆದ ವರ್ಷ- ಶಿಲ್ಕನ್ನು ಸೇರಿಸಿದರೆ ಒಟ್ಟು ೫,೬೪೦-೪-೬ ಆಗುತ್ತದೆ. ಇದರಲ್ಲಿ ಪೂರ್ಣ ಸಂದಾಯವಾಗಿರತಕ್ಕ ಷೇರುಗಳ ಮೇ-

...ಕಡ ೫ ರಂತೆ ಡಿವಿಡೆಂಡು ಹಂಚಿದ್ದಾರೆ. ಮತ್ತು ...-೯ ರೂ. ಗಳನ್ನು ರಿಸರ್ವ್ ನಿಧಿಗೆ ಸೇರಿಸಿದ್ದಾರೆ. ...ಯ ರಿಸರ್ವ್ ನಿಧಿಯು ಕಳೆದ ಮೂರು ವರ್ಷಗಳಲ್ಲಿ ...೦೦೦ ರೂ. ಗಳಿಂದ ೯,೨೨೭-೬-೩ ರೂಗಳಿಗೆ ಹೆಚ್ಚಿದೆ.

ಒಂದು ದೇಶದ ಸಂಪತ್ತು ಅಭಿವೃದ್ಧಿಯಾಗಬೇಕಾ ...ದೆ ಆದರಲ್ಲಿನ ಪ್ರಜೆಗಳಿಂದ ಸಂಪಾದಿಸಲ್ಪಟ್ಟ ಹಣವು ...ದೇಶದಲ್ಲಿಯೇ ವಿನಿಯೋಗಿಸಲ್ಪಡಬೇಕಾದುದರ ಅವ ...ಶ್ಯಕತೆಯು ಎಲ್ಲರಿಗೂ ತಿಳಿದ ಅಂಶವೇ ಆಗಿರುತ್ತದೆ. ... ಉನ್ನತವಾದ ಅಭಿಪ್ರಾಯಾನುಸಾರವಾಗಿಯೇ ಈ ಬ್ಯಾಂಕಿನ ಬಂಡವಾಳವು ಈ ದೇಶದಲ್ಲಿನ ಸೆಕ್ಯೂರಿಟಿಗಳ ಮೇಲೆಯೇ ವಿನಿಯೋಗಿಸಿರುತ್ತಿಯಾಗಿ ಇಂತಹ ಬ್ಯಾಂಕುಗಳಿಗೆ ಉತ್ತೇಜನ ಕೊಡಬೇಕಾದ್ದು ಅವಶ್ಯಕ.

ಬ್ಯಾಂಕಿನ ನೌಕರರೂ, ಆಡಳಿತ ನಿರ್ವಾಹಕರೂ ಶ್ರದ್ಧೆಯಿಂದ ಕೆಲಸಮಾಡುತ್ತಾ ಬ್ಯಾಂಕಿನ ಪುರೋಭಿವೃದ್ಧಿಯಲ್ಲಿ ನಿರತರಾಗಿದ್ದಾರೆ. ಬ್ಯಾಂಕು ಬರುವ ವರ್ಷಗಳಲ್ಲಿ ಇನ್ನೂ ಹೆಚ್ಚಿನ ಆದಾಯವನ್ನು ಪಡೆದು, ಸಾರ್ವಜನಿಕರನೇಕರ ಆವಶ್ಯಕತೆಗಳನ್ನು ತೃಪ್ತಿಗೊಳಿಸಿ ಯಶಸ್ಸು ಪಡೆಯಲೆಂದು ಹಾರೈಸುತ್ತೇವೆ.



# ಶ್ರೀಮನ್ಮ ಮಧ್ವಸಿದ್ಧಾಂತ ಅಭಿವೃದ್ಧಿಕಾರಿಣಿ ಬ್ಯಾಂಕ್, ಲಿಮಿಟೆಡ್

## ಹೊಸತರಗುಪೇಟೆ, ಬೆಂಗಳೂರು ಸಿಟಿ

## The Sriman Madhwa Siddahnta Abhivriddhi Karini Bank Ltd.,

---

ಈ ಸಂಸ್ಥೆಯು ೧೯೩೦ ರಲ್ಲಿ ಸ್ಥಾಪಿತವಾಯಿತು. ವಿಶೇಷ ಪರಿಸ್ಥಿತಿಯೊಂದು ಈ ಸಂಸ್ಥೆಯ ಉದಯಕ್ಕೆ ಕಾರಣವಾದುದರಿಂದ ಅದನ್ನು ಕುರಿತು ಎರಡು ನುಡಿಗಳನ್ನಾಡುವುದು ಯುಕ್ತವಾಗಿದೆ. ೧೯೩೦ ನೇ ಇಸವಿಯ ಆದಿಭಾಗದಲ್ಲಿ ಶ್ರೀ ಉತ್ತರಾದಿ ಮಠದ ಜಗದ್ಗುರು ಶ್ರೀ ಸ್ವಾಮಿಗಳವರು ಬೆಂಗಳೂರಿನಲ್ಲಿ ದೀರ್ಘಕಾಲ ಉಳಿದುಕೊಂಡಿದ್ದರು. ನಗರದ ದಕ್ಷಿಣಭಾಗದಲ್ಲಿ ಜನತೆಗೆ ನಿವೃತ್ತ ವಿದ್ಯಾಶಾಖಾಧಿಕಾರಿಗಳಾದ ಎಂ. ಶಾಮರಾಯರಿಗೂ ಅಪೆಕ್ಸ್ ಬ್ಯಾಂಕಿನ ಪ್ರೆಸಿಡೆಂಟರಾದ ನಿವೃತ ಡಿಸ್ಟ್ರಿಕ್ಟ ಜಡ್ಜರಾದ ಎಸ್. ವೆಂಕಟಕೃಷ್ಣಯ್ಯನವರಿಗೂ ತಿಳಿಯಪಡಿಸಿದರು. ಅವರ ಅಭಿಪ್ರಾಯದಂತೆ ೫,೦೦,೦೦೦ ರೂ.ಗಳ ಬಂಡವಾಳದ ಬ್ಯಾಂಕು ಒಂದನ್ನು ಸ್ಥಾಪಿಸಬೇಕೆಂಬ ಒಂದು ಕಾರ್ಯಕ್ರಮವನ್ನು ರಚಿಸಿದರು. ಬಂಡವಾಳವನ್ನು ೧೦ ರೂ.ಗಳ ೫೦,೦೦೦ ಷೇರುಗಳಿಗಾಗಿ ವಿಭಾಗಿ



Rajakarya prasakta Rao Bahadur M. SHAMA RAO, M. A.,
Chairman, The S. M. S. A. Bank Ltd.
ರಾಜಕಾರ್ಯ ಪ್ರಸಕ್ತ ರಾವ್ ಬಹದ್ದೂರ್ ಎಂ. ಶ್ಯಾಮರಾವ್ ಎಂ. ಎ.
ಅಧ್ಯಕ್ಷರು, ಶ್ರೀಮನ್ಮ ಮಧ್ವಸಿದ್ಧಾಂತ ಅಭಿವೃದ್ಧಿಕಾರಿಣಿ ಬ್ಯಾಂಕ್. ಲಿಮಿಟೆಡ್.

ಬ್ಯಾಂಕಿಂಗ್ ವ್ಯವಹಾರದ ಅನುಕೂಲಗಳನ್ನು ಕಲ್ಪಿಸಿಕೊಡುವುದಕ್ಕೂ ಮತ್ತು ವ್ಯಾಪಾರ ನಡೆಸುವುದಕ್ಕೂ, ಜಾಯಿಂಟ್ ಸ್ಟಾಕ್ ಬ್ಯಾಂಕೊಂದರ ಅವಶ್ಯಕತೆಯಿದೆಯೆಂದು ಅವರು ಗ್ರಹಿಸಿದರು. ಅವರು ತಮ್ಮ ಯೋಜನೆಯನ್ನು ಸಹಕಾರ ಚಳುವಳಿಯ ಜೀವದಾತರಾದ, ಹಲವು ಪ್ರಮುಖ ಸಹಕಾರ ಸಂಸ್ಥೆಗಳ ಮಾಜಿ ಅಧ್ಯಕ್ಷರಾದ ದರು. ಶ್ರೀ ಸ್ವಾಮಿಗಳವರು ಷೇರು ಬಂಡವಾಳಕ್ಕೂ ಆಡಳಿತ ಬಂಡವಾಳಕ್ಕೂ ವಿಶೇಷ ಧನ ಸಹಾಯಮಾಡಿದರು. ಅಷ್ಟೇ ಅಲ್ಲದೆ ಬೆಳಗಾಂ, ಧಾರವಾಡ ಮತ್ತು ರಾಯಚೂರು ಜಿಲ್ಲೆಗಳಿಂದ ಅನೇಕ ಚಂದಾದಾರರನ್ನು ಒದಗಿಸಿಕೊಟ್ಟರು. ಶ್ರೀಗಳ ಕಾರ್ಯವು ಪಾರಮಾರ್ಥಿಕ ಮುಕ್ತಿಮಾರ್ಗದರ್ಶಕವಾಗಿರುವುದಷ್ಟೇ ಅಲ್ಲದೆ ಐಹಿಕ ಜೀವನ

...ನ್ನು ಹಸನುಗೊಳಿಸಬೇಕಾದುದೂ ಮುಖ್ಯ ಎಂಬು ...ನ್ನು ಶ್ರೀಗಳವರು ಆಚರಣೆಯಲ್ಲಿ ತಂದಿದ್ದಾರೆ. ವಿವೇ ...ನಂದರ ವೀರವಾಣಿಯನ್ನು ಕಾರ್ಯರೂಪದಲ್ಲಿ ತೋರಿಸಿ ...ದ್ದಾರೆ. ನಮಗಿಂದು ವೈ ರಾ ಗ್ಯ ವೂ ಬೇಕು ಹಣವೂ ...ಬೇಕು. ಹಣ ವೈರಾಗ್ಯವನ್ನಿಂದು ತೊರೆದು ನಿಜವಾದ ...ವೈರಾಗ್ಯತಳೆದು ದ್ರವ್ಯಶಕ್ತಿಯನ್ನು ಗಳಿಸಬೇಕಾಗಿದೆ. ಅದೇ ...ದೇಶದ ಮುಕ್ತಿ, ಸಮಾಜದ ಮುಕ್ತಿ. ಶ್ರೀಗಳವರ ಆಚ ...ರಣೆಯು ಇತರ ಯತಿಗಳಿಗೆ ಆದರ್ಶಪ್ರಾಯವಾದುದು. ...ವರ ಆಶ್ರಯದಲ್ಲಿ ಬ್ಯಾಂಕು ೧೯೩೦ ನೇ ತಿಂಗಳಿನಲ್ಲಿ ...ಶಂಕರಪುರದಲ್ಲಿ ಸ್ಥಾಪಿತವಾಯಿತು.

ಅಲ್ಲಿಂದೀಚೆಗೆ ಆರ್ಥಿಕ ದುಃಸ್ಥಿತಿಯೂ, ವ್ಯಾಪಾರ ಮುಗ್ಗಟ್ಟೂ ಹೆಚ್ಚಿದ ಪ್ರಯುಕ್ತ ಬ್ಯಾಂಕು ಬಹು ಎಚ್ಚರಿಕೆ ಯಿಂದ ಮುಂದುವರಿಯಬೇಕಾಯಿತು ಡೈರೆಕ್ಟರುಗಳ ಮಂಡಲಿಯಲ್ಲಿ ಸಾರ್ವಜನಿಕರಿಗೆ ನಂಬಿಕೆ. ಇರುವ ಪ್ರಯುಕ್ತ ಬ್ಯಾಂಕು ಏಕರೀತಿ ಪ್ರಗತಿಹೊಂದುತ್ತಲಿದೆ.

ಡಿಪಾಜಿಟ್ಟುದಾರರು ಬ್ಯಾಂಕಿನ ಆಫೀಸನ್ನು ವ್ಯಾಪಾರ ನಡೆಯುವ ಸ್ಥಳಕ್ಕೆ ಬದಲಾಯಿಸಬೇಕೆಂದು ಸಲಹೆ ಕೊಟ್ಟ ಕಾರಣ ಅದನ್ನು ೧೯೩೬ನೇ ಫೆಬ್ರುವರಿಯಲ್ಲಿ ಈಗಿರುವ ಸ್ಥಳಕ್ಕೆ ಬದಲಾಯಿಸಲಾಯಿತು. ಇಂದು ಬ್ಯಾಂಕು ವ್ಯಾಪಾರೀ ಸಮಾಜಕ್ಕೆ ಹೆಚ್ಚು ಉಪಯುಕ್ತವಾಗಬಲ್ಲುದು. ಅಂತೆಯೇ ಅದರಿಂದ ಅವರು ಹೆಚ್ಚು ಉಪಯೋಗ ಪಡೆಯುತ್ತಲೂ ಇದ್ದಾರೆ.

ಈ ಬ್ಯಾಂಕು ಸ್ಥಾಪಿತವಾದ ಮೇಲೆ ಹತ್ತಾರು ಜಾಯಿಂಟ್ ಸ್ಟಾಕ್ ಕಂಪನಿಗಳು ಸ್ಥಾಪಿತವಾಗಿರುವುದು ಶ್ರೀಗಳವರ ಯೋಜನೆಯು ಎಷ್ಟು ಕಾಲೋಚಿತವಾದುದೆಂಬುದನ್ನು ಸೂಚಿಸುತ್ತದೆ

ಸಹಕಾರ ಸಂಘಗಳು ಸಾರ್ವಜನಿಕರಿಗೆ ಒದಗಿಸುವ ಸಹಾಯವನ್ನು ತಾನೂ ಒದಗಿಸಬೇಕೆಂದು ಬ್ಯಾಂಕು ಪ್ರಾವಿಡೆಂಟ್ ಫಂಡ್ ಪದ್ಧತಿಗೆ ಸರಿಹೋಲುವ "ರೆಕರಿಂಗ್ ಡಿಪಾಜಿಟ್" ಪದ್ಧತಿಯನ್ನು ಅನುಸರಿಸಿದೆ.

ಇಂದು ಡೈರೆಕ್ಟರು ಮಂಡಲಿಗೆ ಮದ್ರಾಸ್ ಆಧಿಪತ್ಯದ ನಿವೃತ್ತ ಅಕೌಂಟೆಂಟ್ ಜನರಲ್‌ರವರಾದ ಶ್ರೀ ಎಚ್. ಭೀಮಸೇನರಾವ್ ಬಿ.ಎ., ಯವರ, ನಿವೃತ್ತ ಚೀಫ್ ಇಂಜನಿಯರರಾದ ರಾಜಸೇವಾಸಕ್ತ ಶ್ರೀ ಎಂ. ಜಿ. ರಂಗಯ್ಯ, ಬಿ.ಎ., ಬಿ.ಎಲ್., ರವರ ಸಹಕಾರವು ದೊರೆತಿದೆ.

ಅನುಭವಸ್ಥರಾದ ಇವರೆಲ್ಲರ ಆಡಳಿತ ನೇತೃತ್ವದಲ್ಲಿ ಸಂಸ್ಥೆಯು ಬರುವ ವರ್ಷದಲ್ಲಿ ಹೆಚ್ಚು ಅಭಿವೃದ್ಧಿಯಾಗುವುದು ನಿಜ. ಹಾಗೆ ಪ್ರಗತಿ ಹೊಂದಿ ಶ್ರೀಗಳವರ ಸಮಾಜ ಸೇವಾ ಕಾರ್ಯದ ಪವಿತ್ರ ಉದ್ದೇಶವು ಫಲಿಸಲೆಂದು ಹಾರೈಸುವೆವು.



# ಕಣಿಯರ ಬ್ಯಾಂಕ್, ಲಿಮಿಟೆಡ್

## The Kaniyara Bank Ltd.

ಕಣಿಯರ ಬ್ಯಾಂಕ್ ಲಿಮಿಟೆಡ್, ಮೈಸೂರು ಸಂಸ್ಥಾನದಲ್ಲಿ ೧೯೧೭ನೇ ಇಸವಿ, ಮೈಸೂರು ಕಂಪೆನಿಗಳ ರೆಗ್ಯುಲೇಷನ್ ೮ ನೇ ನಂಬರು ಅನುಸಾರವಾಗಿ ೧೯೩೩ ರಲ್ಲಿ ರಿಜಿಸ್ಟರಾಯಿತು. ಈ ಬ್ಯಾಂಕಿನ ಹೆಡ್‌ಆಫೀಸು ಬೆಂಗಳೂರು ಸಿಟಿ ಹೊಸತರಗುಪೇಟೆಯಲ್ಲಿರುತ್ತೆ.




Group Photo taken on the occasion of the Opening Ceremony of the Branch Office at Madras
ಮದ್ರಾಸಿನ ಶಾಖೆಯ ಆರಂಭ ಮಹೋತ್ಸವ ಸಮಯದಲ್ಲಿ ತೆಗೆದ ಛಾಯಾಚಿತ್ರ.

### ಬ್ಯಾಂಕಿನ ಉದ್ದೇಶಗಳು

ವ್ಯಾಪಾರಭಿವೃದ್ಧಿಗೂ ತನ್ಮೂಲಕ ಸಾಧನವೆನಿಸುವ ಜಾತಿಜಾತಿಗಳ ಮತ್ತು ವಿಶಿಷ್ಟ ಜನಾಂಗದ ಅಭ್ಯುದಯಕ್ಕೂ ಧನವೇ ಆಧಾರ. ಈಗಿನ ಪರಿಸ್ಥಿತಿಯಲ್ಲಿ ಧನವನ್ನು ಒಂದು ಕಡೆಗೆ ಆಕರ್ಷಿಸಿ ಉಪಯೋಗವುಳ್ಳ ಕಾರ್ಯಗಳಿಗೆ ದೊರೆಯುವ ಹಾಗೆ ಮಾಡುವದು ಜನಹಿತಕ್ಕೆ ಅವಶ್ಯಕವಾಗಿರುವುದು. ಇಂತಹ ಕಾರ್ಯಗಳಿಗೆ ಬ್ಯಾಂಕುಗಳು ಉಪಯೋಗಕರವಾದವುಗಳು.

ಮೈಸೂರು ಸಂಸ್ಥಾನದ ಎಲ್ಲಾ ಕಡೆಗಳಲ್ಲಿಯೂ ಇಂಡಿಯಾ ದೇಶದ ಬೇರೆ ಬೇರೆ ಸ್ಥಳಗಳಲ್ಲಿಯೂ ಈ ಬ್ಯಾಂಕಿನ ಶಾಖೆಗಳನ್ನು ಕೂಡಿದ ಮಟ್ಟಿಗೂ ಬೇಗನೆ ಸ್ಥಾಪಿಸಿ, ತನ್ಮೂಲಕ ಪ್ರತಿಯೊಬ್ಬರಿಗೂ ಬ್ಯಾಂಕಿನಿಂದ ಅನುಕೂಲತೆಗಳನ್ನು ಒದಗಿಸಿ ಕೊಡಬೇಕೆಂಬ ಆಶೆಯಿದೆ. ಸಮಸ್ತ ಜನರಲ್ಲಿಯೂ ಐಕ್ಯಮತ್ಯವನ್ನುಂಟುಮಾಡಿ, ಅವರ ವ್ಯಾಪಾರ ಸಾಪಾರಗಳನ್ನು ಅಭಿವೃದ್ಧಿಗೊಳಿಸಿ, ಸರ್ವ

ಸಮಾಜದ ನೈತಿಕ, ಮಾನಸಿಕ, ಶಾರೀರಕ ಮತ್ತು ಧಾರ್ಮಿಕ ವಿಚಾರಗಳ ಅಭ್ಯುದಯಕ್ಕಾಗಿ ವಿಶೇಷ ಹಣವನ್ನು ಒದಗಿಸಬೇಕೆಂಬುದೂ ಒಂದು ಉದ್ದಿಶ್ಯ.

ಈ ಬ್ಯಾಂಕಿನ ಮೂಲಧನವು ೧ ಲಕ್ಷ ರೂಪಾಯಿಗಳು, ಈ ೧ಲಕ್ಷ ರೂಪಾಯಿಗಳನ್ನು ಹತ್ತು ರೂಪಾಯಿಗಳ ಹತ್ತು ಸಾವಿರ ಷೇರುಗಳಾಗಿ ವಿಭಾಗಮಾಡಲಾಗಿದೆ. ೧೯೩೫ನೇ ಡಿಸೆಂಬರು ಮಾಹೆ ೮ ನೇ ತಾರೀಖುವರೆಗೆ ಏಳು ಸಾವಿರದ ಏಪ್ರಿಲ್ ೧೯ ರಲ್ಲಿ ಹಂಚಿಕೆ ಮಾಡಲಾಯಿತು. ಈಗ ಬ್ಯಾಂಕಿನ ಒಂದು ಲಕ್ಷ ರೂಪಾಯಿನ ಮೂಲಧನವು ಸಂಪೂರ್ಣವಾಗಿ ಹಂಚಿಕೆಯಾಗಿ ಹೋಗಿದೆ. ಈಗ ಬ್ಯಾಂಕಿಗೆ ಪಾವತಿ ಆಗಿರುವ ಮೂಲಧನವು ... ರೂ.ಗಳು. ಮಹಾಜನರಿಂದ ಷೇರುಗಳಿಗೆ ಬಹಳ ತಗಾದೆ ಇದೆ. ಷೇರಿನ ದರವು ೧೦ ರೂಪಾಯಿ...



Group photo takan on the occasion of the Opening Ceremony of the Branch Office at Kollegal
ಕೊಳ್ಳೇಗಾಲದ ಶಾಖೆಯ ಆರಂಭ ಮಹೋತ್ಸವವನ್ನು ನೆರವೇರಿಸಿದ ಸಮಯದಲ್ಲಿ ತೆಗೆದ ಭಾವಚಿತ್ರ

ಐನೂರು ಷೇರುಗಳು ಹಂಚಿಕೆ ಆಗಿದ್ದವು ಈ ಷೇರುಗಳು ಹಂಚಿಕೆ ಆದನಂತರ ೨೫೦೦ ಷೇರುಗಳು ಮಾತ್ರ ಉಳಿದಿದ್ದವು. ಷೇರುಗಳಿಗೆ ಮಹಾ ಜನರಿಂದ ಬಹಳ ಒತ್ತಾಯ ಉಂಟಾಯಿತು. ಆದುದರಿಂದ ಡೈರೆಕ್ಟರುಗಳು ಉಳಿದಿದ್ದ ೨೫೦೦ ಷೇರುಗಳನ್ನು ೧೯೩೬ ನೇ ಮಾರ್ಚಿ ೧೬ರಲ್ಲಿ ಹಂಚಿಕೆಗೆ ಇಟ್ಟರು. ಈ ಷೇರುಗಳಿಗೆ ಅಧಿಕವಾಗಿ ದರಖಾಸ್ತುಗಳು ಬಂದುವು. ಷೇರುಗಳನ್ನು ೧೯೩೬ ನೇ ೧೨ ರೂಗೆ ಏರಿರುವುದೇ ಇದಕ್ಕೆ ನಿದರ್ಶನವಾಗಿದೆ. ಇನ್ನೂ ಷೇರಿನದರವು ಏರುವ ಸೂಚನೆ ಇದೆ.

### ಡಿಪಾಜಿಟ್ಟುಗಳು

ಕರೆಂಟು, ಫಿಕ್ಸೆಡ್, ವಗೈರೆ ಒಂದು ಲಕ್ಷ ... ವರೆವಿಗೂ ಬಂದಿರುತ್ತೆ. ಡಿಪಾಜಿಟ್ಟು ಬಡ್ಡಿಯ ದರವು ... ಶೇಕಡ ಅರ್ಧ ರೂಪಾಯಿ ಈ ವರ್ಷದಲ್ಲಿ ಕಡಿಮೆ ...

...ಗ್ಯ ಡಿಪಾಜಿಟ್ ಅಧಿಕವಾಗಿ ಬರುತ್ತಿದೆ. ಡಿಪಾಜಿಟ್ ...ಯ ದರವನ್ನು ಇನ್ನೂ ಕಡಿಮೆ ಮಾಡಲು ಡೈರೆಕ್ಟರು ... ಯೋಚಿಸುತ್ತಿದ್ದಾರೆ.

ಈ ಬ್ಯಾಂಕು ಸ್ಥಾಪಿತವಾದ ಮೊದಲನೇ ವರ್ಷವೇ ...ಕಡ ೪ ರಂತೆಯೂ ಎರಡನೇ ವರ್ಷ ೫ ರಂತೆಯೂ ಷೇರು ...ರರಿಗೆ ಡಿವಿಡೆಂಡ್ ಕೊಡಲಾಯಿತು.

## ಬ್ಯಾಂಕಿನ ಶಾಖೆಗಳು

ಮಲ್ಲೇಶ್ವರಂ, ಶೇಷಾದ್ರಿಪುರ ಮತ್ತು ಇವುಗಳ ...ಪಕ್ಕದಲ್ಲಿರುವ ಜನರ ಅನುಕೂಲಕ್ಕಾಗಿ ೧೯೩೪ ನೇ ...ನೆ ಏಪ್ರಿಲ್ ಮಾಹೆ ೧೪ ರಲ್ಲಿ ಈ ಬ್ಯಾಂಕಿನ ಶಾಖೆ ...ಯನ್ನು ಸ್ಥಾಪಿಸುವ ಅವಶ್ಯಕತೆಯುಂಟಾಯಿತು. ೧೯೩೫ ...ನೇ ಏಪ್ರಿಲ್ ಮಾಹೆ ೨೧ ರಲ್ಲಿ ಮೈಸೂರು ನಗರದಲ್ಲಿ ಅಲ್ಲಿನ ...ಮತ್ತು ಅದರ ಸುತ್ತುಮುತ್ತಲಿನ ಜನರ ಅನುಕೂಲಕ್ಕಾಗಿ ...ಬ್ಬು ಶಾಖೆಯನ್ನು ತೆರೆಯಲಾಯಿತು. ೧೯೩೬ ನೇ ...ಏಪ್ರಿಲ್ ಒಂದನೇ ತಾರೀಖಿನಲ್ಲಿ ಮದರಾಸಿನಲ್ಲಿಯೂ ...ಶಾಖೆಯನ್ನು ತೆರೆಯಬೇಕಾಯಿತು. ಮದರಾಸಿನವರಿಗೂ ಮತ್ತು ಮೈಸೂರಿನವರಿಗೂ ವ್ಯಾಪಾರ ಸಂಬಂಧವನ್ನು ...ಕಟ್ಟಾಗಿ ಕಲ್ಪಿಸಿಕೊಡಬೇಕಾದುದೇ ಈ ಶಾಖೆಯನ್ನು ...ತೆರೆಯಬೇಕಾದ ಮುಖ್ಯ ಉದ್ದೇಶ. ಈ ಶಾಖೆಯ ಪ್ರಾರಂಭೋತ್ಸವವನ್ನು ರಾವ್‌ಸಾಹೇಬ್ ಡಾ|| ಯು. ರಾಮರಾಯರವರು ನೆರವೇರಿಸಿದರು. ೧೯೩೬ ನೇ ಮೇ ೨೨ ರಲ್ಲಿ ಈ ಬ್ಯಾಂಕಿನ ನಾಲ್ಕನೇ ಬ್ರಾಂಚನ್ನು ಮದರಾಸ್ ಆಧಿಪತ್ಯಕ್ಕೆ ಸೇರಿದ ಕೊಳ್ಳೇಗಾಲದಲ್ಲಿ ತೆರೆಯಲಾಯಿತು. ಇದರ ಪ್ರಾರಂಭೋತ್ಸವವು ಪಂಚಾಯಿತಿ ಯೂನಿಯನ್ ಬೋರ್ಡಿನ ಪ್ರೆಸಿಡೆಂಟರೂ ಮತ್ತು ಡಿಸ್ಟ್ರಿಕ್ಟ್‌ಬೋರ್ಡ್ ಮೆಂಬರೂ ಆದ ಶ್ರೀ|| ಸಿ.ಕೆ. ನಾಗಯ್ಯನವರಿಂದ ನೆರವೇರಿಸಲ್ಪಟ್ಟಿತು.

ಡೈರೆಕ್ಟರುಗಳು ಮುಖ್ಯವಾದ ವ್ಯಾಪಾರ ಸ್ಥಳಗಳಲ್ಲಿ ಇನ್ನೂ ಶಾಖೆಗಳನ್ನು ತೆರೆಯುವ ಯೋಚನೆಯಲ್ಲಿದ್ದಾರೆ. ಈ ಬ್ಯಾಂಕು ಮಹಾಜನರ ಅಧಿಕವಾದ ವಿಶ್ವಾಸವನ್ನು ಸಂಪಾದಿಸಿ ತನ್ನ ಸೇವೆಯನ್ನು ಮಾಡುತ್ತಿದೆ.

ಈ ಬ್ಯಾಂಕಿನ ಡೈರೆಕ್ಟರುಗಳ ಬೋರ್ಡಿನ ಅಧ್ಯಕ್ಷರು ವಿಶ್ವಕರ್ಣಾಟಕದ ಸಂಪಾದಕರಾದ ಶ್ರೀ|| ತಿರುಮಲೆ ತಾತಾಚಾರ್ಯ ಶರ್ಮಾರವರು, ಮೈಸೂರು ಪ್ರಜಾಪ್ರತಿನಿಧಿ ಸಭೆ ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಮೆಂಬರು ಆದ ಶ್ರೀ|| ಬಿ. ಸಿ ರಂಗಪ್ಪನವರು ಸೆಕ್ರೆಟರಿಯವರಾಗಿರುತ್ತಾರೆ.

ದಕ್ಷರಾದ ಡೈರೆಕ್ಟರುಗಳ ಆಡಳಿತ ನೇತೃತ್ವದಲ್ಲಿ ಬ್ಯಾಂಕು ಬರುವ ವರ್ಷಗಳಲ್ಲಿ ಹೆಚ್ಚು ಹೆಚ್ಚು ಅಭಿವೃದ್ಧಿ ಹೊಂದುವುದೆಂಬ ನಂಬಿಕೆ ನಮಗಿದೆ.

ಬ್ಯಾಂಕಿಗೆ ನಾವು ವಿಜಯವನ್ನು ಕೋರುವೆವು

# ದಿ ಕ್ಯಾಲಿಕಟ್ ಬ್ಯಾಂಕ್, ಲಿಮಿಟೆಡ್

## The Calicut Bank, Limited.

ದಿ ಕ್ಯಾಲಿಕಟ್ ಬ್ಯಾಂಕ್ ಲಿಮಿಟೆಡ್ ಸಂಸ್ಥೆಯು ...ನೇ ಇಸವಿಯಲ್ಲಿ ಸ್ಥಾಪಿತವಾಯಿತು. ಶ್ರೀ ಕೃಷ್ಣ ... ಎ, ಬಿ. ಎಲ್, ಎಂ. ಎಲ್. ಸಿ. (ಮದ್ರಾಸ್) Mr. C. Krishnan B. A., B. L., M. L. C.,) ...ವರು ಈ ಸಂಸ್ಥೆಯ ಸ್ಥಾಪಕರು, ಉದಯವಾದಂದಿ...ದ ಇಂದಿನವರೆಗೂ ಅವರೇ ಸಂಸ್ಥೆಯ ಅಧ್ಯಕ್ಷರಾಗಿ ...ರ್ಯ ನಿರ್ವಹಿಸುತ್ತಿದ್ದಾರೆ. ಮಲಬಾರ್ ಮತ್ತು ಕೊಚ್ಚಿ ...ಪ್ರದೇಶಗಳ ಎಲ್ಲೆಡೆಯಲ್ಲೂ, ಮದ್ರಾಸ್, ಕೊಲಂಬೋ, ...ಟಕಮಂಡಲ, ಬೆಂಗಳೂರು ಮತ್ತು ಮಧುರಾ ಮೊದ...ಲಾದ ಪಟ್ಟಣಗಳಲ್ಲಿ ಇದರ ಶಾಖೆಗಳಿವೆ.

ಬ್ಯಾಂಕಿನ ಕಾರ್ಯನಿರ್ವಹಣ ಬಂಡವಾಳವು ೩೩ ಲಕ್ಷ ರೂ. ಗಳಿರುತ್ತದೆ. ಬ್ಯಾಂಕು ಡಿಪಾಜಿಟ್ ಮೊತ್ತದ ಶೇಕಡ ೯ ಭಾಗವನ್ನು ಬಂಡವಾಳಕ್ಕಾಗಿ ವಿನಿಮಯಿಸಿದೆ. ...ನ್ನದಮೇಲೆ ವಿನಿಮಯಿಸಿರುವುದು ಶೇಕಡ ೪೩ ರಷ್ಟು, ...ವಾಗಿಯೂ ಮತ್ತು ಸರಕಾರದ ಸೆಕ್ಯೂರಿಟಿಗಳಲ್ಲಿಯೂ ...ನಿಮಯಿಸಿರುವುದು ಶೇಕಡ ೨೯ ರಷ್ಟು, ಪೂರ್ಣ ಆಧಾರ ...ವ ಸಾಲಗಳಿಗೆ ವಿನಿಮಯಿಸಿರುವುದು ಶೇಕಡ ೨೭ರಷ್ಟು.

ಬ್ಯಾಂಕಿನ ರಿಜರ್ವ್ ನಿಧಿಯು ಷೇರು ಬಂಡವಾಳದ ಶೇಕಡ ೫೪ ರಷ್ಟಕ್ಕೆ ಹೆಚ್ಚಿದೆ. ಬ್ಯಾಂಕು ಯಾವ ವರ್ಷ ...ಲ್ಲಿ ಶೇಕಡ ೯ಕ್ಕೆ ಕಡಮೆಯಿಲ್ಲದಂತೆ ಡಿವಿಡೆಂಡು ...ಕೊಟ್ಟಿರುವುದು ಪ್ರಶಂಸನೀಯವಾದುದು. ಇದು ಬ್ಯಾಂಕಿನ ...ಏಕ ಪ್ರಕಾರವಾದ ಪ್ರಗತಿಗೆ ಸಾಕ್ಷಿಯಾಗಿದೆ, ಬ್ಯಾಂಕು ಆರ್ಥಿಕ ಭದ್ರತೆಯನ್ನು ಸುರಕ್ಷಿತಗೊಳಿಸುತ್ತ ಕೀರ್ತಿಯನ್ನು ...ಳೆಸುತ್ತ ಮುಂದೆ ಸಾಗುತ್ತಿದೆ.

ಡೈರೆಕ್ಟರುಗಳ ಮಂಡಲಿಯಲ್ಲಿರುವ ಹೆಸರುಗಳನ್ನು ...ವಲೋಕಿಸಿದವರಿಗೆ ಸಂಸ್ಥೆಯಲ್ಲಿ ನಂಬಿಕೆ ಹುಟ್ಟದೆ ...ರದು.

೧೯೩೫ನೇ ಡಿಸೆಂಬರ್ ೩೧ನೇ ತಾರೀಖಿಗೆ ಮುಕ್ತಾ...ಯವಾಗುವ ವರ್ಷದಲ್ಲಿ ೧೦,೯೭೪-೪-೧೧ ರೂ. ಗಳ ವಸೂ...ಲಾಗದ ಸಾಲ ಮೊಬಲಗನ್ನು ಕಳೆದಮೇಲೆ ಉಳಿಯುವ ...ವ್ವಳ ಆದಾಯವು ೨೭,೦೮೮-೪-೬ ರೂ. ಗಳು. ಅದರ ಜೊತೆಗೆ ಕಳೆದವರ್ಷದ ಶಿಲ್ಕನ್ನು ಸೇರಿಸಿದರೆ ೨೫,೧೬೬-೬-೮ ರೂ. ಗಳಾಗುತ್ತದೆ.

ಈ ಸಾಲಿನಲ್ಲಿ ಕಂಪೆನಿಯ ರಿಸರ್ವ್ ನಿಧಿಯು ೧,೩೮,೧೯೯-೧೨-೨ ರೂ. ಗಳಷ್ಟಿದೆ.

ಇಂದು ಬ್ಯಾಂಕಿನ ಒಟ್ಟು ಆಸ್ತಿಯು ೩೨,೯೩,೭೦೧-೧೫-೧೦ ರೂ. ಗಳಷ್ಟಿದೆ. ಇದರ ವಿವರವು ಈ ರೀತಿ ಇದೆ.

| | |
|---|---|
| ಸಾಲ ಕೊಟ್ಟಿರುವುದು ಮತ್ತು ಕೊಂಡಿರುವ ಹುಂಡಿಗಳು | ೨೩,೨೯,೬೧೦-೩-೯ |
| ಚೀಟಿ ಹರಾಜು ಚಂದಾದಾರರಿಂದ ಸಲ್ಲಬೇಕಾದುದು | ೬೯,೯೮೭-೧೫-೧ |
| ಬಡ್ಡಿ ಮುಂತಾದ ಆದಾಯ | ೧,೫೨,೪೦-೧-೧ |
| ಕಬ್ಬಿಣದ ಪೆಟ್ಟಿಗೆ ಮತ್ತು ಸಾಮಾನು | ೨೬,೩೦೭-೯-೨ |
| ಜಮೀನು ಮತ್ತು ಕಟ್ಟಡ | ೪೮,೨೭೧-೦-೪ |
| ಬಂಡವಾಳಕ್ಕಾಗಿ ವಿನಿಮಯಿಸಿರುವುದು (ಸರಕಾರದ ಸೆಕ್ಯೂರಿಟಿಗಳು) | ೫,೩೪,೨೩೯-೭-೫ |
| ನಗದು ಕೈಯ್ಯಲ್ಲಿ ಮತ್ತು ಬ್ಯಾಂಕುಗಳಲ್ಲಿ ಇರುವುದು | ೧,೩೨,೮೭೯-೧೧-೫ |
| ಒಟ್ಟು ರೂ. | ೩೨,೯೩,೭೦೧-೧೫-೧೦ |

ಮೇಲ್ಕಂಡ ಅಂಕಿ ಅಂಶಗಳು ಬ್ಯಾಂಕಿನ ಆರ್ಥಿಕ ಭದ್ರತೆಯನ್ನೂ ಅದು ಪ್ರಗತಿ ಮಾರ್ಗದಲ್ಲಿಯೇ ಮುಂದುವರಿಯುತ್ತಿರುವುದೆಂಬುದನ್ನು ವ್ಯಕ್ತಗೊಳಿಸುತ್ತದೆ. ಇದರ ಏಕಪ್ರಕಾರವಾದ ಪ್ರಗತಿಯು ಆದಿಯಿಂದಲೂ ಬ್ಯಾಂಕಿಗೆ ಶ್ರದ್ಧಾಯುತ ಸೇವೆ ಸಲ್ಲಿಸುತ್ತಿರುವ ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರಾದ ಶ್ರೀ ಸಿ. ಕೃಷ್ಣರವರ ಶ್ರಮದ ಫಲವೇ ಆಗಿದೆ. ಇವರ ದಕ್ಷ ಆಡಳಿತದಲ್ಲಿ ಬ್ಯಾಂಕು ಇನ್ನು ಮುಂದೆಯೂ ಉತ್ತಮ ಫಲವನ್ನೇ ಸಾಧಿಸಿ ತನ್ನ ಕೀರ್ತಿಯನ್ನು ಹೆಚ್ಚಿಸಿಕೊಳ್ಳುವುದೆಂಬ ನಂಬಿಕೆಯು ನಮಗಿದೆ.

ಬರುವ ವರುಷಗಳು ಬ್ಯಾಂಕಿಗೆ ಸಿರಿಸುಗ್ಗಿ ತರಲೆಂದು ಹಾರೈಸುತ್ತೇವೆ




# 5%

# CASH CERTIFICATES.

Three Years Cash Certificates are Issued by the Head Office and Branches of **THE QUILON BANK LIMITED** subject to the terms and conditions below:-




1. If the depositor allows the amount to remain with the bank till due date, he will be earning compound interest at 5 per cent per annum with half-yearly rests, and will receive as per particulars given below:-

| | | | | | | | |
|---|---|---|---|---|---|---|---|
| Rs. 50 | for every | Rs. | 43 | 2 | 6 | deposited by him |
| Rs. 100 | Do | ,, | 86 | 5 | 0 | Do |
| Rs. 500 | Do | ,, | 431 | 9 | 0 | Do |
| Rs. 1000 | Do | ,, | 863 | 2 | 0 | Do |

2. If the depositor wants an early payment of this receipt that is before the expiry of three years he will be entitled to receive the amount with interest on the same deposited by him on the following scale provided always the bank has the right to decline any such payment before the maturity of the deposit without assigning any reasons therefor.

| AMOUNT DEPOSITED | AMOUNT OF PRINCIPAL AND INTEREST REPAYABLE IF WITHDRAWN AFTER | | | | | |
|---|---|---|---|---|---|---|
| | 6 MONTHS | 12 MONTHS | 18 MONTHS | 24 MONTHS | 30 MONTHS | 36 MONTHS |
| 43 2 6 | 43 12 10 | 44 10 10 | 45 11 1 | 46 11 5 | 47 12 0 | 50 |
| 86 5 0 | 87 9 9 | 89 5 9 | 91 6 3 | 93 6 10 | 95 8 0 | 100 |
| 431 9 0 | 438 0 9 | 446 12 9 | 456 15 3 | 467 2 2 | 477 8 0 | 500 |
| 863 2 0 | 876 1 6 | 893 9 6 | 913 14 6 | 934 4 4 | 955 0 0 | 1000 |

3. This deposit is not transferable by endorsement.

4. Certificates will, when so required be issued in the names of two or more persons and will be made payable to any one or more of them or the survivors.

5. Interest on this deposit will cease at the expiry of three years from the date of this certificate.

6 Payment on the due date or earlier (as the case may be) will be made at the office of issue to the depositer on presentation of the receipt duly discharged to any person on behalf of the depositor if the discharged receipt is accompanied by proper letter or authority.

For further information, write to or call at any of the 30 offices of

**THE QUILON BANK LTD., H. O. QUILON.**

# ಕ್ವಿಲಾನ್ ಬ್ಯಾಂಕ್ ಲಿಮಿಟೆಡ್
## The Quilon Bank, Ltd.

---

ದೇಶದ ಉದ್ಯೋಗ, ವ್ಯಾಪಾರ, ವ್ಯವಸಾಯಗಳ ಬಹುಮುಖವಾದ ಅಭಿವೃದ್ಧಿಗೆ ಕುಸೀದಾಲಯ (Bank) ಗಳು ಎಷ್ಟು ಅವಶ್ಯಕವಾದುವೆಂಬುದನ್ನು ನಾವು ಹೊಸದಾಗಿ ಹೇಳಬೇಕಾಗಿಲ್ಲ. ಮನುಷ್ಯನ ಜೀವನಕ್ಕೆ ಗಾಳಿ, ಬೆಳಕು, ನೀರು, ಆಹಾರಗಳು, ಎಷ್ಟು ಅವಶ್ಯಕವೋ ಹಾಗೆಯೇ ಈ ಆಧುನಿಕಯುಗದಲ್ಲಿ ವೈಯುಕ್ತಿಕ, ರಾಷ್ಟ್ರೀಯ ಅಂತರ ರಾಷ್ಟ್ರೀಯ ವ್ಯಾಪಾರಗಳ ತೊಡಕುಗಳನ್ನು ಬಿಡಿಸಿ, ಹಣದ ಚಲಾವಣೆಯನ್ನೂ ಆರ್ಥಿಕ ಜೀವನವನ್ನೂ ಸುಸೂತ್ರವಾಗಿ ನಡೆಸಲು ಬ್ಯಾಂಕುಗಳು ಅತ್ಯವಶ್ಯಕವಾಗಿವೆ.

ರೆಂದೆನಿಸಿಕೊಂಡವರ ಯೋಗ್ಯತೆ, ಗುಣ ಇವುಗಳಿಗೆ ಸಂಬಂಧಿಸಿದುದು. ಬ್ಯಾಂಕುಗಳ ಕಾರ್ಯನಿರ್ವಹಣೆಯ ಸಂಬಂಧದಲ್ಲಿ ಅನೇಕರು ಭಯಪಟ್ಟ ಮತ್ತು ಈಗಲೂ ಭಯಪಡುವ ಹಲವು ಸಂದರ್ಭಗಳನ್ನು ನಾವು ಕಂಡಿದ್ದೇವೆ. ಇದಕ್ಕೆ ಕಾರಣವಿಷ್ಟೇ — ಬ್ಯಾಂಕುಗಳೆಂಬ ಹೆಸರಿನಲ್ಲಿ ಜನ್ಮವೆತ್ತಿದ ಅನೇಕ ಸಂಸ್ಥೆಗಳು ಹುಟ್ಟಿದ ತಿಂಗಳು ಅಥವಾ ವರುಷದಲ್ಲಿಯೇ ಮುಚ್ಚಿಹೋಗಿ, ಹೆಚ್ಚು ಕಡಿಮೆ ಏಕಕಾಲದಲ್ಲಿಯೇ ಜನನ-ಚರಮೋತ್ಸವಗಳೆರಡನ್ನು ಜರುಗಿಸಿರುವ ಉದಾಹರಣೆಗಳು ಸರಿಯಾದ ಮಾರ್ಗದಲ್ಲಿ ಮುಂದುವರಿಯುತ್ತಿರುವ ಸಂಸ್ಥೆಗಳ ಅಭಿವೃದ್ಧಿಗೂ ಅಡ್ಡಿ



Mr. C. P. MATTHEN, B.A., B.L.,

**ಶ್ರೀ|| ಸಿ. ಪಿ. ಮ್ಯಾಥ್ಯೂ, ಬಿ.ಎ., ಬಿ.ಎಲ್., ಅವರು**

ಆದರೆ, ಹಲವು ಕಡೆ ಇಂಥಹ ಉಪಯುಕ್ತ ಸಂಸ್ಥೆಗಳ ಜನನಕ್ಕೆ ಅಯೋಗ್ಯರೂ, ಅಪ್ರಮಾಣಿಕರೂ, ಅನನುಭವಿಗಳೂ ಕಾರಣವಾಗಿ ಆ ಸಂಸ್ಥೆಗಳಿಗೇ ಸಲ್ಲದ ಕೆಟ್ಟ ಹೆಸರನ್ನು ತಂದಿರುವರು. ಇಂತಹ ಕೆಟ್ಟ ಹೆಸರು ಆ ಸಂಸ್ಥೆಗಳಿಗೆ ಸೇರಿದುದಲ್ಲ; ಆಯಾ ಸಂಸ್ಥೆಗಳ ಚಾಲಕ

ಯಾಗಿ ನಿಂತಿವೆ. ಇಂತಹ ಉದಾಹರಣೆಗಳು ಬ್ಯಾಂಕುಗಳ ವಿಷಯದಲ್ಲಿ ಜನತೆಯಲ್ಲಿ ದುರಭಿಪ್ರಾಯವನ್ನು ಹೇಗೆ ಹುಟ್ಟಿಸುವುವೋ ಹಾಗೆಯೇ ಅಭಿವೃದ್ಧಿಗೆ ಬಂದ ಬ್ಯಾಂಕುಗಳ ಉದಾಹರಣೆಗಳು ಅವರಲ್ಲಿ ಸದಭಿಪ್ರಾಯಗಳನ್ನು ಮೂಡಿಸಲೂ ಸಹಕಾರಿಗಳಾಗುವುವೆಂಬುದರಲ್ಲಿ ಸಂಶಯವಿಲ್ಲ.

ಹೀಗೆ, ದಕ್ಷತೆಯಿಂದ ನಿರ್ವಹಿಸಲ್ಪಟ್ಟು, ತಾವೂ ಅಭಿವೃದ್ಧಿಯಾಗಿ, ನಮ್ಮ ಜನತೆಯಲ್ಲಿಯೂ ಒಂದು ಬಗೆಯ ಆಶೆ, ಧೈರ್ಯ ಸದಭಿಮಾನಗಳನ್ನು ಹುಟ್ಟಿಸಲು ಸಹಕಾರಿಯಾದ ಕೆಲವೇ ಕೆಲವು ಬ್ಯಾಂಕುಗಳಲ್ಲಿ, ತಿರುವಾಂಕೂರಿನ ಸಂಸ್ಥಾನದ ಕ್ವಿಲಾನ್ ನಗರದಲ್ಲಿ ಈಗ ಸುಮಾರು ೧೬ ವರುಷಗಳ ಹಿಂದೆ ಸ್ಥಾಪಿತವಾದ ಕ್ವಿಲಾನ್ ಬ್ಯಾಂಕೂ (Quilon Bank) ಒಂದಾಗಿದೆ.

ಈ ೧೬ ವರುಷಗಳಲ್ಲಿ ಈ ಬ್ಯಾಂಕಿನ ವ್ಯಾಪಾರವು ಇಂಡಿಯಾ, ಬರ್ಮಾ, ಸಿಲೋನ್ ದೇಶಗಳಲ್ಲೆಲ್ಲಾ ವ್ಯಾಪಿಸಿ, ಸುಮಾರು ೩೦ ಶಾಖೆಗಳನ್ನು ಒಳಗೊಂಡು, ದೇಶದ ಒಳಾಗ್ರ ವ್ಯಾಪಾರಕ್ಕೆ ಬಹಳ ಸಹಾಯ ಮಾಡುತ್ತಿದೆ. ಈ ಶಾಖೆಗಳ ಪೈಕಿ ಮೂರು ನಮ್ಮ ಮೈಸೂರು ದೇಶದಲ್ಲಿ, ಬೆಂಗಳೂರು ನಗರದಲ್ಲಿಯೂ, ಬೆಂಗಳೂರು ದಂಡಿನಲ್ಲಿಯೂ, ಮೈಸೂರು ನಗರದಲ್ಲಿಯೂ ಸ್ಥಾಪಿತವಾಗಿವೆ. ಈ ಬ್ಯಾಂಕಿನ ಸರ್ವತೋಮುಖವಾದ ಅಭಿವೃದ್ಧಿಗೆ ಕರ್ತೃವಾದ ಏಕಮಾತ್ರವ್ಯಕ್ತಿಯೆಂದರೆ, ಬ್ಯಾಂಕಿನ ಮ್ಯಾನೇಜಿಂಗ್ ಡೈರಕ್ಟರಾದ ಶ್ರೀ ಸಿ. ಪಿ. ಮ್ಯಾಥನ್ ಬಿ. ಎ., ಬಿ. ಎಲ್., ರವರು (Mr. C. P. Matthen B. A., B. L.,) ಅವರ ದೂರದೃಷ್ಟಿ, ವ್ಯವಹಾರ ಕುಶಲತೆ, ಕಾರ್ಯ ನಿರ್ವಾಹಕಶಕ್ತಿ ಇವುಗಳಿಂದಲೇ ಈ ಬ್ಯಾಂಕು ಇಷ್ಟೊಂದು ಅಭಿವೃದ್ಧಿಗೆ ಬರಲು ಕಾರಣವಾಯಿತು.

೧೯೩೩ನೇ ಡಿಸೆಂಬರ್ ೩೧ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದಲ್ಲಿ ಸಾಧಿಸಿರುವ ಪ್ರಗತಿಯನ್ನು ಇಲ್ಲಿ ವಿವರಿಸಲಾಗಿದೆ. ಈ ವರ್ಷದಲ್ಲಿ ಬ್ಯಾಂಕು ೮೧,೧೩೫-೧೧ ರೂ.ಗಳ ಲಾಭಪಡೆದಿದೆ. ಕಳೆದ ವರ್ಷ ೭೦,೯೯೩-೨.೩ ರೂ.ಗಳು ಲಾಭ ಬಂದಿತು. ವಸೂಲಾಗದುಳಿದ ಸಾಲವನ್ನೂ, ಡಿವಿಡೆಂಡನ್ನೂ ಕಳೆದಮೇಲೆ ಮುಂದಿನ ವರ್ಷಕ್ಕೆ ೮,೬೧೭-೩-೫ ರೂ.ಗಳ ಶಿಲ್ಕು ಇಟ್ಟಿರುತ್ತಾರೆ.

ಈ ರೀತಿ ಕಂಪೆನಿಯ ಲಾಭವೂ ವರ್ಷೇ ವರ್ಷೇ ಹೆಚ್ಚುತ್ತಲಿದೆ. ಈ ವರ್ಷದಲ್ಲಿ ಬ್ಯಾಂಕು ತನ್ನ ಬಂಡವಾಳವನ್ನು ೫ ಲಕ್ಷದಿಂದ ೧೫ ಲಕ್ಷಕ್ಕೆ ಹೆಚ್ಚಿಸಿತು. ಈ ಹೊಸದಾಗಿ ಹೊರಹಾಕಿದ ಬಂಡವಾಳವೆಲ್ಲವೂ ಅಲ್ಪಕಾಲದಲ್ಲಿಯೇ ಪೂರ್ಣವಾಗಿ ಚಂದಾ ಆಗಿರುವ ಬ್ಯಾಂಕಿನಲ್ಲಿ ಸಾರ್ವಜನಿಕರಿಗಿರುವ ನಂಬಿಕೆಯನ್ನೂ ಆದರವನ್ನೂ ವ್ಯಕ್ತಗೊಳಿಸುತ್ತದೆ. ಹೀಗೆ ಬಂಡವಾಳ ಹೆಚ್ಚಿದುದು ಕಂಪನಿಯ ಆರ್ಥಿಕಭದ್ರತೆಯು ಮತ್ತೂ ಬಲಗೊಂಡಿತೆನ್ನಬಹುದು.

ಇಂದು ಬ್ಯಾಂಕಿನ ಷೇರುಗಳ ಬೆಲೆಯು ಕಳೆದ ವರ್ಷಕ್ಕಿಂತ ಹೆಚ್ಚಿದೆ. ಇದರ ಷೇರುಗಳನ್ನು ಕೊಳ್ಳಲು ಸಾರ್ವಜನಿಕರು ತೋರಿಸುತ್ತಿರುವ ಉತ್ಸಾಹವು ಶುಭ ಚಿಹ್ನೆ. ಈ ವರ್ಷದಲ್ಲಿ ಡಿಪಾಜಿಟ್‌ಗಳು ಕಳೆದವರ್ಷಕ್ಕಿಂತ ೧೯ ಲಕ್ಷದಷ್ಟು ಹೆಚ್ಚಿದೆ. ಮತ್ತು ಇಂದು ಬ್ಯಾಂಕಿನ ವ್ಯವಹಾರ ಬಂಡವಾಳವು ಒಂದುಕೋಟಿ ರೂಪಾಯಿಗಳಿಗೆ ಹೆಚ್ಚಾಗಿದೆ.

ಕಂಪೆನಿಯು ಬಂಡವಾಳ ಒದಗಿಸಿರುವ ಕೃಷಿ ಕೈಗಾರಿಕೋದ್ಯಮಗಳು ಅಭಿವೃದ್ಧಿಗೊಳ್ಳುತ್ತಲಿರುವುದರಿಂದ ಬ್ಯಾಂಕುವಿನಿಮಯಿಸಿರುವ ಹಣವು ಸುರಕ್ಷಿತವಾಗಿಯೂ ಲಾಭದಾಯಕವಾಗಿಯೂ ಇದೆ.

ಸರಕಾರದ ಸೆಕ್ಯೂರಿಗಳ ಬೆಲೆಯು ವಿಶೇಷ ಹೆಚ್ಚಿರುವುದು ಬ್ಯಾಂಕಿಗೆ ಹೆಚ್ಚು ಲಾಭತರುತ್ತಿದೆ. ಸಾಲಿನಲ್ಲಿ ಮುಂಗಡವಾಗಿಯೂ ಹೆಚ್ಚಾಗಿಯೂ ಕೊಟ್ಟಿರುವ ಹಣವು ಕಳೆದ ವರ್ಷಕ್ಕಿಂತ ಅನುಕ್ರಮವಾಗಿ ೧,೬೮,೦೦೦ ಮತ್ತು ೮೨,೦೦೦ ರೂ.ಗಳಷ್ಟು ಹೆಚ್ಚಿದೆ. ಬ್ಯಾಂಕು ಪಡೆದಿರುವ ಸರಕಾರದ ಮತ್ತು ಇತರ ಪ್ರಥಮ ಶ್ರೇಣಿಯ ಸೆಕ್ಯೂರಿಟಿಗಳು ೬,೨೦,೭೦೭-೧೧-೧೧ ರೂ.ಗಳಿಂದ ೧೦,೧೮,೧೩೬-೭-೦ ರೂ.ಗಳಿಗೆ ಹೆಚ್ಚಿದೆ.

ಬ್ಯಾಂಕು ಸಾಲಗಳಿಗೆ ಕೊಟ್ಟಿರುವ ೬೯ ಲಕ್ಷ ರೂ.ಗಳಲ್ಲಿ ಶೇಕಡ ೫೦.೧ ರಷ್ಟಕ್ಕೆ ಪೂರ್ಣಭದ್ರತೆಯಿದೆ ಮತ್ತು ಶೇಕಡ ೪೪.೧ ರಷ್ಟಕ್ಕೆ ಒಡವೆ ಮತ್ತು ಚಿನ್ನದ ಆಧಾರಗಳಿವೆ.

ಕೈಯ್ಯಲ್ಲಿರುವ ನಗದು ಹಣವೂ ಬ್ಯಾಂಕುಗಳಲ್ಲಿರುವುದೂ ಬಾಂಡುಗಳ ಬೆಲೆಯೂ ಸೇರಿದರೆ ಅದು ಡಿಪಾಜಿಟ್ಟುಗಳ ಶೇಕಡ ೯೫.೯ ರಷ್ಟು ಇರುವುದು.

ಈ ವರ್ಷದಲ್ಲಿ ಬ್ಯಾಂಕು ಹಲವು ಮಾರ್ಗಗಳಲ್ಲಿ ಅಪ್ರತಿಮ ಪ್ರಗತಿಸಾಧಿಸಿದೆ. ಬ್ಯಾಂಕು ಅತ್ಯಾಧುನಿಕ ಹಲವು ಬ್ಯಾಂಕಿಂಗ್ ವ್ಯವಹಾರಗಳನ್ನು ಹೊಸದಾಗಿ ಆನು

ಸಂಸಿತು. ಬ್ಯಾಂಕಿಗೆ ಈ ವರ್ಷ ಇಂಡಿಯದ ರಿಜರ್ವ್ ಬ್ಯಾಂಕಿನ ಸದಸ್ಯತ್ವದ ಗೌರವವು ದೊರೆಯಿತು.

ಈ ವರ್ಷದಲ್ಲಿ ಈ ಕೆಳಗೆ ಕಾಣಿಸಿರುವ ಕಡೆ ಬ್ಯಾಂಕು ೫ ಹೊಸ ಶಾಖೆಗಳನ್ನು ಸ್ಥಾಪಿಸಿದೆ. (೧) ಈರೋಡ್, (೨) ಸಿಕಂದರಾಬಾದ್, (೩) ಜಾಫ್ನಾ, (೪) ಕೂನೂರು (೫) ಮಧುರಾ.

ಇಂದು ಬ್ಯಾಂಕಿನ ಆಸ್ತಿಯ ಬೆಲೆಯು ೧೨,೪೬,೧೩೪-೦-೭ ರೂ. ಗಳಿದೆ. ಬ್ಯಾಂಕು ೧,೩೦,೦೦೦ ರೂ. ಗಳ ರಿಜರ್ವ್ ನಿಧಿಯನ್ನು ಏರ್ಪಡಿಸಿದೆ.

ಒಟ್ಟಾರೆಯಾಗಿ ಬ್ಯಾಂಕಿನ ವರದಿಯನ್ನೂ, ಲೆಖ್ಖಾಚಾರ ಪತ್ರವನ್ನೂ ಪರಿಶೀಲಿಸಿದರೆ ಇದು ಪ್ರಾರಂಭವಾದಾಗನಿಂದಲೂ ಎಷ್ಟು ವಿಚಕ್ಷಣೆಯಿಂದಲೂ, ವ್ಯವಸ್ಥೆಯಿಂದಲೂ ಮುಂದೆ ಸಾಗದೆಯೆಂಬುದು ಗೋಚರವಾಗುತ್ತದೆ. ಮುಖ್ಯವಾಗಿ ಬ್ಯಾಂಕಿನ ವ್ಯವಹಾರ ಆಡಳಿತಗಳು ಪ್ರಗತಿಕರವಾಗಿಯೂ ಸಮರ್ಪಕವಾಗಿಯೂ ಇವೆ ಇಂತಹ ಅಭಿವೃದ್ಧಿಯನ್ನು ಪಡೆದಿರುವ ಈ ಭಾರತೀಯ ಕುಸೀದಾಲಯವು ಇನ್ನೂ ಕರ್ಣಾಟಕದ ಎಲ್ಲ ಮುಖ್ಯ ಸ್ಥಳಗಳಲ್ಲಿಯೂ ತನ್ನ ಶಾಖೋಪಶಾಖೆಗಳನ್ನು ಹರಡಿ, ಕರ್ಣಾಟಕ ಜನಪದದ ವ್ಯಾಪಾರ, ಕೈಗಾರಿಕೆ, ವ್ಯವಸಾಯವನ್ನು ಬೆಳೆಸಲು ನೆರವಾಗಲೆಂದು ಹಾರೈಸುತ್ತೇವೆ.



# ನ್ಯಾಷನಲ್ ಇನ್ಷ್ಯೂರೆನ್ಸ್ ಕಂಪೆನಿ ಲಿಮಿಟೆಡ್.

## The National Insurance Company, Limited.

---

ಬಂಗಾಳಾದ ಅತಿ ಪುರಾತನ ಕಂಪೆನಿಗಳಲ್ಲಿ ಒಂದಾದ ನ್ಯಾಷನಲ್ ಇನ್ಷ್ಯೂರೆನ್ಸ್ ಕಂಪೆನಿಯು ಇಂದು ಇಂಡಿಯದ ಅತ್ತ್ಯುತ್ತಮ ಕಂಪನಿಗಳಲ್ಲಿ ಒಂದಾಗಿದೆ. ಇದು ಸ್ಥಾಪಿತವಾದುದು ೧೯೦೬ರಲ್ಲಿ. ಬಂಗಾಳಾದ ಜನತೆಯಲ್ಲಿ ವಿಮಾ ಜ್ಞಾನವನ್ನು ಮೊಟ್ಟಮೊದಲಿಗೆ ಹರಡಿದ ಸಂಸ್ಥೆಯೇ ಇದು. ವರ್ಷಗಳು ಕಳೆದಂತೆ ಆದರ ಕೀರ್ತಿಯೂ ಬೆಳೆಯುತ್ತ ನಡೆದು ಇಂದು ಅದು ಭಾರತದ ಎಲ್ಲೆಡೆಗಳಲ್ಲಿಯೂ ಉದ್ಯಮ ನಡೆಸುತ್ತಿದೆ. ಬೊಂಬಾಯಿ, ದೆಹಲಿ, ಲಾಹೋರು, ಮದ್ರಾಸ್, ಪಾಟ್ನಾ, ರಂಗೂನ್, ರಾವಲ್ ಪಿಂಡಿ ಪಟ್ಟಣಗಳಾದಿಯಾಗಿ ಭಾರತದ ಎಲ್ಲ ಪ್ರಮುಖ ನಗರಗಳಲ್ಲಿಯೂ ಶಾಖೆಗಳಿವೆ. ದೇಶದ ಮೂಲೆ ಮೂಲೆಗಳಲ್ಲೂ ಪ್ರತಿನಿಧಿಗಳಿದ್ದಾರೆ.

"ನ್ಯಾಷನಲ್" ಕಂಪನಿ ಡೈರಕ್ಟರುಗಳ ಮಂಡಲಿಯಲ್ಲಿ ಜ್ಞಾನಿಗಳೂ, ವಿಶಾಲ ಅನಭವಸ್ಥರೂ ಇರುವುದು ಆದರ ಸುಯೋಗವು. ಶ್ರೀ ಜೆ. ಚೌಧುರಿಯವರ (Mr, J. Chowdury, M. A,) ಅಧ್ಯಕ್ಷತೆಯಲ್ಲಿ; ಸರ್ ಹೆಚ್. ಎಸ್. ಪಾಲ್, (Sir, H. S. Paul) ಶ್ರೀ ಜಿ. ಪಿ. ದುತಿಯಾ, (Mr. G. P. Dutia) ಮತ್ತು ಶ್ರೀ ಜೆ. ಪಿ. ದುತಿಯಾ (Mr. J. P. Dutia) ಮೊದಲಾದ ವರ್ತಕ ಪ್ರಮುಖರ ನೇತೃತ್ವದಲ್ಲಿ; ಶ್ರೀ ಕೆ. ಎಮ್. ನಾಯಕ್, ಜಿ. ಡಿ ಎ., (Mr. K. M. Naik, G. D. A.,) ಶ್ರೀ ಪಿ. ಸಿ. ಕಾರ್, (Mr. P. C. Kar) ಮತ್ತು ರಾಯ್ ಬಹದ್ದೂರ್ ಟಿ. ಎನ್. ಸಾಧು, ಸಿ. ಐ. ಇ., (Rai Bhadur T. N. Sadhu C. I. E.,) ಇವರುಗಳ ಸಹಕಾರದಲ್ಲಿ "ನ್ಯಾಷನಲ್" ಸಂಸ್ಥೆಯು ಎಂದಿನಂತೆ ಮುಂದೆಯೂ ಅಭಿವೃದ್ಧಿ ಹೊಂದುವುದೆಂದು ನಿರೀಕ್ಷಿಸಬಹುದಾಗಿದೆ.

ನ್ಯಾಷನಲ್ ಇನ್ಷ್ಯೂರೆನ್ಸ್ ಕಂಪೆನಿಯು ಸರ್ವತೋಮುಖವಾದ ಅಭಿವೃದ್ಧಿ ಪಡೆಯುತ್ತಿದೆ. ವರ್ಷೇ ವರ್ಷೇ ಅದು ಹೆಚ್ಚು ಹೆಚ್ಚು ಉದ್ಯಮವನ್ನು ಸಾಧಿಸುತ್ತಲಿ ೧೯೩೪ನೇ ಡಿಸೆಂಬರ್ ೩೧ನೇ ತಾರೀಖಿಗೆ ಮುಕ್ತಾಯವಾಗುವ ವರ್ಷದಲ್ಲಿ ಕಂಪೆನಿಗೆ ೨,೧೫,೭೪,೪೪೫ ರೂ. ಗ ಮೊತ್ತದ ೧೧,೦೦೦ಕ್ಕೆ ಮಿಗಿಲಾದ ದರಖಾಸ್ತುಗಳು ಬಂದಿರುತ್ತವೆ. ಇದರಲ್ಲಿ ೧,೬೯,೫೮,೨೮೦ ರೂ. ಗಳ ಮೊತ್ತದ ೭೫೫೩ ದರಖಾಸ್ತುಗಳಿಗೆ ಪಾಲಿಸಿ ಪತ್ರಗಳನ್ನು ಕೊಟ್ಟಿದ್ದಾರೆ. ಒಂದು ವರ್ಷ ಕಾಲದಲ್ಲಿ ಕಂಪೆನಿಯು ಸುಮಾರು ೭ ಕೋಟಿ ರೂ. ಗಳಷ್ಟು ಹೊಸ ಉದ್ಯಮವನ್ನು ಪಡೆದಿರುವುದೆಂದರೆ ಸಂಸ್ಥೆಯಲ್ಲಿ ಜನತೆಗಿರುವ ವಿಶ್ವಾಸವು ವ್ಯಕ್ತವಾಗುವುದು. ಪುನರ್ವಿಮಾ ಮೊಬಲಗನ್ನು ಕಳೆದು ಹೊಸ ಉದ್ಯಮದ ಮೇಲೆ ಬರುವ ಪ್ರೀಮಿಯಂ ಆದಾಯವು ೭,೮೮,೨೨೪ ರೂ. ಗಳಿರುತ್ತದೆ.

ವಿಶೇಷ ನಿಧಿಗಳನ್ನೊಳಗೊಂಡು ಇಂದು ನ್ಯಾಷನಲ್ ಕಂಪೆನಿಯ ಜೀವವಿಮಾ ನಿಧಿಯು ೨,೨೬,೧೬,೪೩೦ ರೂ. ಗಳಿರುತ್ತದೆ. ಈ ವರ್ಷ ನಿಧಿಯು ೨೦,೭೭,೯೮೧ ರೂ. ಗಳಷ್ಟು ಹೆಚ್ಚಿದೆ.

ಕಂಪೆನಿಯು ವಿನಿಮಯಿಸಿರುವ ಬಂಡವಾಳದಮೇಲೆ ಬಡ್ಡಿಯ ಮುಖೇನ ವರ್ಷದಲ್ಲಿ ಬಂದ ಆದಾಯವು ೯,೫೨,೯೭೬ ರೂ. ಗಳು. ಕಂಪೆನಿಯ ಆಡಳಿತ ಖರ್ಚು ಪ್ರೀಮಿಯಂ ಆದಾಯದ ಶೇಕಡ ೨೬.೪ ರಷ್ಟು ಮಾತ್ರ ವಿದೆ. ಕಂಪೆನಿಯು ಮಿತವ್ಯಯಕ್ಕೆ ಆದರ್ಶವಾಗಿದೆ.

ಕಂಪೆನಿಯ ಆಡಳಿತ ನಿರ್ವಹಿಸುತ್ತಿರುವ ಮೆಸರ್ಸ್ ಆರ್. ಜಿ. ದಾಸ್ ಅಂಡ್ ಕಂಪೆನಿ (Messrs R. G. Das & Co.,) ಯವರನ್ನು ಅವರು ಕಂಪೆನಿಗೆ ದೊರಕಿಸಿಕೊಟ್ಟಿರುವ ಪ್ರಗತಿಗಾಗಿ ಅಭಿವಂದಿಸಿ, ಭವಿಷ್ಯದಲ್ಲಿಯೂ ಅವರಿಗೆ ಶ್ರೇಯಸ್ಸನ್ನು ಕೋರುವೆವು.

(೭) ಮನೆಯಲ್ಲಿ ರೊಟ್ಟಿಯ ಚೂರು, ಸಕ್ಕರೆಯ ಪುಡಿ, ಕಸಕೊಳೆಗಳು, ಸೇರಿದ್ದ ಜಾಗದಲ್ಲಿಯೇ ನೊಣಗಳು ಹೆಚ್ಚಾಗಿ ಸೇರುವುದರಿಂದ, ಅಂತಹ ಕಶ್ಮಲಗಳಿಗೆ ಅವಕಾಶ ಕೊಡಬಾರದು.

(೮) ಮನೆಯನ್ನು ಯಾವಾಗಲೂ ಶುದ್ಧವಾಗಿಟ್ಟಿರುವುದು ಮಕ್ಕಳಿಗೆ ಕ್ಷೇಮಕರವು.

(೯) ಡೈರಿಯಾ ಅಥವಾ ಅಜೀರ್ಣಭೇದಿಯುಳ್ಳ ರೋಗಿಗಳ ಕೋಣೆಗೆ ಮಕ್ಕಳನ್ನು ಬಿಡಬಾರದು. ಹಾಗೆಯೇ ರೋಗವುಳ್ಳವರಿಗೆ ಉಪಚಾರ ಮಾಡುವವರ ಬಳಿಗೂ ಕಳುಹಿಸಬಾರದು. ಮಕ್ಕಳಿಗೆ ಉಪಚಾರಮಾಡುವ ಪೋಷಕರಬಳಿಗೂ ಬಿಡಬಾರದು.

(೧೦) ಸಣ್ಣಮಕ್ಕಳನ್ನು ಬರೀ ನೆಲದಮೇಲೆ ಆಡುವುದಕ್ಕೆ ಬಿಡುವುದರಿಂದ ಮೇಲ್ಕಂಡ ಡೈರಿಯಾವ್ಯಾಧಿಯು ಬರುವುದುಂಟು. ನೆಲದಮೇಲೆ ಊರಿ ಕೊಳೆಹಿಡಿದ ಬೆರಳನ್ನು ಅಥವಾ ಬಟ್ಟೆಯನ್ನು ಮಕ್ಕಳು ಬಾಯಲ್ಲಿಟ್ಟುಕೊಳ್ಳುವುವು. ಇದೂ ರೋಗದಸೊಂಕು ತಗುಲುವುದಕ್ಕೆ ಕಾರಣವಾಗಿದೆ. ಆದುದರಿಂದ ಒಂದುವರ್ಷವಾಗುವುದಕ್ಕೆ ಮೊದಲು ಮಗುವನ್ನು ಬರೀ ನೆಲದಮೇಲೆ ಅಂಬೆಗಾಲಿಟ್ಟು ಓಡಾಡುವುದಕ್ಕೂ ಬಿಡಬಾರದು. ಮಕ್ಕಳಿರುವ ಮನೆಯ ನೆಲವನ್ನು ಆಗಾಗ ಚೆನ್ನಾಗಿ ತೊಳೆದು ಶುದ್ಧಮಾಡುತ್ತಿರಬೇಕು.

(೧೧) ಮಕ್ಕಳಿಗೆ ಹಲ್ಲು ಮೊಳೆಯುವಕಾಲದಲ್ಲಿ ಅವುಗಳ ಬಾಯಿಗೆ ಬೆರಳನ್ನಿಟ್ಟು ವಸಡನ್ನು ತಿಕ್ಕಬಾರದು. ಮತ್ತು ಮಕ್ಕಳು ಅಳುವುದನ್ನು ನಿಲ್ಲಿಸುವುದಕ್ಕಾಗಿ ಬರೀ ರಬ್ಬರಿನ ಚೂಚುಕವನ್ನು ಬಾಯಿಗೆ ಕೊಡಬಾರದು. ಅದು ಕೊಳೆಹಿಡಿದು, ರೋಗದ ಸೊಂಕನ್ನುಂಟುಮಾಡಲು ಕಾರಣವಾಗುವುದು. ಡೈರಿಯಾ ವ್ಯಾಧಿಗೆ ಇದೂ ಒಂದು ಮುಖ್ಯಕಾರಣವು.

(೧೨) ಒಟ್ಟಿನಲ್ಲಿ ಮಗುವು ಬಾಯಲ್ಲಿಟ್ಟುಕೊಳ್ಳತಕ್ಕ ಪದಾರ್ಥಗಳೇನಿದ್ದರೂ ಅವನ್ನು ಶುದ್ಧವಾಗಿರುವಂತೆ ಎಚ್ಚರ ತೆಗೆದುಕೊಳ್ಳಬೇಕು.

(೧೩) ಮಗುವಿನ ದೇಹದಲ್ಲಿ ಕಾಲಕ್ಕೆ ತಕ್ಕ ಬೆಳೆವಳಿಕೆಯು ಕಾಣದಿದ್ದ ಪಕ್ಷದಲ್ಲಿ, ಡಾಕ್ಟರಿಗೆ ತೋರಿಸಿ, ಅವರ ಸೂಚನೆಯಂತೆ ನಡೆಯಬೇಕು. ಮುಖ್ಯವಾಗಿ ಆ ಮಗುವಿಗೆ ಕುಡಿಸತಕ್ಕ ಹಾಲಿನಂಶ, ಅದನ್ನು ಕುಡಿಸತಕ್ಕ ಪದ್ಧತಿ, ಇವನ್ನೆಲ್ಲ ಆ ಡಾಕ್ಟರ ಹೇಳಿಕೆಯಂತೆ ಅನುಸರಿಸಬೇಕು.

(೧೪) ಮನೆಯ ಅಕ್ಕಪಕ್ಕಗಳಲ್ಲಿ ಕಸಗಳನ್ನು ಸೇರಿಸಿಡದೆ ಆಗಾಗಲೇ ದೂರಕ್ಕೆ ಸಾಗಿಸಬೇಕು.

ಚಿಕಿತ್ಸೆಗಿಂತಲೂ ರೋಗವು ಬಾರದಂತೆ ತಡೆಯುವ ಉಪಾಯವೇ ಮೇಲಾದುದು. ಈಮೇಲೆ ಹೇಳಿದ ಸೂಚನೆಗಳಂತೆ ನಡೆದರೆ, ಮಕ್ಕಳಿಗೆ ಬೇಸಗೆಕಾಲದಲ್ಲಿ ಸಾಧಾರಣವಾಗಿ ಕಾಣಿಸತಕ್ಕ ಭೇದಿಯು ಬಹಳಮಟ್ಟಿಗೆ ನಿವೃತ್ತವಾಗುವುದರಲ್ಲಿ ಸಂದೇಹವಿಲ್ಲ. ಇದು ಬಹಳ ಅಪಾಯಕರವಾದ ವ್ಯಾಧಿ. ಇದರಿಂದ ವರ್ಷವರ್ಷಕ್ಕೂ ಅಸಂಖ್ಯಾತಗಳಾದ ಮರಣಗಳು ನಡೆಯುತ್ತಿವೆ. ಪ್ರಾಯಕವಾಗಿ ಮಕ್ಕಳ ಆಹಾರ ವಿಷಯದಲ್ಲಿ ತಂದೆತಾಯಿಗಳ ಅಜಾಗ್ರತೆ, ಮತ್ತು ಅಶುಚಿತ್ವ ಇವುಗಳೇ ಯಾವಾಗಲೂ ಈ ಅನರ್ಥಕ್ಕೆ ಕಾರಣವೆಂದು ತಿಳಿದುಬಂದಿದೆ.

——:o:——

# ನಸ್ಯಹಾಕುವುದು ಹೇಗೆ ಹಾನಿಕರವು ? "ಅದು ಶೀತದೋಷವನ್ನು ನಿವಾರಿಸುವುದೆಂಬ ನಂಬಿಕೆಗೆ ಆಧಾರವಿಲ್ಲ."

ಡಾಕ್ಟರ್ ಎಫ್. ಸಿ. ಷೋರ್.

ಹೊಗೆಸೊಪ್ಪನ್ನು ಉಪಯೋಗಿಸುವ ವಿಧಗಳಲ್ಲೆಲ್ಲ ಕೆಟ್ಟುದು ಈ ನಸ್ಯಹಾಕುವುದೇ! ಹೊಗೆಸೊಪ್ಪನ್ನು ಅಗಿಯುವುದರಿಂದಾಗುವಷ್ಟೇ ಹಾನಿಯು ನಸ್ಯಹಾಕುವುದರಲ್ಲಿಯೂ ಇದೆ. ಹೊಗೆಸೊಪ್ಪಿನಲ್ಲಿರುವ ವಿಷವು, ನಾಸಿಕಾದ್ವಾರಗಳಲ್ಲಿರುವ ಸೂಕ್ಷ್ಮತ್ವಚೆಗಳಿಂದ ಆಕರ್ಷಿಸಲ್ಪಟ್ಟು, ರಕ್ತದೊಡನೆ ಕಲೆತು, ಸಾರಾಯಕ್ಕಿಂತ ತೀವ್ರವಾಗಿ ನರಗಳನ್ನು ಕೆಡಿಸುವುದು. ಪುಡಿಯಲ್ಲಿರುವ ಶಕ್ತಿಯು ಅದನ್ನುಪಯೋಗಿಸಿದಾಗಲೇ ತಿಳಿದುಹೋಗುವುದು. ಅಲ್ಲದೆ ಪುಡಿ ಹಾಕುವವರು ಅದಕ್ಕೆ ಸೇವಕರಾಗಿಬಿಡುವರು.

ಕಳೆದ ಕೆಲವು ವರ್ಷಗಳಿಂದ ಜನರಲ್ಲಿ ಪುಡಿಹಾಕು ವ ಅಭ್ಯಾಸವು ಅಧಿಕವಾಗುತ್ತಿದೆ. ಐಶ್ವರ್ಯವಂತ ರಲ್ಲಿ ಇದು ಹೆಚ್ಚಾಗಿದ್ದರೂ, ಈ ದುರಭ್ಯಾಸವು ಜನ ಸಾಮಾನ್ಯದಲ್ಲಿಯೂ ವ್ಯಾಪಿಸಿದೆ. ಜನರಲ್ಲಿ ಈ ದುರಭ್ಯಾಸವು ಹೆಚ್ಚುವುದಕ್ಕೆ ಲಂಡರ್ ಟೈಮ್ಸ್ ಪ ತ್ರಿಕೆಯಲ್ಲಿ, ಲಂಡರ್ ಡಾಕ್ಟರೊಬ್ಬರು ಈ ದುರಭ್ಯಾ ಸಕ್ಕೆ ಉತ್ತೇಜನಕೊಟ್ಟು ಬರೆದಿದ್ದುದೇ ಕಾರಣ ವಾಗಿರಬಹುದು. ನಸ್ಯವು ಜಲದೋಷವನ್ನು ನಿವಾರಿ ಸುವ ವಸ್ತುವೆಂದು ಅವರೂ ಸ್ತೋತ್ರಮಾಡಿ ಬರೆದಿರು ವರು. ಜಲದೋಷವನ್ನು ನಿವಾರಿಸುವುದೆಂಬ ಕಾರ ಣವನ್ನಿಟ್ಟುಕೊಂಡೇ, ಅನೇಕಜನರು ಸ್ವಾಭಾವಿಕ ವಾಗಿಯೇ ನಸ್ಯವನ್ನು ಪಯೋಗಿಸಲಾರಂಭಿಸಿರುವರು. ಜನರು ಎಷ್ಟು ಸಂತೋಷದಿಂದ, ಆ "ಡಾಕ್ಟರರ ಮಾತು"ಗಳನ್ನನುಸರಿಸಿ ತಮ್ಮ ತಮ್ಮ ಆಸೆಯನ್ನು ಪೂರಿಸಿಕೊಳ್ಳುವರು ನೋಡಿರಿ!

ಆದರೆ, ಬುದ್ಧಿವಂತರಾದ ಸ್ತ್ರೀಪುರುಷರೆಲ್ಲರೂ ಈ ಅಭ್ಯಾಸವನ್ನು ಬಿಟ್ಟುಬಿಡಬೇಕು. ಈ ಅಭ್ಯಾಸವು ಪುಡಿಹಾಕುವವರ ದೇಹದಲ್ಲಿ ವಿಷಸಂಬಂಧದಿಂದ ಕೆ ಡುಕನ್ನುಂಟುಮಾಡುವುದಲ್ಲದೆ, ನೋಡಿದವರಿಗೆ ಕೂಡೊಂದು ಅಸಹ್ಯವಾದ ಅಭ್ಯಾಸವೆಂದೇ ತೋರುವ ದು. ವೈದ್ಯಶಾಸ್ತ್ರರೀತಿಯಿಂದ ಒಂದುವೇಳೆ ಅದು ಆವಶ್ಯವೆಂದು ಹೇಳಲ್ಪಟ್ಟರೂ, ಮಲಗುವ ಕೊಠಡಿ ಯಲ್ಲಿಯಾಗಲಿ, ಅಥವಾ ಸ್ನಾನದ ಕೋಣೆಯಲ್ಲಿ ಯಾಗಲಿ, ಮರೆಯಾಗಿ ಹಲ್ಲುಜ್ಜುವುದು, ಮುಖಪ್ರ ಕ್ಷಾಲನ, ಮುಂತಾದ ಆರೋಗ್ಯಕರವಾದ ಇತರ ಕಾ ರ್ಯಗಳನ್ನು ಮಾಡುವಾಗ, ಅದರೊಡನೆ ಇದನ್ನೂ ರಹಸ್ಯವಾಗಿ ಒಮ್ಮೊಮ್ಮೆ ನಡೆಸಿದರೂ ನಡೆಸಲಿ! ಹ ಲ್ಲುಜ್ಜುವುದು, ಕಿವಿಗೆ ಔಷಧ ಹಾಕಿಕೊಳ್ಳುವುದು, ಇವನ್ನೆಲ್ಲ ಜನಸಮೂಹದ ಮುಂದೆ ನಡೆಸಿದರೂ ಅ ಷ್ಟೇನೂ ಆಕ್ಷೇಪಣೀಯಗಳಲ್ಲ. ಜನರೆಲ್ಲರಮುಂದೆ ನಸ್ಯಹಾಕುವುದು ಬಹಳ ಅಸಭ್ಯವಾದ ನಡೆವಳಿಕೆ.

ಆದರೆ, ಇದರ ನಿಜಾಂಶವೇನು? ಪುಡಿಹಾಕುವು ದು ಇಷ್ಟು ದೊಡ್ಡ ಜನಾಪವಾದವನ್ನೂ ಮೀರಿ ನಡೆ ಸತಕ್ಕಷ್ಟು ಉಪಯೋಗಕರವಾದ ಕೆಲಸವೇ ಅಥವಾ ಅದು ಹಾನಿಕರವಾದುದೇ! ಕೆಲವರು ಹಿರಿಯರು ಶಿಫಾರ್ಸುಮಾಡುವುದರಿಂದಲೇ ಒಂದು ಅಭ್ಯಾಸವು ಬಹಳ ಶ್ರೇಷ್ಠವಾದುದೆಂದು ನಾವು ಭಾವಿಸಬಾರದು. ಏಕೆಂದರೆ, ಅಫೀಮನ್ನು ದೊಡ್ಡವರೆಷ್ಟೋಮಂದಿ ಸೇ ವಿಸುವುದುಂಟು. ಆದುದರಿಂದ, 'ಇಲಿಹು' ಎಂಬ ಉತ್ತಮ ಡಾಕ್ಟರೊಬ್ಬರು ಹೇಳಿದಹಾಗೆ "ದೊಡ್ಡವ ರಾದ ಮಾತ್ರಕ್ಕೆ ಅವರನ್ನು ಯಾವಾಗಲೂ ಬುದ್ಧಿ ವಂತರೆಂದೇ ನಿಶ್ಚಯಿಸುವುದಕ್ಕಿಲ್ಲ."

ಹೊಗೆಸೊಪ್ಪನ್ನು ಯಾವ ರೂಪದಿಂದುಪಯೋಗಿ ಸಿದರೂ ಅಪಾಯಕರವೇ! ನಮಗೆ ತಿಳಿಯದೆಯೇ ಅದು ನಮ್ಮ ದೇಹದೊಳಗೆ ಹಾನಿಯನ್ನುಂಟುಮಾ ಡುವುದರಿಂದ, ಅದನ್ನು ನಾವು ಉಪಯೋಗಿಸಿದ ರೆ ದೀರ್ಘಕಾಲದ ಕೇಡು ಏರ್ಪಡುವುದು. ಇದ ರಲ್ಲಿ ಮುಖ್ಯವಾದ ಹಾನಿಯೆಂದರೆ, ಬುದ್ಧಿಯೂ, ನರಗಳೂ ಕೆಟ್ಟುಹೋಗುವುವು. ಹೊಗೆಸೊಪ್ಪಿನ ವಿಷವು ಈ ಎರಡು ಸೂಕ್ಷ್ಮಾವಯವಗಳ ಶಕ್ತಿ ಯನ್ನೂ ಕೆಡಿಸಿಬಿಡುವುದು. ಅದು ಹೃದಯಕ್ಕೂ ಹಾನಿಕರವು. ಇದರ ವಿಷದಿಂದ ಹೃದಯವು ಕೆಟ್ಟು ಹೋಗಿ, ಅದರ ಚಲನವು ತಟ್ಟನೆ ನಿಂತುಹೋಗುವು ದರಿಂದ, ಅನೇಕ ಕೇಸುಗಳಲ್ಲಿ ಮರಣವೂ ಸಂಭವಿಸು ವುದು. ಜೀರ್ಣಾಂಗಗಳನ್ನೂ ಇದು ಕೆಡಿಸುವುದು. ಒಂದುಬಗೆಯ ತೀವ್ರವ್ರಣಕ್ಕೂ ಇದೇ ಕಾರಣವೆಂದು ಕೆಲವು ಡಾಕ್ಟರುಗಳು ಅಭಿಪ್ರಾಯಪಡುವರು. ಗುಲ್ಮ ವ್ಯಾಧಿಯೆಂಬ ಅಜೀರ್ಣರೋಗದಲ್ಲಿ ಕಾಣುವ ಮಾ ರ್ಪಾಡುಗಳಿಗೆ ಇದೇಕಾರಣವು. ಆಮೇಲೆ ಈ ದುರ ಭ್ಯಾಸವನ್ನು ತೊಲಗಿಸಿದರೂ ಆ ವ್ಯಾಧಿಯು ನಿವಾ ರಣೆಯಾಗದು.

—ಗುಡ್ ಹೆಲ್ತ್, ಲಂಡರ್.

---

# ಆರೋಗ್ಯಕ್ಕಾಗಿ ನೀರನ್ನು ಕುಡಿಯುವುದು.

ಬಾರ್ನಾರ್ಡ್ ಮೆಕ್‌ಫೀಡರ್ ಇವರಿಂದ.

ಜಲಪಾನವೆಂಬುದು ಪ್ರಾಣಧಾರಣೆಗೆ ಮಾತ್ರವೇ ಅಲ್ಲದೆ ದೇಹಾರೋಗ್ಯಕ್ಕೂ ಬಹಳ ಪ್ರಧಾನವೆನಿಸಿದೆ.

ಜಲಪಾನವು ದೇಹದ ಉಷ್ಣಾಂಶವನ್ನು ಸಮಸ್ಥಿತಿ ಯಲ್ಲಿಡುವುದು. ಅದು ರಕ್ತದಲ್ಲಿ ಸಾರವನ್ನು ಹೆಚ್ಚಿ

ಸುವುದು. ಮತ್ತು ಅದು ದೇಹಯಂತ್ರ ವ್ಯಾಪಾರಕ್ಕೆ ಸಂಬಂಧಪಟ್ಟ ಎಲ್ಲಾ ಅವಯೂಗಳಿಗೂ ಕಾರ್ಯಸಾಮರ್ಥ್ಯವನ್ನೂ, ಚಟುವಟಿಕೆಯನ್ನೂ ಉಂಟುಮಾಡುವುದು. ದೇಹದ ಸರ್ವಭಾಗಗಳೂ, ರೋಮಕೂಪಗಳೂ ಚರ್ಮರಂಧ್ರಗಳೂ, ಮ್ಯೂಕಸ್ ಮೆಂಬ್ರೇನ್ ಎಂಬ ಸೂಕ್ಷ್ಮತ್ವಚೆಯೂ, ಶ್ವಾಸಕೋಶಗಳೂ, ಇವೆಲ್ಲಾ ಪ್ರತಿದಿನವೂ ಹೆಚ್ಚು ನೀರನ್ನು ಆವಿಯಾಗಿ ಮಾರ್ಪಡಿಸುತ್ತಿರುವುವು. ರಾತ್ರಿ ಮಲಗುವಾಗ ಒಬ್ಬನು ತನ್ನ ದೇಹದ ತೂಕವೆಷ್ಟೆಂಬುದನ್ನು ನೋಡಿಕೊಂಡು, ಆಮೇಲೆ ಮರುದಿನದ ಬೆಳಗ್ಗೆ ದೇಹದತೂಕವನ್ನು ನೋಡಿದರೆ, ಮೊದಲಿದ್ದುದಕ್ಕಿಂತಲೂ ಮೂರುಪೌಂಡುಗಳಷ್ಟು ಕಡಿಮೆಯಾಗಿ ಕಂಡುಬರುವುದು. ಇದೇಕೆ ? ರಾತ್ರಿ ಮಲಗಿದ್ದಾಗ ಅವನ ದೇಹದ ನೀರು ಆವಿಯಾಗಿ ಹೊರಟುಹೋದುದೇ ಇದಕ್ಕೆ ಕಾರಣವು.

ನೀರಿನಲ್ಲಿ ಎಷ್ಟೋವಿಧಗಳುಂಟು. ಶುದ್ಧವಾದ ನೀರಿಗೆ ರುಚಿಯೂ ಇಲ್ಲ. ವಾಸನೆಯೂ ಇಲ್ಲ. ಆದರೆ ಅನೇಕರಿಗೆ ಅದರ ತಾರತಮ್ಯವೇ ತಿಳಿಯುವ ಸಂಭವವಿಲ್ಲ. ಏಕೆಂದರೆ, ಬಹಳ ಹೊತ್ತಿನಿಂದ ಬಾಯಾರಿದ್ದವರು ನೀರನ್ನು ಕುಡಿಯುವುದಕ್ಕೆ ಆತುರಗೊಂಡು ಬರುವುದರಿಂದ, ಆ ನೀರಿನ ಗುಣಾವಗುಣಗಳನ್ನಾಗಲಿ, ರುಚಿಯನ್ನಾಗಲಿ, ಅವರು ಗಮನಿಸುವುದೇ ಇಲ್ಲ.

ಒಂದಾನೊಂದುದಿನ ನಾನು ಒಂದುದಿನವೆಲ್ಲಾ ಸುಮಾರು ೩೦ ಮೈಲುಗಳ ದೂರದವರೆಗೆ ಕಾಲ್ನಡೆಯಿಂದಲೇ ಪ್ರಯಾಣಮಾಡಬೇಕಾಗಿ ಬಂದಿತು. ನಡುವೆ ನೀರು ಕುಡಿಯಲು ಅವಕಾಶವು ದೊರೆಯಲಿಲ್ಲ. ಆ ಸಂದರ್ಭದಲ್ಲಿ ಬಹಳ ಆಯಾಸದಿಂದಲೂ, ದಾಹದಿಂದಲೂ ನಾನು ಬಹಳವಾಗಿ ದಣಿದು, ಕೊನೆಗೆ ನೀರನ್ನು ಕುಡಿದೆನು. ಆಗಲೇ ನಾನು ನೀರಿನ ರುಚಿಯೆಷ್ಟೆಂಬುದನ್ನು ಚೆನ್ನಾಗಿ ಅನುಭವಿಸಿದೆನು. ಅಂತಹ ರುಚಿಕರವಾದ ವಸ್ತುವನ್ನು ನನ್ನ ಜೀವಮಾನದಲ್ಲಿ ಹಿಂದೆ ಯಾವಾಗಲೂ ಸವಿನೋಡಿಯೇ ಇಲ್ಲವೆಂದೂ ತೋರಿತು. ಆ ಕಾಲಕ್ಕೆ ಆ ನೀರೇ ನನಗೆ ದಿವ್ಯಾಮೃತದಂತೆಯೂ ತೋರಿತು. ತಿರುಗಿ ಅಂತಹ ರುಚಿಯನ್ನು ನನ್ನ ಜೀವಮಾನದಲ್ಲಿಯೇ ನಾನು ಅನುಭವಿಸುವ ಹಾಗಿಲ್ಲ. ಆಗ ನನ್ನ ದಾಹವನ್ನಾರಿಸುವುದಕ್ಕೆ ಸುಮಾರು ಎರಡುಪಾವಿನಷ್ಟು ನೀರು ಬೇಕಾಯಿತು.

ಬುದ್ಧಿಯಿಂದ ಕೆಲಸಮಾಡತಕ್ಕವರನೇಕರು ತಕ್ಕಷ್ಟು ನೀರನ್ನು ಕುಡಿಯುವುದೇ ಇಲ್ಲ. ಅವರು ತಮ್ಮ ಕೆಲಸದ ಮೇಲಿನ ಆತುರದಿಂದ, ಬಾಯಾರಿಕೆಯಾದುದನ್ನೇ ತಿಳಿಯದೆ ತಮ್ಮ ಕಾರ್ಯವನ್ನು ನಡೆಸುತ್ತಿರುವರು. ಆಮೇಲೆ ಕಾಲಕ್ರಮದಿಂದ ಅವರ ದಾಹವು ಹಾಗೆಯೇ ಅಡಗಿಹೋಗಿ, ನೀರಿನ ಅಪೇಕ್ಷೆಯೂ ಬಿಟ್ಟುಹೋಗುವುದು. ಹೀಗಿರುವುದು ತಪ್ಪು. ಅಂತವರು ವಿಶೇಷವಾಗಿ ತಣ್ಣೀರನ್ನು ಕುಡಿಯುವ ಅಭ್ಯಾಸವನ್ನು ಹೆಚ್ಚಿಸಿಕೊಳ್ಳಬೇಕು. ತಮಗೆ ಸಹಜವಾಗಿ ದಾಹವೆತ್ತುವುದಕ್ಕೆ ತಕ್ಕ ಮಾರ್ಗವನ್ನೂ ಕಲ್ಪಿಸಬೇಕು. ಅಂತವರು ತಾವು ಬರೆಯುವಾಗಲೋ, ಓದುವಾಗಲೋ ಪಕ್ಕದಲ್ಲಿ ಕುಡಿಯುವ ನೀರನ್ನು ಸಿದ್ಧವಾಗಿಯೇ ಇಟ್ಟುಕೊಂಡಿದ್ದು, ಆಗಾಗ ಸ್ವಲ್ಪಸ್ವಲ್ಪವನ್ನು ಕುಡಿಯುತ್ತಿರಬೇಕು. ಇದು ಅಂತವರಿಗೆ ಬಹಳ ಒಳ್ಳೆಯದು.

ಒಬ್ಬನಿಗೆ ದಿನವೊಂದಕ್ಕೆ ಕುಡಿಯಬೇಕಾದ ನೀರಿನ ಪ್ರಮಾಣವೆಷ್ಟೆಂಬುದನ್ನು ಕುರಿತು ಸಾಮಾನ್ಯನಿಯಮವನ್ನೇನೂ ಹೇಳುವಹಾಗಿಲ್ಲ. ಅವರವರ ದೇಹದ ಉಷ್ಣಾಂಶ, ಅವರು ತೆಗೆದುಕೊಳ್ಳುವ ಆಹಾರದರೀತಿ, ಆಹಾರಪ್ರಮಾಣ, ಗುಣ, ಅವರವರು ಮಾಡತಕ್ಕ ಉದ್ಯೋಗ, ಅವರು ಆದಿನ ತೆಗೆದುಕೊಂಡ ಸಾಂಬಾರ್, ಉಪ್ಪಿನಕಾಯಿ ಮುಂತಾದ ಪದಾರ್ಥಗಳು, ಇವನ್ನೆಲ್ಲ ಅನುಸರಿಸಿ, ಅವರಿಗೆ ಬೇಕಾದ ನೀರಿನ ಪ್ರಮಾಣವು ಭಿನ್ನವಾಗುವುದು. ಉಪ್ಪನ್ನು ಹೆಚ್ಚಾಗಿ ತಿಂದವರಿಗೆ ದಾಹವು ಹೆಚ್ಚಾಗುವುದು.

ಬುದ್ಧಿಯಿಂದ ಕೆಲಸಮಾಡತಕ್ಕವರು ಪ್ರತಿದಿನವೂ ಬೆಳಗ್ಗೆ ಎದ್ದೊಡನೆ ಬೇರೆ ಯಾವುದನ್ನಾದರೂ ಆಹಾರವಾಗಿ ತೆಗೆದುಕೊಳ್ಳುವ ಮೊದಲು ಎರಡರಿಂದ ನಾಲ್ಕು ಲೋಟಾಗಳಷ್ಟು ನೀರನ್ನು ಕುಡಿಯುವ ಅಭ್ಯಾಸವನ್ನು ಮಾಡಬೇಕು. ರಾತ್ರಿ ನಿದ್ರೆಯಕಾಲದಲ್ಲಿ ದೇಹದಿಂದ ಶೋಷಿಸಿಹೋದ ನೀರನ್ನು ಭರ್ತಿಮಾಡುವುದಕ್ಕೆ ಇದು ಉತ್ತಮೋಪಾಯವು. ನೀರನ್ನು ಕುಡಿಯುವುದರಿಂದ ರಕ್ತದ ದ್ರವಭಾಗವು ಹೆಚ್ಚುವುದರೊಡನೆ, ಜೀರ್ಣರಸಗಳನ್ನು ಉತ್ಪನ್ನಮಾಡಿಕೊಡುವ ದೇಹಭಾಗಗಳಿಗೆ ಮೃದುತ್ವವುಂಟಾಗಿ ಅವುಗಳ ಕೆಲಸಕ್ಕೂ ಉತ್ತೇಜನವಾಗುವುದು. ಭೋಜನಗಳ ಮಧ್ಯಕಾಲದಲ್ಲಿ ಎರಡು ಅಥವಾ ಮೂರು ಲೋಟಾಗಳಷ್ಟು ನೀರನ್ನು ಕುಡಿಯಬೇಕು

ಪ್ರಾಯಕವಾಗಿ ಎಲ್ಲರಿಗೂ ದ್ರವಪದಾರ್ಥಗಳನ್ನು ಕುಡಿಯುವುದರಲ್ಲಿ ಸ್ವತಃ ಆಶೆಯುಂಟಾಗುವ ಹಾಗೆ ತೆಗೆದುಕೊಳ್ಳುವುದೊಳ್ಳೆಯದು. ಅಂತಹ ಪಾನೀಯವು ಹಿತವಾಗಿಯೂ, ಸುಲಭವಾಗಿಯೂ, ಅದರ ರುಚಿಯಾಗಿಯೂ ಇದ್ದಷ್ಟೂ ಉತ್ತಮವು. ಅದರಲ್ಲಿ ಮುಖ್ಯವಾಗಿ, ಬೆಳೆಯುವ ಮಕ್ಕಳಿಗೆ ಹೀಗಿರಬೇಕಾದ್ದು ಅವಶ್ಯವು.

ಸಾಮಾನ್ಯವಾಗಿ ಈಗ ಸಣ್ಣವರು ದೊಡ್ಡವರೆಂಬ ಭೇದವಿಲ್ಲದೆ, ಸೀಸೆಗಳಲ್ಲಿ ತುಂಬಿ ಮಾರಾಟಕ್ಕಿರುವ ಪಾನೀಯಗಳನ್ನು ಪ್ರೀತಿಸುವರು. ಆದರೆ, ಸೋಡಾ, ಐಸ್‌ಸೋಡಾ, ಲೈಮ್‌ಜೂಸ್, ಕೋಲಾ ಮುಂತಾದ ದ್ರವಗಳಿಗಿಂತಲೂ ಮನೆಗಳಲ್ಲಿಯೇ ತಯಾರಿಸಲ್ಪಡುವ ರೂಟ್‌ಬೀರ್ ಮುಂತಾದುವು ಒಳ್ಳೆಯವು. ಮುಖ್ಯವಾಗಿ ಸಣ್ಣಮಕ್ಕಳಿಗೆ ಇದು ಪ್ರಿಯವಾಗಿಯೂ, ಹಿತಕರವಾಗಿಯೂ ಇವೆ.

ಭೋಜನ ಕಾಲದಲ್ಲಿ ನೀರನ್ನು ಕುಡಿಯಬೇಕೆ ? ಅಥವಾ ಕುಡಿಯಬಾರದೆ ? ಎಂಬೀ ವಿಷಯದಲ್ಲಿ ಬಹುಕಾಲದಿಂದ ಅಭಿಪ್ರಾಯಭೇದಗಳೂ, ವಿವಾದಗಳೂ ನಡೆಯುತ್ತಿವೆ. ಈ ಅಂಶವನ್ನು ನಿರ್ಧರವಾಗಿ ತೀರ್ಮಾನಿಸುವುದಕ್ಕೆ ಸಾಧ್ಯವಲ್ಲ. ಅವರವರ ದಾಹವಿಷಯ ಇದನ್ನು ತೀರ್ಮಾನಿಸಬೇಕಾಗಿದೆ. ಭೋಜನ ಮಾಡುವಾಗ ಒಬ್ಬನಿಗೆ ಬಹಳ ಕಾರವಾಗಬಹುದು. ಆಹಾರಪದಾರ್ಥವು ಧಾರಾಳವಾಗಿ ಒಳಕ್ಕೆ ಹೋಗದೆ ಗಂಟಲಿನಲ್ಲಿ ಸಿಕ್ಕಿಕೊಳ್ಳಬಹುದು. ಊಟದ ಕಾಲದಲ್ಲಿ ಕೆಲವರಿಗೆ ಬಾಯಾರಿಕೆ ಹೆಚ್ಚಾಗಬಹುದು. ಅಂತಹ ಸ್ಥಿತಿಯಲ್ಲಿ ನೀರನ್ನು ಕುಡಿಯದೆ ತೀರದು. ಇದಕ್ಕೆ ಅಡ್ಡಿ ಹೇಳಬಾರದು. ಭೋಜನವಾದಮೇಲೆ ಮಧ್ಯಕಾಲಗಳಲ್ಲಿ ನೀರನ್ನು ಕುಡಿಯುವವಾಡಿಕೆ ಇಲ್ಲದವರು, ಭೋಜನಕಾಲದಲ್ಲಿಯೇ ನೀರನ್ನು ಕುಡಿಯುವುದು ಒಳ್ಳೆಯದು. ಬಾಯಿಯಲ್ಲಿ ಆಹಾರವನ್ನು ಚೆನ್ನಾಗಿ ಅಗಿದು, ಜೊಲ್ಲಿನ ರಸದಿಂದ ನೆನೆಯುವಂತೆ ಮಾಡಬೇಕು. ಅದು ಜೀರ್ಣಕಾರ್ಯಕ್ಕೆ ಬಹಳ ಸಹಕಾರಿಯಾಗಿದೆ. ರಾತ್ರಿ ಮಲಗುವುದಕ್ಕೆ ಹೋಗುವ ಮೊದಲು ನೀರನ್ನು ಕುಡಿಯುವುದೂ ಆರೋಗ್ಯಕ್ಕೆ ಒಳ್ಳೆಯದು.

ದೇಹಕ್ಕೆ ಎಷ್ಟುನೀರು ಬೇಕೆಂಬುದು ಅವರವರ ಅಭ್ಯಾಸವನ್ನೂ ಅವಲಂಭಿಸಿದೆ. ಅದರೆ ಮಿತವಾಗಿ ತೆಗೆದುಕೊಳ್ಳುವುದಕ್ಕಿಂತ ಸ್ವಲ್ಪ ಹೆಚ್ಚು ನೀರನ್ನು ತೆಗೆದುಕೊಳ್ಳುವ ಅಭ್ಯಾಸವೇ ಉತ್ತಮವು. ನೀರು ಶುದ್ಧವಾಗಿರಬೇಕು. ಅದರಲ್ಲಿ ಕೊಳೆತುಹೋದ ಶಾಖಪದಾರ್ಥಗಳು ಮುಂತಾದ ಕಶ್ಮಲಗಳೇನೂ ಇಲ್ಲದಿರಬೇಕು. ಹಾಗೆ ನೀರನ್ನು ಪರಿಶೋಧಿಸಿ ತೆಗೆದುಕೊಳ್ಳುವುದರಿಂದ ದೇಹದಲ್ಲಿ ರೋಗಗಳುಂಟಾಗುವುದಕ್ಕೆ ಅವಕಾಶವಿರದು.

ಪ್ರಾಕೃತಿಕವಾಗಿಯೇ ಶೋಧಿಸಲ್ಪಡುವ ಮಳೆಯ ನೀರು ಎಲ್ಲಕ್ಕಿಂತಲೂ ಶುದ್ಧವಾದುದು. ಅದನ್ನು ಶುದ್ಧವಾದ ಪಾತ್ರೆಗಳಲ್ಲಿಯಾಗಲಿ, ಅಥವಾ ಬಾವಿಗಳಲ್ಲಿಯಾಗಲಿ ಸೇರಿಸಿಡಬೇಕು. ಅದನ್ನು ಇನ್ನೂ ಶುದ್ಧಮಾಡಬೇಕೆಂದರೆ ಮನುಷ್ಯ ಸಾಧ್ಯವಲ್ಲ. ಸಾಧಾರಣವಾಗಿ ನಮಗೆ ದೊರೆಯುವ ನೀರು ಅಶುದ್ಧವೆಂಬ ಸಂದೇಹವೇನಾದರೂ ಉಂಟಾದ ಪಕ್ಷದಲ್ಲಿ, ಅಂಗಡಿಗಳಲ್ಲಿ ಮಾರುವ ಪಾನೀಯಗಳನ್ನು ಕುಡಿಯಬಹುದು. ಅವುಗಳಿಂದ ಅಷ್ಟು ಅಪಾಯವಿಲ್ಲ.

ಸಾಧಾರಣವಾಗಿ ದೊಡ್ಡ ಪಟ್ಟಣಗಳಲ್ಲೆಲ್ಲ ಜಲಾಧಾರಗಳನ್ನು ಅಶುದ್ಧವಾಗದಂತೆ ರಕ್ಷಿಸಿಡುವರು. ಅಲ್ಲಿ ಆರೋಗ್ಯದ ಇಲಾಖೆಯವರು ಆಗಾಗ ಆ ನೀರನ್ನು ಪರಿಶೋಧಿಸಿ ನೋಡುತ್ತಿರುವರು.

ಬೇಸಿಗೆಯ ರಜಾದಿನಗಳಲ್ಲಿ ನಾವು ಉಪಯೋಗಿಸುವ ನೀರಿನಲ್ಲಿ ಏನಾದರೂ ಅಶುದ್ಧವುಂಟೆಂಬ ಸಂದೇಹವಿದ್ದ ಪಕ್ಷದಲ್ಲಿ, ಒಡನೆಯೇ ಅದನ್ನು ಚೆನ್ನಾಗಿ ಕಾಯಿಸಿ ತೆಗೆದುಕೊಳ್ಳಬೇಕು. ಹಾಗಿಲ್ಲದಿದ್ದರೆ ಸೀಸೆಗಳಲ್ಲಿ ಹಾಕಿ ಮಾರಲ್ಪಡುವ ಶುದ್ಧ ಜಲವನ್ನುಪಯೋಗಿಸಬೇಕು.

ಕಾಯಿಸಿದ ನೀರಿನಲ್ಲಿ ರುಚಿಯಿರಲಾರದು. ಆದುದರಿಂದ ಅದನ್ನು ಕುಡಿಯುವಮೊದಲು ಅದರಲ್ಲಿ ಗಾಳಿಯು ಸೇರುವಂತೆ ಮಾಡಬೇಕು. ಅದಕ್ಕೆ ಆ ನೀರನ್ನು ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಹಾಕಿ ಆರಿಸಬೇಕು. ಅಥವಾ ಅದನ್ನು ಚೆನ್ನಾಗಿ ಕಲಗಿಸಬೇಕು.

ಬೇಸಗೆಯ ಕಾಲದಲ್ಲಿ ಚಳಿಗಾಲಕ್ಕಿಂತ ನಮಗೆ ಹೆಚ್ಚುನೀರು ಬೇಕಾಗುವುದು. ಬೇಸಗೆಯಲ್ಲಿ ಮೈ ಚೆನ್ನಾಗಿ ಬೆವರುವುದು. ಆದುದರಿಂದ ದೇಹದಲ್ಲಿ ಸೇರಿರುವ ನೀರು ಆವಿಯಾಗುವುದು. ಇದನ್ನು ಭರ್ತಿಮಾಡುವುದಕ್ಕೆ ನಾವು ಹೆಚ್ಚು ನೀರನ್ನೇ ತೆಗೆದುಕೊಳ್ಳಬೇಕು.

ನಮ್ಮ ದೇಹದಮೇಲಿರುವ ರೋಮಕೂಪಗಳ

ಮಾರ್ಗವಾಗಿ ದೇಹದ ಕಶ್ಮಲವು ಹೊರಬೀಳುವುದು. ಮೈ ಚೆನ್ನಾಗಿ ಬೆವರುವುದಕ್ಕಾಗಿ, ಆವಿಯಸ್ನಾನ, ಟರ್ಕಿಷ್‌ಸ್ನಾನ, ಮುಂತಾದ ಸ್ನಾನಗಳನ್ನು ಮಾಡಬೇಕು. ಆದರಿಂದ ದೇಹದಲ್ಲಿ ಸ್ವಲ್ಪ ಉಷ್ಣವುಂಟಾಗುವುದು. ದೇಹದಲ್ಲಿ ಸೇರಿರುವ ವಿಷಪದಾರ್ಥಗಳನ್ನು ಹೊರಪಡಿಸುವುದಕ್ಕೆ ಇವೇ ಮುಂತಾದ ಸ್ನಾನಗಳು ಸಹಕಾರಿಗಳಾಗಿರುವುವು.

ಈಮೇಲೆ ಹೇಳಿದ ಮಾರ್ಗಗಳನ್ನನುಸರಿಸುವಾಗ ನೀರನ್ನು ಹೆಚ್ಚಾಗಿ ತೆಗೆದುಕೊಳ್ಳಬೇಕು. ಏಕೆಂದರೆ ಇದು ಮೈ ಚೆನ್ನಾಗಿ ಬೆವರುವುದಕ್ಕೆ ಅನುಕೂಲಿಸುವುದು.

ಸ್ನಾಯುಗಳಲ್ಲಿ ವಿಷಸಂಬಂಧವೇನಾದರೂ, ಇದ್ದು ಆದರಿಂದ ದೇಹದಲ್ಲಿ ರೋಗವು ಕಂಡುಬಂದರೆ, ಆಗ ಹೆಚ್ಚು ನೀರನ್ನು ಕುಡಿಯುವುದರಿಂದ ಅದನ್ನು ನಿವಾರಿಸಬಹುದೆಂಬುದನ್ನು ಜ್ಞಾಪಕದಲ್ಲಿಡಬೇಕು. ಆದರೆ ಮಂಜುಗಡ್ಡೆಯಿಂದ ಕೂಡಿದ ನೀರನ್ನು ಹೆಚ್ಚಾಗಿ ತೆಗೆದುಕೊಳ್ಳಬಾರದು. ಸ್ವಲ್ಪ ತಣ್ಣಗಿರುವ ನೀರು ದಾಹಶಾಂತಿಯನ್ನುಂಟುಮಾಡುವುದು. ಅದನ್ನು ಎಷ್ಟು ಬೇಕಾದರೂ ಕುಡಿಯಬಹುದು. ಮಂಜುಗಡ್ಡೆ ಸೇರಿಸಿದ ನೀರನ್ನು ಕುಡಿಯುವುದು ಸಂಯಲ್ಲ.

ಹಸಿದಾಗ ಊಟಮಾಡಿರಿ. ಬಾಯಾರಿಕೆಯಾದಾಗ ನೀರು ಕುಡಿಯಿರಿ. ನಿಮ್ಮ ಹಸಿವು ಸಾಧಾರಣವಾಗಿದ್ದ ಪಕ್ಷದಲ್ಲಿ ಈ ಮೇಲೆ ಹೇಳಿದ ಪದ್ಧತಿಯನ್ನನುಸರಿಸುವುದುತ್ತಮವು.

ಬಾಯಾರಿಕೆಯಾದಾಗ ನೀರನ್ನು ಕುಡಿಯುವುದಕ್ಕೆ ನಿಮ್ಮ ಉದ್ಯೋಗವಶದಿಂದ ಅವಕಾಶ ವಿಲ್ಲದಿದ್ದ ಪಕ್ಷದಲ್ಲಿ, ನೀವು ತೆಗೆದುಕೊಳ್ಳುವ ನೀರಿನ ಪರಿಮಾಣದಲ್ಲಿ ಒಂದು ಕ್ರಮವನ್ನೇರ್ಪಡಿಸಬೇಕಾಗುವುದು. ಹಾಗೆ ಮಾಡಿದ ಪಕ್ಷದಲ್ಲಿ ಸುಖವಾಗಿ ಜೀವಿಸುವುದಕ್ಕೆ ಅತ್ಯವಶ್ಯವೆನಿಸುವ ಆರೋಗ್ಯವನ್ನು ಪಡೆಯಬಹುದು.—ದಿ ಇಂಡಿಯನ್ ಇನ್ಶ್ಯೂರೆನ್ಸ್ ಜರ್ನಲ್.

---

# ಆಹಾರದಲ್ಲಿ ಲೋಹಸಂಬಂಧಗಳು.

## ಅಡಿಗೆಮಾಡುವುದಕ್ಕಾಗಿ ಅಲುಮೀನಿಯಂ ಪಾತ್ರೆಗಳನ್ನುಪಯೋಗಿಸುವುದರ ಫಲ.

(ಪ್ರೊಸೀಡಿಂಗ್ಸ್ ಆಫ್ ದಿ ಇಂಡಿಯನ್ ಅಕಡೆಮಿ ಆಫ್ ಸೈನ್ಸ್, ಬೆಂಗಳೂರು, ೨, ೧೯೩೫, ಪುಟಗಳು. ೩೨೨-೩೩೨ ರಿಂದ ತೆಗೆದುದು.)

ಆಹಾರವನ್ನು ಅಲ್ಯುಮಿನಿಯಂ ಪಾತ್ರೆಗಳಲ್ಲಿ ಅಡಿಗೆಮಾಡುವುದಕ್ಕೆ ಮುಂಚಿತವಾಗಿ, ಅಡಿಗೆಮಾಡಿದ ಮೇಲೆ ಮತ್ತು ಆ ಪಾತ್ರೆಗಳಲ್ಲಿ ಆಹಾರವನ್ನು ಸ್ವಲ್ಪಹೊತ್ತು ಮುಚ್ಚಿಟ್ಟದ್ದಮೇಲೆ, ಆ ಆಹಾರಪದಾರ್ಥಗಳಲ್ಲಿ ಸೇರಿದ ಲೋಹಭಾಗವು ಎಷ್ಟೆಂಬುದನ್ನು ದತ್ತ ಎಂಬವರು ಕೆಲವು ಪರಿಶೋಧನೆಗಳಿಂದ ಕಂಡುಹಿಡಿದಿರುವರು. ಆ ಪರಿಶೋಧನೆಗಳಿಂದ ತಿಳಿಯಬರುವುದೇನೆಂದರೆ, ಅಲ್ಯುಮಿನಿಯಂ ಎಂಬ ಲೋಹವು ಹಣ್ಣಿನ ಮತ್ತು ತರಕಾರಿಗಳ ರಸಗಳೊಡನೆ ಸೇರಿದರೆ ಆ ಲೋಹವು ಸ್ವಲ್ಪಸ್ವಲ್ಪವಾಗಿ ಕರಗಿಹೋಗುವುದು. ಬೇರೆ ಎಲ್ಲಾ ರಸಗಳಿಗಿಂತಲೂ ಹುಳಿಯರಸವು ಈ ಲೋಹವನ್ನು ಹೆಚ್ಚಾಗಿ ಕರಗಿಸುವುದು. ಅದರೊಡನೆ ಉಪ್ಪೂ ಸೇರಿದ್ದರೆ, ಆ ಲೋಹವು ಇನ್ನೂ ಬೇಗನೆ ಕರಗಿಹೋಗುವುದು. ಆದರೆ ಒಮ್ಮೆ ಇದರ ಪರಿಶೋಧನೆಗಾಗಿ ಗಾಜಿನ ಪಾತ್ರೆಗಳಲ್ಲಿಟ್ಟಿದ್ದ ಹಾಲು, ಮೊಸರು, ಇವುಗಳನ್ನು ಕೊಟ್ಟು ಕೆಲವು ಇಲಿಗಳನ್ನು ಬೆಳೆಸಿದರು. ಮತ್ತು ಅಲ್ಯುಮಿನಿಯಂ ಪಾತ್ರೆಗಳಲ್ಲಿಟ್ಟಿದ್ದ ಹಾಲು, ಮೊಸರು ಇವುಗಳಿಂದ ಇನ್ನು ಕೆಲವು ಇಲಿಗಳನ್ನು ಬೆಳೆಸಿನೋಡಿದರು. ಈ ಪರಿಶೋಧನೆಯಿಂದ, ಆ ಎರಡು ಪಂಗಡದ ಇಲಿಗಳ ಬೆಳವಣಿಗೆಯೂ ಒಂದೇರೀತಿಯಾಗಿದ್ದಿತೆಂದು ತಿಳಿಯಬಂದಿತು. ಅವುಗಳ ಆರೋಗ್ಯ, ಸಂತಾನವೃದ್ಧಿ ಇವೆಲ್ಲವೂ ಒಂದೇ ಸಮನಾಗಿದ್ದುವು. ಆದುದರಿಂದ ಉಪ್ಪು ಹುಳಿ ಇವುಗಳ ಸಂಬಂಧವಿದ್ದಾಗಮಾತ್ರ ಲೋಹಸಂಬಂಧದಿಂದ ಆಹಾರವು ಕೆಡುವುದು ಎಂಬದಾಗಿ ಊಹಿಸಬಹುದು.—"ಇಂಡಿಯನ್ ಡೆಂಟಲ್ ಜರ್ನಲ್".



# ಅಯ್ಯೋ! ಅಯ್ಯೋ!!

# ಎಂದು ಕೂಗು ಕೇಳಿದಾಗ

# ನೀವು ಸಹಾಯ

# ಮಾಡ ಬಲ್ಲಿರಾ



ಧಾರಣವಾಗಿ ಗ್ರಾಮಗಳಲ್ಲಿ ಜನರಿಗೆ ಗಾಯ, ಜಲಗಂಡ, ಅಗ್ನಿಗಂಡ, ವಿಷಭಕ್ಷಣ, ರಕ್ತ ಮೂರ್ಛೆ ಮೊದಲಾದ ಅಪಾಯಗಳು ಸಂಭವಿಸಿದಾಗಲೂ, ಹಾವು, ಹುಚ್ಚು ನಾಯಿ, ಚೇಳು ನ ವಿಷಜಂತುಗಳು ಕಚ್ಚಿದಾಗ ಆಕಸ್ಮಾತ್ತಾಗಿ ದೇಹದಲ್ಲಿ ಅಸ್ವಸ್ಥತೆಯು ಸಂಭವಿಸಿದಾಗಲೂ, ರಾದ ವೈದ್ಯರ ಸಹಾಯವು ದೊರೆಯುವುದು ಕಷ್ಟವಾಗಿದೆ. ಹಾಗೆ ಒದಗದೆ ಹೋದಾಗ, ಯನ್ನು ವೈದ್ಯರು ಇರುವಲ್ಲಿಗೆ ಕೊಂಡುಹೋಗುವವರೆಗೆ ಯಾ ವೈದ್ಯರನ್ನು ಕರೆತರುವವರೆಗೆ ದ ಚಿಕಿತ್ಸೆ ಮಾಡಬೇಕೆಂದು ತಿಳಿಯದೆ, ಅನೇಕ ಜನರು ಅಪಾಯಗಳಿಗೆ ಗುರಿಯಾಗುವದು ಧಾರಣವಾಗಿದೆ. ಕೆಲವು ಸಾರಿ ಮರಣವನ್ನು ಕೂಡ ಹೊಂದುವುದುಂಟು. ಇಂಥಾ ಕಷ್ಟ ಪಡಿಸವದಾಗೆ ಮದ್ರಾಸು ಪಟ್ಟಣದಲ್ಲಿರುವ, ರಾವ್‌ಸಾಹೇಬ್ ಡಾಕ್ಟರ್ ಯು. ರಾಮರಾವ್ "ಪ್ರಥಮ ಚಿಕಿತ್ಸೆ" ಯೆಂಬ ಪುಸ್ತಕವನ್ನು ರಚಿಸಿದ್ದಾರೆ ಈ ಪುಸ್ತಕದಲ್ಲಿ ಮೇಲೆ ಹೇಳಿದ ತ್ತಾಗಿ ಸಂಭವಿಸುವ ಅಸ್ವಸ್ಥಕ್ಕೆ ಮಾಡಬೇಕಾದ ಚಿ ಯನ್ನು ಬಹಳ ಸುಲಭವಾದ ಕನ್ನಡದಲ್ಲಿ ೧೨೫ ಚಿತ್ರ ಸಹಿತ ಬರೆದಿರುವರು. ಈ ಪುಸ್ತಕವನ್ನು ಓದಿ ತಿಳಿ ದರೆ, ಅನೇಕ ತರದ ಅಪಮೃತ್ಯುಗಳನ್ನು ಪರಿಹರಿಸ ದೆ ವ್ಯರ್ಥವಾಗಿ ಮರಣಹೊಂದುವ ಜನರ ಜೀವ ಉಳಿಸಿ ಪುಣ್ಯಸಂಪಾದಿಸಬಹುದು. ಅಲ್ಲದೆ ಪ್ರಥಮಚಿಕಿತ್ಸೆಗೆ ಬೇಕಾದ ಉಪಕರಣಗ ಒಳಕೊಂಡಿರುವ ಒಂದು ಪೆಟ್ಟಿಗೆಯೂ ದೊರೆಗೆ ವು. ಅದರಿಂದಲೂ ಬಹಳ ಉಪಯೋಗ ಆದುದರಿಂದ ಈ ದಿನವೇ ನೀವು ಅವೆರ ಡನ್ನು ತರಿಸಿಟ್ಟುಕೊಂಡರೆ, ಅನೇಕ ಜನರನ್ನು ದಿಂದ ತಪ್ಪಿಸಿ ಬದುಕಿಸಿದ ಪುಣ್ಯವನ್ನು ನೀವು ಗಳಿಸ ಬಹುದು.








ಪ್ರಥಮಚಿಕಿತ್ಸೆ ಪುಸ್ತಕದ ಬೆಲೆ ೧೨ ಆಣೆ.

ಪ್ರಥಮಚಿಕಿತ್ಸೆ ಪೆಟ್ಟಿಗೆಯ ಬೆಲೆ ರೂ. ೨-೦-೦

# ಶ್ರೀ ಕೃಷ್ಣ ಬ್ರದರ್ಸ್,

## ೩೨೩, ತಂಬುಶೆಟ್ಟಿ ಬೀದಿ, ಮದ್ರಾಸ್.

# ಮಲೇರಿಯಾ ಮತ್ತು ವಿಷಮ ಜ್ವರಗಳಿಂದ ಆಗಲೇ ಗುಣಹೊಂದಿ ಚೇತರಿಸಿ ಕೊಳ್ಳುವವರಿಗೆ

ಮೇಲ್ಕಂಡ ರೋಗಗಳಿಂದ ಚೇತರಿಸಿಕೊಳ್ಳುವ ಸಂದರ್ಭಗಳಲ್ಲಿ, ಏಂಜಿಯರ್ಸ್ ಎಮಲ್ಷನ್ ಎಂಬೀ ರಸಾಯನ ಪಾಕವು ಅಮೂಲ್ಯ ಪ್ರಯೋಜನವುಳ್ಳದು. ಈ ಪಾಕದಲ್ಲಿರುವ ವಿಷನಿವಾರಣಶಕ್ತಿಯಿಂದಲೂ, ಕರುಳುಗಳ ರಚನಾತಂತುಗಳಲ್ಲಿರುವ ಲೋಪಗಳನ್ನೂ, ಬಾಧೆಗಳನ್ನೂ ಶಮನಮಾಡಿ, ಅವುಗಳನ್ನು ಪೂರ್ವಸ್ಥಿತಿಗೆ ತರುವುದರಲ್ಲಿ ಅದಕ್ಕಿರುವ ಅದ್ಭುತ ಶಕ್ತಿಯಿಂದಲೂ, ಈ ಔಷಧವು, ವ್ಯಾಧಿಯು ಗುಣವಾಗುತ್ತಿರುವ ಕಾಲದಲ್ಲಿ ಅವಶಿಷ್ಟವಾಗಿರುವ ವಿಷಸಂಬಂಧಗಳನ್ನೂ, ರೋಗಶೇಷಗಳನ್ನೂ, ಬಹುಬೇಗನೆ ನಿವೃತ್ತಿಮಾಡುವುದು. ಮತ್ತು ಆಹಾರದ ಸಾರವನ್ನು ಮೈಗೆ ಸೇರುವಂತೆ ಮಾಡುವುದರಲ್ಲಿಯೂ ಇದಕ್ಕೆ ಅಪಾರ ಶಕ್ತಿಯುಂಟು. ಇದರಿಂದ ಹಸಿವು ಹೆಚ್ಚುವುದು. ರಕ್ತವೃದ್ಧಿ ಯಾಗುವುದು. ರಕ್ತಹೀನತೆ, ಬಲಹೀನತೆ, ನರಗಳಲ್ಲಿಯೂ, ಜೀರ್ಣಕೋಶಗಳಲ್ಲಿಯೂ ಕಾಣುವ ಬಾಧೆಗಳು, ಇವನ್ನೆಲ್ಲ ಸಿವಾರಿಸುವುದು. ಇಂಡಿಯಾ ದೇಶದ ಮೆಡಿಕಲ್ ಇಲಾಖೆಯಲ್ಲಿ ಕರ್ನಲ್ ಪದವಿಯಲ್ಲಿದ್ದು ಪೆನ್ಷನ್ ತೆಗೆದುಕೊಂಡಿರುವ ಉದ್ಯೋಗಸ್ಥರೊಬ್ಬರು ಈ ಔಷಧ ವಿಷಯದಲ್ಲಿ ಹೀಗೆಂದು ಬರೆಯುವರು.




"ನಾನು ಬಹುದಿನಗಳ ವರೆಗೆ ಉಷ್ಣದೇಶದಲ್ಲಿ ಕೆಲಸಮಾಡುತ್ತಿದ್ದುದರಿಂದ ಆಗಾಗ ದೇಹದಲ್ಲಿ ಉಪಾಧಿಗಳು ಕಾಣುತ್ತಿದ್ದು, ಅದರಿಂದ ಪ್ರಬಲವಾದ ಶೀತದೋಷವೂ ಅಜೀರ್ಣಬಾಧೆಯೂ ಮನೋವ್ಯಾಕುಲವೂ ನನ್ನನ್ನು ಬಹಳವಾಗಿ ಬಾಧಿಸುತ್ತಿತ್ತು. ಏಂಜಿಯರ್ಸ್ ಎಮಲ್ಷನ್ ಎಂಬೀ ಔಷಧದಿಂದ ನನಗೆ ಅಪೂರ್ವವಾದ ಫಲವು ಕಂಡುಬಂದಿತು. ಎರಡು ವರ್ಷದ ಕಾಲದಿಂದದ್ದ ರೋಗಚಿಹ್ನೆಗಳೆಲ್ಲ ಸ್ವಲ್ಪದಿನಗಳ ಸೇವನೆಯಿಂದಲೇ ಬಿಟ್ಟುಹೋದುವು. ಎರಡು ಸೀಸೆಗಳನ್ನು ತೆಗೆದುಕೊಂಡಮೇಲೆ ಪೂರ್ಣ ಸೌಖ್ಯವೇರ್ಪಟ್ಟಿತು. ಈಗ ಕಫಬಾದೆಯಿಲ್ಲ, ಕೆಮ್ಮಲಿಲ್ಲ. ನಿದ್ರಾಹಾರಗಳು ಚೆನ್ನಾಗಿವೆ. ನರಗಳ ದುರ್ಬಲತೆಯಿಲ್ಲ. ತುಪಾಖಿಯನ್ನು ಹೊತ್ತುಕೊಂಡು ಬೆಟ್ಟವನ್ನೇರುವೆನು. ಕೋಗಳಲ್ಲಿ ಮೀನನ್ನು ಬೇಟೆಯಾಡಬಲ್ಲೆನು. ಈಗ ನನಗೆ ಅಪವತ್ತು ವಯಸ್ಸಾಗಿದೆ. ಇಪ್ಪತ್ತುನಾಲ್ಕು ವರ್ಷಗಳಕಾಲ ಉದ್ಯೋಗಮಾಡಿದೆನು. ಇದೇ ವ್ಯಾಧಿಗಳಿಂದ ನರಳುತ್ತಿದ್ದ ನನ್ನ ಹೆಂಡತಿಗೂ ಈಗ ಪೂರ್ಣವಾಗಿದೆ. ಹೀಗೆಯೇ ಇನ್ನೂ ಬಹುಜನರಿಗೆ ನಿಮ್ಮ ಔಷಧಿದಿಂದ ಗುಣವಾದುವನ್ನು ಉದಾಹರಿಸಬಹುದು.

(ರುಜು)..............ಎಂ. ಬಿ. ಸಿ. ಎಂ.

# ANGIER'S EMULSION

# ಏಂಜಿಯರ್ಸ್ ಎಮಲ್ಷನ್.

ವೈದ್ಯಚಿಕಿತ್ಸೆ ಮಾಡತಕ್ಕವರಿಗೆ ಮಾದರೀ ಸೀಸೆಗಳು ಬೆಲೆಯಿಲ್ಲದೆ ಕಳುಹಿಸಲ್ಪಡುವುವು.

ಮಾರ್ಟಿನ್ ಎಂಡ್ ಹಾರಿಸು, (ಲಿಮಿಟೆಡ್),

ರಾಲೆಟ್ ಬಿಲ್ಡಿಂಗ್, ಪ್ರಿನ್ಸೆಸ್ ಸ್ಟ್ರೀಟ್, ಕಲ್ಕತ್ತ.

ಪ್ರೊಪ್ರೈಟರುಗಳು :—ದಿ ಏಂಜಿಯರ್ಸ್ ಕೆಮಿಕಲ್ ಕಂಪೆನಿ, ಲಿಮಿಟೆಡ್.



Printed at the ANTISEPTIC PRESS' and Published by the Proprietor H. KRISHNA RAU, Madras.

ಕರ್ನಾಟಕ ಇತಿಹಾಸ ಸಂಶೋಧಕ ಮಂಡಳ
ಧಾರವಾಡ.

# ಪ್ರಾಚೀನ ಕರ್ನಾಟಕ

ಸಂಪಾದಕರು:— ಶ್ರೀ. ಆಲೂರ ವೆಂಕಟರಾಯರು, ಬಿ. ಎ. ಎಲ್ಎಲ್. ಬಿ.

| | | |
|---|---|---|
| ಸಂಪುಟ ೨ | ಚೈತ್ರ, ೧೮೫೫. ಏಪ್ರಿಲ್, ೧೯೩೩. | ಸಂಚಿಕೆ ೧ |



| | |
|---|---|
| ವಾರ್ಷಿಕ ಚಂದಾ ರೂ. ೨ | ಬಿಡಿ ಸಂಚಿಕೆ ರೂಪಾಯಿ ೧ |

ಚಾಳುಕ್ಯ ವಿಕ್ರಮ ವರ್ಷ ೮೫೮.

# ಕರ್ನಾಟಕ ಇತಿಹಾಸ ಸಂಶೋಧಕ ಮಂಡಲದ
# ಉದ್ದೇಶಗಳು

(೧) ಕರ್ನಾಟಕದಲ್ಲಿ ಇತಿಹಾಸ ಸಂಶೋಧನದ ಕೆಲಸಕ್ಕೆ ಉತ್ತೇಜನವನ್ನು ಕೊಡುವುದು; ಮತ್ತು ವಿಶೇಷತಃ ಕರ್ನಾಟಕ ದೇಶದ ಇತಿಹಾಸ ಸಂಶೋಧನವನ್ನು ಮಾಡುವುದು; ಹಾಗೂ ಮಾಡಿದ ಸಂಶೋಧನವನ್ನು ಪ್ರಕಟಿಸುವುದು.

(೨) ಈ ಇತಿಹಾಸ ಸಂಶೋಧನ ಕಾರ್ಯಕ್ಕೆ ಅನುಕೂಲವಾಗುವಂಥ ಗ್ರಂಥಸಂಗ್ರಹಾಲಯವನ್ನೂ ಪ್ರಾಚೀನ ವಸ್ತು ಸಂಗ್ರಹಾಲಯುವನ್ನೂ ಏರ್ಪಡಿಸುವುದು.

(೩) ಕರ್ನಾಟಕ ಇತಿಹಾಸ ಸಂಶೋಧನ ವಿಷಯಕವಾದ ನಿಯತಕಾಲಿಕವನ್ನು ಎಂದರೆ ಪತ್ರಿಕೆಯನ್ನು ಪ್ರಕಟಿಸುವುದು; ಮತ್ತು ಮಂಡಲದ ವರದಿಯನ್ನೂ ಐತಿಹಾಸಿಕ ಪುಸ್ತಕಗಳನ್ನೂ ಕಾಲಕಾಲಕ್ಕೆ ಪ್ರಸಿದ್ಧಪಡಿಸುವುದು.

(೪) ಉಪನ್ಯಾಸ, ಮ್ಯಾಜಿಕ್ ಲ್ಯಾಂಟರ್ನ, ಪ್ರದರ್ಶನ ಇವೇ ಮುಂತಾದ ಸಾಧನಗಳಿಂದ ಜನರಲ್ಲಿ ಐತಿಹಾಸಿಕ ಅಭ್ಯಾಸದ ಅಭಿರುಚಿಯನ್ನುಂಟು ಮಾಡುವುದು.

(೫) ಸಂಪೂರ್ಣವಾದ ಮತ್ತು ಸಶಾಸ್ತ್ರವಾದ ಕರ್ನಾಟಕ-ಇತಿಹಾಸವನ್ನು ಬರೆಯುವುದಕ್ಕೆ ಆವಶ್ಯಕವಾದ ಶಿಲಾಶಾಸನ, ತಾಮ್ರಶಾಸನ, ನಾಣ್ಯ ಮುಂತಾದ ಐತಿಹಾಸಿಕ ಸಾಮುಗ್ರಿಯನ್ನು ಕಲೆಹಾಕುವುದು; ಹಾಗೂ ಆ ಸಾಧನ ಸಾಮುಗ್ರಿಯಿಂದ ಅಂತಹ ಸಪ್ರಮಾಣವಾದ ಇತಿಹಾಸವನ್ನು ಬರೆದು, ಪ್ರಸಿದ್ಧಿಸುವುದು.

(೬) ಇತರ ಇತಿಹಾಸ ಸಂಶೋಧಕ ಸಂಸ್ಥೆಗಳ ಹಾಗೂ ಇತಿಹಾಸ ಸಂಶೋಧಕರ ಸಾಹಾಯ್ಯವು ಈ ಮಂಡಲಕ್ಕೆ ದೊರೆಯುವಂತೆ ಅವರ ಸಂಗಡ ಸಹಕಾರವನ್ನುಂಟು ಮಾಡುವುದು.

## ಸದಸ್ಯರ ಹಾಗೂ ಹಿತಚಿಂತಕರ
## ವರ್ಗಗಳು

(೧) ಐನೂರು ರೂಪಾಯಿಗಳಿಗೆ ಕಡಿಮೆಯಿಲ್ಲದೆ ಧನಸಹಾಯ ಮಾಡುವವರು ಆಶ್ರಯದಾತರು.

(೨) ಮೂರುನೂರು ರೂಪಾಯಿಗಳಿಗೆ ಕಡಿಮೆಯಿಲ್ಲದೆ ಧನಸಹಾಯ ಮಾಡುವವರು ಅ ವರ್ಗದ ಸನ್ಮಾನ್ಯ ಸದಸ್ಯರು.

(೩) ಒಂದು ನೂರು ರೂಪಾಯಿಗಳಿಗೆ ಕಡಿಮೆಯಿಲ್ಲದೆ ಧನಸಹಾಯ ಮಾಡುವವರು ಬ ವರ್ಗದ ಸನ್ಮಾನ್ಯ ಸದಸ್ಯರು.

(೪) ಐವತ್ತು ರೂಪಾಯಿಗಳಿಗೆ ಕಡಿಮೆಯಿಲ್ಲದೆ ಧನಸಹಾಯ ಮಾಡುವವರು ಕ ವರ್ಗದ ಸನ್ಮಾನ್ಯ ಸದಸ್ಯರು.

(೫) ಪ್ರತಿವರ್ಷಕ್ಕೆ ಹತ್ತು ರೂಪಾಯಿಗಳಿಗೆ ಕಡಿಮೆಯಿಲ್ಲದೆ ಧನಸಹಾಯ ಮಾಡುವವರು ಅ ವರ್ಗದ ವಾರ್ಷಿಕ ಸದಸ್ಯರು.

(೬) ಪ್ರತಿವರ್ಷಕ್ಕೆ ಐದು ರೂಪಾಯಿಗಳಿಗೆ ಕಡಿಮೆಯಿಲ್ಲದೆ ಧನಸಹಾಯ ಮಾಡುವವರು ಬ ವರ್ಗದ ವಾರ್ಷಿಕ ಸದಸ್ಯರು.

(೭) ಪ್ರತಿವರ್ಷಕ್ಕೆ ಮೂರು ರೂಪಾಯಿಗಳಿಗೆ ಕಡಿಮೆಯಿಲ್ಲದೆ ಧನಸಹಾಯ ಮಾಡುವವರು ಅ ವರ್ಗದ ಹಿತಚಿಂತಕರು.

(೮) ಪ್ರತಿವರ್ಷಕ್ಕೆ ಒಂದು ರೂಪಾಯಿಗೆ ಕಡಿಮೆಯಿಲ್ಲದೆ ಧನಸಹಾಯ ಮಾಡುವವರು ಬ ವರ್ಗದ ಹಿತಚಿಂತಕರು.

# ವಿಷಯಾನುಕ್ರಮಣಿಕೆ.



# ಪ್ರಾಚೀನ ಕರ್ನಾಟಕ

| ಸಂಪುಟ ೨ | ಚೈತ್ರ, ೧೮೫೫. ಏಪ್ರೈಲ್, ೧೯೩೩. | ಸಂಚಿಕೆ ೧ |
|---|---|---|

## ಶ್ರೀಮನ್ಮಧ್ವಾಚಾರ್ಯರ ಮತ್ತು ಅವರ ಸಾಕ್ಷಾತ್ ಶಿಷ್ಯರ ಕಾಲನಿರ್ಣಯ.



ಲೇಖಕರು:— **ಶ್ರೀ. ನಾರಾಯಣಾಚಾರ್ಯ ಶ್ರೀನಿವಾಸಾಚಾರ್ಯ ರಾಜಪುರೋಹಿತ.**

(೧) ಶ್ರೀಮನ್ಮಧ್ವಾಚಾರ್ಯರು ತಾವು ಬರೆದ "ಮಹಾಭಾರತ ತಾತ್ಪರ್ಯ ನಿರ್ಣಯ" ಎಂಬ ಗ್ರಂಥದಲ್ಲಿ ತಮ್ಮ ಜನ್ಮಕಾಲವನ್ನು ಹೀಗೆ ಸ್ಪಷ್ಟವಾಗಿ ಹೇಳಿದ್ದಾರೆ:—

ಚತುಸ್ಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ ।
ಜಾತಃ ಪುನರ್ವಿಪ್ರತನುಃ ಸಭೀಮೋ ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ॥೩೨-೧೩೧॥

ಅರ್ಥ:- ಕಲಿಯುಗದಲ್ಲಿ ೪೩೦೦ ಸಂವತ್ಸರಗಳು ಗತಿಸುತ್ತಿರಲು, ಪೃಥ್ವಿಯಲ್ಲಿ ಆ ಭೀಮನು ಪುನಃ ಬ್ರಾಹ್ಮಣ ವಂಶದಲ್ಲಿ ಹುಟ್ಟಿ, ದೈತ್ಯರಿಂದ ಅಡಗಿಸಲ್ಪಟ್ಟಂಥ ಹರಿತತ್ತ್ವವನ್ನು ಹೇಳಿದನು-

ಶ್ರೀಮನ್ಮಧ್ವಾಚಾರ್ಯರು ಗತ ಕಲಿಪ್ರಮಾಣ ೪೩೦೦ ರಲ್ಲಿ ಎಂದರೆ ೧೧೬೦ನೆಯ ಶಕ ವರ್ಷದ ಸಿದ್ಧಾರ್ಥಿ ಸಂವತ್ಸರದಲ್ಲಿ (ಅರ್ಥಾತ್ ೧೨೩೮ನೆಯ ಕ್ರಿಸ್ತ ವರ್ಷದಲ್ಲಿ) ಅವತರಿಸಿದರೆಂಬುದು ಈ ಶ್ಲೋಕದಿಂದ ಸ್ಪಷ್ಟವಾಗುತ್ತದೆ. ಈ ಕಾಲವನ್ನು ಸ್ವತಃ ಶ್ರೀಮನ್ಮಧ್ವಾಚಾರ್ಯರೇ ಹೇಳಿದ್ದರಿಂದ ಇದು, ಅತ್ಯಂತ ಬಲವತ್ತರವಾದ ಪ್ರಮಾಣವಾಗಿರುತ್ತದೆ.

ಈ ಪ್ರಮಾಣದಿಂದ "ಮಠೀಯ ಗುರುಪರಂಪರಾ ಪೀಳಿಗೆ"ಯ ಮೇಲೆ ಸ್ವಚ್ಛವಾದ ಪ್ರಕಾಶವು ಬಿದ್ದು, ಆ ಪೀಳಿಗೆಯಲ್ಲಿ ಮೊದಲನೆಯ ಜಗದ್ಗುರುಗಳಾದ ಶ್ರೀಮದಾನಂದತೀರ್ಥರಿಂದ ಆರಂಭ ಮಾಡಿಕೊಂಡು, ಶ್ರೀಮಜ್ಜಯತೀರ್ಥರ ವರೆಗೆ ಆರು ಜನ ಜಗದ್ಗುರುಗಳ ನಿರ್ಯಾಣಕಾಲದ ಶಕ ವರ್ಷಗಳು ತಪ್ಪಿರುತ್ತವೆಂಬುದು ಸ್ಪಷ್ಟವಾಗಿ ಒಡೆದು ಕಾಣುತ್ತದೆ. ಅದು ಹೇಗೆಂದರೆ,

ಮೊದಲನೆಯ ಜಗದ್ಗುರುಗಳಾದ ಶ್ರೀಮನ್ಮಧ್ವಾಚಾರ್ಯರ ನಿರ್ಯಾಣಕಾಲದ ಶಕ ವರ್ಷವನ್ನೇ ಮೊದಲು ತೆಗೆದುಕೊಳ್ಳುವಾ, ಮಠೀಯ ಗುರುಪರಂಪರಾ ಪೀಳಿಗೆ"ಯಲ್ಲಿ ಶ್ರೀಮನ್ಮಧ್ವಾಚಾರ್ಯರು ೧೨೩೯ನೆಯ ಶಕ ವರ್ಷದ ಪಿಂಗಳ ಸಂವತ್ಸರದಲ್ಲಿ ಅದೃಶ್ಯರಾದರೆಂದು ಹೇಳಿದೆ. ಆದರೆ ಸ್ವತಃ ಈ ಶ್ರೀಮದಾಚಾರ್ಯರೇ ೧೧೬೦ನೆಯ ಶಕವರ್ಷದಲ್ಲಿ ತಾವು ಹುಟ್ಟಿದ್ದೇವೆಂದು ಮಹಾಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿ

ದ್ದಾರೆ. ಇತ್ಯರ್ಥವೇನೆಂದರೆ, ಶ್ರೀಮನ್ಮಧ್ವಾಚಾರ್ಯರು ೧೧೯೯ನೆಯ ಶಕವರ್ಷದಲ್ಲಿ ಪೃಥ್ವಿಯ ಮೇಲೆ ಇನ್ನೂ ಅವತರಿಸಿಯೇ ಇರಲಿಲ್ಲ. ಹೀಗಿದ್ದುದರಿಂದ ಹುಟ್ಟುವುದಕ್ಕಿಂತ ಮೊದಲೇ ಇವರು ಅದೃಶ್ಯರಾದರೆಂದು ಹೇಳುವುದು—ಅಸಂಬದ್ಧಪ್ರಲಾಪವೇ ಸರಿ. ಅತಏವ ಮಠೀಯ ಗುರುಪರಂಪರಾ ಪೀಳಿಗೆಯಲ್ಲಿ, ಶ್ರೀಮನ್ಮಧ್ವಾಚಾರ್ಯರು ಅದೃಶ್ಯರಾದದ್ದು ೧೧೯೯ನೆಯ ಶಕವರ್ಷದಲ್ಲಿ ಎಂದು ಹೇಳಿರುವುದು ಸರ್ವಥೈವ- ಅಸಾಧುವಾಗಿರುತ್ತದೆಂಬುದು ಸಿದ್ಧ.

ಆದರೆ ಶ್ರೀಮನ್ಮಧ್ವಾಚಾರ್ಯರ ನಿರ್ಯಾಣಕಾಲದ ಸಂವತ್ಸರವು ಮಾತ್ರ ಪಿಂಗಳ ವೆಂಬುದು ಸತ್ಯವಾಗಿದೆ. ಇವರದು ಒಬ್ಬರದೇ ಮಾತ್ರವಲ್ಲ; ಈ ಮಠೀಯ ಗುರುಪರಂಪರಾ ಪೀಳಿಗೆಯಲ್ಲಿರುವ ಸಕಲ ಜಗದ್ಗುರುಗಳ ನಿರ್ಯಾಣ ಕಾಲದ ಸಂವತ್ಸರಗಳೆಲ್ಲವೂ ಸತ್ಯವಾಗಿ ರುತ್ತವೆ. ಈ ವಿಷಯದಲ್ಲಿ ಯಾರದೂ ಮತಭೇದವಿಲ್ಲ. ಇದೇಮೇರೆಗೆ ಈ ಮಠೀಯ ಗುರುಪರಂಪರಾಪೀಳಿಗೆಯಲ್ಲಿರುವ ಸಕಲ ಜಗದ್ಗುರುಗಳ ನಿರ್ಯಾಣ ಕಾಲದ ಮಾಸ, ಪಕ್ಷ, ತಿಥಿಗಳೂ ಸತ್ಯವಾಗಿರುತ್ತವೆ. ಏಕೆಂದರೆ, ಸದ್ವೈಷ್ಣವರೆಲ್ಲರೂ ಪ್ರತಿವರ್ಷ ಎಲ್ಲ ಜಗದ್ಗು ರುಗಳ ಪುಣ್ಯತಿಥಿಗಳನ್ನು ಪಾಲಿಸುತ್ತಿರುವುದರಿಂದ ಈ ಪ್ರತಿಯೊಬ್ಬ ಜಗದ್ಗುರುವಿನ ಪುಣ್ಯ ತಿಥಿಯ ಮಾಸ, ಪಕ್ಷ, ತಿಥಿಗಳು ಎಲ್ಲ ಸದ್ವೈಷ್ಣವರ ಹೃದಯದಲ್ಲಿ ಸ್ಥಿರವಾಗಿ ವಾಸ ಮಾಡಿರುತ್ತವೆ. ಇರಲಿ.

ಶ್ರೀಮದಾನಂದತೀರ್ಥರು, ಹುಟ್ಟುವುದಕ್ಕಿಂತ ಮೊದಲೇ ಎರಡು ವರ್ಷಗಳ ಹಿಂದೆ ನಿರ್ಯಾಣ ಹೊಂದಿದರೆಂದು ಬರೆದ ಗೃಹಸ್ಥನು, ಎಂದರೆ ಮೊದಲಿನ ಜಗದ್ಗುರುಗಳ ನಿರ್ಯಾಣಕಾಲದ ವಿಷಯದಲ್ಲಿ ಬಹಳೇ ಅಪರಿಚಿತನಾದ ಲೇಖಕನು, ಮೊದಲಿನ ಈ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕ ವರ್ಷಗಳನ್ನು ಹೀಗೆ ಬರೆದಿದ್ದಾನೆ:—

| ಜಗದ್ಗುರುಗಳು | ಮಠೀಯ ಗುರುಪರಂಪರಾ ಪೀಳಿಗೆಯಲ್ಲಿ ಹೇಳಿರುವ ನಿರ್ಯಾಣಕಾಲದ ಸಂವತ್ಸರಗಳು | ಮಠೀಯ ಗುರುಪರಂಪರಾ ಪೀಳಿಗೆಯಲ್ಲಿ ಹೇಳಿರುವ ನಿರ್ಯಾಣಕಾಲದ ಶಕವರ್ಷಗಳು |
|---|---|---|
| ೧ನೆಯ ಜಗದ್ಗುರು | ಪಿಂಗಳ | ೧೧೯೯ |
| ೨ನೆಯ ,, | ರಕ್ತಾಕ್ಷಿ | ೧೧೨೬ |
| ೩ನೆಯ ,, | ಶ್ರೀಮುಖ | ೧೧೩೫ |
| ೪ನೆಯ ,, | ವಿಕೃತಿ | ೧೧೫೨ |
| ೫ನೆಯ ,, | ವಿಶ್ವಾವಸು | ೧೧೬೭ |
| ೬ನೆಯ ,, | ವಿಭವ | ೧೧೯೦ |
| ೭ನೆಯ ,, | ಅಂಗಿರಾ | ೧೨೫೪ |

ಈ ಮೊದಲಿನ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳ ವಿಷಯದಲ್ಲಿ ಈ ಲೇಖಕನು ತೀರ ಅಪರಿಚಿತ ಮನುಷ್ಯನಾದುದರಿಂದ ಈತನು ಈ ಜಗದ್ಗುರುಗಳ ನಿರ್ಯಾಣ ಕಾಲದ ಶಕವರ್ಷಗಳನ್ನು, ಕೇವಲ ಇವರ ನಿರ್ಯಾಣಕಾಲದ ಸಂವತ್ಸರಗಳನ್ನು ಆಧಾರ ವಾಗಿಟ್ಟುಕೊಂಡು ಬರೆಯಬೇಕಾಗಿದೆಯೇ ಹೊರತು ಇವನಿಗೆ ಅನ್ಯಮಾರ್ಗವೇ ಇಲ್ಲ. ಆದುದರಿಂದಲೇ ಈತನು ೧ನೆಯ ಜಗದ್ಗುರುಗಳ ನಿರ್ಯಾಣಕಾಲದ ಪಿಂಗಳ ಸಂವತ್ಸರ ದಿಂದ, ೨ನೆಯ ಜಗದ್ಗುರುಗಳ ನಿರ್ಯಾಣಕಾಲದ ರಕ್ತಾಕ್ಷಿ ಸಂವತ್ಸರದ ವರೆಗೆ ಎಣಿಸಿ, ೮೬ ವರ್ಷಗಳನ್ನು ೧ನೆಯ ಜಗದ್ಗುರುಗಳ ನಿರ್ಯಾಣಕಾಲದ ೧೧೯೧ನೆಯ ಶಕವರ್ಷದಲ್ಲಿ ಸೇರಿಸಿ, ೧೨೭೭ನೆಯ ಶಕವರ್ಷವು ೨ನೆಯ ಜಗದ್ಗುರುಗಳ ನಿರ್ಯಾಣಕಾಲವೆಂದು ಬರೆ ದಿದ್ದಾನೆ. ಇದೇ ಪದ್ಧತಿಯಿಂದ ೩ನೆಯ, ೪ನೆಯ, ೫ನೆಯ, ೬ನೆಯ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಬರೆದಿದ್ದಾನೆ. ಇಲ್ಲಿ ಮೂಲತಃ ೧ನೆಯ ಜಗದ್ಗುರುಗಳ ನಿರ್ಯಾಣಕಾಲದ ೧೧೯೧ನೆಯ ಶಕವರ್ಷವೇ ತಪ್ಪಾಗಿದ್ದು, ಈ ತಪ್ಪಾದ ಶಕವರ್ಷವನ್ನೇ ಆಧಾರವಾಗಿಟ್ಟುಕೊಂಡು, ಮುಂದಿನ ೫ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷ ಗಳನ್ನು ಬರೆದದ್ದರಿಂದ ಮೊದಲಿನ ಈ ಆರೂ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕ ವರ್ಷಗಳು ತಪ್ಪೆಂಬುದು ಸಿದ್ಧ.

ಇದರಿಂದ ವ್ಯಕ್ತವಾದದ್ದೇನೆಂದರೆ:- (೧) ಮೊದಲಿನ ಈ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಬರೆದವನು, ಈ ಪ್ರಕಾರ ಸರ್ವಥೈವ ತಪ್ಪಿದ್ದರಿಂದ ಇವನು ಇವರ ಸಮಕಾಲೀನ ಲೇಖಕನೂ ಅಲ್ಲ; ಸಮೀಪಕಾಲೀನ ಲೇಖಕನೂ ಅಲ್ಲ; ಬಹು ದೂರ ಕಾಲೀನ ಲೇಖಕನಾಗಿದ್ದಾನೆಂಬುದು ಎಂದರೆ ಇವರ ನಿರ್ಯಾಣದ ನಿಜವಾದ ಕಾಲವನ್ನರಿಯ ದವನೆಂಬುದು ಸ್ಪಷ್ಟವಾಯಿತು. (೨) ಮೊದಲಿನ ಈ ೬ ಜನ ಜಗದ್ಗುರುಗಳ ಸಮಕಾಲೀನ ಲೇಖಕರು ಈ ಮಠೀಯ ಗುರುಪರಂಪರಾ ಪೀಳಿಗೆಯಲ್ಲಿ ಗುರುಗಳ ನಿರ್ಯಾಣಕಾಲವನ್ನು ಬರೆಯುವಾಗ್ಗೆ, ನಿರ್ಯಾಣಕಾಲದ ಸಂವತ್ಸರ, ಮಾಸ, ಪಕ್ಷ, ತಿಥಿಗಳನ್ನು ಮಾತ್ರ ಬರೆದಿಡು ತ್ತಿದ್ದರೇ ಹೊರತು ನಿರ್ಯಾಣಕಾಲದ ಶಕವರ್ಷವನ್ನು ಬರೆದಿಡುತ್ತಿದ್ದಿಲ್ಲವೆಂಬುದು ಇದರಿಂದ ನಿಷ್ಪನ್ನವಾಯಿತು. (೩) ಆದುದರಿಂದಲೇ ಮುಂದೆ ಬಹುಕಾಲದ ಮೇಲೆ ಒಬ್ಬ ಲೇಖಕನು ಮೊದಲಿನ ಈ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಬರೆಯುವುದಕ್ಕೆ ಹೋಗಿ, ಈ ಪ್ರಕಾರ ಅಜ್ಞಾನದಿಂದ ಅಹೇತುಕವಾದ ಪ್ರಮಾದಗಳನ್ನು ಮಾಡಿದ್ದಾನೆಯೇ ಹೊರತು ಬುದ್ಧಿಪೂರ್ವಕವಾಗಿ ಸಹೇತುಕವಾದ ಪ್ರಮಾದಗಳನ್ನು ಮಾಡಿರುವುದಿಲ್ಲೆಂಬುದು ಸ್ಪಷ್ಟವಾಗುತ್ತದೆ.

(೨) ಇನ್ನು, ಇದೇ ಲೇಖಕನು ೭ನೆಯ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷ ವನ್ನು ಬರೆಯುವುದಕ್ಕೆ ಹೋಗಿದ್ದರೆ, ಮೇಲೆ, ೬ನೆಯ ಜಗದ್ಗುರುಗಳ ವರೆಗೆ ನಿರ್ಯಾಣ ಕಾಲದ ಶಕವರ್ಷಗಳನ್ನು ಯಾವ ಪದ್ಧತಿಯಿಂದ ಬರೆಯುತ್ತ ಬಂದನೋ, ಅದೇ ಪದ್ಧತಿ ಯಿಂದ ಇದನ್ನೂ ಬರೆಯುತ್ತಿದ್ದನು. ಹೇಗೆಂದರೆ, ೬ನೆಯ ಜಗದ್ಗುರುಗಳ ನಿರ್ಯಾಣಕಾಲದ ವಿಭವ ಸಂವತ್ಸರದಿಂದ ೭ನೆಯ ಜಗದ್ಗುರುಗಳ ನಿರ್ಯಾಣಕಾಲದ ಅಂಗಿರಾ ಸಂವತ್ಸರದ ವರೆಗೆ ಎಣಿಸಿ, ಆ ನಾಲ್ಕು ವರ್ಷಗಳನ್ನು, ೬ನೆಯ ಜಗದ್ಗುರುಗಳ ನಿರ್ಯಾಣಕಾಲದ ೧೧೯೦ ನೆಯ ಶಕವರ್ಷದಲ್ಲಿ ಕೂಡಿಸಿ, ೧೧೯೪ನೆಯ ಶಕವರ್ಷವು, ೭ನೆಯ ಜಗದ್ಗುರುಗಳ ನಿರ್ಯಾಣಕಾಲವೆಂದು ಬರೆಯುತ್ತಿದ್ದನು. ಇಷ್ಟೇ ಇವನ ಸಾಮರ್ಥ್ಯವು. ಈ ೭ನೆಯ ಜಗ

ದ್ಗುರುಗಳ ನಿರ್ಯಾಣಕಾಲವು ೧೨೫೪ನೆಯ ಶಕವರ್ಷವೆಂಬುದು ಈತನಿಗೆ ತಿಳಿಯುವುದೇ ಸರ್ವಥೈವ ಅಶಕ್ಯವಾಗಿದೆ. ಇತ್ಯರ್ಥವೇನೆಂದರೆ, ಈ ಮಠೀಯ ಗುರುಪರಂಪರಾ ಪೀಳಿಗೆಯಲ್ಲಿ, ೭ನೆಯ ಜಗದ್ಗುರುಗಳ ನಿರ್ಯಾಣಕಾಲವು ೧೨೫೪ ನೆಯ ಶಕವರ್ಷವೆಂದು ಬರೆದ ಮನುಷ್ಯನು ಈ ಲೇಖಕನು ಅಲ್ಲೆಂಬುದು ಸಿದ್ಧ. ಅರ್ಥಾತ್ ಈ ೧೨೫೪ನೆಯ ಶಕವರ್ಷವು, ಪ್ರಾಚೀನ ಕಾಲದಲ್ಲಿಯೇ ಎಂದರೆ ೭ ನೆಯ ಜಗದ್ಗುರುಗಳು ನಿರ್ಯಾಣಹೊಂದಿದ ಕಾಲದಲ್ಲಿಯೇ ಬರೆಯಲ್ಪಟ್ಟಿತ್ತೆಂಬುದು ಸ್ಪಷ್ಟವಾಗುತ್ತದೆ. ಫಲಿತಾರ್ಥವೇನೆಂದರೆ, ೭ನೆಯ ಜಗದ್ಗುರುಗಳ ನಿರ್ಯಾಣಕಾಲದಿಂದ ಈ ಮಠೀಯ ಗುರುಪರಂಪರಾಪೀಳಿಗೆಯಲ್ಲಿ ನಿರ್ಯಾಣಕಾಲದ ಸಂವತ್ಸರ, ಮಾಸ, ಪಕ್ಷ, ತಿಥಿಗಳನ್ನಷ್ಟೇ ಅಲ್ಲ ನಿರ್ಯಾಣಕಾಲದ ಶಕವರ್ಷವನ್ನೂ ಸಹ ಬರೆದಿಡುವ ಸಂಪ್ರದಾಯವು ಪ್ರಾರಂಭವಾಯಿತೆಂಬುದು ಸಿದ್ಧ. ಆತಏವ **ಈ ಪೀಳಿಗೆಯಲ್ಲಿ ೭ ನೆಯ ಜಗದ್ಗುರುಗಳಿಂದ ಆರಂಭ ಮಾಡಿಕೊಂಡು, ಮುಂದಿನ ಎಲ್ಲ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳು ಐತಿಹಾಸಿಕ ಸತ್ಯವಾಗಿರುತ್ತವೆಂಬುದು ಸಿದ್ಧ.**

(೩) ಇನ್ನು, ಈ ಪೀಳಿಗೆಯಲ್ಲಿ ಉಳಿದ ಮೊದಲಿನ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ಸತ್ಯವಾದ ಶಕವರ್ಷಗಳನ್ನು ಕಂಡು ಹಿಡಿಯುವಾ,

ಮೊದಲಿನ ೬ ಜನ ಜಗದ್ಗುರುಗಳ ನಿರ್ಯಾಣಕಾಲದ ತಪ್ಪಾದ ಶಕವರ್ಷಗಳಿಗೆ ಅನುರೂಪವಾದ ೭ನೆಯ ಜಗದ್ಗುರುಗಳ ನಿರ್ಯಾಣಕಾಲದ ತಪ್ಪಾದ ಶಕವರ್ಷವು ೧೧೯೪ ಎಂಬುದನ್ನು ಈ ಮೊದಲೇ ಹೇಳಿದ್ದೇವೆ. ಮತ್ತು ಈ ೭ನೆಯ ಜಗದ್ಗುರುಗಳ ನಿರ್ಯಾಣಕಾಲದ ೧೨೫೪ ನೆಯ ಶಕವರ್ಷವು ಐತಿಹಾಸಿಕ ಸತ್ಯವೆಂದು ಇದೇ ಈಗ ಸಿದ್ಧಮಾಡಿದ್ದೇವೆ.

೭ನೆಯ ಜಗದ್ಗುರುಗಳ ನಿರ್ಯಾಣಕಾಲದ ಸತ್ಯವಾದ ೧೨೫೪ನೆಯ ಶಕವರ್ಷಕ್ಕಿಂತ
,, ,, ,, ತಪ್ಪಾದ ೧೧೯೪ನೆಯ ಶಕವರ್ಷವು

———

೬೦ ವರ್ಷಗಳಿಂದ ಕಡಿಮೆಯಾಗಿದೆ.

ಅರ್ಥಾತ್ ಈ ೭ನೆಯ ಜಗದ್ಗುರುಗಳ ನಿರ್ಯಾಣಕಾಲದ ತಪ್ಪಾದ ೧೧೯೪ನೆಯ ಶಕವರ್ಷದಲ್ಲಿ ಕಡಿಮೆಯಾದ ೬೦ ವರ್ಷಗಳನ್ನು ಕೂಡಿಸಿದರೆ, ಈ ಜಗದ್ಗುರುವಿನ ನಿರ್ಯಾಣಕಾಲದ ಸತ್ಯವಾದ ಶಕವರ್ಷವು ೧೨೫೪ ಬರುತ್ತದೆಂಬುದು ಸಿದ್ಧವಾಗಿಯೇ ಇದೆ. ಈ ಸಿದ್ಧಾಂತವು, ಈ ತಪ್ಪಾದ ಶಕವರ್ಷಕ್ಕೆ ಅನುರೂಪವಾದ ಮೊದಲಿನ ಆರೂಜನ ಜಗದ್ಗುರುಗಳ ನಿರ್ಯಾಣಕಾಲದ ತಪ್ಪಾದ ಶಕವರ್ಷಗಳಿಗೂ ಅನ್ವಯಿಸುತ್ತದೆ. ಆದುದರಿಂದ ಮೊದಲಿನ ೬ ಜನ ಜಗದ್ಗುರುಗಳಲ್ಲಿ ಪ್ರತಿಯೊಬ್ಬರ ನಿರ್ಯಾಣಕಾಲದ ತಪ್ಪಾದ ಶಕವರ್ಷದಲ್ಲಿ ೬೦ ವರ್ಷಗಳನ್ನು ಸೇರಿಸಿದರೆ, ಈ ಪ್ರತಿಯೊಬ್ಬ ಜಗದ್ಗುರುವಿನ ನಿರ್ಯಾಣಕಾಲದ ಸತ್ಯವಾದ ಶಕವರ್ಷವು ಸಿದ್ಧವಾಗುವದು. ಅದು ಹೇಗೆಂದರೆ:-

| | | | ತಪ್ಪಾದ ಶ. ವ. | ಸತ್ಯವಾದ ಶಕವರ್ಷ |
|---|---|---|---|---|
| ೧ನೆಯ | ಜಗದ್ಗುರುಗಳ | ನಿರ್ಯಾಣಕಾಲದ | ೧೧೧೯ + ೬೦ | =೧೧೭೯ |
| ೨ನೆಯ | ,, | ,, | ೧೧೨೬ + ೬೦ | =೧೧೮೬ |
| ೩ನೆಯ | ,, | ,, | ೧೧೩೫ + ೬೦ | =೧೧೯೫ |
| ೪ನೆಯ | ,, | ,, | ೧೧೫೨ + ೬೦ | =೧೨೧೨ |
| ೫ನೆಯ | ,, | ,, | ೧೧೬೭ + ೬೦ | =೧೨೨೭ |
| ೬ನೆಯ | ,, | ,, | ೧೧೯೦ + ೬೦ | =೧೨೫೦ |

ಸಾರಾಂಶವೇನೆಂದರೆ, ಇಷ್ಟೆಲ್ಲ ವಿವೇಚನೆಯಿಂದ, ಶ್ರೀಮನ್ಮಧ್ವಾಚಾರ್ಯರು ೧೧೬೧ನೆಯ ಶಕವರ್ಷದ ಸಿದ್ಧಾರ್ಥಿಸಂವತ್ಸರದಲ್ಲಿ ಅವತರಿಸಿ, ಮುಂದೆ ೭೮ ವರ್ಷಗಳ ಮೇಲೆ ೧೨೩೯ನೆಯ ಶಕವರ್ಷದ ಪಿಂಗಳ ಸಂವತ್ಸರದಲ್ಲಿ ಅದೃಶ್ಯರಾದರೆಂಬ ನನ್ನ ಮತವು ಐತಿಹಾಸಿಕ ಸತ್ಯವೆಂದು ಸಿದ್ಧವಾಯಿತು. ಇದೇ ಮೇರೆಗೆ ಇವರ ಮುಂದಿನ ಎಲ್ಲ ಜಗದ್ಗುರುಗಳ ನಿರ್ಯಾಣಕಾಲದ ಸತ್ಯವಾದ ಶಕವರ್ಷಗಳೂ ನಿರ್ಣಯಿಸಲ್ಪಟ್ಟವು.

(೪) ಇನ್ನು, ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ಶ್ರೀಮದಾಚಾರ್ಯರ ಕಾಲನಿರ್ಣಯವನ್ನು ಮಾಡುವುದಕ್ಕೆ ಹೊರಟು, ಬುದ್ಧಿಪೂರ್ವಕವಾಗಿ ಪ್ರಮಾದಗಳನ್ನು ಮಾಡಿ, ಹೇಗೆ ಅಕ್ಷಮ್ಯವಾದ ಅಪರಾಧವನ್ನು ಮಾಡಿದ್ದಾರೆಂಬುದನ್ನು ತೋರಿಸುವಾ; ಇದಕ್ಕೋಸ್ಕರ ಬೇಕಾಗಿರುವ ಮೊದಲಿನ ಹನ್ನೊಂದು ಜನ ಜಗದ್ಗುರುಗಳ ನಿರ್ಯಾಣಕಾಲದ ಎಲ್ಲ ಮತಗಳ ಶಕವರ್ಷಗಳನ್ನು ಈ ಸ್ಥಳದಲ್ಲಿ ಬರೆದು, ಇವುಗಳನ್ನು ತುಲನಾತ್ಮಕ ದೃಷ್ಟಿಯಿಂದ ಪರೀಕ್ಷಿಸಿ, ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರ ಮತವು ಹೇಗೆ ಸರ್ವಥೈವ ಲಾಘುವಾಗಿರುತ್ತದೆಂಬುದನ್ನು ಸಿದ್ಧಪಡಿಸುವಾ,

| | ೧ನೆಯ ಕೋಷ್ಟಕ | | ೨ನೆಯ ಕೋಷ್ಟಕ | ೩ನೆಯ ಕೋಷ್ಟಕ | ೪ನೆಯ ಕೋಷ್ಟಕ |
|---|---|---|---|---|---|
| ಜಗದ್ಗುರುಗಳು | ವಂಶೀಯ ಗುರುಪರಂಪರಾ ಪೀಳಿಗೆಯಲ್ಲಿರುವ ನಿರ್ಯಾಣಕಾಲದ ಸಂವತ್ಸರಗಳು | ವಂಶೀಯ ಗುರುಪರಂಪರಾ ಪೀಳಿಗೆಯಲ್ಲಿರುವ ನಿರ್ಯಾಣಕಾಲದ ಶಕವರ್ಷಗಳು | ನಾನು ನಿರ್ಣಯಿಸಿದ ನಿರ್ಯಾಣಕಾಲದ ಸತ್ಯವಾದ ಶಕವರ್ಷಗಳು | ಶ್ರೀ. ಸಿ. ಎಸ್. ಪದ್ಮನಾಭಾಚಾರ್ಯರು ಹೇಳುವ ನಿರ್ಯಾಣಕಾಲದ ಶಕವರ್ಷಗಳು | ಶ್ರೀ. ಸಿ. ಎಸ್. ಪದ್ಮನಾಭಾ ಚಾರ್ಯರ ಮತವು ಸತ್ಯವಾಗ ಬೇಕಾಗಿದ್ದರೆ ಈ ವಂಶೀಯ ಪೀಳಿಗೆಯಲ್ಲಿ ನಿರ್ಯಾಣಕಾಲದ ಶಕವರ್ಷಗಳು ಹೀಗೆ ಇರಬೇಕಾಗಿತ್ತು |
| ೧ನೆಯ ಜಗದ್ಗುರು | ಪಿಂಗಳ | ೧೧೧೯ | ೧೧೭೯ | ೧೨೩೯ | ೧೧೧೯ |
| ೨ನೆಯ ,, | ರಕ್ತಾಕ್ಷಿ | ೧೧೨೬ | ೧೧೮೬ | ೧೨೪೬ | ೧೧೨೬ |
| ೩ನೆಯ ,, | ಶ್ರೀಮುಖ | ೧೧೩೫ | ೧೧೯೫ | ೧೨೫೫ | ೧೧೩೫ |
| ೪ನೆಯ ,, | ವಿಕೃತಿ | ೧೧೫೨ | ೧೨೧೨ | ೧೨೭೨ | ೧೧೫೨ |
| ೫ನೆಯ ,, | ವಿಶ್ವಾವಸು | ೧೧೬೭ | ೧೨೨೭ | ೧೨೮೭ | ೧೧೬೭ |
| ೬ನೆಯ ,, | ವಿಭವ | ೧೧೯೦ | ೧೨೫೦ | ೧೩೧೦ | ೧೧೯೦ |
| ೭ನೆಯ ,, | ಅಂಗಿರಾ | ೧೨೫೪ | ೧೨೫೪ | ೧೩೧೪ | ೧೧೯೪ |
| ೮ನೆಯ ,, | ಪ್ರಮಾಥಿ | ೧೨೬೧ | ೧೨೬೧ | ೧೩೨೧ | ೧೨೦೧ |
| ೯ನೆಯ ,, | ಸರ್ವಜಿತು | ೧೨೬೯ | ೧೨೬೯ | ೧೩೨೯ | ೧೨೦೯ |
| ೧೦ನೆಯ ,, | ಖರ | ೧೨೯೮ | ೧೨೯೮ | ೧೩೫೮ | ೧೨೩೮ |
| ೧೧ನೆಯ ,, | ರಕ್ತಾಕ್ಷಿ | ೧೩೬೬ | ೧೩೬೬ | ೧೪೬೬ | ೧೩೬೬ |

ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ತಾವು ಬರೆದ ಶ್ರೀಮನ್ಮಧ್ವಾಚಾರ್ಯರ ಚರಿತ್ರೆಯಲ್ಲಿ ಶ್ರೀಮದಾಚಾರ್ಯರ ಕಾಲನಿರ್ಣಯವನ್ನು ಮಾಡುವುದಕ್ಕೆ ಪ್ರಯತ್ನ ಮಾಡಿ ದ್ದಾರೆ. ಈ ವಿಷಯದಲ್ಲಿ ಇವರು ಇದಮಿತ್ಥಂ ಎಂದು ಸಿದ್ಧಾಂತವನ್ನು ಮಾಡಿರದೆ, ಶ್ರೀಮದಾನಂದತೀರ್ಥರು ತಮ್ಮ ಜನ್ಮಕಾಲವು ೧೧೨೧ನೆಯ ಶಕವರ್ಷವೆಂದು ಮಹಾಭಾರತ ತಾತ್ಪರ್ಯ ನಿರ್ಣಯವೆಂಬ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿದಂಥ ಈ ಬಲವತ್ತರವಾದ ಪ್ರಮಾಣವನ್ನು ತಿರಸ್ಕರಿಸಿ, ೧೧೬೦ನೆಯ ಶಕವರ್ಷದಲ್ಲಿ ಶ್ರೀಮದಾಚಾರ್ಯರು ಅವತರಿಸಿದರೆಂದೂ ೧೨೩೯ನೆಯ ಶಕವರ್ಷದಲ್ಲಿ ಅದೃಶ್ಯರಾದರೆಂದೂ ಹೇಳುವುದು ಯುಕ್ತವೆಂದು ತೋರುತ್ತದೆ; ಎಂಬರ್ಥದ ಮಾತನ್ನು ಅನಿಶ್ಚಿತವಾದ ಭಾಷೆಯಿಂದ ನುಡಿದಿದ್ದಾರೆ. ಸ್ವತಃ ಶ್ರೀಮದಾನಂದತೀರ್ಥರು ತಮ್ಮ ಜನ್ಮಕಾಲವು ೧೧೨೧ನೆಯ ಶಕವರ್ಷವೆಂದು ಹೇಳಿರುವುದು ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರಿಗೆ ಗೊತ್ತಿದ್ದೂ ಸಹ ಇವರು ಈ ಬಲವತ್ತರವಾದ ಪ್ರಮಾಣವನ್ನು ವಿನಾಕಾರಣ ತಿರಸ್ಕರಿಸಿರುವುದು, ಎಂದರೆ ಇವರು ಬುದ್ಧಿಪೂರ್ವಕವಾಗಿ ಪ್ರಮಾದವನ್ನು ಮಾಡಿರುವುದು ಅಕ್ಷಮ್ಯವಾದ ಅಪರಾಧವೇ ಸರಿ. ಅತಏವ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ಶ್ರೀಮದಾಚಾರ್ಯರ ಜನ್ಮಕಾಲವು, ೧೧೬೦ನೆಯ ಶಕವರ್ಷದ ವಿಳಂಬಿ ಸಂವತ್ಸರದಲ್ಲಿ ಎಂದು ಹೇಳಿರುವುದು ಸರ್ವಥೈವ ತ್ಯಾಜ್ಯವಾಗಿದೆ. ಈ ಸ್ಥಳದಲ್ಲಿ, ಶ್ರೀಮನ್ಮಧ್ವಾಚಾರ್ಯರು ಅವ ತರಿಸಿರುವುದು ವಿಳಂಬಿ ಸಂವತ್ಸರದಲ್ಲಿ ಅಲ್ಲವೇ ಅಲ್ಲೆಂದು ಸಪ್ರಮಾಣವಾಗಿ ಸಿದ್ಧಮಾಡಿ ಮುಂದಕ್ಕೆ ಸಾಗುತ್ತೇನೆ.

(I) ೧೦ ಶ್ಲೋಕಗಳಿಂದ ರಚಿಸಲ್ಪಟ್ಟಂಥ **"ಅಣುಮಧ್ವಚರಿತಮ್"** ಎಂಬುದೊಂದು ಚಿಕ್ಕ ಪುಸ್ತಕವು ಉಡುಪಿಯ ಶ್ರೀಕೃಷ್ಣ ಮುದ್ರಣಾಲಯದಲ್ಲಿ ೧೮೪೬ನೆಯ ಶಕವರ್ಷದಲ್ಲಿ ಎಂದರೆ ೧೯೨೪ನೆಯ ಕ್ರಿಸ್ತವರ್ಷದಲ್ಲಿ ಮುದ್ರಿಸಲ್ಪಟ್ಟಿದೆ. ಇದರ ಕರ್ತೃವು ಯಾರೆಂಬುದು ಯಾರಿಗೂ ಗೊತ್ತಿಲ್ಲ. ಈ ಪುಸ್ತಕದಲ್ಲಿ ೩ನೆಯ, ೪ನೆಯ, ೫ನೆಯ ಶ್ಲೋಕಗಳಲ್ಲಿ ಶ್ರೀಮನ್ಮಧ್ವಾಚಾರ್ಯರ ಜನ್ಮಕಾಲವು, ಗತಕಲಿ ಪ್ರಮಾಣದ ೪೩೩೯ನೆಯ ಎಂದರೆ ಶಕವರ್ಷದ ೧೧೬೦ನೆಯ ವಿಲಂಬಿ ಸಂವತ್ಸರದ ಆಶ್ವೀಜ ಶುದ್ಧ ದಶಮಿ **ಬುಧವಾರ**ವೆಂದು ಹೇಳಲ್ಪಟ್ಟಿದೆ. ಆದರೆ ಶ್ರೀಮಾನ್ ದಿವಾಣಬಹಾದ್ದೂರ ಎಲ್. ಡಿ. ಸ್ವಾಮಿ ಕಣ್ಣುಪಿಳ್ಳೆ ಇವರು ರಚಿಸಿದ "ಭಾರತೀಯ ಪಂಚಾಂಗ"(೧)ದಲ್ಲಿ ೧೧೬೦ನೆಯ ಶಕವರ್ಷದ ವಿಳಂಬಿ ಸಂವತ್ಸರದ ಆಶ್ವೀನ ಶುಕ್ಲ ದಶಮೀ ತಿಥಿಯು, **ಸೋಮವಾರ** ದಿವಸ ಸೂರ್ಯೋದಯದಿಂದ ೩೩॥ ಘಟಿಕೆಗಳ ವರೆಗೆ ಎಂದರೆ ೧೩ ತಾಸು, ೩೦ ಮಿನ್ಯೂಟುಗಳ ವರೆಗೆ ಇರುತ್ತದೆಂದು ಹೇಳಿರುವುದರಿಂದ ಅಣುಮಧ್ವಚರಿತದಲ್ಲಿ ಹೇಳಿದ ಶ್ರೀಮನ್ಮಧ್ವಾಚಾರ್ಯರ ಜನ್ಮಕಾಲವು ತಪ್ಪೆಂಬುದು ಸಿದ್ಧ. ಅತಏವ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ೧೯೦೮ನೆಯ ಕ್ರಿಸ್ತಾಬ್ದದಲ್ಲಿ ಶ್ರೀಮನ್ಮಧ್ವಾಚಾರ್ಯರ ಕಾಲನಿರ್ಣಯವನ್ನು ಮುದ್ರಿಸಿ, ಪ್ರಸಿದ್ಧಮಾಡಿದ ಬಳಿಕ ಇವರ ಈ ನಿರ್ಣಯವನ್ನು ಪುಷ್ಟೀಕರಿಸುವುದಕ್ಕಾಗಿ ಯಾರೋ ಒಬ್ಬರು ಈ ಅಣುಮಧ್ವಚರಿತವನ್ನು ಇತ್ತೀಚಿಗೆ ರಚಿಸಿದ್ದಾರೆಂಬುದು(೨) ಸ್ಪಷ್ಟವಾಗುತ್ತದೆ.

(II) ಇನ್ನು, ವಾಯು ಪುರಾಣದಲ್ಲಿ ಬ್ರಹ್ಮಕೃಷ್ಣಸಂವಾದದಲ್ಲಿಯ ಶ್ರೀಮನ್ಮಧ್ವ ಮಾಹಾತ್ಮ್ಯದ ವರ್ಣನೆಯಲ್ಲಿ, ಶ್ರೀಮನ್ಮಧ್ವಾಚಾರ್ಯರ ಜನ್ಮಕಾಲವು, ವಿಲಂಬಿ ಸಂವತ್ಸರದ

---

೧ An Indian Ephemeris VOL III-IV by L. D. Swamikannu Pillai Diwan Bahadur I. S. O.

ಮಾಘ ಶುಕ್ಲ ಸಪ್ತಮಿ **ರವಿವಾರ**ವೆಂದು ಹೇಳಲ್ಪಟ್ಟದೆ. ಆದರೆ ಮೇಲೆ ಹೇಳಿದ ಪಂಚಾಂಗ ದಲ್ಲಿ ೧೧೬೦ನೆಯ ಶಕವರ್ಷದ ವಿಳಂಬಿ ಸಂವತ್ಸರದ ಮಾಘ ಶುದ್ಧ ಸಪ್ತಮಿ ತಿಥಿಯು, **ಗುರುವಾರ** ದಿವಸ ಸೂರ್ಯೋದಯದಿಂದ ೫೮ ಘಟಿಕೆಗಳ ವರೆಗೆ ಎಂದರೆ ೨೩ ತಾಸು ೨೦ ಮಿನ್ಯೂಟುಗಳ ವರೆಗೆ ಇರುತ್ತದೆಂದು ಹೇಳಿರುವುದರಿಂದ ವಾಯು ಪುರಾಣದಲ್ಲಿಯ ವಿಳಂಬಿ ಸಂವತ್ಸರವು '೧೧೬೦ನೆಯ ಶಕವರ್ಷದ ವಿಳಂಬಿಯು ಅಲ್ಲೆಂಬುದು ಸಿದ್ಧ. ಇತ್ಯರ್ಥವೇ ನೆಂದರೆ. ಶ್ರೀಮನ್ಮಧ್ವಾಚಾರ್ಯರು ಅವತರಿಸಿರುವುದು ೧೧೬೦ನೆಯ ಶಕವರ್ಷದ ವಿಳಂಬಿ ಸಂವತ್ಸರದಲ್ಲಿ ಎಂದು ಹೇಳುವುದು ಸರ್ವಥೈವ ತಪ್ಪೆಂಬುದು ಸಿದ್ಧ. ಅರ್ಥಾತ್ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ಹೇಳಿದ ಶ್ರೀಮದಾಚಾರ್ಯರ ಜನ್ಮಕಾಲನಿರ್ಣಯವು ಸರ್ವಥೈವ ತ್ಯಾಜ್ಯವಾಗಿದೆ.

ಇನ್ನು, ೧೧೦೦ನೆಯ ಶಕವರ್ಷದ ವಿಳಂಬಿ ಸಂವತ್ಸರದಲ್ಲಿಯಾದರೂ ವಾಯುಪುರಾಣ ದಲ್ಲಿ ಹೇಳಿದಂತೆ ಮಾಘ ಶುದ್ಧ ಸಪ್ತಮಿ ತಿಥಿಯು **ರವಿವಾರ**ದಲ್ಲಿ ಬರುತ್ತದೆಯೋ ಹೇಗೆ? ನೋಡುವಾ, ಮೇಲೆ ಹೇಳಿದ ಪಂಚಾಂಗದಲ್ಲಿ ೧೧೦೦ನೆಯ ಶಕವರ್ಷದ ವಿಳಂಬಿ ಸಂವತ್ಸರದ ಮಾಘ ಶುದ್ಧ ಸಪ್ತಮಿ ತಿಥಿಯು, **ಬುಧವಾರ** ದಿವಸ ಸೂರ್ಯೋದಯದಿಂದ ೧೬ ಘಟಿಕೆಗಳ ವರೆಗೆ ಎಂದರೆ ೬ ತಾಸು ೩೦ ಮಿನ್ಯೂಟುಗಳ ವರೆಗೆ ಇರುತ್ತದೆಂದು ಹೇಳಿರುವುದರಿಂದ ವಾಯು ಪುರಾಣದಲ್ಲಿಯ ವಿಳಂಬಿ ಸಂವತ್ಸರವು, ೧೧೦೦ನೆಯ ಶಕವರ್ಷದ ವಿಳಂಬಿಯೂ ಅಲ್ಲೆಂಬುದು ಸಿದ್ಧ. ಫಲಿತಾರ್ಥವೇನೆಂದರೆ, ವಾಯುಪುರಾಣದಲ್ಲಿ ಹೇಳಲ್ಪಟ್ಟ ಈ ಸಂಗತಿಯು ಪ್ರಕ್ಷಿಪ್ತ ವಾದದ್ದೆಂಬುದು ಸಿದ್ಧ. ಅತಏವ ಇದು ಪ್ರಮಾಣಕ್ಕೆ ಅರ್ಹವಾದದ್ದಲ್ಲ. ಸಾರಾಂಶ. ಶ್ರೀಮನ್ಮಧ್ವಾಚಾರ್ಯರು ವಿಳಂಬಿ ಸಂವತ್ಸರದಲ್ಲಿ ಅವತರಿಸಿರುವುದೇ ಸರ್ವಥೈವ ಸುಳ್ಳಾಗಿದೆ; ಮತ್ತು ಸ್ವತಃ ಶ್ರೀಮನ್ಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥದಲ್ಲಿ ತಾವು ಅವತರಿಸಿರುವುದು ೧೧೨೧ನೆಯ ಶಕವರ್ಷದ ಸಿದ್ಧಾರ್ಥಿ ಸಂವತ್ಸರದಲ್ಲಿ ಎಂದು ಹೇಳಿರು ವುದು ಸತ್ಯಸಿದ್ಧಾಂತವಾಗಿದೆ. ಎಂಬುದು ಸಿದ್ಧವಾಯಿತು.

(೫) ಮಠೀಯ ಗುರುಪರಂಪರಾಪೀಳಿಗೆಯಲ್ಲಿರುವ ೬ನೆಯ ಹಾಗೂ ೭ನೆಯ ಜಗದ್ಗುರು ಗಳ ನಿರ್ಯಾಣಕಾಲದ ಶಕವರ್ಷಗಳನ್ನು ಆಪಾತತಃ ನೋಡಿದರೆ, (೧ನೆಯ ಕೋಷ್ಟಕದಲ್ಲಿ ನೋಡಿರಿ) ೭ನೆಯ ಜಗದ್ಗುರುಗಳು ದ್ವೈತಮತ ಸಾಮ್ರಾಜ್ಯವನ್ನು ೬೪ ವರ್ಷಗಳ ವರೆಗೆ ಆಳಿದ್ದಾರೆಂದು ಕಾಣುತ್ತಿದ್ದರೂ ಇವರು ವಸ್ತುತಃ ನಾಲ್ಕೇ ವರ್ಷಗಳ ವರೆಗೆ ಆಳಿದ್ದಾರೆಂಬು ದನ್ನು ನಿರ್ಯಾಣಕಾಲದ ಸತ್ಯವಾದ ಶಕವರ್ಷಗಳಿಂದ ಸಿದ್ಧಮಾಡಿ ತೋರಿಸಿದ್ದೇವೆ. ಇದಲ್ಲದೆ ೧೦ನೆಯ ಮತ್ತು ೧೧ನೆಯ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳನ್ನು ಮಠೀಯ ಗುರುಪರಂಪರಾಪೀಳಿಗೆಯಲ್ಲಿ ನೋಡಿದರೂ ಸರಿಯೇ; ನಾನು ಸಿದ್ಧಮಾಡಿದ ಸತ್ಯವಾದ ಶಕವರ್ಷಗಳಲ್ಲಿ ನೋಡಿದರೂ ಸರಿಯೇ; (೧ನೆಯ ಮತ್ತು ೨ನೆಯ ಕೋಷ್ಟಕಗಳನ್ನು ನೋಡಿರಿ) ೧೧ನೆಯ ಜಗದ್ಗುರುಗಳು ೬೮ ವರ್ಷಗಳ ವರೆಗೆ ಆಳಿರುವುದು ಸತ್ಯವೆಂಬುದು

---

(೨) ೧೧೦೦ನೆಯ ಶಕವರ್ಷದ ವಿಳಂಬಿ ಸಂವತ್ಸರದ ಆಶ್ವೀನ ಶುಕ್ಲ ದಶಮಿ ತಿಥಿಯು ಸಹ ಬುಧವಾರ ಬರುವು ದಿಲ್ಲ; ಈ ಆಶ್ವೀನ ಶುಕ್ಲ ದಶಮಿ ತಿಥಿಯು ಶನಿವಾರ ದಿವಸ ೨೨ ಗಳಿಗೆಗಳ ವರೆಗೆ ಎಂದರೆ ೮ ತಾಸು ೩೦ ಮಿನ್ಯೂಟುಗಳ ವರೆಗೆ ಇರುತ್ತದೆಂದು ಈ ಪಂಚಾಂಗದಲ್ಲಿ ಹೇಳಿರುವುದರಿಂದ ವಿಳಂಬಿ ಸಂವತ್ಸರವು, ೧೧೦೦ನೆಯ ಶಕವರ್ಷದ್ದೆಂದು ತಿಳಿದರೂ ಸಹ ಆಶ್ವೀನ ಶುಕ್ಲ ದಶಮಿ ತಿಥಿಯು ಬುಧವಾರ ಬರಲಿಲ್ಲ. ಅರ್ಥಾತ್ ಈ ತಿಥಿಯು ತಪ್ಪೆಂದು ಸಿದ್ಧವಾಯಿತು. ಸಾರಾಂಶ ಈ ಅಣು ಮಧ್ವಚರಿತವು ಪ್ರಮಾಣಕ್ಕೆ ಅರ್ಹವಾದದ್ದಲ್ಲೆಂಬುದು ಸಿದ್ಧ. ( ೭ನೆಯ ಪುಟದ ಅಡಿಟಿಪ್ಪಣಿ )

ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಅತಏವ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ೧೧ನೆಯ ಜಗದ್ಗುರುಗಳು ಎಂಟೇ ವರ್ಷಗಳ ವರೆಗೆ ಆಳಿದ್ದಾರೆಂದು ಹೇಳಿರುವುದು ಸರ್ವಥೈವ ಅಸತ್ಯವಾಗಿದೆ. ಅರ್ಥಾತ್ ೧೦ನೆಯ ಜಗದ್ಗುರುಗಳ ನಿರ್ಯಾಣಕಾಲವು ೧೩೫೪ನೆಯ ಶಕವರ್ಷವೆಂದು ಹೇಳಿರುವುದು ತಪ್ಪೆಂಬುದು ಸಿದ್ಧ. (೩ನೆಯ ಕೋಷ್ಟಕವನ್ನು ನೋಡಿರಿ) ಈ ೧೦ನೆಯ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷವು ೧೩೫೪ ಎಂಬುದು ತಪ್ಪಾದ ಕೂಡಲೇ ಇದರಂತೆಯೇ ಮೊದಲಿನ ಒಂಭತ್ತೂ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳೆಲ್ಲವೂ ತಪ್ಪಾಗುತ್ತವೆ; ಏಕೆಂದರೆ, ೧೧ನೆಯ ಜಗದ್ಗುರುಗಳು ಎಂಟು ವರ್ಷಗಳ ವರೆಗೆ ಆಳಿದರೆಂದು ಹೇಳಿರುವುದು ಹೇಗೆ ಆಧಾರಹೀನವಾಗಿದೆಯೋ, ಹಾಗೆಯೇ ಇವರು ೧ನೆಯ ಜಗದ್ಗುರುಗಳ ನಿರ್ಯಾಣಕಾಲವು ೧೨೬೯ನೆಯ ಶಕವರ್ಷವೆಂದು ಹೇಳಿರುವುದೂ ಸಹ ನಿರಾಧಾರವಾಗಿದೆ. ಇತ್ಯರ್ಥವೇನೆಂದರೆ, ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ನಿರಾಧಾರವಾಗಿ ಹೇಳಿರುವ ಮೊದಲಿನ ಹತ್ತೂ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳೆಲ್ಲವೂ ತಪ್ಪೆಂಬುದು ಸಿದ್ಧ.

(೬) ೭ನೆಯ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷದ ವಿಷಯದಲ್ಲಿ, ಮಠೀಯ ಗುರುಪರಂಪರಾಪೀಳಿಗೆಯಲ್ಲಿ ಹೇಳಿರುವುದಕ್ಕೂ ನಾನು ನಿರ್ಣಯಿಸಿರುವುದಕ್ಕೂ ಏಕವಾಕ್ಯತೆಯಾಗಿರುತ್ತದೆ. (೧ನೆಯ ಮತ್ತು ೨ನೆಯ ಕೋಷ್ಟಕಗಳನ್ನು ನೋಡಿರಿ) ಈ ಪೀಳಿಗೆಯಲ್ಲಿ ಏಕವಾಕ್ಯತೆಯಾದ ಸ್ಥಳದಲ್ಲಿದ್ದ ಸತ್ಯವಾದ ಶಕವರ್ಷವು, ತಪ್ಪಾದ ಶಕವರ್ಷಕ್ಕಿಂತ ೬೦ ವರ್ಷಗಳಿಂದ ಹೆಚ್ಚಾಗಿದ್ದಂತೆಯೇ (೧೨೯೪+೬೦=೧೩೫೪) ಆರಂಭದಲ್ಲಿದ್ದ ತಪ್ಪಾದ ಶಕವರ್ಷವು, ಸತ್ಯವಾದ ಶಕವರ್ಷಕ್ಕಿಂತ ಅಷ್ಟೇ ೬೦ ವರ್ಷಗಳಿಂದ ಕಡಿಮೆಯಾಗಿರುವುದು ಸ್ವಾಭಾವಿಕವಾಗಿದೆ. (೧೧೭೯-೬೦=೧೧೧೯) ಇದೇ ಮೇರೆಗೆ ಈ ಪೀಳಿಗೆಯಲ್ಲಿ ಆರಂಭದಲ್ಲಿದ್ದ ತಪ್ಪಾದ ಶಕವರ್ಷವು, ಸತ್ಯವಾದ ಶಕವರ್ಷಕ್ಕಿಂತ ೬೦ ವರ್ಷಗಳಿಂದ ಕಡಿಮೆಯಾಗಿದ್ದಂತೆಯೇ ಏಕವಾಕ್ಯತೆಯಾದ ಸ್ಥಳದಲ್ಲಿ ಪೀಳಿಗೆಯಲ್ಲಿದ್ದ ಸತ್ಯವಾದ ಶಕವರ್ಷವು, ತಪ್ಪಾದ ಶಕವರ್ಷಕ್ಕಿಂತ ಅಷ್ಟೇ ೬೦ ವರ್ಷಗಳಿಂದ ಹೆಚ್ಚಾಗುವುದೂ ಸ್ವಾಭಾವಿಕವಾಗಿದೆ. ಈ ಪ್ರಕಾರ ಬಾಯಿಗೂಡಿಸುವ ಸಂಖ್ಯಾಸಾದೃಶ್ಯವು ನೈಸರ್ಗಿಕವಾಗಿ ಬಂದೊದಗಿದೆ.

ಆದರೆ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ತಮ್ಮ ಮತಕ್ಕೂ ಮಠೀಯ ಗುರುಪರಂಪರಾಪೀಳಿಗೆಯಲ್ಲಿ ಹೇಳಿರುವುದಕ್ಕೂ ೧೧ನೆಯ ಜಗದ್ಗುರುಗಳ ನಿರ್ಯಾಣಕಾಲದ ವಿಷಯದಲ್ಲಿ ಏಕವಾಕ್ಯತೆಯಾಗುವಂತೆ ಮಾಡಿಕೊಳ್ಳುವುದಕ್ಕೆ "ಕಾಕತಾಲೀಯ ನ್ಯಾಯ"ದಂತೆ ಬಂದೊದಗಿರುವ ಸಮಯಗಳನ್ನು ತಮಗೆ ಅನುಕೂಲವಾಗುವಂತೆ ಮಾಡಿಕೊಳ್ಳುವುದಕ್ಕೋಸ್ಕರ ೭ನೆಯ ಜಗದ್ಗುರುಗಳು ೪ ವರ್ಷಗಳ ವರೆಗೆ ಆಳಿರುವುದನ್ನು ೬೪ ವರ್ಷಗಳ ವರೆಗೆ ಆಳಿದರೆಂದೂ ಮತ್ತು ೧೧ನೆಯ ಜಗದ್ಗುರುಗಳು ೮ ವರ್ಷಗಳ ವರೆಗೆ ಆಳಿರುವುದನ್ನು ೬೮ ವರ್ಷಗಳ ವರೆಗೆ ಆಳಿದರೆಂದೂ ಪೀಳಿಗೆಯ ಲೇಖಕರು ಸುಳ್ಳು ಹೇಳಿರುತ್ತಾರೆಂದು ಎಂದರೆ ಬುದ್ಧಿಪೂರ್ವಕವಾಗಿ ಸಹೇತುಕವಾದ ಪ್ರಮಾದಗಳನ್ನು ಮಾಡಿರುತ್ತಾರೆಂದು ಅವರ ಮೇಲೆ ವೃಥಾರೋಪವನ್ನು ಹೊರಿಸಿ, ಏಕವಾಕ್ಯತೆಯಾಗುವಂತೆ ಮಾಡಿಕೊಂಡಿದ್ದಾರೆ. ಎಂದರೆ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ತಾವೇ ಬುದ್ಧಿಪೂರ್ವಕವಾಗಿ ಸಹೇತುಕವಾದ ಪ್ರಮಾದಗಳನ್ನು ಮಾಡಿ, ಕೃತ್ರಿಮವಾದ ರೀತಿಯಿಂದ ಏಕವಾಕ್ಯತೆಯನ್ನು ಸಾಧಿಸಿಕೊಂಡಿದ್ದಾರೆ. ಆದುದರಿಂದಲೇ ಇವರು ಏಕವಾಕ್ಯತೆಯನ್ನು ಮಾಡಿಕೊಂಡ ಸ್ಥಳದಲ್ಲಿ ಬಾಯಿ

ಗೂಡಿಸುವ ಸಂಖ್ಯಾಸಾದೃಶ್ಯವು ಇರುವುದಿಲ್ಲ. ಅದು ಹೇಗೆಂದರೆ, (೧ನೆಯ ಮತ್ತು ೩ನೆಯ ಕೋಷ್ಟಕಗಳನ್ನು ನೋಡಿರಿ.) ಪೀಳಿಗೆಯಲ್ಲಿ ಆರಂಭದಲ್ಲಿದ್ದ ತಪ್ಪಾದ ೧೧೯೧ನೆಯ ಶಕ ವರ್ಷವು, ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ಹೇಳಿರುವ ೧೨೩೯ನೆಯ ಶಕ ವರ್ಷಕ್ಕಿಂತ ೧೨೦ ವರ್ಷಗಳಿಂದ ಕಡಿಮೆಯಾಗಿದೆ. ಆದರೆ ಪೀಳಿಗೆಯಲ್ಲಿ ಏಕವಾಕ್ಯತೆಯಾದ ಸ್ಥಳದಲ್ಲಿದ್ದ ಸತ್ಯವಾದ ೧೩೬೬ನೆಯ ಶಕವರ್ಷವು, ತಪ್ಪಾದ ೧೫೦೬ನೆಯ ಶಕವರ್ಷಕ್ಕಿಂತ, ಆರಂಭದಲ್ಲಿ ಕಡಿಮೆಯಾಗಿದ್ದಷ್ಟೇ ವರ್ಷಗಳಿಂದ (ಎಂದರೆ ೧೪೦ ವರ್ಷಗಳಿಂದ ಹೆಚ್ಚಾಗಿರದೆ ೬೦ ವರ್ಷಗಳಿಂದ ಮಾತ್ರ ಹೆಚ್ಚಾಗಿದೆ. ಅಥವಾ ಏಕವಾಕ್ಯತೆಯಾದ ಸ್ಥಳದಲ್ಲಿ ಈ ಪ್ರಕಾರ ೬೦ ವರ್ಷಗಳಿಂದ ಹೆಚ್ಚಾಗಿರುತ್ತದೆ. ಆದರೆ ಆರಂಭದಲ್ಲಿದ್ದ ತಪ್ಪಾದ ೧೧೯೧ನೆಯ ಶಕ ವರ್ಷವು, ಶ್ರೀ. ಪದ್ಮನಾಭಾಚಾರ್ಯರು ಹೇಳುವ ೧೨೩೯ನೆಯ ಶಕವರ್ಷಕ್ಕಿಂತ, ಏಕವಾಕ್ಯತೆ ಯಾದ ಸ್ಥಳದಲ್ಲಿ ಹೆಚ್ಚಾಗಿದ್ದಷ್ಟೇ ವರ್ಷಗಳಿಂದ (ಎಂದರೆ ೬೦ ವರ್ಷಗಳಿಂದ) ಕಡಿಮೆಯಾಗಿ ರದೆ, ೧೨೦ ವರ್ಷಗಳಿಂದ ಕಡಿಮೆಯಾಗಿರುತ್ತದೆ. ಸಾರಾಂಶ, ಆರಂಭದಲ್ಲಿಯಾಗಲಿ ಏಕ ವಾಕ್ಯತೆಯಾದ ಸ್ಥಳದಲ್ಲಿಯಾಗಲಿ ಬಾಯಿಗೂಡಿಸುವ ಸಂಖ್ಯಾಸಾದೃಶ್ಯವು ಇಲ್ಲವೇ ಇಲ್ಲ. ಅತಏವ ೧೧ನೆಯ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷದ ವಿಷಯದಲ್ಲಿ ಮಠೀಯ ಗುರುಪರಂಪರಾಪೀಳಿಗೆಯಲ್ಲಿ ಹೇಳಿರುವುದಕ್ಕೂ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾ ರ್ಯರು ಹೇಳಿರುವುದಕ್ಕೂ ಏಕವಾಕ್ಯತೆಯಾಗಿರುವುದು ಕೇವಲ ಕೃತ್ರಿಮತನದ್ದೇ ಹೊರತು ವಾಸ್ತವವಾದದ್ದಲ್ಲೆಂಬುದು ಸಿದ್ಧ. ಅರ್ಥಾತ್ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ಹೇಳಿರುವ ಮೊದಲಿನ ಹತ್ತೂ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳು ತಪ್ಪೆಂಬುದು ಸಿದ್ಧ.

ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು ಹೇಳಿರುವ ಮೊದಲಿನ ಹತ್ತೂ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳು ಸತ್ಯವಾಗಿದ್ದಿದ್ದರೆ, ಮಠೀಯ ಗುರು ಪರಂಪರಾಪೀಳಿಗೆಯಲ್ಲಿ ಅಜ್ಞಾನದಿಂದುಂಟಾದ ಅಹೇತುಕವಾದ ಪ್ರಮಾದದಿಂದ ಮೊದಲಿನ ಈ ಹತ್ತೂ ಜನ ಜಗದ್ಗುರುಗಳ ನಿರ್ಯಾಣಕಾಲದ ಶಕವರ್ಷಗಳು ೪ನೆಯ ಕೋಷ್ಟಕದಲ್ಲಿ ಹೇಳಿದಂತೆ ಬರೆಯಲ್ಪಡುತ್ತಿದ್ದವು. ಹೀಗೆ ಇದ್ದಿದ್ದರೆ, ಈ ಪೀಳಿಗೆಯಲ್ಲಿ ಏಕವಾಕ್ಯತೆಯಾದ ಸ್ಥಳದಲ್ಲಿದ್ದ ಸತ್ಯವಾದ ೧೩೬೬ನೆಯ ಶಕವರ್ಷವು, ತಪ್ಪಾದ ೧೨೪೬ನೆಯ ಶಕವರ್ಷಕ್ಕಿಂತ ೧೨೦ ವರ್ಷಗಳಿಂದ ಹೆಚ್ಚಾಗಿ ಕಂಡು ಬರುತ್ತಿತ್ತು. ಅರ್ಥಾತ್ ಬಾಯಿಗೂಡಿಸುವ ಸಂಖ್ಯಾ ಸಾದೃಶ್ಯವು ಸ್ವಾಭಾವಿಕವಾಗಿ ಬಂದೊದಗುತ್ತಿತ್ತು.

(೭) ಮೇಲಿನ ವಿವೇಚನೆಯಿಂದ ಶ್ರೀಮನ್ಮಧ್ವಾಚಾರ್ಯರು ೧೧೨೧ನೆಯ ಶಕವರ್ಷದ ಸಿದ್ಧಾರ್ಥಿ ಸಂವತ್ಸರದಲ್ಲಿ ಅವತರಿಸಿ, ೧೧೯೮ನೆಯ ಶಕವರ್ಷದ ಪಿಂಗಳ ಸಂವತ್ಸರದಲ್ಲಿ ಅದೃಶ್ಯರಾದರೆಂಬುದು ಸತ್ಯಸಿದ್ಧಾಂತವಾಯಿತು. ಇನ್ನು, ಶ್ರೀಮನ್ಮಧ್ವಾಚಾರ್ಯರ ತರು ವಾಯ ಇವರ ನಾಲ್ಕು ಜನ ಸಾಕ್ಷಾತ್ ಶಿಷ್ಯರು ಈ ಜಗದ್ಗುರುಪೀಠದ ಮೇಲೆ ಯಾವ ಅನುಕ್ರಮದಿಂದ ಕುಳಿತರೆಂಬುದನ್ನಷ್ಟು ನಿರ್ಣಯಿಸಿದರೆ, ಉತ್ತರಾದಿಮಠದ ಗುರುಪರಂಪರಾ ಪೀಳಿಗೆಯನ್ನು ಪರಿಶೋಧಿಸುವ ಕಾರ್ಯವು ಸಂಪೂರ್ಣವಾಯಿತು.

ಮಠೀಯ ಗುರುಪರಂಪರಾಪೀಳಿಗೆಯಲ್ಲಿ ಮೊದಲಿನ ೬ ಜನ ಜಗದ್ಗುರುಗಳ ನಿರ್ಯಾಣ ಕಾಲದ ಶಕವರ್ಷಗಳನ್ನು ಹೇಗೆ ತಪ್ಪಿ ಬರೆದಿದ್ದಾರೋ ಹಾಗೆಯೇ ಶ್ರೀಮದಾಚಾರ್ಯರ ನಾಲ್ಕು ಜನ ಸಾಕ್ಷಾತ್ ಶಿಷ್ಯರು ಈ ಜಗದ್ಗುರು ಪೀಠದ ಮೇಲೆ ಕುಳಿತುಕೊಂಡ ಅನುಕ್ರಮದ

ವಸ್ತುಸ್ಥಿತಿಯ ವಿಪರ್ಯಾಸವನ್ನೂ ಮಾಡಿದ್ದಾರೆ. ಅರ್ಥಾತ್ ಈ ವಿಷಯದ ಮೇಲೆಯೂ ಕತ್ತಲೆಯು ಕವಿದುಕೊಂಡಿದೆ. ಆದುದರಿಂದ ಈ ವಿಷಯದಲ್ಲಿ ಬಲವತ್ತರವಾದ ಪ್ರಮಾಣಗಳಿಂದ ಸ್ವಚ್ಛವಾದ ಪ್ರಕಾಶವನ್ನು ಕೆಡಹಿ ನಿಜವಾದ ಅನುಕ್ರಮವನ್ನು ಕಂಡು ಹಿಡಿಯುವಾ.

ಶ್ರೀಮನ್ಮಧ್ವಾಚಾರ್ಯರ ಮತ್ತು ಅವರ ನಾಲ್ಕು ಜನ ಸಾಕ್ಷಾತ್ ಶಿಷ್ಯರ ನಿರ್ಯಾಣಕಾಲದ ಸತ್ಯವಾದ ಶಕವರ್ಷಗಳು ಈ ಕೆಳಗೆ ಬರೆದ ಪ್ರಕಾರ ಇರುತ್ತವೆಂಬುದನ್ನು ಈ ಮೊದಲೇ ಸಿದ್ಧಮಾಡಿದ್ದೇನೆ.

| ಶ್ರೀಮನ್ಮಧ್ವಾಚಾರ್ಯರ ೪ ಜನ ಸಾಕ್ಷಾತ್ ಶಿಷ್ಯರು ಪೀಠದ ಮೇಲೆ ಕುಳಿತುಕೊಂಡ ಸರತಿಯ ಅನುಕ್ರಮ | ಜಗದ್ಗುರುಗಳು | ನಿರ್ಯಾಣಕಾಲದ ಸಂವತ್ಸರಗಳು | ನಿರ್ಯಾಣಕಾಲದ ಶಕವರ್ಷಗಳು |
|---|---|---|---|
| | ೧ನೆಯ ಜಗದ್ಗುರು | ಪಿಂಗಳ | ೧೨೩೯ |
| ಮೊದಲನೆಯ ಸರತಿಗೆ | ‡ ೨ನೆಯ ,, | ರಕ್ತಾಕ್ಷಿ | ೧೨೪೬ |
| ೨ನೆಯ ಸರತಿಗೆ | ‡ ೩ನೆಯ ,, | ಶ್ರೀಮುಖ | ೧೨೫೫ |
| ೩ನೆಯ ಸರತಿಗೆ | ‡ ೪ನೆಯ ,, | ವಿಕೃತಿ | ೧೨೭೨ |
| ೪ನೆಯ ಸರತಿಗೆ | ‡ ೫ನೆಯ ,, | ವಿಶ್ವಾವಸು | ೧೨೮೭ |

‡ ಈ ಚಿಹ್ನವುಳ್ಳವರು ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು

ಶ್ರೀಮನ್ಮಧ್ವಾಚಾರ್ಯರು ಅದೃಶ್ಯರಾದ ಬಳಿಕ ಈ ಜಗದ್ಗುರು ಪೀಠದ ಮೇಲೆ ಅವರ ಸಾಕ್ಷಾತ್ ಶಿಷ್ಯರಾದ ಶ್ರೀಪದ್ಮನಾಭತೀರ್ಥರು ಕುಳಿತುಕೊಂಡರೆಂಬುದು ನಿರ್ವಿವಾದವಾಗಿದೆ. ಆವರೆ ಮಿಕ್ಕ ಮೂರು ಜನ ಶಿಷ್ಯರು ಪೀಠದ ಮೇಲೆ ಯಾವ ಅನುಕ್ರಮದಿಂದ ಕುಳಿತರೆಂಬ ಬಗ್ಗೆ ಮಾತ್ರ ಮತಭೇದವಿದೆ. ಅದು ಹೇಗೆಂದರೆ, ಕ್ರಿಸ್ತವರ್ಷದ ೧೮೯೦ ರಲ್ಲಿ ಉಡುಪಿಯಲ್ಲಿ ಹಿಂದೂ ಪ್ರಿಂಟಿಂಗಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟ ಉತ್ತರಾದಿಮಠದ ಗುರುಪರಂಪರಾಪೀಳಿಗೆಯಲ್ಲಿ ಶ್ರೀಪದ್ಮನಾಭತೀರ್ಥರ ತರುವಾಯ,

ಶ್ರೀ ಮಾಧವತೀರ್ಥರು
ಶ್ರೀ ನರಹರಿತೀರ್ಥರು
ಶ್ರೀ ಅಕ್ಷೋಭ್ಯತೀರ್ಥರು

ಈ ಮೂರು ಜನ ಶಿಷ್ಯರು ಈ ಅನುಕ್ರಮದಿಂದ ಪೀಠಾರೋಹಣವನ್ನು ಮಾಡಿದರೆಂದು ಹೇಳಿದ್ದಾರೆ.

ಇನ್ನು, ಕ್ರಿಸ್ತವರ್ಷದ ೧೮೯೬ ರಲ್ಲಿ ಎಂದರೆ ಶಕವರ್ಷದ ೧೮೧೮ ರಲ್ಲಿ ಧಾರವಾಡದಲ್ಲಿ ಮುದ್ರಿಸಲ್ಪಟ್ಟ ಮತ್ತು ಶ್ರೀಮಾನ್ ಭೀಮರಾವ ಸ್ವಾಮಿರಾವ ಕಾಮಲಾಪೂರ ಇವರಿಂದ ರಚಿಸಲ್ಪಟ್ಟ '**ಸತ್ಕಥಾ**' ಎಂಬ ಪುಸ್ತಕದಲ್ಲಿರುವ ಉತ್ತರಾದಿ ಮಠದ ಗುರುಪರಂಪರಾಪೀಳಿಗೆಯಲ್ಲಿ, ಶ್ರೀಪದ್ಮನಾಭತೀರ್ಥರ ತರುವಾಯ,

ಶ್ರೀ ನರಹರಿತೀರ್ಥರು
ಶ್ರೀ ಮಾಧವತೀರ್ಥರು
ಶ್ರೀ ಅಕ್ಷೋಭ್ಯತೀರ್ಥರು

ಈ ಮೂರು ಜನ ಶಿಷ್ಯರು ಈ ಅನುಕ್ರಮದಿಂದ ಪೀಠಾರೋಹಣವನ್ನು ಮಾಡಿದರೆಂದು ಹೇಳಿದ್ದಾರೆ.

ಆದರೆ ಶ್ರೀ ನರಹರಿತೀರ್ಥರು ಕಲಿಂಗದೇಶದ ಗಜಪತಿರಾಜನ ದಿವಾಣರಾಗಿ ರಾಜ್ಯ ಭಾರವನ್ನು ವಹಿಸಿದಾಗ್ಗೆ, ಗಂಜಾಮ ಜಿಲ್ಹೆಯಲ್ಲಿರುವ ಶ್ರೀಕೂರ್ಮದಲ್ಲಿಯೂ ವಿಶಾಖಾ ಪಟ್ಟಣಂ ಸಿಂಹಾಚಲದಲ್ಲಿಯೂ ೧೧೮೬ನೆಯ, ೧೨೦೩ನೆಯ, ೧೨೧೪ನೆಯ ಮತ್ತು ೧೨೧೫ನೆಯ ಶಕವರ್ಷಗಳಲ್ಲಿ ಶಿಲಾಲೇಖಗಳನ್ನು ಕೆತ್ತಿಸಿದ್ದಾರೆ. ಅತಏವ ಈ ನರಹರಿತೀರ್ಥರು ೧೨೧೫ನೆಯ ಶಕವರ್ಷದಲ್ಲಿ ಜೀವಿಸಿದ್ದರೆಂಬುದು ಕೊನೆಯ ಶಿಲಾಲೇಖದಿಂದ ಸ್ಪಷ್ಟವಾಗುತ್ತದೆ. ಇನ್ನು, ಪೀಠದ ಮೇಲೆ ೩ನೆಯ ಸರತಿಗೆ ಕುಳಿತುಕೊಂಡ ಶಿಷ್ಯರು ೧೨೨ನೆಯ ಶಕವರ್ಷದಲ್ಲಿ ನಿರ್ಯಾಣ ಹೊಂದಿರುವುದರಿಂದ ೧೨೧೫ನೆಯ ಶಕವರ್ಷದಲ್ಲಿ ಜೀವಿಸಿರುವ ಶ್ರೀ ನರಹರಿ ತೀರ್ಥರು ೪ನೆಯ ಸರತಿಗೆ ಪೀಠದ ಮೇಲೆ ಕುಳಿತುಕೊಂಡರೆಂದು ಹೇಳುವುದು ಕ್ರಮಪ್ರಾಪ್ತ ವಾಗಿದೆ. ಇತ್ಯರ್ಥವೇನೆಂದರೆ, ಶ್ರೀ ಪದ್ಮನಾಭತೀರ್ಥರ ತರುವಾಯ,

ಶ್ರೀ ಮಾಧವತೀರ್ಥರು
ಶ್ರೀ ಅಕ್ಷೋಭ್ಯತೀರ್ಥರು
ಶ್ರೀ ನರಹರಿತೀರ್ಥರು

ಈ ಮೂರು ಜನ ಶಿಷ್ಯರು ಈ ಅನುಕ್ರಮದಿಂದ ಪೀಠದ ಮೇಲೆ ಕುಳಿತರೆಂಬುದು ಸಿದ್ಧ.

(೮) (ಪರಿಶೋಧಿಸಲ್ಪಟ್ಟ ಉತ್ತರಾದಿಮಠದ ಗುರುಪರಂಪರಾ ಪೀಳಿಗೆಯು)

| ಜಗದ್ಗುರುಗಳು | ನಿರ್ಯಾಣಕಾಲದ ಸಂವತ್ಸರಗಳು | ನಿರ್ಯಾಣಕಾಲದ ಶಕವರ್ಷಗಳು | ನಿರ್ಯಾಣಕಾಲದ ಮಾಸ, ಪಕ್ಷ, ತಿಥಿಗಳು |
|---|---|---|---|
| ಶ್ರೀಮತ್ | | | |
| ೧ ಮಧ್ವಾಚಾರ್ಯರು | ಪಿಂಗಳ | ೧೧೭೯ | ಮಾಘ ಶುಕ್ಲ ೯ |
| ೨ ಪದ್ಮನಾಭತೀರ್ಥರು | ರಕ್ತಾಕ್ಷಿ | ೧೧೮೬ | ಕಾರ್ತಿಕ ಕೃಷ್ಣ ೧೪ |
| ೩ ಮಾಧವತೀರ್ಥರು | ಶ್ರೀಮುಖ | ೧೧೯೫ | ಭಾದ್ರಪದ ಕೃಷ್ಣ ೩೦ |
| ೪ ಅಕ್ಷೋಭ್ಯತೀರ್ಥರು | ವಿಕೃತಿ | ೧೨೧೨ | ಮಾರ್ಗಶೀರ್ಷ ಕೃಷ್ಣ ೫ |
| ೫ ನರಹರಿತೀರ್ಥರು | ವಿಶ್ವಾವಸು | ೧೨೨೭ | ಪುಷ್ಯ ಕೃಷ್ಣ ೭ |
| ೬ ಜಯತೀರ್ಥರು | ವಿಭವ | ೧೨೫೦ | ಆಷಾಢ ಕೃಷ್ಣ ೫ |
| ೭ ವಿದ್ಯಾಧಿರಾಜತೀರ್ಥರು | ಅಂಗಿರಾ | ೧೨೫೪ | ವೈಶಾಖ ಶುಕ್ಲ ೩ |
| ೮ ಕವೀಂದ್ರತೀರ್ಥರು | ಪ್ರಮಾಥಿ | ೧೨೬೧ | ಚೈತ್ರ ಶುಕ್ಲ ೯ |
| ೯ ವಾಗೀಶತೀರ್ಥರು | ಸರ್ವಜಿತು | ೧೨೬೯ | ಚೈತ್ರ ಕೃಷ್ಣ ೩ |
| ೧೦ ರಾಮಚಂದ್ರತೀರ್ಥರು | ನಳ | ೧೨೯೮ | ವೈಶಾಖ ಶುಕ್ಲ ೬ |
| ೧೧ ವಿಬುಧೇಂದ್ರತೀರ್ಥರು | ಪರಾಭವ | ೧೩೪೮ | ಮಾರ್ಗಶೀರ್ಷ ಶುಕ್ಲ ೧೦ |
| ೧೨ ವಿದ್ಯಾನಿಧಿತೀರ್ಥರು | ರಕ್ತಾಕ್ಷಿ | ೧೩೬೬ | ಕಾರ್ತೀಕ ಕೃಷ್ಣ ೪ |
| ೧೩ ರಘುನಾಥತೀರ್ಥರು | ದುಂದುಭಿ | ೧೪೨೪ | ಮಾರ್ಗಶೀರ್ಷ ಕೃಷ್ಣ ೧ |
| ೧೪ ರಘುವರ್ಯತೀರ್ಥರು | ಪಿಂಗಳ | ೧೪೭೯ | ಜ್ಯೇಷ್ಠ ಕೃಷ್ಣ ೩ |
| ೧೫ ರಘೂತ್ತಮತೀರ್ಥರು | ಮನ್ಮಥ | ೧೫೧೭ | ಪುಷ್ಯ ಕೃಷ್ಣ ೧೧ |
| ೧೬ ವೇದವ್ಯಾಸತೀರ್ಥರು | ಸಿದ್ಧಾರ್ಥಿ | ೧೫೪೧ | ಚೈತ್ರ ಶುಕ್ಲ ೩ |
| ೧೭ ವಿದ್ಯಾಧೀಶತೀರ್ಥರು | ಪ್ರಜೋತ್ಪತ್ತಿ | ೧೫೫೩ | ಪುಷ್ಯ ಕೃಷ್ಣ ೧೪ |
| ೧೮ ವೇದನಿಧಿತೀರ್ಥರು | ಯುವ | ೧೫೫೭ | ಕಾರ್ತೀಕ ಶುಕ್ಲ ೧೧ |
| ೧೯ ಸತ್ಯವ್ರತತೀರ್ಥರು | ಬಹುಧಾನ್ಯ | ೧೫೬೦ | ಫಾಲ್ಗುಣ ಶುಕ್ಲ ೬ |
| ೨೦ ಸತ್ಯನಿಧಿತೀರ್ಥರು | ಸರ್ವಜಿತ್ | ೧೫೬೯ | ಮಾರ್ಗಶೀರ್ಷ ಶುಕ್ಲ ೧೦ |

| ಜಗದ್ಗುರುಗಳು | ನಿರ್ಯಾಣಕಾಲದ ಸಂವತ್ಸರಗಳು | ನಿರ್ಯಾಣಕಾಲದ ಶಕವರ್ಷಗಳು | ನಿರ್ಯಾಣಕಾಲದ ಮಾಸ, ಪಕ್ಷ, ತಿಥಿಗಳು |
|---|---|---|---|
| ೨೦ ಸತ್ಯನಾಥತೀರ್ಥರು | ಪ್ರಮಾದೀಚ | ೧೫೯೫ | ಮಾರ್ಗಶೀರ್ಷ ಶುಕ್ಲ ೧೧ |
| ೨೧ ಸತ್ಯಾಭಿನವತೀರ್ಥರು | ವ್ಯಯ | ೧೬೨೮ | ಜ್ಯೇಷ್ಠ ಶುಕ್ಲ ೧೪ |
| ೨೨ ಸತ್ಯಪೂರ್ಣತೀರ್ಥರು | ಪರಾಭವ | ೧೬೪೮ | ಜ್ಯೇಷ್ಠ ಕೃಷ್ಣ ೨ |
| ೨೩ ಸತ್ಯವಿಜಯತೀರ್ಥರು | ಪಿಂಗಳ | ೧೬೫೯ | ಚೈತ್ರ ಕೃಷ್ಣ ೧೧ |
| ೨೪ ಸತ್ಯಪ್ರಿಯತೀರ್ಥರು | ರಕ್ತಾಕ್ಷಿ | ೧೬೬೬ | ಚೈತ್ರ ಶುಕ್ಲ ೧೩ |
| ೨೫ ಸತ್ಯಬೋಧತೀರ್ಥರು | ಶೋಭನಕೃತು | ೧೭೦೫ | ಫಾಲ್ಗುಣ ಕೃಷ್ಣ ೧ |
| ೨೬ ಸತ್ಯಸಂಧತೀರ್ಥರು | ಆನಂದ | ೧೭೧೬ | ಜ್ಯೇಷ್ಠ ಶುಕ್ಲ ೨ |
| ೨೭ ಸತ್ಯವರತೀರ್ಥರು | ಪಿಂಗಳ | ೧೭೧೯ | ಶ್ರಾವಣ ಶುಕ್ಲ ೭ |
| ೨೮ ಸತ್ಯಧರ್ಮತೀರ್ಥರು | ವಿಕೃತಿ | ೧೭೫೨ | ಶ್ರಾವಣ ಕೃಷ್ಣ ೧೩ |
| ೨೯ ಸತ್ಯಸಂಕಲ್ಪತೀರ್ಥರು | ಪ್ಲವ | ೧೭೬೩ | ಆಷಾಢ ಶುಕ್ಲ ೧೫ |
| ೩೦ ಸತ್ಯಸಂತುಷ್ಟತೀರ್ಥರು | ಪ್ಲವ | ೧೭೬೩ | ಫಾಲ್ಗುಣ ಕೃಷ್ಣ ೩೦ |
| ೩೧ ಸತ್ಯಪರಾಯಣತೀರ್ಥರು | ರುಧಿರೋದ್ಗಾರಿ | ೧೭೮೫ | ಆಶ್ವೀನ ಶುಕ್ಲ ೭ |
| ೩೨ ಸತ್ಯಕಾಮತೀರ್ಥರು | ಪ್ರಜೋತ್ಪತ್ತಿ | ೧೭೯೩ | ಪುಷ್ಯ ಕೃಷ್ಣ ೬ |
| ೩೩ ಸತ್ಯೇಷ್ಟತೀರ್ಥರು | ಅಂಗಿರಾ | ೧೭೯೪ | ಭಾದ್ರಪದ ಶುಕ್ಲ ೧೧ |
| ೩೪ ಸತ್ಯಪರಾಕ್ರಮತೀರ್ಥರು | ಪ್ರಮಾಥಿ | ೧೮೦೧ | ಆಶ್ವೀನ ಶುಕ್ಲ ೮ |
| ೩೫ ಸತ್ಯವೀರತೀರ್ಥರು | ವ್ಯಯ | ೧೮೦೮ | ಕಾರ್ತೀಕ ಶುಕ್ಲ ೧೦ |
| ೩೬ ಸತ್ಯಧೀರತೀರ್ಥರು | ಪ್ಲವಂಗ | ೧೮೨೯ | ಜ್ಯೇಷ್ಠ ಕೃಷ್ಣ ೯ |
| ೩೭ ಸತ್ಯಜ್ಞಾನತೀರ್ಥರು | ವಿರೋಧಿಕೃತು | ೧೮೩೩ | ಮಾಘ ಶುಕ್ಲ ೧೧ |

೩೮ ಶ್ರೀ ಸತ್ಯಧ್ಯಾನತೀರ್ಥರು:– ಈ ಶ್ರೀಪಾದಂಗಳವರು ೧೮೩೩ನೆಯ ಶಕವರ್ಷದ ವಿರೋಧಿಕೃತು ಸಂವತ್ಸರದಲ್ಲಿ ಜಗದ್ಗುರು ಪೀಠವನ್ನು ಆರೋಹಣ ಮಾಡಿ, ವೈದಿಕ ಧರ್ಮಪರಿಪಾಲನೆಯನ್ನು ಮಾಡುತ್ತ, ದ್ವೈತಮತ ಸಾಮ್ರಾಜ್ಯವನ್ನು ಆಳುತ್ತಿದ್ದಾರೆ.

ಮೇಲೆ ಹೇಳಿದ ಜಗದ್ಗುರುಗಳಲ್ಲಿ, ಮೊದಲಿನ ೬ ಜನ ಜಗದ್ಗುರುಗಳ ನಿರ್ಯಾಣ ಕಾಲದ ಶಕವರ್ಷಗಳ ವಿಷಯದಲ್ಲಿಯೂ ೩ನೆಯ, ೪ನೆಯ, ೫ನೆಯ ಜಗದ್ಗುರುಗಳು ಪೀಠಾರೋಹಣ ಮಾಡಿದ ಅನುಕ್ರಮದ ವಿಷಯದಲ್ಲಿಯೂ ಮಾತ್ರ ಮಠೀಯ ಗುರುಪರಂಪರಾ ಪಟ್ಟಿಗೆಯಲ್ಲಿ ಅಜ್ಞಾನದಿಂದ ಅಹೇತುಕವಾದ ಪ್ರಮಾದಗಳಾಗಿದ್ದವು. ಇವುಗಳ ಮೇಲೆ ಬಲವತ್ತರವಾದ ಪ್ರಮಾಣಗಳಿಂದ ಸ್ವಚ್ಛವಾದ ಪ್ರಕಾಶವನ್ನು ಕೆಡಹಿ, ವಸ್ತುಸ್ಥಿತಿಯನ್ನು ಕಂಡು ಹಿಡಿದು, ವಾಚಕರ ಮುಂದೆ ಈ ಪ್ರಕಾರ ಇಟ್ಟಿರುತ್ತೇವೆ.

(೯) ಶ್ರೀಮಜ್ಜಯತೀರ್ಥರು ಶ್ರೀ ಪದ್ಮನಾಭತೀರ್ಥರನ್ನು ಸ್ತುತಿಸುವ ಮತ್ತು ಶ್ರೀ ನರಹರಿತೀರ್ಥರನ್ನು ತಿರಸ್ಕರಿಸುವ ಕಾರ್ಯಕಾರಣಸಂಗತಿಯು, ನಾವು ಸಿದ್ಧಮಾಡಿರುವ ಈ ಪಟ್ಟಿಗೆಯಿಂದ ಹೇಗೆ ಸುಂದರವಾಗಿ ಹೊಂದುತ್ತದೆಂಬುದನ್ನು ಹೇಳಲುಪಕ್ರಮಿಸುವಾ, ಶ್ರೀಮಜ್ಜಯತೀರ್ಥರು "ಗೀತಾ ಭಾಷ್ಯಟೀಕೆ"ಯ ಕೊನೆಯಲ್ಲಿ ಹೀಗೆ ಹೇಳಿದ್ದಾರೆ:—

ಅಕ್ಷೋಭ್ಯತೀರ್ಥಗುರುಣಾ ಶುಕವಚ್ಛಿಕ್ಷಿತಸ್ಯಮೇ ॥
ವಚೋಭಿರಮೃತಪ್ರಾಯೈಃ ಪ್ರೀಯಂತಾಂ ಸತತಂ ಬುಧಾಃ ॥ ೩ ॥

ಅರ್ಥ:- ಅಕ್ಷೋಭ್ಯತೀರ್ಥಗುರುಗಳಿಂದ ಗಿಳಿಯಂತೆ ಶಿಕ್ಷಣವನ್ನು ಹೊಂದಿದಂಥ ನನ್ನ ಅಮೃತಸದೃಶವಾದ ವಚನಗಳಿಂದ ಪಂಡಿತರು ಯಾವಾಗಲೂ ಸಂತುಷ್ಟರಾಗಲಿ.

ಶ್ರೀ ಮಜ್ಜಯತೀರ್ಥರು ತಮ್ಮ ಗುರುಗಳಾದ ಶ್ರೀ ಅಕ್ಷೋಭ್ಯತೀರ್ಥರಿಂದ ಶಿಕ್ಷಣವನ್ನು ಹೊಂದಿರುತ್ತೇವೆಂದು ಹೀಗೆ ಸ್ಪಷ್ಟವಾಗಿ ಹೇಳಿದ್ದರಿಂದ ಇವರು ಶ್ರೀ ಅಕ್ಷೋಭ್ಯತೀರ್ಥ ಗುರುಗಳಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿರುವ ಕಾರ್ಯವು, ಈ ಗುರುಗಳು ನಿರ್ಯಾಣ ಹೊಂದುವ ಕಾಲದಲ್ಲಿ ಆಗಿರದೆ, ಅದಕ್ಕಿಂತ ಬಹುಕಾಲ ಮುಂಚೆಯೇ ಎಂದರೆ, ಶ್ರೀ ಅಕ್ಷೋಭ್ಯತೀರ್ಥರು ಪೀಠದ ಮೇಲೆ ಕುಳಿತುಕೊಂಡ ಬಳಿಕ ಸ್ವಲ್ಪ ದಿವಸಗಳಲ್ಲಿಯೇ ಜರಗಿರುತ್ತದೆಂಬುದು ಸಿದ್ಧವಾಗುತ್ತದೆ. ಈ ಸಿದ್ಧಾಂತವನ್ನು "ಶ್ರೀ ಜಯತೀರ್ಥ ವಿಜಯ" ಎಂಬ ಪುಸ್ತಕದಲ್ಲಿಯ ಕಥೆಯು ಪೋಷಿಸುತ್ತದೆ. ಅದು ಹೇಗೆಂದರೆ:- "ಸಾದಿರಾಜನು (ಶ್ರೀ ಜಯತೀರ್ಥರ ಪೂರ್ವಾಶ್ರಮದ ಹೆಸರು) ಬೇಟೆಯನ್ನಾಡುವುದಕ್ಕೋಸ್ಕರ ಬೆಟ್ಟಗುಡ್ಡಗಳ ಕಡೆಗೆ ಹೋಗಿ, ಬೇಟೆಯನ್ನಾಡಿ ಮಧ್ಯಾಹ್ನ ಸಮಯದಲ್ಲಿ ನೀರಡಿಸಿ, ಭೀಮಾ ನದಿಗೆ ಬಂದನು. ಅದೇ ಕಾಲಕ್ಕೆ ಕರ್ಮಧರ್ಮಸಂಯೋಗದಿಂದ ಶ್ರೀ ಅಕ್ಷೋಭ್ಯತೀರ್ಥಸ್ವಾಮಿಗಳವರು ಸಂಚಾರ ಮಾಡುತ್ತ ಮಾಡುತ್ತ ಬಂದು, ಆ ಭೀಮಾ ನದಿಯ ಆಚೆಯ ದಂಡೆಯ ಮೇಲೆ ಇಳಿದು ಕೊಂಡಿದ್ದರು, ಆ ಸಮಯದಲ್ಲಿ ಈ ಸಾದಿರಾಜನು ಪಶುಗಳ ಹಾಗೆ ನದಿಗೆ ಬಾಯಿ ಹಚ್ಚಿ ನೀರನ್ನು ಕುಡಿಯುತ್ತಿರಲು, ಇದನ್ನು ಶ್ರೀ ಅಕ್ಷೋಭ್ಯತೀರ್ಥರು ನೋಡಿ, "ಕಿಂ ಪಶುಃ ಪೂರ್ವದೇಹೇ" ಎಂದರೆ "ಹಿಂದಿನ ಜನ್ಮದಲ್ಲಿ ನೀನು ಪಶುವಾಗಿ ಇದ್ದೆಯೇನು ?" ಎಂದು ಈತನಿಗೆ ಪ್ರಶ್ನಮಾಡಲು, ಈ ಪ್ರಶ್ನವನ್ನು ಕೇಳಿದಾಕ್ಷಣವೇ ಈ ಸಾದಿಭೂಪನಿಗೆ ವೈರಾಗ್ಯವು ಪ್ರಾಪ್ತವಾಗಿ, ಇವನು ಗೃಹಸ್ಥಾಶ್ರಮವನ್ನು ಬಿಟ್ಟು, ಆ ಅಕ್ಷೋಭ್ಯತೀರ್ಥಸ್ವಾಮಿಗಳವರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿದನು." ಎಂಬುದೇ ಈ ಕಥೆಯ ಸಾರಾಂಶವಾಗಿದೆ. ನದಿಗೆ ಬಾಯಿ ಹಚ್ಚಿ, ನೀರು ಕುಡಿಯುವ ಹುಡುಗಾಟಿಕೆಯ ವಯಸ್ಸೆಂದರೆ, ೨೫ನೆಯ ವರ್ಷದ ವಯಸ್ಸನ್ನು ಮೀರಿ ಇರಲಾರದು. ಆದ್ದರಿಂದ ಶ್ರೀಮಜ್ಜಯತೀರ್ಥರು ಸನ್ಯಾಸಾಶ್ರಮವನ್ನು ಸ್ವೀಕರಿಸಿದಾಗ್ಗೆ, ೨೫ನೆಯ ವರ್ಷದ ವಯಸ್ಸುಳ್ಳವರಿದ್ದರೆಂದು ಹೇಳುವುದು ಸಮಂಜಸವಾಗಿದೆ.

ಈ ಇತಿಹಾಸವನ್ನು ಅಥವಾ ಚರಿತ್ರವನ್ನು ಜ್ಞಾಪಕದಲ್ಲಿಟ್ಟುಕೊಂಡು, ಮುಂದಕ್ಕೆ ಸಾಗಿದರೆ, ಮುಂದಿನ ವಿವರಣೆಯು ಸುಲಭವಾಗಿ ತಿಳಿಯುವುದು.

ಶ್ರೀಮಜ್ಜಯತೀರ್ಥರು, ಶ್ರೀ ಪದ್ಮನಾಭತೀರ್ಥರಿಗೂ ತಮಗೂ ಹೇಗೆ ಗುರುಶಿಷ್ಯ ಸಂಬಂಧವಿರುತ್ತದೆಂಬುದನ್ನು "ಶ್ರೀ ಗೀತಾತಾತ್ಪರ್ಯ ನಿರ್ಣಯ"ದ ಟೀಕೆಯ ಆದಿಯಲ್ಲಿ ಹೀಗೆ ಹೇಳಿದ್ದಾರೆ:—

ಸ ಪದ್ಮನಾಭತೀರ್ಥಾರ್ಕ ಗೋಗಣೋಸ್ತು ದೃಶೇಮಮ ॥
ನ ತತ್ತ್ವಮಾರ್ಗೇಗಮನಂ ವಿನಾಯದುಪಜೀವನಮ್ ॥ ೩ ॥

ಪ್ರಣಮ್ಯಚರಣದ್ವಂದ್ವಂ ಗುರೂಣಾಂ ತತ್ಕೃಪಾಬಲಾತ್ ॥
ವ್ಯಾಕರಿಷ್ಯೇ ಯಥಾಬೋಧಂ ಗೀತಾತಾತ್ಪರ್ಯನಿರ್ಣಯಂ ॥ ೪ ॥

ಅರ್ಥ:– ತತ್ತ್ವಮಾರ್ಗದಲ್ಲಿ ಎಂದರೆ ಆಧ್ಯಾತ್ಮಿಕ ಜ್ಞಾನಮಾರ್ಗದಲ್ಲಿ ಗಮನಮಾಡುವುದಕ್ಕೆ ಯಾರ ಹೊರತು ಗತ್ಯಂತರವಿಲ್ಲವೋ ಅಂಥ ಪದ್ಮನಾಭತೀರ್ಥರೆಂಬ ಸೂರ್ಯನ (ವಾಣಿಯೆಂಬ) ಕಿರಣಸಮೂಹವು ಎಂದರೆ ಪ್ರಕಾಶವು ನಮಗೆ ಜ್ಞಾನದೃಷ್ಟಿಯನ್ನು ದಯಪಾಲಿಸಲಿ (೩) ಗುರುಗಳ ಚರಣದ್ವಯಗಳನ್ನು ನಮಸ್ಕರಿಸಿ, ಅವರ ಕೃಪಾಬಲದಿಂದ ಯಥಾಬೋಧವಾಗಿ ಗೀತಾತಾತ್ಪರ್ಯನಿರ್ಣಯವನ್ನು ಸ್ಪಷ್ಟೀಕರಿಸುತ್ತೇನೆ.

ಇದೇ ಮೇರೆಗೆ ಶ್ರೀಮಜ್ಜಯತೀರ್ಥರು ತಾವು ಬರೆದ "ತತ್ತ್ವಪ್ರಕಾಶಿಕಾ" ಎಂಬ ಟೀಕೆಯ ಮಂಗಲಾಚರಣದಲ್ಲಿ ಮೊದಲು ಶ್ರೀ ಪದ್ಮನಾಭತೀರ್ಥರನ್ನು ಸ್ತುತಿಸಿ,[೧] ತದನಂತರ ಶ್ರೀ ಅಕ್ಷೋಭ್ಯತೀರ್ಥರನ್ನು ಸ್ತುತಿಸಿದ್ದಾರೆ. ಆದರೆ ಶ್ರೀ ಮಾಧವತೀರ್ಥರನ್ನಾಗಲಿ ಶ್ರೀ ನರಹರಿತೀರ್ಥರನ್ನಾಗಲಿ ಎಲ್ಲಿಯೂ ಸ್ತುತಿಸಿರುವದಿಲ್ಲ. ಇದನ್ನೆಲ್ಲ ನೋಡಿದರೆ, ಶ್ರೀ ಜಯತೀರ್ಥರು, ಶ್ರೀ ಪದ್ಮನಾಭತೀರ್ಥಗುರುಗಳಿಂದ ಒಂದಾನೊಂದು ಕಾಲದಲ್ಲಿ ಆಧ್ಯಾತ್ಮಿಕ ಶಿಕ್ಷಣವನ್ನು ಹೊಂದಿದ್ದಾರೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಅದು ಹೇಗೆಂದರೆ, ಶ್ರೀ ಅಕ್ಷೋಭ್ಯತೀರ್ಥರ ಪೂರ್ವದಲ್ಲಿ ಶ್ರೀ ಮಾಧವತೀರ್ಥರು ದ್ವೈತಮತ ಸಾಮ್ರಾಜ್ಯವನ್ನು ೯ ವರ್ಷಗಳ ವರೆಗೆ ಆಳಿದರು. ಶ್ರೀ ಮಾಧವತೀರ್ಥರ ಪೂರ್ವದಲ್ಲಿ ಶ್ರೀ ಪದ್ಮನಾಭತೀರ್ಥರು ಆಳುತ್ತಿದ್ದರು. ಅತಏವ ಶ್ರೀ ಅಕ್ಷೋಭ್ಯತೀರ್ಥರ ಆಳಿಕೆಯ ಆರಂಭದಲ್ಲಿ ಆಶ್ರಮವನ್ನು ಸ್ವೀಕರಿಸಿದಂಥ ಶ್ರೀ ಜಯತೀರ್ಥರು ತಾವು ಈ ಸನ್ಯಾಸಾಶ್ರಮವನ್ನು ಸ್ವೀಕರಿಸಿರುವುದಕ್ಕಿಂತ ಪೂರ್ವದಲ್ಲಿ ಒಂಭತ್ತು ವರ್ಷಗಳ ಹಿಂದೆ ಪೂರ್ವಾಶ್ರಮದಲ್ಲಿ ಎಂದರೆ ಬ್ರಹ್ಮಚರ್ಯಾಶ್ರಮದಲ್ಲಿ ತಮ್ಮ ೧೬ನೆಯ ವರ್ಷದ ವಯಸ್ಸಿನ ವರೆಗೆ ಕೆಲವು ಕಾಲ ಶ್ರೀ ಪದ್ಮನಾಭತೀರ್ಥಸ್ವಾಮಿಗಳವರಿಂದ ಆಧ್ಯಾತ್ಮಿಕ ಶಿಕ್ಷಣವನ್ನು ಹೊಂದಿದ್ದಾರೆಂದು ಹೇಳುವುದು ಸಯುಕ್ತಿಕವಾಗಿದೆ; ಇಷ್ಟೇ ಅಲ್ಲ ಅಪರಿಹಾರ್ಯವಾಗಿದೆ. ಸ್ವತಃ ಶ್ರೀಮಜ್ಜಯತೀರ್ಥರೇ "ಆಧ್ಯಾತ್ಮಿಕ ಜ್ಞಾನಮಾರ್ಗದಲ್ಲಿ

---

೧ ಶ್ರೀಮಧ್ವಸಂಸೇವನಲಬ್ಧ ಶುದ್ಧವಿದ್ಯಾಸುಧಾಂ ಭೋನಿಧಯೋಽಮಲಾಯೇ ॥
ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಃಸ್ಯಾನ್ಮಯಿ ನಿತ್ಯಮೇಷಾಂ ॥ ೪ ॥

ಅರ್ಥ:– ಶ್ರೀಮನ್ಮಧ್ವಾಚಾರ್ಯರ ಸೇವೆಯನ್ನು ಚೆನ್ನಾಗಿ ಮಾಡಿ, ಅಗಾಧವಾದ ಶುದ್ಧ ವಿದ್ಯಾಮೃತವನ್ನು ಪಡೆದಂಥ ದಯಾಸಾಗರರಾದ ಮತ್ತು ನಿರಂಜನರಾದ ಶ್ರೀಪದ್ಮನಾಭತೀರ್ಥರ ಕೃಪೆಯ ಲೇಶವು ನನ್ನ ಮೇಲೆ ಯಾವಾಗಲೂ ಇರಲಿ.

ಸನುನ ಮಾಡುವುದಕ್ಕೆ ಮೂಲತಃ ಶ್ರೀ ಪದ್ಮನಾಭತೀರ್ಥರೇ ನಮಗೆ ಮಾರ್ಗದರ್ಶಕರಾಗಿದ್ದಾ ರೆ"ದು ಘಂಟಾಘೋಷವಾಗಿ ಹೇಳುತ್ತಿರುವುದನ್ನು ನೋಡಿದರೆ ಈ ಮಾತಿನ ಸತ್ಯತೆಯು ಇನ್ನಿಂದ ತಾನೇ ವ್ಯಕ್ತವಾಗುತ್ತದೆ. ಮತ್ತು ನಾವು ಸಿದ್ಧಮಾಡಿದ

ಶ್ರೀ ಪದ್ಮನಾಭತೀರ್ಥರು
ಶ್ರೀ ಮಾಧವತೀರ್ಥರು
ಶ್ರೀ ಅಕ್ಷೋಭ್ಯತೀರ್ಥರು
ಶ್ರೀ ನರಹರಿತೀರ್ಥರು

ಈ ಪೀಳಿಗೆಯು ಸತ್ಯಪೂರ್ಣವಾದದ್ದೆಂಬುದು ಸ್ಪಷ್ಟವಾಗುವಂತೆ ಶ್ರೀ ಜಯತೀರ್ಥರು, ಶ್ರೀ ಪದ್ಮನಾಭತೀರ್ಥರನ್ನು ಗುರುಭಾವನೆಯಿಂದ ಸ್ತುತಿಸಿದ್ದರ ಕಾರ್ಯಕಾರಣ ಸಂಗತಿಯು ಸುಂದರವಾಗಿ ಹೊಂದುತ್ತದೆ.

(೧೦) ಶ್ರೀಮಜ್ಜಯತೀರ್ಥರು "ಕರ್ಮನಿರ್ಣಯ" ಗ್ರಂಥದ ಟೀಕೆಯಲ್ಲಿ ಶ್ರೀನರಹರಿ ತೀರ್ಥರ ವಾಕ್ಯಗಳನ್ನು ಖಂಡಿಸಿ, ಅವರ ಮೇಲೆ ತಮ್ಮ ಕೋಪವನ್ನು ವ್ಯಕ್ತಪಡಿಸಿದ್ದಾರೆ. ಇದಕ್ಕೆ ಕಾರಣವೇನು ? ಮೊದಲು ವಸ್ತುಸ್ಥಿತಿಯನ್ನು ವಿವರಿಸಿ, ಆ ಮೇಲೆ ಈ ಪ್ರಶ್ನೆಗೆ ಉತ್ತರವನ್ನು ಹೇಳುವಾ. ೧೨೧೨ನೆಯ ಶಕವರ್ಷದಲ್ಲಿ ಶ್ರೀ ಅಕ್ಷೋಭ್ಯತೀರ್ಥರು ತಮ್ಮ ಎಲ್ಲ ಪೀಠಾಧಿಪತ್ಯವನ್ನು ತಮ್ಮ ಶಿಷ್ಯರಾದ ಶ್ರೀ ಜಯತೀರ್ಥರ ವಶಕ್ಕೆ ಒಪ್ಪಿಸಿ, ಪರಂಧಾಮಕ್ಕೆ ತೆರಳಿದರು. ಶ್ರೀ ನರಹರಿತೀರ್ಥರು ಕಲಿಂಗದೇಶದಲ್ಲಿ ದಿವಾಣರಾಗಿ ೧೨೧೫ನೆಯ ಶಕವರ್ಷದ ವರೆಗೂ ಅಲ್ಲಿಯೇ ಇದ್ದರೆಂದು ಅಲ್ಲಿಯ ಶಿಲಾಲೇಖವು ಹೇಳುತ್ತಿರುವುದರಿಂದ ಶ್ರೀ ನರಹರಿತೀರ್ಥರು ಕರ್ನಾಟಕಕ್ಕೆ ಶ. ವ. ೧೨೧೫ ರ ವರೆಗೆ ಬರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಅತಏವ ಶ. ವ, ೧೨೧೨ ರಿಂದ ೧೨೧೫ ರ ವರೆಗೆ ೩ ವರ್ಷಗಳ ತನಕ ಪೀಠಾಧಿಪತ್ಯವು ಶ್ರೀ ಜಯತೀರ್ಥರ ವಶದಲ್ಲಿಯೇ ಇದ್ದಿತೆಂಬುದು ಸಿದ್ಧವಾಯಿತು. ತದನಂತರ ಶ್ರೀ ನರಹರಿತೀರ್ಥರು ಈ ಪೀಠಾಧಿಪತ್ಯವನ್ನು ಆಕ್ರಮಿಸುವುದಕ್ಕೋಸ್ಕರ ಕಲಿಂಗ ದೇಶದಿಂದ ಕರ್ನಾಟಕಕ್ಕೆ ಬರಲು, ಈ ಪೀಠಾಧಿಪತ್ಯಕ್ಕೋಸ್ಕರ ಶ್ರೀ ಜಯತೀರ್ಥರಿಗೂ ಶ್ರೀ ನರಹರಿತೀರ್ಥರಿಗೂ ವಾದವಿವಾದವಾಗಿ ಇವರಿಬ್ಬರಲ್ಲಿ ಮನಸ್ತಾಪವಾಗಿರಲಿಕ್ಕೆ ಸಾಕು. ಶ್ರೀ ನರಹರಿತೀರ್ಥರು ವಯೋವೃದ್ಧರೂ ಶ್ರೀಮದಾನಂದತೀರ್ಥರ ಸಾಕ್ಷಾತ್ ಶಿಷ್ಯರೂ ಆದುದರಿಂದ ಈ ಪೀಠಾಧಿಪತ್ಯವು ಅವರ ವಶಕ್ಕೇ ಹೋಯಿತು. ಮುಂದೆ ಆ ನರಹರಿತೀರ್ಥರು ನಿರ್ಯಾಣ ಹೊಂದುವ ವರೆಗೆ ಎಂದರೆ ೧೨೨೮ನೆಯ ಶಕವರ್ಷದ ವರೆಗೆ ೧೩ ವರ್ಷಗಳ ತನಕ ಜಯತೀರ್ಥರು "ಯರಗೋಳ" ಗ್ರಾಮದ ಗುಹೆಯಲ್ಲಿ ಕುಳಿತು, ಗ್ರಂಥಗಳನ್ನು ರಚಿಸುವುದಕ್ಕೆ ಇವರಿಗೆ ಅವಕಾಶವು ದೊರೆಯಿತು. ಇರಲಿ. ಈ ಸ್ಥಳದಲ್ಲಿ ಹೇಳತಕ್ಕ ಪ್ರಸ್ತುತ ವಿಷಯವೇನೆಂದರೆ, ಶ್ರೀ ನರಹರಿತೀರ್ಥರು ಈ ಪೀಠಾಧಿಪತ್ಯವನ್ನು ಶ್ರೀ ಜಯತೀರ್ಥರ ಕೈಯಿಂದ ಕಸಿದುಕೊಂಡದ್ದಕ್ಕೋಸ್ಕರ ಈ ಜಯತೀರ್ಥರು ಆ ನರಹರಿತೀರ್ಥರ ಮೇಲೆ ಸಿಟ್ಟಾಗುವುದು ಸ್ವಾಭಾವಿಕವಾಗಿದೆ. ಅತಏವ ಶ್ರೀ ಜಯತೀರ್ಥರು "ಕರ್ಮನಿರ್ಣಯ' ಗ್ರಂಥಕ್ಕೆ ತಾವು ಬರೆದ ಟೀಕೆಯಲ್ಲಿ, ಈ ಗ್ರಂಥಕ್ಕೆ ನರಹರಿತೀರ್ಥರು ಬರೆದ ಟೀಕೆಯ ವಾಕ್ಯಗಳನ್ನು ತಿರಸ್ಕರಿಸಿ, ಅವರ ವಿಷಯವಾಗಿ ತಮ್ಮ ಮನಸ್ಸಿನಲ್ಲಿದ್ದ ಕೋಪವನ್ನು ವ್ಯಕ್ತಪಡಿಸಿದ್ದರ ಕಾರ್ಯಕಾರಣ ಸಂಗತಿಯು ಈ ಪೀಳಿಗೆಯಿಂದ ಈ ಪ್ರಕಾರ ಚೆನ್ನಾಗಿ ಹೊಂದುತ್ತದೆ. ಅರ್ಥಾತ್ ಈ ಪೀಳಿಗೆಯು ಸತ್ಯಪೂರ್ಣವಾದದ್ದೆಂದು ಇತ್ಯರ್ಥ.

(೧೧) ಜಯಸಿಂಹರಾಜನು ಶ್ರೀಮನ್ಮಧ್ವಾಚಾರ್ಯರನ್ನು ವಿಷ್ಣುಮಂಗಲಕ್ಕೆ ಅತ್ಯಂತ ಆದರಸತ್ಕಾರದಿಂದ ಬರಮಾಡಿಕೊಂಡ ವೃತ್ತಾಂತವು, ಸುಮಧ್ವವಿಜಯದ ೧೩ನೆಯ ಸರ್ಗದಲ್ಲಿದೆ. ಅರ್ಥಾತ್ ಶ್ರೀಮನ್ಮಧ್ವಾಚಾರ್ಯರು ಜಯಸಿಂಹರಾಜನ ಸಮಕಾಲೀನರೆಂದು ಸುಮಧ್ವವಿಜಯವು ಸಾರಿ ಹೇಳುತ್ತದೆ. ಆತಏವ ಈ ರಾಜನ ಕಾಲವು ನಿರ್ಣಯಿಸಲ್ಪಟ್ಟರೆ, ಶ್ರೀಮನ್ಮಧ್ವಾಚಾರ್ಯರ ಕಾಲವೂ ನಿಶ್ಚಯಿಸಲ್ಪಡುವದು. ಇನ್ನು ಈ ಜಯಸಿಂಹರಾಜನು ಹಾನಗಲ್ಲ ರಾಜಧಾನಿಯಲ್ಲಿ ಆಳಿದ ಕದಂಬರಾಜನಾದ ಕಾಮದೇವನ ಮಗಳ ಮಗನೆಂದು "ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ"ದಲ್ಲಿ ಉಕ್ತವಾಗಿದೆ. (ಪುಟಗಳು ೩೬೮, ೩೭೯, ೩೭೧) ಈ ಕಾಮದೇವನು ೧೧೦೩ ಶಕವರ್ಷದಿಂದ ೧೧೨೫ನೆಯ ಶಕವರ್ಷದ ವರೆಗೆ ರಾಜ್ಯವನ್ನಾಳಿದನೆಂಬುದು ಶಿಲಾಲೇಖಗಳಿಂದ ಸಿದ್ಧವಾಗಿರುತ್ತದೆ. ಈ ಕಾಮದೇವನ ಆಳಿಕೆಯ ಕಾಲದಲ್ಲಿಯೇ ಈತನ ಮಗಳಾದ ಸುಶೀಲೆಯ ಹೊಟ್ಟೆಯಲ್ಲಿ ಈ ಜಯಸಿಂಹರಾಜನು ಹುಟ್ಟಿದನು. ಶ್ರೀಮನ್ಮಧ್ವಾಚಾರ್ಯರೂ ಇದೇ ಕಾಲದಲ್ಲಿಯೇ ಎಂದರೆ ೧೧೨೧ನೆಯ ಶಕವರ್ಷದಲ್ಲಿ ಅವತರಿಸಿದ್ದಾರೆಂಬುದನ್ನು ಈ ಮೊದಲೇ ಸಪ್ರಮಾಣವಾಗಿ ಹೇಳಿದ್ದೇವೆ. ತಾತ್ಪರ್ಯವೇನೆಂದರೆ, ಜನ್ಮಕಾಲದಿಂದಲೂ ಶ್ರೀಮನ್ಮಧ್ವಾಚಾರ್ಯರು ಜಯಸಿಂಹರಾಜನ ಸಮಕಾಲೀನರಾಗಿದ್ದಾರೆಂಬುದು ಸಿದ್ಧ. ಇತ್ಯರ್ಥವೇನೆಂದರೆ, ನಾನು ನಿರ್ಣಯಿಸಿರುವ ಶ್ರೀಮನ್ಮಧ್ವಾಚಾರ್ಯರ ಕಾಲವು, ಐತಿಹಾಸಿಕ ಸತ್ಯವೆಂಬುದು ಸ್ಪಷ್ಟವಾಗಿದೆ.

(೧೨) "ಈಶ್ವರದೇವನೆಂಬ ಅರಸನು, ತನ್ನ ದೇಶದಲ್ಲಿ ಒಂದು ಕೆರೆಯನ್ನು ನಿರ್ಮಿಸುವುದಕ್ಕಾಗಿ ದಾರಿಗರಾದ ಜನರನ್ನು 'ಬಿಟ್ಟಿ' ಹಿಡಿದು, ಅವರಿಂದ ಭೂಮಿಯನ್ನು ಅಗಿಸುತ್ತಿದ್ದನು. ಅದೇ ಕಾಲಕ್ಕೆ ಶ್ರೀಮನ್ಮಧ್ವಾಚಾರ್ಯರು ಈ ದೇಶದಲ್ಲಿ ಹಾಯಿದು ಹೋಗುವಾಗ್ಗೆ, ಆ ಅರಸನು ಶ್ರೀಮದಾಚಾರ್ಯರನ್ನು ಕುರಿತು 'ಈ ಸ್ಥಳವನ್ನು ಅಗಿಯಬೇಕೆಂ'ದು ಹೇಳಲು, ಆಗ ಶ್ರೀಮದಾಚಾರ್ಯರು ಆ ರಾಜನನ್ನು ಕುರಿತು:– "ಎಲೈ ಅರಸನೇ ! ನಾವು ಈ ಕೆಲಸವನ್ನು ತಿಳಿಯದವರಿದ್ದೇವೆ; ನೀನು ಅಗಿದು ತೋರಿಸಿದರೆ, ಅದರಂತೆ ಆ ಮೇಲೆ ನಾವು ಅಗಿಯಬಲ್ಲೆವು." ಎಂದು ಹೇಳಿದರು. ಅದಕ್ಕೆ ಆ ಅರಸನು ಯಾಕಾಗಲೊಲ್ಲದೆಂದು ನುಡಿದು, ಸ್ಥಳವನ್ನು ಅಗಿಯುವ ಕ್ರಮವನ್ನು ತೋರಿಸಲಾರಂಭಿಸಿ, ಆಚಾರ್ಯರ ಪ್ರಭಾವದಿಂದ ಆತನು ಹಾಗೆಯೇ ಅಗಿಯುತ್ತ ನಿಂತುಬಿಟ್ಟನು. ಇತ್ತ ಆಚಾರ್ಯರು ಮುಂದಕ್ಕೆ ಹೊರಟು ಹೋಗಿದ್ದರು." ಎಂದು ಸುಮಧ್ವವಿಜಯದಲ್ಲಿ ಒಂದು ಕಥೆಯಿದೆ. ಈ **ಈಶ್ವರದೇವನು**, ಹೊಯ್ಸಳ ಯಾದವ ರಾಜರಲ್ಲಿ ೯ನೆಯವನಾಗಿ, **ಸೋಮೇಶ್ವರದೇವ, ವೀರಸೋಮೇಶ್ವರದೇವ ಅಥವಾ ಸೋವಿದೇವ** ಎಂಬ ಹೆಸರುಗಳಿಂದ ಪ್ರಸಿದ್ಧನಾಗಿ, ಶಕವರ್ಷದ ೧೧೫೫ರಿಂದ ೧೧೭೭ರ ವರೆಗೆ ಎಂದರೆ ಕ್ರಿಸ್ತವರ್ಷದ ೧೨೩೩ ರಿಂದ ೧೨೫೪ ರ ವರೆಗೆ ರಾಜ್ಯವನ್ನಾಳಿದ ಅರಸನೇ ಎಂಬುದು ನಾಮಸಾದೃಶ್ಯದಿಂದ ಸ್ಪಷ್ಟವಾಗಿದೆ. ಇಷ್ಟೇ ಅಲ್ಲ ನಾವು ಸಿದ್ಧಾಂತ ಮಾಡಿದ ಶ್ರೀಮದಾಚಾರ್ಯರ ಕಾಲನಿರ್ಣಯದ ಪ್ರಕಾರ ಈ ಅರಸನು ಶ್ರೀಮನ್ಮಧ್ವಾಚಾರ್ಯರ ಸಮಕಾಲೀನನಾಗಿದ್ದುದರಿಂದಲೂ ಇವನೇ ಎಂಬುದು ಹೇಗೆ ನಿಸ್ಸಂದೇಹವಾಗಿದೆಯೋ ಹಾಗೆಯೇ ನಾವು ಮಾಡಿದ ಶ್ರೀಮನ್ಮಧ್ವಾಚಾರ್ಯರ ಕಾಲನಿರ್ಣಯವೂ ಸತ್ಯಸಿದ್ಧಾಂತವಾಗಿದೆ ಎಂಬುದು ಸಿದ್ಧ.

ಆದರೆ ಶ್ರೀಮಾನ್ ಸಿ. ಎಮ್. ಪದ್ಮನಾಭಾಚಾರ್ಯರು 'ಈಶ್ವರದೇವ' ಎಂಬ ನಾಮಕ್ಕೆ ದ್ರಾವಿಡೀಯ ಪ್ರಾಣಾಯಾಮದಂತೆ ವಿನಾಕಾರಣ 'ಮಹಾದೇವ' ಎಂದು ಅರ್ಥ ಮಾಡಿ,

ಇವನು ದೇವಗಿರಿಯಾದವ ಮಹಾದೇವ ರಾಜನೆಂದು (ಕ್ರಿ. ಪ. ೧೨೬೦-೧೨೭೧) ಹೇಳುವು ದಕ್ಕೆ ಹೊರಟಿದ್ದಾರೆ! ಇದು ಕೇವಲ 'ಬಕಬಂಧನನ್ಯಾಯ'ವೇ ಸರಿ. ಅರ್ಥಾತ್ ಈ ಶ್ರಮವು ವ್ಯರ್ಥವಾಗಿದೆ.

(೧೩) ಮೂಲರಾಮಸೀತಾ ಪ್ರತಿಮೆಗಳ ವಿಷಯವಾಗಿ ಶ್ರೀಮಾನ್ ಸಿ. ಎಮ್. ಪದ್ಮ ನಾಭಾಚಾರ್ಯರು ತಾವು ಬರೆದ ಶ್ರೀಮನ್ಮಧ್ವಾಚಾರ್ಯರ ಚರಿತ್ರದ ೬ನೆಯ ಉಲ್ಲಾಸದಲ್ಲಿ ಹೀಗೆ ಹೇಳಿದ್ದಾರೆ:- "ಮೂಲರಾಮಸೀತಾಪ್ರತಿಮೆಗಳು ಗಜಪತಿರಾಜರ ಕೋಶದಲ್ಲಿ ನಿಕ್ಷಿಪ್ತ ವಾಗಿ ಇದ್ದದ್ದನ್ನು ಶ್ರೀಮದಾಚಾರ್ಯರು ನರಹರಿತೀರ್ಥರ ದ್ವಾರಾ ತಿಳಿದು, ಅವರಿಂದ ಅವುಗಳನ್ನು ತರಿಸಿ ಪೂಜಿಸಿದರು." ಮತ್ತು "ನರಹರಿತೀರ್ಥರು ಆ ಕಲಿಂಗದೇಶದ ಗಜಪತಿ ರಾಜರ ರಾಜಾಮಾತ್ಯಸ್ಥಾನವನ್ನು ವಂಶಪರಂಪರೆಯಿಂದ ಪಡೆದ ಮನೆತನಕ್ಕೆ ಸೇರಿದವರು; ಲೌಕಿಕ ವೈದಿಕ ಸಾಮ್ರಾಜ್ಯಭಾಗ್ಯಸಂಪನ್ನರು."

ಇದೂ ಅಲ್ಲದೆ ೯ನೆಯ ಉಲ್ಲಾಸದಲ್ಲಿ ಹೀಗೆ ಹೇಳಿದ್ದಾರೆ:- **ಆಚಾರ್ಯರು ಅದೃಶ್ಯ ರಾಗುವುದಕ್ಕೆ ಸ್ವಲ್ಪ ಕಾಲವು ಇರಲು ನರಹರಿತೀರ್ಥಯತಿವರರು ಮೂಲರಾಮ ಸೀತಾಪ್ರತಿಮೆಗಳನ್ನು ಗಂಜಾಮ ದೇಶದಿಂದ ತೆಗೆದುಕೊಂಡು ಬಂದು, ಆಶ್ವೀಜ ಶುದ್ಧ ಪಂಚಮಿ ದಿವಸ ಆಚಾರ್ಯರಲ್ಲಿ ಸಮರ್ಪಿಸಿದರು.** ಮೂರು ತಿಂಗಳು ಹದಿನಾರು ದಿವಸ ತಮ್ಮ ಪೆಟ್ಟಿಗೆಯಲ್ಲಿಟ್ಟು ಪೂಜಿಸಿ, ಕರಕಮಲ ಸಂಜಾತ ಯತಿಶಿಷ್ಯ ಪದ್ಮನಾಭತೀರ್ಥ ರಲ್ಲಿ ಆಚಾರ್ಯರು ದೇವತಾರ್ಚನೆಯನ್ನು ಸಮರ್ಪಿಸಿದರು. ಪಿಂಗಳ ನಾಮಸಂವತ್ಸರದ ಮಾಘ ಶುದ್ಧ ನವಮಿ ದಿನದಲ್ಲಿ ಆಚಾರ್ಯರು ಅದೃಶ್ಯರಾದರು."

ಈ ದಂತಕಥೆಗಳಿಗೂ, ಆ ಗಂಜಾಮುದೇಶದಲ್ಲಿದ್ದ ೧೧೮೬ನೆಯ ಶಕವರ್ಷದಿಂದ ೧೨೧೫ ನೆಯ ಶಕವರ್ಷದ ವರೆಗಿನ ಶ್ರೀ ನರಹರಿತೀರ್ಥರ ಶಿಲಾಲೇಖಗಳಿಗೂ ಸಮನ್ವಯವಾಗ ಬೇಕಾದರೆ, ಹೀಗೆ ಹೇಳಿದ ಹೊರತು ಗತ್ಯಂತರವಿಲ್ಲ. ಹೇಗೆಂದರೆ:- ೧೧೮೬ನೆಯ ಶಕವರ್ಷಕ್ಕೆ ಮುಂಚೆ ೭ ವರ್ಷಗಳ ಹಿಂದೆ ೧೧೭೯ನೆಯ ಶಕವರ್ಷದಲ್ಲಿ ಬಂದಿರುವ ಪಿಂಗಳ ಸಂವತ್ಸರದ ಆರಂಭದಲ್ಲಿ ಶ್ರೀ ನರಹರಿತೀರ್ಥರು ಆ ಗಂಜಾಮದೇಶಕ್ಕೆ ಹೋಗಿ, ತಮ್ಮ ಪೂರ್ವಾಶ್ರಮದ ಮನೆತನಕ್ಕೆ ವಂಶಪರಂಪರಾಗತವಾಗಿ ಬಂದ ಗಜಪತಿರಾಜರ ಅಮಾತ್ಯ ಪದವಿಯನ್ನು ಅಯಾಚಿತವಾಗಿ ಸ್ವೀಕರಿಸಿ, ನಾಲ್ಕೈದು ತಿಂಗಳು ರಾಜ್ಯಕಾರಭಾರವನ್ನು ಮಾಡಿ, ಅಲ್ಲಿದ್ದ ಮೂಲರಾಮಸೀತಾಪ್ರತಿಮೆಗಳನ್ನು ಆ ರಾಜರಿಂದ ಇಸಕೊಂಡು ಶ್ರೀಮಧ್ವಾಚಾರ್ಯರಿಗೆ ಆಶ್ವೀನ ಶುದ್ಧ ಪಂಚಮಿ ದಿವಸ ತಂದು ಕೊಟ್ಟರು. ಆಗ ಆಚಾರ್ಯರು ೩ ತಿಂಗಳು ೧೬ ದಿವಸ ಆ ಪ್ರತಿಮೆಗಳನ್ನು ಪೂಜಿಸಿ, ಮಾಘ ಶುದ್ಧ ನವಮಿಯ ದಿವಸ ಅದೃಶ್ಯರಾದರು. ಆ ಬಳಿಕ ಶ್ರೀ ನರಹರಿತೀರ್ಥರು ಪುನಃ ಗಂಜಾಮ ದೇಶಕ್ಕೆ ಹೋಗಿ ೧೨೧೫ನೆಯ ಶಕವರ್ಷದ ವರೆಗೆ ಅಲ್ಲಿಯೇ ಅಮಾತ್ಯರಾಗಿ ಇದ್ದರು." ಅತಏವ ಶ್ರೀ ಮಧ್ವಾಚಾರ್ಯರು ೧೧೭೯ನೆಯ ಶಕವರ್ಷದ ಪಿಂಗಳ ಸಂವತ್ಸರದ ಮಾಘ ಶುದ್ಧ ನವಮಿ ದಿವಸ ಅದೃಶ್ಯರಾದರೆಂದು ಹೇಳುವುದು ಅಪರಿಹಾರ್ಯವಾಗಿದೆ.

(೧೪) ದಕ್ಷಿಣದೇಶ ದಿಗ್ವಿಜಯಕಾಲದಲ್ಲಿ ಶ್ರೀಮನ್ಮಧ್ವಾಚಾರ್ಯರು ಅನಂತಶಯನ ಕ್ಷೇತ್ರಕ್ಕೆ ಹೋಗಿ, ಅಲ್ಲಿ ತಮ್ಮ ಶಿಷ್ಯರಿಗೆ ದ್ವೈತಸಿದ್ಧಾಂತಕ್ಕನುಸರಿಸಿ ಬ್ರಹ್ಮಸೂತ್ರಗಳ ಅರ್ಥವನ್ನು ಉಪದೇಶ ಮಾಡಲಾರಂಭಿಸಿದರು. ಆ ಕಾಲಕ್ಕೆ ಅಲ್ಲಿಗೆ ಬಂದಿದ್ದ ಶೃಂಗೇರಿ ಮಠಾಧಿಪತಿಗಳಾದ ಶಂಕರಸ್ವಾಮಿಗಳು ಶ್ರೀಮನ್ಮಧ್ವಾಚಾರ್ಯರನ್ನು ಕುರಿತು:- "ತಾವು

ಭಾಷ್ಯಕಾರರಲ್ಲ; ಆದ್ದರಿಂದ ಮೊದಲಿನ ಪ್ರಸಿದ್ಧ ಭಾಷ್ಯವನ್ನು ಬಿಟ್ಟು. ಬ್ರಹ್ಮಸೂತ್ರಗಳಿಗೆ ತಮಗೆ ತೋರಿದಂತೆ ಅರ್ಥ ಹೇಳುವುದು ಸಂಪ್ರದಾಯವಿರುದ್ಧವೆಂ''ದು ಹೇಳಿದರು. ಆ ಮಾತಿಗೆ ಶ್ರೀಮದಾನಂದತೀರ್ಥರು:– "ನಾವು ಹೇಳಿದ ಸೂತ್ರಾರ್ಥ ವಿಷಯದಲ್ಲಿ ಅದನ್ನು ನಿರಾಕರಿಸುವ ಉತ್ತರವು ನಿಮಗೆ ತೋರಿದರೆ ಹೇಳಿರಿ. ನಾವೂ ಭಾಷ್ಯವನ್ನು ಮಾಡೇ ಮಾಡು ವೆವು. ಭಾಷ್ಯವನ್ನು ಮಾಡುವುದಕ್ಕೆ ಪ್ರತಿಬಂಧ ಮಾಡುವವರು ಯಾರು?'' ಎಂದು ಉತ್ತರ ಕೊಡಲು "ಆ ಶ್ರೀ ಶಂಕರಸ್ವಾಮಿಗಳು ನಿರುತ್ತರರಾದರು. ಹಾಗೂ ಅಲ್ಲಿ ಕೂಡಿರುವ ಸಮಸ್ತ ಜನರೂ ಶ್ರೀಮನ್ಮಧ್ವಾಚಾರ್ಯರ ಮಾತನ್ನು ಅಭಿನಂದಿಸಿದರು." ಎಂದು ಸುಮಧ್ವವಿಜ ಯದ ೫ನೆಯ ಸರ್ಗದಲ್ಲಿ ಒಂದು ಕಥೆಯುಂಟು. ಶ್ರೀಮನ್ಮಧ್ವಾಚಾರ್ಯರ ಕಾಲದಲ್ಲಿದ್ದ ಶೃಂಗೇರಿ ಮಠಾಧಿಪತಿಗಳಾದ ಶಂಕರಸ್ವಾಮಿಗಳೆಂದರೆ, ಶ್ರೀ ವಿದ್ಯಾಶಂಕರಸ್ವಾಮಿಗಳೇ ಸರಿ. ಏಕೆಂದರೆ, ಈ ವಿದ್ಯಾಶಂಕರಸ್ವಾಮಿಗಳು ೧೧೫೦ನೆಯ ಶಕವರ್ಷದಲ್ಲಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ಶೃಂಗೇರಿ ಪೀಠವನ್ನು ಆರೋಹಣ ಮಾಡಿ, ೧೨೫೫ನೆಯ ಶಕವರ್ಷದಲ್ಲಿ ಸಮಾಧಿ ಸ್ಥರಾದರೆಂದು ಶೃಂಗೇರಿ ಮಠದ ಗುರುಪರಂಪರಾಪೀಳಿಗೆಯಲ್ಲಿ ಹೇಳಿದೆ. ಅತಏವ ಈ ವಿದ್ಯಾ ಶಂಕರಸ್ವಾಮಿಗಳು ೧೧೫೦ನೆಯ ಶಕವರ್ಷದಿಂದ ೧೧೯೭ನೆಯ ಶಕವರ್ಷದ ವರೆಗೆ ಎಂದರೆ ಶ್ರೀಮನ್ಮಧ್ವಾಚಾರ್ಯರ ನಿರ್ಯಾಣಕಾಲದ ವರೆಗೆ ಶೃಂಗೇರಿ ಮಠಾಧಿಪತಿಗಳಾಗಿ ಇದ್ದೇ ಇರುವುದರಿಂದ ಈ ಕಥೆಯು ನಾವು ಹೇಳಿದ ಶ್ರೀಮದಾನಂದತೀರ್ಥರ ಕಾಲನಿರ್ಣಯಕ್ಕೆ ಪೋಷಕವಾಗಿದೆಯೇ ಹೊರತು ಬಾಧಕವಾಗಿಲ್ಲ.

(೧೫) ಶ್ರೀ ವಿದ್ಯಾರಣ್ಯರು ಇಂತಿಷ್ಟೇ ವರ್ಷಗಳ ವರೆಗೆ ಜೀವಿಸಿದ್ದರೆಂದು ಸಿದ್ಧಾಂತ ವಾಗಿ ಹೇಳಲು ಬಲವತ್ತರವಾದ ಐತಿಹಾಸಿಕ ಪ್ರಮಾಣಗಳು ಇಲ್ಲವೇ ಇಲ್ಲ. ಸಾಮಾನ್ಯತಃ ಮನುಷ್ಯನು ಪರಮಾವಧಿಯಾಗಿ ಬದುಕುವುದೆಂದರೆ ನೂರು ವರ್ಷಗಳ ವರೆಗೆ ಎಂಬುದು ಲೋಕವಿಖ್ಯಾತವಾಗಿದೆ. ಶ್ರಿ ವಿದ್ಯಾರಣ್ಯರು ೧೩೦೮ನೆಯ ಶಕವರ್ಷದ ಕ್ಷಯಸಂವತ್ಸರದಲ್ಲಿ ನಿರ್ಯಾಣ ಹೊಂದಿದರೆಂಬುದು ಸಪ್ರಮಾಣವಾಗಿದೆ. ಇತ್ಯರ್ಥವೇನೆಂದರೆ, ಶ್ರೀ ವಿದ್ಯಾರ ಣ್ಯರು ನಿರ್ಯಾಣ ಹೊಂದುವುದಕ್ಕಿಂತ ೯೬ ವರ್ಷಗಳ ಮುಂಚೆ ಎಂದರೆ ೧೨೧೨ನೆಯ ಶಕ ವರ್ಷದಲ್ಲಿ ಶ್ರೀ ಅಕ್ಷೋಭ್ಯತೀರ್ಥರು ವೃಂದಾವನಸ್ಥರಾದಾಗ್ಗೆ, ಈ ವಿದ್ಯಾರಣ್ಯರು ತೀರ ಚಿಕ್ಕ ವಯಸ್ಸಿನ ಬಾಲಕರಾಗಿದ್ದರೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಅತಏವ ಶ್ರೀ ಅಕ್ಷೋಭ್ಯತೀರ್ಥರಿಗೂ ಶ್ರೀ ವಿದ್ಯಾರಣ್ಯರಿಗೂ ವಾದವಿವಾದವಾಗುವುದು ಗಗನಕುಸುಮ ದಷ್ಟು ಅಸಂಭವವಾಗಿರುತ್ತದೆಂಬುದು ಸಿದ್ಧ.

ಈ ಉಭಯಪಂಡಿತರಲ್ಲಿ ವಾದವಿವಾದವಾಯಿತೆಂಬ ಈ ಕಟ್ಟುಕಥೆಯು ಹುಟ್ಟಿ ಬೆಳೆದ ವೃತ್ತಾಂತವು ಬಹು ಮನೋರಂಜಕವಾಗಿರುವುದರಿಂದ ಇದನ್ನು ನಮ್ಮ ವಾಚಕರ ಅವಗಾಹನೆ ಕ್ಕಾಗಿ ಇದರಡಿಯಲ್ಲಿ ಸಾದ್ಯಂತವಾಗಿ ಹೇಳುತ್ತೇನೆ.

ಶ್ರೀ ಅಕ್ಷೋಭ್ಯತೀರ್ಥರ ಸಾಕ್ಷಾತ್ ಶಿಷ್ಯರಾದ ಶ್ರಿ ಜಯತೀರ್ಥರು ತಾವು ಬರೆದ "ತತ್ವಪ್ರಕಾಶಿಕಾ" ಎಂಬ ಟೀಕೆಯ ಮಂಗಲಾಚರಣದಲ್ಲಿ ತಮ್ಮ ಗುರುಗಳಾದ ಈ ಶ್ರೀ ಅಕ್ಷೋಭ್ಯತೀರ್ಥರನ್ನು ಕುರಿತು ಸ್ತುತಿಸಿ, ನಮಸ್ಕಾರ ಮಾಡುವಾಗ್ಗೆ ಹೀಗೆ ಹೇಳಿದ್ದಾರೆ:–

"ದುರ್ವಾದಿವಾರಣ ವಿದಾರಣದಕ್ಷದೀಕ್ಷಮಕ್ಷೋಭ್ಯತೀರ್ಥಮೃಗರಾಜಮಹಂ
ನಮಾಮಿ" ॥ ೫ ॥

ಅರ್ಥ:- ಅಶಾಸ್ತ್ರೀಯವಾಗಿ ವಾದಮಾಡುವಂಥ ದುರ್ವಾದಿಗಳೆಂಬ ಆನೆಗಳನ್ನು ದಕ್ಷತೆಯಿಂದ ಸೀಳಿ ಹಾಕುವುದಕ್ಕೆ ದೃಢನಿಶ್ಚಯವನ್ನು ಮಾಡಿದಂಥ ಅಕ್ಷೋಭ್ಯತೀರ್ಥರೆಂಬ ಸಿಂಹನಿಗೆ ನಾನು ನಮಸ್ಕರಿಸುತ್ತೇನೆ.

ಎಂದರೆ ಶ್ರೀ ಜಯತೀರ್ಥರು, ತಮ್ಮ ಗುರುಗಳಾದ ಶ್ರೀ ಅಕ್ಷೋಭ್ಯತೀರ್ಥರು ದುರ್ವಾದಿಗಳನ್ನು ಗೆದ್ದರೆಂದು ಸಾಮಾನ್ಯವಾಗಿ ಧ್ವನಿತಮಾಡಿದರೇ ಹೊರತು ಶ್ರೀ ವಿದ್ಯಾರಣ್ಯರನ್ನು ಇವರು ಗೆದ್ದರೆಂದು ಎಲ್ಲಿಯೂ ಹೇಳಿರುವುದಿಲ್ಲ. ಇದೇ ಮೇರೆಗೆ ಶ್ರೀ ಜಯತೀರ್ಥರ ಸಾಕ್ಷಾತ್ ಶಿಷ್ಯರಾದ ಎಂದರೆ ಶ್ರೀ ಅಕ್ಷೋಭ್ಯತೀರ್ಥರ ಪ್ರಶಿಷ್ಯರಾದ ವ್ಯಾಸತೀರ್ಥರೂ ಸಹ ತಾವು ರಚಿಸಿದ (೧) ೩೪೪ ಶ್ಲೋಕಗಳುಳ್ಳಂಥ "ಶ್ರೀಜಯತೀರ್ಥ ವಿಜಯ'' ಎಂಬ ಪುಸ್ತಕದಲ್ಲಿ ಶ್ರೀ ಅಕ್ಷೋಭ್ಯತೀರ್ಥರು ಶ್ರೀ ವಿದ್ಯಾರಣ್ಯರನ್ನು ಗೆದ್ದರೆಂದು ಎಲ್ಲಿಯೂ ಹೇಳಿರುವುದಿಲ್ಲ. ಹಾಗಾದರೆ ಈ ಕಟ್ಟುಕಥೆಯ ಜನಕರು ಯಾರು? ಶ್ರೀ ಅಕ್ಷೋಭ್ಯತೀರ್ಥರು ವೃಂದಾವನಸ್ಥರಾಗಿ ೩೧೦ ವರ್ಷಗಳಾದ ಮೇಲೆ ಆಗಿ ಹೋದಂಥ ಸಂಕರ್ಷಣಾಚಾರ್ಯರೇ ಈ ಕಥೆಯ ಜನಕರು. ಇವರು ಈ ಕಥೆಯ ಬೀಜವನ್ನು ಬಿತ್ತಿದರು. ಮುಂದೆ ಅದು ಮೊಳಕೆಯೊಡೆದು ಬೆಳೆಯುತ್ತ ಬೆಳೆಯುತ್ತ ದೊಡ್ಡವೃಕ್ಷವಾಯಿತು. ಈ ಕಥೆಯ ಬೀಜವನ್ನು ಬಿತ್ತಿ, ಇದನ್ನು ದೊಡ್ಡ ವೃಕ್ಷವನ್ನಾಗಿ ಮಾಡುವ ಕಾರ್ಯದಲ್ಲಿ-ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಮತಗಳ ಅನುಯಾಯಿಗಳಾದ ಸಂಕರ್ಷಣಾಚಾರ್ಯರು, ದೊಡ್ಡಯ್ಯಾಚಾರ್ಯರು, ಎಂದರೆ ಮಹಾಚಾರ್ಯರು, ಮತ್ತು ರಾಮಯೋಗೀಂದ್ರರು ಪ್ರಭೃತಿಗಳಾದ ತ್ರಿಮತಸ್ಥರೂ ಭಾಗ ತೆಗೆದುಕೊಂಡಿದ್ದಾರೆ. ಅದು ಹೇಗೆಂದರೆ:-

(೨)

ಸಂಕರ್ಷಣಾಚಾರ್ಯರು ೧೫೯೭ನೆಯ ಶಕವರ್ಷದಲ್ಲಿ ಎಂದರೆ ಕ್ರಿ. ವ. ೧೬೭೫ ರಲ್ಲಿ ತಾವು ಬರೆದ "ಶ್ರೀಜಯತೀರ್ಥವಿಜಯ'' ಎಂಬ ಪುಸ್ತಕದಲ್ಲಿ, ಶ್ರೀ ಅಕ್ಷೋಭ್ಯತೀರ್ಥರು ಶ್ರೀ ವಿದ್ಯಾರಣ್ಯರನ್ನು ಸೋಲಿಸಿದರೆಂಬ ನಿರಾಧಾರವಾದ ಅತಏವ ಸ್ವಕಪೋಲಕಲ್ಪಿತವಾದ ಸಂಗತಿಯನ್ನು ಹೀಗೆ ಹೇಳಿದ್ದಾರೆ:-

ಅಕ್ಷೋಭ್ಯತೀರ್ಥಯತಿರಾಡಖಿಲೈರಭೇದ್ಯೋ ದುರ್ವಾದಿವಾರಣ ವಿದಾರಣಕೇಸರೀಂದ್ರಃ ॥
ಸತ್ತತ್ತ್ವಮಸ್ಯಭಿಧವಾಗಸಿನಾ ಸ್ಮ ವಿದ್ಯಾರಣ್ಯಂ ಭಿನತ್ತಿ ಪರಜೀವ ವಿಭೇದಿನಾ ತಂ ॥೨-೨೩॥

---

(೧) ಶ್ರೀ ಜಯತೀರ್ಥರ ಸಾಕ್ಷಾತ್ ಶಿಷ್ಯರಾದ ವ್ಯಾಸತೀರ್ಥರು ತಾವು ಬರೆದ "ಶ್ರೀ ಜಯತೀರ್ಥವಿಜಯ" ಎಂಬ ಪುಸ್ತಕದ ಕೊನೆಯಲ್ಲಿ "ಗುರುಭಿರನುದಿನಂ ವರ್ಣಿತಂ ವರ್ಣಿತಂ ಮೇ ॥" ಎಂದರೆ "ಗುರುಗಳು (ತಮ್ಮ ದಿವ್ಯ ಚರಿತ್ರವನ್ನು) ದಿನಾಲು ಹೇಳುತ್ತಿದ್ದುದನ್ನೇ ನಾನು (ಈ ಗ್ರಂಥದಲ್ಲಿ) ಹೇಳಿರುವೆನು." ಎಂದು ಹೇಳಿದ್ದರಿಂದ ಅರ್ಥಾತ್ ಶ್ರೀ ಜಯತೀರ್ಥರ ಸಮಕಾಲೀನ ಲೇಖಕರಿಂದ ಈ ಪುಸ್ತಕದಲ್ಲಿ ಶ್ರೀ ಜಯತೀರ್ಥರ ಚರಿತ್ರವು ಬರೆಯಲ್ಪಟ್ಟಿದ್ದರಿಂದ ಈ ಪುಸ್ತಕವು ಪ್ರಮಾಣಕ್ಕೆ ಅರ್ಹವಾಗಿದೆ.

(೨) ಸಂಕರ್ಷಣಾಚಾರ್ಯರು ತಾವು ಬರೆದ "ಶ್ರೀ ಜಯತೀರ್ಥವಿಜಯ" ಗ್ರಂಥದ ಮಂಗಲಾಚರಣದಲ್ಲಿ ಉತ್ತರಾದಿ ಮಠದ ಜಗದ್ಗುರುಗಳಾದ ಶ್ರೀ ಸತ್ಯನಿಧಿತೀರ್ಥರನ್ನೂ (ಇವರು ಶಕವರ್ಷದ ೧೫೬೦ ರಿಂದ ೧೫೮೨ ರ ವರೆಗೆ ಆಳಿದರು.) ಶ್ರೀ ಸತ್ಯನಾಥತೀರ್ಥರನ್ನೂ (ಶ. ವ. ೧೫೮೨–೧೫೯೬) ಮತ್ತು ಶ್ರೀ ಸತ್ಯಾಭಿನವತೀರ್ಥರನ್ನೂ (ಶ. ವ. ೧೫೯೬–೧೬೨೮) ಸ್ತುತಿಸಿದ್ದಾರೆ. ಅತಏವ ಈ ಸಂಕರ್ಷಣಾಚಾರ್ಯರು ಸುಮಾರು ೧೫೯೭ನೆಯ ಶಕವರ್ಷದಲ್ಲಿ ಈ ಜಯತೀರ್ಥವಿಜಯ ಪುಸ್ತಕವನ್ನು ಬರೆದಿದ್ದಾರೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಈ ಪುಸ್ತಕವು, ಶ್ರೀ ಅಕ್ಷೋಭ್ಯತೀರ್ಥರ ನಿರ್ಯಾಣ ಕಾಲದಿಂದ ೩೧೦ ವರ್ಷಗಳಾದ ಬಳಿಕ (ಅಥವಾ ಶ್ರೀ ಜಯತೀರ್ಥರು ನಿರ್ಯಾಣ ಹೊಂದಿದ ಬಳಿಕ ೨೮೭ ವರ್ಷಗಳ ಮೇಲೆ) ಬರೆಯಲ್ಪಟ್ಟಿದ್ದರಿಂದ ಎಂದರೆ ಈ ಪುಸ್ತಕವನ್ನು ಬಹು ದೂರ ಕಾಲೀನ ಲೇಖಕನು ಬರೆದದ್ದರಿಂದ ಇದು ಪ್ರಮಾಣಕ್ಕೆ ಅನರ್ಹವಾಗಿದೆ.

ಅರ್ಥ:- ಎಲ್ಲರಿಂದಲೂ ಅಜೇಯನಾದಂಥ, ದುರ್ವಾದಿಗಳೆಂಬ ಆನೆಗಳನ್ನು ಸೀಳಿ ಹಾಕುವ ಸಿಂಹಶ್ರೇಷ್ಠನಾದಂಥ ಅಕ್ಷೋಭ್ಯತೀರ್ಥಯತಿರಾಜನು, ಜೀವೇಶರ ಭೇದವನ್ನು ವ್ಯಕ್ತಪಡಿಸುವ, ಶ್ರೇಷ್ಠವಾದ ತತ್ತ್ವಮಸಿವಾಕ್ಯವೆಂಬ ಖಡ್ಗದಿಂದ ಆ ವಿದ್ಯಾರಣ್ಯನೆಂಬ ಅರಣ್ಯವನ್ನು ಛೇದಿಸಿದನು.

ಉಗಮಸ್ಥಾನದಲ್ಲಿ ಈ ಕಥೆಯು ಇಷ್ಟೇ ಅತ್ಯಲ್ಪವಾಗಿದೆ. ಎಂದರೆ ಬೀಜರೂಪವಾಗಿದೆ. ಸಂಕರ್ಷಣಾಚಾರ್ಯರು ಶ. ವ. ೧೨೫೭ ರಲ್ಲಿ ಎಂದರೆ ಕ್ರಿ. ವ. ೧೩೩೫ ರಲ್ಲಿ ಈ ಕಥೆಯ ಬೀಜವನ್ನು ಬಿತ್ತಿದ ಬಳಿಕ ಮುಂದೆ ಸುಮಾರು ೨೨ ವರ್ಷಗಳ ಮೇಲೆ ಕ್ರಿ. ವ. ೧೩೫೭ (೧) ರಲ್ಲಿ ವಿಶಿಷ್ಟಾದ್ವೈತ ಮತಾನುಯಾಯಿಗಳಾದಂಥ ಮತ್ತು ದೊಡ್ಡಯ್ಯಾಚಾರ್ಯರೆಂದೂ ಮಹಾಚಾರ್ಯರೆಂದೂ ಪ್ರಸಿದ್ಧರಾದಂಥ ಶ್ರೀನಿವಾಸಮಹಾಸೂರಿಗಳವರು ತಾವು ಬರೆದ "ಶ್ರೀ ವೇದಾನ್ತದೇಶಿಕ ವೈಭವಪ್ರಕಾಶಿಕಾಸ್ತೋತ್ರ" ಎಂಬ ಪುಸ್ತಕದಲ್ಲಿ ಶ್ರೀವೇದಾನ್ತದೇಶಿಕಾಚಾರ್ಯರ ಚರಿತ್ರವನ್ನು ನಿರೂಪಿಸುವಾಗ, "ಶ್ರೀ ಅಕ್ಷೋಭ್ಯತೀರ್ಥರಿಗೂ ಶ್ರೀ ವಿದ್ಯಾರಣ್ಯರಿಗೂ ವಾದವಿವಾದವು ನಡೆದ ಕಾಲದಲ್ಲಿ ಶ್ರೀ ವೇದಾಂತದೇಶಿಕಾಚಾರ್ಯರು ನ್ಯಾಯಾಧೀಶರಾಗಿ ಕೊನೆಯ ತೀರ್ಪನ್ನು ಹೇಳಿದರು." ಎಂಬ ವಿಷಯವನ್ನು, ಈ ಸಂಕರ್ಷಣಾಚಾರ್ಯಪ್ರಣೀತ ಕಥಾಭಾಗದಲ್ಲಿ ಹೆಚ್ಚಾಗಿ ಸೇರಿಸಿ ಈ ಕಥೆಯನ್ನು ಬೆಳೆಸಿ, ಇದಕ್ಕೆ ಮನೋಹರ ರೂಪವನ್ನುಂಟು ಮಾಡಿದರು. ಅದು ಹೇಗೆಂದರೆ:-

ಕದಾಚಿದಕ್ಷೋಭ್ಯಮುನೇಶ್ಚ ವಿದ್ಯಾರಣ್ಯಸ್ಯಜಾತಂ ಬಹುಳಂ ವಿವಾದಂ ॥
ವಿಲಿಖ್ಯಭೂಪೋ ವಿಬುಧಾಯ ಯಸ್ಮೈ ಸಂಪ್ರೇಷಯಾಮಾಸ ತಮಾಶ್ರಯೇಽಹಂ ॥ ೭೬ ॥

ತತ್ತ್ವಮಸಿನಾಸಿನಾ ತಂ ವಿದ್ಯಾರಣ್ಯಂ ಮುನಿಸ್ತದಾಕ್ಷೋಭ್ಯಃ ॥
ಅಚ್ಛಿನದಿತ್ಯವದದ್ಯಸ್ತಂ ಸೇವೇ ತತ್ವನಿರ್ಣಯೇ ಚತುರಂ ॥ ೭೭ ॥

ಅರ್ಥ:- ಒಂದಾನೊಂದು ಕಾಲದಲ್ಲಿ ಅಕ್ಷೋಭ್ಯಮುನಿಗೂ ವಿದ್ಯಾರಣ್ಯನಿಗೂ ಬಹಳ ವಿವಾದವುಂಟಾಯಿತು. ಆಗ ಅರಸನು (ಈ ವಾದವಿವಾದವನ್ನು) ಬರೆದು, ಯಾವ ಪಂಡಿತನಿಗೆ ಕಳುಹಿಸಿದನೋ, ಆ ಪಂಡಿತನನ್ನು (ಎಂದರೆ ಆ ವೇದಾನ್ತದೇಶಿಕಾಚಾರ್ಯರನ್ನು) ನಾನು ಆಶ್ರಯಿಸುತ್ತೇನೆ. (೭೬) ಅಕ್ಷೋಭ್ಯಮುನಿಯು ತತ್ತ್ವಮಸಿವಾಕ್ಯವೆಂಬ ಖಡ್ಗದಿಂದ ಆ ವಿದ್ಯಾರಣ್ಯನೆಂಬ ಅರಣ್ಯವನ್ನು ಛೇದಿಸಿದನೆಂದು ಯಾವನು (ನಿರ್ಣಯವನ್ನು) ಹೇಳಿದನೋ, ತತ್ತ್ವನಿರ್ಣಯದಲ್ಲಿ ಚತುರನಾದ ಆತನನ್ನು (ಎಂದರೆ ಆ ವೇದಾನ್ತದೇಶಿಕಾಚಾರ್ಯನನ್ನು) ಸೇವಿಸುತ್ತೇನೆ. (೭೭)

---

(೧) ದೊಡ್ಡಯ್ಯಾಚಾರ್ಯರ ಕಾಲನಿರ್ಣಯವನ್ನು ಮಾಡುವದಕ್ಕೋಸ್ಕರ ಮೈಸೂರು ಸಂಸ್ಥಾನದ ಶಾಸನದ ಇಲಾಖೆಯ ಡೈರೆಕ್ಟರಾದ ಶ್ರೀಮಾನ್ ಎಮ್. ಎಚ್. ಕೃಷ್ಣಯ್ಯಂಗಾರ್ಯರವರಿಗೆ ವಿನಯಪೂರ್ವಕವಾಗಿ ಕೆಲವು ಸಂಗತಿಗಳನ್ನು ವಿಚಾರಿಸಲು, ಡೈರೆಕ್ಟರಾದ ಶ್ರೀಮಾನ್ ಎಮ್. ಎಚ್. ಕೃಷ್ಣರವರೂ ಇವರ ಅಸಿಸ್ಟಂಟರಾದ ಶ್ರೀಮಾನ್ ಆರ್. ರಾಮರಾವ ಇವರೂ ಈ ವಿಷಯವಾಗಿ ಬಹಳ ಮಹತ್ವದ ಸಂಗತಿಗಳನ್ನು ತಿಳುಹಿಸಿದರು. ಇದಕ್ಕೋಸ್ಕರ ಈ ಮಹನೀಯರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ ಸಂಗತಿಗಳ ಆಧಾರದಿಂದ ದೊಡ್ಡಯ್ಯಾಚಾರ್ಯರು ಸುಮಾರು ಕ್ರಿ. ವ. ೧೩೫೭ ರಲ್ಲಿ "ಶ್ರೀ ವೇದಾನ್ತದೇಶಿಕ ವೈಭವ ಪ್ರಕಾಶಿಕಾಸ್ತೋತ್ರ"ವೆಂಬ ಗ್ರಂಥವನ್ನು ರಚಿಸಿದರೆಂದು ಹೀಗೆ ನಿರ್ಣಯಿಸಿದ್ದೇನೆ:- ( ೨೩ನೆಯ ಪುಟದ ಅಡಿ ಟಿಪ್ಪಣಿಯನ್ನು ನೋಡಿರಿ. )

ಈ ಪ್ರಕಾರ ಶ್ರೀ ವೇದಾಂತದೇಶಿಕಾಚಾರ್ಯರನ್ನು ನ್ಯಾಯಾಧೀಶರನ್ನಾಗಿ ಮಾಡಿದ ಕಥೆಯನ್ನು ಮೊಟ್ಟಮೊದಲು ಹೇಳಿದವರೆಂದರೆ ಈ ದೊಡ್ಡಯ್ಯಾಚಾರ್ಯರೇ ಸರಿ. ಈ ದೊಡ್ಡಯ್ಯಾಚಾರ್ಯರ ಕಾಲಕ್ಕೆ ಮುಂಚೆ ರಚಿಸಲ್ಪಟ್ಟ "ಗುರುಪರಂಪರಾ" ಎಂಬ ಶ್ರೀ ವೈಷ್ಣವ ಗ್ರಂಥದಲ್ಲಿ ಶ್ರೀ ವೇದಾನ್ತದೇಶಿಕಾಚಾರ್ಯರ ಚರಿತ್ರವು ಹೇಳಲ್ಪಟ್ಟಿದ್ದರೂ ಆದರಲ್ಲಿ ಈ ಕಥೆಯನ್ನು ಹೇಳಿರುವುದಿಲ್ಲ- ಆದರೆ ವೈರಾಗ್ಯಪಂಚಕದ ಕಥೆಯು ಮಾತ್ರ ಇದೆ. ಶ್ರೀ ವೇದಾನ್ತದೇಶಿಕಾಚಾರ್ಯರು ಶ್ರೀ ವಿದ್ಯಾರಣ್ಯರ ಸಮಕಾಲೀನರೆಂಬುದು ಐತಿಹಾಸಿಕ ಸತ್ಯವಾಗಿದೆ. ಶ್ರೀ ವೇದಾಂತದೇಶಿಕಾಚಾರ್ಯರೂ ಶ್ರೀ ವಿದ್ಯಾರಣ್ಯರೂ ಸಹಪಾಠಿಗಳಾಗಿದ್ದುದರಿಂದ ಶ್ರೀ ವಿದ್ಯಾರಣ್ಯರು, ಬಡವರಾದ ಶ್ರೀ ವೇದಾಂತದೇಶಿಕಾಚಾರ್ಯರಿಗೆ ಧನಸಾಹಾಯ್ಯವನ್ನು ಮಾಡಬೇಕೆಂದು ರಾಜಾಸ್ಥಾನಕ್ಕೆ ದಯಮಾಡಬೇಕೆಂದು ಆಹ್ವಾನ ಪತ್ರಿಕೆಯನ್ನು ಕಳುಹಿಸಲು, ಮಹಾತೇಜಸ್ವಿಗಳಾದ ಶ್ರೀ ವೇದಾಂತದೇಶಿಕಾಚಾರ್ಯರು ರಾಜಾಸ್ಥಾನಕ್ಕೆ ಬರುವುದಿಲ್ಲವೆಂದು,

---

"ರಾಮಾನುಜ ಸಿದ್ಧಾಂತ ವಿಜಯ" ಎಂಬ ಸಂಸ್ಕೃತ ಗ್ರಂಥವನ್ನು ೧೭ನೆಯ ಶತಮಾನದ ಕೊನೆಯಲ್ಲಿ ಕಂಚಿಯ ಅಳಗಿಯ ಮಣವಾಳಮಠದ ಸ್ವಾಮಿಗಳಾದ ಶ್ರೀನಿವಾಸ ರಮ್ಯಜಾಮಾತೃ ರಾಮಾನುಜ ಮುನಿಗಳು ಬರೆದಿದ್ದಾರೆ. ಈ ಗ್ರಂಥದಲ್ಲಿ ೧೬ನೆಯ ಶತಮಾನದ ಪೂರ್ವಭಾಗದಲ್ಲಿ ಸುಪ್ರಸಿದ್ಧರಾಗಿದ್ದ ಶ್ರೀ ವ್ಯಾಸತೀರ್ಥರು ಬರೆದಿದ್ದ "ಚಂದ್ರಿಕಾ" ಎಂಬ ಮಧ್ವಮತ ಗ್ರಂಥದ ಬಗ್ಗೆ ಖಂಡನಾತ್ಮಕ ಟೀಕೆಯು ಇದೆ. ಈ ರಾಮಾನುಜಮುನಿಗಳು ತಾವು ಬರೆದ ಈ "ರಾಮಾನುಜ ಸಿದ್ಧಾಂತ ವಿಜಯ" ಎಂಬ ಗ್ರಂಥದಲ್ಲಿ- ವಧೂಲ ವೆಂಕಟಾಚಾರ್ಯರು ತಮ್ಮ ಅಧ್ಯಾಪಕರೆಂದೂ ಮತ್ತು 'ಚಂಡಮಾರುತ' ಗ್ರಂಥದ ಕರ್ತೃವಾದ ದೊಡ್ಡಯ್ಯಾಚಾರ್ಯರು ತಮ್ಮ ಗುರುಗಳೆಂದೂ ಹೇಳಿದ್ದಾರೆ. ಇನ್ನು, ಈ ರಾಮಾನುಜ ಮುನಿಗಳು ಕ್ರಿ. ಶ. ೧೬೮೦ ರಲ್ಲಿ ಹುಟ್ಟಿದರೆಂದೂ, ಕ್ರಿ. ಶ. ೧೬೯೭ ರಲ್ಲಿ ಸನ್ಯಾಸಿಯಾದರೆಂದೂ ಮತ್ತು ಕ್ರಿ. ಶ. ೧೭೦೨ ರಲ್ಲಿ ಶ್ರೀರಂಗಪಟ್ಟಣಕ್ಕೆ ಬಂದಿದ್ದರೆಂದೂ ಇತ್ತೀಚೆಗೆ ಮುದ್ರಿಸಲ್ಪಟ್ಟ "ವೈಭವ ಪ್ರಕಾಶ" ಎಂಬ ಗ್ರಂಥದಿಂದ ತಿಳಿದು ಬರುತ್ತದೆ. ಅತಏವ ಈ ರಾಮಾನುಜಮುನಿಗಳು ೧೬೯೭ನೆಯ ಇಸವಿಯಲ್ಲಿ ಸನ್ಯಾಸಾಶ್ರಮವನ್ನು ಸ್ವೀಕರಿಸಿರುವುದರಿಂದ ಇವರ ಗುರುಗಳಾದ ದೊಡ್ಡಯ್ಯಾಚಾರ್ಯರು ಕೊನೆಯ ಪಕ್ಷ ಈ ೧೬೯೭ನೆಯ ಇಸವಿ ವರೆಗಂತೂ ಜೀವಿಸಿ ಇದ್ದಿರಬೇಕೆಂಬುದು ಸಿದ್ಧ. ಇಷ್ಟೇ ಅಲ್ಲ ಇವರು ಇದಕ್ಕೂ ಮುಂದೆ ಬಹುಕಾಲ ಜೀವಿಸಿ ಇದ್ದಿರಬಹುದು. ಇದರ ತಾತ್ಪರ್ಯವೇನೆಂದರೆ, ದೊಡ್ಡಯ್ಯಾಚಾರ್ಯರು ಸುಮಾರು ಕ್ರಿ. ಶ. ೧೬೯೭ ರಲ್ಲಿ "ಶ್ರೀ ವೇದಾಂತದೇಶಿಕ ವೈಭವ ಪ್ರಕಾಶಿಕಾಸ್ತೋತ್ರ"ವನ್ನು ರಚಿಸಿದರೆಂದು ಹೇಳುವುದು ಆಕ್ಷೇಪರಹಿತವಾಗಿದೆಂಬುದು ಸಿದ್ಧ.

Ramanuja siddhanta vijaya is likewise a Sanskrit work written at the close of the 17th Century by a Swami of the Alagiya-manavala matha of Kanchi, named Shrinivasa-Ramyajamatri-Ramanujamuni. It is a criticism of the Madhwa work called Chandrika by Vyasatirtha, who flourished in the early part of the 16th Century. The author mentions Vadhula Venkatarya as his teacher and Doddayacharya, author of the Chanda-maruta, as his guru. From a work called Vaibhavaprakasa, recently published, we learn that the author was born in 1680, became a sanyasi in 1697 and visited Seringapatam in 1702. (Extract from the Mysore Archaeologial Annual Report for the year 1913, pages 57-8).

Sd/- M. H. Krishna.
Director of
Archl. Researches in Mysore.

ತಮ್ಮ ವೈರಾಗ್ಯವನ್ನು ಸೂಚಿಸುವಂಥ ೫ ಶ್ಲೋಕಗಳನ್ನು ಬರೆದು ಕಳುಹಿಸಿದರು. ಅವುಗಳನ್ನು ಶ್ರೀ ವಿದ್ಯಾರಣ್ಯರು ಓದಿ, ಇವರ ವೈರಾಗ್ಯಕ್ಕೆ ಬಹಳ ಸಂತೋಷಪಟ್ಟರು. ಈ ೫ ಶ್ಲೋಕಗಳಿಗೆ **"ವೈರಾಗ್ಯಪಂಚಕ"** ವೆಂದು ಹೆಸರು. ಇರಲಿ. ಇನ್ನು ಮುಖ್ಯ ವಿಷಯದ ಕಡೆಗೆ ತಿರುಗುವಾ.

ಶ್ರೀ ಅಕ್ಷೋಭ್ಯತೀರ್ಥರಿಗೂ ಶ್ರೀ ವಿದ್ಯಾರಣ್ಯರಿಗೂ ವಾದವಿವಾದವಾಯಿತೆಂದೂ ಅವರ ನಿರ್ಣಯವನ್ನು ಶ್ರೀ ವೇದಾಂತದೇಶಿಕಾಚಾರ್ಯರು ಹೇಳಿದರೆಂದೂ ಇಷ್ಟೇ ಕಥೆಯನ್ನು ಕಲ್ಪಿಸಿ ತೃಪ್ತರಾಗದೆ, ಇದಕ್ಕೂ ಮುಂದೆಹೋಗಿ, ಇನ್ನೊಬ್ಬ ಕಲ್ಪಕನು ಮತ್ತೊಂದು ಮನೋರಂಜಕವಾದ ಕಥೆಯನ್ನು ರಚಿಸಿದ್ದಾನೆ. ಅದೇನೆಂದರೆ, ಶ್ರೀ ವೇದಾಂತದೇಶಿಕಾಚಾರ್ಯರು, "ಶ್ರೀ ಅಕ್ಷೋಭ್ಯತೀರ್ಥರು ಶ್ರೀ ವಿದ್ಯಾರಣ್ಯರನ್ನು ಸೋಲಿಸಿದರು." ಎಂದು ತೀರ್ಪನ್ನು ಬರೆದು ಕಳುಹಿಸಿದ ಕೂಡಲೇ ಶ್ರೀ ವಿದ್ಯಾರಣ್ಯರು ಶ್ರೀ ವೇದಾಂತದೇಶಿಕಾಚಾರ್ಯರ ಮೇಲೆ ಬಹಳ ಸಿಟ್ಟಾಗಿ, ಆ ವೇದಾಂತದೇಶಿಕಾಚಾರ್ಯರ ಗ್ರಂಥಗಳಲ್ಲಿಯ ದೋಷಗಳನ್ನು ಹೊರಗೆಹಾಕಿ, ಅವರ ಅಪಮಾನವನ್ನು ಮಾಡುವದಕ್ಕೋಸ್ಕರ ಉದ್ಯುಕ್ತರಾದರು. ಅದಕ್ಕಾಗಿ ಶ್ರೀ ವಿದ್ಯಾರಣ್ಯರು, ಶ್ರೀವೇದಾನ್ತದೇಶಿಕಾಚಾರ್ಯರ '**ಶತದೂಷಣೀ**' ಎಂಬ ಗ್ರಂಥವನ್ನು ಕೈಯಲ್ಲಿ ತೆಗೆದುಕೊಂಡು, ಅದನ್ನು ಕೇವಲ ದೋಷಾನ್ವೇಷಣ ಬುದ್ಧಿಯಿಂದ ಓದಿನೋಡಿದರು. ಆದರೆ ಅದರಲ್ಲಿ ಅಂಥ ಮಹತ್ವದ ತಪ್ಪುಗಳೇನೂ ಕಂಡುಬರಲಿಲ್ಲ. ಆ ಗ್ರಂಥದಲ್ಲಿ ಪಾದಪೂರಣಾರ್ಥಕ ಅವ್ಯಯವಾದ 'ಚ' ಕಾರವು, ನಿರರ್ಥಕವಾಗಿ ಇರುತ್ತದೆಂಬ ದೋಷವನ್ನು ಕಂಡುಹಿಡಿದು, ಶ್ರೀ ವಿದ್ಯಾರಣ್ಯರು **"ಚಕಾರ ವೈಯರ್ಥ್ಯ"** ಎಂಬುದೊಂದು ಗ್ರಂಥವನ್ನು ಬರೆದು ಅದರಲ್ಲಿ ಶ್ರೀ ವೇದಾಂತದೇಶಿಕಾಚಾರ್ಯರ ಈ ದೋಷವನ್ನು ಖಂಡಿಸಿ, ಈ ಪುಸ್ತಕವನ್ನು ಅವರ ಬಳಿಗೆ ಕಳುಹಿಸಿದರು, ಕೂಡಲೇ ಅವರು ಈ ಗ್ರಂಥವನ್ನು ಖಂಡಿಸಿ, **"ಚಕಾರ ಸಮರ್ಥನ"** ಎಂಬುದೊಂದು ಗ್ರಂಥವನ್ನು ಬರೆದು, ಶ್ರೀ ವಿದ್ಯಾರಣ್ಯರ ಬಳಿಗೆ ಅದನ್ನು ಕಳುಹಿಸಿದರು !

ಈ ಬಾಲಿಶವಾದ ಕಥೆಯು ನಿರ್ಮಾಣವಾಗಿ ಕೆಲವು ದಿವಸಗಳು ಕಳೆದ ಬಳಿಕ ಮತ್ತೊಬ್ಬ ಪಂಡಿತನು ಶ್ರೀ ವೇದಾಂತದೇಶಿಕಾಚಾರ್ಯರ ತೀರ್ಮಾನವನ್ನು ಸಂಕರ್ಷಣಾಚಾರ್ಯರೂ ದೊಡ್ಡಯ್ಯಾಚಾರ್ಯರೂ ಹೇಳಿರುವುದಕ್ಕಿಂತ ಸುಸ್ಪಷ್ಟವಾಗುವಂತೆ ಹೀಗೆ ಹೇಳಿದ್ದಾನೆ:-

ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ ।
ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥

ಅರ್ಥ:- ಜೀವೇಶರ ಭೇದವನ್ನು ವ್ಯಕ್ತಪಡಿಸುವ ತತ್ತ್ವಮಸಿವಾಕ್ಯವೆಂಬ ಖಡ್ಗದಿಂದ ವಿದ್ಯಾರಣ್ಯನೆಂಬ ಮಹಾರಣ್ಯವನ್ನು ಅಕ್ಷೋಭ್ಯಮುನಿಯು ಛೇದಿಸಿದನು.

ಈ ಶ್ಲೋಕವೇ, ಈ ಅರ್ವಾಚೀನ ಕಾಲದಲ್ಲಿ ಎಲ್ಲ ಜನರ ನಾಲಿಗೆಯ ಮೇಲೆ ನಲಿದಾಡುತ್ತಿದೆ. ಆದರೆ ಈ ಶ್ಲೋಕವು ಮೂಲತಃ ಯಾವ ಗ್ರಂಥದಲ್ಲಿಯೂ ಇಲ್ಲ; ಈ ಶ್ಲೋಕದ ಕರ್ತೃವು ಯಾರೆಂಬುದು ಯಾರಿಗೂ ಗೊತ್ತಿಲ್ಲ. ಇರಲಿ.

ಈ ಪಂಡಿತನ ತರುವಾಯ ಮೈಸೂರು ಪ್ರಾಂತದಲ್ಲಿ ಒಬ್ಬರು ಸದ್ಗೃಹಸ್ಥರು "ಶ್ರೀಮದ್ವ್ಯಾಸತೀರ್ಥ ಪೂಜ್ಯಚರಣ" ಎಂಬ ಭವ್ಯವಾದ ಹೆಸರನ್ನಿಟ್ಟುಕೊಂಡು, "ಶ್ರೀಜಯತೀರ್ಥವಿಜಯ"(೧) ಎಂಬ ಪುಸ್ತಕವನ್ನು ಬರೆದು, ಅದರಲ್ಲಿ ಈ ವಿದ್ಯಾರಣ್ಯ-ಅಕ್ಷೋಭ್ಯತೀರ್ಥರ

(೧) ಈ ಜಯತೀರ್ಥವಿಜಯ ಪುಸ್ತಕವು ಕ್ರಿ. ಶ. ೧೯೧೪ ರಲ್ಲಿ ಮೈಸೂರು ಪಟ್ಟಣದಲ್ಲಿ ಮುದ್ರಿಸಲ್ಪಟ್ಟಿದೆ.

ವಾದವಿವಾದದ ಕಾಲಕ್ಕೆ ರಾಮಾನುಜಾಚಾರ್ಯರ ಸುಶಿಷ್ಯ ವೇದಾನ್ತಾಚಾರ್ಯರು (೨-೬೪) ತೀರ್ಮಾನವನ್ನು ಹೀಗೆ ಹೇಳಿದರೆಂದು ಬರೆದಿದ್ದಾರೆ:-

ಅಕ್ಷೋಭ್ಯತೀರ್ಥಃ ಪರಜೀವಭೇದಿನಾ ಸುತತ್ತ್ವಮಸ್ಯಾಹ್ವಯ ದಾರುಣಾಸಿನಾ ।
ಕದಾಗಮ ಧ್ವಾನ್ತನಿಬದ್ಧ ವಿದ್ಯಾರಣ್ಯಂ ಮಹಾರಣ್ಯಮನೇಕಧಾಽಚ್ಛಿನತ್ ॥ ೨-೬೭ ॥

ಅರ್ಥ:- ಅಕ್ಷೋಭ್ಯತೀರ್ಥನು, ಜೀವೇಶರ ಭೇದವನ್ನು ವ್ಯಕ್ತಪಡಿಸುವ ಶ್ರೇಷ್ಠವಾದ ತತ್ತ್ವಮಸಿವಾಕ್ಯವೆಂಬ ತೀಕ್ಷ್ಣವಾದ ಖಡ್ಗದಿಂದ, ಕುಶಾಸ್ತ್ರಗಳೆಂಬ ಕತ್ತಲೆಯಿಂದ ಕೂಡಿದ ವಿದ್ಯಾರಣ್ಯನೆಂಬ ಮಹಾರಣ್ಯವನ್ನು ನಾನಾ ರೀತಿಯಿಂದ ಛೇದಿಸಿದನು.

ಈ ಶ್ಲೋಕಕ್ಕೂ ಇದರ ಮೇಲಿನ ಶ್ಲೋಕಕ್ಕೂ ತುಲನಾತ್ಮಕ ದೃಷ್ಟಿಯಿಂದ ಹೋಲಿಸಿ ನೋಡಿದರೆ, ಈ ಪೂಜ್ಯಚರಣರು ಆ ಪಂಡಿತನು ರಚಿಸಿದ ಶ್ಲೋಕದಿಂದ ತೃಪ್ತರಾಗದೆ, ಆ ಪಂಡಿತನು ರಚಿಸಿದ ಶ್ಲೋಕಕ್ಕೇನೇ ಉತ್ಕಟವಾದ ಕಿಂಬಹುನಾ ಉಗ್ರವಾದ ರೂಪವನ್ನು ಕೊಟ್ಟು, ಈ ಶ್ಲೋಕವನ್ನು ನಿರ್ಮಿಸಿದ್ದಾರೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಇವರು ದೊಡ್ಡಯ್ಯಾಚಾರ್ಯರ ಅನುಕರಣ ಮಾಡಿ, ಶ್ರೀ ಅಕ್ಷೋಭ್ಯತೀರ್ಥರಿಗೂ ಶ್ರೀ ವಿದ್ಯಾರಣ್ಯರಿಗೂ ನಡೆದ ವಾದವಿವಾದದಲ್ಲಿ. ಶ್ರೀ ವೇದಾಂತದೇಶಿಕಾಚಾರ್ಯರನ್ನು ನ್ಯಾಯಾಧೀಶರನ್ನಾಗಿ ಮಾಡಿದ್ದಾರೆ. ಆತಏವ ಈ ಪೂಜ್ಯಚರಣರು ದೊಡ್ಡಯ್ಯಾಚಾರ್ಯರ ಕಾಲದಿಂದ ಈಚೆಯವರೆಂಬುದು ಎಂದರೆ ೧೪ನೆಯ ಶತಮಾನದವರೆಂಬುದು ಸಿದ್ಧ.[೧]

---

(೧) ಶ್ರೀಮಜ್ಜಯತೀರ್ಥರ ಸಾಕ್ಷಾತ್ ಶಿಷ್ಯರಾದ ಶ್ರೀ ವ್ಯಾಸತೀರ್ಥರು ೧೪ನೆಯ ಶತಮಾನದವರು; ಚಂದ್ರಿಕಾಚಾರ್ಯರಾದ (ಎಂದರೆ 'ಚಂದ್ರಿಕಾ' ಎಂಬ ಗ್ರಂಥದ ಕರ್ತೃಗಳಾದ) ಶ್ರೀ ವ್ಯಾಸತೀರ್ಥರು ೧೬ನೆಯ ಶತಮಾನದವರು. ಆತಏವ ೧೪ನೆಯ ಶತಮಾನದಲ್ಲಿರುವ ಈ ವ್ಯಾಸತೀರ್ಥಪೂಜ್ಯಚರಣರು ಕೇವಲ ಕಾಲ್ಪನಿಕ ವ್ಯಾಸತೀರ್ಥರೆಂಬುದು ಸಿದ್ಧ.

ಈ ವ್ಯಾಸತೀರ್ಥ ಪೂಜ್ಯಚರಣರು ೧೪ನೆಯ ಶತಮಾನದವರೆಂದು ಸಿದ್ಧಾಂತವಾಗಿ ಹೇಳುವುದಕ್ಕೆ ಇನ್ನೂ ಒಂದು ಬಲವತ್ತರವಾದ ಪ್ರಮಾಣವುಂಟು. ಅದೇನೆಂದರೆ, ಶ್ರೀ ಜಯತೀರ್ಥರ ಸಾಕ್ಷಾತ್ ಶಿಷ್ಯರಾದ ಶ್ರೀ ವ್ಯಾಸತೀರ್ಥರು ತಾವು ಬರೆದ "ಶ್ರೀ ಜಯತೀರ್ಥವಿಜಯ" ಎಂಬ ಪುಸ್ತಕದಲ್ಲಿ ೧೬ನೆಯ ಶ್ಲೋಕದಲ್ಲಿ "ಶ್ರೀ ಜಯತೀರ್ಥರು ದುರ್ಗಾದೇವಿಯನ್ನು ಕುರಿತು ತಪಸ್ಸನ್ನು ಮಾಡಿದರು. ಆಗ ದುರ್ಗಾದೇವಿಯು ಪ್ರಸನ್ನಳಾಗಿ, ಶ್ರೀ ಜಯತೀರ್ಥರಿಗೆ ಗ್ರಂಥಲೇಖನದ ಸಾಧನವಾದ ಪೂಗವನ್ನು (ಬೆಟ್ಟಡಿಕೆಯನ್ನು ಸುಟ್ಟು, ಅದರ ಇದ್ದಲಿಯ ಪುಡಿಯಿಂದ ಉತ್ತಮವಾದ ಮಸಿಯಾಗುತ್ತದೆ. ಆತಏವ ಪೂಗವನ್ನು ಎಂದರೆ ಮಸಿಯನ್ನು) ಮತ್ತು ಘಂಟಿಯನ್ನು (ತಾಡಪತ್ರದ ಮೇಲೆ ಅಕ್ಷರಗಳನ್ನು, ಎಂದರೆ ಲೇಖವನ್ನು ಕೆತ್ತುವ ಅಥವಾ ಕೊರೆಯುವ ಚೂಪಾದ ಉಕ್ಕಿನ ಕಂಟವನ್ನು, ಅರ್ಥಾತ್ ಲೆಕ್ಕಣಿಕೆಯನ್ನು) ಕೊಟ್ಟಳೆಂ"ದು ಹೇಳಿದ್ದಾರೆ. ಶ್ರೀ ಜಯತೀರ್ಥರು ನಿರ್ಯಾಣ ಹೊಂದಿದ ಬಳಿಕ ೩೪೭ ವರ್ಷಗಳ ಮೇಲೆ ಸಂಕರ್ಷಣಾಚಾರ್ಯರು, ತಾವು ಬರೆದ "ಶ್ರೀಜಯತೀರ್ಥವಿಜಯ" ಎಂಬ ಪುಸ್ತಕದಲ್ಲಿ ಇದೇ ವಿಷಯವನ್ನು ಹೇಳುವಾಗ್ಗೆ, ದುರ್ಗಾದೇವಿಯು ಶಿವಶಕ್ತಿಯಾದುದರಿಂದ ವೈಷ್ಣವ ಸ್ವಾಮಿಗಳು ಶಿವಶಕ್ತಿಯನ್ನು ಕುರಿತು ತಪಸ್ಸು ಮಾಡಿದರೆಂದು ಹೇಳುವುದು ಗೌಣವೆಂದು ತಿಳಿದು, ಶ್ರೀ ಜಯತೀರ್ಥರು ಸರಸ್ವತಿದೇವಿಯನ್ನು ಕುರಿತು ತಪಸ್ಸು ಮಾಡಿದರೆಂದು ಹೇಳಿದ್ದಾರೆ. (೪-೨೧). ಈ ಸಂಕರ್ಷಣಾಚಾರ್ಯರನ್ನೇ ಅನುಕರಣ ಮಾಡಿ, ಈ ವ್ಯಾಸತೀರ್ಥಪೂಜ್ಯಚರಣರು ತಾವು ರಚಿಸಿದ "ಶ್ರೀ ಜಯತೀರ್ಥವಿಜಯ" ಎಂಬ ಪುಸ್ತಕದಲ್ಲಿ (೫-೧೦) ಶ್ರೀ ಜಯತೀರ್ಥರು ಸರಸ್ವತಿದೇವಿಯನ್ನೇ ಕುರಿತು ತಪಸ್ಸು ಮಾಡಿದರೆಂದು ಹೇಳಿದ್ದಾರೆ. ಆತಏವ ಈ ವ್ಯಾಸತೀರ್ಥ ಪೂಜ್ಯಚರಣರು ಸಂಕರ್ಷಣಾಚಾರ್ಯರ ಕಾಲದಿಂದ ಎಂದರೆ ಕ್ರಿ. ಶ. ೧೬೭೫ ರಿಂದ ಈಚೆಯವರೆಂಬುದು ಅರ್ಥಾತ್ ೧೪ನೆಯ ಶತಮಾನದವರೆಂಬುದು ಸಿದ್ಧ.

ದೊಡ್ಡಯ್ಯಾಚಾರ್ಯರ ತರುವಾಯ ಕ್ರಿ. ವ. ೧೮೦೩ ರಲ್ಲಿ ಅದ್ವೈತ ಮತಾನುಯಾಯಿಗಳಾದ ರಾಮಯೋಗೀಂದ್ರರೆಂಬುವರು(೧) "ಮಣಿಮಂಜರೀಭೇದಿನೀ" ಎಂಬುದೊಂದು ಗ್ರಂಥವನ್ನು ಬರೆದು, ಅದರಲ್ಲಿ ಇದೇ ಕಥೆಯನ್ನು ಹೇಳಿದ್ದರೂ ತಮಗೆ ಅನುಕೂಲವಾಗುವಂತೆ ಅದರಲ್ಲಿ ತಮ್ಮ ಕೈಗಂಟು ಹಾಕಿ, ಇದಕ್ಕೆ ಬೇರೆ ರೂಪವನ್ನು ಕೊಟ್ಟಿದ್ದಾರೆ. ಅದೇನೆಂದರೆ, ಇವರಾದರೂ ಶ್ರೀ ವೇದಾನ್ತದೇಶಿಕಾಚಾರ್ಯರನ್ನೇ ನ್ಯಾಯಾಧೀಶರನ್ನಾಗಿ ಮಾಡಿದ್ದರೂ ಈ ವಾದದ ಕೊನೆಯ ದಿವಸ ರಾತ್ರಿ ಮಾಧ್ವರೂ ರಾಮಾನುಜರೂ ಸೋತು ಹೇಳದೆ ಕೇಳದೆ ನಿಶ್ಶಬ್ದವಾಗಿ ಓಡಿ ಹೋದರೆಂದು ಹೇಳಿದ್ದಾರೆ. !

ಮಾಧ್ವರನ್ನೂ ರಾಮಾನುಜರನ್ನೂ ಬಾಲಿಶತನದಿಂದ ಇಷ್ಟು ಹೀಯಾಳಿಸಿದರೂ ತೃಪ್ತರಾಗದೆ, ಒಬ್ಬರು ಅದ್ವೈತಮತಾನುಯಾಯಿಗಳಾದ ಪಂಡಿತರು "ಅಕ್ಷೋಭ್ಯಂ ಕ್ಷೋಭಯಾಮಾಸ ವಿದ್ಯಾರಣ್ಯೋ ಮಹಾಮುನಿಃ ।" ಎಂಬ ಶ್ಲೋಕಾರ್ಧವನ್ನು ರಚಿಸಿದ್ದಾರೆ.

ಕೇವಲ ಸತ್ಯಾನ್ವೇಷಣ ಬುದ್ಧಿಯಿಂದಲೂ ನಿರಂಜನ ದೃಷ್ಟಿಯಿಂದಲೂ ಈ ಎಲ್ಲ ಕಥೆಗಳನ್ನು ಸಮಾಲೋಚಿಸಿ ನೋಡಿದರೆ, ಇವೆಲ್ಲವೂ ಸರ್ವಥೈವ ಅಸತ್ಯವಾಗಿರುತ್ತವೆಂಬುದು ಸಿದ್ಧ.

ಇನ್ನು ಕೆಲವರು ಈ ವಾದದ ಜಯಸ್ತಂಭವು, ಮೈಸೂರು ದೇಶದ ಮುಳಬಾಗಲು ತಾಲೂಕಿನಲ್ಲಿ ಇರುತ್ತದೆಂದು ಹೇಳುತ್ತಿರುತ್ತಾರೆ. ಇದಕ್ಕೋಸ್ಕರ ನಾನು ಇದರ ನಿಜಾಂಶವನ್ನು ತಿಳಿದುಕೊಳ್ಳಬೇಕೆಂದು, ಮೈಸೂರು ಸಂಸ್ಥಾನದ ಶಾಸನದ ಇಲಾಖೆಯ ಡೈರೆಕ್ಟರರಾಗಿದ್ದು, ವಿಶ್ರಾಂತರಾಗಿರುವ ಪ್ರಾಕ್ತನ ವಿಮರ್ಶವಿಚಕ್ಷಣ ರಾವ್‌ಬಹಾದ್ದೂರ ಶ್ರೀಮಾನ್ ಆರ್. ನರಸಿಂಹಾಚಾರ್ಯ ಎಂ., ಎ., ಎಮ್. ಆರ್. ಎ. ಎಸ್. ಇವರಿಗೆ ಪತ್ರ ಬರೆದು, ಇದರ ಸತ್ಯಸ್ವರೂಪವನ್ನು ತಿಳಿದುಕೊಂಡೆನು. ಈ ಮಹನೀಯರು ನನ್ನ ಪತ್ರಕ್ಕೆ ಆಗಿಂದಾಗ್ಗೆ ಉತ್ತರ ಬರೆದು, ಹೀಗೆ ತಿಳಿಸಿದ್ದಾರೆ:- "ಮೈಸೂರು ದೇಶದ ಮುಳಬಾಗಲು ತಾಲ್ಲೂಕು ಹಂಚೀಕಲ್ ಗುಡ್ಡದಲ್ಲಿ "ಅಸಿನಾ ತತ್ತ್ವಮಸಿನಾ" ಎಂಬ ಈ ಶ್ಲೋಕವು, ಒಂದು ದ್ವಾರಬಂಧದ ಮೇಲೆ ಕೆತ್ತಲ್ಪಟ್ಟು, ಇದ್ದಿತೆಂದು ಕೆಲವರು ಮಾಧ್ವರು ನಾನು ಸಂಚಾರ ಹೋಗಿದ್ದಾಗ

(೧) "ಈ ರಾಮಯೋಗೀಂದ್ರನು ೧೭೨೫ನೆಯ ಶಕವರ್ಷದಲ್ಲಿ ಎಂದರೆ ಕ್ರಿ. ವ. ೧೮೦೩ರಲ್ಲಿ ಶ್ರೀ ಚಿದಂಬರ ದೀಕ್ಷಿತರ ದರ್ಶನಕ್ಕೆಂದು ಬಂದಿದ್ದನು. ಇವನು ತೆಲುಗುದೇಶದ ಬ್ರಾಹ್ಮಣನು. ಈತನು ಬೆಳಗಾವ ಜಿಲ್ಲೆಯ ಮುರಗೋಡ ಗ್ರಾಮದಲ್ಲಿ ಒಂದು ವರ್ಷದ ವರೆಗೆ ಇದ್ದು, ಕೊನೆಗೆ ಹಿಪ್ಪರಿಗೆ ಗ್ರಾಮದಲ್ಲಿ ಶ್ರೀ ಚಿದಂಬರ ಮಹಾಸ್ವಾಮಿಗಳವರ ದರ್ಶನವನ್ನು ತೆಗೆದುಕೊಂಡನು." ಎಂದು ಶ್ರೀಮಾನ್ ಕಲ್ಲೋ ಗಣೇಶ ವಿಜಾಪುರ ಇವರು ಬರೆದ ಶ್ರೀ ಚಿದಂಬರ ವಿಜಯ ಗ್ರಂಥದಲ್ಲಿ (ಪುಟ ೧೭೦) ಉಲ್ಲೇಖವಿದೆ. ಇದೇ ಮೇರೆಗೆ "ಶ್ರೀ ಚಿದಂಬರ ಚರಿತ್ರ ಪ್ರಕಾಶಕ ಸಂಘ"ದ ಕಾರ್ಯದರ್ಶಿಗಳಾದ ವೇದಮೂರ್ತಿ ಬ್ರಹ್ಮ ಶ್ರೀ ತಮ್ಮಣಭಟ್ಟ ರಾಮೇಶಭಟ್ಟ ಉಗುರಗೋಳ ಇವರು, ಈ ಸಂಗತಿಯು, ಮೂಲತಃ ಶ್ರೀ ಚಿದಂಬರ ದೀಕ್ಷಿತರ ಸಮಕಾಲೀನರಾದ ಶ್ರೀ ಸಖಾರಾಮ ಗರ್ದೆ ಇವರು ಬರೆದ ಶ್ರೀ ಚಿದಂಬರ ಚರಿತ್ರದಲ್ಲಿಯೂ ಮತ್ತು ಶ್ರೀ ಚಿದಂಬರ ದೀಕ್ಷಿತರ ಸಾಕ್ಷಾತ್ ಶಿಷ್ಯರಾದ ರಾಜಾರಾಮ ಮಹಾರಾಜರ ಅಭಂಗದಲ್ಲಿಯೂ ಇರುತ್ತದೆಂಬುದನ್ನು ಈ ಗ್ರಂಥಗಳ ಮಾತೃಕೆಯಲ್ಲಿ ಎಂದರೆ ಹಸ್ತಲಿಖಿತ ಪ್ರತಿಯಲ್ಲಿ ನನಗೆ ತೋರಿಸಿದರು. ಈ ರಾಮಯೋಗೀಂದ್ರನು ಬರೆದ ಮಣಿಮಂಜರೀಭೇದಿನೀನಾಮಕ ಗ್ರಂಥವನ್ನು ಬೆಳಗಾಂವಿಯ ಸ್ಮಾರ್ತಮತೋತ್ತೇಜಕ ಸಭೆಯವರು ೧೮೧೧ನೆಯ ಶಕವರ್ಷದಲ್ಲಿ (ಕ್ರಿ. ವ. ೧೮೮೯ ರಲ್ಲಿ) ದೇವನಾಗರೀ ಲಿಪಿಯಲ್ಲಿ ಮುದ್ರಿಸಿದ್ದಾರೆ. ಈ ಗ್ರಂಥವು ತೆಲುಗು ಲಿಪಿಯಲ್ಲಿಯೂ ಇರುತ್ತದೆಂದು ಶ್ರೀಮಾನ್ ಡಿ. ವಿ. ಗುಂಡಪ್ಪನವರು ಹೇಳಿದರು. ಇತ್ಯರ್ಥವೇನೆಂದರೆ, ಈ ತೆಲುಗು ಬ್ರಾಹ್ಮಣನಾದ ರಾಮಯೋಗೀಂದ್ರನು ಕ್ರಿ. ವ. ೧೮೦೩ ರಲ್ಲಿ ಇದ್ದನೆಂಬುದು ಸಿದ್ಧ.

ಹೇಳಿದರು. ಇದರ ನಿಜಾಂಶವನ್ನು ತಿಳಿಯಬೇಕೆಂದು ಆ ಗುಡ್ಡವನ್ನೆಲ್ಲಾ ಹುಡುಕಿದೆನು; ಶಾಸನವು ಸಿಕ್ಕಲಿಲ್ಲ. ಈ ವಿಷಯವನ್ನು ಅವರಿಗೆ ತಿಳಿಸಲು, ಅವರು– "ನಮ್ಮ ಹಿರಿಯರು ಹೀಗೆ ಹೇಳುತ್ತಿದ್ದರು. ನಾವು ನೋಡಿಲ್ಲ. ಶಾಸನದ ಕಲ್ಲು ಎಲ್ಲಿಯೋ ಬಿದ್ದು ಹೋಗಿರಬೇಕು." ಎಂದು ಹೇಳಿದರು."

ಇತ್ಯರ್ಥವೇನೆಂದರೆ, ಈ ಜಯಸ್ತಂಭದ ಕಥೆಯೂ ಒಬ್ಬ ಕಲ್ಪಕನ ಲೀಲೆಯೇ ಎಂಬುದು ಸ್ಪಷ್ಟವಾಗಿದೆ.

ಶ್ರೀಮಾನ್ ಆರ್. ನರಸಿಂಹಾಚಾರ್ಯರವರು ತಾವು ಸಂಶೋಧಿಸಿದ ವೃತ್ತಾಂತವನ್ನು ನನಗೆ ತಿಳಿಸಿದ್ದಕ್ಕೋಸ್ಕರ ನಾನು ಆ ಮಹನೀಯರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಇದೇ ಮೇರೆಗೆ ಶ್ರೀ ವೇದಾಂತದೇಶಿಕ ವೈಭವ ಪ್ರಕಾಶಿಕಾಸ್ತೋತ್ರವನ್ನು ಸಂಪೂರ್ಣವಾಗಿ ಬರೆದು ಕಳುಹಿಸಿದ ಶ್ರೀಮಾನ್ ಸಿ. ಎಮ್. ವಿಜಯರಾಘವಶರ್ಮರವರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

೧೨೮೭ನೆಯ ಶಕವರ್ಷದಲ್ಲಿ (೩೮೫ ವರ್ಷಗಳ ಮೇಲೆ) ೧೬೭೨ನೆಯ ಶಕವರ್ಷದಲ್ಲಿ.

†————————————————† (೧) ಸಂಕರ್ಷಣಾಚಾರ್ಯರು ಈ ಕಥೆಯನ್ನು ನಿರ್ಮಿಸಿದರು. ಆ ಬಳಿಕ

ಶ್ರೀ ಅಕ್ಷೋಭ್ಯತೀರ್ಥರ ನಿರ್ಯಾಣ

(೨) ದೊಡ್ಡಯ್ಯಾಚಾರ್ಯರು
(೩) ಪೂಜ್ಯಚರಣರು
(೪) ರಾಮಯೋಗೀಂದ್ರರು ಇದನ್ನು ಬಲಪಡಿಸಿದರು.

ಈ ಪ್ರಕಾರ ಶ್ರೀ ಅಕ್ಷೋಭ್ಯತೀರ್ಥರು ನಿರ್ಯಾಣ ಹೊಂದಿದ ಮೇಲೆ ೩೮೫ ವರ್ಷಗಳಾದ ಬಳಿಕ ಸಂಕರ್ಷಣಾಚಾರ್ಯ, ದೊಡ್ಡಯ್ಯಾಚಾರ್ಯ, ಪೂಜ್ಯಚರಣ, ರಾಮಯೋಗೀಂದ್ರ ಪ್ರಭೃತಿಗಳು ಈ ಕಥೆಯನ್ನು ನಿರ್ಮಿಸಿ, ಕಾಲಪ್ರವಾಹದ ಮೇಲೆ ತೇಲಬಿಡಲು, ಈ ಕಥಾರೂಪವಾದ ಹಡಗವು, ಆ ಕಾಲಪ್ರವಾಹದ ಗುಂಟ ಹೊರಟು, ತತ್ಕಾಲೀನ ಎಲ್ಲ ಜನರ ಕಿವಿಗೆ ಮುಟ್ಟುತ್ತ ಮುಟ್ಟುತ್ತ ೧೯೩೩ನೆಯ ಇಸವಿಯ ವರೆಗೆ ಸಾಗಿ ಬಂದು, ಇಲ್ಲಿಯೇ ಇದು ಒಡೆದು ಚೂರುಚೂರಾಗಿ ಮುಳುಗಿ ಹೋಯಿತು.

(೧೬) ಶ್ರೀಮಾನ್ ವ್ಹಿ. ರಂಗಾಚಾರ್ಯ ಎಂ. ಎ., ಎಲ್. ಟಿ. ಇವರು "ಮದ್ರಾಸ[(೧)] ಅಧಿಪತ್ಯದ ಶಿಲಾಶಾಸನಗಳು" (ಸಂಪುಟ ೨, ಪುಟ ೮೭೧) ಎಂಬ ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ:– "೧೩೩೦ನೆಯ ಶಕವರ್ಷದ ಸರ್ವಧಾರಿ ಸಂವತ್ಸರದಲ್ಲಿ ದೇವರಾಯ ಮಹಾರಾಯರು ಶ್ರೀ ವಿದ್ಯಾಧಿರಾಜತೀರ್ಥರಿಗೆ ಭೂದಾನ ಮಾಡಿದ ಶಾಸನವು, ಉಡುಪಿಯ ಕೃಷ್ಣಾಪುರಮಠದಲ್ಲಿದೆ. ಶ್ರೀಮದಾನಂದತೀರ್ಥರಿಂದ ೭ನೆಯ ಜಗದ್ಗುರುಗಳಾದ ಶ್ರೀ ವಿದ್ಯಾಧಿರಾಜತೀರ್ಥರೇ ಇವರು ಆಗಿರಬಹುದು."

ವಸ್ತುತಃ ಈ ಶಾಸನದಲ್ಲಿ ಹೇಳಿರುವ ಭೂದಾನವು, ಉಡುಪಿಯ ಈ ಕೃಷ್ಣಾಪುರಮಠದ ಪೀಠದ ಮೇಲೆಯೇ ಕುಳಿತುಕೊಂಡಂಥ ಶ್ರೀ ವಿದ್ಯಾಧಿರಾಜತೀರ್ಥರಿಗೆ ಕೊಡಲ್ಪಟ್ಟಿದೆ. ಏಕೆಂ

(೧) Inscriptions of the Madras presidency. vol. II. P. 871

ದರೆ, ಈ ಕೃಷ್ಣಾಪುರಮಠದ ಗುರುಪರಂಪರಾಪೀಳಿಗೆಯಲ್ಲಿ, ಶ್ರೀ ವಿದ್ಯಾಧಿರಾಜತೀರ್ಥರೆಂಬುವರು ಈ ಮಠದ ಪೀಠದ ಮೇಲೆ ಕುಳಿತಿದ್ದರೆಂಬುದು ಸ್ಪಷ್ಟವಾಗಿ ಉಲ್ಲೇಖವಿದೆ. ಇದೂ ಅಲ್ಲದೆ ಇತ್ತ ಉತ್ತರಾದಿಮಠದ ಪೀಠದ ಮೇಲೆ ಕುಳಿತುಕೊಂಡಂಥ ಶ್ರೀ ವಿದ್ಯಾಧಿರಾಜತೀರ್ಥರು ಈ ೧೩೩೦ನೆಯ ಶಕವರ್ಷಕ್ಕೆ ಮುಂಚೆಯೇ ಪರಂಧಾಮಕ್ಕೆ ತೆರಳಿದ್ದಾರೆಂಬುದೂ ಸ್ಪಷ್ಟವಾಗಿದೆ. ಎಂದರೆ ಈ ೧೩೩೦ನೆಯ ಶಕವರ್ಷದ ಪರಿಧಾವಿ ಸಂವತ್ಸರದಲ್ಲಿ ಉತ್ತರಾದಿಮಠದ ಪೀಠದ ಮೇಲೆ ಶ್ರೀ ವಿದ್ಯಾಧಿರಾಜತೀರ್ಥರು ಇಲ್ಲವೇ ಇಲ್ಲ. ಕಿಂಬಹುನಾ ಇವರು ಈ ಪೀಠದ ಮೇಲೆ ಈ ಶಕವರ್ಷದಲ್ಲಿರುವುದು ಸರ್ವಥೈವ ಅಶಕ್ಯವಾಗಿದೆ.

ಇತ್ಯರ್ಥವೇನೆಂದರೆ, ಶ್ರೀಮಾನ್ ವ್ಹಿ. ರಂಗಾಚಾರ್ಯರವರು ಉತ್ತರಾದಿಮಠದ ಗುರುಪರಂಪರಾಪೀಳಿಗೆಯನ್ನೂ, ಮತ್ತು ಕೃಷ್ಣಾಪುರಮಠದ ಗುರುಪರಂಪರಾಪೀಳಿಗೆಯನ್ನೂ ಪರಿಶೀಲನಮಾಡಿ ನೋಡದೆ, ಸುಮ್ಮನೆ ನಿರಾಧಾರವಾಗಿ ಹೀಗೆ ಊಹಿಸಿರುವುದು ಕೇವಲ ಬಾಲಿಶತನವಾಗಿದೆ.

ಯಾವ ದೃಷ್ಟಿಯಿಂದ ವಿಚಾರಮಾಡಿ ನೋಡಿದರೂ ನಾನು ನಿರ್ಣಯಿಸಿರುವ ಸಿದ್ಧಾಂತವೇ ಸತ್ಯಸಿದ್ಧಾಂತವಾಗಿದೆ. ಅತಏವ ಶ್ರೀಮನ್ಮಧ್ವಾಚಾರ್ಯರು ೧೧೨೧ನೆಯ ಶಕವರ್ಷದ ಸಿದ್ಧಾರ್ಥಿ ಸಂವತ್ಸರದಲ್ಲಿ ಅವತರಿಸಿ, ೧೧೯೯ನೆಯ ಶಕವರ್ಷದ ಪಿಂಗಳ ಸಂವತ್ಸರದ ಮಾಘ ಶುದ್ಧ ನವಮಿ ದಿವಸ ಅದೃಶ್ಯರಾದರು. ತದನಂತರ ಇವರ ಸಾಕ್ಷಾತ್ ಶಿಷ್ಯರಾದ ಈ ನಾಲ್ಕು ಜನ ಯತಿವರ್ಯರು ಈ ಅನುಕ್ರಮದಿಂದ ಪೀಠಾರೋಹಣವನ್ನು ಮಾಡಿ, ಈ ತಿಥಿಗಳಲ್ಲಿ ವೃಂದಾವನಸ್ಥರಾದರು. ಎಂಬುದು ಸತ್ಯಸಿದ್ಧಾಂತವು.

| ಶ್ರೀಮನ್ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು | ನಿರ್ಯಾಣಕಾಲದ ಸಂವತ್ಸರಗಳು | ನಿರ್ಯಾಣಕಾಲದ ಶಕವರ್ಷಗಳು | ನಿರ್ಯಾಣಕಾಲದ ಮಾಸ, ಪಕ್ಷ, ತಿಥಿಗಳು |
|---|---|---|---|
| ಶ್ರೀ ಪದ್ಮನಾಭತೀರ್ಥರು | ರಕ್ತಾಕ್ಷಿ | ೧೧೮೬ | ಕಾರ್ತಿಕ ಕೃಷ್ಣ ಚತುರ್ದಶಿ |
| ಶ್ರೀ ಮಾಧವತೀರ್ಥರು | ಶ್ರೀಮುಖ | ೧೧೯೫ | ಭಾದ್ರಪದದ ಅಮಾವಾಸ್ಯಾ |
| ಶ್ರೀ ಅಕ್ಷೋಭ್ಯತೀರ್ಥಡು | ವಿಕೃತಿ | ೧೨೧೨ | ಮಾರ್ಗಶೀರ್ಷ ಕೃಷ್ಣ ಪಂಚಮಿ |
| ಶ್ರೀ ನರಹರಿತೀರ್ಥರು | ವಿಶ್ವಾವಸು | ೧೨೨೭ | ಪುಷ್ಯ ಕೃಷ್ಣ ಸಪ್ತಮಿ |

( ಸಮಾಪ್ತ )

# ಅರಿಕೇಸರಿ—ಪಂಪರು.*

ಲೇ:- ದೇಸಾಯಿ ಪಾಂಡುರಂಗರಾಯ.

ವೇಮುಲವಾಡದ[1] ಶಿಲಾಶಾಸನ ಮತ್ತು ಪರಭಣಿಯ ತಾಮ್ರಶಾಸನ[2] ಇವುಗಳ ಪ್ರಕಟನೆ ಪಂಪ-ಅರಿಕೇಸರಿಯರ ಬಗೆಗಿರುವ ಪ್ರಚಲಿತ ತಿಳಿವಳಿಕೆಯಲ್ಲಿ ಕ್ರಾಂತಿಯನ್ನುಂಟುಮಾಡಿದೆ. ಅದರಿಂದ ಇವರು ನಡುವಣ ಕರ್ನಾಟಕದ ಪುರಿಗೆರೆ ಎಂಬರೆ ಲಕ್ಷ್ಮೇಶ್ವರಕ್ಕೆ ಸಂಬಂಧಪಟ್ಟವರು ಎಂಬ ಕಲ್ಪನೆ ಸಮೂಲೋತ್ಪಾಟನವಾಗುತ್ತದೆ. ಇಂದಿನ ವರೆಗೆ ರೂಢಿಯಲ್ಲಿರುವೀ ಮತಕ್ಕೆ ಪಂಪಭಾರತದಲ್ಲಿಯ 'ರಾಜಪ್ರಾಜಕಮೆನಿಸಿದ[3] (ರಾಜಸುಧಾನಿಯ ಪುಟವಹ-ಪಾಠಾಂತರ) ನಾಡವ ಪುರಿಗೆಱೆಯ ತಿರುಳ ಕನ್ನಡದೊಳ್' ಎಂಬೀ ಅನಿಶ್ಚಯಾತ್ಮಕ ಭ್ರಾಮಕ ವಾಕ್ಯವೊಂದಲ್ಲದೆ ಬೇರೆ ಯಾವ ಪ್ರಮಾಣವೂ ಆಧಾರವಾಗಿಲ್ಲ. ಇಷ್ಟರಿಂದಲೆ ಪಂಪನು ಲಕ್ಷ್ಮೇಶ್ವರದವನು, ಲಕ್ಷ್ಮೇಶ್ವರವು ಅರಿಕೇಸರಿಯ ರಾಜಧಾನಿ, ಭಾರತಕ್ಕಾಗಿ ಪಂಪನು ಪಡೆದ ಧರ್ಮಪುರವು ಡಂಬಳವು (ಜಿ. ಧಾರವಾಡ) ಎಂಬ ಮಾತುಗಳು ಸರ್ವಥಾ ಸಿದ್ಧವಾಗಲಾರವು. ಹಾಗೆನ್ನಲಿಕ್ಕೆ ಹೆಚ್ಚಿನ ಆಧಾರಗಳು ಸಿಕ್ಕಬೇಕಾಗಿತ್ತು. ಅವು ಇದುವರೆಗೆ ಎಲ್ಲಿಯೂ ದೊರೆತಿಲ್ಲ. ಇಷ್ಟೆ ಅಲ್ಲದೆ ಮೇಲಿನ ಎರಡು ಪ್ರಬಲ ಪ್ರಮಾಣಗಳು ಈ ಕಲ್ಪನೆಯನ್ನು ಪೂರ್ಣವಾಗಿ ಬಾಧಿಸುವವು. ಹೇಗೆಂದರೆ, ಅರಿಕೇಸರಿಯ ವಂಶದ ರಾಜ್ಯವು ಲಕ್ಷ್ಮೇಶ್ವರದ ಪ್ರಾಂತದಲ್ಲಿ ಯಾವ ಕಾಲಕ್ಕೂ ಇಲ್ಲವೆ ಇಲ್ಲ. ಅದು ಈಶಾನ್ಯ ಕರ್ನಾಟಕದಲ್ಲಿ, ಈಗಿನ ನೈಜಾಮ ಆಂಧ್ರದಲ್ಲಿ ನೆಲೆಗೊಂಡಿತ್ತು. ಆತನ ರಾಜಧಾನಿ ಅದೇ ಪ್ರಾಂತದಲ್ಲಿ. ಪಂಪನು ತನ್ನ ಜನ್ಮಭೂಮಿ ಲಕ್ಷ್ಮೇಶ್ವರ (ಪುರಿಗೆರೆ) ಎಂದು ಎಲ್ಲಿಯೂ ಹೇಳಿಕೊಂಡಿಲ್ಲ. ಇಷ್ಟೇ ಅಲ್ಲದೆ, ತನ್ನ ಪೂರ್ವಜರು ವೆಂಗಿ ಮಂಡಲದಲ್ಲಿಯ ವೆಂಗಿಪಳುವಿನವರು ಎಂದು ಸಾರಿರುವನು. ಆದುದರಿಂದ ಆತನು ಅದೇ ಕರ್ನಾಟಕದ ಈಶಾನ್ಯಗಡಿಯವನು ಆಗಬೇಕಲ್ಲದೆ ಲಕ್ಷ್ಮೇಶ್ವರದವನು ಸುತರಾಂ ಆಗಲಾರನು.

ಈ ಹೊಸ ಪ್ರಮಾಣಗಳ ಪ್ರಕಾಶದಲ್ಲಿ ಅರಿಕೇಸರಿ-ಪಂಪರ ನಾಡುಬೀಡುಗಳನ್ನು ಕುರಿತು ಇಲ್ಲಿ ಹೆಚ್ಚಿಗೆ ವಿಚಾರ ಮಾಡುವ.

**ಅರಿಕೇಸರಿಯ ವಂಶ:-** ಪಂಪಭಾರತದಲ್ಲಿ ಈ ವಂಶದ ಬಗೆಗೆ ಹೇಳಿದ ಅನೇಕ ವಿಷಯಗಳು ಈ ಹೊಸ ಪ್ರಮಾಣಗಳಿಂದ ಪ್ರಕಾಶಿತವಾಗುವುದಲ್ಲದೆ ಪುಷ್ಟಿಯಾಗುತ್ತವೆ. ಈ ಮೂರೂ ಪ್ರಮಾಣಗಳಿಂದ ಈ ಚಾಲುಕ್ಯ ವಂಶವನ್ನು ಕುರಿತು ಎಷ್ಟೊ ವಿಶ್ವಸನೀಯ ವೃತ್ತಾಂತಗಳು ವಿದಿತವಾಗುತ್ತವೆ. ಈ ರಾಜವಂಶಸ್ಥಾಪಕನಾದ ಯುದ್ಧಮಲ್ಲನ (೧) ಕಾಲವು ತಲೆಗಳ ಲೆಕ್ಕದಿಂದ ಸಾಧಾರಣವಾಗಿ ಇ. ಸ. ೭೫೦ಕ್ಕೆ ಬರುವುದರಿಂದ ಬಾದಾಮಿ ಚಾಲುಕ್ಯರ ಇಳಿಗಾಲದಲ್ಲಿ ರಾಷ್ಟ್ರಕೂಟರ ದಂತಿದುರ್ಗನಂತೆ ಯುದ್ಧಮಲ್ಲನಾದರೂ ಹೊತ್ತು ಸಾಧಿಸಿ ಈಶಾನ್ಯ

---

* ಜಯಕರ್ನಾಟಕದ ೧೯೩೩ ಡಿಸೆಂಬರದ ಸಂಚಿಕೆಯಲ್ಲಿ ಇದೆ ವಿಷಯವನ್ನು ಕುರಿತು ನನ್ನದೊಂದು ಲೇಖನವು ಪ್ರಕಟವಾಗಿದೆ. ಈ ಲೇಖನವು ಅದರ ಸಾರ—ವಿಸ್ತಾರರೂಪವಾಗಿ ಕೆಲ ಹೆಚ್ಚಿನ ವಿಷಯಗಳನ್ನು ಚರ್ಚಿಸುತ್ತದೆ.

(೧) J. A. H. R. S. VI - 3-4. (೨) ಭಾ. ಇ. ಸ. ಮಂ ೧೩-೪ (೩) ೧೪—೫೮.

ಕರ್ನಾಟಕದಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿಕೊಂಡಿರಬಹುದು. ಆದರೂ ಈ ವಂಶದವರು ತಾವು ರಾಷ್ಟ್ರಕೂಟರ ಸಾಮಂತರೆಂದೆ ಹೇಳಿಕೊಂಡುದರಿಂದ ರಾಷ್ಟ್ರಕೂಟ ಸಾಮ್ರಾಜ್ಯ ಸ್ಥಾಪನೆಯಲ್ಲಿ ಯುದ್ಧಮಲ್ಲನು ನೆರವಾಗಿ ಅವರ ಒಡಂಬಡಿಕೆಯಿಂದ ಅತ್ತ ವಿಸ್ತೃತ ಪ್ರದೇಶವನ್ನು ಗೆದ್ದುಕೊಂಡು ಆಳತೊಡಗಿದನು ಎಂದು ತೋರುತ್ತದೆ. ಈ ಯುದ್ಧಮಲ್ಲನನ್ನು ಮೊದಲ್ಗೊಂಡು ಮುಮ್ಮಡಿ ಅರಿಕೇಸರಿಯ ವರೆಗಿನವರ (ಇ. ಸ. ೯೬೬) ಶೌರ್ಯಸಾಹಸಗಳನ್ನು ನೋಡಲು ಈ ಚಾಲುಕ್ಯ ಕುಲವು[೪] ಮೊದಲಿನಿಂದಲೂ ಪ್ರತಾಪಿಯೂ ಪ್ರಭಾವಿಯೂ ಆಗಿದ್ದಿತು ಎಂದು ಒಡೆದು ಕಾಣುತ್ತದೆ. ಇವರು[೫] ರಾಷ್ಟ್ರಕೂಟ–ಪೂರ್ವಚಾಲುಕ್ಯರ ರಾಜಕಾರಣದಲ್ಲಿ ಕೆಲಸಾರೆ ಸೂತ್ರಚಾಲಕರಾಗಿದ್ದಾರೆ. ಇವರು ರಾಷ್ಟ್ರಕೂಟರ ಮಾಂಡಲಿಕರಾಗಿದ್ದುದು ಅವರ ಸಾಮ್ರಾಜ್ಯಕ್ಕೆ ಒಂದು ಆಧಾರವೆ ಆಗಿರಬೇಕು. ಈ ವಂಶದ ಹಾಗೂ ರಾಷ್ಟ್ರಕೂಟರ ಆಳಿಕೆಯ ಕಾಲಗಳು ಸಮಸಮಾನವಾಗಿವೆ. ಇಂತು[೬] **ಇದು ಸಮ್ರಾಟರನ್ನು ಸರಿಗಟ್ಟುತ್ತ ಹೆಸರಿಗೆ ಸಾಮಂತರ ಮನೆತನವಾಗಿದ್ದಿತು.**

**ರಾಜ್ಯವಿಸ್ತಾರ:–** ಈ ಮನೆತನದ ಮೂಲ ಪುರುಷನು ಸಪಾದಲಕ್ಷ ಭೂಮಿಗೆ ಒಡೆಯನು.[೭] ವೆಂಗಿದೇಶವೂ ಕಲಿಂಗತ್ರಯವೂ ಈತನ ಆಧಿಪತ್ಯಕ್ಕೆ ಒಳಪಟ್ಟಿದ್ದುವು. ಸಪಾದಲಕ್ಷ ಭೂಮಿ ಎಂದರೆ ಒಂದೂಕಾಲು ಗ್ರಾಮುಗಳುಳ್ಳ ದೇಶ. ಮಲೆನಾಡಿನಲ್ಲಿಯೂ ತೆಲಗಾಣಿಯಲ್ಲಿಯೂ ಊರುಗಳು ಚಿಕ್ಕ ಚಿಕ್ಕವು, ಬಳಿಬಳಿಯವು. ಈಗಣ ಮೈಸೂರ ಸೀಮೆಯಾದ ಗಂಗವಾಡಿಯಲ್ಲಿ ತೊಂಬತ್ತಾರು ಸಾವಿರ ಗ್ರಾಮುಗಳಿದ್ದುವು ಎಂದು ಶಾಸನಗಳಿಂದ ತಿಳಿಯುತ್ತದೆ. ಸಾಧಾರಣವಾಗಿ ಇದೆ ಗ್ರಾಮಾಂತರಗಳ ಪರಿಮಾಣದಿಂದ ಲೆಕ್ಕಿಸಿದರೂ **ಯುದ್ಧಮಲ್ಲನ ರಾಜ್ಯವು ಈಗಣ ಮೈಸೂರ ಪ್ರಾಂತಕ್ಕಿಂತಲೂ ದೊಡ್ಡದಾಗಿರಬೇಕು.** ಯುದ್ಧಮಲ್ಲನ ತರುವಾಯದ ಅರಸರಲ್ಲಿ ಒಬ್ಬನೂ ಹೇಡಿಯೂ ಕೈಲಾಗದವನೂ ಹುಟ್ಟಲಿಲ್ಲ. ಭದ್ರದೇವ (೨), ನರಸಿಂಹ (೨) ಮೊದಲಾದವರು ಲಾಟ, ಮಾಳವ, ಗೂರ್ಜರ ಪ್ರಾಂತಗಳ ಮೇಲೆ ಏರಾಟವಾಡಿ **ಗಂಗಾನದಿಯ ವರೆಗೆ** ತಮ್ಮ ಪ್ರಭಾವವನ್ನು ಬೀರಿದರು. ಇದರಿಂದ ಇವರ ರಾಜ್ಯವು ಎಷ್ಟೊ ವಿಸ್ತಾರಗೊಂಡಿರಬೇಕು. ಆದರೆ, ಕಲಿಂಗತ್ರಯ ವೆಂಗಿಗಳ ಇವರ ಮೂಲ ರಾಜ್ಯವು ಮಾತ್ರ ಚ್ಯುತಿಯಿಲ್ಲದೆ ಅರಿಕೇಸರಿ (೨-೩) ಯ ವರೆಗೆ ಇವರ ವಶದಲ್ಲಿಯೇ ಇದ್ದಿರಬೇಕು ಎಂದು ಇಟ್ಟುಕೊಳ್ಳಲು ಅಭ್ಯಂತರವಿಲ್ಲ. ಎಂದರೆ **ಪಂಪನ ಕಾಲದಲ್ಲಿ ವೆಂಗಿ ಮೊದಲಾದ ದೇಶಗಳು ಅರಿಕೇಸರಿ (೨) ಯ ರಾಜ್ಯದಲ್ಲಿ ಇದ್ದುವು** ಎಂಬುದು ಅಬಾಧಿತವಾಗುತ್ತದೆ!

**ಬೋದನ–ಪ್ರಥಮ ರಾಜಧಾನಿ:–** ಸಪಾದಲಕ್ಷಭೂಮಿಯನ್ನಾಳುವ ಯುದ್ಧಮಲ್ಲನ ರಾಜಧಾನಿ ಯಾವುದು ಎಂಬುದು ಎಲ್ಲಿಯೂ ಸ್ಪಷ್ಟವಾಗಿ ನಿರ್ದಿಷ್ಟವಾಗಿಲ್ಲವಾದರೂ ಅದರ

---

(೪) ಪಂ. ಭಾ., ವೆ. ಶಾ., ಪ. ಶಾ. ಗಳಲ್ಲಿಯ ಯುದ್ಧಮಲ್ಲ (೧), ಅರಿಕೇಸರಿ (೧), ನರಸಿಂಹ, ಭದ್ರದೇವ, ಅರಿಕೇಸರಿ (೨) ಮುಂತಾದವರ ಪರಾಕ್ರಮ ಕೃತಿಗಳನ್ನು ನೋಡಿ.

(೫) ಅರಿಕೇಸರಿ (೧) ರಾಷ್ಟ್ರಕೂಟನಿರುಪಮನ ರಾಜ್ಯದಲ್ಲಿ ನುಗ್ಗಿದುದು; ವೆಂಗಿಯ ವಿಜಯಾದಿತ್ಯನನ್ನು ರಾಷ್ಟ್ರಕೂಟ ಗೊಜ್ಜಿಗನ ಕೋಪದಿಂದ ಕಾದುದು; ಬದ್ದೆಗನನ್ನು ರಾಷ್ಟ್ರಕೂಟ ಸಮ್ರಾಟನನ್ನು ಮಾಡಿದುದು. (ಪಂ. ಭಾ. ಪು ೪, ೨೩೪.)

(೬) ಪಂ., ಭಾ. ೧–೪೯. (೭) ಪ. ಶಾ. ಸಾ. ೪–೫.

ಬಗೆಗೆ ಸಯುಕ್ತಿಕವಾಗಿ ಊಹಿಸಲು ಸಾಕಷ್ಟು ಆಧಾರಗಳಿವೆ. ಪಂಪಭಾರತ, ವೇಮುಲವಾಡಾ ಶಾಸನ, ಪರಭಣಿಯಶಾಸನ ಇವುಗಳಲ್ಲಿ ಯುದ್ಧಮಲ್ಲನ ಬಗೆಗೆ ಒಂದು ವಿಲಕ್ಷಣವಾದ ವೈಶಿಷ್ಟ್ಯವು ಒಂದೆ ಬಗೆಯಾಗಿ ಹೇಳಲಾಗಿದೆ. ಅದಾವುದೆಂದರೆ, ಆತನು ದಿನಾಲು ಐನೂರು ಆನೆಗಳನ್ನು ಎರೆಸುತ್ತಿದ್ದನು ಎಂಬುದು. ಇದೊಂದು ಅಪೂರ್ವ, ಅಸಾಮಾನ್ಯ ಕೃತಿಯಾದುದರಿಂದ ಮೂರೂ ಕವಿಗಳು ಅದನ್ನು ತಪ್ಪದೆ ಉಲ್ಲೇಖಿಸಿರುವುದು ಸ್ವಾಭಾವಿಕವೆ.

ವೆ. ಶಾ.:— ಯಃ ಪೋದನೇ ಸೌಧಮಯೀಂ ಗಜಾನಾಂ ।
ವಿಧಾಯ ವಾಪೀಮಪಿ ತೈಲಪೂರ್ಣೈಃ ॥
ಸ ಸರ್ವಸೇಕಂ ಸತತಂ ವಿತೇನೇ ।

ಪ. ಶಾ.:— ಸಪಾದಲಕ್ಷಭೂಭರ್ತಾ ತೈಳವಾಪ್ಯಾಂ ಸ ಪೋದನೇ ।
ಅವಗಾಹೋತ್ಸವಂ ಚಕ್ರೇ ಶಕ್ರಶ್ರೀರ್ವರದದನ್ತಿನಾಂ ॥

ಪಂ. ಭಾ.:— ಏನಂ ಪೇಳ್ವುದೊ ಸಿರಿಯುಮ–।
ದ್ವಾನಿಯು ನೆಣ್ಣೆಯೊಳೆ ತೀವಿ ದೀರ್ಘಿಕೆಗಳನಂ ॥
ತಾನೃಪತಿ ನಿಚ್ಚಲಯ್ನೂ ।
ರಾನೆಯ ನವಗಾಹವಿರಿಸುವಂ ಬೋದನದೊಳ್ ॥ (೧–೧೭)

ಈ ಮೂರೂ ಪದ್ಯಗಳಲ್ಲಿಯ ಭಾವವಷ್ಟೆ ಅಲ್ಲದೆ ಶಬ್ದಶೈಲಿಯೂ ಪರಸ್ಪರ ಪೂರ್ಣವಾಗಿ ಹೋಲುತ್ತದೆ. ಸಂಸ್ಕೃತ ಶ್ಲೋಕಗಳಲ್ಲಿಯ **ಪೋದನೇ** ಎಂಬ ಪದವು ಪಂ. ಭಾ. ದಲ್ಲಿ **ಬೋದನದೊಳ್** ಎಂದು ರೂಪುಗೊಂಡಿದೆ. ಈ ಪೋದನ ಅಥವಾ ಬೋದನವು ಸ್ಥಲವಾಚಕವಾಗಿರಬೇಕಲ್ಲದೆ ಯುದ್ಧಮಲ್ಲನ ರಾಜಧಾನಿಯೆ ಆಗಿರಬೇಕು. ಇಂದ್ರನಿಗೆ ಸಮಾನ ಐಶ್ವರ್ಯವುಳ್ಳ ರಾಜನು (ಶಕ್ರಶ್ರೀಃ) ದಿನಾಲು ಐನೂರಷ್ಟು ಆನೆಗಳನ್ನು ಮಜ್ಜನ ಮಾಡಿಸುವ ಕ್ರೀಡಾವಿನೋದ ಸಮಾರಂಭವನ್ನು ನೆರವೇರಿಸುತ್ತಿರಬೇಕಾದರೆ ಅದು ಯಾವುದಾದರೂ ಒಂದು ಊರಲ್ಲಿ ಎಂದು ಕಲ್ಪಿಸುವುದು ಅಸಮಂಜಸವಾಗುವುದರಿಂದ ತನ್ನ ರಾಜಧಾನಿಯಲ್ಲಿಯೆ ಎಂದು ಹೇಳಿದರೆ ಸಯುಕ್ತಿಕವಾಗುವುದು. ಆದುದರಿಂದ ಸಂಸ್ಕೃತದಲ್ಲಿ ಪೋದನ ಅಥವಾ ದೇಶ್ಯ ಭಾಷೆಯಲ್ಲಿ ಬೋದನ ಎಂದು ಕರೆಯಲ್ಪಡುತ್ತಿದ್ದ **ಬೋದನ ಪಟ್ಟಣವೆ ಯುದ್ಧಮಲ್ಲನಿಗೂ ಈ ರಾಜವಂಶಕ್ಕೂ ಮೊದಲನೆಯ ರಾಜಧಾನಿ** ಎಂಬುದು ನಿಶ್ಚಿತವಾಗುತ್ತದೆ. ನಿಜಾಮು ರಾಜ್ಯದ ನಿಜಾಮಾಬಾದ ಜಿಲ್ಹೆಯಲ್ಲಿಯ ಬೋಧನವೆ ಈ ಬೋದನವು. ಇದು ಕೆಲಕಾಲ

(೮) ವಿಲಕ್ಷಣವಾದಿ ಒಂದೆ ಸಂಗತಿಯನ್ನು ಹೇಳುವ ಮೂರೂ ಕವಿಗಳ ವೃತ್ತಾಂತಗಳಲ್ಲಿ ಪರಸ್ಪರ ಸಾಮ್ಯವಿರುವುದು ಸಹಜವಾಗಿದೆ. ಇಷ್ಟರಿಂದಲೆ ಪಂಪನೆ ವೆಮುಲವಾಡದ ಶಾಸನವನ್ನು ಬರೆದಿರಬೇಕು ಎಂಬ ಡಿ. ಎಲ್. ನರಸಿಂಹಾಚಾರ್ಯರ ವಾತಿನಲ್ಲಿ ಹುರುಳಿಲ್ಲ (J. A. H. R. S. VII– 3. P. 164)

(೯) ಇದುವರೆಗೆ ಈ ಪೋದನ–ಬೋದನಗಳ ಅರ್ಥವು ಯಾರಿಗೂ ಆದಂತೆ ತೋರಲಿಲ್ಲ. ಶಾಸನಗಳ ಸಂಪಾದಕರು ಈ ಪದವನು ಸುರಕ್ಷಿತವಾಗಿ ಬಿಟ್ಟು ಬಿಟ್ಟಿರುವರು. ಪಂಪಭಾರತದ ಸಂಪಾದಕರು 'ನೀರು ತುಂಬುವ ತೊಟ್ಟಿ' ಎಂದು ಅದಕ್ಕೆ ಕಲ್ಪಿಸಿದ ಅರ್ಥವು ಅನರ್ಥವೆಂದು ಬೇರೆ ಹೇಳುವ ಅಗತ್ಯವಿಲ್ಲ.

ಕುಮಾರವ್ಯಾಸನು ಬಕವಧ ಪರ್ವದಲ್ಲಿ ಏಕಚಕ್ರನಗರಿಯಲ್ಲಿ ನಡೆದ ಘಟನೆಗಳು ಬೋಧನದಲ್ಲಿ ಸಂಭವಿಸಿದವು ಎಂದು ವರ್ಣಿಸಿರುವನು. ಆದುದರಿಂದ ಆತನ ಕಾಲದಲ್ಲಿ ಈ ಪ್ರಖ್ಯಾತ ಪ್ರಾಚೀನ ಪಟ್ಟಣದ ಸುತ್ತಲು ದಂತಕತೆಯು ಮಾತ್ರ ಹರಡಿದ್ದಿತಾಗಿ ತೋರುತ್ತದೆ. ಇದನ್ನು ಆತನು ವಿಪ್ರಪುರ (ಪ. ೩೨) ಎಂದೂ ಬಹುಧಾನ್ಯನಗರಿ (ಪ. ೬೫) ಎಂದೂ ಉಲ್ಲೇಖಿಸುವನು.

ರಾಷ್ಟ್ರಕೂಟರಿಗೂ ರಾಜಧಾನಿಯಾಗಿತ್ತಾಗಿ ಅಲ್ಲಿಯ ಶಾಸನದಿಂದ ತಿಳಿಯುತ್ತದೆ.[೧೦] ಗೋದಾವರಿ-ಮಾಂಜರಾ ನದಿಗಳ ಪಕ್ಕದಲ್ಲಿ ಸುರಕ್ಷಿತವಾದೀ ಸ್ಥಳಕ್ಕೆ ಒಂದು ಕಾಲದಲ್ಲಿ ವಿಶೇಷ ಮಹತ್ವವು ಬಂದಿರಬೇಕು. ಅದೇ ಶಾಸನದಲ್ಲಿಯ 'ವಿಜಿತೋರ್ವೀಪುಟಭೇದನಂ' ಎಂಬ ಪದವು ಬೋದನವು ಆ ಕಾಲದಲ್ಲಿ ಸುಪ್ರಸಿದ್ಧ ಪಟ್ಟಣವಾಗಿದ್ದಿತು ಎಂದು ಹೇಳುವುದು. ಅಲ್ಲಿಯ ಈಗಣ ಪ್ರಾಚೀನ ಅವಶೇಷಗಳೂ ಇದೇ ಮಾತನ್ನು ಸಮರ್ಥಿಸುವುವು.

"The array of antiquities and the discovery of both Hindu and Muslim inscriptions lead us to infer that the town, though now insignificant, must have possessed considerable religious and strategic importance in early days"[೧೧]

**ಲೆಂಬುಳಪಾಟಳ-ದ್ವಿತೀಯ ರಾಜಧಾನಿ:-** ವೆ. ಶಾ. ಪ. ಶಾ. ಗಳಿಂದ ಇಮ್ಮಡಿ[೧೨] ಅರಿಕೇಸರಿ ಹಾಗೂ ಆತನ ಮೊಮ್ಮಗ ಮುಮ್ಮಡಿ ಅರಿಕೇಸರಿಯ ರಾಜಧಾನಿ ಲೆಂಬುಳಪಾಟಕವು (ವೇಮುಲವಾಡ, ಜಿ. ಕರೀಮುನಗರ) ಆಗಿತ್ತೆಂದು ತಿಳಿಯುತ್ತದೆ. ಇವರೀ ರಾಜಧಾನಿ ಬೋದನವನ್ನು ಬಿಟ್ಟು ಆಗ್ನೇಯದಲ್ಲಿ ಲೆಂಬುಳಪಾಟಕಕ್ಕೆ ಎಂದು ಬಂದಿತು ಏಕೆ ಬಂದಿತು ಎಂಬುದನ್ನು ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲ. ಆದರೂ ಕೆಲಮಟ್ಟಿಗೆ ಊಹಿಸಲು ಅವಕಾಶವಿದೆ. ಈ ರಾಜಧಾನಿಯಲ್ಲಿಯ ರಾಜೇಶ್ವರ-ಬದ್ದೆಗೇಶ್ವರ ಎಂಬ ದೇವಾಲಯಗಳ ಮೇಲಿಂದ ಇವು ಆ ಆ ಹೆಸರಿನ ರಾಜರ ಕಾಲಕ್ಕೆ ಅಲ್ಲಿ ಕಟ್ಟಲ್ಪಟ್ಟರಬೇಕು. ವೆ. ಶಾ. ದಲ್ಲಿ ಒಂದನೆಯ ಅರಿಕೇಸರಿಯ ಮಗನಿಗೆ ರಾಜಾದಿತ್ಯ ಎಂಬ ಇನ್ನೊಂದು ಹೆಸರು ಹೇಳಲಾಗಿದೆ. ಈತನ ತಮ್ಮನೂ ಮೊಮ್ಮಗನೂ ಬದ್ದೆಗನೆಂಬ ಹೆಸರಿನವರು. ಇದರಿಂದ ನೋಡಲು ಯುದ್ಧಮಲ್ಲನ ತರುವಾಯದಲ್ಲಿ ೩-೪ ತಲೆಗಳಾದ ಮೇಲೆ (ಸು. ೮೦೦-೮೩೦) ಇವರು ಬೋದನದಿಂದ ಲೆಂಬುಳಪಾಟಕಕ್ಕೆ ಹೋಗಿರಬಹುದು. ರಾಷ್ಟ್ರಕೂಟರ ಕಡುಹಗೆಗಳಾದ ಮಾಳವರ ಉಪಟಳವನ್ನು ತಪ್ಪಿಸುವುದಕ್ಕಾಗಿಯೊ ಪೂರ್ವ ಚಾಲುಕ್ಯರ ಮೈತ್ರಿಯ ಮೂಲಕವೊ ಇವರು ಹೀಗೆ ಮಾಡಿರಬಹುದೇನು ?

**ವೆಂಗಿಮಂಡಲ:-** ವೆಂಗಿಯೂ ಕಲಿಂಗತ್ರಯವೂ ಮೊದಲಿನಿಂದಲೂ ಈ ಅರಸರ ವಶದಲ್ಲಿ ಇದ್ದವಷ್ಟೆ. ಕಲಿಂಗದೇಶವು ಈಗಣ ಉತ್ತರ ಸರಕಾರ ಪ್ರಾಂತವೆಂದು ನಿರ್ಧರಿಸಲ್ಪಟ್ಟುದರಿಂದ ವೆಂಗಿ ಎಂದರೆ ಯಾವ ಪ್ರದೇಶವು ಎಂಬುದನ್ನು ನೋಡುವ. ಈ ನಾಡಿನ ನಿರ್ದೇಶವು ಅನೇಕ ಕಡೆಯಲ್ಲಿ ಬರುತ್ತಿದ್ದರೂ ಇದರ ವ್ಯಾಪ್ತಿ ನಿಸ್ಸಂದಿಗ್ಧವಾಗಿ ನಿಶ್ಚಿತವಾಗಿಲ್ಲ. ಗೋದಾವರಿ-ಕೃಷ್ಣೆಗಳ ಮುಖ ಪ್ರದೇಶದಲ್ಲಿ ಆಳಿದ ಪೂರ್ವ ಚಾಳುಕ್ಯರಿಗೆ ವೆಂಗಿಯ ಚಾಳುಕ್ಯರೆಂಬ ಪ್ರಸಿದ್ಧಿ ಇರುವುದರಿಂದ ಅದು ವೆಂಗಿಯ ನಾಡೆಂದು ಸಿದ್ಧವಾಗುತ್ತದೆ. ಯುದ್ಧಮಲ್ಲನೂ (೧) ವೆಂಗಿಯನ್ನು ಆಳುತ್ತಿದ್ದನು. ಈ ಕಾಲದಲ್ಲಿ ಅತ್ತ ಪೂರ್ವ ಚಾಲುಕ್ಯರೂ ವೆಂಗಿಯನ್ನು ಆಳುತ್ತಿದ್ದರು. ಇದರಿಂದ ಇಬ್ಬರು ಅರಸರು ಒಂದೆ ನಾಡನ್ನು ಆಳುವ ಬಗೆ ಹೇಗೆ? ಆದುದರಿಂದ ಭಿನ್ನಪ್ರದೇಶದಲ್ಲಿ ಆಳುತ್ತಿದ್ದ ಇವರ ರಾಜ್ಯಕ್ಕೆ ವೆಂಗಿ ಎಂಬ ಹೆಸರಿನ ಪ್ರದೇಶಗಳು

(೧೦) H. A. S. No. 7 p. 4. (೧೧) Ibid p. 1

(೧೨) ವೆ. ಶಾ. ಲೆಂಬುಳವಾಟಕ ಪತ್ತನೇಶಾನಕೋಸೌ-ಶುದ್ಧಪಾಠ, ಸಾಲು ೬೩-೬೪.

ಒಳಪಟ್ಟದ್ದುವು ಎಂದು ಸ್ಪಷ್ಟವಾಗುತ್ತದೆ. ಯುದ್ಧಮಲ್ಲನು ಆಳುತ್ತಿದ್ದ ವೆಂಗಿಯ ವ್ಯಾಪ್ತಿಯನ್ನು ನಿರ್ಧರಿಸಲಿಕ್ಕೆ ಏನಾದರೂ ಪ್ರಮಾಣವಿದೆಯೊ ವಿಚಾರಿಸುವ. ಆತನ ರಾಜಧಾನಿಯಾಗಿದ್ದ ಬೋಧನವು ಕಲಿಂಗ ನಾಡಾಗಿರುವುದು ಶಕ್ಯವಲ್ಲವಾದುದರಿಂದ ಅದು ವೆಂಗಿ ನಾಡೇ ಆಗಿರ ಬೇಕು. ಇಲ್ಲಿ ವೆಂಗಿ ನಾಡಿನ ಪಶ್ಚಿಮ ಕೇಂದ್ರವು ದೊರೆತಂತಾಯಿತು. ಇದು ಈಗಣ ನಿಜಾಮಾಬಾದ ಜಿಲ್ಹೆ. ಮುಂದೆ ಇದರ ರಾಜಧಾನಿ ಕರೀಮನಗರ ಜಿಲ್ಹೆಯಲ್ಲಿಯ ಲೆಂಬುಳ ಪಾಟಕ ಎಂಬಲ್ಲಿಗೆ ಒಯ್ಯಲ್ಪಟ್ಟಿತು. ಇದನ್ನೆಲ್ಲ ಪರಿಶೀಲಿಸಿ ಹೀಗೆ ಸಯುಕ್ತಿಕವಾಗಿ ಊಹಿಸ ಬಹುದು. ವೆಂಗಿನಾಡು ಗೋದಾವರಿಯ ದಕ್ಷಿಣ ಪ್ರದೇಶದಲ್ಲಿ ಪಶ್ಚಿಮಕ್ಕೆ ಮಾಂಜರಾ ನದಿ ಯಿಂದ ಪೂರ್ವಕ್ಕೆ ಗೋದಾ—ಕೃಷ್ಣೆಗಳ ಮುಖಪ್ರದೇಶದ ವರೆಗೆ ಹಬ್ಬಿತ್ತು. ಈ ಪ್ರದೇಶದ ಪಶ್ಚಿಮ ಭಾಗದಲ್ಲಿ, ನಿಜಾಮಾಬಾದ-ಕರೀಮನಗರ—ವರಂಗಲ-ನಲಗೊಂಡ ಜಿಲ್ಹೆಗಳ ಪ್ರದೇಶದಲ್ಲಿ ಅರಿಕೇಸರಿಯ ಚಾಳುಕ್ಯರು ಆಳುತ್ತಿದ್ದರು. ವೆಂಗಿಯ ಚಾಳುಕ್ಯರು ಈ ವೆಂಗಿ ದೇಶದ ಪೂರ್ವ (ಆಗ್ನೆಯ) ಭಾಗವನ್ನು ಹಿಡಿದುಕೊಂಡಿದ್ದರು. ಈ ಊಹೆಯಿಂದ ಈ ವೆಂಗಿ ನಾಡಿನ ತೊಡಕು ಬಿಟ್ಟು ಹೋಗುವುದು.[೧೩]

**ಪಶ್ಚಿಮವೆಂಗಿ—ಕರ್ನಾಟಕ:—** ಮೇಲೆ ಕಾಣಿಸಿದ, ಉದ್ದಕ್ಕೆ ಹಬ್ಬಿದ ವೆಂಗಿದೇಶದಲ್ಲಿ ಪೂರ್ವದ ಪ್ರದೇಶವು ಎಂದಿನಿಂದಲೂ ಆಂಧ್ರದೇಶವೆ ಆಗಿದೆ ಎನ್ನಬಹುದು. ಆದರೆ ನಿಜಾಮಾಬಾದ—ಕರೀಮನಗರ—ವರಂಗಲ-ನಲಗೊಂಡಾ ಜಿಲ್ಹೆಗಳ ಪಶ್ಚಿಮವೆಂಗೀ ಪ್ರದೇಶವು ೧೨ನೆಯ ಶತಮಾನದ ವರೆಗೆ ಕರ್ನಾಟಕವಾಗಿದ್ದಿತೆನ್ನಲು ಸಾಕಷ್ಟು ಪ್ರಮಾಣಗಳಿವೆ.

೧) ಗೋದಾವರಿಯ ವರೆಗೆ ಕರ್ನಾಟಕವು ಹಬ್ಬಿದೆ ಎಂದು ನೃಪತುಂಗನು ಸಾರಿರುವನು.

೨) ೯ನೆಯ ಶತಮಾನದಲ್ಲಿ ಉದಿಸಿದ ಅನೇಕ ಕನ್ನಡ ಕವಿಗಳೂ ಕವಿಪೋಷಕರೂ ವೆಂಗಿ ನಾಡಿನವರು. ಪಂಪ, ನಾಗವರ್ಮ, ಪೊನ್ನನ ಶಾಂತಿಪುರಾಣಕ್ಕೂ ರನ್ನನ ಅಜಿತ ಪುರಾಣಕ್ಕೂ ಕಾರಣರಾದ ಮಲ್ಲಪಯ್ಯ ಮುಂತಾದವರು ವೆಂಗಿನಾಡಿನವರಾಗಿದ್ದು ಕನ್ನಡ ಭಾಷೆಯಲ್ಲಿಯ ನಾಮಾಂಕಿತ ಗ್ರಂಥಗಳನ್ನು ಹುಟ್ಟಿಸಿದರು. ಒಂದು ಬಗೆಯಿಂದ ನೋಡಿದರೆ ಕನ್ನಡ ಸರಸತಿಯ ಮುಕುಟದೊಳಗಿನ ಉಜ್ವಲ ರತ್ನಗಳು ಬೆಳಗಿದುದೂ ಕನ್ನಡ ಸಾಹಿತ್ಯಗಂಗೆ ಹರಿದುದೂ ಇದೆ ವೆಂಗಿನಾಡಿನಿಂದ! ಏಕೆಂದರೆ ಕರ್ನಾಟಕದ ಉತ್ತಮೋತ್ತಮ ಆದಿ ಕವಿಗಳು ವೆಂಗಿನಾಡಿನಿಂದಲೆ ಉಜ್ಜೀವಿತರಾದರು.

೩) ಕರೀಮನಗರ ಜಿಲ್ಹೆಯಲ್ಲಿ ಬರೆಯಲ್ಪಟ್ಟ ಪರಭಣಿ ಹಾಗೂ ವೆಮುಲವಾಡದ ಸಂಸ್ಕೃತ ಶಾಸನಗಳು ಆಗ ಅಲ್ಲಿಯ ಜನರಲ್ಲಿ ಬಳಿಕೆಯಿದ್ದ ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟಿವೆ ಇಷ್ಟೆ ಅಲ್ಲದೆ, ಅವುಗಳಲ್ಲಿ ಕನ್ನಡ ಭಾಷೆಯ ಪ್ರಭಾವವೂ ಒಡೆದು ಕಾಣುತ್ತದೆ. (೧೦ನೆಯ ಶ.)

(೪) ವೆಂಗಿಮಂಡಲದಲ್ಲಿಯ ವೆಂಗಿಪಳು, ನಿಡುಗುಂದಿ, ಕೊಟ್ಟೂರ್, ಪುಂಗನೂರ್ ಮುಂತಾದ ಊರುಗಳ ಹೆಸರುಗಳು ಕನ್ನಡವಾಗಿವೆ.

(೫) ಬೋಧನದಲ್ಲಿ ಅಚ್ಚಗನ್ನಡ ಶಾಸನವು ದೊರೆತಿದೆ. (೧೧ನೆಯ ಶ.)

---

(೧೩) ವೆಂಗಿ ಎಂಬ ಹೆಸರಿನ ಊರುಗಳು ಈ ನಾಡಿನ ವ್ಯಾಪ್ತಿಯ ಕುರುಹುಗಳೆನ್ನಬಹುದಲ್ಲವೇ ? ಕೃಷ್ಣಾ—ಗೋದಾವರೀ ಪ್ರದೇಶದಲ್ಲಿ ಈ ಹೆಸರಿನ ಅನೇಕ ಊರುಗಳು—ವೆಂಗಿಪುರ ಇ. ಸಿಗುವಂತೆ ನೈಜಾಮ ತೆಲಂಗಾಣೆಯಲ್ಲಿಯೂ ವೆಂಗಪಲ್ಲಿ ಮುಂತಾದ ಈ ಹೆಸರಿನ ಊರುಗಳು ಸಿಕ್ಕುತ್ತವೆ.

(೬) ಭುವನಗಿರಿ (ಜಿ. ವರಂಗಲ) ಎಂಬಲ್ಲಿಯ ವಿಷ್ಣುಭಟ್ಟ ಎಂಬ ಕವಿ ಉಸ್ಮಾನಾಬಾದ ಜಿಲ್ಹೆಯ ಬಳಿಯ ರುದ್ದವಾಡಿ ಎಂಬಲ್ಲಿಯ ಅಚ್ಚಗನ್ನಡ ಕಾವ್ಯಮಯ ಶಾಸನವನ್ನು ಬರೆದಿರುವನು (೧೨ನೆಯ ಶ.)

(೭) ಈಗಣ ವರಂಗಲ, ನಲಗೊಂಡ ಮೊದಲಾದ ಆಂಧ್ರ ಜಿಲ್ಹೆಗಳಲ್ಲಿ ಕನ್ನಡ ಶಾಸನಗಳು ದೊರೆಯುತ್ತವೆ. ಅಲ್ಲದೆ, ಬಂಡಿಹಾಳ, ಮುಷ್ಟಿಹಾಳ, ಜೀಡೀಕಲ್ಲು, ದೇವರಕೊಂಡ ಮುಂತಾದ ಕನ್ನಡ ಊರ ಹೆಸರುಗಳೂ ಕೆಲವು ಕರ್ನಾಟಕ ಸಂಪ್ರದಾಯಗಳೂ ಈಗಲೂ ಅಲ್ಲಿ ಸಿಕ್ಕುತ್ತವೆ.[೧೪]

(೮) ಉದಯೋನ್ಮುಖ ಆಂಧ್ರ ಸಾಹಿತ್ಯವು ಕನ್ನಡ ಸಾಹಿತಿಗಳ ಬಲವಾದ ಬೆಂಬಲದಿಂದಲೆ ಅಭಿವೃದ್ಧಿಗೊಂಡಿತು. ಮಹಾಭಾರತ ಯುದ್ಧದಲ್ಲಿ ಅರ್ಜುನನಿಗೆ ವಾಸುದೇವನು ನೆರವಾದಂತೆ ನನ್ನೀ ಭಾರತರಚನೆಯಲ್ಲಿ ಕನ್ನಡ ಪಂಡಿತನಾದ ನಾರಾಯಣಭಟ್ಟನು ನೆರವಾದನೆಂದು ಆಂಧ್ರಭಾರತಕಾರ ನನ್ನಯಭಟ್ಟನು (೧೦೪೦) ತನ್ನ ಆಂಧ್ರಭಾರತದಲ್ಲಿ ಹೇಳಿಕೊಂಡಿದ್ದಾನೆ. ಅನೇಕ ಆಂಧ್ರಕವಿಗಳು ಕನ್ನಡಪ್ರವೀಣರೂ ಆಗಿದ್ದರು. ಚಾಲುಕ್ಯ ಪದ್ಧತಿಯಲ್ಲಿ ಕಟ್ಟಿದ ಅಸಂಖ್ಯ ಗುಡಿಗಳ ಅವಶೇಷಗಳು ಈ ಪ್ರಾಂತದಲ್ಲಿ ದೊರೆಯುತ್ತವೆ. ಸಾರಾಂಶವೇನೆಂದರೆ, ಈ ನಾಡು ಒಮ್ಮೆ ಪೂರ್ಣ ಕನ್ನಡವಾಗಿತ್ತು. **ಪ್ರಾಚೀನ ಕರ್ನಾಟಕದ ವಾಯುವ್ಯೋತ್ತರ ಪ್ರದೇಶಗಳು ಮುಳುಗಿ ಅಲ್ಲಿ ಈಗಣ ಮಹಾರಾಷ್ಟ್ರವಾಗಿರುವಂತೆ ಕರ್ನಾಟಕದ ಪೂರ್ವೇಶಾನ್ಯಭಾಗಗಳು** ಮುಳುಗಿ ಆಂಧ್ರ ಪ್ರದೇಶವಾಗಿರುವುವು. ಇಂತು ನಿಜಾಮಾಬಾದ, ಕರೀಮನಗರ, ವರಂಗಲ ಹಾಗೂ ನಲಗೊಂಡ ಜಿಲ್ಹೆಗಳಲ್ಲಿ ಪಶ್ಚಿಮವೆಂಗಿ ದೇಶವು ನೆಲಸಿತ್ತು; ಅರಿಕೇಸರಿಯ ಮನೆತನದವರು ಈ ಪಶ್ಚಿಮವೆಂಗಿಯಲ್ಲಿ ಆಳುತ್ತಿದ್ದರು; ಈ ಪಶ್ಚಿಮವೆಂಗಿ ಕನ್ನಡದ ತಿರುಳುಳ್ಳ ಶುದ್ಧ ಕರ್ನಾಟಕ ಪ್ರದೇಶ; ಎಂದು ನಿರ್ಧರಿಸಲಾಗುತ್ತದೆ.

ಈ ಅರಿಕೇಸರಿಯ ಮನೆತನವು ಕನ್ನಡವಾಗಿತ್ತೆನ್ನಲಿಕ್ಕೆ, ಬದ್ದೆಗ, ನರಗ, ಅರಿಗ ಜಾಕವ್ವೆ ಮುಂತಾದ ಹೆಸರುಗಳೂ, ಅವರು ಪ್ರೀತಿಯಿಂದ ಧರಿಸಿದ ಸೋಲದಗಂಡ, ಪಾಣ್ಬರ ಅಂಕುಶ, ನೋಡುತ್ತೆಗೆಲ್ದ, ಪ್ರಿಯಗಳ್ಳ ಮುಂತಾದ ಅನೇಕ ಬಿರುದುಗಳೂ ಅವರ ಆಶ್ರಯ ಪೋಷಣೆಗಳಿಂದ ಸ್ಫೂರ್ತಿಗೊಂಡ ಉನ್ನತೋನ್ನತ ಕನ್ನಡ ಕವಿಗಳೂ ಸಾಕ್ಷಿಯಾಗಿದ್ದಾರೆ.

ಪಂಪಭಾರತ (೧೪-೪೦) ದಲ್ಲಿ ಹೇಳಿರುವಂತೆ ಪಂಪನ ನಾಲ್ಕನೆಯ ಪೂರ್ವಜನು ವೆಂಗಿ ಮಂಡಲದಲ್ಲಿಯ ವೆಂಗಿಪಳು ಎಂಬ ಅಗ್ರಹಾರದವನು. ಮುಂದೆ ಪಂಪನು ತನ್ನ ತಂದೆಯೂ ತಾನೂ ಮತಾಂತರ ಮಾಡಿದ ವೃತ್ತಾಂತವನ್ನು ಹೇಳುವನು. ಆದರೆ ಆ ಮನೆತನದವರು ಸ್ಥಲಾಂತರ ಮಾಡಿದ ಸಂಗತಿ ಎಲ್ಲಿಯೂ ಉಕ್ತವಾಗಿಲ್ಲ. ಆದುದರಿಂದಲೂ, ಹಾಗೆ ಮಾಡಿದ್ದರೆ ಅದನ್ನು ಉಲ್ಲೇಖಿಸಲು ಯಾವ ಆತಂಕವೂ ಇಲ್ಲದೆ ಇರುವುದರಿಂದಲೂ, ಆ ಕಾಲದಲ್ಲಿ ಆ ವೆಂಗಿನಾಡಿನಲ್ಲಿ ದೇಶ, ಭಾಷೆ, ಧರ್ಮ,[೧೫] ಪ್ರಭು ಮುಂತಾದ ಪರಿಸ್ಥಿತಿ ಎಲ್ಲ

(೧೪) ಉತ್ತರ ಕರ್ನಾಟಕದಲ್ಲಿಯಂತೆ ವರಂಗಲ ಜಿಲ್ಹೆಯಲ್ಲಿ ಕೆಲವೆಡೆ ತಾಯಿಗೆ 'ಅವ್ವ' ಎಂದು ಕರೆಯುತ್ತಾರೆಂದು ಗೆ. ನಿಲೋಗಲ್ಲರು ತಿಳಿಸುವರು.

(೧೫) ಈ ಕಾಲದಲ್ಲಿ ಅರಸರು ಯಾವ ಧರ್ಮದವರೆ ಆಗಿರಲಿ ಅವರಿಂದ ಅನ್ಯಧರ್ಮಗಳಿಗೆ ಉಪದ್ರವವಿದ್ದಿಲ್ಲ. ವೈದಿಕರಲ್ಲಿ ಜೈನರ ಅಸಹನೆ, ವಿದ್ವೇಷಭಾವನೆ ಈ ಕಾಲದಲ್ಲಿ ಹುಟ್ಟಿರಲಿಲ್ಲ.

ಪರಿಯಿಂದ ಅನುಕೂಲವಿರುವುದರಿಂದಲೂ **ವೆಂಗಿನಾಡಿನಲ್ಲಿಯ ಪರಂಪರಾಗತವಾದ ವೆಂಗಿಪಳು ಅಗ್ರಹಾರವೆ ಪಂಪನ ಜನ್ಮಸ್ಥಳವೂ ವಾಸಸ್ಥಳವೂ ಆಗಿತ್ತು** ಎನ್ನಲು ಅಭ್ಯಂತರವಿಲ್ಲ. ಮುಂದೆ ಅಲ್ಲಿಯ ರಾಜಧಾನಿಯಾದ ಲೆಂಬುಳಪಾಟಕದಲ್ಲಿ ಪಂಪನಿಗೆ ಹೆಚ್ಚಿನ ರಾಜಾಶ್ರಯವೂ ರಾಜಸತ್ಕಾರವೂ ಲಭಿಸಿದವು. ವಿದ್ಯಾಭ್ಯಾಸಂಗ, ತೀರ್ಥಯಾತ್ರೆ ದೇಶ ಪರ್ಯಟನ ಮುಂತಾದ ಕಾರಣಗಳಿಂದ ಆಗಿನ ಕಾಲದ ದೇಶ-ವಿದೇಶ-ವಿಶೇಷ-ಪರಿಸ್ಥಿತಿಗಳ ಪೂರ್ಣ ಪರಿಚಯವು ಸೂಕ್ಷ್ಮನಿರೀಕ್ಷಕನೂ ರಸಮಧುಕರನೂ ಪ್ರತಿಭಾಮೂರ್ತಿಯೂ ಆದ ಆತನಿಗೆ ಆಗಿರಲಿಕ್ಕೆ ಸಾಕು. ಅದರ ಪ್ರತಿಬಿಂಬವೂ ಆತನ ಕಾವ್ಯಗಳಲ್ಲಿ ಮೂಡಿರುವುದೂ ಸಹಜವೆ ಆಗಿದೆ. ಇಷ್ಟರಿಂದಲೆ ಅವನು ಬೇರೆ ನಾಡಿನವನು ಎಂದು ಊಹಿಸುವುದು ಸರಿಯಾಗಲಾರದು. *

+ + + + + +

ಕರೀಮನಗರ ಜಿಲ್ಹೆ, ಮಂಥಣಿ ಎಂಬಲ್ಲಿ ಮುನ್ಸಿಫರಾಗಿದ್ದು ಅಲ್ಲಿಯ ಇತಿಹಾಸ ಸಂಶೋಧನ ಇತಿಹಾಸ ಲೇಖನವನ್ನು ಕೈಕೊಂಡಿರುವ ಶ್ರೀಮಾನ್ ಶ್ರೀನಿವಾಸರಾಯ ಮುಡಿಯವರು 'ಜಯಕರ್ನಾಟಕ'ದಲ್ಲಿಯ ನನ್ನ ಲೇಖನವು ತಮಗೆ ಕೆಲ ವಿಷಯಗಳಲ್ಲಿ ಹೊಸ ಪ್ರಕಾಶವನ್ನು ನೀಡಿತು ಎಂದು ಹೇಳಿ ನನಗೆ ಸಂದಿಗ್ಧವಾಗಿ ಉಳಿದಿರುವ ಕೆಲ ಅಂಶಗಳನ್ನು ಬರೆದು ತಿಳುಹಿದ್ದಾರೆ. ಅದಕ್ಕೋಸುಗ ಅವರ ಉಪಕಾರವನ್ನು ಸ್ಮರಿಸಿ ಅವರ ಅರಿಕೆಯ ಆಧಾರದಿಂದ ಪ್ರಸ್ತುತ ಚರ್ಚೆಯಲ್ಲಿಯ ಕೆಲ ಮಹತ್ವದ ಸಂಗತಿಗಳನ್ನು ಪರಿಚಯಪಡಿಸುವೆ.

ಯುದ್ಧಮಲ್ಲನು (೧) ಆಳಿದ. **ಕಲಿಂಗತ್ರಯ ಅಥವಾ ತ್ರಿಕಲಿಂಗ:–** (೧) ಉತ್ತರ ಕಲಿಂಗ ಉತ್ಕಲ-ಗಂಗೆಯಿಂದ ಕಟಕ (೨) ಮಧ್ಯಕಲಿಂಗ-ಕಟಕದಿಂದ ಮಹೇಂದ್ರಗಿರಿ ಬೆಟ್ಟಗಳು. (೩) (ದಕ್ಷಿಣ) ಕಲಿಂಗ–ಮಹೇಂದ್ರಗಿರಿಯಿಂದ ಗೋದಾವರಿ.

ಪರಭಣಿಯ ಶಾಸನದಲ್ಲಿಯ **ಸಬ್ಬಿದೇಶಸಹಸ್ರ:–** ಮಂಥಣಿಯನ್ನು ಒಳಗೊಂಡ ಕರೀಮನಗರ ಜಿಲ್ಹೆಯ ಈಶಾನ್ಯ ಪ್ರದೇಶ. ೧೩೦೮ ಇ. ಯಲ್ಲಿ ಬರೆದ ಆಂಧ್ರ ಪದ್ಮಪುರಾಣದ ಉತ್ತರ ಖಂಡದ ಸಮಾಪ್ತಿ ಲೇಖನದಲ್ಲಿ ಗೋದಾವರಿಯ ದಕ್ಷಿಣ ತೀರದಲ್ಲಿ ನೆಲಸಿದ ಸಬ್ಬಿಸಹಸ್ರ ರಾಷ್ಟ್ರದ ನಿರ್ದೇಶವು ಬಂದಿದೆ.

**ಸಾಸಿರದ ಬಚ್ಚೆನಾಡು:–** ಗೋದಾವರಿಯ ದಂಡೆಗುಂಟೆ ಹಬ್ಬಿದ ಕರೀಮನಗರ ಜಿಲ್ಹೆಯ ಉತ್ತರ ಪ್ರದೇಶ (ಊಹೆ). ಪಂಪನು ಸಂಭಾವನೆ ಪಡೆದ ಧರ್ಮಪುರವು ಇದಕ್ಕೆ ಸೇರಿತ್ತು.

**ಧರ್ಮಪುರ:–** ಕರೀಮನಗರ ಜಿಲ್ಹೆ, ಜಗತ್ಯಾಲ ತಾಲೂಕಿನ ಧರ್ಮಪುರಿ ಎಂಬೂರು. ಗೋದಾವರೀ ತೀರ. ಇಲ್ಲಿ ಚಾಲುಕ್ಯರೀತಿಯ ಶಿಲ್ಪಾವಶೇಷಗಳೂ ಶಾಸನಗಳೂ ದೇವಾಲಯಗಳೂ ದೊರೆವುವು. ಇದು ಈಗಲೂ ಕ್ಷೇತ್ರಸ್ಥಳವೂ ಶೈವ ವೈಷ್ಣವ ಬ್ರಾಹ್ಮಣ್ಯದ ಬೀಡೂ ಆಗಿದೆ. ಇಲ್ಲಿಯ ನರಸಿಂಹ, ಲಕ್ಷ್ಮೀನಾರಾಯಣ ದೇವತೆಗಳು ಕವಿಕೀರ್ತಿತವಾಗಿವೆ.

**ವೆಂಗಿಪಳು:–** ನಲಗೊಂಡ ಜಿಲ್ಹೆ, ಭುವನಗಿರಿಯ ಬಳಿಯಲ್ಲಿ, ವಂಗಪಲ್ಲಿ ಎಂಬ ಊರು—ಆಗಿರಬಹುದೋ?

---

* ಈ ಲೇಖನವನ್ನು ಬರೆಯುತ್ತಿರುವಾಗ 'ಭಾರತಿ'ಯಲ್ಲಿಯ ಶ್ರೀ. ಪೈಯವರ ಲೇಖನಗಳು ನನ್ನ ಕೈಸೇರಿದುವು. ಉಭಯರ ಅಭಿಪ್ರಾಯಗಳಲ್ಲಿ ಕೆಲವು ತುಂಬಾ ಸರಿಹೋಲುತ್ತಿರುವುದು ಒಂದು ಯೋಗಾಯೋಗ!

## ಉತ್ತರ ಹಿಂದುಸ್ಥಾನದಲ್ಲಿ ರಾಜ್ಯವನ್ನಾಳಿದ
# ಕರ್ನಾಟಕ ಅರಸುಮನೆತನಗಳು

**ಲೇಖಕರು:– ಶ್ರೀ. ನಾರಾಯಣರಾವ ರಾಘವೇಂದ್ರರಾವ ದೇಶಪಾಂಡೆ** ಬಿ. ಎ. ಎಲ್‌ಎಲ್. ಬಿ

## (೧) ನಾನ್ಯದೇವ

ಈ ನಾನ್ಯದೇವನು ಮಿಥಿಲಾ (ಉತ್ತರ ಬಿಹಾರ ಪ್ರಾಂತ) ಮತ್ತು ನೇಪಾಳ ದೇಶಗಳಲ್ಲಿ ಕ್ರಿಸ್ತವರ್ಷದ ೧೦೯೭ ರಿಂದ ೧೧೪೭ ರ ವರೆಗೆ ರಾಜ್ಯವನ್ನಾಳಿದನು. ಇವನು ಮೂಲತಃ ಕರ್ನಾಟಕ ದೇಶದವನೆಂದು ನೇಪಾಳ ದೇಶದ ಇತಿಹಾಸದ ಆಧಾರದಿಂದ ತಿಳಿದು ಬರುತ್ತದೆ ಇದಲ್ಲದೆ ಇದೇ ನಾನ್ಯದೇವನು ಭರತನ ನಾಟ್ಯಶಾಸ್ತ್ರದ ಸಂಗೀತ ಪ್ರಕರಣದ ಮೇಲೆ ಟೀಕೆಯನ್ನು ಬರೆದಿದ್ದಾನೆ. ಈ ಟೀಕೆಯಲ್ಲಿ ಈತನು ತಾನು **"ಕರ್ನಾಟಕ ಕುಲಭೂಷಣ"**ನೆಂದು ಹೇಳಿಕೊಂಡಿದ್ದಾನೆ. ಇದೇ ಮೇರೆಗೆ ಈತನಿಗೆ **ಮಿಥಿಲೇಶ್ವರ, ಮಹಾಸಾಮಂತಾಧಿಪತಿ, ಧರ್ಮಾವಲೋಕ, ಧರ್ಮಾಧಾರಭೂಪತಿ, ರಾಜನಾರಾಯಣ, ನೃಪಮಲ್ಲ, ಮೋಹನಮುರಾರಿ, ಪ್ರತ್ಯಗ್ರವಾಣೀಪತಿ** ಮುಂತಾದ ಬಿರುದುಗಳೂ ಇರುತ್ತವೆ.

ಇವನು ಯುದ್ಧಕಲೆಯಲ್ಲಿ ವಿಶಾರದನಾಗಿದ್ದಂತೆಯೇ ಲಲಿತಕಲೆಯಲ್ಲಿಯೂ ಅದರಲ್ಲಿ ವಿಶೇಷತಃ ಗಾಯನಕಲೆಯಲ್ಲಿಯೂ ನಿಷ್ಣಾತನಾಗಿದ್ದನು. ನೇಪಾಳದ ಇತಿಹಾಸದಿಂದ ತಿಳಿದು ಬರುವುದೇನೆಂದರೆ, ನಾನ್ಯದೇವನು ಮಾಳವಾಧಿಪತಿಯ ಕೀರ್ತಿಯನ್ನು ಅಡಗಿಸಿದನೆಂದೂ, ಸೌವೀರದೇಶದ ವೀರರನ್ನು ರಣಾಂಗಣದಿಂದ ಓಡಿಸಿದನೆಂದೂ, ವಂಗ ಹಾಗೂ ಗೌಡ ದೇಶಗಳ ರಾಜರನ್ನು ಸೋಲಿಸಿದನೆಂದೂ ಗೊತ್ತಾಗುತ್ತದೆ.

ಈ ಮನೆತನದಲ್ಲಿ,

(೧) ನಾನ್ಯದೇವ (ಕ್ರಿ. ವ. ೧೦೯೭–೧೧೫೪)
(೨) ಮಲ್ಲದೇವ (ಕ್ರಿ. ವ. ೧೧೫೪–೧೧೭೪)
(೩) ನರಸಿಂಹದೇವ (ಕ್ರಿ. ವ. ೧೧೭೪-೧೨೦೫)

ಈ ಪ್ರಕಾರ ಈ ಮೂರು ಜನ ಅರಸರು ಸುಪ್ರಸಿದ್ಧರಾಗಿ ರಾಜ್ಯವನ್ನಾಳಿದರು.

## (೨) ವಿಜಯಸೇನ

ಬಂಗಾಲದಲ್ಲಿ ರಾಜ್ಯವನ್ನಾಳಿದ ಸೇನವಂಶದ ಮೂಲಪುರುಷನಾದ ವಿಜಯಸೇನ ರಾಜನೂ ನಾನ್ಯದೇವನಂತೆ ಕನ್ನಡಿಗನೇ ಆಗಿದ್ದಾನೆ. ಈ ಸೇನವಂಶದ ರಾಜರಲ್ಲಿ.

(೧) ವಿಜಯಸೇನ (ಕ್ರಿ. ವ. ೧೦೯೫–೧೧೫೯)
(೨) ಬಲ್ಲಾಳಸೇನ (ಕ್ರಿ. ವ. ೧೧೫೯–೧೧೭೭)
(೩) ಲಕ್ಷ್ಮಣಸೇನ (ಕ್ರಿ. ವ. ೧೧೭೮– )

ಈ ಮೂವರು ರಾಜರು ಒಳ್ಳೆಯ ಹೆಸರಾದವರಾಗಿದ್ದಾರೆ.

---

* 'Indian Historical Quarterly' ಯ ೭ನೇ ಸಂಪುಟದ ೪ನೇ ಸಂಚಿಕೆಯಲ್ಲಿ ಶ್ರೀ ರಮೇಶಚಂದ್ರ ಮುಜುಮದಾರರವರು ಬರೆದ ಲೇಖದ ಆಧಾರದ ಮೇಲಿಂದ ಬರೆದುದು.

ಮುಧಾಯಿನಗರದಲ್ಲಿಯ ಲಕ್ಷ್ಮಣಸೇನನ ತಾಮ್ರಶಾಸನದಲ್ಲಿ, ಈ ಸೇನವಂಶದ ಮೂಲ ಪುರುಷನಿಗೆ "ಕರ್ನಾಟಕ ಕ್ಷತ್ರಿಯ ಕುಲ ಶಿರೋಮಣಿ" ಎಂಬ ಬಿರುದು ಇದೆ.

ಈ ಸೇನವಂಶದರಾಜರು ಬಂಗಾಲದಲ್ಲಿರತಕ್ಕ ರಾಢದೇಶದಲ್ಲಿ ಆಳುತ್ತಿದ್ದರು. ಈಗಲೂ ಸೇನಮನೆತನದವರು ಬಂಗಾಲದಲ್ಲಿದ್ದಾರೆ.

## (೩) ಚಂದ್ರದೇವ

ಕನೋಜದೇಶದಲ್ಲಿ ರಾಜ್ಯವನ್ನಾಳಿದ ಚಂದ್ರದೇವರಾಜನೂ ಸಹ ನಾನ್ಯದೇವ ಮತ್ತು ವಿಜಯಸೇನರಾಜರಂತೆ ಕರ್ನಾಟಕ ದೇಶದವನೆಂಬುದು ಸಿದ್ಧವಾಗಿದೆ. ಎಂದರೆ ಈ ಚಂದ್ರದೇವರಾಜನು ಗಾಹಡವಾಡ ಅಥವಾ ಗಾಹಡವಾಲ ಅರಸುಮನೆತನವನ್ನು ಉತ್ತರ ಹಿಂದುಸ್ಥಾನದಲ್ಲಿ ಸುಮಾರು ಕ್ರಿ. ಶ. ೧೦೯೦ ರಲ್ಲಿ ಸ್ಥಾಪಿಸಿದನು. ಈ ಗಾಹಡವಾಲ ಅಥವಾ ಗಾಹಡವಾಡ ಎಂಬುದು ಧಾರವಾಡ ಜಿಲ್ಹೆಯ ಗದಗ ತಾಲೂಕಿನಲ್ಲಿರುವ ಗಾವರವಾಡ ಗ್ರಾಮದ ಹೆಸರಿನ ಅಪಭ್ರಂಶವಾಗಿದೆ. ಈ ಚಂದ್ರದೇವರಾಜನ ಪೂರ್ವಜರು ಈ ಗಾವರವಾಡ ಗ್ರಾಮದವರಾದುದರಿಂದ ಈ ಅರಸು ಮನೆತನವು ಕರ್ನಾಟಕದ್ದೆಂಬ ಸಿದ್ಧಾಂತವು ಮತ್ತಿಷ್ಟು ದೃಢಪಡುತ್ತದೆ.

ಈ ಕರ್ನಾಟಕದ ಅರಸುಮನೆತನಗಳು ಉತ್ತರ ಹಿಂದುಸ್ಥಾನದಲ್ಲಿ ಹೇಗೆ ಸ್ಥಾಪಿಸಲ್ಪಟ್ಟವೆಂಬುದಕ್ಕೆ ಬಲವತ್ತರವಾದ ಐತಿಹಾಸಿಕ ಪ್ರಮಾಣಗಳಿರುತ್ತವೆ.

ಕಲ್ಯಾಣ ಚಾಳುಕ್ಯ ಚಕ್ರವರ್ತಿಗಳಾದ **ಮೊದಲನೆಯ ಸೋಮೇಶ್ವರ** (ಕ್ರಿ. ಶ. ೧೦೪೨-೧೦೬೮) **೬ನೆಯ ವಿಕ್ರಮಾದಿತ್ಯ** (ಕ್ರಿ. ಶ. ೧೦೭೬-೧೧೨೬), **೩ನೆಯ ಸೋಮೇಶ್ವರ** (ಕ್ರಿ. ಶ. ೧೧೨೬-೧೧೩೮ ಈ ಮೂವರು ಕರ್ನಾಟಕರಾಜರು ಉತ್ತರ ಹಿಂದುಸ್ಥಾನಕ್ಕೆ ಹೋಗಿ, ಅಲ್ಲಿ ದಿಗ್ವಿಜಯಮಾಡಿಕೊಂಡು ಬಂದವರು.

(೧) ಮೊದಲನೆಯ ಸೋಮೇಶ್ವರನು, ಮಾಳವಾದೇಶದ ಪರಮಾರ ಮನೆತನದ ಭೋಜರಾಜನನ್ನು ಧಾರಾ ರಾಜಧಾನಿಯಿಂದ ಓಡಿಸಿದನು. ಮತ್ತು ಚೇದಿದೇಶದ ಕರ್ಣರಾಜನನ್ನು ಸೋಲಿಸಿದನು.

(೨) ೬ನೆಯ ವಿಕ್ರಮಾದಿತ್ಯನು ತನ್ನ ಆಳಿಕೆಯಲ್ಲಿ ಎರಡು ಸಾರೆ ಉತ್ತರ ಹಿಂದುಸ್ಥಾನಕ್ಕೆ ಹೋಗಿ ದಿಗ್ವಿಜಯಮಾಡಿಕೊಂಡು ಬಂದಿದ್ದಾನೆ. ಈ ವಿಕ್ರಮಾಂಕ ಚಕ್ರವರ್ತಿಯು ಉತ್ತರ ಹಿಂದುಸ್ಥಾನದಲ್ಲಿ ಗೌಡ (ಬಂಗಾಲ), ಕಾಮರೂಪ (ಆಸಾಮು) ದೇಶಗಳನ್ನು ಗೆದ್ದನೆಂಬುದನ್ನು ಬಿಹ್ಲಣನು ವಿಕ್ರಮಾಂಕದೇವಚರಿತ್ರದಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ.

(೩) ೩ನೆಯ ಸೋಮೇಶ್ವರನು ಆಂಧ್ರ, ದ್ರಾವಿಡ, ಮಗಧ, ನೇಪಾಳ ದೇಶಗಳ ಅರಸರನ್ನು ಗೆದ್ದನು.

ಈ ಮೂರು ಜನ ಕರ್ನಾಟಕ ಚಕ್ರವರ್ತಿಗಳು ಉತ್ತರ ಹಿಂದುಸ್ಥಾನದಲ್ಲಿ ದಿಗ್ವಿಜಯಕ್ಕೆ ಹೋದಾಗ್ಗೆ ಜೊತೆಯಲ್ಲಿ ಕರೆದುಕೊಂಡು ಹೋದ ಕರ್ನಾಟಕದ ಮಾಂಡಲಿಕರಾಜರನ್ನು ಆ ಉತ್ತರ ಹಿಂದುಸ್ಥಾನದಲ್ಲಿ ಗೆದ್ದ ದೇಶಗಳನ್ನು ಆಳುವುದಕ್ಕೋಸ್ಕರ ಅಲ್ಲಿಯೇ ನೆಲೆಯಾಗಿ ನಿಲ್ಲಿಸಿದರು. ಅರ್ಥಾತ್ ನಾನ್ಯದೇವ, ವಿಜಯಸೇನ, ಚಂದ್ರದೇವ ಪ್ರಭೃತಿಗಳು ಈ ಕನ್ನಡ ಮಾಂಡಲಿಕ ಅರಸುಮನೆತನಗಳ ವಂಶಜರೇ ಆಗಿದ್ದಾರೆಂಬುದನ್ನು ಬೇರೆ ಹೇಳಬೇಕಾದುದಿಲ್ಲ.

---

# ಐತಿಹಾಸಿಕ ಕಾಗದಪತ್ರಗಳು.



( ಸಂಗ್ರಾಹಕರು:- ಶ್ರೀ. ಭಾವೆಪ್ಪಾ ಮೂಗಿ, ವರ್ತಕ ಬೈಲಹೊಂಗಲ )

ಶ್ರೀ

ಸವಾಯಿ ಸರಜಾ ವೀರಪ್ಪಗೌಡಾ ದೇಸಾಯಿ ಇವರಿಗೆ— ರಘುನಾಥರಾವ ಯಾದವ ಚಿತ್ರಗುಪ್ತ ಇವನು ತಮಗೆ ಆಶ್ರಯ ದೊರೆಯಬೇಕೆಂದು ಒಂದು ದೊಡ್ಡ ಪತ್ರವನ್ನು ಮರಾಠಿಯಲ್ಲಿ ಬರೆದಿರುವನು; ಇದರಲ್ಲಿ ಲಿಂಗಪ್ಪ ದೇಸಾಯಿ ನೌಲಗುಂದ ಮತ್ತು ದೌಲತ್ತರಾವ ಘೋರಪಡೆ ಇವರ ಹೆಸರು ಬಂದಿರುತ್ತವೆ. ಹಾಗೂ

ಶ್ರೀ ಶಿವಾಜಿಮಹಾರಾಜರ ಜೀಜಾಬಾಯಿಯ ಹೆಸರುಗಳೂ ಬಂದಿವೆ. ಇಷ್ಟೇ ಅಲ್ಲ ನಮಗೆ ಜೀಜಾಬಾಯಿ ಸಹಿತ ಆಶ್ರಯ ಕೊಡಬೇಕು. ಪಲ್ಲಕ್ಕಿ ಕಳಿಸಬೇಕು. ಎಂದು ವಿನಂತಿಯಿದೆ.

## ಕಿತ್ತೂರ

ನರಸೋಜಿ ಗಾವಡೆ ಈತನು ಸೋನಾರಿ ಭೈರವದಿಂದ ಮುತ್ತಿಗಿಗೆ ಬಂದು ಬೆಳಗಾಂವಿಯ ಅಸದಖಾನನಿಂದ ಪಂಚಮಹಾಲದೇಸಗತಿ ದೊರಕಿಸಿದನು. (ಶಕೆ ೧೪೩೩) ಇದೇ ವಂಶದ ಜ್ಯಾಲಿಬಾಯಿಯು ಕಿತ್ತೂರ ಹಿರೇಮಲ್ಲಶೆಟ್ಟಿಗೆ ಇನಾಮಪತ್ರ ಬರೆದು ಕೊಟ್ಟಳು.

ಆರು ಊರುಗಳನ್ನು ಕೊಟ್ಟಳು; ಅವು ಯಾವವೆಂದರೆ:—

ಅಂಬಡಗಟ್ಟಿ ಕರಿಯಾತಿ ಪೈಕಿ-

ಹುಣಶಿಕಟ್ಟಿ<br>ಕುರಗುಂದ<br>ತುರಮರಿ<br>ಪರನಕೊಪ್ಪ<br>ಹೂಲಿಕಟ್ಟಿ<br>ಹೊಸೂರ } ಬಾಜೂಕ್ಕೆ ಬರೆದ ಈ ಆರು ಊರುಗಳನ್ನು ಇನಾಮಪತ್ರ ಬರೆದುಕೊಟ್ಟಳು.

ಮಹಮ್ಮದ ಇಬ್ರಾಹಿಮ ಜಗದ್ಗುರು<br>ಸಂಪಗಾಂವ ಸರಕಾರ } ಸನ್ನ- ಫಸಲಿ ೯೩೫<br>,, ೧೫೪೫ ಇಸವಿ<br>ಶರಾ

ದೇಸಾಯರು ಆಳಿದ ವರ್ಷಗಳು

| | | | |
|---|---|---|---|
| ೧ | ಹಿರೇಮಲ್ಲಶೆಟ್ಟಿ | ೬ | |
| ೨ | ಹಿರೇನಾಗನಗೌಡಾ<br>ಸರದೇಶಪಟ್ಟಣಶೆಟ್ಟಿ<br>ಸುವರ್ಣಹಸ್ತ<br>ಶಕೆ ೧೫೨೩ | ೪೩ | ಮಾಮಲೇದಾರ ಖವಾಸಖಾನ ಸಂಪಗಾಂವ ವೇಳಿಗೆ- ಸರದೇಶಗತಿ ಸಂಪಾದಿಸಿದನು. |
| ೩ | ಚಿಕ್ಕನಾಗಣಗೌಡಾ<br>ಮೇಲಿನವನ ತಮ್ಮನು | ೨೨ | |

| | | | |
|---|---|---|---|
| ೪ | ಚನ್ನಪ್ಪ ಬಿಚ್ಚಗತ್ತಿ | ೪ | |
| ೫ | ಅಲ್ಲಪಗೌಡಾ ಸರದೇಸಾಯಿ | ೩೧ | ಶಕೆ ೧೫೮೩ ಮೊದಲು ೧೦ ವರ್ಷ ಆಳಿದನು ಅನಂತರ ವಿಜ್ಯಾಪೂರಕ್ಕೆ ೬ ವರ್ಷ ಹೋದನು ಅಲ್ಲಿಂದ ಸವಾಯಿ ಸಿಕ್ಕಾ ತೆಗೆದುಕೊಂಡು ಬಂದು, ಮತ್ತೆ ೧೫ ವರ್ಷ ರಾಜ್ಯವಾಳಿದನು. ಇವನೇ ಕಿತ್ತೂರ ಕಿಲ್ಲೆಯನ್ನು ಕಟ್ಟಿಸಿದನು. ಅಂತು ಆಳಿಕೆಯ ವರ್ಷಗಳು ೩೧ |
| ೬ | ಮುದಿಮಲ್ಲಪ್ಪ ಸರದೇಸಾಯಿ (ಗೌಡ ಶಬ್ದವು ಹೋಯಿತು.) ಶಕೆ ೧೬೧೩ ಆಳಿದ್ದು ವರ್ಷ ೫ | | ೫ ವರ್ಷ ಆಳಿದನು ವಿಜಾಪೂರವನ್ನು ದಿಲ್ಲಿ ಅಲಮುಗೀರಬಾದಶಹನು ತಗೆದುಕೊಂಡನು. ಕಿತ್ತೂರ ವಹಿವಾಟು ಸವಣೂರ ಕಡಿಗೆ ಬಂದಿತು ಶಕೆ ೧೬೦೮–೧೬೦೯ರಲ್ಲಿ ಬಂದದ್ದು. |
| ೭ | ಚಿಕ್ಕಮಲ್ಲಪ್ಪ ದೇಸಾಯಿ ಇವನು ಜುಲುಮೆಯಿಂದ ಶಿಕ್ಕಾ ತಗೆದುಕೊಂಡನು. | ೨೧ | ಶರಾ |
| ೮ | ಶಿವನಗೌಡಾ ಸರದೇಸಾಯಿ ಶಕೆ ೧೬೩೯ ರಿಂದ. | ೧೭ | ಔರಂಗಜೇಬನಿಂದ ಅನೇಕ ಸನದುಪಡೆದನು. |
| ೯ | ಮಲವ ರುದ್ರಗೌಡಾ ಶಕೆ ೧೬೫೬ ಕಾರ್ತಿಕ ಶು॥ ೧ | ೧೫ | |
| ೧೦ | ವೀರಪ್ಪಗೌಡಾ ಸರದೇಸಾಯಿ ಶಕೆ ೧೬೭೧ | ೩೩ | |
| ೧೧ | ಮಲ್ಲಪ್ಪಸರ್ಜಾ ಪ್ರತಾಪರಾವ ಸರದೇಸಾಯಿ ಶಮಶರ ಜಂಗಬಹದ್ದೂರ ೧೭೦೪ | ೩೪ | ಶ್ರೀಮಂತ ಸವಾಯಿ ಮಾಧವರಾವ ಇವರ ಕಾಲಕೀರ್ದಿಯಲ್ಲಿ ಕಾಟಗಾಯಿ ಮಾಡಿದನು. |
| ೧೨ | ಶಿವಲಿಂಗ ರುದ್ರಸರ್ಜಾ ದೇಸಾಯಿ | ೮ | ಇವನಿಗೂ ಇಂಗ್ಲೀಷರಿಗೂ ಒಪ್ಪಂದವಾಯಿತು. |
| ೧೨ | ಜನರು– | ೨೩೯ | ವರ್ಷಗಳ ವರೆಗೆ ಆಳಿದರು. |

ಶಕೆ ೧೭೪೬ ಸುಭಾನು ಸಂವತ್ಸರದ ಭಾದ್ರುಪದ ವದ್ಯ ೪ ಶನಿವಾರ ದಿವಸ ಶಿವಲಿಂಗ ರುದ್ರುಸರ್ಜಾನು ಮೃತವಾದನು. ಆಗ ಸಾವಾಯಿ ಮಲ್ಲಸರ್ಜನಿಗೆ ಪಟ್ಟವಾಯಿತು. ಈಗ್ಗೆ ಕಾಟಗಾಯು ಸುರುವು ಆಯಿತು ಅದೇ ಕಾರ್ತಿಕ ಶು॥ ೧ ಶನಿವಾರ ದಿವಸ ಥ್ಯಾಕರೆಸಾಹೇಬರನ್ನು ಹೊಡೆದರು. ಬಳಿಕ ಚ್ಯಾಪೇಲ್‌ಸಾಹೇಬರು ಬಂದು ಕಿತ್ತೂರ ಕಬಜಾ ತಕ್ಕೊಂಡರು. ಮಾರ್ಗಶೀರ್ಷ ಶು॥ ೧೩ ಶನಿವಾರ

---

# ಇತಿಹಾಸ ಪ್ರಪಂಚ

**ವೀರಶೈವರ ಗ್ರಂಥಸಂಶೋಧನ ಕಾರ್ಯ:–** ಶಿವಾನುಭವದ ದಿಶೆಂಬರದ ಸಂಚಿಕೆಯಲ್ಲಿ ವೀರಶೈವರ ಗ್ರಂಥಪ್ರಕಟನೆಯ ಕಾರ್ಯಗಳ ವಿಷಯವಾಗಿ ಕೆಲ ಸಂಗತಿಗಳು ಕೊಡಲ್ಪಟ್ಟಿದ್ದು, ಅವು ಕರ್ನಾಟಕದ ಇತಿಹಾಸ ದೃಷ್ಟಿಯಿಂದಲೂ ಉಪಯುಕ್ತವಾಗಿರುವದರಿಂದ ಅವನ್ನು ಸಂಕ್ಷೇಪವಾಗಿ ಇಲ್ಲಿ ಕೊಟ್ಟಿರುವೆವು.

ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಘದವರು ವಾಙ್ಮಯಶಾಖೆಯೊಂದನ್ನು ತಮ್ಮಲ್ಲಿ ಪ್ರಾರಂಭಿಸಿರುವರು. ಅವರು ಈಗ ಚನ್ನಬಸವಪುರಾಣದ ಶುದ್ಧ ಪ್ರತಿಯನ್ನು ಅಚ್ಚು ಹಾಕುವ ಕಾರ್ಯವನ್ನು ಕೈಕೊಂಡಿರುವರು. ಅಲ್ಲದೆ ಕೈಬರಹದ ಗ್ರಂಥಗಳ ಪಟ್ಟಿಯನ್ನು ಸಿದ್ಧಪಡಿಸುತ್ತಿರುವರು. ಹಾವೇರಿಯ ಸದ್ಧರ್ಮದೀಪಿಕೆ ಎಂಬ ಪತ್ರಿಕೆಯ ದ್ವಾರಾ ಸದ್ಧರ್ಮ ಗ್ರಂಥಮಾಲೆಯ ಗ್ರಂಥಗಳು ಕೆಲವು ಹೊರಪಟ್ಟಿರುತ್ತವೆ. ಇವುಗಳಲ್ಲಿ ತೋಂಟದ ಸಿದ್ಧಲಿಂಗಸ್ವಾಮಿಗಳವರ ವಚನವು ಮಹತ್ವದ್ದದೆ. ಅಲ್ಲದೆ, ಕೆಲವು ರಗಳೆಗಳೂ ಸ್ತೋತ್ರಗ್ರಂಥಗಳೂ ಹೊರಪಟ್ಟಿವೆ. ಶ್ರೀ ಜಗದ್ಗುರು ಮೂರುಸಾವಿರ ಮಠದ ಗ್ರಂಥಮಾಲೆಯ ಮುಖಾಂತರವಾಗಿಯೂ ಕೆಲವು ಮಹತ್ವದ ಗ್ರಂಥಗಳು ಪ್ರಸಿದ್ಧವಾಗಹತ್ತಿವೆ ಈ ಸಂಸ್ಥೆಯವರು ಸಿದ್ಧೇಶ್ವರವಚನ, ಮತ್ತು ಸ್ವತಂತ್ರ ಸಿದ್ಧಲಿಂಗೇಶ್ವರ ವಚನ ಎಂಬ ಗ್ರಂಥಗಳನ್ನು ಮುದ್ರಣಕ್ಕೆ ಕೊಟ್ಟರುವರು. ಅಲ್ಲದೆ ಪುರಾತನ ಗ್ರಂಥಗಳನ್ನು ಸಂಶೋಧಿಸಿ ಅವುಗಳ ಪಟ್ಟಿಯನ್ನೂ ಮಾಡುತ್ತಲಿರುವರು. ಶ್ರೀ ಸ್ವಾಮಿ ಸಾವಂತವಾಡಿಕರ ಇವರು ಮರಾಠಿಯಲ್ಲಿ ಶಿವಾನುಭವ ಗ್ರಂಥಮಾಲೆಯನ್ನಿಯ ಕೆಲ ಗ್ರಂಥಗಳನ್ನು ಭಾಷಾಂತರಿಸಿ ಪ್ರಕಟಿಸಿರುವರು. ಇವರು ಈಗ ವರದಾನಿ ಗುಡ್ಡಮ್ಮೆಯ ಚರಿತ್ರ ಮತ್ತು ಲಿಂಗಪೂಜೆಯ ತತ್ವಗಳು ಎಂಬ ಗ್ರಂಥಗಳನ್ನು ಭಾಷಾಂತರಿಸಿ ಮರಾಠಿಯಲ್ಲಿ ಪ್ರಸಿದ್ಧಿಸಿರುವರು. ಶ್ರೀಶಿವಯೋಗಮಂದಿರದ ಪರವಾಗಿಯೂ ಕೆಲ ಗ್ರಂಥಗಳು ಪ್ರಕಟವಾಗಿರುತ್ತವೆ. ಬಸವಭಾಷ್ಯ, ನೀತಿಸಂಗ್ರಹ, ಶಿವಪೂಜಾವಿಧಿ ಇವು ಈ ಮಾಲಿಕೆಯಲ್ಲಿ ಮಹತ್ವದವಾಗಿವೆ.

ಶಿವಾನುಭವ [ದಿಶೆಂಬರ ೧೯೩೨]

ಮಹಾರಾಷ್ಟ್ರದಲ್ಲಿಯ ಕೆಳಗೆ ಬರೆದ ಸ್ಥಳಗಳಲ್ಲಿ ಗುಡಿಗಳಿಗೆ ಸಂಬಂಧಪಟ್ಟ ಶಿಲಾಲಿಪಿಗಳು ಸಿಕ್ಕಿರುತ್ತವೆ. ಈ ಗುಡಿಗಳಲ್ಲಿ ರಾಷ್ಟ್ರಕೂಟದವರು ಕೊರಿಸಿದ ವೇರೂಳದಲ್ಲಿಯ ಗವಿಗುಡಿಗಳೇ ಎಲ್ಲಕ್ಕೂ ಹಳೆಯವು. ಆಗ ಅವರ ಕೈಕೆಳಗೆ ಉತ್ತರದಲ್ಲಿ ಯಾದವರು ಮಾಂಡಲಿಕ ಅರಸರಾಗಿದ್ದರು. ವಸ್ತುತಃ ರಾಷ್ಟ್ರಕೂಟವವರಿಗಿಂತಲೂ ಈ ಯಾದವರು ಕಟ್ಟಿಸಿದ ಗುಡಿಗಳೇ ಮಹಾರಾಷ್ಟ್ರದಲ್ಲಿ ಬಹಳ. ಅಂಬರನಾಥದ ಗುಡಿಯು ಪಶ್ಚಿಮ ಚಾಲುಕ್ಯರ ಮಾಂಡಲಿಕರಾದ ಶಿಲಾಹಾರರ ಕಾಲದಲ್ಲಿ ಕಟ್ಟಲ್ಪಟ್ಟಿದ್ದು, ಅಂಬರನಾಥರ ಗುಡಿಯು ೧೦೬೦ನೆಯ ಇಸ್ವಿಯಲ್ಲಿ ಮಹಾಮಂಡಲೇಶ್ವರನಾದ ಮುಮ್ಮುಸಿಯೆಂಬ ಶಿಲಾಹಾರ ಅರಸನಿಂದ ಕಟ್ಟಲ್ಪಟ್ಟಿತೆಂದು ಅಲ್ಲಿಯ ಶಿಲಾಲಿಪಿಯಿಂದ ಗೊತ್ತಾಗುತ್ತದೆ. ಈ ಕಾಲಕ್ಕೆ ಯಾದವರೂ ಚಾಲುಕ್ಯರ ಮಾಂಡಲಿಕರೇ ಆಗಿದ್ದರು. ಯಾದವರ ಕೈಕೆಳಗಿನ ಚಿಕ್ಕ ಮಾಂಡಲಿಕ ಅರಸರಾದ ನಿಕುಂಭ ಮನೆತನದವರೂ ಕೆಲವು ಗುಡಿಗಳನ್ನು ಕಟ್ಟಿಸಿದ್ದಾರೆ. ಪಾಟ್ಣಾದಲ್ಲಿ ಈ ಮನೆತನದ ಗೋವನನೆಂಬವನು ೧೧೫೩ ರಲ್ಲಿ ಮಹೇಶ್ವರ ದೇವಾಲಯವನ್ನು ಕಟ್ಟಿಸಿದನು. ಆತನ ವಂಶಜರಾದ ಸೋವಿ

ದೇವ ಮತ್ತು ಹೇಮಾಡಿದೇವ ಎಂಬವರು ಈ ಮಹೇಶ್ವರದೇವಾಲಯಕ್ಕೆ ಕೆಲವು ದಾನಗಳನ್ನು ಕೊಟ್ಟರೆಂದು ಆ ಗುಡಿಯಲ್ಲಿಯ ಒಂದು ಶಿಲಾಲಿಪಿಯು ಹೇಳುತ್ತದೆ. ಅಂಜನೇರಿಯಲ್ಲಿ ೧೧೪೩ ನೆಯ ಇಸ್ವಿಯದೊಂದು ಶಿಲಾಲಿಪಿಯಿರುತ್ತದೆ. ವಾಘಲದಲ್ಲಿರುವ ಮಾನಭಾವರ ಗುಡಿಯಲ್ಲಿ ಉದ್ದವಾದದ್ದೊಂದು ಶಿಲಾಲಿಪಿಯಿರುತ್ತದೆ. ಅದರಲ್ಲಿ ಆ ಗುಡಿಯನ್ನು ಗೋವಿಂದ ಅಥವಾ ಗೋವಿಂದರಾಜನೆಂಬವನು ಕಟ್ಟಿಸಿದನೆಂದೂ ೧೦೬೯ ನೆಯ ಇಸ್ವಿಯಲ್ಲಿ ಆ ಗುಡಿಗೆ ಇಮ್ಮಡಿ ಸೇವುಣಚಂದ್ರನು ಕೆಲವು ದಾನಗಳನ್ನು ಕೊಟ್ಟನೆಂದೂ ಉಲ್ಲೇಖವಿದೆ. ಅಲ್ಲದೆ ೪೦೦ ವರ್ಷಗಳ ವರೆಗೆ ಆಳಿದ ಒಂದು ಚಿಕ್ಕ ಮಾಂಡಲಿಕ ಮನೆತನದ ವಂಶಾವಳಿಯೂ ಅದರಲ್ಲಿ ಇರುತ್ತದೆ.

ಮುಂಬಯಿ ಹತ್ತರಿರುವ ಠಾಣೆ ಜಿಲ್ಹೆಯಲ್ಲಿಯ ಬೋರಿವಲಿ ಸ್ಟೇಶನದ ಸಮೀಪದ ಒಂದು ಹೊಲದಲ್ಲಿ ಕನ್ನಡ ದೇಶವಲ್ಲಿರುವಂಥ ಕೆಲವು ವೀರಗಲ್ಲುಗಳಿರುತ್ತವೆ. ಅವು ಬಹುಶಃ ಶಿಲಾಹಾರರಿಂದ ನೆಡಲ್ಪಟ್ಟವುಗಳು. ಭೂಮಿಯ ಮೇಲೂ ಸಮುದ್ರದ ಮೇಲೂ ನಡೆದ ಯಾವುದೊ ಒಂದು ಯುದ್ಧದ ನೋಟವು ಆ ವೀರಗಲ್ಲುಗಳಲ್ಲಿ ಕಂಡುಬರುತ್ತದೆ. ಕೆಲವು ವೀರಗಲ್ಲುಗಳಲ್ಲಿ ಭೂಮಿಯ ಮೇಲೆ ಆದ ಯುದ್ಧದ ಚಿತ್ರವಿರುತ್ತದೆ. ಕೆಲವುಗಳಲ್ಲಿ ಸಮುದ್ರದಲ್ಲಾದ ಯುದ್ಧದ ಚಿತ್ರವಿರುತ್ತದೆ.

ಖಾನದೇಶ ಜಿಲ್ಹೆಯಲ್ಲಿಯ ಬಲ್ಸಾನೆಯಂಬಲ್ಲಿ ಪಂಡಿತ ಶ್ರೀ ಮಹಾಲೂಕನೆಂಬವನು ೧೨೪೪ ನೆಯ ಇಸ್ವಿಯಲ್ಲಿ ಕಟ್ಟಿಸಿದ ಒಂದು ಗುಡಿ ಇದ್ದು, ಅದರಲ್ಲಿ ಒಂದು ಶಿಲಾಲಿಪಿಯಿರುವದು. ಅಲ್ಲದೆ, ಅಲ್ಲಿಯೇ ಮತ್ತೊಂದು ಚಿಕ್ಕ ಗುಡಿಯ ಹತ್ತರ ಕೆಲವು ಮಹಾಸತಿ ಕಲ್ಲುಗಳೂ ವೀರಗಲ್ಲುಗಳೂ ಇರುತ್ತವೆ. ಇವು ಚಚ್ಚೌಕು ಕಲ್ಲುಗಳು. ನಾಲ್ಕೂ ಮಗ್ಗಲುಗಳಿಗೆ ವೀರರ ಚಿತ್ರಗಳಿವೆ.

ಖಾನದೇಶದ ಜಿಲ್ಹೆಯ ಪಾಟ್ಣಾದಲ್ಲಿ ಗೋವನನೆಂಬವನು ಕಟ್ಟಿಸಿದ ಗುಡಿಯು ಇರುತ್ತದೆಂದು ಹಿಂದೆ ಹೇಳಿದೆಯಷ್ಟೇ ? ಅದರಲ್ಲಿ ಹಳೆಯ ದೇವನಾಗರಿ ಅಕ್ಷರದಲ್ಲಿ ಒಂದು ಶಿಲಾಲಿಪಿಯುಂಟು. ಅದರಲ್ಲಿ ಚಾಂಗದೇವನೆಂಬವನು ಗೋವನನ ಮಂತ್ರಿಯಾಗಿದ್ದನೆಂದು ಹೇಳಿದೆ. ಅಲ್ಲಿಯೇ ಇರುವ ಐಭವನಾ ಎಂಬ ಚಿಕ್ಕದೊಂದು ಗುಡಿಯಲ್ಲಿ ಒಂದು ಶಿಲಾಲಿಪಿಯಿರುತ್ತದೆ. ಅದರ ಭಾಷೆ ಬಹಳಮಟ್ಟಿಗೆ ಸಂಸ್ಕೃತ; ಕೆಲವು ಭಾಗವು ಯಾವುದೋ ಒಂದು ತರಹದ ಹಳೆಯ ಮರಾಠಿ [?] ಯಲ್ಲಿ ಇರುತ್ತದೆ. ಈ ಶಿಲಾಲಿಪಿಯಲ್ಲಿ ಪ್ರಸಿದ್ಧ ಜ್ಯೋತಿಷಿಶಾಸ್ತ್ರಜ್ಞರಾದ ಭಾಸ್ಕರಾಚಾರ್ಯರ ಮೊಮ್ಮಗನಾದ ಚಾಂಗದೇವನೆಂಬವನು ಸಿದ್ಧಾಂತಶಿರೋಮಣಿಯ ಮತ್ತು ಅಜ್ಜನ ಮಿಕ್ಕ ಗ್ರಂಥಗಳ ಅಭ್ಯಾಸಕ್ಕೋಸ್ಕರ ಒಂದು ವಿದ್ಯಾಲಯವನ್ನು ಸ್ಥಾಪಿಸಿದನೆಂದು ಹೇಳಿದೆ. ಈ ವಿದ್ಯಾಲಯಕ್ಕೆ ೧೨೦೭ ನೆಯ ಇಸ್ವಿಯಲ್ಲಿ ಸೋವಿದೇವನೆಂಬವನು ಕೆಲವು ಉಂಬಳಿಗಳನ್ನು ಹಾಕಿಕೊಟ್ಟನು.

ಖಾನದೇಶ ಜಿಲ್ಹೆಯಲ್ಲಿರುವ ವಾಘಲಿಯಲ್ಲಿರುವ ಶಿಲಾಲಿಪಿಯು ೧೦೬೯ನೆಯ ಇಸ್ವಿಯದು.

ಖಾನದೇಶ ಜಿಲ್ಹೆಯಲ್ಲಿ ಚಾಂಗದೇವ ಎಂಬ ಊರಲ್ಲಿ ಚಾಂಗದೇವನ ಗುಡಿ ಇರುತ್ತದೆ. ಆದರಲ್ಲಿ ಕೆಲವು ಶಿಲಾಲಿಪಿಗಳಿವೆ. ಆದರೆ ಅವು ಬಹಳ ಮಾಸಿರುತ್ತವೆ. ಈ ಗುಡಿಯಲ್ಲಿ ಚಾಂಗದೇವನ ಮೂರ್ತಿಯೂ ಇರುತ್ತದೆ.

ಖಾನದೇಶ ಜಿಲ್ಹೆಯಲ್ಲಿರುವ ಎರಂಡೋಳದಲ್ಲಿ ಜುಮ್ಮಾ ಮಸೀದಿಯಲ್ಲಿ ೧೦೯೦ ನೆಯ ಇಸ್ವಿಯ ಒಂದು ಶಿಲಾಲಿಪಿಯುಂಟು. ಶೇನದುರ್ನಿ ಎಂಬಲ್ಲಿಯೂ ಒಂದು ಲಿಪಿಯಿರುತ್ತದೆ. ಆದರೆ ಅದು ಮಾಸಿದೆ.

ನಾಸಿಕ ಜಿಲ್ಹೆಯಲ್ಲಿ ಸಿನ್ನರದಲ್ಲಿರುವ ಗೊಂಡೇಶ್ವರ ದೇವಾಲಯವು ಮಹಾರಾಷ್ಟ್ರದಲ್ಲಿ ಎಲ್ಲಕ್ಕೂ ದೊಡ್ಡದು. ಇದು ಚಾಲುಕ್ಯ ಕಟ್ಟಡದ ಗುಡಿಯು. ಈ ಸಿನ್ನರ ಅಥವಾ ಸೇವುಣ ಪುರವನ್ನು ಕಟ್ಟಿಸಿದವನು ಮೊದಲನೆಯ ಸೇವುಣಚಂದ್ರನು. ಆತನ ಮಗನಾದ ಥಡಿಯಪ್ಪ ನೆಂಬವನು ಈ ಪಟ್ಟಣದಲ್ಲಿ ಹುಟ್ಟಿದನು. ಇದರಲ್ಲಿ ಸಿಲಾಲಿಪಿ ಸಿಕ್ಕಿಲ್ಲ.

ನಾಸಿಕಜಿಲ್ಹೆಯ ಅಂಜನೇರಿಯಲ್ಲಿಯ ಗುಡಿಯಲ್ಲಿ ೧೧೪೨ ನೆಯ ಇಸ್ವಿಯದೊಂದುಶಿಲಾ ಲಿಪಿಯಿದೆ ಅದು ೩ನೆಯ ಸೇವುಣಚಂದ್ರನದು.

ನಾಶಿಕ ಜಿಲ್ಹೆಯ ತ್ರಿಂಗಲವಾಡಿಯಲ್ಲಿ ಗವಿಯಲ್ಲಿ ಒಂದು ಸುಂದರವಾದ ಶಿಲಾಲಿಪಿಯಿ ರುತ್ತದೆ. ಆದರೆ ಅದು ಅರ್ಧ ಒಡೆದುಹೋಗಿದೆ. ಅದೇ ಊರಲ್ಲಿ ಒಂದು ಜೈನಮೂರ್ತಿ ಇದ್ದು ಅದರ ಎರಡೂ ಮಗ್ಗಲಿಗೆ ಲಿಪಿಗಳಿವೆ.

ಅಹಮ್ಮದನಗರ ಜಿಲ್ಹೆಯಲ್ಲಿಯಲ್ಲಿಯ ಅಕೋಲಾ ಎಂಬಲ್ಲಿ ಒಂದು ಗುಡಿಯ ಕಂಬದ ಮೇಲೆ ಒಂದು ಸಂಸ್ಕೃತ ಶಿಲಾಲಿಪಿಯಿದೆ. (Indian Anhguag V. 8.) ಆದರೆ ಅದು ಬಹಳ ಮಾಸಿದೆ.

ಅಹಮ್ಮದನಗರ ತಹಕಾರಿಯೆಂಬಲ್ಲಿ ೧೧೨೪ನೆಯ ಇಸ್ವಿಯ ಒಂದು ಸಂಸ್ಕೃತ ಶಿಲಾಲಿಪಿ ಇರುತ್ತದೆ.

ಅಹಮ್ಮದನಗರ ಜಿಲ್ಹೆಯಲ್ಲಿರುವ ಶ್ರೀಗುಂಡ ಎಂಬಲ್ಲಿ ಕೆಲವು ಚಿತ್ರಗಳುಳ್ಳ ಚೌಕಟ್ಟು ಮುಂತಾದವುಗಳಿವೆ. ಅವು ಪುಣೆಯಲ್ಲಿರುವ ಮರಾಠಾ ಅರಮನೆಗಳ ಚೌಕಟ್ಟುಗಳನ್ನು ಮತ್ತು ೧೮೫೮ ನೇ ಇಸ್ವಿಯ ದಂಗೆಯಲ್ಲಿ ಕಿತ್ತೂರ ದೇಸಾಯಿಯ ಅರಮನೆಯು ಕೆಡವಲ್ಪಟ್ಟಾಗ ಅಲ್ಲಿ ರುವ ಒಂದು ಸುಂದರವಾದ ಬಾಗಿಲ ಚೌಕಟ್ಟು ಹುಬ್ಬಳ್ಳಿಯ ಕಚೇರಿಯಲ್ಲಿ ಇಡಲ್ಪಟ್ಟಿದ್ದು ಶ್ರೀ ಗುಂಡದಲ್ಲಿರುವ ಚೌಕಟ್ಟು ಅದನ್ನು ಹೋಲುತ್ತದೆ.

ಸಾತಾರ ಜಿಲ್ಹೆಯ ಖಟಾವದಲ್ಲಿ ಒಂದು ವೀರಗಲ್ಲು ಇರುತ್ತದೆ.

ಸೊಲ್ಲಾಪುರ ಜಿಲ್ಹೆಯ ಪಂಢರಪುರದಲ್ಲಿ ಒಂದು ಕನ್ನಡ ಮತ್ತು ಸಂಸ್ಕೃತ ಶಿಲಾಲಿಪಿ ಇದ್ದು ಅದರಲ್ಲಿ ಹೊಯ್ಸಳ ಅರಸನಾದ ವೀರಸೋಮೇಶ್ವರನು ೧೨೩೭ ನೆಯ ಇಸ್ವಿಯಲ್ಲಿ ವಿಠ್ಠಲದೇವರಿಗೆ ಸುವರ್ಣದಾನ ಮಾಡಿದ ಉಲ್ಲೇಖವಿದೆ. ವಿಠ್ಠಲವೆಂಬುದು ವಿಠೋಬ ಎಂಬ ದರ ಪೂರ್ವರೂಪವು. ಆ ಊರಲ್ಲಿ ಮತ್ತೊಂದು ಶಿಲಾಲಿಪಿಯಿದ್ದು ಅದು ಸಂಸ್ಕೃತ ಶ್ಲೋಕ ದಲ್ಲಿ ಅದೆ. ಆದರಲ್ಲಿ ಕೇಶವ ಮಾಂಡಲಿಕನೆಂಬವನು ೧೨೭೦ ನೆಯ ಇಸ್ವಿಯಲ್ಲಿ ವಿಠ್ಠಲದೇವರ ಗುಡಿಯಲ್ಲಿ ಯಜ್ಞಮಾಡಿದ ಉಲ್ಲೇಖವಿದೆ.

ವರ್ಹಾಡದಲ್ಲಿರುವ ಸಿರಪುರದಲ್ಲಿ ಒಂದು ಸಣ್ಣ ಶಿಲಾಲಿಪಿಯಿದೆ. ಮತ್ತು ಈ ಊರ ಹತ್ತ ರವೇ ಒಂದು ಜ್ವಾಲಾಮುಖಿಯ ಕೊಳ್ಳವಿದ್ದು, ಅಲ್ಲಿಯ ಒಂದು ಗುಡಿಯಲ್ಲಿ ಒಂದು ಬಾಗಿಲ ದ ಮೇಲೆ 'ವಾಸುಗಿ' ಎಂಬ ಹೆಸರು ಕೊರೆಯಲ್ಪಟ್ಟಿದೆ.

Mediaeval Temples of the Dakhen
by Henry Cousons M. R. A. S.

**ಹಿಂದೂ ಶಿಲ್ಪಶಾಸ್ತ್ರ:—** ಫ್ರಾನ್ಸದೇಶದ ಎಲೆ ಫಾರೆ (Elie Faure) ಎಂಬ ಕಲಾ ಭಿಜ್ಞರು ಮೊನ್ನೆ ಮೊನ್ನೆ ಈ ದೇಶಕ್ಕೆ ಬಂದು ಹೋದರು. ಅವರು ಇಲ್ಲಿಯ ಶಿಲ್ಪಶಾಸ್ತ್ರದ ವಿಷಯವಾಗಿ ಬಹಳ ಗೌರವದ ಉದ್ಗಾರಗಳನ್ನು ತೆಗೆದಿರುವರು. ಅವರು 'ಕಲೆ'ಯ ಮೇಲೆ ೫ ಸಂಪುಟಗಳದೊಂದು ಉತ್ಕೃಷ್ಟ ಗ್ರಂಥವನ್ನು ಬರೆದಿದ್ದು ಆದರಲ್ಲಿ ಒಂದು ಭಾಗದಲ್ಲಿ ಹಿಂದೂ

ಕಲೆಯನ್ನು ಕುರಿತು ವಿವೇಚಿಸಿರುವರು. ಹಿಂದೂ ಶಿಲ್ಪಶಾಸ್ತ್ರವೆಂದರೆ ಗಾಂಧಾರ, ಗುಪ್ತ, ಚಾಲುಕ್ಯ ಮತ್ತು ಯಾವತ್ತೂ ತರಹದ ಬ್ರಾಹ್ಮಣ ತಲೆಯ ಕಲೆಗಳು ಬುದ್ಧರ ಅನೇಕ ತರಹದ ಕಲೆಗಳು, ಜೈನರ ಕಲೆಗಳು, ಈ ಹಿಂದೂ ಶಿಲ್ಪಕಲೆಯು ಮುಂದೆ ಚೀಣ, ಮಲಾಯಾ, ಆರ್ಚಿಪೆಲಾಗೋ, ತಿಬೇಟ, ಕೋರಿಯಾ, ಜಪಾನಗಳಲ್ಲಿ ಹಬ್ಬಿತು. ಬ್ರಾಹ್ಮಣೀ ಶಿಲ್ಪಿಗರು ಮಧ್ಯ ಮತ್ತು ದಕ್ಷಿಣ ಹಿಂದುಸ್ಥಾನಗಳಲ್ಲಿ ಈ ಕಲೆಯನ್ನು ಪರಿಣಿತಾವಸ್ಥೆಗೆ ಒಯ್ಯದಿದ್ದರೆ ಕ್ಯಾಂಬೋಡಿಯಾವಲ್ಲಿ ಕಂಡು ಬರುವ ಅರಮನೆಗಳೂ, ದೇವಾಲಯುಗಳೂ, ಜಾವಾದಲ್ಲಿಯು ಸುಂದರ ಕಟ್ಟಡಗಳೂ ಚೀಣ ಮತ್ತು ಜಪಾನದೇಶಗಳಲ್ಲಿಯ ಉತ್ಕೃಷ್ಟವಾದವರಿಗಳೂ ಅಸ್ತಿತ್ವದಲ್ಲಿಯೇ ಬರುತ್ತಿದ್ದಿಲ್ಲ. ಪಾಶ್ಚಿಮಾತ್ಯರ ಚಿತ್ರಕಲೆಯಲ್ಲಿ ಕಂಡು ಬರುವ ಅನೇಕ ಉತ್ಕೃಷ್ಟ ಚಿತ್ರಗಳು ಅದಕ್ಕೂ ಅನೇಕ ವರ್ಷಗಳ ಮುಂಚೆ ಈ ದೇಶದ ಶಿಲ್ಪಕಲೆಯಲ್ಲಿ ಕಂಡುಬರುತ್ತವೆ. ಹಿಂದೂ ಶಿಲ್ಪಕಲೆಯು ಕೇವಲ ಶಿಲ್ಪಕಲೆಯು ಮಾತ್ರವೇ ಅಲ್ಲ. ಅದರಲ್ಲಿ ಚಿತ್ರಕಲೆಯೂ ಬೆರೆತಿರುತ್ತದೆ. ಎಲ್ಲಿ ಬೆಳಕು ಬೀಳಬೇಕೋ ಅಲ್ಲಿ ಬೆಳಕು; ಎಲ್ಲಿ ನೆರಳು ಬೀಳಬೇಕೋ ಅಲ್ಲಿ ನೆರಳುಗಳು ಕುಂಚದಿಂದ ಬರೆಯಲ್ಪಟ್ಟಿವೆಯೋ ಏನೋ ಎಂಬಂತೆ ಮೂರ್ತಿಗಳಲ್ಲಿ ಎದ್ದು ಕಾಣುತ್ತವೆ. ಮತ್ತೊಂದು ವಿಶೇಷವೇನೆಂದರೆ ಈಗ ಎಲ್ಲರಿಗೂ ಪ್ರಿಯವಾಗುತ್ತ ನಡೆದಿರುವ 'ಸಿನೇಮಾ'ದ ಮಾದರಿಗಳೂ ಕೆಲವು ಹಿಂದೂ ಶಿಲ್ಪಶಾಸ್ತ್ರದಲ್ಲಿ ಕೆತ್ತಲ್ಪಟ್ಟಿರುತ್ತವೆಂಬದನ್ನು ಕೇಳಿ ಅನೇಕರಿಗೆ ಆಶ್ಚರ್ಯವಾಗಬಹುದು. ಆದರೆ ಹಿಂದೂ ಶಿಲ್ಪಶಾಸ್ತ್ರವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಅನೇಕ ಕಡೆಗೆ ಅವೊಂದು ಚಲತ್‌ಚಿತ್ರಪಟದ ಮಾದರಿಗಳೇ ಇದ್ದಂತೆ ತೋರದೆ ಇರದು. ಕೆಲವು ಚಿತ್ರಗಳನ್ನು ನೋಡಿದರೆ ಆ ಚಿತ್ರಗಳ ಹಿನ್ನೋಟ ವಾವುದು, ನಿಜವಾದ ಚಿತ್ರವಾವುದು ಎಂಬುದು ತಿಳಿಯದಷ್ಟು ಅವು ಒಂದರೊಳಗೊಂದು ಕೂಡಿರುತ್ತವೆ. ಸಿನೇಮಾದಲ್ಲಿ ಹೇಗೆ ಒಂದರಹಿಂದೊಂದು ನೂರಾರು ಚಿತ್ರಗಳು ಬಂದರೂ ಅವೆಲ್ಲವೂ ಒಂದೇ ಇದ್ದಂತೆ ತೋರುವಂತೆಯೇ ಹಿಂದೂ ಶಿಲ್ಪಿಗರು ನೂರಾರು ತರಹ ಕ್ರಿಯೆಗಳನ್ನು ಒಂದೇ ಚಿತ್ರದಲ್ಲಿ ತೋರಿಸುವರು. ಅದೊಂದು ಅದೊಂದು ಸಿನೇಮಾದಂತೆಯೇ ಭಾಸವಾಗುತ್ತದೆ. ಹಿಂದೂ ಶಿಲ್ಪಶಾಸ್ತ್ರದ ಮತ್ತೊಂದು ವಿಶೇಷವೇನೆಂದರೆ ತತ್ವಜ್ಞಾನಕ್ಕೂ ಶಿಲ್ಪಶಾಸ್ತ್ರಕ್ಕೂ ಇರುವ ನಿಕಟವಾದ ಸಂಬಂಧ; ಈ ಜಗತ್ತಿನ ಬುಡದಲ್ಲಿರುವ ಪರಮಾತ್ಮತತ್ವವು ಸರ್ವವ್ಯಾಪಿಯಾದುದು. ಈ ತತ್ವವು ಹಿಂದೂ ಶಿಲ್ಪಶಾಸ್ತ್ರದಲ್ಲಿ ಚೆನ್ನಾಗಿಯೇ ಒಡಮೂಡಿಸಲ್ಪಟ್ಟಿರುತ್ತದೆ ವಿಜ್ಞಾನಶಾಸ್ತ್ರದ ಈಗಿನ ಶೋಧಗಳಾದ ಮೋಟಾರು, ಸಿನೇಮಾ, ರೇಡಿಯೋ ಬ್ರಾಡ್‌ಕಾಸ್ಟಿಂಗ ಇವೇ ಮುಂತಾದವುಗಳ ರಹಸ್ಯವು ಪ್ರಸಿದ್ಧ ಋಷಿಯಾದ ವ್ಯಾಸರಿಗೆ ನಮಗಿಂತಲೂ ಚೆನ್ನಾಗಿ... 

The Bombay Chronicle

14-3-1933

**ಶ್ರೀ ಶಿವಾಜಿಯ ನಿಜವಾದ ಚಿತ್ರ:—** ಮಾರ್ಚ ತಿಂಗಳಿನಲ್ಲಿ ಪುಣೆಯ ಶ್ರೀ ಛತ್ರಪತಿ ಸಂಭಾಜಿ ಚರಿತ್ರಕಾರ್ಯಾಲಯದವರು ಶ್ರೀ ಶಿವಜಯಂತಿ ಉತ್ಸವವನ್ನು ನೆರವೇರಿಸಿದರು. ಈ ವರ್ಷದ ಅಲ್ಲಿಯ ಮಹತ್ವದ ಸಂಗತಿಯೆಂದರೆ ಮಹಾರಾಷ್ಟ್ರ ರಾಜ್ಯಸಂಸ್ಥಾಪಕನಾದ ಶ್ರೀ ಶಿವಾಜಿಯ ನಿಜವಾದ ಚಿತ್ರವನ್ನು ಅವರು ದೊರಕಿಸಿದ್ದುದು. ವ್ಹಾನ್ ವ್ಯಾಲಿನ್‌ಟನ್ (Von Valentyn) ಎಂಬ ಡಚ್ಚ ಮನುಷ್ಯನು ೧೬೬೪ ರಿಂದ ೧೬೯೦ ರ ವರೆಗೆ ಸುರತದಲ್ಲಿ

ದ್ದಾಗ ಶ್ರೀ ಶಿವಾಜಿಮಹಾರಾಜರ ಒಂದು ಬಣ್ಣದ ಚಿತ್ರವನ್ನು ದೊರಕಿಸಿದ್ದನು. ಅದರ ಮೇಲಿಂದ ಈಗ ಶ್ರೀ ಶಿವಾಜಿಯ ಒಂದು ಚಿತ್ರವು ತಯಾರಿಸಲ್ಪಟ್ಟಿದೆ. ಇಂದಿನ ವರೆಗೆ ದೊರೆತಿರುವ ಯಾವತ್ತು ಶ್ರೀ ಶಿವಾಜಿಯ ಚಿತ್ರಗಳಿಗಿಂತಲೂ ಈ ಚಿತ್ರವು ಹೆಚ್ಚು ನಿಜವಾದುದೂ ಸುಂದರವಾದುದೂ ಇರುತ್ತದೆನ್ನಲು ಅಡ್ಡಿಯಿಲ್ಲ.

Journal of the University of Bombay
[ July 1930 ]

**ಓಂಕಾರದ ವ್ಯಾಪ್ತಿ ಮತ್ತು ಪುರಾತನತತ್ವ:—** ಜಗತ್ತಿಗೆ ಮೂಲಾಧಾರವೆಂದರೆ ಪ್ರಣವವು ಎಂದು ನಮ್ಮ ಧರ್ಮದ ತಿಳವಳಿಕೆ ಈ ಪ್ರಣವದ ಮಹತ್ವವನ್ನು ಹುಡುಕಿ ತೆಗೆದವರು ನಮ್ಮ ಋಷಿಗಳು. ಇದಕ್ಕೆ ಶಬ್ದಬ್ರಹ್ಮವೆನ್ನುತ್ತಾರೆ. ಶಬ್ದಬ್ರಹ್ಮವೆಂದರೇನೇ ವೇದವು. ಇರಲಿ, ಈ ಪ್ರಣವವು ಹಿಂದುಸ್ಥಾನದ ಹೊರಗೂ ಪ್ರಚಾರವಲ್ಲಿದ್ದುದು ಕಂಡು ಬರುತ್ತದೆ. ಸೆಂಟಜಾನನು ಈ ಪ್ರಣವದ ಮಾದರಿಯ ತತ್ವವನ್ನೇ ಉಚ್ಚರಿಸಿದ್ದಾನೆ. ಈ ವಿಷಯವಾಗಿ ಧರ್ಮವೀರ ವಿಷ್ಣು ಕರಂದೀಕರ ಎಂಬವರು ಕೆಲವು ಶೋಧಗಳನ್ನು ಹಚ್ಚಿರುವರು. ಅವು ಹೀಗೆ:– ಎಲ್ಲಕ್ಕೂ ಪ್ರಾಚೀನ ಲೇಖಗಳು ಸುಮೇರು ದೇಶದಲ್ಲಿ ದೊರೆಯುತ್ತವೆ ಅವು ಕ್ರಿಸ್ತ ಶಕದ ಪೂರ್ವದ ೩೫೦೦–೪೦೦೦ ವರ್ಷ ಹಳೆಯವು. ಇಟ್ಟಂಗಿಗಳ ಮೇಲೆ ಈ ಲೇಖಗಳು ಕೊರೆಯಲ್ಪಟ್ಟಿವೆ. ಮಿ॥ ಸ್ಟೀಫನ್‌ಲ್ಯಾಡನ್ ಎಂಬವರು ಅತಿಪರಿಶ್ರಮದಿಂದ ಈ ಲೇಖಗಳನ್ನು ಓದಿರುವರು. ಅವರಿಗೆ ಅವುಗಳಲ್ಲಿ ಪ್ರಣವ ಮಂತ್ರವು ಇದ್ದದ್ದು ಕಂಡು ಬಂದಿದೆ. ಅದನ್ನು ಅವರು ಇಂಗ್ಲೀಷಿನಲ್ಲಿ ಭಾಷಾಂತರಿಸಿರುವರು. ಈಶ್ವರನ ಶಬ್ದದಿಂದಲೇ ಸರ್ವಸೃಷ್ಟಿಯುಂಟಾಯಿತೆಂದು ಅದರಲ್ಲಿ ಹೇಳಿದೆ ಈ ವಿಚಾರವನ್ನು ಸೆಮೆಟಿಕ್ ಅಂದರೆ ಜ್ಯೂ ಜನರು ಸ್ವೀಕರಿಸಿದರೂ ಮತ್ತು ಕೊನೆಗೆ ಅದರ ಪರಿಣತ ಸ್ವರೂಪವೇ ಸೆಂಟ ಜಾನ ಗಾಸ್ಪೆಲದಲ್ಲಿ ಕಂಡುಬರುತ್ತದೆ. ಸಾರಾಂಶಃ– ಪ್ರಣವ ತತ್ವವು ಓಬನಿಸ್ ಅಥವಾ ವೇನ್ಯ ರಾಜನ ಮುಖಾಂತರವಾಗಿ ಸುಮೇರುದೇಶಕ್ಕೆ ಹೋಯಿತು. ಮುಂದೆ ಯಹುದಿ ಜನರು ಅದನ್ನು ಸ್ವೀಕರಿಸಿದರು. ಮತ್ತೂ ಇತ್ತ ಮಿಟನಿ ಅರಸನಾದ ದಶರಥನೆಂಬವನ ಮುಖಾಂತರವಾಗಿ ಆಸಿಯಾಮಾಯನರದೇಶಕ್ಕೆ ಹೋಗಿ ಅಲ್ಲಿಂದ ಅದು ಗ್ರೀಸದೇಶದಲ್ಲಿ ಪ್ರಚಾರವಾಯಿತು. ಇವೆರಡೂ ದಿಕ್ಕುಗಳ ಪ್ರಣವದ ವಿಚಾರವು ಮಿಲಿತವಾಗಿ ಇಜಿಪ್ತ ಮತ್ತು ಪ್ಯಾಲಿಸ್ಟಾಯಿನ್ ದೇಶಧಲ್ಲಿ ಈ ವಿಚಾರವು ಪ್ರಸಾರವಾಯಿತು. ಜೇರೂಸೇಲಮದಲ್ಲಿ ಕ್ರಿ. ಪೂರ್ವದ ೧೨೦೦ ನೆಯ ಸುಮಾರಕ್ಕೆ ಯಶದತ್ತ ಮತ್ತು ಸೂರ್ಯದತ್ತ ಎಂಬ ಆರ್ಯ ಅರಸರು ರಾಜ್ಯಮಾಡುತ್ತಿದ್ದರು. ಅವರೂ ಈ ಓಂಕಾರ ತತ್ವವನ್ನು ಅಲ್ಲಿ ಪ್ರಸಾರಗೊಳಿಸಿದರು.

ನವಾಕಾಳ [ಮರಾಠಿ ದೈನಿಕಪತ್ರ ೮–೩–೩೩]

**ಕಲಬುರ್ಗೆಯ ಜಾತ್ರೆ:—** ಮೊನ್ನೆ ಮಾರ್ಚ ತಿಂಗಳಲ್ಲಿ ಕಲಬುರ್ಗೆಯಲ್ಲಿ ಅಥೀರ ಖಾವಜಾ ಬಂದೇ ನವಾಝೂ ಎಂಬ ಪ್ರಸಿದ್ಧ ಮುಸಲ್ಮಾನ ಸಾಧುಗಳ ಹೆಸರಿನ ಜಾತ್ರೆಯಾಯಿತು. ಈ ಸಾಧುಗಳ ಶಿಷ್ಯರು ಹಿಂದುಸ್ಥಾನದ ತುಂಬಾ ಇರುವರು. ಅವರ ಇತಿಹಾಸವು ಮನೋರಂಜಕವಾಗಿದೆ. ಅದು ಹೀಗೆ:– ಬಂದೇ ನವಾಝು ಅಥವಾ ಗೇಸು ದರಾಝು ಎಂಬೀ ಮುಸಲ್ಮಾನ ಸಾಧುಗಳು ಫಿರೋಜಶಹಾನ ಕಾಲದಲ್ಲಿ ೧೪೧೩ ನೆಯ ಇಸ್ವಿಯ ಸುಮಾರಕ್ಕೆ ದಿಲ್ಲಿಯಿಂದ ಕಲಬುರ್ಗಿಗೆ ಬಂದರು ಅವರು ಬಂದದ್ದನ್ನು ಕೇಳಿದೊಡನೆ ಬಾದಶಹ

ನಾದ ಫಿರೋಜನು ಫಿರೋಜಾಬಾದದಿಂದ ಆವರ ಭೆಟ್ಟಿಗೆ ಬಂದು ಅವರನ್ನು ಸತ್ಕರಿಸಿದನು. ಬಾದಶಹನ ತಮ್ಮನಾದ ಅಹಮ್ಮದಶಹಾ ವಾಲಿ ಭಾಮನಿ ಎಂಬವನು ಈ ಸಾಧುಗಳಿಗಾಗಿ ಒಂದು ಮಂದಿರವನ್ನು ಕಟ್ಟಿಸಿಕೊಟ್ಟನು. ಮತ್ತು ಆತನ ಶಿಷ್ಯನಾದನು. ಕೆಲವು ವರ್ಷಗಳ ತರುವಾಯ ಫಿರೋಜನು ಈ ಸೈಯದರ ಬಳಿಗೆ ಹೋಗಿ, ತನ್ನ ತರುವಾಯ ಪಟ್ಟಕ್ಕೆ ಕೂಡುವ ತನ್ನ ಮಗನಿಗೆ ಆಶೀರ್ವಾದಗಳನ್ನು ಕೊಡಲಿಕ್ಕೆ ಕೇಳಿಕೊಂಡನು. ಆಗ ಆ ಸೈಯದನು "ನಿನ್ನ ತರುವಾಯ ನಿನ್ನ ಪಟ್ಟವು ನಿನ್ನ ಮಗನಿಗೆ ಹೋಗಬಾರದೆಂದು ವಿಧಿಲಿಖಿತವಿದೆ. ಆದುದರಿಂದ ನಿನ್ನ ಮಗನಿಗೆ ಆಶೀರ್ವದಿಸಲಾರೆ." ಎಂದು ಅಂದನು. ಕೂಡಲೆ ಫಿರೋಜನು ಸಿಟ್ಟಿಗೆದ್ದು ಆ ಸೈಯದನಿಗೆ ಊರ ಬಿಟ್ಟು ಹೋಗಲಿಕ್ಕೆ ಹೇಳಿದನು. ಸೈಯದನು ಊರ ಬಿಟ್ಟು ಈಗ ಯಾವ ಸ್ಥಳದಲ್ಲಿ ದರ್ಗಾ ಇರುವದೋ ಅಲ್ಲಿಗೆ ಬಂದು ನಿಂತನು. ಆತನ ಶಿಷ್ಯರಲ್ಲೊಬ್ಬರು ಮುಂದೆ ಈ ದರ್ಗೆಯನ್ನು ೧೬೪೦ ರ ಸುಮಾರಕ್ಕೆ ಕಟ್ಟಿಸಿರುವರು. ಇರಲಿ. ಸೈಯ್ಯದನು ಈ ಸ್ಥಳದಲ್ಲಿದ್ದಾಗ ಫಿರೋಜನ ತಮ್ಮನು ಓಡಿಬಂದು ಈ ಸೈಯ್ಯದನ ಆಶ್ರಯಕ್ಕೆ ನಿಂತುಕೊಂಡನು ಮತ್ತು ತನಗೂ ತನ್ನ ಮಗನಿಗೂ ಆಶೀರ್ವದಿಸಬೇಕೆಂದು ಬೇಡಿಕೊಂಡನು. ಆಗ ಸೈಯ್ಯದನು ಮಗನ ತಲೆಯ ಮೇಲಿನ ರುಮಾಲವನ್ನು ತೆಗೆದು ಎರಡು ತುಂಡು ಮಾಡಿ ಒಂದು ತುಂಡನ್ನು ತಂದೆಯ ತಲೆಗೂ ಮತ್ತೊಂದನ್ನು ಮಗನ ತಲೆಗೂ ಕಟ್ಟಿದನು. ಮತ್ತು ನಿಮ್ಮಿಬ್ಬರಿಗೂ ಅರಸೊತ್ತಿಗೆಯು ಸಿಕ್ಕುವದೆಂದು ಸೂಚಿಸಿದನು. ಅದೇ ಮೇರೆಗೆ ಮುಂದೆ ಅಹಮ್ಮದವಾಲಿಯು ಪಟ್ಟವೇರಿದ ಬಳಿಕ ಆತನು ಸೈಯದನಿಗೆ ಅನೇಕ ಜಹಗೀರುಗಳನ್ನು ಹಾಕಿಕೊಟ್ಟನು ಅಲ್ಲಿ ಆ ಸಾಧುವಿನ ವಂಶಜರು ಈಗಲೂ ಇರುವರು.

× × × ×

**೭೦೦೦ ಡಾಲರುಗಳ ಭಕ್ಷೀಸು:—** ಕಾನಡಾದೇಶದ ಮಿ॥ ವಿನ್ಸೆಂಟ ಮ್ಯಾಸೆ [ Mr. Vincent Massey ] ಎಂಬವರು ಹಿಂದುಸ್ಥಾನದಮೇಲಿನ ತಮ್ಮ ಪ್ರೇಮದ ದ್ಯೋತಕವೆಂದು ಒಂದು ದೊಡ್ಡ ನಿಧಿಯನ್ನು ಟಾರೊಂಟೋ ವಿಶ್ವವಿದ್ಯಾಲಯದ ವಶದಲ್ಲಿ ಕೊಟ್ಟಿರುವರು ಇದರಿಂದ ಪ್ರತಿವರ್ಷ ೭೦೦೦ ಡಾಲರಗಳ ಇನಾಮು ಕೊಡಲ್ಪಡತಕ್ಕದ್ದದೆ. ಈ ವಿಷಯವಾಗಿ ಹೆಚ್ಚಿನ ಸಂಗತಿಗಳನ್ನು ತಿಳಿದುಕೊಳ್ಳಲಿಚ್ಛಿಸುವವರು ಲಾಹೋರದಲ್ಲಿರುವ ವಾಯ್. ಎಂ. ಸಿ. ಏದ ಸೆಕ್ರೆಟರಿಗಳಾದ ಮಿ॥ ಬಿ. ಎಲ್. ಲಾಲಿಯಾರಾಮ ಮಹನಸಿಂಗ ಬಾಗ ಇವರೊಡನೆ ಪತ್ರವ್ಯವಹಾರ ಮಾಡಬಹುದು.

---

# ಸ್ವವಿಚಾರತರಂಗ



ಸತ್ತವರನ್ನು ಸುಟ್ಟ ಬೆಂಕಿಯೊಡನೆ ಅವರ ದುರ್ಗುಣಗಳು ಸುಟ್ಟು ಬೂದಿಯಾಗಿ ಹೋಗುತ್ತವೆ. ಸದ್ಗುಣಗಳು ಮಾತ್ರ ಅಜರಾಮರವಾಗಿ ಉಳಿಯುತ್ತವೆ. ಆದುದರಿಂದಲೇ ನಮಗೆ ನಮ್ಮ ಹಿರಿಯರಲ್ಲಿ ಭಕ್ತಿಹುಟ್ಟುವದು. ಇತಿಹಾಸವೆಂದರೆ ಹಿರಿಯರ ಚರಿತ್ರವಲ್ಲವೇ?

\+ × × ×

ಹಾಗಾದರೆ ಇತಿಹಾಸದಲ್ಲಿ ನಾವು ನಮ್ಮ ಪೂರ್ವಜರ ಸದ್ಗುಣಗಳನ್ನಷ್ಟೇ ಹೊಗಳುತ್ತ ಕುಳಿತುಕೊಳ್ಳಬೇಕೋ? ಅವರ ದುರ್ಗುಣಗಳನ್ನು ತೆಗಳಬೇಡವೋ ಎಂದು ಯಾರಾದರೂ ಕೇಳಬಹುದು. ಅವರ ಸದ್ಗುಣಗಳನ್ನು ಹೊಗಳಿರಿ ಬಿಡಿರಿ. ಹೊಗಳಿದರೆ ಹಾನಿಯಿಲ್ಲ. ತೆಗಳಿದರೆ ಲಾಭವಿಲ್ಲ. ನಾವು ಇತಿಹಾಸವನ್ನು ಓದುವುದು ಅವರನ್ನು ಬರೀ ಹೊಗಳಲಿಕ್ಕೂ ಅಲ್ಲ, ಬರೀ ತೆಗಳಲಿಕ್ಕೂ ಅಲ್ಲ. ಅವರ ಚರಿತ್ರೆಯಿಂದ ನಮ್ಮನ್ನು ಸುಧಾರಿಸಿಕೊಳ್ಳುವುದು. ಅವರಿಂದ ನಾವು ಸ್ಫೂರ್ತಿಯನ್ನು ಪಡೆಯುವುದಕ್ಕಾಗಿ ನಾವು ಅದನ್ನು ಓದುವುದು. ಸದ್ಗುಣಗಳನ್ನು ಕಂಡುಹಿಡಿದೂ ಸ್ಫೂರ್ತಿಯನ್ನು ಹೊಂದಬೇಕು ದುರ್ಗುಣಗಳನ್ನು ಕಂಡುಹಿಡಿದೂ ಎಚ್ಚರಹೊಂದಬೇಕು. ನಾವು ಇಲ್ಲಿ ಹೇಳುವುದು ಇಷ್ಟೇ ಏನಂದರೆ, ಅವರ ದುರ್ಗುಣಗಳು ನಮ್ಮನ್ನು ಬಾಧಿಸವು; ಆದರೆ ಅವರ ಸದ್ಗುಣಗಳು ಮಾತ್ರ ನಮ್ಮನ್ನು ಪ್ರೇರಿಸುವವು. ಆದುದರಿಂದಲೇ ನಾವು ಹೇಳುವುದು ಅವರ ದುರ್ಗುಣಗಳು ಅವರೊಡನೆ ಸತ್ತು ಹೋಗುತ್ತವೆಂದು.

× × × ×

ಗೀತೆಯಲ್ಲಿ ಮರಣಹೊಂದಿದವರಿಗೆ ಎರಡು ಬಗೆಯ ಗತಿಗಳು ಹೇಳಲ್ಪಟ್ಟವೆ. ಅವು ಯಾವವೆಂದರೆ ಒಂದು ಶುಕ್ಲಗತಿ. ಎರಡನೆಯದು ಕೃಷ್ಣಗತಿ. ವೇದಾಂತದಲ್ಲಿ ಇವಕ್ಕೆ ದೇವಯಾನಮಾರ್ಗ ಪಿತೃಯಾನಮಾರ್ಗವೆನ್ನುತ್ತಾರೆ. ಜ್ಞಾನಿಗಳು ಶುಕ್ಲಗತಿಯನ್ನು ಅನುಸರಿಸುತ್ತಾರೆಂದೂ ಅಜ್ಞಾನಿಗಳು ಕೃಷ್ಣಗತಿಯನ್ನು ಅನುಸರಿಸುತ್ತಾರೆಂದೂ ಸ್ಥೂಲವಾಗಿ ಹೇಳಬಹುದು. ಇವೆರಡೂ ಮಾರ್ಗಗಳನ್ನು ನಾವು ಇತಿಹಾಸದಲ್ಲಿಯೂ ಒಂದು ತರವಾಗಿ ಕಾಣಬಹುದೆಂದು ಹೇಳಿದರೆ ಹಲವರಿಗೆ ಬಲು ಆಶ್ಚರ್ಯವಾಗಿ ತೋರಬಹುದಲ್ಲವೇ? ಆದರೆ ಆಶ್ಚರ್ಯಪಡಲು ಕಾರಣವಿಲ್ಲ ನಿಜವಾಗಿಯೇ ಅವು ಇಲ್ಲಿಯೂ ಇವೆ.

× × × ×

ನಾವು ಮೇಲೆ ಹೇಳಿದಂತೆ ಸದ್ಗುಣಗಳು ಉಳಿಯುವುದು ದುರ್ಗುಣಗಳು ಅಳಿಯುವುದು ಇತಿಹಾಸದಲ್ಲಿಯ ಶುಕ್ಲ ಕೃಷ್ಣ ಮಾರ್ಗಗಳ ಪರಿಣಾಮವು ಹೇಗೆಂಬುದನ್ನು ಹೇಳುತ್ತೇವೆ. ಕೇಳಿರಿ ಮರಣಹೊಂದಿದವರು ಶುಕ್ಲಮಾರ್ಗದಿಂದ ಹೋಗುತ್ತಾರೆಂದರೇನು? ಅಗ್ನಿ, ಪ್ರಕಾಶ ಹಗಲು, ಬೆಳದಿಂಗಳು ಮುಂತಾದ ದೇವತೆಗಳಿಂದ ಅಧಿಷ್ಠಿತವಾದ ಮಾರ್ಗವನ್ನು ಅನುಸರಿಸುವವರು ಜ್ಞಾನಿಗಳು. ಇತಿಹಾಸದಲ್ಲಿ ಸತ್ತವರ ಸದ್ಗುಣಗಳು ಈ ಮಾರ್ಗವನ್ನು ಅವಲಂಬಿಸುತ್ತವೆ. ಸತ್ತವರನ್ನು ಸುಟ್ಟ ಬೆಂಕಿಯು ನಮಗೆ ಪ್ರಕಾಶವನ್ನೂ ಪ್ರೇರಣೆಯನ್ನೂ ಕೊಟ್ಟು ನಮ್ಮನ್ನು ಸನ್ಮಾರ್ಗಕ್ಕೆ ಹಚ್ಚುತ್ತದೆ. ಅದು ನಮ್ಮನ್ನು ಮೇಲನೋಲಕ್ಕೆ ಒಯ್ಯುತ್ತದೆ. ನಮ್ಮನ್ನು ಮುಂದೆ ಮುಂದಕ್ಕೆ ಎಳೆಯುತ್ತದೆ. ಅದೇ ಅವರ ದುರ್ಗುಣಗಳು ಅವರನ್ನು ಸುಟ್ಟು ಬೆಂಕಿಯ ಹೊಗೆಯೊಡನೆ ಹಾರಿ ಅಡಗಿ ಹೋಗುತ್ತವೆ.

\+ + + +

ಇತಿಹಾಸವು ಬಾವಿಯ ನೀರು ಇದ್ದಂತೆ! ಅದನ್ನು ನಾವು ಸೇದಿಕೊಂಡು ಕುಡಿಯ ಬೇಕಾಗುತ್ತದೆ. ಸೇದುವ ಶ್ರಮ ತೆಗೆದುಕೊಳ್ಳದಿದ್ದರೆ ಅದು ನಮ್ಮ ತೃಷೆಯನ್ನು ತಣಿಸ ಲಾರದು. ಸೇದಿಕೊಂಡರೆ, ಸೆಲೆಯ ನೀರೇ ನಮಗೆ ಸಿಗುತ್ತದೆ. ಬಾವಿಯಲ್ಲಿ ಕಸಕಡ್ಡಿ ಗಳು ಕೆಳಗೆ ಕೂತು ಹೋಗುತ್ತವೆ.

\+ + + +

ಬಾವಿಯನ್ನು ಮೇಲಿಂದ ಮೇಲೆ ಬಳಿಸ ಬೇಕಾಗುವಂತೆ ಇತಿಹಾಸವನ್ನೂ ನಾವು ಮೇಲಿಂದ ಮೇಲೆ ಬಳಿಸಬೇಕು. ಹಿಂದಿನವರ ದೋಷಗಳನ್ನು ಗೂಡಿಸಿ ಹೊರಚಲ್ಲಬೇಕು.

\+ + + +

ಇತಿಹಾಸವೆಂದೊಡನೆ ಹಲವರಿಗೆ ತಲೆಶೂಲಿ. ಅದರ ಪ್ರೇರಕ ಶಕ್ತಿಯ ಪ್ರಭಾವವನ್ನು ಅರಿಯರು ಅವರು. ಭಾರತಾದಿ ಇತಿಹಾಸಗಳು ಶ್ರೀ ಶಿವಾಜಿ ಮುಂತಾದವರಿಗೆ ಎಂಥ ಪ್ರೇರಕಶಕ್ತಿಯನ್ನು ಒದಗಿಸಿಕೊಟ್ಟವು ? ಗತವೈಭವವು ಚೇತರಿಸುವ ಚೈತನ್ಯಶಕ್ತಿಯು.

\+ + + +

ನಮ್ಮ ಪೂರ್ವಜರಿಗೆ ಐತಿಹಾಸಿಕ ಭಾವನೆಯಿದ್ದಿಲ್ಲವೆಂದು ಹಲವರ ಆಕ್ಷೇಪವು. ಅದ ಕ್ಕಾಗಿ, ನಮ್ಮ ಪೂರ್ವಜರನ್ನು ದೂಷಿಸುವವರು ಈಗಲೂ ಅನೇಕರಿದ್ದಾರೆ. ಅವರ ದೂಷ ಣೆಯಲ್ಲಿ ತಥ್ಯಾಂಶವು ಇರಲಿ, ಇರದಿರಲಿ. ಅವರೇ ಕನ್ನಡಿಗರು ಇತಿಹಾಸವನ್ನು ಪುನರುಜ್ಜೀವನ ಗೊಳಿಸಲು ಪ್ರಯತ್ನಿಸಿದೊಡನೆ ಈ ಗೊಡ್ಡು ಹರಟೆಯನ್ನು ತೆಗೆದುಕೊಂಡು ಮಾಡುವಿರೇನು ? ಈಗಿನ ಕಾಲಕ್ಕೆ ಹೀಗೆ ಇತಿಹಾಸದಲ್ಲಿ ವ್ಯರ್ಥ ಕಾಲಹರಣ ಮಾಡುವದು ಸರಿಯಲ್ಲವೆಂದು" ಹೀಯಾಳಿಸುವುದು ಬುದ್ಧಿಗೇಡಿತನದ ಲಕ್ಷಣವಲ್ಲವೇ ?

× × × ×

ನಮ್ಮವರಿಗೆ ಇತಿಹಾಸದ ಮಹತ್ವವು ಗೊತ್ತಿರಲಿ, ಇರದಿರಲಿ. ಸರಕಾರದವರಿಗೆ ಮಾತ್ರ ಅದರ ಮಹತ್ವವು ಚೆನ್ನಾಗಿ ಗೊತ್ತಿದೆ. ಹಿಂದಕ್ಕೆ ಕಾಲೇಜುಗಳಲ್ಲಿ ಗ್ರೀಸ ರೋಮ ಮುಂತಾದ ದೇಶಗಳ ಸ್ಫೂರ್ತಿದಾಯಕ ಇತಿಹಾಸಗಳನ್ನು ಎಲ್ಲರೂ ಕಲಿಯಬೇಕಾಗುತ್ತಿತ್ತು. ಆದರೆ ಕೆಲವು ಅಧಿಕಾರಿಗಳಿಗೆ ಈ ಇತಿಹಾಸಗಳು ತರುಣರನ್ನು ದೇಶಾಭಿಮಾನಕ್ಕೆ ಹುರಿದುಂಬಿಸು ತ್ತವೆಂದು ತಿಳಿದೋ ಏನೋ, ಅವುಗಳನ್ನು ಕಲಿಸುವದನ್ನು ಪೂರಾ ನಿಲ್ಲಿಸಿಯೇ ಬಿಟ್ಟರು. ಆಗಿನ ಕಾಲದ ದೇಶಧುರೀಣರು ಅದಕ್ಕಾಗಿ ವಿಶ್ವವಿದ್ಯಾಲಯದವರನ್ನು ಬಲವಾಗಿ ದೂಷಿಸಿ ದರು ಕೂಡ; ಆದರೆ ಈಗಿನ ನಮ್ಮ ಧುರೀಣರಿಗೆ ಇತಿಹಾಸವೆಂದರೆ ತಲೆಸೂಲೆ ! ದೈವ ಗತಿಯು ವಿಚಿತ್ರವಲ್ಲವೆ ?

× × × ×

ವಿಜಯನಗರ ಜಯಂತ್ಯುತ್ಸವವನ್ನು ನಾವು ಮಾಡಬೇಕೆಂದು ಹೇಳುವುದು ಇದೇ ಉದ್ದೇಶದಿಂದಲೇ. ವಿಜಯನಗರದ ಹರಿಹರ ಬುಕ್ಕರೇನು ನಮಗೆ ಆಪ್ತರಲ್ಲ. ವಿಜಯನಗರ ವೇನು ನಮ್ಮ ಇನಾಂ ಗ್ರಾಮವಲ್ಲ. ವಿಜಯನಗರದ ಸಾಮ್ರಾಜ್ಯವು ತನ್ನ ಸ್ಮಾರಕವನ್ನು ತಾನೇ ಮಾಡಿಕೊಂಡು ಹೋಗಿದೆ. ಅದರ ಹೆಸರು ಇತಿಹಾಸದಲ್ಲಿ ಚಿರಸ್ಮರಣೀಯವಾಗಿ ಉಳಿದಿದೆ. ಅದಕ್ಕೆ ನಮ್ಮ ಸ್ಮಾರಕದ ಆವಶ್ಯಕತೆ ಇಲ್ಲ. ವಿಜಯನಗರ ಜಯಂತಿಯನ್ನು ನಾವು ಮಾಡಬೇಕೆನ್ನುವುದು ಮುಖ್ಯವಾಗಿ ನಮ್ಮ ಸಲುವಾಗಿ, ಅದರ ಸಲುವಾಗಿಯಲ್ಲ. ಅದನ್ನು ಮಾಡಿದರೆ ಕೃತಜ್ಞತೆಯನ್ನು ತೋರಿಸಿದಂತಾಗುವದು. ಮಾಡದಿದ್ದರೆ ಕೃತಘ್ನರೆ

ನ್ನಿಸಿಕೊಳ್ಳಬೇಕಾಗುವದು. ಇಷ್ಟೇ. ಸಾರಾಂಶ, ವಿಜಯನಗರ ಜಯಂತಿಯನ್ನು ಮಾಡು ವುದು ಅವರ ಉಪಕಾರಕ್ಕಾಗಿಯಲ್ಲ, ನಮ್ಮ ಉಪಯೋಗಕ್ಕಾಗಿ.

× × × ×

ನಮ್ಮ ಸ್ಮಾರಕದಿಂದೇನಾಗಬೇಕಾಗಿದೆ ? ವಿಜಯನಗರದ ಸ್ಮಾರಕ ಚಿಹ್ನಗಳು ವಿಜಯನಗರ ಸಾಮ್ರಾಜ್ಯದ ವಿಜಯಸ್ತಂಭಗಳು ಆ ದೇಶದಲ್ಲಿ ರಾಶಿರಾಶಿಯಾಗಿ ಬಿದ್ದಿವೆ. ಅಲ್ಲಿರುವ ಹಾಳು ಗುಡಿಗೋಪುರಗಳೇ ಅದರ ವೈಭವಸ್ತಂಭಗಳು. ಆ ಹಾಳು ಪಟ್ಟಣವು ಹಾಳು ಗಣ್ಣಿಗೆ ಮಾತ್ರ ಹಾಳು. ಬೋಳುಗಣ್ಣಿಗೆ ಮಾತ್ರ ಬೋಳು. ಆ ಪಟ್ಟಣವು ನಿಜ ವಾಗಿ ಹಾಳುಪಟ್ಟಣವಲ್ಲ. ನಮ್ಮ ಪುರಾತನ ಸಂಸ್ಕೃತಿಸರ್ವಸ್ವವನ್ನು ಸಂಗ್ರಹಿಸಿದ ಅಮೂಲ್ಯ ಭಾಂಡಾರವು; ನಮ್ಮ ವೈಭವವನ್ನು ಹೂಳಿಟ್ಟುಕೊಂಡ ಸ್ಮಾರಕನಿಧಿಯು.

+ + + +

ವಿಜಯನಗರದಲ್ಲಿ "ವಾಲಿಯ ಭಾಂಡಾರ" ವೆಂಬುದೊಂದು ದೊಡ್ಡ ಕಲ್ಲುಬಂಡೆಯನ್ನು ಜನರು ತೋರಿಸುತ್ತಾರೆ. ಆ ಬಂಡೆಯೊಳಗೆ ಅಗಣಿತವಾದ ನಿಧಿಯಿರುವುದೆಂದೂ ಮುಂದೆ ದೇಶವನ್ನು ಉದ್ಧಾರ ಮಾಡುವವನು ಅವತಾರ ಮಾಡಿ, ಅದರೊಳಗಿನ ನಿಧಿಯನ್ನು ಉಪಯೋ ಗಿಸಿಕೊಳ್ಳುತ್ತಾನೆಂದೂ ಒಂದು ಕಾಲಜ್ಞಾನದ ಆಖ್ಯಾಯಿಕೆಯನ್ನು ಹೇಳುತ್ತಾರೆ. ಅದು ನಿಜ ವಾಗಲಿ, ಆಗದಿರಲಿ. ಇಡೀ ವಿಜಯನಗರ ಪಟ್ಟಣವೇ ಒಂದು ದೊಡ್ಡ ಬೊಕ್ಕಸವೆಂದು ಹೇಳಬಹುದು. ಅದನ್ನು ಒಡೆದು ಅದರೊಳಗಿನ ನಿಧಿಯನ್ನು ಉಪಯೋಗಿಸುವುದಕ್ಕೆ ಈ ಜಯಂತ್ಯುತ್ಸವದ ಕಾಲವು ತಕ್ಕ ಕಾಲವಲ್ಲವೇ ?

× × × ×

ವಿಜಯನಗರವನ್ನು ನೋಡಿದೊಡನೆ ಒಂದು ಕಣ್ಣೊಳಗಿಂದ ಆನಂದದ ಶೀತಲ ಬಾಷ್ಪ ಗಳು ಸುರಿದರೆ, ಮತ್ತೊಂದು ಕಣ್ಣೊಳಗಿಂದ ದುಃಖದ ಉಷ್ಣ ಕಂಬನಿಗಗಳು ಉದುರುತ್ತವೆ. ಒಂದು ಮೂಗಿನ ಸೊಳ್ಳೆಯಿಂದ ತಣ್ಣನ ಉಸಿರು ಹೊರಟರೆ, ಮತ್ತೊಂದು ಸೊಳ್ಳೆಯಿಂದ ಬಿಸಿಯುಸಿರು ಹೊರಡುತ್ತದೆ. ಆ ಆನಂದದ ಬಾಷ್ಪಗಳು ಭಾರತೀಯರ ಅಂತಃಕರಣವನ್ನು ಸೇಚನ ಮಾಡಲಿ; ಉಷ್ಣ ಕಂಬನಿಗಳು ಅದರ ಮಾಲಿನ್ಯವನ್ನು ತೊಳೆದೊಗೆಯಲಿ. ತಣ್ಣನ ಉಸಿರು ಸ್ಫುರಣಜ್ವಾಲೆಯನ್ನು ಪ್ರಕಾಶಗೊಳಿಸಲಿ. ಬಿಸಿಯುಸಿರು ಅವನಿರಭಿಮಾನವನ್ನು ಸುಟ್ಟು ಬೂದಿಮಾಡಲಿ.



## Exchanges Received by the Society.

*Publications from*

1. The Director General of Archaeology, Simla.
2. The Director of Archaeological Researches, Mysore.
3. The Director of Archaeological Department,
   H. E. H. The Naizam's Dominians, Hyderabad (Deccan).
4. The Director of Archaeological Department,
   Gwalior State, Gwalior.
5. The Director of South Indian Epigraphy, Madras.
6. The Superintendant of Archaeology, Trivendrum.
7. The Prince of Wales Museum, Bombay.
8. The Indological Publications Universities, Bibliotex, Upsala.
9. American Historical Association Washington, U. S. A.
10. Connemara Public Library Government Museum, Madras.
11. Commissioner of Archaeological Survey, Colombo.
12. Archaeological Survey of India, Dehli.
13. Annual Bibliography of Indian Archaeology, Keen Institute, Leyden

## ವಿನಿಮಯ ಪತ್ರಿಕೆಗಳ ಪಟ್ಟಿ.

**ವಾರ್ಷಿಕಗಳು**

1. Journal of the Department of Letters of the University of
   Calcutta, Calcutta.
2. Journal of the Bombay Branch of the Royal Asiatic Society, Bombay
3. Journal of the Ceylon Branch of the Royal Asiatic Society, Colombo

**ಷಾಣ್ಮಾಸಿಕಗಳು:—**

1. The Karnatak College Miscelleny, Dharwar.
2. The Kerala Society Papers, Trivendrum.
3. Journal of the University of Madras, Madras

**ಚಾತುರ್ಮಾಸಿಕಗಳು: —**

1. Journal of the Indian History.
2. The Allahabad University Magazine.

**ತ್ರೈಮಾಸಿಕಗಳು:—**

1. The Shrine of Wisdom.
2. Journal of the Andhra Historical Research Society, Rajamundry.
3. The Karnatak Journal of Education, Dharwar.
4. Journal of the Bihar & Orrissa Research Society, Patna
5. Epigraphia Indica, Calcutta.

# ತಿ ದ್ದು ಪ ಡೆ.

ಪ್ರಾಚೀನ ಕರ್ನಾಟಕದ ಹಿಂದಿನ ಸಂಚಿಕೆಯಲ್ಲಿ (೧–೨) ಕೈತಪ್ಪಿ ಕಾಣಿಸಿಕೊಂಡ ಮುದ್ರಣ ದೋಷಗಳನ್ನು ಇಲ್ಲಿ ತಿದ್ದುಪಡಿಸಿದೆ.

| ಪುಟ | ಶಾಸನಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩೭ | ೧೬ | ನಿಲಮು | ನೆಲವು |
| ,, | ೧೭ | ಪ್ರಿಷ್ಟಸಧಿಯಂ | ಪ್ರಿಷ್ಟಸಂಧಿಯಂ |
| ,, | ೨೧ | ಪರಿವನಿತ್ | ಪರವನಿಕೆ |
| ,, | ೨೨ | ಸೋದರಸನ | ಸೋವರಸನ |
| ,, | ,, | ಧಾಮು | ಧಾಮಂ |
| ೩೮ | ೨೮ | ಕೌರವ | ರೌರವ |
| ೩೯ | ೨ | ದೀಪುಲೆಗಳಿಂ | ದೀಪುತಿಗಳಿ |
| ,, | ೯ | ನೆಗಲ್ದ | ನೆಗಳ್ದ |
| ,, | ೧೦ | ಮಿಧ್ಗಿಣೆ | ಮಿಧ್ಗಿಣಿ |
| ,, | ,, | ಮರಣದೊಳೊ[ಂ] | ಮರಣದೊಳೊಂ |
| ,, | ,, | ಸಿಂಹನಂದಾ | ಸಿಂಹನಂದ್ಯಾ |
| ,, | ೧೧ | ಮದ್ಸೊನ್ನತ | ಮದೋನ್ನತ |

ಪಾ . ಭೀ . ದೇ .

ಈ ಸಂಚಿಕೆಯಲ್ಲಿ [೧–೩] ಇರುವ ಮುದ್ರಣ ದೋಷಗಳು.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೪ | ೧೦ | ಆತಏವ | ಅತಏವ |
| ೨೦ | ೩೫ | ನವಾಾಮಿ | ನಮಾಮಿ |

## ೧೯೩೩—೩೪ ನೇ ಸಾಲಿನ

# ವ್ಯವಸ್ಥಾಪಕ ಮಂಡಲದ (Council of Management) ಸದಸ್ಯರು

೧ ಶ್ರೀ ವ್ಹಿ. ಬಿ. ಹಾಳಭಾವಿ ಎಲ್. ಎಲ್. ಬಿ. ಧಾರವಾಡ. ಜಿಲ್ಲಾ.

೨ ,, ಎಸ್. ಸಿ. ನಂದೀಮಠ ಎಮ್. ಎ. ಪಿ ಎಚ್. ಡಿ. ಬೆಳಗಾಂವ ,,

೩ ,, ಎನ್. ಪಿ. ದೇಸಾಯಿ ಎಲ್. ಎಲ್. ಬಿ. ವಿಜಾಪೂರ ,,

೪ ,, ಕೆ. ಆರ್. ಹಳದೀಪೂರಕರ ಎಲ್. ಬಿ. ಎಲ್. ಕಾರವಾರ ,,

೫ ,, ಪಂಜೀ ಮಂಗೇಶರಾವ ಬಿ. ಎ. ಬಿ. ಟಿ. ಮಂಗಳೂರ ,,

೬ ,, ಬಿ ಭೀಮರಾವ ಬಿ. ಎ. ಎಲ್ ಎಲ್. ಬಿ ಬಳ್ಳಾರಿ. ,,

೭ ,, ಎನ್. ಲಕ್ಷ್ಮೀನಾರಾಯಣರಾವ ಎಂ. ಎ. ನೀಲಗಿರಿ. ,,

೮ ಡಾ. ಎಮ್. ಎಚ್. ಕೃಷ್ಣ ಅಯ್ಯಂಗಾರ ಎಂ. ಎ. ಡಿ. ಲಿಟ್. ಮೈಸೂರ ಸಂಸ್ಥಾನ.

೯ ಶ್ರೀ ಟಿ. ಟಿ. ಶರ್ಮಾ ಸಂಪಾದಕ 'ವಿಶ್ವಕರ್ನಾಟಕ' ,, ,,

೧೦ ,, ತಮ್ಮಣ್ಣಪ್ಪಾ ಚಿಕ್ಕೋಡಿ ಬನಹಟ್ಟಿ ಉತ್ತರ ಕರ್ನಾಟಕ ಸಂಸ್ಥಾನ

೧೧ ,, ಅಪ್ಪಣ್ಣರಾವ ಮಹಿಷಿ ಶಿರಹಟ್ಟಿ ,, ,,

೧೨ ,, ಎಮ್. ಎಸ್. ಲಕ್ಷ್ಮೀನಾರಾಯಣರಾವ ಎಲ್. ಎಲ್. ಬಿ. ಹೈದರಾಬಾದ ,,

೧೩ ,, ಕೃಷ್ಣರಾವ ಕಪಟರಾಳ ವಕೀಲ ಕಲಬುರ್ಗಿ ,, ,,

೧೪ ,, ಕೆ. ಪಿ. ಕಲ್ಲಪ್ಪಾ ಕುರ್ಗ

೧೫ ರಾ. ಬ. ಬಿ. ಎಲ್. ಪಾಟೀಲ ಬಿ. ಎ. ಎಲ್. ಎಲ್. ಬಿ. ಎಮ್. ಎಲ್. ಎ. ಧಾರವಾಡ. ಅಧಿಕೃತ ಸದಸ್ಯರು.

೧೬ ,, ಎಸ್. ಎಸ್. ಕೊಯಿಮತ್ತೂರ ರಿಟಾಯರ್ಡ ಡಿ. ಡಿ. ಸಿ. ಧಾರವಾಡ ,,

೧೭ ,, ಎಸ್. ಆರ್. ಕೊಪ್ಪೀಕರ ಬಿ. ಎ. ಎಲ್. ಎಲ್. ಬಿ. ಧಾರವಾಡ. ,,

೧೮ ಸರದಾರ ಮಹಬೂಬಅಲ್ಲೀಖಾನ ನವಾಬಸಾಹೇಬ ಹುಬ್ಬಳ್ಳಿ. ,,

೧೯ ಶ್ರೀ ಎಮ್. ಎಸ್. ಸರದಾರ ಬಿ. ಎ. ಬಾರ್. ಆ್ಯಟ್-ಲಾ. ಚೀಫ ಜಜ್ಜ ಅಕ್ಕಲಕೋಟಿ ಸಂಸ್ಥಾನ. ,,

೨೦ ,, ಎಸ್. ರಾಮಸುಬ್ರಹ್ಮನ್ ಬಿ. ಎ ಸರದಾರ ಹಾಯಸ್ಕೂಲ ಬೆಳಗಾಂವ ,,

೨೧ ಪ್ರೊ. ಕೆ. ಜಿ. ಕುಂದಣಗಾರ ಎಂ. ಎ. ರಾಜಾರಾಮ ಕಾಲೇಜ ಕೊಲ್ಹಾಪುರ ,,

೨೨ ,, ಬಿ. ಬಿ. ಬಾಗಿ ಎಂ. ಎ ಕರ್ನಾಟಕ ಕಾಲೇಜ ಧಾರವಾಡ. ,,

೨೩ ಶ್ರೀ ರಾಮರಾವ ಮಹಿಷಿ ಬಿ. ಎ. ಧಾರವಾಡ. ,,

೨೪ ಪ್ರೊ. ಡಿ. ಪಿ. ಪತ್ರಾವಳಿ ಬಿ. ಎ., (ಕ್ಯಾಂಟಬ್) (ಅಧ್ಯಕ್ಷ)

೨೫ ಶ್ರೀ ಎನ್. ಆರ್. ದೇಶಪಾಂಡೆ. ಬಿ. ಎ. ಎಲ್. ಎಲ್. ಬಿ. ಉಪಾಧ್ಯಕ್ಷ

೨೬ ,, ವ್ಹಿ. ಬಿ. ಆಲೂರ ಬಿ. ಎ. ಎಲ್. ಎಲ್. ಬಿ.

೨೭ ,, ವ್ಹಿ. ಎಸ್. ಮುಗದಾಳ ಬಿ. ಎ.

೨೮ ,, ಆರ್. ಜಿ. ದೇಶಪಾಂಡೆ ಎಂ. ಎ.

೨೯ ,, ಶಿವಲಿಂಗಶಾಸ್ತ್ರಿ ಹಿರೇಮಠ ಸಂಪಾದಕ 'ಕರ್ನಾಟಕ ಟಾಯಿಮ್ಸ'

೩೦ ,, ವಿ. ಆರ್. ಮುಧೋಳಕರ ಬಿ. ಎ. ಬಿ. ಟಿ.

೩೧ ಪ್ರೊ. ಎ. ಟಿ. ಸಾಸನೂರ ಎಂ. ಎ.

೩೨ ಶ್ರೀ ಎನ್. ಎಸ್. ಕಮಲಾಪೂರ ಬಿ. ಎ. ಎಲ್. ಎಲ್. ಬಿ. (ಕಾರ್ಯದರ್ಶಿ)

(೨೪–೩೨: ಕಾರ್ಯಕಾರೀ ಮಂಡಳದ ಸದಸ್ಯರು.)

## ಸಂಶೋಧಕ ಸಮಿತಿಯ ( Research Council ) ಸದಸ್ಯರು.

೧ ಪ್ರೊ. ಎನ್. ಎಸ್. ತಾಕಾಖಾವ ಎಂ. ಎ., ಆಯ್. ಇ. ಎಸ್.
೨ ,, ಎ. ಡಿ. ಧೋಪೇಶ್ವರಕರ ಎಂ. ಎ. ಎಲ್. ಎಲ್. ಬಿ.
೩ ,, ವ್ಹಿ. ಜಿ. ಭಟ ಎಂ. ಎ. (Cantab)
೪ ,, ಎ. ಟಿ. ಸಾಸನೂರ ಎಂ. ಎ.
೫ ರಾ. ಸಾ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪೂರ.
೬ ಡಾ. ಎಸ್. ಸಿ. ನಂದೀಮಠ ಎಂ. ಎ , ಪಿ. ಎಚ್. ಡಿ. (ಲಂಡನ್)
೭ ಶ್ರೀ. ವ್ಹಿ. ಬಿ. ಹಾಳಭಾವಿ. ಬಿ. ಎ. ಎಲ್. ಎಲ್. ಬಿ ಧಾರವಾಡ.
೮ ,, ವ್ಹಿ. ಬಿ. ಆಲೂರ ,, ,,
೯ ,, ರುಕ್ಮಾಂಗದರಾವ ದೇಶಪಾಂಡೆ ಎಂ. ಎ.
೧೦ ,, ಎಮ್. ಗೋವಿಂದ ಪೈ.
೧೧ ,, ಎನ್. ಎಸ್. ರಾಜಪುರೋಹಿತ
೧೨ ,, ಆರ್. ಎಸ್. ಪಂಚಮುಖಿ ಎಂ. ಎ.
೧೩ ,, ಎಸ್. ಎಸ್. ಬಸವನಾಳ ಎಂ. ಎ.
೧೪ ಪ್ರೊ. ಎಸ್. ಕೆ. ಮುರಂಜನ, ಎಂ. ಎ.
೧೫ ಶ್ರೀ. ಎಸ್. ಆರ್ .ಸುಂತಣಕರ ಎಲ್. ಎಲ್. ಬಿ. ಧಾರವಾಡ.

---



ಇದನ್ನು ಅಣ್ಣಾಚಾರ್ಯ ಬಾಳಾಚಾರ್ಯ ಹೊಸಕೇರಿ ಇವರು ತಮ್ಮ ಧಾರವಾಡ ವಿಜಯ ಮುದ್ರಾಲಯದಲ್ಲಿ ಮುದ್ರಿಸಿದರು.
ಮತ್ತು ನ. ಶ್ರೀ. ಕಾಮಲಾಪುರ, ಕಾರ್ಯದರ್ಶಿ ಕರ್ನಾಟಕ ಇತಿಹಾಸ ಸಂಶೋಧಕ ಮಂಡಳ
ಧಾರವಾಡ, ಇವರು ಆ ಮಂಡಳದ ಕಚೇರಿಯಲ್ಲಿ ಪ್ರಕಟಿಸಿದರು.

